# ಕರ್ನಾಟಕದಲ್ಲಿ ತುರ್ತುಪರಿಸ್ಥಿತಿ

## ಪ್ರಭಾವ ಮತ್ತು ಪರಿಣಾಮಗಳು

[ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಪಿಎಚ್.ಡಿ. ಮಹಾಪ್ರಬಂಧ]


ರಶ್ಮಿ. ಎಸ್


ಮಾರ್ಗದರ್ಶಕರು

ಡಾ. ವಿಜಯ್ ಪೂಣಚ್ಚ ತಂಬಂಡ





ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬



೨೦೧೪

# ಕರ್ನಾಟಕದಲ್ಲಿ ತುರ್ತುಪರಿಸ್ಥಿತಿ

## ಪ್ರಭಾವ ಮತ್ತು ಪರಿಣಾಮಗಳು

[ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಪಿಎಚ್.ಡಿ. ಮಹಾಪ್ರಬಂಧ]


ರಶ್ಮಿ. ಎಸ್




ಮಾರ್ಗದರ್ಶಕರು

ಡಾ. ವಿಜಯ್ ಪೂಣಚ್ಚ ತಂಬಂಡ




ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬
೨೦೧೪

# ದೃಢೀಕರಣ ಪತ್ರ

ರಶ್ಮಿ.ಎಸ್ ಅವರು **ಕರ್ನಾಟಕದಲ್ಲಿ ತುರ್ತುಪರಿಸ್ಥಿತಿ: ಪ್ರಭಾವ ಮತ್ತು ಪರಿಣಾಮಗಳು** ಎಂಬ ಶೀರ್ಷಿಕೆಯ ಪಿಎಚ್.ಡಿ. ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೆ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಧೃಡೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ: 23-06-2014

23/6/14
**ಡಾ. ವಿಜಯ್ ಪೂಣಚ್ಚ ತಂಬಂಡ**
ಮಾರ್ಗದರ್ಶಕರು ಹಾಗೂ ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪ್ರಮಾಣ ಪತ್ರ

ಕರ್ನಾಟಕದಲ್ಲಿ ತುರ್ತುಪರಿಸ್ಥಿತಿ: ಪ್ರಭಾವ ಮತ್ತು ಪರಿಣಾಮಗಳು ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ. ವಿಜಯ್ ಪೂಣಚ್ಚ ತಂಬಂಡ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಪ್ರಬಂಧವನ್ನು ಈ ಮೊದಲು ಯಾವ ಪದವಿಗೂ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ: 23-06-2014

ರಶ್ಮಿ. ಎಸ್
ಸಂಶೋಧಕಿ, ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ,
ಹಂಪಿ

## ಪರಿವಿಡಿ

**ಅಧ್ಯಾಯ ೪**

## ಛಾಯಾಚಿತ್ರ, ವ್ಯಂಗ್ಯಚಿತ್ರ, ಜಾಹೀರಾತು ಮತ್ತು ಕರಪತ್ರಗಳ ಪಟ್ಟಿ.

ಅಧ್ಯಾಯ – ೪

## ಕೋಷ್ಟಕಗಳು

## ರೇಖಾನಕ್ಷೆಗಳು

## ಸಂಕ್ಷೇಪ(abbreviation)

### ರಾಜಕೀಯ ಪಕ್ಷಗಳು ಮತ್ತು ಸಂಘಟನೆಗಳು(೧೯೭೧–೧೯೮೩)

| | | |
|---|---|---|
| ೧ | ಎಡಿಕೆ/ADK(ಪ್ರಾ) | ಆಲ್ ಇಂಡಿಯಾ ಅಣ್ಣಾ ದ್ರಾವಿಡ ಮುನ್ನೇತ್ರ ಕಳಗಂ |
| ೨ | ಎಹೆಚ್ಎಲ್/AHL(ಪ್ರಾ) | ಆಲ್ ಪಾರ್ಟಿ ಹಿಲ್ ಲೀಡರ್ಸ್ ಕಾನ್ಫರೆನ್ಸ್ |
| ೩ | ಬಿಎಸಿ/BAC(ಪ್ರಾ) | ಬಾಂಗ್ಲ ಕಾಂಗ್ರೆಸ್ |
| ೪ | ಬಿಜೆಪಿ/BJP(ರಾ) | ಭಾರತೀಯ ಜನತಾ ಪಕ್ಷ |
| ೫ | ಬಿಜೆಎಸ್/BJS(ರಾ) | ಭಾರತೀಯ ಜನ ಸಂಘ |
| ೬ | ಬಿಎಲ್‌ಡಿ/BLD(ರಾ) | ಭಾರತೀಯ ಲೋಕ ದಳ್ |
| ೭ | ಬಿಕೆಡಿ/BKD(ಪ್ರಾ) | ಭಾರತೀಯ ಕ್ರಾಂತಿ ದಳ್ |
| ೮ | ಸಿಎಫ್‌ಡಿ/CFD | ಕಾಂಗ್ರೆಸ್ ಫಾರ್ ಡೆಮಾಕ್ರಸಿ |
| ೯ | ಸಿಪಿಐ/CPI(ರಾ) | ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ |
| ೧೦ | ಸಿಪಿಐ(ಎಂ)/CPI(M)(ರಾ) | ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ(ಮಾರ್ಕ್ಸಿಸ್ಟ್) |
| ೧೧ | ಸಿಪಿಐ(ಎಂಎಲ್)/CPI(ML) | ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ(ಮಾರ್ಕ್ಸಿಸ್ಟ್ ಲೆನಿನಿಸ್ಟ್) |
| ೧೨ | ಸಿಪಿಐ(ಎಂಎಲ್)(ಎಲ್) /CPI(ML)(L) | ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ(ಮಾರ್ಕ್ಸಿಸ್ಟ್ ಲೆನಿನಿಸ್ಟ್)(ಲಿಬರೇಷನ್) |
| ೧೩ | ಡಿಎಂಕೆ/DMK(ಪ್ರಾ) | ದ್ರಾವಿಡ ಮುನ್ನೇತ್ರ ಕಳಗಂ |
| ೧೪ | ಎಫ್‌ಬಿಎಲ್/FBL(ಪ್ರಾ) | ಆಲ್ ಇಂಡಿಯಾ ಫಾರ್ವರ್ಡ್ ಬ್ಲಾಕ್ |
| ೧೫ | ಐಸಿಜೆ/ICJ(ಪ್ರಾ) | ಇಂಡಿಯನ್ ಕಾಂಗ್ರೆಸ್(ಜಗಜೀವನ್ ರಾಮ್) |
| ೧೬ | ಐಸಿಎಸ್/ICS(ರಾ) | ಇಂಡಿಯನ್ ಕಾಂಗ್ರೆಸ್(ಸೋಷಿಯಲಿಸ್ಟ್) |
| ೧೭ | ಐಎಂಎಲ್/IML(ಪ್ರಾ) | ಆಲ್ ಇಂಡಿಯಾ ಮುಸ್ಲಿಂ ಲೀಗ್ |
| ೧೮ | ಐಎನ್‌ಸಿ/INC(ರಾ) | ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ |
| ೧೯ | ಐಎನ್‌ಸಿ(ಐ)/ಕಾಂಗ್ರೆಸ್(ಐ) /INC(I)(ರಾ) | ಇಂಡಿಯನ್ ನ್ಯಾಷನಲ್ ಕಾಂಗ್ರೆಸ್(ಐ) |
| ೨೦ | ಐಎನ್‌ಸಿ(ಆರ್)/ಕಾಂಗ್ರೆಸ್(ಆರ್) /INC(R)(ರಾ) | ಇಂಡಿಯನ್ ನ್ಯಾಷನಲ್ ಕಾಂಗ್ರೆಸ್(ಆರ್)/ಆಡಳಿತ ಕಾಂಗ್ರೆಸ್ |
| ೨೧ | ಐಎನ್‌ಸಿ(ಯು)/ಕಾಂಗ್ರೆಸ್(ಯು) /INC(U)(ರಾ) | ಇಂಡಿಯನ್ ನ್ಯಾಷನಲ್ ಕಾಂಗ್ರೆಸ್(ಅರಸ್) |
| ೨೨ | ಜೆಎಸಿ/JAC(ಪ್ರಾ) | ಜನ ಕಾಂಗ್ರೆಸ್ |
| ೨೩ | ಜೆಎಪಿ/JAP(ಪ್ರಾ) | ಜನತಾ ಪಾರ್ಟಿ |
| ೨೪ | ಜೆಕೆಎನ್/JKN(ಪ್ರಾ) | ಜಮ್ಮು ಮತ್ತು ಕಾಶ್ಮೀರ್ ನ್ಯಾಷನಲ್ ಕಾನ್ಫರೆನ್ಸ್ |
| ೨೫ | ಜೆಎನ್‌ಪಿ/JNP(ರಾ) | ಜನತಾ ಪಕ್ಷ |
| ೨೬ | ಜೆಎನ್‌ಪಿ(ಎಸ್)/JNP(S)(ರಾ) | ಜನತಾ ಪಾರ್ಟಿ(ಸೆಕ್ಯುಲರ್) |
| ೨೭ | ಜೆಪಿಪಿ/JPP(ಪ್ರಾ) | ಜನತಾ ಪಕ್ಷ ಪಾರ್ಟಿ |
| ೨೮ | ಕೆಇಸಿ/KEC(ಪ್ರಾ) | ಕೇರಳ ಕಾಂಗ್ರೆಸ್ |
| ೨೯ | ಕೆಸಿಪಿ/KCP(ಪ್ರಾ) | ಕೇರಳ ಕಾಂಗ್ರೆಸ್(ಪಿಳ್ಳೈ ಗುಂಪು) |
| ೩೦ | ಎಲ್‌ಕೆಡಿ/LKD(ರಾ) | ಲೋಕ್ ದಳ್ |
| ೩೧ | ಎಂಎಜಿ/MAG(ಪ್ರಾ) | ಮಹಾರಾಷ್ಟ್ರವಾಡಿ ಗೋಮಾಂತಕನ್ |

| | | |
|---|---|---|
| ೩೨ | ಎಂಎಲ್‌ಒ/MLO(ಪ್ರಾ) | ಮುಸ್ಲಿಂ ಲೀಗ್(ಅಪೋಜಿಷನ್) |
| ೩೩ | ಎಂಆರ್‌ಪಿ/MRP(ಪ್ರಾ) | ಮಣಿಪುರ್ ಪೀಪಲ್ಸ್ ಪಾರ್ಟಿ |
| ೩೪ | ಎಂಯುಎಲ್/MUL(ಪ್ರಾ) | ಮುಸ್ಲಿಂ ಲೀಗ್ |
| ೩೫ | ಎನ್‌ಸಿಒ/ಕಾಂಗ್ರೆಸ್(ಒ)/NCO(ರಾ) | ಇಂಡಿಯನ್ ನ್ಯಾಷನಲ್ ಕಾಂಗ್ರೆಸ್(ಆರ್ಗನೈಜೇಷನ್)/ ಸಂಸ್ಥಾ ಕಾಂಗ್ರೆಸ್ |
| ೩೬ | ಎನ್‌ಎನ್‌ಒ/NNO(ಪ್ರಾ) | ನಾಗಲ್ಯಾಂಡ್ ನ್ಯಾಷನಲಿಸ್ಟ್ ಆರ್ಗನೈಜೇಷನ್ |
| ೩೭ | ಪಿಪಿಎ/PPA(ಪ್ರಾ) | ಪೀಪಲ್ಸ್ ಪಾರ್ಟಿ ಆಫ್ ಅರುಣಾಚಲ |
| ೩೮ | ಪಿಪಿಸಿ/PPC(ಪ್ರಾ) | ಪೀಪಲ್ಸ್ ಕಾನ್ಫರೆನ್ಸ್ |
| ೩೯ | ಪಿಎಸ್‌ಪಿ/PSP(ರಾ) | ಪ್ರಜಾ ಸೋಷಿಯಲಿಸ್ಟ್ ಪಾರ್ಟಿ |
| ೪೦ | ಪಿಡಬ್ಲ್ಯುಪಿ/PWP(ಪ್ರಾ) | ಪೆಸೆಂಟ್ಸ್ ಅಂಡ್ ವರ್ಕರ್ಸ್ ಪಾರ್ಟಿ |
| ೪೧ | ಆರ್‌ಎಸ್‌ಪಿ/RSP(ಪ್ರಾ) | ರೆವಲ್ಯೂಷನರಿ ಸೋಷಲಿಸ್ಟ್ ಪಾರ್ಟಿ |
| ೪೨ | ಆರ್‌ಎಸ್‌ಎಸ್/RSS(ರಾ) | ರಾಷ್ಟ್ರೀಯ ಸ್ವಯಂ ಸೇವಕ ಸಂಘ |
| ೪೩ | ಎಸ್‌ಎಡಿ/SAD(ಪ್ರಾ) | ಶಿರೋಮಣಿ ಅಕಾಲಿದಳ್ |
| ೪೪ | ಎಸ್‌ಸಿ(ಆರ್)/SC(R)(ಪ್ರಾ) | ಸಿಕ್ಕಿಂ ಕಾಂಗ್ರೆಸ್(ಆರ್) |
| ೪೫ | ಎಸ್‌ಎಸ್‌ಪಿ/SSP(ರಾ) | ಸಂಯುಕ್ತ ಸೋಷಿಯಲಿಸ್ಟ್ ಪಾರ್ಟಿ |
| ೪೬ | ಎಸ್‌ಡಬ್ಲ್ಯೂಎ/SWA(ರಾ) | ಸ್ವತಂತ್ರ ಪಾರ್ಟಿ |
| ೪೭ | ಟಿಯುಎಸ್/TUS(ಪ್ರಾ) | ತ್ರಿಪುರ ಉಪಜಾತಿ ಜುಬಾ ಸಮಿತಿ |
| ೪೮ | ಯುಡಿಎಫ್/UDF(ಪ್ರಾ) | ಯುನೈಟೆಡ್ ಡೆಮಾಕ್ರಟಿಕ್ ಫ್ರಂಟ್ |
| ೪೯ | ಯುಎಫ್‌ಎನ್/UFN(ಪ್ರಾ) | ಯುನೈಟೆಡ್ ಫ್ರಂಟ್ ಆಫ್ ನಾಗಲ್ಯಾಂಡ್ |
| ೫೦ | ವಿಹೆಚ್‌ಪಿ/VHP(ಪ್ರಾ) | ವಿಶಾಲ ಹರ್ಯಾಣ |
| ೫೧ | ವಿಹೆಚ್‌ಪಿ/VHP | ವಿಶ್ವ ಹಿಂದೂ ಪರಿಷದ್ |

ಕಾಯ್ದೆಗಳು

೧. ಡಿ.ಎ.ವಿ.ಪಿ – ಡೈರೆಕ್ಟರೇಟ್ ಆಫ್ ಅಡ್ವರ್ಟೈಸ್‌ಮೆಂಟ್ ಅಂಡ್ ವಿಶ್ಯುಯಲ್ ಪಬ್ಲಿಸಿಟಿ
೨. ಡಿ.ಐ.ಆರ್ – ಡಿಫೆನ್ಸ್ ಆಫ್ ಇಂಡಿಯಾ ರೂಲ್ಸ್
೩. ಎಂ.ಐ.ಎಸ್.ಎ(ಮೀಸಾ) – ಮೇಂಟೆನೆನ್ಸ್ ಆಫ್ ಇಂಟರ್ನಲ್ ಸೆಕ್ಯುರಿಟಿ ಆಕ್ಟ್
೪. ಪಿ.ಪಿ.ಒ.ಎಂ.ಎ – ಪಾರ್ಲಿಮೆಂಟ್ ಪ್ರಿವೆನ್ಷನ್ ಆಫ್ ಪಬ್ಲಿಕೇಷನ್ ಆಫ್ ಅಬ್ಜೆಕ್ಷನೆಬಲ್ ಮ್ಯಾಟರ್ ಸ್ಟೆಟ್ಸ್

# ಅಧ್ಯಾಯ – ೧

## ಪ್ರಸ್ತಾವನೆ

೧.೧. ತುರ್ತುಪರಿಸ್ಥಿತಿ: ಒಂದು ಅವಲೋಕನ
೧.೧.೧. ಅರ್ಥ ಮತ್ತು ವ್ಯಾಖ್ಯಾನ
೧.೧.೨. ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯ
೧.೧.೩ ತುರ್ತುಪರಿಸ್ಥಿತಿ: ಆರಂಭ ಮತ್ತು ನಂತರ
೧.೧.೩.೧. ಅಂತರ್ ರಾಷ್ಟ್ರೀಯ ವಿದ್ಯಮಾನಗಳು
೧.೧.೩.೨. ಜೆಪಿ ಚಳವಳಿ ಮತ್ತು ರಾಜ್ಯ ರಾಜಕಾರಣ
೧.೧.೩.೩. ಅಲಹಾಬಾದ್ ಉಚ್ಚ ನ್ಯಾಯಲಯದ ತೀರ್ಪು
೧.೧.೩.೪. ಜನತಾ ಸರ್ಕಾರ ಮತ್ತು ರಾಜಕೀಯ ಬೆಳವಣಿಗೆಗಳು
೧.೨. ತುರ್ತುಪರಿಸ್ಥಿತಿ: ಸಾಹಿತ್ಯ/ಆಕರ ವಿಮರ್ಶೆ
೧.೨.೧. ೧೯೭೦ರ ದಶಕ ಕುರಿತ ಅಧ್ಯಯನಗಳು
೧.೨.೨. ಆರಂಭಿಕ ಬರವಣಿಗೆಗಳು: ಸರ್ಕಾರ, ಜೈಲು ಮತ್ತು ತುರ್ತುಪರಿಸ್ಥಿತಿ (೧೯೭೭–೧೯೮೦)
೧.೨.೩. ಇತ್ತೀಚಿನ ಬರವಣಿಗೆಗಳು: ಚರಿತ್ರೆ ಮತ್ತು ತುರ್ತುಪರಿಸ್ಥಿತಿ(೧೯೯೦–೨೦೧೩)

ಶ್ರೀಮತಿ ಇಂದಿರಾ ಗಾಂಧಿ ಅವರು ೧೯೭೫ ಜೂನ್ ೨೬ರಂದು ಭಾರತದಲ್ಲಿ ಆಂತರಿಕ ತುರ್ತುಪರಿಸ್ಥಿತಿ ಘೋಷಿಸಿದರು. ೧೯೭೭ರ ಮಾರ್ಚ್ ೨೧ರಲ್ಲಿ ನಡೆದ ಲೋಕಸಭೆಯ ಸಾರ್ವತ್ರಿಕ ಚುನಾವಣೆಯಲ್ಲಿ ಜನತಾ ಪಕ್ಷ ಆಡಳಿತಕ್ಕೆ ಬಂದ ನಂತರ ತುರ್ತುಪರಿಸ್ಥಿತಿಯನ್ನು ರದ್ದುಗೊಳಿಸಿತು. ಅಲ್ಲಿಯವರೆಗೆ ಇಪ್ಪತ್ತೊಂದು ತಿಂಗಳು ಜಾರಿಯಲ್ಲಿದ್ದ ತುರ್ತುಪರಿಸ್ಥಿತಿ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳಿಗೆ ವಿಶಾಲವಾದ ನೆಲೆಗಟ್ಟನ್ನು ಒದಗಿಸಿತು.

ಸ್ವಾತಂತ್ರ್ಯಪೂರ್ವದಲ್ಲಿ ಗಾಂಧೀಜಿಯವರು ಇಂತಹ ಸಂದರ್ಭ ಅವಲೋಕಿಸಿ ಅಭಿಪ್ರಾಯ ವ್ಯಕ್ತಪಡಿಸಿದ್ದನ್ನು ಗಮನಿಸಬಹುದು.

> ಪ್ರಜಾಪ್ರಭುತ್ವವನ್ನು ಸಂರಕ್ಷಿಸಲು ಜನರಿಗೆ ಸ್ವಾತಂತ್ರ್ಯ, ಆತ್ಮಾಭಿಮಾನ ಮತ್ತು ಅದರ ಐಕ್ಯತೆಯ ಕುರಿತಾದ ತೀಕ್ಷ್ಣವಾದ ಅಥವಾ ಆಳವಾದ ಜ್ಞಾನವಿರಬೇಕು(ಗಾಂಧಿ ೧೯೬೮: ೩೬೮).

ಹಾಗೆ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು

> ಪ್ರಜಾಪ್ರಭುತ್ವವು ಅನುಶಾಸನ ಮತ್ತು ಪ್ರಬುದ್ಧತೆ ಅರಿವು ಹೊಂದಿರುವ ಜಗತ್ತಿನ ಅತ್ಯಂತ ಉತ್ಕೃಷ್ಟ ವಸ್ತು ವಿಷಯಗಳಲ್ಲೊಂದು. ಮಿಲಿಟರಿ ಹಾಗೂ ಪೊಲೀಸ್ ವ್ಯವಸ್ಥೆ ಮೇಲೆ ಅವಲಂಬಿತವಾದ ಪ್ರಜಾಪ್ರಭುತ್ವ ಅಸಮಂಜಸವಾದುದು. ಪ್ರಜಾಪ್ರಭುತ್ವವೆಂದರೆ ಜನರು ಕುರಿಗಳಂತಿರುವ ವ್ಯವಸ್ಥೆಯಲ್ಲ (ಗಾಂಧಿ ೧೯೫೧: ೩೪೧).

ಇವೆಲ್ಲವು ಭಾರತದ ಸ್ವಾತಂತ್ರ್ಯ ಹೋರಾಟದ ವಿವಿಧ ಸಂದರ್ಭಗಳಲ್ಲಿ ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯ ಕುರಿತಂತೆ ಗಾಂಧೀಜಿ ಅವರು ನೀಡಿರುವ ಹೇಳಿಕೆಗಳಾಗಿವೆ. ೧೯೭೦ರ ದಶಕದಲ್ಲಿ ಗಾಂಧಿಯವರ ಚಿಂತನೆ, ವಿಚಾರ ಮತ್ತು ನೆನಪು ಹೆಚ್ಚು ಪ್ರಸ್ತುತವೆಂಬ ಭಾವನೆ ಸಾರ್ವಜನಿಕವಾಗಿ ಕಂಡುಬರುತ್ತದೆ. ಈ ನಿಟ್ಟಿನಿಂದ ಸಮಕಾಲೀನ ಕಾಲಘಟ್ಟವನ್ನು ಗಮನಿಸಿದಾಗ ಹಲವು ಪ್ರತಿಭಟನೆ, ಹೋರಾಟ ಮತ್ತು ಚಳವಳಿಗಳು ವಿವಿಧ ರೀತಿಗಳಲ್ಲಿ ವ್ಯಕ್ತವಾಗುತ್ತಿದ್ದವು. ಸಮಕಾಲೀನವಾಗಿ ಆಂತರಿಕ ತುರ್ತುಪರಿಸ್ಥಿತಿಯ ಜಾರಿಯು ಭಾರತದ ರಾಜಕಾರಣದಲ್ಲಿ ಮಹತ್ವದ ತಿರುವನ್ನು ಪಡೆದ ಕಾಲ. ಈ ಅವಧಿಯಲ್ಲಿ ಪ್ರತಿಭಟನಾಕಾರರಲ್ಲಿ, ಸಮೂಹ ಮಾಧ್ಯಮಗಳಲ್ಲಿ ಗಾಂಧಿ ಮತ್ತಿತರ ಸ್ವತಂತ್ರ ಹೋರಾಟಗಾರರ ಉಕ್ತಿಗಳನ್ನು ಬಳಸುವ ಪ್ರವೃತ್ತಿ ಹೆಚ್ಚಾದರೆ, ಮತ್ತೊಂದು ಕಡೆ ಸರ್ಕಾರ ಪ್ರಜಾಪ್ರಭುತ್ವೀಯ ಅಂಶಗಳ ಪರವಾಗಿರುವ ವಿಚಾರಗಳ ಬಳಕೆ ನಿಯಂತ್ರಿಸಲು ಪ್ರಯತ್ನಿಸುತ್ತಿದುದ್ದನ್ನು ಗಮನಿಸಬಹುದು. ಗಾಂಧಿಯ ರಾಜಕೀಯ ಚಿಂತನೆಗಳು ಸಮಕಾಲೀನ ಸಂದರ್ಭದಲ್ಲಿ ಮೊದಲಿಗಿಂತ ಹೆಚ್ಚಾಗಿ ಪ್ರಸ್ತುತವೆನಿಸಿರುವುದನ್ನು ಚರಿತ್ರೆಯ ಈ ಕಾಲಘಟ್ಟದಲ್ಲಿ ನೋಡಬಹುದು. ಇದರೊಂದಿಗೆ ಗಾಂಧೀಜಿಯವರ ತತ್ವ ಆದರ್ಶಗಳನ್ನು ಅಷ್ಟಾಗಿ ಒಪ್ಪದ ಕಮ್ಯುನಿಸ್ಟ್ ಮತ್ತು ಆರ್.ಎಸ್.ಎಸ್. ಸಂಘಟನೆಗಳು ಕೂಡ ಭಾರತೀಯರ ಅಭಿವ್ಯಕ್ತಿ ಸ್ವಾತಂತ್ರ್ಯ ದಮನಗೊಂಡಿದ್ದನ್ನು ಗಮನಿಸಿ ತಮ್ಮ ಪ್ರತಿಭಟನೆಯನ್ನು ಭೂಗತ ಹೋರಾಟಗಳ ಮೂಲಕ ಇದೇ ಕಾಲಘಟ್ಟದಲ್ಲಿ ವ್ಯಕ್ತಪಡಿಸಿದ್ದನ್ನು ಕಾಣಬಹುದು.

*** *** ***

ಭಾರತದಾದ್ಯಂತ ತುರ್ತುಪರಿಸ್ಥಿತಿ ಜಾರಿಯಲ್ಲಿದ್ದ ಸಂದರ್ಭದಲ್ಲಿ ಮಧ್ಯಮವರ್ಗದ ಹಿತಾಸಕ್ತಿಯನ್ನು ಅಭಿವ್ಯಕ್ತಗೊಳಿಸುತ್ತಿದ್ದ ಮಾಧ್ಯಮಗಳು, ಹೋರಾಟಗಳು ತುರ್ತುಪರಿಸ್ಥಿತಿಯನ್ನು 'ಕತ್ತಲ ಯುಗ' ಎಂದು ಕರೆದಿರುವುದನ್ನು ನೋಡಬಹುದು. ಪೊಲೀಸ್ ಮತ್ತು ಮಿಲಿಟರಿಯ ಶಕ್ತಿಯುತ ಅಧಿಕಾರವನ್ನು ಕೈಯಲ್ಲಿಟ್ಟುಕೊಂಡು ಬಲಪ್ರಯೋಗದ ಮೂಲಕ ಭಾರತೀಯರನ್ನು ಆಳಿದ ಇಂದಿರಾ ಗಾಂಧಿಯವರ ಕಾಂಗ್ರೆಸ್ ಸರ್ಕಾರ ಜಗತ್ತಿನಾದ್ಯಂತ ಕಟುಟೀಕೆಗೆ ಒಳಪಟ್ಟಿತ್ತು. ಕರ್ನಾಟಕದ ಪರಿಸ್ಥಿತಿಯೂ ಇದಕ್ಕಿಂತ ಹೊರತಾಗಿರಲಿಲ್ಲ. ಆದರೆ ಕರ್ನಾಟಕದಲ್ಲಿ ಕಪ್ಪು ಬಿಳುಪು ಅಂಶಗಳಿಗಿಂತ ತುರ್ತುಪರಿಸ್ಥಿತಿಯ ದಿನಗಳು

ಸಾಮಾಜಿಕ ನೆಲೆಗಟ್ಟುಗಳ ಮೇಲೆ ಬೀರಿದ ಆಳವಾದ ಪರಿಣಾಮಗಳ ವಿವಿಧ ಆಯಾಮಗಳನ್ನು ಕಾಣಬಹುದು. ಕರ್ನಾಟಕ ರಾಜ್ಯದಲ್ಲಿ ಅಲ್ಲಿಯವರೆಗೆ ಲಿಂಗಾಯಿತ ಹಾಗೂ ಒಕ್ಕಲಿಗ ಸಮುದಾಯದ ರಾಜಕಾರಣಿಗಳು ತಮ್ಮ ಪ್ರಭಾವದ ಮೂಲಕ ಕಾಂಗ್ರೆಸ್ ಹಾಗೂ ಕರ್ನಾಟಕ ಸರ್ಕಾರವನ್ನು ತಮ್ಮ ಕೈಯಲ್ಲಿಟ್ಟುಕೊಂಡಿದ್ದವು. ವಿರೋಧ ಪಕ್ಷಗಳಲ್ಲಿಯೂ ಅದೇ ಸಮುದಾಯದ ಪ್ರತಿನಿಧೀಕರಣ ಪ್ರಬಲವಾಗಿತ್ತು. ೧೯೬೯ರಲ್ಲಿ ಕಾಂಗ್ರೆಸ್ಸಿನ ವಿಭಜನೆಯ ನಂತರ ಎಸ್.ನಿಜಲಿಂಗಪ್ಪನವರು ಕಾಂಗ್ರೆಸ್ಸಿನಿಂದ ಹೊರಬಂದ ಸಂದರ್ಭದಲ್ಲಿ ಉಂಟಾದ ರಾಜಕೀಯ ಸ್ಥಿತ್ಯಂತರದ ಪರಿಣಾಮ ಒಬಿಸಿ-ದಲಿತ-ಅಲ್ಪಸಂಖ್ಯಾತ ಸಮುದಾಯಗಳ ಹರಿಕಾರನಾಗಿ ರಾಜಕಾರಣಕ್ಕೆ ಹೊಸ ಭಾಷ್ಯವನ್ನು ಬರೆಯಲು ಹೊರಟ ದೇವರಾಜ ಅರಸು ಅವರು ಸೃಷ್ಟಿಸಿದ ರಾಜಕಾರಣದ ಉದಯ ಎಂದು ಗುರುತಿಸಬಹುದು.

ಹುಣಸೂರಿನ ಕಲ್ಲಳ್ಳಿ ಗ್ರಾಮದ ರೈತಾಪಿ ವರ್ಗದ ಹಿಂದುಳಿದ ಸಮುದಾಯದಿಂದ ಬಂದ ಅರಸರಿಗೆ ಆಡಳಿತವನ್ನು ಮಾಡುವ ಅವಕಾಶ ಬಂದಿದ್ದೇ ಮುಖ್ಯವಾಗಿ ತುರ್ತುಪರಿಸ್ಥಿತಿಯ ಅವಧಿಯಲ್ಲಿ ಎಂಬುದನ್ನು ನಾವು ಗಮನಿಸಬಹುದು. ಅವರ ಕಾಲದವರೆಗೆ ಬಹುಸಂಖ್ಯಾತವಾಗಿದ್ದ ಹಿಂದುಳಿದ ವರ್ಗಗಳು ಸಾಮಾಜಿಕ ನ್ಯಾಯ ಪಡೆಯಲು ಅಶಕ್ತವಾಗಿದ್ದವು. ಅರಸರ ನಿರ್ಗಮದ ನಂತರ ಕರ್ನಾಟಕದ ರಾಜಕಾರಣದಲ್ಲಿ ಹಿಂದುಳಿದ ವರ್ಗಗಳ ಪ್ರಾಬಲ್ಯವನ್ನು ಸ್ಪಷ್ಟವಾಗಿ ಗುರುತಿಸಬಹುದು. ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರದ ರಾಜ್ಯ ವಿಧಾನಸಭೆಯ ಎಂಟು ಅವಧಿಗಳಲ್ಲಿ ಅಂದರೆ ೧೯೪೭-೧೯೫೨, ೧೯೫೨-೧೯೫೬, ೧೯೫೬-೧೯೫೬, ೧೯೫೬-೧೯೫೮, ೧೯೫೮-೧೯೬೨, ೧೯೬೨-೧೯೬೨, ೧೯೬೨-೧೯೬೮, ೧೯೬೮-೧೯೭೧ರ ಅವಧಿಯೊಳಗೆ ಮೂರು ಅವಧಿಗಳಲ್ಲಿ ಒಕ್ಕಲಿಗ ಮುಖ್ಯಮಂತ್ರಿಗಳು ಹಾಗೂ ಐದು ಅವಧಿಗಳಲ್ಲಿ ಲಿಂಗಾಯಿತ ಮುಖ್ಯಮಂತ್ರಿಗಳು ಆಡಳಿತ ನಡೆಸಿದ್ದನ್ನು ಕಾಣಬಹುದು. ಅದರ ವಿವರಗಳು ಹೀಗಿವೆ:

**ಕರ್ನಾಟಕದ ಮುಖ್ಯಮಂತ್ರಿಗಳ ಪಟ್ಟಿ ಪಟ್ಟಿ ಸಂಖ್ಯೆ: ೧.**

| ಸಂಖ್ಯೆ | ಹೆಸರು | ಅವಧಿ | ಪಕ್ಷ | ಜಾತಿ |
|---|---|---|---|---|
| ೧ | ಕೆ.ಸಿ.ರೆಡ್ಡಿ | ೨೫/೧೦/೧೯೪೭ - ೩೦/೦೩/೧೯೫೨ | ಕಾಂಗ್ರೆಸ್ | ಒಕ್ಕಲಿಗ |
| ೨ | ಕೆ.ಹನುಮಂತಯ್ಯ | ೩೦/೦೩/೧೯೫೨ - ೧೯/೦೮/೧೯೫೬ | ಕಾಂಗ್ರೆಸ್ | ಒಕ್ಕಲಿಗ |
| ೩ | ಕಡಿದಾಳ್ ಮಂಜಪ್ಪ | ೧೯/೦೮/೧೯೫೬ - ೩೧/೧೦/೧೯೫೬ | ಕಾಂಗ್ರೆಸ್ | ಒಕ್ಕಲಿಗ |
| ೪ | ಎಸ್ ನಿಜಲಿಂಗಪ್ಪ | ೦೧/೧೧/೧೯೫೬ - ೧೬/೦೫/೧೯೫೮ | ಕಾಂಗ್ರೆಸ್ | ಲಿಂಗಾಯಿತ |
| ೫ | ಬಿ.ಡಿ.ಜತ್ತಿ | ೧೬/೦೫/೧೯೫೮ - ೦೯/೦೩/೧೯೬೨ | ಕಾಂಗ್ರೆಸ್ | ಲಿಂಗಾಯಿತ |
| ೬ | ಎಸ್ ಆರ್ ಕಂಠಿ | ೧೪/೦೩/೧೯೬೨ - ೨೦/೦೬/೧೯೬೨ | ಕಾಂಗ್ರೆಸ್ | ಲಿಂಗಾಯಿತ |
| ೭ | ಎಸ್ ನಿಜಲಿಂಗಪ್ಪ | ೨೧/೦೬/೧೯೬೨ - ೨೯/೦೫/೧೯೬೮ | ಕಾಂಗ್ರೆಸ್ | ಲಿಂಗಾಯಿತ |
| ೮ | ವೀರೇಂದ್ರ ಪಾಟೀಲ್ | ೨೯/೦೫/೧೯೬೮ - ೧೮/೦೩/೧೯೭೧ | ಕಾಂಗ್ರೆಸ್ | ಲಿಂಗಾಯಿತ |
| ೯ | ದೇವರಾಜ ಅರಸು | ೨೦/೦೩/೧೯೭೨ - ೩೧/೧೨/೧೯೭೭ | ಕಾಂಗ್ರೆಸ್ | ಅರಸು |
| ೧೦ | ದೇವರಾಜ ಅರಸು | ೨೮/೦೨/೧೯೭೮ - ೦೭/೦೧/೧೯೮೦ | ಕಾಂಗ್ರೆಸ್ | ಅರಸು |
| ೧೧ | ಆರ್ ಗುಂಡೂರಾವ್ | ೧೨/೦೧/೧೯೮೦ - ೦೬/೦೧/೧೯೮೩ | ಕಾಂಗ್ರೆಸ್ | ಬ್ರಾಹ್ಮಣ |
| ೧೨ | ರಾಮಕೃಷ್ಣ ಹೆಗಡೆ | ೧೦/೦೧/೧೯೮೩ - ೨೯/೧೨/೧೯೮೪ | ಜನತಾ ಪಕ್ಷ | ಬ್ರಾಹ್ಮಣ |
| ೧೩ | ರಾಮಕೃಷ್ಣ ಹೆಗಡೆ | ೦೮/೦೩/೧೯೮೫ - ೧೩/೦೨/೧೯೮೬ | ಜನತಾಪಕ್ಷ | ಬ್ರಾಹ್ಮಣ |
| ೧೪ | ರಾಮಕೃಷ್ಣ ಹೆಗಡೆ | ೧೬/೦೨/೧೯೮೬ - ೧೦/೦೮/೧೯೮೮ | ಜನತಾಪಕ್ಷ | ಬ್ರಾಹ್ಮಣ |
| ೧೫ | ಎಸ್ ಆರ್ ಬೊಮ್ಮಾಯಿ | ೧೩/೦೮/೧೯೮೮ - ೨೧/೦೪/೧೯೮೯ | ಜನತಾ ಪಕ್ಷ | ಲಿಂಗಾಯಿತ |
| ೧೬ | ವೀರೇಂದ್ರ ಪಾಟೀಲ್ | ೩೦/೧೧/೧೯೮೯ -೧೦/೧೦/೧೯೯೦ | ಕಾಂಗ್ರೆಸ್ | ಲಿಂಗಾಯಿತ |
| ೧೭ | ಎಸ್ ಬಂಗಾರಪ್ಪ | ೧೭/೧೦/೧೯೯೦ -೧೯/೧೧/೧೯೯೨ | ಕಾಂಗ್ರೆಸ್ | ಈಡಿಗ |
| ೧೮ | ಎಂ.ವೀರಪ್ಪ ಮೊಯಿಲಿ | ೧೯/೧೧/೧೯೯೨ -೧೧/೧೨/೧೯೯೪ | ಕಾಂಗ್ರೆಸ್ | ದೇವಾಡಿಗ |
| ೧೯ | ಹೆಚ್.ಡಿ.ದೇವೇಗೌಡ | ೧೧/೧೨/೧೯೯೪ - ೩೧/೦೫/೧೯೯೬ | ಜನತಾ ದಳ | ಒಕ್ಕಲಿಗ |
| ೨೦ | ಜೆ.ಹೆಚ್.ಪಟೇಲ್ | ೩೧/೦೫/೧೯೯೬ - ೦೭/೧೦/೧೯೯೯ | ಜನತಾ ದಳ | ಲಿಂಗಾಯಿತ |
| ೨೧ | ಎಸ್.ಎಂ.ಕೃಷ್ಣ | ೧೧/೧೦/೧೯೯೯ - ೨೮/೦೫/೨೦೦೪ | ಕಾಂಗ್ರೆಸ್ | ಒಕ್ಕಲಿಗ |
| ೨೨ | ಎನ್.ಧರ್ಮಸಿಂಗ್ | ೨೮/೦೫/೨೦೦೪ - ೨೮/೦೧/೨೦೦೬ | ಕಾಂಗ್ರೆಸ್ | ರಜಪೂತ |
| ೨೩ | ಹೆಚ್.ಡಿ.ಕುಮಾರಸ್ವಾಮಿ | ೦೩/೦೨/೨೦೦೬ - ೦೮/೧೦/೨೦೦೭ | ಜನತಾ ದಳ(ಎಸ್) | ಒಕ್ಕಲಿಗ |
| ೨೪ | ಬಿ.ಎಸ್.ಯಡಿಯೂರಪ್ಪ | ೧೨/೧೧/೨೦೦೭ - ೧೯/೧೧/೨೦೦೭ | ಬಿಜೆಪಿ | ಲಿಂಗಾಯಿತ |
| ೨೫ | ಬಿ.ಎಸ್.ಯಡಿಯೂರಪ್ಪ | ೩೦/೦೫/೨೦೦೮ -೩೧/೦೭/೨೦೧೧ | ಬಿಜೆಪಿ | ಲಿಂಗಾಯಿತ |
| ೨೬ | ಡಿ.ವಿ.ಸದಾನಂದ ಗೌಡ | ೦೪/೦೮/೨೦೧೧ - ೧೨/೦೭/೨೦೧೨ | ಬಿಜೆಪಿ | ಒಕ್ಕಲಿಗ |
| ೨೭ | ಜಗದೀಶ್ ಶೆಟ್ಟರ್ | ೧೨/೦೭/೨೦೧೨ - ೧೨/೦೫/೨೦೧೩ | ಬಿಜೆಪಿ | ಲಿಂಗಾಯಿತ |
| ೨೮ | ಸಿದ್ದರಾಮಯ್ಯ | ೧೩/೦೫/೨೦೧೩ - | ಕಾಂಗ್ರೆಸ್ | ಕುರುಬ |

ಆಕರ: ಕರ್ನಾಟಕ ಲೆಜಿಸ್ಲೇಟಿವ್ ಅಸೆಂಬ್ಲಿ ವೆಬ್‌ಸೈಟ್.

ಕೇವಲ ಲಿಂಗಾಯಿತ ಮತ್ತು ಒಕ್ಕಲಿಗ ಸಮುದಾಯಗಳಿಂದ ಬಂದವರು ಮಾತ್ರ ವಿರೋಧ ಪಕ್ಷದ ನಾಯಕರಾಗಿದ್ದದ್ದು ಕಂಡುಬರುತ್ತದೆ. ೧೯೭೨ ರಿಂದ ೨೦೧೩ರವರೆಗೆ ಇದ್ದಂತಹ ೨೪ ಅವಧಿಗಳಲ್ಲಿ ೮ ಬಾರಿ ಒಕ್ಕಲಿಗರು, ೬ ಬಾರಿ ಲಿಂಗಾಯಿತರು, ೨ ಬಾರಿ ಬ್ರಾಹ್ಮಣರು ವಿರೋಧ ಪಕ್ಷದ ನಾಯಕರಾಗಿದ್ದರು. ಆಶ್ಚರ್ಯದ ಸಂಗತಿಯೆಂದರೆ ಅರಸರನ್ನು ಸೇರಿಸಿಕೊಂಡಂತೆ, ನಂತರ ಹಿಂದುಳಿದ ವರ್ಗಗಳಿಂದ ಬಂದ ವಿರೋಧ ಪಕ್ಷಗಳ ನಾಯಕರ ಸಂಖ್ಯೆ ೬. ಅರಸು ನಂತರದ ಕಾಲಘಟ್ಟದಲ್ಲಿ ೨ ಅವಧಿಗೆ ದಲಿತ ಸಮುದಾಯದಿಂದ ಬಂದವರು ವಿರೋಧ ಪಕ್ಷದ ನಾಯಕರಾಗಿದ್ದುದು ಕಂಡುಬಂದಿದೆ. ಈ ಎರಡೂ ಅವಧಿಯಲ್ಲಿ ವಿರೋಧ ಪಕ್ಷದ ನಾಯಕರಾಗಿದ್ದವರು ಅರಸು ಅವರ ಶಿಷ್ಯರಾಗಿದ್ದ ಮಲ್ಲಿಕಾರ್ಜುನ ಖರ್ಗೆ ಅವರು. ೬ ಮಂದಿ ಒಬಿಸಿಗಳಲ್ಲಿ ಎ.ಲಕ್ಷ್ಮಿಸಾಗರ್ ಮತ್ತು ಸಿದ್ಧರಾಮಯ್ಯ ಅವರು ಹೊರತುಪಡಿಸಿದಂತೆ ಉಳಿದವರೆಲ್ಲರೂ ದೇವರಾಜ ಅರಸು ಅವರ ನೇರ ಶಿಷ್ಯರಾಗಿದ್ದವರು.

೧೯೪೭ – ೧೯೫೨ ರಿಂದ ೨೦೧೩ರವರೆಗಿನ ಒಟ್ಟು ೧೫ ವಿಧಾನಸಭಾ ಅವಧಿಗಳಲ್ಲಿದ್ದ ಮಂತ್ರಿಗಳು ಮತ್ತು ಅವರು ಪ್ರತಿನಿಧಿಸಿದ ಸಮುದಾಯಗಳ ಪಟ್ಟಿಯಲ್ಲಿ ಒಬಿಸಿ–ದಲಿತ–ಅಲ್ಪಸಂಖ್ಯಾತ ಸಮುದಾಯಗಳ ಮೇಲೇಳುವಿಕೆಯನ್ನು ಗುರುತಿಸಲಾಗಿದೆ. ೧೯೭೨ರಲ್ಲಿ ದೇವರಾಜ ಅರಸು ಅವರು ಮುಖ್ಯಮಂತ್ರಿ ಆಗುವವರೆಗೆ ಮಂತ್ರಿಮಂಡಲದಲ್ಲಿ ಒಬಿಸಿಗಳ ಸಂಖ್ಯೆ ೬ ಅನ್ನು ದಾಟಿರಲಿಲ್ಲ. ೧೯೭೨–೧೯೭೭ರಲ್ಲಿ ಒಬಿಸಿಗಳ ಸಂಖ್ಯೆ ಗಣನೀಯವಾಗಿ ೧೩ಕ್ಕೆ ಏರುತ್ತದೆ. ೧೯೭೮ರಲ್ಲಿ ಅವರು ಮತ್ತೆ ಅಧಿಕಾರವನ್ನು ವಹಿಸಿಕೊಂಡ ಮೇಲೆ ಸಂಖ್ಯೆಯು ೧೪ಕ್ಕೆ ಏರುತ್ತದೆ. ಮುಂದಿನ ವರ್ಷಗಳಲ್ಲಿ ಆ ಸಂಖ್ಯೆ ೧೨, ೧೧, ೨೧, ೧೨, ೧೫, ೯, ೧೨ ಮತ್ತು ೬ ಇರುವುದನ್ನು ಕೆಳಗಿನ ಕೋಷ್ಟಕದಲ್ಲಿ ಗಮನಿಸಬಹುದು.

**ಕರ್ನಾಟಕ ಶಾಸಕಾಂಗ ಮಂತ್ರಿಗಳ ಜಾತಿವಾರು ಪಟ್ಟಿ (೧೯೪೭–೨೦೧೩). ಸಂಖ್ಯೆ: ೩**

| ವರ್ಷ | ಬ್ರಾಹ್ಮಣ+ಜೈನರು | ಲಿಂಗಾಯತ | ಒಕ್ಕಲಿಗ | ಒಬಿಸಿ | ಮುಸ್ಲಿಂ | ಕ್ರಿಶ್ಚಿಯನ್ | ಎಸ್‌ಸಿ+ಎಸ್‌ಟಿ | ಒಟ್ಟು |
|---|---|---|---|---|---|---|---|---|
| ೧೯೪೭–೧೯೫೨ | - | - | ೫ | ೧ | ೧ | - | - | ೭ |
| ೧೯೫೨–೧೯೫೭ | ೩+೧ | ೬ | ೬ | ೨ | - | - | ೧ | ೧೯ |
| ೧೯೫೭–೧೯೬೨ | ೩+೧ | ೧೧ | ೫ | ೩ | ೨ | ೧ | ೨ | ೨೮ |
| ೧೯೬೨–೧೯೬೭ | ೨ | ೬ | ೭ | ೨ | ೩ | ೧ | ೪ | ೨೫ |
| ೧೯೬೭–೧೯೭೨ | ೩ | ೧೪ | ೮ | ೬ | ೨ | - | ೫ | ೩೮ |
| ೧೯೭೨–೧೯೭೭ | ೩ | ೧೦ | ೭ | ೧೩ | ೪ | ೧ | ೯+೧ | ೪೮ |
| ೧೯೭೮–೧೯೮೩ | ೫+೩ | ೭ | ೬ | ೧೪ | ೫ | ೧ | ೮+೧ | ೫೦ |
| ೧೯೮೩–೧೯೮೫ | ೩ | ೯ | ೭ | ೧೨ | ೨ | - | ೬ | ೩೯ |
| ೧೯೮೫–೧೯೮೯ | ೪+೧ | ೧೭ | ೧೨ | ೧೧ | ೩ | - | ೧೦ | ೫೮ |
| ೧೯೮೯–೧೯೯೪ | ೧+೧ | ೧೫ | ೧೩ | ೨೧ | ೭ | ೨ | ೧೨+೪ | ೭೬ |
| ೧೯೯೪–೧೯೯೯ | ೩+೧ | ೧೮ | ೧೪ | ೧೨ | ೪ | - | ೧೩+೨ | ೬೭ |
| ೧೯೯೯–೨೦೦೪ | ೨+೨ | ೧೦ | ೯ | ೧೫ | ೬ | ೧ | ೭+೨ | ೫೪ |
| ೨೦೦೪–೨೦೦೮ | ೨+೧ | ೧೪ | ೧೩ | ೯ | ೫ | - | ೮+೫ | ೫೭ |
| ೨೦೦೮–೨೦೧೩ | ೩+೩ | ೧೪ | ೮ | ೧೨ | ೧ | - | ೯+೪ | ೫೪ |
| ೨೦೧೩– | ೨+೧ | ೬ | ೬ | ೬ | ೩ | ೧ | ೫+೧ | ೩೧ |
| | ೩೯+೧೫ | ೧೫೭ | ೧೨೬ | ೧೩೯ | ೪೮ | ೮ | ೯೯+೨೦ | ೬೫೧ |

ಆಕರ[೧]: ಕ್ಷೇತ್ರಕಾರ್ಯದ ಅಂಕಿಅಂಶಗಳು.

*ಮಂತ್ರಿಗಳ ವಿವರಗಳಿಗಾಗಿ ಅನುಬಂಧ ೩ನ್ನು ನೋಡಿ.

ಹಾಗೆಯೇ ಅರಸರ ಕಾಲಾವಧಿಯಲ್ಲಿ ದಲಿತ, ಮುಸ್ಲಿಂ ಸಮುದಾಯದಿಂದ ಬಂದ ಮಂತ್ರಿಗಳ ಸಂಖ್ಯೆ ಕೂಡ ಹೆಚ್ಚಾಗಿದ್ದನ್ನು ಮೇಲ್ಕಂಡ ಕೋಷ್ಟಕದಲ್ಲಿ ಗಮನಿಸಬಹುದು. ಎಸ್.ಟಿ.ಗಳಿಗೆ(ಬುಡಕಟ್ಟು) ಮೊದಲ ಬಾರಿಗೆ ಮಂತ್ರಿಮಂಡಲದಲ್ಲಿ ಪ್ರಾತಿನಿಧ್ಯ ದೊರೆತಿದ್ದನ್ನು ಗಮನಿಸಬಹುದು. ಅರಸರ ಕಾಲಾವಧಿಯ ಮಂತ್ರಿಮಂಡಲದಲ್ಲಿ ಬ್ರಾಹ್ಮಣ, ಲಿಂಗಾಯಿತ, ಒಕ್ಕಲಿಗರ ಪ್ರಾತಿನಿಧ್ಯ ಸಹಜವಾಗಿಯೇ ಕಡಿಮೆಯಾದದ್ದನ್ನು ಕಾಣಬಹುದಾಗಿದೆ. ಒಟ್ಟಾರೆಯಾಗಿ ದೇವರಾಜ ಅರಸು ಅವರ ಕಾಲಾವಧಿ ಮತ್ತು ನಂತರದ ಅವಧಿಯಲ್ಲಿ ಕರ್ನಾಟಕದ ರಾಜಕಾರಣದಲ್ಲಿ ಸಾಮಾಜಿಕ ನ್ಯಾಯದ ಕಲ್ಪನೆ ಸಾಕಾರಗೊಂಡಿದ್ದನ್ನು ನೋಡಬಹುದಾಗಿದೆ. ಸಮುದಾಯಗಳ ನ್ಯಾಯಯುತವಾದ ಪ್ರತಿನಿಧೀಕರಣ ಪ್ರಜಾಪ್ರಭುತ್ವ ವ್ಯವಸ್ಥೆಯ ಬಹಳ ಮುಖ್ಯವಾದ ಅಂಶ. ಇಲ್ಲಿ ಕೂಡ ದೇವರಾಜ ಅರಸು ಅವರ ಶಕ್ತಿಯ ಸಾಮರ್ಥ್ಯ ಎದ್ದು ಕಾಣುತ್ತದೆ. ಒಬ್ಬ ವ್ಯಕ್ತಿಯಾಗಿ ಕರ್ನಾಟಕದ ರಾಜಕಾರಣವನ್ನು, ಸಮಾಜವನ್ನು ಪ್ರಜಾಪ್ರಭುತ್ವೀಯ ರಾಜಕಾರಣದಲ್ಲಿ ಬಹುಸಂಖ್ಯಾತರನ್ನು ಒಳಗೊಂಡಂತಿರುವ ವ್ಯವಸ್ಥೆಯನ್ನು ರೂಪಿಸಲು ಸಾಧ್ಯವಾಗಿದ್ದನ್ನು ಗಮನಿಸಬಹುದು. ತುರ್ತುಪರಿಸ್ಥಿತಿಯ ಕಾಲಾವಧಿಯಲ್ಲಿಯೇ ದೇವರಾಜ ಅರಸು ಅವರು ಬಹುಸಂಖ್ಯಾತ ನೊಂದ ಜನರನ್ನು ಸಾರ್ವಜನಿಕ ರಾಜಕಾರಣದಲ್ಲಿ ಪಾಲುದಾರರನ್ನಾಗಿ ಮಾಡಿದ ಪ್ರಕ್ರಿಯೆ ಅಧ್ಯಯನಕಾರರಿಗೆ ಬಹುಮುಖ್ಯವಾದ ಅಧ್ಯಯನ ವಸ್ತುವಿಷಯವಾಗಿದೆ. ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಪ್ರಜಾಪ್ರಭುತ್ವೀಯ ರಾಜಕಾರಣದ ಎಲ್ಲ ಮಿತಿಗಳೊಂದಿಗೆ ಸಾಮಾಜಿಕ ನ್ಯಾಯಕ್ಕಾಗಿ ಹೋರಾಡಿದ, ಅದನ್ನು ಶಕ್ತಿ ರಾಜಕಾರಣದಲ್ಲಿ ಅನುಷ್ಠಾನಕ್ಕೆ ತಂದ ಅವರ ಮತ್ತು ಅವರ ಸರ್ಕಾರದ ಹಾದಿಯ ಶಕ್ತಿ ಮತ್ತು ಮಿತಿಗಳನ್ನು ಪ್ರಸ್ತುತ ಮಹಾಪ್ರಬಂಧವು ಅಧ್ಯಯನ ಮಾಡಲು ಪ್ರಯತ್ನಿಸಿದೆ. ತುರ್ತುಪರಿಸ್ಥಿತಿಯ ದಿನಗಳು "ಕರಾಳವಾಗಿದೆ" ಎಂಬ ವಾದವನ್ನು ಗಮನಿಸಿಯೂ ನೋಡಬೇಕಾದ ವಿಚಾರ ಏನೆಂದರೆ ಇದೇ ಅವಧಿಯಲ್ಲಿ ಅರಸು ಅವರು ಸಾಮಾಜಿಕ – ಆರ್ಥಿಕ ಸುಧಾರಣೆಗಳನ್ನು ಪ್ರಜಾಪ್ರಭುತ್ವೀಯ ವ್ಯವಸ್ಥೆಯ ಇತಿಮಿತಿಗಳ ಒಳಗೆ ತಂದರು ಎನ್ನುವಂತಹ ಅಂಶ. ಹೀಗಾಗಿ ಕರ್ನಾಟಕದಲ್ಲಿ ತುರ್ತುಪರಿಸ್ಥಿತಿಯ ಅಧ್ಯಯನ ಎಂದರೆ ಬಹುಮುಖ್ಯವಾಗಿ ಅದು ದೇವರಾಜ ಅರಸು ಅವರನ್ನು ಕೇಂದ್ರೀಕರಿಸಿಕೊಂಡು ಮಾಡಿದ ಅಧ್ಯಯನವಾಗಿದೆ. ಈ ಹಿನ್ನೆಲೆಯಲ್ಲಿ "ಕರ್ನಾಟಕದಲ್ಲಿ ತುರ್ತುಪರಿಸ್ಥಿತಿ: ಪ್ರಭಾವ ಮತ್ತು ಪರಿಣಾಮಗಳು" ಎನ್ನುವ ಮಹಾಪ್ರಬಂಧವನ್ನು ರಚಿಸಲಾಗಿದೆ.

••• ••• •••

## ತುರ್ತುಪರಿಸ್ಥಿತಿ: ಒಂದು ಅವಲೋಕನ

೧೯೭೫ರ ಜೂನ್ ೨೬ ರಿಂದ ೧೯೭೭ ಮಾರ್ಚ್ ೨೧ರವರೆಗೆ ಭಾರತದಾದ್ಯಂತ ಆಂತರಿಕ ತುರ್ತುಪರಿಸ್ಥಿತಿ ಜಾರಿಯಲ್ಲಿತ್ತು. ಇದಕ್ಕೆ ರಾಷ್ಟ್ರಾದ್ಯಂತ ಪರ ಮತ್ತು ವಿರೋಧಿ ನೆಲೆಗಳಲ್ಲಿ ಪ್ರತಿಕ್ರಿಯೆಗಳು ಕಂಡುಬರುತ್ತವೆ.

> ಪ್ರಜಾತಂತ್ರದ ವಿಧಾನಗಳಲ್ಲಿ ಜನರನ್ನು ಹೆಚ್ಚು ನಿಕಟ ಹಾಗೂ ನಿರಂತರವಾಗಿ ತೊಡಗಿಸುವ ಮೂಲಕ ನಾನು ಪ್ರಜಾಪ್ರಭುತ್ವದ ಕ್ಷಿತಿಜಗಳನ್ನು ವಿಸ್ತಾರಗೊಳಿಸುವ ಪ್ರಯತ್ನ ಮಾಡಿದ್ದೆ. ಇದಕ್ಕಾಗಿ ಎರಡು ಮಾರ್ಗಗಳನ್ನು ಯೋಚಿಸಿದ್ದೆ. ಚುನಾವಣೆಗಳಲ್ಲಿ ಅಭ್ಯರ್ಥಿಗಳನ್ನು ಆರಿಸುವ ವಿಚಾರದಲ್ಲಿ ಜನತೆಯ ಒಟ್ಟಾಭಿಪ್ರಾಯವನ್ನು ಕ್ರೋಢೀಕರಿಸಲು ಅನುಕೂಲ ಆಗುವಂತಹ ವ್ಯವಸ್ಥೆಯನ್ನು ರೂಪಿಸುವುದು. ಜನತೆ ತನ್ನ ಪ್ರತಿನಿಧಿಗಳ ಕಾರ್ಯನಿರ್ವಹಣೆ ಬಗ್ಗೆ ಸದಾ ಜಾಗೃತರಾಗಿರಲು, ಒಳ್ಳೆಯ ಹಾಗೂ ಪ್ರಾಮಾಣಿಕ ಸೇವೆ ಪಡೆದೆ ತೀರಲು ಸಾಧ್ಯವಾಗುವಂತಹ ವ್ಯವಸ್ಥೆಯೊಂದನ್ನು ... ಒದಗಿಸುವುದು(ನಾರಾಯಣ್ ೨೦೦೯: ३೧).
>
> ಪ್ರಜಾತಂತ್ರದ ರಕ್ಷಣೆಯ ಹೆಸರಿನಲ್ಲಿ ಪ್ರಜಾತಂತ್ರವನ್ನು ಅಂತ್ಯಗೊಳಿಸಲು ಹೊರಟ ರಾಷ್ಟ್ರ ರಾಜಕಾರಣದೊಳಗಿರುವ ಯೋಜನೆಗಳನ್ನು ಮುರಿಯಲು ಇಂಥ ಕ್ರಮ ತೆಗೆದುಕೊಳ್ಳುವ ತುರ್ತು ಅಗತ್ಯವಿತ್ತು(ಅರಸು ೧೯೭೫: ೧೯).

ಮತ್ತು

> ಸ್ವತಂತ್ರ ಭಾರತದ ಕಿರು ಇತಿಹಾಸದಲ್ಲಿ ಮೊದಲನೆಯ ದೊಡ್ಡ ತಿರುವು ಕಂಡದ್ದು ೧೯೭೫ರಲ್ಲಿ, ಇಂದಿರಾ ಗಾಂಧಿಯವರು ವಿಧಿಸಿದ 'ತುರ್ತುಪರಿಸ್ಥಿತಿ'ಯ ಸಂದರ್ಭದಲ್ಲಿ. ಆಗ ಭಾರತದ ಇಡಿ ಜನ ವರ್ಗವು ಅದರ ವಿರುದ್ಧವಾಗಿ, ಜಯಪ್ರಕಾಶರ ನೇತೃತ್ವದಲ್ಲಿ ಎದ್ದು ನಿಂತು ಪ್ರತಿಭಟಿಸಿತು. ಆದರೆ ಕ್ಷಿಪ್ರವಾಗಿ ಭುಗಿಲೆದ್ದ ಆ ಆಂದೋಲನವು ಅಷ್ಟೇ ಕ್ಷಿಪ್ರವಾಗಿ ನಂದಿಹೋಯಿತು. ಮುಂದೆ ೧೯೮೦ರ ದಶಕದಲ್ಲಿ, ಆ ಜನಾಂದೋಲನದ ಬೇರಿನಿಂದ ಹೊಸ ಕುಡಿಗಳು ಚಿಗುರಿ ಬಂದವೇನೋ ಎನ್ನುವ ಹಾಗೆ, ಹಲವು ಚಳವಳಿಗಳು ಬೇರೆ ಬೇರೆಯಾಗಿ ಹುಟ್ಟಿಕೊಂಡವು(ಸುಬ್ಬಣ್ಣ ೧೯೯೮: ೮೫).

ಈ ಮೇಲಿನವುಗಳಲ್ಲಿ ಕಂಡುಬರುವ ಸಮಾನ ಅಂಶ ಹಾಗೂ ಕೇಂದ್ರ ವಿಚಾರ 'ಪ್ರಜಾಪ್ರಭುತ್ವ ಮತ್ತು ಅದರ ರಕ್ಷಣೆ' ಆಗಿದೆ. ಕಡೆಯ ಉಲ್ಲೇಖದಲ್ಲಿ ನೇರವಾಗಿ ಪ್ರಜಾಪ್ರಭುತ್ವದ ಪ್ರಸ್ತಾಪವಿಲ್ಲವಾದರೂ ೧೯೮೦ರ ದಶಕದ ಆರಂಭದಲ್ಲಿ ಕಂಡುಬಂದ ಚಳವಳಿಗಳಿಗೆ ತುರ್ತುಪರಿಸ್ಥಿತಿ ಕಾಲಘಟ್ಟದ ಪ್ರತಿಭಟನೆಗಳು ಪೂರಕವಾಗಿ ಕಾರ್ಯನಿರ್ವಹಿಸಿದೆ ಎಂಬ ವಿಶ್ಲೇಷಣೆ ಇದೆ. ಇವು ಸಾಮಾಜಿಕ ಬದಲಾವಣೆ ಮತ್ತು ಸಮಕಾಲೀನ ರಾಜಕಾರಣವೆರಡನ್ನು ಒಟ್ಟಾಗಿ ನೋಡುವ ಅಗತ್ಯವನ್ನು ಮುಂದಿಡುವುದು. ಈ ಅಧ್ಯಯನದ ಸ್ವರೂಪ, ಉದ್ದೇಶ ಮತ್ತು ವ್ಯಾಪ್ತಿಯನ್ನು ಮೂರು ಭಾಗಗಳಲ್ಲಿ ಚರ್ಚಿಸಲಾಗಿದೆ. 'ತುರ್ತುಪರಿಸ್ಥಿತಿ'ಯ ಅರ್ಥ ಮತ್ತು ವ್ಯಾಖ್ಯಾನಗಳಲ್ಲಿ ಕಾಲಾಂತರದಲ್ಲಿ ಉಂಟಾದ ಗ್ರಹಿಕೆಗಳ ರೂಪಾಂತರಗಳನ್ನು ಚರ್ಚಿಸಲು ಪ್ರಯತ್ನಿಸಿದೆ. ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯ ಕುರಿತು ನಡೆಯುತ್ತಿದ್ದ ಸೈದ್ಧಾಂತಿಕ ಚರ್ಚೆಗಳನ್ನು ವಿಶ್ಲೇಷಿಸಲಾಗಿದೆ. ತುರ್ತುಪರಿಸ್ಥಿತಿ ಪೂರ್ವ ಮತ್ತು ನಂತರದ ರಾಜಕೀಯ, ಸಾಮಾಜಿಕ ಬದಲಾವಣೆಗಳನ್ನು ಹಾಗೂ ಸಮಕಾಲೀನ ಚಿಂತನೆಗಳನ್ನು ಅವಲೋಕಿಸಲು ಪ್ರಯತ್ನಿಸಿದೆ.

### ೧.೧.೧. ಅರ್ಥ ಮತ್ತು ವ್ಯಾಖ್ಯಾನ

ರಾಜಕೀಯ ಚಳವಳಿಗಳು ಆಡಳಿತ ವ್ಯವಸ್ಥೆಯ ವಿರೋಧಿ ನೆಲೆಯಲ್ಲಿ ಕಂಡುಬರುವ ಮುಖ್ಯಧಾರೆಯ ಪ್ರತಿಭಟನೆಗಳಾಗಿರುತ್ತವೆ. ತುರ್ತುಪರಿಸ್ಥಿತಿ ಕಾಲಘಟ್ಟದ ಆಡಳಿತ ನೀತಿ ಕುರಿತ ಗ್ರಹಿಕೆಗಳಲ್ಲಿ ಕಾಲಾಂತರದಲ್ಲಿ ಉಂಟಾಗಿರುವ ಬದಲಾವಣೆಯನ್ನು ಗಮನಿಸುವ ಮೂಲಕ ಪ್ರತಿಭಟನೆಯ ನೆಲೆಗಳು ಮತ್ತು ಸ್ವರೂಪಗಳನ್ನು ಅರಿಯಲು ಸಾಧ್ಯವಿದೆ.

> ಸಾಮಾನ್ಯವಾಗಿ ತುರ್ತುಪರಿಸ್ಥಿತಿಯ ಕಾಲಘಟ್ಟವನ್ನು ಭಯಭೀತ ವಾತಾವರಣ, ಮೂಲಭೂತ ಹಕ್ಕುಗಳ ದಮನದ ಕಾಲ, ಪ್ರಜಾಪ್ರಭುತ್ವಕ್ಕೆ ಧಕ್ಕೆ, ಮೀಸಾ ಕಾಯ್ದೆ, ಸೆನ್ಸಾರ್‌ಶಿಪ್, ರಾಜಕೀಯ ಅರಾಜಕತೆ ಮೊದಲಾದ ಪದಗಳ ಮೂಲಕ ವಿವರಿಸಲಾಗುತ್ತದೆ. ಈ ಎಲ್ಲ ಪದಗಳು ಭಿನ್ನ ಭಿನ್ನ ಅರ್ಥವನ್ನು ಹೊಂದಿವೆ. ಆದರೂ ತುರ್ತುಪರಿಸ್ಥಿತಿ ಕಾಲಘಟ್ಟವನ್ನು ವಿವರಿಸಲು ಬಳಸುತ್ತಿರುವುದು ಹಲವು ಹೊಸ ಆಯಾಮಗಳನ್ನು ಮುಂದಿಡುತ್ತ ಚಿಂತಿಸಲು ಅವಕಾಶ ಮಾಡಿಕೊಡುತ್ತದೆ(ರಶ್ಮಿ ೨೦೧೨: ೧೪೫).

ಈ ಕಾಲಘಟ್ಟವನ್ನು ವಿನೋಬಾ ಭಾವೆ, ಮದರ್ ತೆರೆಸ, ಜೆ.ಆರ್.ಡಿ.ಟಾಟ ಅನುಶಾಸನ ಪರ್ವವೆಂದು[1] ಕರೆದರೆ, ಅನೇಕರು ಆಪತ್ ಕಾಲ, ವಿಷಮ ಕಾಲ, ಕತ್ತಲ ಕಾಲ,[2] ತುರ್ತುಸ್ಥಿತಿ ಎಂದು ಕರೆದಿರುವುದನ್ನು ನೋಡಬಹುದು. ಇಂಟರ್ನಲ್ ಎಮರ್ಜೆನ್ಸಿ (internal emergency) ಪದಕ್ಕೆ ಪರ್ಯಾಯವಾಗಿ ಕನ್ನಡದಲ್ಲಿ ಆಂತರಿಕ ತುರ್ತುಪರಿಸ್ಥಿತಿ ಎಂಬ ಪದವನ್ನು ಬಳಸಲಾಗಿದೆ. ಎಮರ್ಜೆನ್ಸಿ ಎಂಬ ಪದಕ್ಕೆ ಆಕ್ಸ್‌ಫರ್ಡ್ ನಿಘಂಟಿನಲ್ಲಿ ಆಕಸ್ಮಿಕವಾಗಿ, ಗಂಭೀರವಾದ ಮತ್ತು ಅಪಾಯಕರವಾದ ಘಟನೆ ಅಥವಾ ಅವಶ್ಯಕವಾದ ತಕ್ಷಣದ ಕಾರ್ಯದ ಅಗತ್ಯವಿದ್ದಲ್ಲಿ ಸರ್ಕಾರ ಎಮರ್ಜೆನ್ಸಿ ಘೋಷಿಸಬಹುದು ಎಂಬ ಅರ್ಥವಿದೆ. ಕನ್ನಡ ಭಾಷಾ ನಿಘಂಟಿನಲ್ಲಿ ತುರ್ತುಪರಿಸ್ಥಿತಿಯ ಪದಕ್ಕೆ ಸಂವಿಧಾನದಲ್ಲಿರುವ[3] ಅರ್ಥವನ್ನೇ ಕೊಡಲಾಗಿದೆ. ಆದರೆ ೧೯೭೫ರ ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನಲ್ಲಿ 'ಜರೂರು ಪರಿಸ್ಥಿತಿ' ಎಂಬರ್ಥವಷ್ಟೇ ಇತ್ತು. *ಇನ್ ದ ನೇಮ್ ಆಫ್ ಡೆಮಾಕ್ರೆಸಿ: ಜೆ.ಪಿ. ಮೂವ್‌ಮೆಂಟ್ ಅಂಡ್ ಎಮರ್ಜೆನ್ಸಿ(೨೦೦೩)* ಕೃತಿಯಲ್ಲಿ ಬಿಪನ್ ಚಂದ್ರ ಅವರು 'ತುರ್ತುಪರಿಸ್ಥಿತಿಯ ಕಾಲಘಟ್ಟ ಅಧಿಕಾರಶಾಹಿತ್ವದೊಡನೆ ನಡೆದ ಚೆಲ್ಲಾಟ. ಇದರ ಪ್ರಮುಖ ಗುರಿ ಸ್ಟೇಟಸ್‌ಕೊ ರಕ್ಷಣೆ ಮತ್ತು ರಾಜಕೀಯ ಸ್ಥಿತಿಯನ್ನು ಆಮೂಲಾಗ್ರವಾಗಿ ಪರಿವರ್ತಿಸುವುದಾಗಿತ್ತು, ಆದರೆ ಅದರ ಸ್ವರೂಪ ಫ್ಯಾಸಿಸ್ಟ್ ಅಥವಾ

ನಿರಂಕುಶಾಧಿಕಾರತ್ವ ಸೃಷ್ಟಿಸುವುದಾಗಿರಲಿಲ್ಲ' ಎಂದು ಸಂದರ್ಭವನ್ನು ವಿವರಿಸುತ್ತ ಅರ್ಥೈಸುತ್ತಾರೆ. ಇವೆಲ್ಲವೂ ಕಾಲದಿಂದ ಕಾಲಕ್ಕೆ ಆಂತರಿಕ ತುರ್ತುಪರಿಸ್ಥಿತಿಯ ಅರ್ಥದ ವಿಸ್ತರಿಕೆ ಹಾಗೂ ಗ್ರಹಿಕೆಗಳಲ್ಲಿ ಉಂಟಾದ ಬದಲಾವಣೆಗಳನ್ನು ಸ್ಥೂಲವಾಗಿ ಸೂಚಿಸುತ್ತದೆ. ತುರ್ತುಪರಿಸ್ಥಿತಿಯ ಅರ್ಥ ವಿಶ್ಲೇಷಣೆ ಸಮಕಾಲೀನ ಹಲವಾರು ಸಮಸ್ಯೆ, ಪ್ರಶ್ನೆ, ಗ್ರಹಿಕೆಗಳ ಅನಾವರಣ ಮಾಡುವುದು. ಇವುಗಳೊಡನೆ ಅನೇಕ ವಲಯಗಳಲ್ಲಿ ವ್ಯಾಪಕವಾಗಿ ಚರ್ಚೆಗೊಳಗಾಗುತ್ತಿದ್ದ ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯ ಕುರಿತ ಚಿಂತನೆಗಳು ತುರ್ತುಪರಿಸ್ಥಿತಿಯ ಸ್ವರೂಪದ ಹಲವು ಮುಖಗಳನ್ನು ತೆರೆದಿಡುತ್ತದೆ.

### ೧.೧.೨. ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯ

ತುರ್ತುಪರಿಸ್ಥಿತಿಯ ಕಾಲಘಟ್ಟ ಪ್ರಜಾಪ್ರಭುತ್ವದೊಡನೆ ನಡೆದ ಚೆಲ್ಲಾಟ ಅಥವಾ ರಾಜಕೀಯ ಅನ್ಯಾಯ[೫] ಎಂಬುದು ಹಲವು ವಿದ್ವಾಂಸರು, ರಾಜಕಾರಣಿಗಳ ಅಭಿಮತವಾಗಿದೆ. ಪ್ರಜಾಪ್ರಭುತ್ವ ಕುರಿತಂತೆ ತುರ್ತುಪರಿಸ್ಥಿತಿ ಪೂರ್ವ ಹಾಗೂ ತುರ್ತುಪರಿಸ್ಥಿತಿಯಲ್ಲಿ ನಡೆದ ಚರ್ಚೆಗಳ ಅವಲೋಕನದ ಅಗತ್ಯವಿದೆ. ಇದು ಪ್ರತಿಭಟನೆಯ ನೆಲೆಗಳು ಹಾಗೂ ಉದ್ದೇಶಗಳ ಸ್ವರೂಪದ ಮೇಲೆ ಬೆಳಕು ಚೆಲ್ಲುವುದು.

> ಸಮಾಜವಾದದ ಸಂತೆಗದ್ದಲದಲ್ಲಿ ಇಷ್ಟು ವರ್ಷಗಳ ಕಾಲ ಹೂತು ಹೋಗಿದ್ದ ವ್ಯಕ್ತಿ ಸ್ವಾತಂತ್ರ್ಯ, ಮೂಲಭೂತ ಹಕ್ಕುಗಳು, ಪ್ರಜಾಪ್ರಭುತ್ವಮಾರ್ಗ ಮುಂತಾದ ಮಾತುಗಳು ಈಗ ಮತ್ತೆ ಕೇಳಿ ಬರುತ್ತಿರುವುದು ಕಾಂಗ್ರೆಸ್ ಪಕ್ಷದ ಬಿರುಕಿನಿಂದ ಉಂಟಾದ ಶುಭದ ಒಂದು ಲಕ್ಷಣ. ಸಮಾಜವಾದದ ಬಗ್ಗೆ, ಪ್ರಜಾಪ್ರಭುತ್ವದ ಬಗ್ಗೆ ಮೂಲಭೂತವಾಗಿ ಯೋಚಿಸುವ ಮತ್ತೊಂದು ಅವಕಾಶ ಈಗ ದೊರಕಿದೆ. ಈ ಅವಕಾಶವನ್ನು ನಮ್ಮಲ್ಲಿರುವ ಬುದ್ಧಿವಂತರೂ ವಿದ್ಯಾವಂತರೂ ದೇಶಪ್ರೇಮಿಗಳೂ ಯಾವ ರೀತಿ ಉಪಯೋಗಿಸಿಕೊಳ್ಳಲಿದ್ದಾರೆ ಎಂಬುದರ ಮೇಲೆಯೆ ಈ ದೇಶದ ಭವಿಷ್ಯ ಅವಲಂಬಿಸಿದೆ ... ಪ್ರಜಾತಂತ್ರದ ಜೀವಾಳ ಯಾವುದು ಎಂದು ಯೋಚಿಸುವಾಗ ಅದು ಭಿನ್ನಮತ, ಅನ್ಯಮತ, ಅಭಿಪ್ರಾಯ ಭೇದಗಳನ್ನು ಸಹಿಸುವುದು ಮಾತ್ರವಲ್ಲ ಗೌರವಿಸಲೂ ಸಮರ್ಥವಾದ ಒಂದು ವಿಶಿಷ್ಟ ಮನಃಸಂಸ್ಕಾರ(ಅಡಿಗ ೨೦೦೪: ೨೯೩).

ಹಾಗೂ

> ಭಾರತೀಯ ಜೈಲುಗಳ ಸ್ಥಿತಿ ಮತ್ತು ರಾಜಕೀಯ ಖೈದಿಗಳ ಗತಿ ಕುರಿತ ಬೃಹತ್ ಕಳಕಳಿಯೆ ಈಗ ದೊಡ್ಡ ಪ್ರಶ್ನೆ. ಈಗಲೂ ಭಾರತೀಯ ಬುದ್ಧಿಜೀವಿಗಳಲ್ಲಿ, ಅದರಲ್ಲಿಯೂ ಮಹಾರಾಷ್ಟ್ರದಲ್ಲಿರುವ ಬುದ್ಧಿಜೀವಿಗಳಿಂದ ಈ ಸ್ಥಿತಿಗಳ ಬಗ್ಗೆ ಯಾವ ಪ್ರಕಟಿತ ಧ್ವನಿ ಕಂಡುಬಂದಿಲ್ಲ ... ಸಾವಿರಾರು ರಾಜಕೀಯ ಖೈದಿಗಳು ಯಾವುದೆ ವಿಚಾರಣೆ ಇಲ್ಲದೆ ಸೆರೆಯಲ್ಲಿರುವಾಗ ಮತ್ತು ಪಶ್ಚಿಮ ಬಂಗಾಳ, ಆಂಧ್ರ, ಬಿಹಾರ, ಕೇರಳ ಮೊದಲಾದ ರಾಜ್ಯಗಳಲ್ಲಿ ಸೆರೆಮನೆಯಲ್ಲಿ ಚಿತ್ರಹಿಂಸೆ ಕೊಡುತ್ತಿರುವುದರ ವಿರುದ್ಧ ಧ್ವನಿ ಎದ್ದಿರುವ ಕುರಿತು ಫ್ರಂಟಿಯರ್, ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಇಲ್ಲಸ್ಟ್ರೇಟೆಡ್ ವೀಕ್ಲಿ, ದಿ ಅಮೆನೆಸ್ಟಿ ಸೆಂಟರ್ ನ್ಯಾಷನಲ್ ಇತ್ಯಾದಿಗಳಲ್ಲಿ ಪ್ರಕಟವಾಗಿರುವ ವಾಸ್ತವ ಸಂಗತಿಯನ್ನು ಕಂಡ ನಂತರವು(ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ ೧೯೭೫: ೪೨).

ತುರ್ತುಪರಿಸ್ಥಿತಿ ಪೂರ್ವದಲ್ಲಿ ಹಲವು ಪ್ರದೇಶ ಮತ್ತು ವರ್ಗಗಳಲ್ಲಿ ಕಂಡುಬಂದ ಪ್ರಜಾಪ್ರಭುತ್ವ ಕುರಿತ ಕೆಲವು ಚಿಂತನೆಗಳಾಗಿವೆ. ಮೊದಲನೆಯ ಉಲ್ಲೇಖ ೧೯೭೦ರ ದಶಕದ ಆರಂಭದ ಚಿಂತನೆಯ ಆಯಾಮವೊಂದನ್ನು ಮುಂದಿಡುವುದು. ಪಕ್ಷ ರಾಜಕಾರಣದ ನೆಲೆಯಲ್ಲಿ ಆಡಳಿತಶಾಹಿಯ ಸೈದ್ಧಾಂತಿಕ ನಿಲುವುಗಳ ಕುರಿತ ಅಭಿಮತವಿದು. ಸ್ವಾತಂತ್ರ್ಯ ನಂತರದ ಆಡಳಿತ ವ್ಯವಸ್ಥೆಯಲ್ಲಿ ಪ್ರಜಾಪ್ರಭುತ್ವ ಮತ್ತು ಸಮಾಜವಾದಿ ಚಿಂತನೆಗಳ ಸಮ್ಮಿಶ್ರ ಮಾದರಿಯನ್ನು ವಿರೋಧಿಸುತ್ತಿರುವ ನಿಲುವು. ಎರಡನೆಯ ಉಲ್ಲೇಖ ನೇರವಾಗಿ ಪ್ರಜಾಪ್ರಭುತ್ವವನ್ನು ಕುರಿತು ಚರ್ಚಿಸುತ್ತಿಲ್ಲವಾದರೂ, ಹಕ್ಕು ಮತ್ತು ಸ್ವಾತಂತ್ರ್ಯ ಇದರ ಒಳದನಿ ಆಗಿದೆ. ಇದರೊಡನೆ ಈ ಸಂದರ್ಭದ ರಾಜಕೀಯ ಬೆಳವಣಿಗೆಗಳು ಹಾಗೂ ಪ್ರತಿಕ್ರಿಯೆಗಳಲ್ಲಿ ಕಂಡುಬಂದ ಭಿನ್ನತೆ ಗಮನ ಸೆಳೆಯುವುದು. ವೈ ಎಮರ್ಜೆನ್ಸಿ(೧೯೭೫) ಎಂಬ ಕಿರುಹೊತ್ತಿಗೆಯಲ್ಲಿ ಸರ್ಕಾರ '೧೯೭೪ರ ನಂತರ ಜೆ.ಪಿ.ಯವರ ರಾಜಕೀಯ ವಿಚಾರಧಾರೆ ಮತ್ತು ಸಮಾಜಕ್ಕೆ ನೀಡುತ್ತಿರುವ ಬದಲಾವಣೆಯ ಕರೆ ಪ್ರಜಾಪ್ರಭುತ್ವ ವ್ಯವಸ್ಥೆಗೆ ಮಾರಕವಾಗಿತ್ತು' ಎಂಬ ಧೋರಣೆ ವ್ಯಕ್ತ ಪಡಿಸುವುದು. ತುರ್ತುಪರಿಸ್ಥಿತಿ ಕಾಲದ ಪ್ರತಿಭಟನೆಗಳು ಮತ್ತು ಚಿಂತನೆಗಳ ಕುರಿತು ಆಡಳಿತಶಾಹಿ ತಳೆದ ನಿಲುವಾಗಿದ್ದು, ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಯ ರೂಪವು ಪಡೆದ ಪ್ರಕ್ರಿಯೆಗಳ ಮೇಲೆ ಪರೋಕ್ಷವಾಗಿ ಬೆಳಕು ಬೀರುವುದು.

ಪ್ರಜಾಪ್ರಭುತ್ವ ಕುರಿತ ಮುಕ್ತ ಚರ್ಚೆಗಳು ತುರ್ತುಪರಿಸ್ಥಿತಿಯ ಕಾಲಘಟ್ಟದಲ್ಲಿ ಹೆಚ್ಚು ಕಂಡು ಬರುವುದಿಲ್ಲ. ಆದರೆ ಪರೋಕ್ಷವಾಗಿ ಪ್ರಜಾಪ್ರಭುತ್ವ ಕುರಿತ ಚಿಂತನೆ, ಅಭಿಮತಗಳು ವಿವಿಧ ಸ್ವರೂಪಗಳಲ್ಲಿ

ವ್ಯಕ್ತವಾಗಿದೆ. ಕೆಲವೊಮ್ಮೆ ಈ ಚರ್ಚೆಗಳು ಪ್ರತಿಭಟನೆ ವ್ಯಕ್ತಪಡಿಸುವ ಮಾರ್ಗವಾಗಿ ರೂಪಾಂತರಗೊಂಡಂತೆ ಕಂಡುಬರುವುದು. ಇದಕ್ಕೆ ಪೂರಕವಾಗಿ ಸಂವಿಧಾನಿಕ ತಿದ್ದುಪಡಿಗಳ ಸಂದರ್ಭಗಳಲ್ಲಿ ನೇರವಾಗಿ ಮತ್ತು ಪರೋಕ್ಷವಾಗಿ ಪ್ರಜಾಪ್ರಭುತ್ವದ ಚರ್ಚೆ ಅಧಿಕವಾಗಿದೆ. ಬಲಪಂಥೀಯ ಪ್ರತಿಭಟನಾಕಾರರಲ್ಲಿ ಪ್ರಜಾಪ್ರಭುತ್ವ ಕುರಿತು ಭಾವನಾತ್ಮಕವಾಗಿ ಉದ್ಘೋಷಗಳ ಬಳಕೆ ಹಾಗೂ ಚರ್ಚೆಗಳನ್ನು ನೋಡಬಹುದು. ಸಮೂಹ ಮಾಧ್ಯಮಗಳಲ್ಲಿ ಹಲವುಸಾರಿ ಪ್ರಜಾಪ್ರಭುತ್ವ ಕುರಿತ ವ್ಯಂಗ್ಯ ಪರೋಕ್ಷವಾಗಿ ಸುಳಿಯುತ್ತಿತ್ತು. ಕವಿತೆ, ಕತೆ, ವ್ಯಂಗ್ಯಚಿತ್ರ ಮೊದಲಾದವುಗಳಲ್ಲಿ ಆಗಾಗ ಸೌಮ್ಯವಾಗಿ ಪ್ರಕಟಗೊಳ್ಳುತ್ತಿದ್ದವು. ಈ ಹಿನ್ನೆಲೆಯಲ್ಲಿ "ಡೆಮಾಕ್ರೆಸಿ ಒನ್ಲಿ ವೇ ಟು ಕ್ಯೂರ್ ನೇಷನ್ಸ್ ಇಲ್ಸ್"(ತ್ರಿಪಾಠಿ ೧೯೭೬ ಡಿಸೆಂಬರ್ ೮) ಎಂಬ ಹೇಳಿಕೆ ಗಮನಾರ್ಹವಾದುದು.

> ಪ್ರಸ್ತುತ ನಮ್ಮ ರಾಜಕಾರಣದಲ್ಲಿನ ಅಪಶ್ರುತಿ ಮತ್ತು ಸಮಕಾಲೀನ ಆರ್ಥಿಕತೆ ನಿರ್ವಹಣೆಯಲ್ಲಿರುವ ಬಿಕ್ಕಟ್ಟನ್ನು, ಆಡಳಿತಶಾಹಿ ಕಾರ್ಯನಿರ್ವಹಣೆ, ನಮ್ಮ ಶೈಕ್ಷಣಿಕ ವ್ಯವಸ್ಥೆ ಮತ್ತು ವಿವಿಧ ರೀತಿಯ ಅನೇಕ ಯೋಜನ ವಲಯಗಳ ಕುರಿತು ವ್ಯವಹರಿಸುತ್ತಿದೆ ... ಇಲ್ಲಿ ಸಂವಿಧಾನಾತ್ಮಕ ಪರ್ಯಾಯ ಮಾದರಿಗಳ ರೂಪರೇಷೆಗಳ ಕೆಲವು ವಿವರಗಳನ್ನು ನೀಡಲಾಗಿದೆ. ಇದರ ವಿಶ್ಲೇಷಣೆ ಕಳೆದ ದಶಕದಲ್ಲಿ ಹಲವು ವಲಯಗಳಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆ ಕಾರ್ಯನಿರ್ವಹಣೆಯು ತೀವ್ರ ಕುಸಿತ ಕಂಡಿದೆ ಎಂಬ ದೃಢ ನಿರ್ಧಾರದ ಮೇಲೆ ಆಧಾರಿತ ಅಥವಾ ವ್ಯವಸ್ಥೆಯಲ್ಲಿರುವ ಅಂತರ್ಗತ ಸಮಸ್ಯೆ ಈಗ ಉಲ್ಬಣಿಸಿರುವುದು ಪ್ರಜಾಪ್ರಭುತ್ವ ಕುಸಿತಕ್ಕೆ ಕಾರಣ ... ಇಂದು ಬಾನಂಚಿನಲ್ಲಿದ್ದಿರುವ ಪ್ರಧಾನ ಮತ್ತು ಹೊಸ ಸವಾಲುಗಳನ್ನು ನಿರ್ವಹಿಸಲು ಶಕ್ತಿಯುತವಾಗಿರಬೇಕು ...ರಾಷ್ಟ್ರದ ಬುನಾದಿ ಕುರಿತು ಮರು ಚಿಂತಿಸಲಿರುವ ಅವಕಾಶವಿದು. ಇದರಲ್ಲಿ ಬುದ್ಧಿಜೀವಿಗಳು ಮತ್ತು ರಾಜಕಾರಣಿಗಳಿಬ್ಬರೂ ತೊಡಗಿಕೊಳ್ಳುವುದು ಅಗತ್ಯ(ಕೊಠಾರಿ ೧೯೭೬: ೧).

ಪರ್ಯಾಯ ಆಡಳಿತ ವ್ಯವಸ್ಥೆ ಕುರಿತ ಸಮಕಾಲೀನ ಚಿಂತನೆಗಳ ಮೇಲೆ ಬೆಳಕು ಹರಿಸುವುದು. ಅಂದಿನ ಸಂದರ್ಭದಲ್ಲಿದ್ದ ಇಂತಹ ವಲಯಗಳೊಡನೆ ಈ ಕೃತಿಯ ಕೃತಿಕಾರ ಗುರುತಿಸಿಕೊಂಡಿದ್ದರು.

> ನಾಡ ತುಂಬಾ ಗೊಂದಲವೇ ಗೊಂದಲ
> ಹಗಲಿರುಳೂ ದುಡಿದು ಪಾಪ ದಣಿಯಿತು ಪೋಲೀಸುದಲ
> ಪುರೋಹಿತರೂದಿದ್ದೇ ಶಂಖ ಉಗುಳಿದ್ದೇ ಮಂತ್ರ
> ಸಾರಿದ್ದೇ ಶಾಸನ ಕೂತಿದ್ದೇ ಸಿಂಹಾಸನ
> ಗಂಟಲೆತ್ತಿದರೆ ಅದನಲ್ಲೇ ಅಮುಕಿ ಉಗಿಸಿದರು.
> ಡೋಂಬುಡೆಮಾಕ್ರಸಿ ಪಂಚಾಮೃತ ದೇವಿಪ್ರಸಾದ
> ...
> ನೈಜಡೆಮಾಕ್ರಸಿಯ ಆರೋಗ್ಯ ಪಾಲನೆಗಾಗಿ.
> ದರಬಾರು ದೇಗುಲದಲ್ಲಿ ದಿನವೂ ಡೆಮಾಕ್ರಸಿಯ ಪೂಜೆ
> ...
> ಅಲ್ಲಿಗೆ ಮುಗಿಯಿತು ಈ ಡೆಮಾಕ್ರಸಿಯ ಕಥೆ(ನಾಡಕರ್ಣಿ ೧೯೭೭: ೫೯-೬೧).

ಪ್ರಜಾಪ್ರಭುತ್ವ ವ್ಯವಸ್ಥೆ ಕಂಡುಬಂದ ಹಾಗೂ ಕಾಣಬಯಸಿದ್ದ ರೀತಿಯ ನಡುವಣ ವ್ಯತ್ಯಾಸ ವ್ಯಂಗ್ಯವಾಗಿ ಮೂಡಿಬಂದಿದೆ. ಇದಕ್ಕೆ ಪೂರಕವಾಗಿ ಪ್ರಕಟಗೊಂಡ ಕೆಲವು ವ್ಯಂಗ್ಯಚಿತ್ರಗಳನ್ನು ಕೆಳಗೆ ನೀಡಲಾಗಿದೆ.



(ಚಿತ್ರ-೧)



(ಚಿತ್ರ-೧ಎ)



(ಚಿತ್ರ-೧ಬಿ)

ಅಮಿಯಾ ರಾವ್.ಬಿ.ಜಿ(ಸಂ).. **ದಿ ಪ್ರೆಸ್ ಷಿ ಕುಡ್ ನಾಟ್ ವ್ಹಿಪ್: ಎಮರ್ಜೆನ್ಸಿ ಇನ್ ಇಂಡಿಯಾ ಆಸ್ ರಿಪೋರ್ಟೆಡ್ ಬೈ ಫಾರಿನ್ ಪ್ರೆಸ್**, ಪಾಪುಲರ್ ಪ್ರಕಾಶನ, ಬಾಂಬೆ, ಪುಟ -೫೯. ಈ ಕೃತಿಯಲ್ಲಿ ಪ್ರಕಟವಾಗಿರುವ ವಿದೇಶಿ ವ್ಯಂಗ್ಯಚಿತ್ರ, ಎರಡನೆಯದು. ಮೈಕಲ್ ಹೆಂಡರ್‌ಸನ್.. **ಎನ್ ಎಕ್ಸ್‌ಪೆರಿಮೆಂಟ್ ವಿತ್ ಅನ್‌ಟ್ರುತ್**, ದಿ ಮ್ಯಾಕ್ ಮಿಲನ್ ಕಂಪೆನಿ ಆಫ್ ಇಂಡಿಯಾ. ಇಂಡಿಯಾ. ಪುಟ-೨೨೮. ಶ್ರೀಲಂಕಾದ ಹನಿ ಪತ್ರಿಕೆಯಲ್ಲಿ ಪ್ರಕಟವಾಗಿರುವ ವ್ಯಂಗ್ಯಚಿತ್ರ ಮರುಮುದ್ರಣಗೊಂಡಿದೆ. ಮೂರನೆಯದು, **ಸುಧಾ**: ೧೯೭೬ ಡಿಸೆಂಬರ್ ೫ರಂದು ವಾರದಿಂದ ವಾರಕ್ಕೆ ಅಂಕಣದಲ್ಲಿನ ವ್ಯಂಗ್ಯಚಿತ್ರ. **ವ್ಯಂಗ್ಯಚಿತ್ರಕಾರ**: ಬಿ.ವಿ.ರಾಮಮೂರ್ತಿ. ಚಿತ್ರ ಸಂಖ್ಯೆ: ೧.೧

ಇವುಗಳಲ್ಲಿ ಆರಂಭಿಕ(ಎರಡು) ವ್ಯಂಗ್ಯಚಿತ್ರಗಳು ವಿದೇಶಿ ಪತ್ರಿಕೆಗಳಲ್ಲಿ ಪ್ರಕಟವಾದವು. ಚಿತ್ರ-೧ರಲ್ಲಿ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಭಾರತದ ಪ್ರಜಾಪ್ರಭುತ್ವ ಕಂಡುಬಂದ ಬಿಂಬ ಪ್ರತಿಬಿಂಬಿತವಾಗಿದೆ. ಪ್ರಧಾನಿ ತರಗತಿಯಲ್ಲಿ ಮುಳ್ಳಿನ ಕೋಲನ್ನು ಹಿಡಿದು ಭಾರತ ಪ್ರಪಂಚದ ಅತಿದೊಡ್ಡ ಪ್ರಜಾಪ್ರಭುತ್ವವೆಂದು ಬೋಧಿಸುತ್ತಿರುವಂತಿದೆ. ಚಿತ್ರ-೧ಎರಲ್ಲಿ ಶಾಸಕರಿಬ್ಬರು ಪಾಶ್ಚಾತ್ಯ ರಾಷ್ಟ್ರಗಳಿಗೆ ಪ್ರಜಾತಂತ್ರ ಕುರಿತು ಉಪನ್ಯಾಸ ನೀಡಲು ಸಾಧ್ಯವಾಗುತ್ತಿಲ್ಲ ಎಂದು ಬೇಸರ ವ್ಯಕ್ತಪಡಿಸುತ್ತಿರುವುದು ಕಂಡುಬರುವುದು. ಚಿತ್ರ-೧ಬಿರಲ್ಲಿ ಪ್ರಜಾಪ್ರಭುತ್ವ ವಿರೋಧಿಗಳ ಸಮಾಧಿಯ ಮೇಲೆ ಹುಳಹುಪ್ಪಟೆಗಳು ಕೂರದಂತೆ ಕೋಲಿನಿಂದ ಹೊಡೆಯುತ್ತಿರುವುದನ್ನು ನೋಡಬಹುದು. ತುರ್ತುಪರಿಸ್ಥಿತಿ ಜಾರಿಯು ಪ್ರಜಾಪ್ರಭುತ್ವದ ವಿರೋಧಿ ಎಂಬ ಭಾವವಾಗಿದ್ದು, ಈ ನೆಲೆಯಲ್ಲೇ ಹುಟ್ಟಿದ ಅಣಕ ಹಾಗೂ ಪ್ರತಿಭಟನೆಯ ವಿವಿಧ ಸ್ವರೂಪಗಳಿವು. ಪ್ರಜಾಪ್ರಭುತ್ವದ ಹೆಸರಿನಲ್ಲಿ ನಡೆಯುವ ರಾಜಕಾರಣ ಅಧ್ಯಯನದ ಆಸಕ್ತಿಯಾಗಿದ್ದು, ತುರ್ತುಪರಿಸ್ಥಿತಿ ಕಾಲಘಟ್ಟ ಪ್ರಜಾಪ್ರಭುತ್ವ ವ್ಯವಸ್ಥೆಯ ಮೇಲೆ ಬೀರಿದ ಪರಿಣಾಮಗಳನ್ನು ಕರ್ನಾಟಕದ ರಾಜಕಾರಣದ ಚೌಕಟ್ಟಿನಲ್ಲಿ ಚರ್ಚಿಸುವುದು ಮಹಾಪ್ರಬಂಧದ ಮುಖ್ಯ ಉದ್ದೇಶ.

*** *** ***

ಪ್ರಜಾಪ್ರಭುತ್ವದ ಕೇಂದ್ರ ಆಶಯ 'ಸಮಾನತೆ ಮತ್ತು ಸ್ವಾತಂತ್ರ್ಯ'ವಾಗಿರುವುದು. ಸಮಾನತೆಯನ್ನು ಎಲ್ಲರಿಗೂ ಇರುವ ಸಮಾನ ಅಥವಾ ಮೂಲಭೂತ ಹಕ್ಕುಗಳ' ರೂಪದಲ್ಲಿ ಸಾಮಾನ್ಯವಾಗಿ ಚರ್ಚಿಸಲಾಗುತ್ತದೆ. "ಮೂಲಭೂತ ಹಕ್ಕುಗಳು ಪ್ರಜಾಪ್ರಭುತ್ವೀಯ ಸಮಾಜಕ್ಕೆ ಅಗತ್ಯವಿರುವ ಕೆಲವು ಸೌಲಭ್ಯಗಳನ್ನು ದೃಢೀಕರಿಸುತ್ತದೆ. ಹಾಗಾಗಿ ಇವು ಪ್ರಜಾಪ್ರಭುತ್ವದಲ್ಲಿ ಮೈಲುಗಲ್ಲು ಆಗಿದೆ. ಭಾರತೀಯ ನಾಗರಿಕರ ಗೌರವ ಮತ್ತು ಪ್ರತಿಷ್ಠೆಯನ್ನು ರಕ್ಷಿಸುತ್ತದೆ" ಎಂದು ಡಿ.ಡಿ.ಬಸು ಅವರು ಅಭಿಪ್ರಾಯಪಡುವರು. ವ್ಯಕ್ತಿ ಸ್ವಾತಂತ್ರ್ಯ ಮತ್ತು ಸಮಾಜದ ನಡುವಿನ ಸಮತೋಲನದ ನಿಯಂತ್ರಣಕ್ಕಾಗಿ, ಸಮಂಜಸವಾದ ಕಾನೂನಿನ ಮೂಲಕ ಸ್ವಾತಂತ್ರ್ಯವನ್ನು ಮಿತಿಗೊಳಿಸಲು ಸಂವಿಧಾನದಲ್ಲಿ ಅವಕಾಶವಿದೆ. ಜೊತೆಗೆ ಎಲ್ಲ ಹಕ್ಕುಗಳು ಮಿತಿಗಳನ್ನು ಹೊಂದಿದೆ. ಸ್ವಾತಂತ್ರ್ಯದ ಗ್ರಹಿಕೆಗಳು ಸಹ ಕಾಲದಿಂದ ಕಾಲಕ್ಕೆ ವರ್ಗದಿಂದ ವರ್ಗಕ್ಕೆ ಭಿನ್ನವಾಗಿದೆ. ಈ ದಿಕ್ಕಿನಲ್ಲಿ ೧೯೭೦ರ ದಶಕದ ಆರಂಭದಿಂದ ತುರ್ತುಪರಿಸ್ಥಿತಿ ಕೊನೆಗೊಳ್ಳುವವರೆಗೂ ಕಂಡುಬಂದ ಸ್ವಾತಂತ್ರ್ಯ ಕುರಿತ ಚರ್ಚೆಗಳನ್ನು ಅವಲೋಕಿಸಲು ಪ್ರಯತ್ನಿಸಿದೆ.

ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವಗಳೆರಡು ಪರಸ್ಪರ ಒಂದನ್ನೊಂದು ಬೇರ್ಪಡಿಸಲಾರದಂತಹ ಚಿಂತನೆಗಳು. ಪ್ರಜಾಪ್ರಭುತ್ವದಂತೆ ಸ್ವಾತಂತ್ರ್ಯ ಸಹ ಹೊಸ ಮೌಲ್ಯ ಮತ್ತು ಪ್ರಜಾಪ್ರಭುತ್ವದ ಮೂಲಪ್ರೇರಕ ಎಂಬ ಅಭಿಪ್ರಾಯವನ್ನು ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಯ ಹಲವು ವಲಯಗಳಲ್ಲಿ ಕಾಣಬಹುದು.

> ಸ್ವಾತಂತ್ರ್ಯದ ಈ ಹೊಸ ಅರ್ಥವನ್ನು ರಕ್ತಗತ ಮಾಡಿಕೊಳ್ಳದೆ ಇರುವುದರಿಂದಲೇ ನಮ್ಮಲ್ಲಿ ಪ್ರಜಾಪ್ರಭುತ್ವ ಸಫಲವಾಗದೆ ದೇಶ ಅನಾಯಕತ್ವದ ಕಡೆ ಜಾರುತ್ತಿದೆ(ಅಡಿಗ ೨೦೦೪: ೩೨)

ಮೊದಲಾದ ಚಿಂತನೆಗಳು ಸ್ವಾತಂತ್ರ್ಯೋತ್ತರದಿಂದಲೂ ಸಮಾಜದ ಕೆಲವು ವರ್ಗಗಳಲ್ಲಿದ್ದವು. ಇದಕ್ಕೆ ಪೂರಕವಾಗಿ ತುರ್ತುಪರಿಸ್ಥಿತಿ ಕಾಲದಲ್ಲಿ ರಚಿತವಾದ ಸ್ವಾತಂತ್ರ್ಯ ಕುರಿತ ಕವನ ಹೀಗಿದೆ.

> ಇಲ್ಲದ್ದನ್ನು ಇರುವಂತೆ ಭ್ರಮಿಸಿ
> ಸ್ವಾತಂತ್ರ್ಯೋತ್ಸವವನ್ನು ಆಚರಿಸುತ್ತಿದ್ದೇವೆ.
> ಸ್ವಾತಂತ್ರ್ಯದ ಅರ್ಥವನ್ನು ಹುಡುಕುತ್ತಿದ್ದೇವೆ.
> ಸತ್ತ ಮಹಾತ್ಮನನ್ನು ನೆನೆಯುತ್ತಿದ್ದೇವೆ
> ಬಿತ್ತಿದ ಬೆಳೆ ನಾಶವಾದುದಕ್ಕೆ ಮರಗುತ್ತಿದ್ದೇವೆ(ಲಿಂಗಯ್ಯ ೧೯೭೮: ೪೩-೪೪).

ಸ್ವಾತಂತ್ರ್ಯೋತ್ಸವದ ಹೆಸರಿನ ಅನೇಕ ಕವನಗಳಲ್ಲಿ ಇಂಥ ಭಾವ ಮತ್ತು ಚಿಂತನೆಗಳು ಹಾಸುಹೊಕ್ಕಿವೆ. ಸ್ವಾತಂತ್ರ್ಯದ ಹಸಿವು, ಸ್ವಾತಂತ್ರ್ಯ ಹರಣ, ಸೆನ್ಸಾರ್‌ಷಿಪ್, ಸರ್ವಾಧಿಕಾರ, ನಿಜ ಸ್ವಾತಂತ್ರ್ಯ, ಗಾಂಧಿ, ಸ್ವಾತಂತ್ರ್ಯ ಪ್ರಿಯ ಮತ್ತಿತರ ಪದಗಳು ಹೆಚ್ಚೆಚ್ಚು ಬಳಕೆಯಾಗಿದೆ. ಜೊತೆಗೆ ಸ್ವಾತಂತ್ರ್ಯವನ್ನು ದೈವತ್ವದ ನೆಲೆಯಲ್ಲಿ ನೋಡುವ, ನೈತಿಕತೆ ಮತ್ತು ಅಂತರಾತ್ಮ ಮೊದಲಾದವುಗಳೊಡನೆ ಸಮೀಕರಿಸುವುದು ನಡೆದಿದೆ. ಸಮಾಜದಲ್ಲಿ ತುರ್ತುಪರಿಸ್ಥಿತಿ ಕುರಿತು ಜಾಗೃತಿ ಮೂಡಿಸುವುದು ದೇಶ ಪ್ರೇಮಿಗಳು ಹಾಗೂ ವಿದ್ಯಾವಂತರ

ಕರ್ತವ್ಯವಾಗಿದ್ದು, ರಾಷ್ಟ್ರದ ಬಹುತೇಕರು ಈ ದಿಸೆಯಲ್ಲಿ ಚಿಂತಿಸುತ್ತಿಲ್ಲ ಎಂಬ ವ್ಯಥೆಯಿದೆ. ಸ್ವಾತಂತ್ರ್ಯ ಮನೋಭಾವ ನವ ಪರಿಕಲ್ಪನೆಯಾಗಿದ್ದು, ಅಳವಡಿಸಿಕೊಳ್ಳುವಲ್ಲಿ ವಿಫಲರಾಗಿದ್ದೇವೆಂಬ ಆಲೋಚನೆಗಳು ಮೇಲಿಂದ ಮೇಲೆ ಕಂಡುಬರುವುದು. ಇವೆಲ್ಲ ಬಹುತೇಕ ಅಕ್ಷರಸ್ಥ ವರ್ಗದ ಚಿಂತನೆಗಳಾಗಿವೆ. ಉಳಿದ ವರ್ಗ, ವಲಯಗಳ ಸ್ವಾತಂತ್ರ್ಯದ ಪರಿಕಲ್ಪನೆ ಮತ್ತು ತುರ್ತುಪರಿಸ್ಥಿತಿ ಕಾಲಘಟ್ಟದ ನಡುವಿನ ಸಂವಾದವು ಸಮಕಾಲೀನ ಬರವಣಿಗೆಗಳಲ್ಲಿ ಕಂಡುಬರುವುದಿಲ್ಲ. ಸಮಕಾಲೀನವಾಗಿ ಅಸ್ತಿತ್ವದಲ್ಲಿದ್ದ ಇತರ ಹೋರಾಟ, ಚಳವಳಿಗಳನ್ನು ಒಟ್ಟಾಗಿ ಅವಲೋಕಿಸುವ ಮೂಲಕ ಉಳಿದ ವರ್ಗದ ಆಶಯವನ್ನು ಅರಿಯುವುದು ಸಾಧ್ಯವಾಗುವುದು. ಈ ಮಹಾಪ್ರಬಂಧದಲ್ಲಿ ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯದ ಅಗತ್ಯ, ಮತ್ತದರ ಗ್ರಹಿಕೆಗಳ ನೆಲೆಯಲ್ಲಿ ತುರ್ತುಪರಿಸ್ಥಿತಿಯ ಪ್ರತಿಭಟನೆಗಳು ಹಾಗೂ ಅದರ ಪ್ರಭಾವಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ.

### ೧.೧.೩. ತುರ್ತುಪರಿಸ್ಥಿತಿ: ಆರಂಭ ಮತ್ತು ನಂತರ

ತುರ್ತುಪರಿಸ್ಥಿತಿ ಕಾಲಘಟ್ಟದ ಪ್ರತಿಭಟನೆಗಳ ಸ್ವರೂಪ, ಅದರ ಪ್ರಭಾವ ಮತ್ತು ಪರಿಣಾಮಗಳನ್ನು ಗ್ರಹಿಸಲು ೧೯೭೦ರ ದಶಕದಲ್ಲಿ ಕಂಡುಬಂದ ಪ್ರಮುಖ ರಾಜಕೀಯ, ಆರ್ಥಿಕ ಹಾಗೂ ಸಾಮಾಜಿಕ ಸ್ಥಿತ್ಯಂತರಗಳ ಅವಲೋಕನ ಅವಶ್ಯಕವಾಗಿದೆ. ಆ ಸಂದರ್ಭದ ಜಾಗತಿಕ ವಲಯದ ರಾಜಕಾರಣ, ಆರ್ಥಿಕತೆಯ ಪ್ರಭಾವ ರಾಷ್ಟ್ರ ರಾಜಕಾರಣದಲ್ಲಿ ಪಡೆದುಕೊಂಡ ರೂಪಗಳನ್ನು ಮೊದಲಿಗೆ ಪರಿಶೀಲಿಸಲಾಗಿದೆ. ನಂತರದಲ್ಲಿ ೧೯೭೦ ರಿಂದ ೧೯೭೫ರವರೆಗೆ ಕಂಡುಬಂದ ಪ್ರತಿಭಟನೆಗಳು ಜೆ.ಪಿ. ಚಳವಳಿಯಲ್ಲಿ ವಿಲೀನಗೊಂಡ ಪ್ರಕ್ರಿಯೆ, ಅದರ ವಿವಿಧ ರೂಪವನ್ನು ಗಮನಿಸಲಾಗಿದೆ. ಅಲಹಾಬಾದ್ ಉಚ್ಚನ್ಯಾಯಾಲಯದ ತೀರ್ಪಿನಿಂದಾಗಿ ಪ್ರಕಟಗೊಂಡ ಪ್ರತಿಭಟನೆಗಳು ಹಾಗೂ ಅವುಗಳಿಗೆ ಆಡಳಿತಶಾಹಿ ತೋರಿದ ಪ್ರತಿಕ್ರಿಯೆಗಳನ್ನು ಈ ಭಾಗದಲ್ಲಿ ನೋಡಲು ಪ್ರಯತ್ನಿಸಲಾಗಿದೆ. ಅಂತಿಮವಾಗಿ ತುರ್ತುಪರಿಸ್ಥಿತಿಯ ಪರಿಣಾಮಗಳನ್ನು ೧೯೭೭ ರಿಂದ ೧೯೮೦ರವರೆಗಿನ ರಾಷ್ಟ್ರ ಮತ್ತು ರಾಜ್ಯ ರಾಜಕಾರಣದಲ್ಲಿ ಅವಲೋಕಿಸಲು ಪ್ರಯತ್ನಿಸಲಾಗಿದೆ.

### ೧.೧.೩.೧. ಅಂತರ್ ರಾಷ್ಟ್ರೀಯ ವಿದ್ಯಮಾನಗಳು

ಅಂತರ್ ರಾಷ್ಟ್ರೀಯ ವಲಯದ ವಿದ್ಯಮಾನಗಳು ರಾಷ್ಟ್ರೀಯ ನೆಲೆಯಲ್ಲಿ ಪೂರಕವಾಗಿ ಸಂಬಂಧ ಹೊಂದಿದ್ದು, ಪ್ರಭಾವಿಸುತ್ತಿರುತ್ತವೆ. ೧೯೭೦ರ ದಶಕದ ಅಂತರ್ ರಾಷ್ಟ್ರೀಯ ಒತ್ತಡ, ವಿದ್ಯಮಾನಗಳು ರಾಷ್ಟ್ರ ರಾಜಕಾರಣದಲ್ಲಿ ಬೀರಿದ ಪ್ರಭಾವ, ಅವುಗಳ ನೆಲೆಗಳನ್ನು ಗಮನಿಸುವುದು ಅಗತ್ಯ. ಎರಡನೇ ಮಹಾಯುದ್ಧದ ನಂತರ ಸಿದ್ಧಾಂತಗಳ ಹೆಸರಿನಡಿ ಸ್ವಹಿತ ರಕ್ಷಣೆಗಾಗಿ ಜಗತ್ತು ಅಮೆರಿಕಾ, ಸೋವಿಯತ್ ರಷ್ಯಾ ಮತ್ತು ಅಲಿಪ್ತ ರಾಷ್ಟ್ರಗಳೆಂದು ಮುಖ್ಯವಾಗಿ ಮೂರು ಭಾಗಗಳಾಗಿದ್ದವು. ಪ್ರಜಾಪ್ರಭುತ್ವ ಮತ್ತು ಸಮತಾವಾದದ ಹೆಸರಿನಲ್ಲಿ ನಡೆಯುತ್ತಿದ್ದ ಘರ್ಷಣೆಗಳು ೧೯೭೦ರ ದಶಕದ ಆರಂಭದ ವೇಳೆಗೆ ಶೀತಲ ಸಮರವಾಗಿ ಪರಿವರ್ತನೆಗೊಂಡು ಎರಡು ಬಲಿಷ್ಠ ರಾಷ್ಟ್ರಗಳ ಅಸ್ತ್ರವಾಗಿ ಪರಿಣಮಿಸಿದ್ದು ಅರಿವಾಗುತ್ತಿದ್ದ ಸಮಯ. ೧೯೪೫ರ ನಂತರ ಸ್ವತಂತ್ರ ಹೊಂದಿದ ಬಹಳಷ್ಟು ಆಫ್ರೋ-ಏಷ್ಯನ್ ರಾಷ್ಟ್ರಗಳಲ್ಲಿ ಎರಡು ದಶಕ ಕಳೆಯುವುದರೊಳಗೆ ನಿರಾಶದಾಯಕ ವಾತಾವರಣ ಸೃಷ್ಟಿಯಾಗಿತ್ತು. ಈ ಹೊತ್ತಿಗೆ ಆಫ್ರಿಕಾದ ಹಲವು ಪ್ರಜಾಪ್ರಭುತ್ವವಾದಿ ರಾಷ್ಟ್ರಗಳಲ್ಲಿ ನಿರಂಕುಶ ಆಡಳಿತ ಕಂಡುಬರುತ್ತದೆ. ಅನೇಕ ಮಧ್ಯಪೂರ್ವ ರಾಷ್ಟ್ರಗಳಲ್ಲಿನ ಪ್ರಜಾಪ್ರಭುತ್ವ ವ್ಯವಸ್ಥೆ ಪಾರ್ಶ್ವ ಪ್ರಜಾಪ್ರಭುತ್ವ ರಾಷ್ಟ್ರಗಳಾಗಿ ಬದಲಾದವು. ಹಾಗೆ ಹಲವು ಏಷ್ಯನ್[೭] ರಾಷ್ಟ್ರಗಳಲ್ಲಿಯೂ ನಿರಂಕುಶ ಅಧಿಕಾರದ ಬೆಳವಣಿಗೆ ಕಾಣಬಹುದು. ಪತ್ರಿಕೆಗಳಲ್ಲಿ ಇಂಡೋನೇಷಿಯಾ, ಕೀನ್ಯಾಗಳಲ್ಲಿ ರಾಜಕೀಯ ಖೈದಿಗಳ ಹಿಂಸೆ, ಕಗ್ಗೊಲೆಗಳ ವರದಿ ಆಗಾಗ ಪ್ರಕಟಗೊಳ್ಳುತ್ತಿತ್ತು. ಈ ರಾಷ್ಟ್ರಗಳು ಹಣದುಬ್ಬರದಂಥ ಹಲವು ಆರ್ಥಿಕ ಸಮಸ್ಯೆಗಳನ್ನು ತೀವ್ರವಾಗಿ ಎದುರಿಸುತ್ತಿದ್ದವು. ತೈಲ ಮಾರುಕಟ್ಟೆಯ ಪ್ರಭಾವ ಅನೇಕ ರಾಷ್ಟ್ರಗಳಲ್ಲಿ ಆರ್ಥಿಕ ಅಸಮತೋಲನಕ್ಕೆ ಪೂರಕವಾಗಿ ಕಾರ್ಯನಿರ್ವಹಿಸಿತು. ಇವು ಭಾರತದ ರಾಜಕೀಯ ಹಾಗೂ ಆಡಳಿತಾತ್ಮಕ ಬೆಳವಣಿಗೆಯ ಮೇಲೆ ಪ್ರಭಾವ ಬೀರಿವೆ.

### ೧.೧.೩.೨. ಜೆ.ಪಿ. ಚಳವಳಿ ಮತ್ತು ರಾಜ್ಯ ರಾಜಕಾರಣ

೧೯೭೦ರ ದಶಕದ ರಾಜ್ಯ ಮತ್ತು ರಾಷ್ಟ್ರ ರಾಜಕಾರಣದ ಸ್ವರೂಪ ಒಂದೇ ತೆರನಾಗಿರದೆ, ಅದರ ಪ್ರಭಾವ ರಾಜ್ಯದಿಂದ ರಾಜ್ಯಕ್ಕೆ ಭಿನ್ನವಾಗಿ ಪ್ರಕಟಗೊಂಡಿದೆ. ಪ್ರಾದೇಶಿಕ ವಿಚಾರಗಳು ಮತ್ತು ಆರ್ಥಿಕತೆ ಈ ನಿಟ್ಟಿನಲ್ಲಿ ಪ್ರಮುಖ ಪಾತ್ರ ನಿರ್ವಹಿಸಿದೆ. ಈ ದಶಕದ ರಾಜ್ಯ ರಾಜಕಾರಣವು ಎರಡು ರೀತಿಯಾಗಿ ಕಾಣುವುದು. ಅದು ರಾಷ್ಟ್ರೀಯ ರಾಜಕಾರಣಕ್ಕೆ ಪೂರಕವಾಗಿ ನೆರಳಿನಂತೆ ಹಾಗೂ ರಾಷ್ಟ್ರೀಯ ವಿದ್ಯಮಾನ ಗಳಿಗಿಂತ ಭಿನ್ನವಾಗಿ ರೂಪುಗೊಂಡಿದೆ. ಚುನಾವಣಾ ಫಲಿತಾಂಶಗಳು ಮತ್ತು ಆಡಳಿತ ನೀತಿ ಕೇಂದ್ರ ಸರ್ಕಾರದ ಛಾಯೆಯಂತಿದ್ದರೆ, ರಾಷ್ಟ್ರೀಯ ಮುಖ್ಯಧಾರೆಯಲ್ಲಿ ಕಂಡುಬಂದ ಪ್ರತಿಭಟನೆ, ಚಳವಳಿಗಳಿಗೆ ಪ್ರತಿಕ್ರಿಯಿಸಿದ ರೀತಿ ಭಿನ್ನ ರೂಪದಲ್ಲಿದೆ.

೧೯೭೨ರಲ್ಲಿ ಬಾಂಗ್ಲಾ ವಿಮೋಚನೆಗಾಗಿ ನಡೆದ ಪಾಕಿಸ್ತಾನದೊಂದಿಗಿನ ಯುದ್ಧ ರಾಷ್ಟ್ರದ ಪ್ರಮುಖ ನಿರ್ಣಾಯಕ ಘಟನೆಗಳಲ್ಲೊಂದು. ಇದರೊಂದಿಗೆ ಬಂದ ವಲಸಿಗರ ಸಮಸ್ಯೆ ಮತ್ತು ಯುದ್ಧ ವೆಚ್ಚ ರಾಷ್ಟ್ರದ ಆರ್ಥಿಕತೆಗೆ ಹೊರೆಯಾದವು. ಜೊತೆಗೆ ಬರ, ಪೆಟ್ರೋಲಿಯಂ ಬೆಲೆ ಏರಿಕೆಯಿಂದ ತೀವ್ರ ಹಣದುಬ್ಬರ ಉಂಟಾಯಿತು. ಇವೆಲ್ಲವು ೧೯೭೩ರ ಮಧ್ಯದ ವೇಳೆಗೆ ಕೇಂದ್ರ ಸರ್ಕಾರದ ವಿರುದ್ಧ ಅಸಮಾಧಾನದ ಹೆಚ್ಚಳಕ್ಕೆ ಮುಖ್ಯ ಕಾರಣಗಳಾದವು. ಬಂದ್, ಮುಷ್ಕರ, ಘೇರಾವ್‌ಗಳು ಹೆಚ್ಚುತ್ತ ಸಾಗಿ ಕೊನೆಗದು ಗುಜರಾತ್ ವಿದ್ಯಾರ್ಥಿ ಚಳವಳಿಯ ರೂಪ ಪಡೆಯಿತು. ಮುಂದಿನ ಹಂತದಲ್ಲಿ ರಾಜಕೀಯ ಚಳವಳಿ ಎಂದು ಪ್ರಸಿದ್ಧವಾಯಿತು. ಸರ್ವೋದಯವಾದಿ, ಸಮಾಜವಾದಿಗಳ ಪಾಲ್ಗೊಳ್ಳುವಿಕೆ ಚಳವಳಿಯ ಆರಂಭಿಕ ಹಂತದಲ್ಲಿ ಹೆಚ್ಚಾಗಿದ್ದದ್ದು, ಕ್ರಮೇಣ ಇತರ ವಿರೋಧ ಪಕ್ಷಗಳಾದ ಆರ್.ಎಸ್.ಎಸ್ ಮತ್ತು ಸಹಚರ ಗುಂಪುಗಳು, ಸಂಸ್ಥಾ ಕಾಂಗ್ರೆಸ್, ಸ್ವತಂತ್ರ ಪಕ್ಷ ಮೊದಲಾದವರ ಪಾಲ್ಗೊಳ್ಳುವಿಕೆ ೧೯೭೪ರ ಹೊತ್ತಿಗೆ ಅಧಿಕಗೊಂಡಿತ್ತು. ಈ ಪಕ್ಷಗಳು ಭೂ ಸುಧಾರಣಾ ನೀತಿ, ಸಾಮಾಜಿಕ, ಆರ್ಥಿಕ ಕಾರ್ಯಕ್ರಮಗಳ ಕುರಿತು ತಮ್ಮದೇ ಆದ ನಿಲುವುಗಳನ್ನು ಹೊಂದಿದ್ದವು. ರಾಜ್ಯದಲ್ಲಿ ಈ ಹೋರಾಟಗಳಿಗೆ ಪೂರಕವಾಗಿ ಪ್ರತಿಕ್ರಿಯೆ ಕಂಡುಬಂದರೂ, ವ್ಯಾಪಕತೆ ಪಡೆಯಲಿಲ್ಲ. ಈ ಕಾಲದಲ್ಲಿ ಇದರೊಂದಿಗೆ ಗುರುತಿಸಿಕೊಳ್ಳದ ಅನೇಕ ಹೋರಾಟ, ಚಳವಳಿಗಳ ಅಸ್ತಿತ್ವ ಕಾಣತುದು. ಸಾಮಾಜಿಕ ಸಮಾನತೆ ಸಾಧಿಸಲು ಜಾತಿ ವಿನಾಶ ಹೋರಾಟ, ದಲಿತ ಕ್ರಿಯಾ ಸಮಿತಿ, ದಲಿತ ಸಂಘರ್ಷ ಸಮಿತಿ, ಸಾಹಿತ್ಯಿಕ ವಲಯದಲ್ಲಿ ಬರಹಗಾರರು ಮತ್ತು ಕಲಾವಿದರ ಒಕ್ಕೂಟಗಳು[೮] ಸಕ್ರಿಯವಾಗಿದ್ದ ಸಂಘಟನೆಗಳಾಗಿದ್ದವು. ಈ ಹೋರಾಟಗಳಲ್ಲಿದ್ದ ಬಹುತೇಕರು ಜೆ.ಪಿ. ಚಳವಳಿಯಲ್ಲಿಯೂ ಕಂಡುಬರುವರು.

"ಜೈಪ್ರಕಾಶರ ಚಳವಳಿ ಉದ್ದೇಶದ ವಿರುದ್ಧ ಪ್ರಧಾನಿ ಟೀಕೆ"(ಕನ್ನಡಪ್ರಭ ೧೯೭೪ ಏಪ್ರಿಲ್ ೨); "ಗುಜರಾತ್ ಮಾದರಿ ಜನತಾ ಕ್ರಾಂತಿ ಅಗತ್ಯ-ಡಾಂಗೆ"(ಕನ್ನಡಪ್ರಭ ೧೯೭೪ ಏಪ್ರಿಲ್ ೧೨), "ಪ್ರಜಾಸತ್ತೆಯ ರಕ್ಷಣೆಗಾಗಿ 'ಜನತಂತ್ರ ಸಮಾಜದ ಉದಯ'"(ಕನ್ನಡಪ್ರಭ ೧೯೭೪ ಏಪ್ರಿಲ್ ೧೩) ಮೊದಲಾದ ಪತ್ರಿಕಾ ವರದಿಗಳು, ೧೯೭೪ರಲ್ಲಿ ಜೆ.ಪಿ. ಚಳವಳಿ ಪಡೆದುಕೊಳ್ಳುತ್ತಿದ್ದ ಸ್ವರೂಪ ಹಾಗೂ ಅದಕ್ಕೆ ಸಮಾನಾಂತರವಾಗಿ ಸರ್ಕಾರ, ಸಮಾಜ ಮತ್ತು ರಾಜಕೀಯ ವಲಯಗಳ ಪ್ರತಿಕ್ರಿಯೆಗಳ ಹಲವು ಪದರಗಳನ್ನು ಬಿಡಿಸಿಡುವುದು. ಮೊದಲ ವರದಿಯು ಜೆ.ಪಿ. ಅವರು ಗುಜರಾತ್ ಮತ್ತು ಬಿಹಾರದಲ್ಲಿ ಪೊಲೀಸರು ನಡೆಸಿದ ದೌರ್ಜನ್ಯದ ವಿರುದ್ಧ ಶಾಂತಿಯುತ ಚಳವಳಿ ನಡೆಸುವುದಾಗಿ ನೀಡಿದ ಘೋಷಣೆಗೆ ಸರ್ಕಾರದ ಮುಖ್ಯಸ್ಥರ ಪ್ರತಿಕ್ರಿಯೆಯಾಗಿದೆ. ಎರಡನೆಯದು, ಸಮ್ಮಿಶ್ರ ಸರ್ಕಾರದ ಭಾಗವಾಗಿದ್ದ ಸಿಪಿಐ ಮುಖ್ಯಸ್ಥರು ಗುಜರಾತ್ ಮಾದರಿ ಕ್ರಾಂತಿಯ ಅಗತ್ಯದ ಬಗೆಗಿನ ಅಭಿಮತ. ಕಡೆಯದು ಚಳವಳಿ ತೀವ್ರ ಗೊಳಿಸಲು ನವದೆಹಲಿಯಲ್ಲಿ ನಡೆದ ವಿಚಾರಸಂಕಿರಣದಲ್ಲಿ ಜೆ.ಪಿ. ನೇತೃತ್ವದಲ್ಲಿ ರಚಿತವಾದ ಸಂಸ್ಥೆಯನ್ನು ಕುರಿತಿರುವ ವಿವರ. ಇಂತಹ ಅನೇಕ ಸಮಿತಿ, ಸಂಸ್ಥೆಗಳ ರಚನೆ ಜೆ.ಪಿ. ಚಳವಳಿಯ ಅಂಗವಾಗಿ ರೂಪ ತಳೆದಿತ್ತು. ಜೊತೆಗೆ ಸ್ವತಂತ್ರವಾಗಿ[೯] ಕಾರ್ಯನಿರ್ವಹಿಸಿದ ಹಲವು ಸಂಸ್ಥೆಗಳನ್ನು ಕಾಣಬಹುದು. ಕರ್ನಾಟಕ ನವನಿರ್ಮಾಣ ಕ್ರಾಂತಿ,[೧೦] ನವ ನಿರ್ಮಾಣ ಸಮಿತಿ ಮೊದಲಾದ ಸಂಘಟನೆಗಳು ರಾಜ್ಯದಲ್ಲಿಯೂ ಅಸ್ತಿತ್ವಕ್ಕೆ ಬಂದವು.

> ೧೯೭೪ರಲ್ಲಿ ಭಾರತದಾದ್ಯಂತ ನಡೆಯುತ್ತಿದ್ದ ಚಳವಳಿಗಳು, ಮುಖ್ಯವಾಗಿ ಜೆ.ಪಿ. 'ಸಂಪೂರ್ಣ ಕ್ರಾಂತಿ' ಚಳವಳಿಯ ಕಾವು ಕ್ರಮೇಣ ಕರ್ನಾಟಕಕ್ಕೂ ಪಸರಿಸುತ್ತ ವಿಚಾರವಂತರ, ಸಾಮಾಜಿಕ ಮತ್ತು ರಾಜಕೀಯ ಪಕ್ಷಗಳ ಕೆಲಸಗಾರರ ಕುತೂಹಲವನ್ನು ಕೆರಳಿಸಿ ಆಕರ್ಷಿಸಿತು. ಬೆಂಗಳೂರು, ಮೈಸೂರು, ಶಿವಮೊಗ್ಗೆ, ಹಾಸನ, ಸೊರಬ, ಗುಲ್ಬರ್ಗ ಮೊದಲಾದ ನಗರ ಮತ್ತು ಊರುಗಳಲ್ಲಿ ಸಂಪೂರ್ಣಕ್ರಾಂತಿ ಕುರಿತು ವಿಚಾರ ಗೋಷ್ಠಿ ಮತ್ತು ಸಾರ್ವಜನಿಕ ಸಭೆಗಳು, ಕಾರ್ಯಕರ್ತರ ಸಭೆಗಳು ಬಿಹಾರಿನ ಮಾದರಿಯಲ್ಲಿ ನಡೆಯುತ್ತಿದ್ದಿತು ... ಕರ್ನಾಟಕದಲ್ಲಿ ಸಮಕಾಲೀನ ಕಂಡುಬಂದ ಮತ್ತೊಂದು ಹೋರಾಟಧಾರೆಯಾಗಿ ನವನಿರ್ಮಾಣ ಚಳವಳಿಯನ್ನು ಕಾಣಬಹುದು. ಒಂದೂವರೆ ವರ್ಷ ಕಾಲ ಸತತವಾಗಿ ಕಾರ್ಯನಿರ್ವಹಿಸಿದ ನಂತರ ಕ್ರಮೇಣ ಇದಕ್ಕೆ ಕರ್ನಾಟಕದ ರಾಜಕೀಯ ಪಕ್ಷಗಳು ಸ್ಪಂದಿಸಿದವು. ಅಂದಿನ ಸಂಸ್ಥಾ ಕಾಂಗ್ರೆಸ್, ಜನಸಂಘ ಮುಂತಾದ ಪಕ್ಷಗಳ ಮುಖಂಡರಲ್ಲದೆ ಗಾಂಧಿವಾದಿ ಸರ್ವೋದಯವಾದಿ ಜನರೂ ಚಳವಳಿ ಕಡೆ ಒಲಿದರು. ಜೆ.ಪಿ. ಚಳವಳಿಯು ರಾಜ್ಯದಲ್ಲೂ ರಾಜಕೀಯ ಮುಖಂಡರ ಸೆಳೆಯುವಲ್ಲಿ ಯಶಸ್ವಿಯಾಯಿತು(ದಾಬು ೨೦೦೬: ೩೦೭).

ಜೆ.ಪಿ ಚಳವಳಿ ನಗರ ಕೇಂದ್ರವಾಗಿದ್ದು, ಸಮಾಜದ ಕೆಲವು ವಲಯಗಳಲ್ಲಿ ಮಾತ್ರ ಹೆಚ್ಚು ಪ್ರಭಾವಿತವಾಗಿತ್ತೆಂದು ಸೂಚಿಸುವುದು. ಜೆ.ಪಿ. ಚಳವಳಿ ಪ್ರಭಾವಿತವಾಗಿದ್ದ ಈ ನಗರ ಕೇಂದ್ರಗಳು ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳಲ್ಲಿ ಸಕ್ರಿಯವಾಗಿದ್ದವುಗಳೇ ಆಗಿವೆ.

ಕರ್ನಾಟಕದಲ್ಲಿ ಜೆ.ಪಿ. ಚಳವಳಿಯ ಸ್ವರೂಪ ವ್ಯಕ್ತಗೊಂಡ ಸ್ಥೂಲ ರೂಪವನ್ನು ಕೆಳಗಿನ ಕರಪತ್ರಗಳು ತೆರೆದಿಡುವುವು. ೧೯೭೫ರ ಮೇ ೧೪ ರಿಂದ ೧೮ರವರೆಗೆ ಕರ್ನಾಟಕದ ಮಂಗಳೂರು, ಬೆಳಗಾವಿ, ಹುಬ್ಬಳ್ಳಿ, ಧಾರವಾಡ, ಬೆಂಗಳೂರು, ಮೈಸೂರು ಮೊದಲಾದ ಪ್ರದೇಶಗಳಿಗೆ ಜಯಪ್ರಕಾಶ್ ನಾರಾಯಣರು ಚಳವಳಿಯನ್ನು ವಿಸ್ತರಿಸುವ ಸಲುವಾಗಿ ಪ್ರವಾಸ ಕೈಗೊಂಡಿದ್ದರು. ಈ ಕರಪತ್ರ 'ಉತ್ತರ ಕರ್ನಾಟಕ ವಿದ್ಯಾರ್ಥಿ



ಕರ್ನಾಟಕಕ್ಕೆ ಜೆ.ಪಿ. ಪ್ರವಾಸ ಸಂದರ್ಭದಲ್ಲಿ ಧಾರವಾಡದಲ್ಲಿ ಹಂಚಿದ್ದ ಕರಪತ್ರ, ಕೃಪೆ : ಚಂದ್ರಶೇಖರ ಪಾಟೀಲ. ಚಿತ್ರ ಸಂಖ್ಯೆ: ೧.೨

ಯುವಜನ ಸಭೆಯಲ್ಲಿ ಲೋಕನಾಯಕ ಜಯಪ್ರಕಾಶ ನಾರಾಯಣರ ಬಹಿರಂಗ ಭಾಷಣ' ಎಂಬ ಶೀರ್ಷಿಕೆಯನ್ನು ಹೊಂದಿದೆ. ಜೆ.ಪಿ.ಯವರ ರೇಖಾಚಿತ್ರದ ಪಕ್ಕದಲ್ಲಿ ಈ ಶೀರ್ಷಿಕೆಯಿದ್ದು, ಮೇ ೧೪ರ ಸಂಜೆ ೭ಗಂಟೆಗೆ ಧಾರವಾಡದ ಕಡಪ ಮೈದಾನದಲ್ಲಿ ಸಭೆ ನಡೆಯುವ ಮಾಹಿತಿಯಿದೆ. ಅಂದಿನ ರಾಜಕಾರಣ, ಹೋರಾಟದ ಅನಿವಾರ್ಯತೆ, ಧಾರವಾಡದ ಪ್ರಾಮುಖ್ಯತೆಗಳಿಗೆ ಕರಪತ್ರದಲ್ಲಿ ಒತ್ತುಕೊಡಲಾಗಿದೆ. ಕ್ರಾಂತಿ ಕೇಂದ್ರಕ್ಕೆ ಬರುತ್ತಿರುವ ಕ್ರಾಂತಿ ಪುರುಷ ಜಯಪ್ರಕಾಶರಿಗೆ ಸ್ವಾಗತ ಕೋರಲಾಗಿದೆ. ಜೆ.ಪಿ. ಚಳವಳಿಯನ್ನು ಗಾಂಧೀಜಿ ಸ್ವಾತಂತ್ರ್ಯ ಆಂದೋಲನದ ಎರಡನೆ ಹಂತ[೧೧] ಎಂದು ಕರೆದಿರುವುದನ್ನು ಗಮನಿಸಬಹುದು. 'ನಾಳೆ ಬಪ್ಪುದು ನಮಗಿಂದೇ ಬರಲಿ; ಇಂದು ಬಪ್ಪುದು ನಮಗೀಗಲೇ ಬರಲಿ' ಎಂದು ಕ್ರಾಂತಿಗೆ ಆಹ್ವಾನ ನೀಡಿರುವುದು ಕಂಡುಬರುವುದು. ವ್ಯವಸ್ಥೆಯಲ್ಲಿ ಉಂಟಾಗಬಯಸಿದ್ದ ಬದಲಾವಣೆಗಳ ಕಡೆಗಿದು ಗಮನ ಸೆಳೆಯುವುದು. ಕರಪತ್ರದ ಕೊನೆಯಲ್ಲಿ ಜೆ.ಪಿ.ಸ್ವಾಗತ ಸಮಿತಿ, ಧಾರವಾಡ ಎಂದಿದೆ. ಈ ಸಂಘಟನೆ ಹಾಗೂ ಇದರ ಚಟುವಟಿಕೆಗಳು ಬಿಹಾರದ ಮಾದರಿಯಲ್ಲಿರುವುದು. ಆ ಸಂದರ್ಭದಲ್ಲಿದ್ದ ಪ್ರತಿಭಟನೆ ಹೊಂದಿದ್ದ ನೆಲೆಗಳು ಮತ್ತು 'ಕ್ರಾಂತಿ'ಯ ಸ್ವರೂಪ ಕುರಿತ ಗ್ರಹಿಕೆಗಳ ಕೆಲವು ಮುಖಗಳಿವು.

### ೧.೧.೩.೩. ಅಲಹಾಬಾದ್ ಉಚ್ಚ ನ್ಯಾಯಾಲಯದ ತೀರ್ಪು

ಗುಜರಾತ್ ಚುನಾವಣಾ ಫಲಿತಾಂಶ ಮತ್ತು ಅಲಹಾಬಾದ್ ನ್ಯಾಯಾಲಯದ ತೀರ್ಪು ಉಂಟುಮಾಡಿದ ರಾಜಕೀಯ ಸಂಚಲನವು ತುರ್ತುಪರಿಸ್ಥಿತಿ ಜಾರಿಗೆ ತಕ್ಷಣದ ಕಾರಣವಾಗಿತ್ತು. ಇದರಿಂದಾಗಿ ವಿರೋಧ ಪಕ್ಷಗಳು ಇಂದಿರಾ ಗಾಂಧಿ ಅವರಿಗೆ ಪ್ರಧಾನಿ ಪದವಿಗೆ ರಾಜೀನಾಮೆ ನೀಡಿ, ಹೊಸ ಚುನಾವಣೆ ನಡೆಸಲು ಒತ್ತಡ ಹಾಕುತ್ತಿದ್ದವು. ಕೆಳಗಿನ ಈ ಜಾಹೀರಾತುಗಳು ಪ್ರಾದೇಶಿಕ ರಾಜಕಾರಣದಲ್ಲಿನ ಪ್ರತಿಕ್ರಿಯೆಗಳು ಮತ್ತು ಸರ್ಕಾರದ ಕಾರ್ಯನೀತಿಗಳ ಮೇಲೆ ಬೆಳಕು ಬೀರುವುವು. ಕ್ರಿಯಾ ಸಮಿತಿ ಮತ್ತು ಬೆಂಗಳೂರು ನಗರ ಜಿಲ್ಲಾ ಕಾಂಗ್ರೆಸ್ ಸಮಿತಿ ಪ್ರಕಟಿಸಿದ ಜಾಹೀರಾತುಗಳಿವು. ಇಂದಿರಾ ಗಾಂಧಿಯವರಿಗೆ ಪೂರ್ಣ ಬೆಂಬಲ ಸೂಚಿಸಲು ೨೪ ಜೂನ್ ೧೯೭೫ರಂದು ಬಹಿರಂಗ ಸಭೆ ಆಯೋಜಿಸಲಾಗಿದ್ದು, ಈ ಸಭೆ ಮತ್ತು ಮೆರವಣಿಗೆಯಲ್ಲಿ ಭಾಗವಹಿಸಲು ಎಲ್ಲ ಸಂಘಸಂಸ್ಥೆಯ ಕಾರ್ಯಕರ್ತರಿಗೆ ಕರೆ ನೀಡಲಾಗಿದೆ. ಜಿಲ್ಲಾ ಕಾಂಗ್ರೆಸ್ ಸಮಿತಿ 'ನೆಚ್ಚಿನ ನಾಯಕಿ'ಗೆ(ಚಿತ್ರ-೨ಎ) ಬೆಂಬಲ ನೀಡಲು ಮುಖ್ಯಮಂತ್ರಿ ಅರಸು ನೇತೃತ್ವದಲ್ಲಿ



(ಚಿತ್ರ-೨) (ಚಿತ್ರ-೨ಎ)

ಕನ್ನಡಪ್ರಭ : ೨೩ ಮತ್ತು ೨೪ರ ಜೂನ್ ೧೯೭೫ರಂದು ಪ್ರಕಟವಾದ ಜಾಹೀರಾತು. ಚಿತ್ರ ಸಂಖ್ಯೆ: ೧.೩

ಸಭೆ ಸೇರುವುದಾಗಿ ತಿಳಿಸಿದೆ. ಜಾಹೀರಾತಿನಲ್ಲಿ ಅಂದಿನ ಸಮಸ್ಯೆಗೆ ವಿರೋಧ ಪಕ್ಷಗಳನ್ನು ಗುರಿ ಮಾಡಿದೆ. ಪ್ರಜಾತಂತ್ರ ರಕ್ಷಿಸುವ ಸಲುವಾಗಿ ಇಂದಿರಾ ಗಾಂಧಿ ಅವರನ್ನು ಬೆಂಬಲಿಸಲು ಕರೆ ಮತ್ತು 'ಪಟ್ಟಭದ್ರ ಹಿತಾಸಕ್ತಿಗಳನ್ನು, ಸಮಾಜವಾದಿ ವಿರೋಧಿಗಳನ್ನು ಎದುರಿಸಿ ಪ್ರಜಾತಂತ್ರ ರಕ್ಷಿಸಿ' ಎಂಬ ಉದ್ಘೋಷವಿದೆ. ಕರ್ನಾಟಕದಲ್ಲಿ ಸಮಕಾಲೀನವಾಗಿ ಕಾಂಗ್ರೆಸ್ ಪಕ್ಷ ಆಡಳಿತ ಪಕ್ಷವಾಗಿತ್ತು. ಸರ್ಕಾರದ ಈ ಕ್ರಮಗಳು ರಾಜ್ಯದಲ್ಲಿ ಕಂಡುಬರುತ್ತಿದ್ದ ಪ್ರತಿಭಟನೆಗಳನ್ನು ಪರೋಕ್ಷವಾಗಿ ಸೂಚಿಸುವುದು. ಜೊತೆಗೆ ದೇವರಾಜ ಅರಸು ಮತ್ತು ಇಂದಿರಾ ಗಾಂಧಿ ಅವರ ನಡುವೆ ಇದ್ದ ಉತ್ತಮ ಸಂಬಂಧವನ್ನು ಅನಾವರಣಗೊಳಿಸುವುದು. ಆದರೆ ದೇವರಾಜ ಅರಸು ಅವರು ಇಂದಿರಾ ಗಾಂಧಿ ಅವರ ಅನುಯಾಯಿಯಂತೆ ಕಂಡುಬಂದರೂ, ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಿ ಅರಸು ಅವರ ನಾಯಕತ್ವ ವಿಭಿನ್ನವಾಗಿ ಜನಪರ ನೆಲೆಯಲ್ಲಿ ವ್ಯಕ್ತವಾಯಿತು. ಇದರಿಂದಾಗಿ ರಾಷ್ಟ್ರದ ಬಹುತೇಕ ಕಡೆ ನಡೆದಂತೆ ಜನ ವಿರೋಧಿ ಮತ್ತು ಪ್ರತಿಭಟನಾಕಾರರ ವಿರೋಧಿ ರೂಪಗಳನ್ನು ಪಡೆಯಲಿಲ್ಲ ಎಂಬ ನಿಲುವು ಅಧಿಕವಾಗಿದೆ. ಮುಂದಿನ ಹಂತದಲ್ಲಿ ರಾಜ್ಯ ರಾಜಕಾರಣದ ರೂಪದಲ್ಲಿ ಉಂಟಾದ ಬದಲಾವಣೆಗಳಿಗೆ ಗಟ್ಟಿ ನೆಲೆಯನ್ನು ಈ ಕಾಲಘಟ್ಟದ ಆಡಳಿತ ಒದಗಿಸಿದೆ. ಇವೆಲ್ಲವು ಆಂತರಿಕ ತುರ್ತುಪರಿಸ್ಥಿತಿ ಪೂರ್ವ ಮತ್ತು ರಾಜಕೀಯ ಸ್ಥಿತ್ಯಂತರಕ್ಕೆ ಕಾರಣವಾದ ಪ್ರಮುಖ ಘಟನೆಗಳ ಅವಲೋಕನವಾಗಿದೆ.

### ೧.೧.೩.೪. ಜನತಾ ಸರ್ಕಾರ ಮತ್ತು ರಾಜಕೀಯ ಬೆಳವಣಿಗೆಗಳು

"ಜನತಾ ಮೇಕ್ಸ್ ಹಿಸ್ಟರಿ"(ಡೆಕ್ಕನ್ ಹೆರಾಲ್ಡ್ ೧೯೭೭ ಮಾರ್ಚ್ ೨೨); "ಪ್ರಜಾಪ್ರಭುತ್ವ ಅದ್ಭುತ ಸಾಧನೆ"(ಕನ್ನಡಪ್ರಭ ೧೯೭೭ ಮಾರ್ಚ್ ೨೩) ಮೊದಲಾದ ಪತ್ರಿಕಾ ವರದಿಗಳು ಲೋಕಸಭಾ ಚುನಾವಣೆಯಲ್ಲಿ ಜನತಾ ಪಕ್ಷ ಬಹುಮತ ಗಳಿಸಿದ ನೆಲೆಯಲ್ಲಿ ಪ್ರಕಟಗೊಂಡಿವೆ. ಮೊದಲನೆಯ ವರದಿಯು ಎರಡರ್ಥ ಹೊಂದಿದ್ದು ಜನತೆ ಮತ್ತು ಜನತಾ ಪಕ್ಷವನ್ನು ಸೂಚಿಸುವುದು. ಎರಡನೆಯ ವರದಿ ವಿದೇಶಗಳ

ಅಭಿಮತಗಳನ್ನು ವ್ಯಕ್ತಪಡಿಸುವುದು. ತುರ್ತುಪರಿಸ್ಥಿತಿ ಕಾಲದ ಚುನಾವಣೆಯ ಫಲಿತಾಂಶ ಆಡಳಿತಶಾಹಿ ನೀತಿಯಲ್ಲಿ ಬದಲಾವಣೆಯನ್ನು ತರಬಹುದು ಎಂಬ ಭರವಸೆ ಇಲ್ಲಿದೆ. ಇಲ್ಲಿ ೧೯೭೭ ರಿಂದ ೧೯೮೦ರವರೆಗಿನ ಚುನಾವಣೆಗಳು, ರಾಜಕಾರಣ, ಪ್ರತಿಭಟನೆ, ಹೋರಾಟಗಳನ್ನು ಅವಲೋಕಿಸುವ ಪ್ರಯತ್ನ ಮಾಡಲಾಗಿದೆ.

ತುರ್ತುಪರಿಸ್ಥಿತಿ ಕಾಲದ ನಿರಂಕುಶಾಧಿಕಾರದ ವಿರುದ್ಧ ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟದ ಫಲವೆಂದು ೧೯೭೭ರ ಚುನಾವಣೆಯ ಫಲಿತಾಂಶವನ್ನು ವಿಶ್ಲೇಷಿಸುವುದು ಸಾಮಾನ್ಯವಾಗಿದೆ. ೧೯೮೦ರವರೆಗೆ ಎರಡು ಬಾರಿ ಲೋಕಸಭಾ ಚುನಾವಣೆ, ಅನೇಕ ರಾಜ್ಯಗಳಲ್ಲಿ ವಿಧಾನಸಭಾ ಚುನಾವಣೆ ನಡೆಯುವುದು. ೧೯೭೭ರ ಲೋಕಸಭಾ ಚುನಾವಣೆಯ ನಂತರದಿಂದ ೧೯೭೮ರವರೆಗೆ ನಡೆದ ರಾಜ್ಯ ವಿಧಾನಸಭಾ ಚುನಾವಣೆಗಳಲ್ಲಿ ಕಾಂಗ್ರೆಸೇತರ ಪಕ್ಷಗಳು ಜಯ ಸಾಧಿಸಿದರೆ, ೧೯೭೮ರ ನಂತರದ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷ ಬಲಿಷ್ಠವಾಗುತ್ತ ಸಾಗುವುದು. ಈ ಚುನಾವಣಾ ಫಲಿತಾಂಶಗಳು ರಾಜಕಾರಣ ಮತ್ತು ರಾಜಕೀಯ ಪಕ್ಷಗಳ ಕುರಿತು ಬದಲಾದ ಜನತೆಯ ಮನೋಭಾವದಲ್ಲಾದ ಬದಲಾವಣೆಯ ಸಂಕೇತಗಳು. ಈ ಸಂದರ್ಭದಲ್ಲೇ ೧೯೭೮ರ ಆರಂಭದವರೆಗೂ ತುರ್ತುಪರಿಸ್ಥಿತಿ ಕಾಲದ ಅನ್ಯಾಯ, ಶೋಷಣೆಗಳ ವಿರುದ್ಧ ಕಾರ್ಯಾಚರಣೆ ಕಂಡುಬರುವುದು. ಪರಿಣಾಮವಾಗಿ ಕಾಂಗ್ರೆಸ್ ಪಕ್ಷ ಆಡಳಿತದಲ್ಲಿರುವ ರಾಜ್ಯಗಳಲ್ಲಿ ವಿಚಾರಣಾ ಆಯೋಗಗಳ ನೇಮಕ ಮತ್ತು ಮರುಚುನಾವಣೆಗಳನ್ನು ಕಾಣಬಹುದು. ಕಾಂಗ್ರೆಸ್ ಪಕ್ಷ ೧೯೮೦ರವರೆಗೆ ಎರಡು ಬಾರಿ ವಿಭಜನೆಗೆ ಒಳಗಾಯಿತು. ಮತ್ತೊಂದೆಡೆ ರಾಜಕೀಯ ಪಲ್ಲಟಗಳ ನಡುವೆ ಕಾಂಗ್ರೆಸ್ ಪಕ್ಷದ ಈ ರೂಪಾಂತರ ರಾಜ್ಯ ರಾಜಕಾರಣದಲ್ಲಿ ಅನೇಕ ಬದಲಾವಣೆಗಳಿಗೆ ಕಾರಣವಾಯಿತು. ಜೊತೆಗೆ ಆಡಳಿತ ಪಕ್ಷವಾಗಿದ್ದ ಜನತಾ ಪಕ್ಷದಲ್ಲಿ ಒಡಕುಂಟಾಗಿ ೧೯೮೦ರಲ್ಲಿ ಮರುಚುನಾವಣೆಗೆ ಕಾರಣವಾಯಿತು. ೧೯೭೭ರ ಡಿಸೆಂಬರ್ ಕೊನೆಯಲ್ಲಾದ ಕಾಂಗ್ರೆಸ್ ವಿಭಜನೆಗೆ ಪ್ರಮುಖ ಹಾಗೂ ತಕ್ಷಣದ ಕಾರಣ 'ರಾಜ್ಯ ರಾಜಕಾರಣ'. ನಂತರದಲ್ಲಿ ಕಾಂಗ್ರೆಸ್(ಐ) ವಿಭಜನೆಗೂ ರಾಜ್ಯದ ವ್ಯಕ್ತಿ ಮತ್ತು ಪಕ್ಷ ರಾಜಕಾರಣ ನಿರ್ವಹಿಸಿರುವ ಪಾತ್ರ ಪ್ರಮುಖವಾಗಿದೆ. ಇವುಗಳಲ್ಲಿ ಪ್ರಾದೇಶಿಕ ರಾಜಕೀಯ ಪೂರಕವಾಗಿ ಕಾರ್ಯನಿರ್ವಹಿಸಿದೆ ಆದರೂ ವ್ಯಕ್ತಿ ನೆಲೆಯಲ್ಲಿ ಚರ್ಚೆಗಳು ಅಧಿಕವಾಗಿದೆ. ಇದರೊಂದಿಗೆ ಭಾಷಾ ರಾಜಕಾರಣವು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ ತೀವ್ರ ರೂಪದಲ್ಲಿ ಅಸಮಾಧಾನ ವ್ಯಕ್ತಪಡಿಸುವ ಸಾಧನದಂತೆ ಕಂಡುಬರುವುದು. ಹಿಂದಿ ಹೇರಿಕೆ ವಿರೋಧಿ ನೆಲೆಯಲ್ಲಿ ಕೇಂದ್ರ ಸರ್ಕಾರದ ವಿರುದ್ಧ ಹೋರಾಟ ದಕ್ಷಿಣ ಭಾರತದ ರಾಜ್ಯಗಳಲ್ಲಿ ಒಟ್ಟಾಗಿ ಕಂಡುಬರುವುದನ್ನು ಗುರುತಿಸಬಹುದು. ಮತ್ತೊಂದೆಡೆ ರಾಜ್ಯದಲ್ಲಿ ಸರ್ಕಾರ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡುವ ಮೂಲಕ ರಾಜ್ಯದೊಳಗೆ ಭಾಷಾ ಚಳವಳಿಗಳು ತೀವ್ರತೆ ಪಡೆಯದಂತೆ ತಡೆ ಹಿಡಿಯಿತು. ೧೯೮೦ರ ದಶಕದ ಆರಂಭದಲ್ಲಿ ಪ್ರಬಲವಾಗಿ ಬೆಳೆದು ಬಂದ ಭಾಷಾ ಚಳವಳಿಗೆ ಸಮಕಾಲೀನ ಆಡಳಿತ ನೀತಿಯ ಕೆಲವು ವಿಚಾರಗಳು ಪೂರಕವಾಗಿವೆ. ರಾಷ್ಟ್ರಾದ್ಯಂತ ಭಾಷೆ, ಜನಾಂಗ ಮತ್ತಿತರ ವಿಚಾರಗಳ ತೀವ್ರತೆ ಪ್ರಾದೇಶಿಕ ರಾಜಕೀಯದಲ್ಲಿ ಮೊದಲಿಗಿಂತ ಹೆಚ್ಚಾಗುತ್ತ ಹೋಗುವುದು ಸಮಕಾಲೀನ ರಾಜಕಾರಣದ ಮತ್ತೊಂದು ಆಯಾಮವಾಗಿದೆ.

*** *** ***

೧೯೭೭ರ ಲೋಕಸಭಾ ಚುನಾವಣೆಯಲ್ಲಿ ಆಡಳಿತ ಪಕ್ಷ ಬದಲಾಯಿಸುವ ಮೂಲಕ ವ್ಯವಸ್ಥೆಯಲ್ಲಿ ಹೊಸ ಬದಲಾವಣೆ ತರಲು ಸಾಧ್ಯವೆಂಬ ಆಶಯ ನಿಧಾನವಾಗಿ ಕರಗತೊಡಗಿತ್ತು. ಇದರ ಪ್ರಭಾವ ಸಮೂಹ ಮಾಧ್ಯಮಗಳಾದ ಪತ್ರಿಕೋದ್ಯಮ, ದೃಶ್ಯ ಮಾಧ್ಯಮಗಳು ಮತ್ತು ಸಾಹಿತ್ಯಿಕ ವಲಯಗಳಲ್ಲಿ ಅನೇಕ ರೂಪಗಳಲ್ಲಿ ಪ್ರಕಟಗೊಂಡಿತು. ಪತ್ರಿಕಾ ಮಾಧ್ಯಮಗಳಲ್ಲಿ ೧೯೭೮ರ ಆರಂಭದವರೆಗೆ ತುರ್ತುಪರಿಸ್ಥಿತಿಯ ದೌರ್ಜನ್ಯ, ದುರಾಡಳಿತ, ವಿಚಾರ ಸ್ವಾತಂತ್ರ್ಯದ ದಮನ, ವ್ಯಕ್ತಿ ಪೂಜೆ ಮೊದಲಾದ ವಿಚಾರಗಳು ನಿರಂತರವಾಗಿ ಲೇಖನ, ವರದಿಗಳ ರೂಪದಲ್ಲಿ ನೋಡಬಹುದು. ಆ ಕಾಲದ ದೇಶಿ, ವಿದೇಶಿ ಪುಸ್ತಕಗಳಲ್ಲಿಯೂ ಇಂತಹ ಚಿಂತನೆಗಳನ್ನು ಕಾಣಬಹುದಾಗಿದ್ದು ವರದಿಯ ಸ್ವರೂಪಗಳಲ್ಲಿ ಹೆಚ್ಚಿನ ಭಿನ್ನತೆ

ಇರುವುದಿಲ್ಲ. ೧೯೭೮ರ ಉತ್ತರಾರ್ಧದಿಂದ ಜನತಾ ಸರ್ಕಾರದ ಲೋಪದೋಷಗಳು ಹಾಗೂ ಅರಸು ಆಡಳಿತದಲ್ಲಿ ವ್ಯಕ್ತಿ ರಾಜಕೀಯದ ವೈಭವೀಕರಣ ಹೆಚ್ಚಾಗುತ್ತ ಸಾಗುವುದು. ರಾಜಕಾರಣವನ್ನು ಸಾಹಿತ್ಯದ ಭಾಗವಾಗಿ ನೋಡುವ, ಸಮಾಜ ಮತ್ತು ರಾಜಕಾರಣಕ್ಕೆ ಸಾಹಿತ್ಯವು ಸ್ಪಂದಿಸಬೇಕೆನ್ನುವ ಮನೋಭಾವದ ಬೆಳವಣಿಗೆ ಕಾಣಬಹುದು. ಬೀದಿ ನಾಟಕಗಳನ್ನು ಸಮಾಜ ಸುಧಾರಣ ಅಸ್ತ್ರವಾಗಿ ಚಳವಳಿ ರೂಪಿಸುವಲ್ಲಿ ಬಳಸುವುದು ಹೆಚ್ಚಾಯಿತು. ಈ ಸಂದರ್ಭದ ಬೀದಿ ನಾಟಕಗಳು ಎಡಪಂಥೀಯ ಸಿದ್ಧಾಂತಗಳಿಂದ ಪ್ರೇರಿತವಾಗಿದ್ದು, ಇಂತಹ ಬೆಳವಣಿಗೆಯನ್ನು ಅನೇಕ ರಾಜ್ಯಗಳಲ್ಲಿ ನೋಡಬಹುದು.

*** *** ***

೧೯೭೦ರ ದಶಕದಲ್ಲಿ ರೂಪುಗೊಂಡ ಹೋರಾಟಗಳು ಮತ್ತು ರಾಜ್ಯ ಸರ್ಕಾರದ ಆಡಳಿತ ನೀತಿಗಳಲ್ಲಿ ಭಿನ್ನತೆ ಕಂಡುಬರದೇ ಹಿಂದುಳಿದ ವರ್ಗಗಳ ಪರ ನಿಲುವು ಇದೆ. ಈ ದಿಶೆಯಲ್ಲಿ ಭೂ ಸುಧಾರಣಾ ಕಾಯ್ದೆ ಮತ್ತು ಹಾವನೂರು ವರದಿ ಜಾರಿ ಪ್ರಮುಖವಾಗಿವೆ. ಈ ಕಾಲದ ಹೊರಾಟಗಳು ಮೇಲ್ನೋಟಕ್ಕೆ ಜಾತಿ ಹಿನ್ನೆಲೆಯಲ್ಲಿ ಕಂಡುಬಂದರೂ, ಸಮಾಜದ ವರ್ಗ ಹೋರಾಟವಾಗಿದೆ. 'ಸಮಾನತೆಯ ಹಕ್ಕು, ಸ್ವಾತಂತ್ರ್ಯ ಹಾಗೂ ಅಸ್ಮಿತೆಗಳು ಕೇಂದ್ರ'ವಾಗಿದ್ದು, ಎಲ್ಲ ಹೋರಾಟಗಳಿಗೂ ಮೂಲವಾಗಿದೆ. ತುರ್ತುಪರಿಸ್ಥಿತಿ ನಂತರದ ರಾಜಕಾರಣದಲ್ಲಿ ಸಾಮಾಜಿಕ ಮತ್ತು ರಾಜಕೀಯ ಸ್ಥಿತ್ಯಂತರಗಳಿಗೆ ಮೂಲಭೂತ ಕಾರಣಗಳಾಗಿವೆ. ಈ ಕಾಲಘಟ್ಟದ ಪ್ರಭಾವ ಪರಿಣಾಮಗಳು ರಾಜಕೀಯ ಮತ್ತು ಸಮಾಜದಲ್ಲಿ ಪಡೆದುಕೊಂಡ ರೂಪಗಳನ್ನು ಗಮನಿಸುವುದು ಮಹಾಪ್ರಬಂಧದ ಮುಖ್ಯ ಉದ್ದೇಶಗಳಲ್ಲೊಂದಾಗಿದೆ.

## ತುರ್ತುಪರಿಸ್ಥಿತಿ: ಸಾಹಿತ್ಯ/ಆಕರ ವಿಮರ್ಶೆ

> ರಾತ್ರಿ ನಿದ್ದೆಗೆಟ್ಟದ್ದರಿಂದು ಸಾರುವ ಕಣ್ಣು; ಸಿಟ್ಟಿನ ಉದ್ವಿಗ್ನ ಮುಖಭಾವ 'ಏನಾಯಿತು?' ಎಂದು ನಾನು ಪ್ರಶ್ನಿಸಿದಾಗ ಅವರು ಹೇಳಿದ್ದುವಿಷ್ಟೆ: 'ಆಗಿರುವುದು ಸರ್ವನಾಶ. ಈ ದೇಶದ ಸ್ವಾತಂತ್ರ್ಯದ ಹೋರಾಟದ ಇತಿಹಾಸಕ್ಕೆ ಅರ್ಥವೇ ಇಲ್ಲವೆನ್ನುವಂಥ ತೀರ್ಮಾನವನ್ನು ಕೊಡುವ ಎದೆಗಾರಿಕೆ ಒಬ್ಬಾಕೆಗೆ ಬಂತಲ್ಲಾ' ... ಅಂಥ ಮಾತುಗಳನ್ನು ಪ್ರಚೋದಿಸಿದ ಉದ್ರಿಕ್ತ ಮನಃಸ್ಥಿತಿಯಷ್ಟೆ ಈ ಲೇಖನಕ್ಕೆ ಮುಖ್ಯ ... ವೈಚಾರಿಕತೆಯನ್ನು ಉಳಿಸಿಕೊಳ್ಳುವುದೂ ಬೆಳಸಿಕೊಳ್ಳುವುದೂ ಸ್ವತಂತ್ರವಾದ ಆವರಣದಲ್ಲಿ ಮಾತ್ರ ಸಾಧ್ಯ ಎಂದು ನಂಬಿಕೊಂಡಿರುವ ಎಲ್ಲ ಬುದ್ಧಿಜೀವಿಗಳಂತೆ ಅವರಿಗೂ ನೋವಾಗಿತ್ತು(ಬಲ್ಲಾಳ ೨೦೦೦: ೯೧).

ತುರ್ತುಪರಿಸ್ಥಿತಿ ಕುರಿತಂತೆ ಲೇಖನವೊಂದರಲ್ಲಿ ಕಂಡುಬಂದ ಸ್ಮರಣೆ ಮತ್ತು ವಿಶ್ಲೇಷಣೆ. ಈ ಕಾಲಘಟ್ಟ ಕುರಿತಂತೆ ಅನೇಕ ಬಗೆಯ ಆಕರ, ಸಾಹಿತ್ಯ, ದಾಖಲೀಕರಣಗಳನ್ನು ನೋಡಬಹುದು. ತುರ್ತುಪರಿಸ್ಥಿತಿ ಕೊನೆಗೊಂಡ ತಕ್ಷಣ ನೂರಾರು ಕೃತಿಗಳು ರಾಷ್ಟ್ರಾದ್ಯಂತ ಅನೇಕ ಭಾಷೆಗಳಲ್ಲಿ ರಚಿತವಾಗಿವೆ. ಸರ್ಕಾರಿ ದಾಖಲಾತಿಗಳು, ವಿಚಾರಣಾ ಸಮಿತಿಗಳ ವರದಿಗಳು, ಸುದ್ದಿ ಪತ್ರಿಕೆ, ವಾರಪತ್ರಿಕೆ, ನಿಯತಕಾಲಿಕೆಗಳ ವರದಿ, ಲೇಖನಗಳು, ಸಾಕ್ಷ್ಯ ಚಿತ್ರ, ವಾಣಿಜ್ಯ ಚಿತ್ರ ಮುಂತಾದ ವಿವಿಧ ಸ್ವರೂಪಗಳಲ್ಲಿ ಮಾಹಿತಿ ದೊರೆಯುವುವು. ಬದಲಾದ ದೃಷ್ಟಿಕೋನ ಮತ್ತು ಉದ್ದೇಶಗಳ ಚೌಕಟ್ಟಿನಲ್ಲಿ ಪ್ರಸ್ತುತದವರೆಗೂ ವಿವಿಧ ಸ್ವರೂಪಗಳಲ್ಲಿ ಮರುಬರವಣಿಗೆ, ವಿಮರ್ಶೆ, ವಿಶ್ಲೇಷಣೆ, ಸಂಶ್ಲೇಷಣೆಗಳನ್ನು ಕಾಣಬಹುದು. ಇಲ್ಲಿ ಆಕರಗಳ ಕಾಲ, ಉದ್ದೇಶ, ಸ್ವರೂಪಗಳ ನೆಲೆಯಲ್ಲಿ ಕೆಲವು ಕೃತಿಗಳು ಮತ್ತು ಅಧ್ಯಯನಗಳನ್ನು ಮಾತ್ರ, ಮೂರು ಭಾಗಗಳಾಗಿ ಚರ್ಚಿಸಲಾಗಿದೆ. ಮೊದಲನೆಯ ಭಾಗದಲ್ಲಿ ೧೯೭೦ರ ದಶಕದ ಪ್ರಮುಖ ಅಂಶಗಳಾದ ಭೂ ಸುಧಾರಣೆ, ಹಾವನೂರು ವರದಿ, ತುರ್ತುಪರಿಸ್ಥಿತಿ ಕುರಿತ ರಾಷ್ಟ್ರೀಯ ಮತ್ತು ಪ್ರಾದೇಶಿಕ ನೆಲೆಯ ವಿವಿಧ ಆಯಾಮಗಳ ಅಧ್ಯಯನಗಳನ್ನು ಅವಲೋಕಿಸಲು ಪ್ರಯತ್ನಿಸಿದೆ. ೧೯೭೭ ರಿಂದ ೧೯೮೦ರವರೆಗಿನ ಸರ್ಕಾರಿ ದಾಖಲಾತಿ ಮತ್ತು ಜೈಲಿನ ದಿನಚರಿಗಳನ್ನು ಎರಡನೆಯ ಭಾಗದಲ್ಲಿ ಪರಿಶೀಲಿಸಲು ಪ್ರಯತ್ನಿಸಿದೆ. ೧೯೯೦ ರಿಂದ ಪ್ರಸ್ತುತದವರೆಗಿನ ಚರಿತ್ರೆ, ಆತ್ಮ ಚರಿತ್ರೆ, ಜೀವನ ಚರಿತ್ರೆಯ ಭಾಗವಾಗಿ ಹಾಗೂ ತುರ್ತುಪರಿಸ್ಥಿತಿ ಕುರಿತ ಕೃತಿಗಳನ್ನು ಮುಂದಿನ ಹಂತದಲ್ಲಿ ಚರ್ಚಿಸಲು ಪ್ರಯತ್ನ ಮಾಡಲಾಗಿದೆ. ತುರ್ತುಪರಿಸ್ಥಿತಿ ಬಗೆಗಿನ ಲೇಖನಗಳನ್ನು ಇಲ್ಲಿ ಚರ್ಚಿಸುತ್ತಿಲ್ಲ.

## ೧.೨.೧. ೧೯೭೦ರ ದಶಕ ಕುರಿತ ಅಧ್ಯಯನಗಳು

ರಾಷ್ಟ್ರ ಮತ್ತು ರಾಜ್ಯ ರಾಜಕಾರಣ ೧೯೭೦ರ ದಶಕದಲ್ಲಿ ವ್ಯಕ್ತಿ, ಪಕ್ಷ, ಕಾಲಮಾನದ ಚೌಕಟ್ಟುಗಳಲ್ಲಿದ್ದು, ಆಂತರಿಕ ತುರ್ತುಪರಿಸ್ಥಿತಿ ಕುರಿತು ಅನೇಕ ಅಧ್ಯಯನಗಳಾಗಿವೆ. ಇಲ್ಲಿ ಕೆಲವು ಸಂಶೋಧನ ಪ್ರಬಂಧಗಳನ್ನು[೧೨] ಮಾತ್ರ ಗಮನಿಸಿದೆ. ಸಂವಿಧಾನಿಕ ನೆಲೆಗಟ್ಟಿನಲ್ಲಿ *ಭಾರತದ ತುರ್ತುಪರಿಸ್ಥಿತಿಯಲ್ಲಿ ಪ್ರಧಾನ ಮಂತ್ರಿಯವರ ಪಾತ್ರ*(ಶ್ರೀಗಿರಿ, *೨೦೧೦)* ಮತ್ತು *ಕಾನ್ಸಿಟಿಟ್ಯೂಷನಲ್ ಅಮೆಂಡ್‌ಮೆಂಟ್ಸ್ ಅಂಡ್ ಸೋಷಿಯೊ ಇಕಾನಾಮಿಕ್ ಚೇಂಜ್ ಇನ್ ಇಂಡಿಯಾ, ೧೯೬೭-೧೯೭೭(ಸೂದ್, ೧೯೮೦)* ಕೃತಿಗಳನ್ನು ಕಾಣಬಹುದು. ಮೊದಲ ಮಹಾಪ್ರಬಂಧದಲ್ಲಿ ತುರ್ತುಪರಿಸ್ಥಿತಿಯಲ್ಲಿ ಪ್ರಧಾನಮಂತ್ರಿಯ ಅಧಿಕಾರ, ಸಂವಿಧಾನದಲ್ಲಾದ ಬದಲಾವಣೆ ಹಾಗೂ ಪರಿಣಾಮಗಳನ್ನು ರಾಜಕಾರಣದ ನೆಲೆಯಲ್ಲಿ ಚರ್ಚಿಸಲಾಗಿದೆ. ಎರಡನೆಯ ಮಹಾಪ್ರಬಂಧದಲ್ಲಿ ೧೯೬೦ರ ದಶಕದ ಉತ್ತರಾರ್ಧದಿಂದ ತುರ್ತುಪರಿಸ್ಥಿತಿ ಕೊನೆಗೊಳ್ಳುವವರೆಗೂ ನಡೆದ ಸಂವಿಧಾನಿಕ ತಿದ್ದುಪಡಿ, ಸಮಾಜೋ-ಆರ್ಥಿಕ ರಾಜಕಾರಣವನ್ನು ಸಮೀಕರಿಸಿ ವಿಶ್ಲೇಷಿಸಿದೆ. *ಪಾರ್ಟಿ ಪಾಲಿಟಿಕ್ಸ್ ಅಂಡ್ ಫಾರಿನ್ ಪಾಲಿಸಿ ಇನ್ ಇಂಡಿಯಾ ೧೯೪೭-೧೯೭೭(ವಟಗುಂಡಿ, ೧೯೮೧)* ಮಹಾಪ್ರಬಂಧವು ಪ್ರಜಾಪ್ರಭುತ್ವ ಮತ್ತು ಆಡಳಿತ ಪಕ್ಷದ ಸೈದ್ಧಾಂತಿಕತೆ, ವಿದೇಶಾಂಗ ನೀತಿಯಲ್ಲಾದ ಬದಲಾವಣೆಗಳ ನೆಲೆಯನ್ನು ಚರ್ಚಿಸಿದೆ. ಹಾಗೆಯೇ ಸಾರ್ವತ್ರಿಕ ಚುನಾವಣೆ ಮತ್ತು ಸಮೂಹ ಮಾಧ್ಯಮಗಳ ಸ್ವಾತಂತ್ರ್ಯ ಅತ್ಯಂತ ಚರ್ಚಿತ ಹಾಗೂ ಪ್ರಭಾವಿ ವಿಚಾರಗಳಾಗಿವೆ. ಈ ದಿಸೆಯಲ್ಲಿ *ಸ್ಪೆಷಿಯಲ್ ಫ್ರ್ಯಾಗ್ಮೆಂಟೇಷನ್ ಆಫ್ ಪೊಲಿಟಿಕಲ್ ಬಿಹೇವಿಯರ್ ಇನ್ ಇಂಡಿಯಾ ಆನ್ ಎನಾಲಿಸಿಸ್ ಆಫ್ ಇಲೆಕ್ಟೋರಲ್ ಟ್ರೆಂಡ್ಸ್ ೧೯೭೧-೧೯೮೦(ಗೂನ್, ೧೯೮೨)* ಮತ್ತು *ಪ್ರೆಸ್ ಅಂಡ್ ಎಮರ್ಜೆನ್ಸಿ: ಎ ಕಂಟೆಂಟ್ ಅನಾಲಿಸಿಸ್ ಆಫ್ ಪೊಲಿಟಿಕಲ್ ನ್ಯೂಸ್ ಇನ್ ಟು ಇಂಗ್ಲಿಷ್ ಡೈಲೀಸ್*(ಮಿಸಾರ್, *೧೯೮೧)* ಮಹಾಪ್ರಬಂಧಗಳನ್ನು ನೋಡಬಹುದು. ೧೯೭೦ರ ದಶಕದ ರಾಜಕಾರಣದ ವಿಶಿಷ್ಟತೆಗಳನ್ನು ಚುನಾವಣೆಗಳ ಮೂಲಕ ನಡೆಸಿದ ಅಧ್ಯಯನವಾಗಿದೆ ಸೂನ್‌ರ ಸಂಪ್ರಬಂಧವಿದೆ. ಮಿಸಾರ್‌ರ ಸಂಶೋಧನ ಕೃತಿಯಲ್ಲಿ ರಾಜಕೀಯ ವರದಿಗಳ ಮೂಲಕ ರಾಜಕಾರಣ, ಸರ್ವಾಧಿಕಾರ ಹಾಗೂ ಪ್ರತಿಭಟನೆಗಳ ವಿಶ್ಲೇಷಣೆ ಕಾಣಬಹುದು. ಇವು ರಾಷ್ಟ್ರೀಯ ನೆಲೆಯ ಕೆಲವು ಅಧ್ಯಯನಗಳಾಗಿವೆ. ಮೊದಲನೆಯದನ್ನು ಹೊರತುಪಡಿಸಿ ಉಳಿದವು ೧೯೮೨ರೊಳಗೆ ಕೈಗೊಂಡ ಅಧ್ಯಯನಗಳಾಗಿದ್ದು, ಸಮಕಾಲೀನ ವಿಚಾರಧಾರೆಗಳಿಂದ ಪ್ರಭಾವಿತವಾಗಿರುವುದನ್ನು ಗುರುತಿಸಬಹುದು.

ರಾಜ್ಯ ಸರ್ಕಾರದ ಕಾರ್ಯನೀತಿ ಮತ್ತು ಅದರ ಅನುಷ್ಠಾನದ ಪ್ರತಿಕ್ರಿಯೆಗಳು ಪ್ರಾದೇಶಿಕ ರಾಜಕಾರಣದಲ್ಲಿ ಮಹತ್ವದ ಪಾತ್ರ ನಿರ್ವಹಿಸಿದೆ. ೧೯೭೦ರ ದಶಕದ ಕರ್ನಾಟಕ ಸರ್ಕಾರದ ಆಡಳಿತ ವೈಖರಿ ಕುರಿತಂತೆ ಅನೇಕ ಅಧ್ಯಯನಗಳಾಗಿವೆ. ಈ ಹಿನ್ನೆಲೆಯಲ್ಲಿ ಪಕ್ಷ, ವ್ಯಕ್ತಿ, ಪ್ರಾದೇಶಿಕ ರಾಜಕಾರಣ ಕೇಂದ್ರೀಕರಿಸಿ ಬಂದಿರುವ ಸಂಶೋಧನ ಕೃತಿಗಳನ್ನು ಇಲ್ಲಿ ಅವಲೋಕಿಸಲಾಗಿದೆ. ಪಕ್ಷ ಮತ್ತು ರಾಜಕೀಯ ನಾಯಕತ್ವದ ನೆಲೆಯಲ್ಲಿ *ಛೇಂಜಿಂಗ್ ಪ್ಯಾಟ್ರನ್ ಆಫ್ ಪೊಲಿಟಿಕಲ್ ಲೀಡರ್‌ಷಿಪ್ ಇನ್ ಕರ್ನಾಟಕ*(ರಾವ್, *೧೯೯೫)* ಎಂಬ ಸಂಪ್ರಬಂಧ ಕಾಣಬಹುದು. ೧೯೭೨ ರಿಂದ ೧೯೮೦ರವರೆಗಿನ ರಾಜಕಾರಣವನ್ನು ವ್ಯಕ್ತಿ ಹಾಗೂ ಪ್ರಾದೇಶಿಕ ನೆಲೆಯಲ್ಲಿ ವಿಶ್ಲೇಷಿಸುತ್ತಲೇ ಸಂಶ್ಲೇಷಣಾತ್ಮಕ ನೋಟವನ್ನು ಹೊಂದಿದೆ. ಇದರಲ್ಲಿ ಭೂ ಸುಧಾರಣೆ, ಹಾವನೂರು ವರದಿಯ ಜಾರಿ ಮತ್ತು ಅರಸು ಆಡಳಿತವನ್ನು ಪ್ರತ್ಯೇಕವಾಗಿ ಭೂ ರಾಜಕಾರಣದ ಮೂಲಕ ಚರ್ಚಿಸಲಾಗಿದೆ. ತುರ್ತುಪರಿಸ್ಥಿತಿ ಕಾಲಘಟ್ಟ ಅಧ್ಯಯನದ ಭಾಗವಾಗಿದ್ದು, ಸಮಕಾಲೀನ ಆರ್ಥಿಕ ಕಾರ್ಯನೀತಿ ಹಾಗೂ ಪ್ರಾದೇಶಿಕ ನಾಯಕತ್ವದ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

೧೯೭೭ರ ಸಾರ್ವತ್ರಿಕ ಚುನಾವಣಾ ರಾಜಕಾರಣದ ಭಾಗವಾಗಿ ಚರ್ಚೆ ಹುಟ್ಟುಹಾಕಿದ್ದ ಪ್ರಮುಖ ವಿಚಾರಗಳಲ್ಲಿ ಹಿಂದುಳಿದ ವರ್ಗಗಳ ಆಯೋಗದ ವರದಿಯ ಅನುಷ್ಠಾನವೂ ಒಂದಾಗಿತ್ತು. ಇದರ ಪರಿಣಾಮವಾಗಿ ಕಂಡುಬಂದ ಮೀಸಲಾತಿ, ಪ್ರಾದೇಶಿಕ ರಾಜಕಾರಣ ಮತ್ತು ಆಂದೋಲನಗಳ ನೆಲೆಗಳಲ್ಲಿ ಹಲವು ಅಧ್ಯಯನಗಳಾಗಿವೆ. ಎ *ಸ್ಟಡಿ ಆಫ್ ದಿ ಆರ್ಗನೈಜೇಷನ್ ಅಂಡ್ ವರ್ಕಿಂಗ್ ಆಫ್ ದಿ ಡೈರೆಕ್ಟರೇಟ್*

*ಆಫ್ ಬ್ಯಾಕ್‌ವರ್ಡ್ ಕ್ಲಾಸಸ್ ಅಂಡ್ ಮೈನಾರಿಟೀಸ್ ಆಫ್ ದಿ ಗವರ್ನ್‌ಮೆಂಟ್ ಆಫ್ ಕರ್ನಾಟಕ (ಕುಮಾರ್, ೧೯೮೮), ಪಾಲಿಟಿಕ್ಸ್ ಆಫ್ ರಿಸರ್ವೇಷನ್ ಇನ್ ಕರ್ನಾಟಕ ಸ್ಟೇಟ್(ಕಾಂಬಲೆ, ೧೯೯೧)* ಮತ್ತು *ಕರ್ನಾಟಕದಲ್ಲಿ ಹಿಂದುಳಿದ ವರ್ಗಗಳ ಆಂದೋಲನ: ಡಿ.ದೇವರಾಜ ಅರಸರ ಪಾತ್ರ: ಒಂದು ಅಧ್ಯಯನ(ಬಾಕೇರ್, ೨೦೦೨)* ಮುಂತಾದವು. ಹಾವನೂರು ವರದಿ ಕುರಿತು ನಡೆದಿರುವ ಅಧ್ಯಯನಗಳು ಕಾಲಾನುಕ್ರಮದಲ್ಲಿ ಕರ್ನಾಟಕ ಸರ್ಕಾರದಿಂದ ನಡೆಸಲ್ಪಡುವ ಸಾರ್ವಜನಿಕ ವಿಭಾಗ, ರಾಜ್ಯ ರಾಜಕಾರಣದ ಭಾಗ ಹಾಗೂ ಆಂದೋಲನದ ರೂಪಗಳಾಗಿ ಅಧ್ಯಯನ ವಿಸ್ತೃತಗೊಂಡಿರುವುದು ಕಂಡುಬರುತ್ತದೆ. ಇದು ರಾಜಕಾರಣದ ಸಂಕೀರ್ಣತೆ ಪ್ರಜಾಪ್ರಭುತ್ವದ ವಿಸ್ತರಣೆಯಂತೆ ಮೇಲ್ನೋಟಕ್ಕೆ ಕಾಣುತ್ತದೆ. ಬಾಕೇರ್‌ರ ಸಂಪ್ರಬಂಧದಲ್ಲಿ ಮುಖ್ಯಮಂತ್ರಿ ಅರಸರ ಆಡಳಿತ ನೀತಿಯನ್ನು ಹಿಂದುಳಿದ ವರ್ಗಗಳ ಆಂದೋಲನದ ಕತೃವಿನಂತೆ ಅವಲೋಕಿಸಲಾಗಿದೆ. ಈ ಕಾಲದಿಂದ ವ್ಯಕ್ತಿ ರಾಜಕಾರಣದ ಚೌಕಟ್ಟಿನಲ್ಲಿ ಮುಖ್ಯಮಂತ್ರಿ ಅರಸು ಆಡಳಿತ, ಚಿಂತನೆಗಳನ್ನು ಕುರಿತು ಅಧ್ಯಯನಗಳನ್ನು ನೋಡಬಹುದು. ಉದಾಹರಣೆಗೆ *ದೇವರಾಜ ಅರಸು ಆಡಳಿತ: ಒಂದು ಅಧ್ಯಯನ(ಗುರು ಲಿಂಗಯ್ಯ, ೨೦೦೨)* ಮತ್ತು *ಡಿ.ದೇವರಾಜ ಅರಸು ಹಾಗೂ ರಾಜಕಾರಣ: ಚಿಂತನೆಗಳ ಚಾರಿತ್ರಿಕ ವಿಶ್ಲೇಷಣೆ(ಹಣಮಂತರಾಯ, ೨೦೦೯)* ಮೊದಲಾದವು. ಆಡಳಿತಘಟ್ಟದಲ್ಲಿ ಹಿಂದುಳಿದ ವರ್ಗಗಳ ಅಭಿವೃದ್ಧಿ ಮತ್ತು ರಾಜಕೀಯ ನೆಲೆಗಳನ್ನು ಗುರುಲಿಂಗಯ್ಯ ಅವರ ಸಂಪ್ರಬಂಧದಲ್ಲಿ ಚರ್ಚಿಸಲಾಗಿದೆ. ಅರಸು ಆಡಳಿತದ ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ರಾಜಕಾರಣದ ಚಿಂತನೆಯನ್ನು ಹಣಮಂತರಾಯರ ಮಹಾಪ್ರಬಂಧದಲ್ಲಿ ಅವಲೋಕಿಸಲಾಗಿದೆ. ಈ ಅಧ್ಯಯನಗಳಲ್ಲಿ ತುರ್ತುಪರಿಸ್ಥಿತಿ ಕಾಲಘಟ್ಟ ಆಡಳಿತ ಕಾಲಾವಧಿಯ ಭಾಗ ಮಾತ್ರ. ರಾಷ್ಟ್ರ ಮತ್ತು ರಾಜ್ಯ ರಾಜಕಾರಣದ ನೆಲೆಯಲ್ಲಿ ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಿ ಕಂಡುಬಂದ ಪ್ರಜಾಪ್ರಭುತ್ವದ ಸ್ವರೂಪ ಕುರಿತ ಅಧ್ಯಯನ ನಡೆಯಬೇಕಾದ ಅಗತ್ಯವಿದೆ. ಆರಂಭಿಕ ಬರವಣಿಗೆಗಳಲ್ಲಿ ಸರ್ಕಾರ, ಜೈಲು, ಪೊಲೀಸ್ ಮತ್ತಿತರ ವಿಚಾರಗಳ ಬಳಕೆಗಳು ಅಧಿಕವಾಗಿವೆ. ಇವು ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳ ಉದ್ದೇಶ, ಸ್ವರೂಪ ಹಾಗೂ ಚಿಂತನೆಗಳ ಮೇಲೆ ಬೆಳಕು ಚೆಲ್ಲುತ್ತವೆ.

### ೧.೨.೨. ಆರಂಭಿಕ ಬರವಣಿಗೆಗಳು: ಸರ್ಕಾರ, ಜೈಲು ಮತ್ತು ತುರ್ತುಪರಿಸ್ಥಿತಿ(೧೯೭೭-೧೯೮೦)

'ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಆಡಳಿತಾತ್ಮಕ ವಿಚಾರ ಮತ್ತು ಹಕ್ಕುಗಳು ಮುಕ್ತವಾಗಿರಬೇಕು. ರಾಜಕೀಯ ಶಕ್ತಿಗಳು, ಅಧಿಕಾರಿಗಳು ಕರ್ತವ್ಯ ನಿರ್ವಹಿಸಲು ಬಿಡಬೇಕು. ಸಂವಿಧಾನದ ರಾಜಕೀಯ ವ್ಯವಸ್ಥೆ ರಾಷ್ಟ್ರಕ್ಕೆ ವಿಭಿನ್ನ ಸಿದ್ಧಾಂತದ ಆಡಳಿತಾತ್ಮಕ ಆಲೋಚನೆಗಳಿರುವ ಪಕ್ಷಗಳನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳನ್ನು ನಡೆಸಲು ಅವಕಾಶ ನೀಡಿದೆ'. ತುರ್ತುಪರಿಸ್ಥಿತಿ ಕಾಲದ ಆಡಳಿತ ದುರುಪಯೋಗ ಕುರಿತು **ಷಾ ಆಯೋಗದ** ೨೫ನೇ ಅಧ್ಯಾಯದಲ್ಲಿ ವ್ಯಕ್ತವಾಗಿರುವ ಕೆಲವು ವಿಚಾರಗಳಾಗಿವೆ. ಆಯೋಗದ ವರದಿಯು ರಾಜಕಾರಣ ಮತ್ತು ಪ್ರಜಾಪ್ರಭುತ್ವದ ನೆಲೆಯಲ್ಲಿ ಸರ್ಕಾರದ ಆಡಳಿತಾತ್ಮಕ ಧೋರಣೆಯನ್ನು ವಿಶ್ಲೇಷಿಸುವ ಹಾಗೂ ಅಭಿಮತಗಳ ದಾಖಲೆಯಾಗಿದೆ. ಇದನ್ನು ಗಮನಿಸುತ್ತ ೧೯೭೭ರಿಂದ ೧೯೮೦ರವರೆಗೆ ಪ್ರಕಟಗೊಂಡ ಕಥೆ, ಕಾದಂಬರಿ, ಕವನ ಸಂಕಲನ, ಜೈಲಿನ ದಿನಚರಿ, ಇತರ ದಾಖಲೀಕರಣ, ವಿಚಾರಣಾ ವರದಿ ಇನ್ನಿತರ ಬರಹಗಳನ್ನು ಚರ್ಚಿಸಲು ಪ್ರಯತ್ನಿಸಿದೆ. ಇವುಗಳ ರಚನೆಯ ಸ್ವರೂಪ, ಉದ್ದೇಶಗಳ ಹಿಂದಿನ ವಿಚಾರಧಾರೆ ಹಾಗೂ ನಾಗರಿಕ ಮತ್ತು ರಾಜಕೀಯ ಸಮಾಜಗಳ ಪ್ರಭಾವ ಪರಿಣಾಮಗಳು ಅಭಿವ್ಯಕ್ತಗೊಂಡಿರುವುದನ್ನು ಅವಲೋಕಿಸಲು ಪ್ರಯತ್ನ ಮಾಡಲಾಗಿದೆ.

ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಾದ ಅಧಿಕಾರದ ದುರ್ಬಳಕೆ, ಅತಿರೇಕಗಳ ಕುರಿತಂತೆ ಜನತಾ ಪಕ್ಷ ಅನೇಕ ವಿಚಾರಣಾ ಆಯೋಗಗಳನ್ನು ನೇಮಿಸಿತು. ತುರ್ತುಪರಿಸ್ಥಿತಿ ಕಾಲಘಟ್ಟದ ಕೇಂದ್ರ ಸರ್ಕಾರದ ವಿರುದ್ಧ **ಷಾ ವಿಚಾರಣಾ ಆಯೋಗ** ಹಾಗೂ ಕಾಂಗ್ರೆಸ್ ಪಕ್ಷ ಆಡಳಿತದಲ್ಲಿದ್ದ ರಾಜ್ಯಗಳ ಸರ್ಕಾರದ ವಿರುದ್ಧ ಹಲವು ವಿಚಾರಣಾ ಆಯೋಗಗಳ ನೇಮಕವನ್ನು ಕಾಣಬಹುದು. ಈ ದಿಕ್ಕಿನಲ್ಲಿ ೧೯೭೨ ರಿಂದ ೧೯೭೭ರವರೆಗಿನ ಆಡಳಿತ ದುರುಪಯೋಗದ ಬಗೆಗೆ **ಗ್ರೋವರ್ ವಿಚಾರಣಾ ಆಯೋಗವನ್ನು** ಕರ್ನಾಟಕದಲ್ಲಿ

ನೇಮಿಸಲಾಯಿತು. **ಷಾ ಆಯೋಗವು** 'ವಕೀಲರ ಕಾನೂನು ದುರ್ಬಳಕೆಯ ಸೂಕ್ಷ್ಮ ವಿಶ್ಲೇಷಣೆಯಾಗಿರದೆ ತೊಂದರೆಗೆ ಒಳಪಟ್ಟವರೊಡನೆ ನೇರ ಸಂವಾದವಾಗಿರಬೇಕು. ಇದು ಮುಂದಿನ ಸರ್ಕಾರಗಳಿಗೆ ಎಚ್ಚರಿಕೆ ನೀಡುವ ಮಾದರಿಯಾಗಬೇಕೆಂಬ ಆಶಯ ಕುರಿತ' ಚರ್ಚೆಗಳಿವೆ. ಮತ್ತೊಂದೆಡೆ ವಿಚಾರಣಾ ಆಯೋಗದ ವರದಿ ಸರ್ಕಾರದಿಂದ ರಚನೆಯಾದ ಇತರ ತುರ್ತುಪರಿಸ್ಥಿತಿ ಕೃತಿಗಳಂತೆ ಮಾಹಿತಿಗಳ ಆಗರವಷ್ಟೆ ಎಂಬ ಟೀಕೆಯನ್ನು ಸುದ್ದಿ ಪತ್ರಿಕೆಯಲ್ಲಿ ಕಾಣಬಹುದು. ಆಯೋಗ ತನ್ನ ವರದಿಯಲ್ಲಿ ರಾಷ್ಟ್ರಾದ್ಯಂತ ಕಂಡುಬಂದ ಮುಖ್ಯ ಘಟನೆಗಳ ವಿಚಾರಣಾ ಫಲಿತಗಳನ್ನು ದಾಖಲಿಸಿದೆ. ಕಡೆಯ ಅಧ್ಯಾಯದಲ್ಲಿ ಆಯೋಗದ ವಿಶ್ಲೇಷಣಾತ್ಮಕ ನೋಟವಿದ್ದು, ಪ್ರಜಾಪ್ರಭುತ್ವದ ನೆಲೆಯಲ್ಲಿ ವರದಿ ಮಹತ್ವಪೂರ್ಣವಾದುದು ಎಂದು ಹೇಳಲಾಗಿದೆ. ಕರ್ನಾಟಕ ಸರ್ಕಾರದ ವಿರುದ್ಧ ನೇಮಕವಾದ **ಗ್ರೋವರ್ ಆಯೋಗವು** ಸಾಮಾನ್ಯವಾಗಿ ಕಂಡುಬರುವ ಇತರ ವರದಿಗಳಂತೆ ರೂಪಿತವಾಗಿದೆ. ಈ ತನಿಖಾ ವರದಿಗಳ ಕುರಿತು ನಾಲ್ಕನೇ ಅಧ್ಯಾಯದಲ್ಲಿ ವಿಶ್ಲೇಷಿಸಲಾಗುತ್ತದೆ. ರಾಜ್ಯ ವಿಧಾನಸಭಾ ಮತ್ತು ವಿಧಾನಮಂಡಲದ ಅಧಿವೇಶನಗಳ ವರದಿಗಳು ಸರ್ಕಾರದ ದೃಷ್ಟಿಕೋನ ಹಾಗೂ ಪಕ್ಷ ರಾಜಕಾರಣದ ಸ್ವರೂಪ, ಉದ್ದೇಶಗಳ ಮೇಲೆ ಬೆಳಕು ಚೆಲ್ಲುವುವು. ಸರ್ಕಾರದ ಧ್ಯೇಯ, ಉದ್ದೇಶ ಮತ್ತು ಯೋಜನೆಗಳನ್ನು ಬಿಂಬಿಸುವ ಜಾಹೀರಾತುಗಳು ಗಮನ ಸೆಳೆಯುವುವು. ಇವು ಸಮಕಾಲೀನ ರಾಜಕಾರಣದ ಸ್ಥಿತಿಗತಿಗಳು, ಅವು ಸಮಾಜದೊಂದಿಗೆ ಹೊಂದಿರುವ ಸಂಪರ್ಕಗಳ ಸ್ಥೂಲ ಚಿತ್ರಣವನ್ನು ನೀಡುವುವು.

> ಹಿಂದಿಬ್ಬರು ಮುಂದಿಬ್ಬರು ರಾಜಭಟರ ನಡುವೆ
> ನಡೆದಾಗ ದೊಡ್ಡ ಗೇಟು ತೆರುಗುದುತ್ತದೆ.
> ಒಂದು ಮೂಲೆಗೆ ಗಾಂಧಿ. ಇನ್ನೊಂದು ಮೂಲೆಗೆ ನೆಹರೂ.
> ಗೋಡೆಯ ತುಂಬ ಮತ್ತೊಬ್ಬ ಗಾಂಧಿಯ ಅಮರ ಸಂದೇಶ.
> ...
> ಮತ್ತೆ ರಾಜಭಟರ ನಡುವೆ ಅತಿಥಿಗೃಹಕ್ಕೆ ಪ್ರವೇಶ.
> ಸಣ್ಣ ಸರಳಿನ ಬಾಗಿಲು ಸರಳವಾಗಿ ತೆರೆದು ಸರಳವಾಗಿ ಮುಚ್ಚುತ್ತದೆ(ಪಾಟೀಲ ೨೦೧೧: ೨೯)

ಈ ಸಾಲುಗಳಲ್ಲಿ ತುರ್ತುಪರಿಸ್ಥಿತಿಯ ವಿರುದ್ಧ ಪ್ರತಿಭಟಿಸಿ ಸೆರೆವಾಸ ಅನುಭವಿಸಿದವರ ನೋವು, ವ್ಯವಸ್ಥೆಯ ವ್ಯಂಗ್ಯವನ್ನು ಕಾಣಬಹುದು. ತುರ್ತುಪರಿಸ್ಥಿತಿ ಮತ್ತು ನಂತರದಲ್ಲಿ(೧೯೮೦ರವರೆಗೆ) ಪೊಲೀಸು, ಬಂಧನ, ಸೆರೆವಾಸದ ಅನುಭವಗಳು ಸಮಕಾಲೀನ ಸಾಹಿತ್ಯ ಕೃತಿಗಳಲ್ಲಿ ಅಧಿಕವಾಗಿದೆ. ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳಲ್ಲಿ ತೊಡಗಿಕೊಂಡಿದ್ದ ಬುದ್ಧಿಜೀವಿಗಳು, ಪತ್ರಕರ್ತರು, ರಾಜಕಾರಣಿಗಳು ಈ ಕೃತಿಗಳನ್ನು ರಚಿಸಿದವರು. ಪ್ರತಿಭಟನಾಕಾರರ ಹೋರಾಟದ ಹಂತ ಹಾಗೂ ಸರ್ಕಾರದ ಪ್ರತಿಕ್ರಿಯೆಗಳನ್ನು ಸ್ವಾತಂತ್ರ್ಯ ಹೋರಾಟದೊಡನೆ ಸಮೀಕರಿಸುವುದು ಸಾಮಾನ್ಯವಾಗಿರುವ ಲಕ್ಷಣ. ಸ್ವಾತಂತ್ರ್ಯ ಹೋರಾಟದ ನಂತರದಲ್ಲಿ ಜೈಲು ಸಾಹಿತ್ಯ ಹೆಚ್ಚು ರಚಿತಗೊಂಡಿರುವುದು ಈ ಕಾಲಘಟ್ಟದಲ್ಲಿ. ಅನೇಕ ರೀತಿಯ ಜೈಲಿನ ಅನುಭವಗಳ ಕಥನಗಳನ್ನು ರಾಷ್ಟ್ರಾದ್ಯಂತ ಕಾಣಬಹುದು. ರಾಷ್ಟ್ರೀಯ ವಲಯದಲ್ಲಿ ಕಂಡುಬಂದ ಕೆಲವು ಪ್ರಮುಖ ಜೈಲು ಸಾಹಿತ್ಯಗಳೆಂದರೆ[೧೩] *ಪ್ರಿಸನ್ ಡೈರಿ(೧೯೮೩), ಎ ಪ್ರಿಸನರ್ಸ್ ಸ್ಕ್ರ್ಯಾಪ್ ಬುಕ್(೨೦೦೨), ಇನ್ ಜೈಲ್ (೧೯೭೮), ದಿ ಸ್ಟೋರಿ ಆಫ್ ಮೈ ಲೈಫ್: ದಿ ಎಮರ್ಜೆನ್ಸಿ, ಮೈ ಲೈಫ್ ಇನ್ ಪ್ರಿಸನ್(೧೯೭೯)* ಕೃತಿಗಳು ಇಂಗ್ಲಿಶ್ ಭಾಷೆಯಲ್ಲಿವೆ. ಪ್ರಮುಖ ರಾಜಕೀಯ ನಾಯಕರು ಹಾಗೂ ಪತ್ರಕರ್ತರ ಅನುಭವಗಳಾಗಿದ್ದು, ಕೆಲವು ಕೃತಿಗಳು ಇತರ ಭಾಷೆಗಳಿಗೆ ಅನುವಾದಗೊಂಡಿವೆ. ಹಿಂದಿ, ರಾಜಸ್ಥಾನಿ ಮೊದಲಾದ ಭಾಷೆಗಳಲ್ಲಿ ಕಂಡುಬಂದ ಕೆಲವು ಜೈಲಿನ ದಿನಚರಿಗಳು ಹೀಗಿವೆ: *ಆಪತ್ಕಾಲ್ ಕೆ ಉನ್ನೀಸ್ ಮಹೀನೆ: ಮೇರಿ ಜೇಲ್ ದಿನಚರಿ: ಆಪತ್ಕಾಲ್ ಮೆ ದಿಲ್ಲಿ ವ ಅಂಬಾಲ ಜೇಲ್ ಕಿ ಕಹಾನಿ ತಥಾ ತತ್ಕಾಲೀನ್ ರಾಜನೀತಿ ಕ ಸಜೀವ್ ಚಿತ್ರ(೧೯೭೯), ಅಂಧೇರ್ ಕೆ ಅಧ್ಯಾಯ್(೧೯೭೯), ಜೇಲ್ ಔರ್ ಸ್ವತಂತ್ರ್ಯ(೧೯೭೮), ಏಕ್ ಮುಖ್ಯಮಂತ್ರಿ ಕಿ ಜೇಲ್ ಡೇರಿ(೧೯೭೭), ಮೇರಿ ಜೇಲ್ ಡೇರಿ(೧೯೭೭)* ಮುಂತಾದವು.[೧೪] ಇವು ರಾಜಕಾರಣ ಮತ್ತು ಅಧಿಕಾರದ ನೆಲೆಯಲ್ಲಿ ರಾಜಕೀಯ ಖೈದಿಗಳ ಜೈಲಿನ ಅನುಭವಗಳಾಗಿವೆ. ಕೊನೆಯ ಎರಡು ಕೃತಿಗಳು ವ್ಯಕ್ತಿ ವಾಚಕಗಳಾಗಿದ್ದು, ಇದರ ಕರ್ತೃಗಳಾದ ಶಾಂತಕುಮಾರ್ ಮತ್ತು ಚಂದ್ರಶೇಖರ್ ರಾಜಕಾರಣದ ಮುಖ್ಯವಾಹಿನಿಯಲ್ಲಿ ಗುರುತಿಸಿಕೊಂಡವರಾಗಿದ್ದರು.

ಸಮಕಾಲೀನ ಕರ್ನಾಟಕದಲ್ಲಿ ಎರಡು ಜೈಲು ಕೃತಿಗಳನ್ನು ನೋಡಬಹುದು. ಎ *ಪ್ರಿಸನ್ ಡೈರಿ(೧೯೭೭)* ಸ್ನೇಹಲತಾ ರೆಡ್ಡಿ ಅವರು ಜೈಲಿನಲ್ಲಿ ಬರೆದ ನೋವು, ನಿರಾಸೆ ಭಾವನೆಗಳ ಟಿಪ್ಪಣಿ ಆಗಿದೆ. ಅವರ ಸಾವಿನ ನಂತರ ಮಾನವ ಹಕ್ಕುಗಳ ಸಮಿತಿ ಪ್ರಕಟಿಸಿದ ಕೃತಿಯಿದು. ಚಂದ್ರಶೇಖರ ಪಾಟೀಲರ *೨೬ ದಿನ ೨೫ ರಾತ್ರಿ(೨೦೧೧)*[೧೫] ಕೃತಿಯು 'ಜೈಲಿನ ಅನುಭವಗಳ ಟಿಪ್ಪಣಿಯಲ್ಲ. ಅನಿರೀಕ್ಷಿತ, ಅನಪೇಕ್ಷಿತ ಅನುಭವದ ಕಾಲಾಂತರದ ನೆನಪುಗಳ ಮೂಲಕ ಮಾನವೀಯ ಮೌಲ್ಯ, ವೈಪರಿತ್ಯಗಳ ಲಹರಿ' ಎಂದು ಲೇಖಕರೆ ಹೇಳಿರುವರು. ಆಡಳಿತ ವ್ಯವಸ್ಥೆಯ ವಿರುದ್ಧದ ಪ್ರತಿಭಟನೆ, ಸೆರೆವಾಸದಲ್ಲಿ ಕಂಡ ಮಾನವೀಯ ಸಂಬಂಧಗಳು ಮತ್ತು ಸಾಮಾಜಿಕ ಸ್ಥಿತಿಗತಿಗಳ ಐತಿಹಾಸಿಕ ದಾಖಲೆಯಾಗಿದೆ. ಅಲ್ಲದೇ ರಾಜಕೀಯ, ಸಾಮಾಜಿಕ ನೆಲೆಗಳಲ್ಲಿ ವ್ಯಕ್ತಿಯ ಜೀವನದ ವೈಯಕ್ತಿಕ ಹಾಗೂ ಸಾರ್ವತ್ರಿಕ ಭಾವನೆ, ಘಟನೆಗಳ ದಾಖಲೆಗಳೂ ಆಗಿವೆ.

'ತುರ್ತುಪರಿಸ್ಥಿತಿ' ಸಾಹಿತ್ಯದ ವಿವಿಧ ಪ್ರಕಾರದ ಬರವಣಿಗೆಗಳ ಮೇಲೂ ಪ್ರಭಾವ ಬೀರಿದೆ. ಈ ನಿಟ್ಟಿನಲ್ಲಿ ಪ್ರಮುಖ ಕವನ ಸಂಕಲನಗಳೆಂದರೆ *ಅಂಕುರ(೧೯೮೧)*, *ಕೊಲ್ಲಿಲೆ ಸಾಯಲ್(೧೯೭೯)*, *ಜೂನ್ ೭೫ ಮಾರ್ಚ್ ೭೭(೨೦೧೧)*, *ಬಿಡುಗಡೆ(೧೯೭೮)*, *ಕಲಬೆರಕೆ(೧೯೭೮)*, *ಪರಿಸ್ಥಿತಿಯ ೨೦ ಮತ್ತು ೫ ಕವಿತೆ(೧೯೭೭)*, *ಕಪ್ಪು ಜನರ ಕೆಂಪು ಕಾವ್ಯ(೧೯೭೭)*, *ಆಪತ್ಕಾಲೀನ ಕವಿತೆಗಳು(೧೯೭೭)* ಮೊದಲಾದವು. ಇವುಗಳಲ್ಲಿ ಆಕ್ರೋಶ, ಅಸಹನೆ, ವ್ಯಂಗ್ಯ ಮತ್ತು ಅಸಹಾಯಕತೆ ಹೆಚ್ಚಾಗಿ ಪ್ರಕಟಗೊಂಡಿದೆ. ಸ್ವಾತಂತ್ರ್ಯ, ಗಾಂಧಿ, ಪ್ರಜಾಪ್ರಭುತ್ವ, ಇಂದಿರಾ ಗಾಂಧಿ, ಸರ್ಕಾರದ ಕಾಯ್ದೆ ಮೊದಲಾದವು ಪ್ರಮುಖ ವಸ್ತುಗಳಾಗಿವೆ. ಈ ಬಗೆಯ ಸಂವೇದನಾ ಅಭಿವ್ಯಕ್ತಿಯನ್ನು ಇತರ ಭಾಷಾ ಪ್ರದೇಶದ ಸಾಹಿತ್ಯಗಳಲ್ಲಿಯೂ ಗುರುತಿಸಬಹುದು. ಉದಾಹರಣೆಗೆ, ವಂಶಿರವರ *ಕಾಲಾ ಇತಿಹಾಸ್: ಆಪತ್ಕಾಲೀನ ಸಂದರ್ಭ್ ಮೇ ರಚಿತ್ ಕವಿತಾವೊ ಕಾ ಐತಿಹಾಸಿಕ ದಾಸ್ತಾವೇಜ್(೧೯೭೭, ಹಿಂದಿ)*. ಇವೆಲ್ಲವು ಸಮಾಜದ ಕೆಲವು ವಲಯಗಳ ಸಂವೇದನೆಯನ್ನು ಬಿಂಬಿಸುವುದು. ಸಾಹಿತ್ಯದ ಅಧ್ಯಯನದಲ್ಲಿ ಪ್ರತ್ಯೇಕವಾಗಿ ತುರ್ತುಪರಿಸ್ಥಿತಿ ಕಾಲದ ಸಾಹಿತ್ಯವೆಂದು ಗುರುತಿಸಲಾಗುವುದು. ಆದರೆ ಸಾಹಿತ್ಯಿಕ ಪಂಥಗಳಲ್ಲಿ ಇದರ ಪ್ರಸ್ತಾವನೆ ಕಂಡುಬಾರದಿರುವುದು ಚಿಂತನಾರ್ಹ. ಹಾಗೆಯೇ ಹೆಚ್ಚು ಪ್ರಭಾವಿತವಾಗಿರುವ ಇತರ ಸಾಹಿತ್ಯಿಕ ಪ್ರಕಾರಗಳೆಂದರೆ ನಾಟಕ, ಬೀದಿ ನಾಟಕ, ಕಾದಂಬರಿಗಳು. ಈ ನಿಟ್ಟಿನಲ್ಲಿ *ಕ್ರಾಂತಿಕೂಟ(೧೯೭೫)*, *ಟ್ವೆಂಟಿಯತ್ ಮಾರ್ಚ್ ನೈನ್ಟೀನ್‌ಸೆವೆಂಟಿ ಸೆವನ್ ಎ ಡೆ ಲೈಕ್ ಎನಿ ಆದರ್(೧೯೭೮)*, *ಮಿಡ್‌ನೈಟ್ಸ್ ಚಿಲ್ಡ್ರನ್(೧೯೮೧)*, *ದಿ ಷಂಡ್(೨೦೦೮)*, *ಎ ಫೈನ್ ಬ್ಯಾಲೆನ್ಸ್(೧೯೯೫)*, *ಇಂಡಿಯಾ: ಎ ವೂಡೆಂಡ್ ಸಿವಿಲೈಜೇಷನ್(೨೦೦೩)* ಮತ್ತು *ಕತ್ರಾ ದಿ ಅರ್ಜೂನ್(೨೦೦೨)* ನೋಡಬಹುದು. ಈ ಕುರಿತು ಪ್ರಸ್ತುತ ಅಧ್ಯಯನದ ಮೂರು ಮತ್ತು ನಾಲ್ಕನೆ ಅಧ್ಯಾಯದಲ್ಲಿ ಚರ್ಚಿಸಲಾಗುತ್ತದೆ.

ತುರ್ತುಪರಿಸ್ಥಿತಿ ಕಾಲದ ಆಡಳಿತ, ರಾಜಕಾರಣ, ಅತಿರೇಕ, ಅಧಿಕಾರ ದುರ್ಬಳಕೆ ಕುರಿತು ನೂರಾರು ಕೃತಿಗಳು ರಾಷ್ಟ್ರದಾದ್ಯಂತ ಅನೇಕ ಭಾಷೆಗಳಲ್ಲಿ ಪ್ರಕಟವಾಗಿವೆ. ಹಿಂದಿ ಹಾಗೂ ಇಂಗ್ಲಿಶ್‌ನಲ್ಲಿ ಕೃತಿಗಳು ಹೆಚ್ಚು ಪ್ರಕಟವಾಗಿದ್ದು, ಮುಖ್ಯವಾಹಿನಿಯಲ್ಲಿ ನಡೆದ ತುರ್ತುಪರಿಸ್ಥಿತಿ ವಿರೋಧಿ ಹೋರಾಟಗಳನ್ನು ಪ್ರತಿನಿಧಿಸುವುದು. ಪ್ರಾದೇಶಿಕ ಭಾಷಾ ನೆಲೆಯಲ್ಲಿ ಇತರ ಭಾಷಾ ಕೃತಿಗಳಲ್ಲಿಯೂ ಇದರ ಛಾಯೆ ಕಾಣಬಹುದು. ಈ ಕೃತಿಗಳಲ್ಲಿ[೧೬] ಸಮೂಹ ಮಾಧ್ಯಮ, ಚುನಾವಣೆ, ಭೂಗತ ಹೋರಾಟ, ಕ್ರಾಂತಿ, ಇಂದಿರಾ ಗಾಂಧಿ, ಸಂಜಯ್ ಗಾಂಧಿ, ಪೊಲೀಸ್ ದೌರ್ಜನ್ಯ, ಭಾರತದ ಮರು ಸ್ವಾತಂತ್ರ್ಯ, ಪ್ರಜಾಪ್ರಭುತ್ವ ಮತ್ತು ಇಂದಿರಾ ಗಾಂಧಿ, ತುರ್ತು ಪರಿಸ್ಥಿತಿ ಕಾಲದಲ್ಲಾದ ಆರ್ಥಿಕ, ಸಾಮಾಜಿಕ, ಸಂವಿಧಾನಿಕ ಬದಲಾವಣೆ ಮೊದಲಾದ ವಿಷಯಗಳನ್ನು ಒಳಗೊಂಡಿದೆ. ತುರ್ತುಪರಿಸ್ಥಿತಿ ವಿರೋಧಿ ಕವನ ಸಂಕಲನಗಳಲ್ಲಿ ಕಂಡುಬರುವ ಲಕ್ಷಣಗಳೇ ಈ ಕೃತಿಗಳಲ್ಲಿಯೂ ಕಾಣಬಹುದು. ಅಂಕಿಅಂಶಗಳ ಮತ್ತು ಇತರ ದಾಖಲೆಗಳ ಮೂಲಕ ಘಟನೆಗಳ ವಿವರಣೆಗೆ ಖಚಿತತೆ ನೀಡುವ, ಜನರ ಕ್ರಾಂತಿ, ಸ್ವಾತಂತ್ರ್ಯ ಹರಣ, ಭೂಗತ ಹೋರಾಟಗಳ ರೋಮಾಂಚನಕಾರಿ ಹಾಗೂ ಪೊಲೀಸ್ ವ್ಯವಸ್ಥೆಯ ಭಯಂಕರ ಕೃತ್ಯಗಳು ಮೊದಲಾದವುಗಳ ವಿವರಣಾತ್ಮಕ ವಿವರಣೆಗಳಾಗಿರುವುವು. ಇಂತಹ ಕೃತಿಗಳನ್ನು ರಚಿಸಿದವರು ಹೆಚ್ಚಾಗಿ ಪತ್ರಕರ್ತರು,

ವಕೀಲರು, ರಾಜಕೀಯ ಸಂಘಟನೆಗಳೊಂದಿಗೆ ಸಂಪರ್ಕ ಹೊಂದಿರುವವರು. ಸಮಾಜ ಮತ್ತು ರಾಜಕಾರಣದ ನಡುವಿನ ಸಂಬಂಧಗಳ ಕುರಿತ, ಅಂದಿನ ರಾಜಕಾರಣ ಬಗೆಗಿನ ಕೆಲವು ವಲಯದ ಅಭಿಮತಗಳ ಮೇಲಷ್ಟೇ ಬೆಳಕು ಚೆಲ್ಲುವುದು. ಇಂತಹ ಕೃತಿಗಳು ೧೯೭೭ ರಿಂದ ೧೯೮೦ರವರೆಗೆ ಹೆಚ್ಚಾಗಿದ್ದು, ನಂತರ ಬಂದ ಕೃತಿಗಳಲ್ಲಿ ತುರ್ತುಪರಿಸ್ಥಿತಿ ಕಾಲಘಟ್ಟ ಭಿನ್ನ ಸ್ವರೂಪಗಳಲ್ಲಿ ಕಂಡುಬರುವುವು. ಅವುಗಳ ಕುರಿತ ಅಧ್ಯಯನ ಉಪಯುಕ್ತವಾಗಿದೆ.

### ೧.೨.೩. ಇತ್ತೀಚಿನ ಬರವಣಿಗೆಗಳು: ಚರಿತ್ರೆ ಮತ್ತು ತುರ್ತುಪರಿಸ್ಥಿತಿ(೧೯೯೦-೨೦೧೩)

ಆಂತರಿಕ ತುರ್ತುಪರಿಸ್ಥಿತಿ ಜಾರಿಯನ್ನು ರದ್ದುಗೊಳಿಸಿ ಸುಮಾರು ೩೬ ವರ್ಷಗಳು ಕಳೆದಿವೆ. ಈಗಾಗಲೇ ಚರ್ಚಿಸಿರುವಂತೆ ಸಮಕಾಲೀನ ರಾಜಕೀಯ ಸ್ಥಿತ್ಯಂತರ ನೂರಾರು ಕೃತಿಗಳ ರಚನೆಗೆ ಪ್ರೇರಣೆಯಾಯಿತು. ೧೯೮೦ರ ನಂತರದಲ್ಲಿ ಈ ಬಗೆಯ ಕೃತಿಗಳ ರಚನೆ ಕಡಿಮೆಯಾದಂತೆ ಮೇಲ್ನೋಟಕ್ಕೆ ಕಂಡುಬರುವುದು. ಇಲ್ಲಿ ೧೯೯೦ರ ನಂತರದಿಂದ ಪ್ರಸ್ತುತದವರೆಗೆ ಪ್ರಕಟವಾಗಿರುವ ಬರವಣಿಗೆಗಳನ್ನು ಚರಿತ್ರೆಯ ಭಾಗ ಮತ್ತು ತುರ್ತುಪರಿಸ್ಥಿತಿ ಕಾಲಘಟ್ಟವಾಗಿ ಚರ್ಚಿಸಲು ಪ್ರಯತ್ನಿಸಲಾಗಿದೆ.

ಚರಿತ್ರೆ ಬರವಣಿಗೆಗಳಲ್ಲಿ ತುರ್ತುಪರಿಸ್ಥಿತಿ ಕಾಲಘಟ್ಟ ಚರಿತ್ರೆ ಮತ್ತು ರಾಜಕಾರಣದ ನೆಲೆಗಟ್ಟಿನಲ್ಲಿ ಸಾಮಾನ್ಯವಾಗಿ ಚರ್ಚೆಗೊಳಗಾಗುವುದು. ೧೯೯೦ರ ನಂತರ ಪ್ರಕಟಗೊಂಡ ಆತ್ಮ ಚರಿತ್ರೆ, ಜೀವನ ಚರಿತ್ರೆ ಮತ್ತು ಸ್ವಾತಂತ್ರ್ಯೋತ್ತರ ಭಾರತದ ಚರಿತ್ರೆಗಳಲ್ಲಿ ತುರ್ತುಪರಿಸ್ಥಿತಿಯ ವಿವಿಧ ಆಯಾಮಗಳು ಆರಂಭಿಕ ಕೃತಿಗಳಿಗಿಂತ ಭಿನ್ನವಾಗಿವೆ. ಆತ್ಮಚರಿತ್ರೆ ಮತ್ತು ಜೀವನ ಚರಿತ್ರೆಗಳಲ್ಲಿ ವ್ಯಕ್ತಿಯ ಜೀವನದಲ್ಲಿ ತುರ್ತುಪರಿಸ್ಥಿತಿ ಭಾಗವಾಗಿರುವುದು. ಕಾಲಾಂತರದ ರಾಜಕೀಯ ಬದಲಾವಣೆಗಳ ನೆಲೆಯಲ್ಲಿ ಪ್ರಸ್ತುತ ಕಾಲದ ಸಮಸ್ಯೆಗಳು ಮತ್ತು ತುರ್ತುಪರಿಸ್ಥಿತಿಯ ಹೊರಳು ನೋಟವಾಗಿರುವುದು.[೨೨] ಆತ್ಮಚರಿತ್ರೆಗಳಲ್ಲಿ ಸ್ವ ವಿಮರ್ಶೆ ಕಂಡರೆ, ಜೀವನ ಚರಿತ್ರೆಗಳಲ್ಲಿ ದಾಖಲಿತ ಮಾಹಿತಿಗಳ ಮೂಲಕ ಮರು ದಾಖಲೀಕರಣ ಮತ್ತು ವಿಮರ್ಶೆ ಕಾಣಬಹುದು. ಈ ವ್ಯಕ್ತಿಗಳು ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನಕಾರರು ಅಥವಾ ಆಡಳಿತದಲ್ಲಿ ತೊಡಗಿದ್ದವರು. ಸ್ವಾತಂತ್ರ್ಯ ನಂತರದ ಭಾರತದ ಚರಿತ್ರೆ, ರಾಜ್ಯಶಾಸ್ತ್ರ ಮುಂತಾದ ಭಿನ್ನ ಜ್ಞಾನಶಾಖೆಯ ಕೃತಿಗಳಲ್ಲಿ ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆ ಮತ್ತು ರಾಜಕಾರಣದಲ್ಲಿನ ಸಂಕೀರ್ಣ ಕಾಲಘಟ್ಟವಾಗಿ ತುರ್ತುಪರಿಸ್ಥಿತಿಯನ್ನು ನೋಡಲಾಗುವುದು. ಸಾಮಾನ್ಯವಾಗಿ ವ್ಯಕ್ತಿ ರಾಜಕಾರಣದ ನೆಲೆಯಲ್ಲಿ ಇಂದಿರಾ ಗಾಂಧಿ ಅವರ ಆಡಳಿತ ಕಾಲದ ಭಾಗವಾಗಿ ಚರ್ಚಿಸಲಾಗುವುದು. ಇದಕ್ಕೆ ಪೂರಕವಾಗಿ *ಇಂಡಿಯಾ ಆಫ್ಟರ್ ಇಂಡಿಪೆಂಡೆನ್ಸ್(೨೦೦೦), ಇಂಡಿಯಾ ಫಿಫ್ಟಿ ಇಯರ್ಸ್ ಆಫ್ ಇಂಡಿಪೆಂಡೆನ್ಸ್(೧೯೯೭), ಇಂಡಿಯಾ ಆಫ್ಟರ್ ಗಾಂಧಿ: ದಿ ಹಿಸ್ಟರಿ ಆಫ್ ದಿ ವರ್ಡ್ ಲಾರ್ಜೆಸ್ಟ್ ಡೆಮಾಕ್ರಸಿ(೨೦೧೧)*[೨೩] ಮುಂತಾದವನ್ನು ಕಾಣಬಹುದು. ಈ ಕೃತಿಗಳ ಬರವಣಿಗೆಯ ಒಲವು ಯಾವುದೆ ಆದರೂ ಸ್ವಾತಂತ್ರ್ಯೋತ್ತರ ಆಡಳಿತವನ್ನು ನೆಹರು ಕಾಲಘಟ್ಟ, ಇಂದಿರಾ ಕಾಲಘಟ್ಟ ಎಂಬ ಶೀರ್ಷಿಕೆಗಳಲ್ಲಿ ವ್ಯಕ್ತಿ ನೆಲೆಯಲ್ಲಿಯೇ ಬಹುಪಾಲು ಗುರುತಿಸಲಾಗುವುದು. ನಂತರದ ಕಾಲವನ್ನು ಪ್ರಾದೇಶಿಕ ರಾಜಕಾರಣದ ನಿಟ್ಟಿನಲ್ಲಿ ಗುರುತಿಸಲಾಗುವುದು. ಎಂಬುದು ಗಮನ ಸೆಳೆಯುವುದು. ಈ ಕಾಲದ ನಂತರ ಪಕ್ಷ ರಾಜಕಾರಣ ಹಾಗೂ ಪ್ರಸ್ತುತ ಹೊಂದಿರುವ ಪಕ್ಷದ ಸ್ಥಾನಮಾನದ ಏರುಪೇರುಗಳ ನೆಲೆಯಲ್ಲಿ ವಿಶ್ಲೇಷಣೆ 'ರಾಜಕೀಯ ಪಕ್ಷ'ಗಳ ಕುರಿತ ಕೃತಿಗಳಲ್ಲಿ ಕಂಡುಬರುವುದು. ಇದರಲ್ಲಿ ಪ್ರಜಾಪ್ರಭುತ್ವ ಸಿದ್ಧಾಂತ ಹಾಗೂ ಆಡಳಿತ ಪದ್ಧತಿ, ಸ್ವಾತಂತ್ರ್ಯೋತ್ತರ ಭಾರತದ ರಾಜಕಾರಣ, ಜನರ ಪ್ರಜಾಪ್ರಭುತ್ವ ಗ್ರಹಿಕೆಗಳು, ಪ್ರಸ್ತುತ ಸಮಸ್ಯೆಗಳ ನೆಲೆಗಳಲ್ಲಿ ತುರ್ತುಪರಿಸ್ಥಿತಿಯನ್ನು ಕೇಂದ್ರವಾಗಿ ಅಥವಾ ಪ್ರಮುಖವಾಗಿ ಚರ್ಚಿಸಲಾಗುವುದು. ಉದಾಹರಣೆಗೆ, *ದಿ ಥಿಂಕಿಂಗ್ ಡೆಮಾಕ್ರಸಿ (೨೦೦೫), ಇಂಡಿಯನ್ ಡೆಮಾಕ್ರಸಿ: ಮೀನಿಂಗ್ ಅಂಡ್ ಪ್ರ್ಯಾಕ್ಟೀಸಸ್(೨೦೦೪)* ಮೊದಲಾದವನ್ನು ಹೆಸರಿಸಬಹುದು. ಕರ್ನಾಟಕಕ್ಕೆ ಸಂಬಂಧಿಸಿದ ಕೃತಿಗಳಲ್ಲಿಯೂ ಇದರ ಛಾಯೆ ಇದೆ. ಈ ದಿಸೆಯಲ್ಲಿ *ಕರ್ನಾಟಕ ರಾಜಕೀಯ ಚಿಂತನೆ(೨೦೦೩), ಭಾರತೀಯ ಸಮಾಜವಾದದ ಹೆಜ್ಜೆ ಗುರುತುಗಳು(೧೯೭೯)*

ಮೊದಲಾದವನ್ನು ಕಾಣಬಹುದು. ಕರ್ನಾಟಕಕ್ಕೆ ಸಂಬಂಧಿಸಿದ ಬರವಣಿಗೆಗಳನ್ನು ಗಮನಿಸಿದರೆ ಇಂಗ್ಲಿಷ್ ಭಾಷೆಯಲ್ಲಿ ರಾಜ್ಯಶಾಸ್ತ್ರ, ಸಮಾಜಶಾಸ್ತ್ರ, ಅರ್ಥಶಾಸ್ತ್ರದ ಚೌಕಟ್ಟಿನಲ್ಲಿ ಅಧಿಕವಾಗಿ ಕೃತಿಗಳನ್ನು ಕಾಣಬಹುದು.

ತುರ್ತುಪರಿಸ್ಥಿತಿ ಕಾಲ ಕುರಿತಂತೆ ಪ್ರಸ್ತುತದವರೆಗೂ ಅನೇಕ ಬರವಣಿಗೆಗಳು ವಿಭಿನ್ನ ನೆಲೆಗಳಲ್ಲಿ ರಚಿತವಾಗುತ್ತಲೆ ಇವೆ. ಇವುಗಳಲ್ಲಿ ತುರ್ತುಪರಿಸ್ಥಿತಿಯ ನೆನಪು, ಜನರ ಧ್ವನಿ, ಪ್ರಾತಿನಿಧಿಕ ಪ್ರಜಾಪ್ರಭುತ್ವದ ಸಮಸ್ಯೆಗಳು, ಜೆ.ಪಿ. ಚಳವಳಿಯ ಸಮಕಾಲೀನ ರಾಜಕಾರಣ, ಪ್ರತಿಭಟನೆ ಮತ್ತು ಪರಿಣಾಮಗಳ ವಿಮರ್ಶೆಯನ್ನು ಕಾಣಬಹುದು. 'ತುರ್ತುಪರಿಸ್ಥಿತಿ ನೆನಪುಗಳು ಪ್ರಸ್ತುತ ಅಧಿಕಾರಕ್ಕೆ ಸಂಪೂರ್ಣ ವಿರೋಧ ವ್ಯಕ್ತಪಡಿಸುತ್ತಿಲ್ಲ, ನಿಯಂತ್ರಣಕ್ಕೂ ಒಳಪಡದೆ ಪ್ರಾಯೋಗಿಕ ಲಕ್ಷಣವನ್ನು ಹೊಂದಿದೆ. ಅಪ್ರಜ್ಞಾಪೂರ್ವಕವಾದ ಸಾಮೂಹಿಕ ವಿಮರ್ಶೆಯನ್ನು ವ್ಯಕ್ತಪಡಿಸುವುದು' ಎಂಬ ನಿಲುವು *ಅನ್‌ಸೆಟ್ಲಿಂಗ್ ಮೆಮೊರಿಸ್: ನರೇಟಿವ್ಸ್ ಆಫ್ ಇಂಡಿಯನ್ ಎಮರ್ಜೆನ್ಸಿ ಇನ್ ದಿ ಡೆಲ್ಲಿ(೨೦೦೩)* ಕೃತಿಯಲ್ಲಿ ಕಂಡುಬರುವುದು. 'ತುರ್ತುಪರಿಸ್ಥಿತಿ ಅಧಿಕಾರ ಶಾಹಿತ್ವದೊಡನೆ ನಡೆದ ಚೆಲ್ಲಾಟವಾಗಿತ್ತು. ತೀವ್ರವಾದ ಫ್ಯಾಸಿಸ್ಟ್ ಅಥವಾ ನಿರಂಕುಶ ಅಧಿಕಾರದ ಮೂಲಕ ಹೊಸ ಆಡಳಿತ ಅರಂಭಿಸುವುದಾಗಿರಲಿಲ್ಲ. ಆದರ ಮುಖ್ಯ ಉದ್ದೇಶ ಯತಾಸ್ಥಿತಿ ರಕ್ಷಿಸುವುದು. ಆದರೆ ಜೆ.ಪಿ. ಚಳವಳಿ ಅಥವಾ ತುರ್ತುಪರಿಸ್ಥಿತಿ ಭಾರತೀಯ ರಾಜಕಾರಣ ಅಥವಾ ಆರ್ಥಿಕತೆಯ ರಚನಾ ಸ್ವರೂಪದ ಕುರಿತು ಒಲವುಗಳನ್ನು ಹೊಂದಿರಲಿಲ್ಲ; ಇದು ಅತಿಶಯವಾದುದು' ಎಂಬುದು *ಇನ್ ದ ನೇಮ್ ಆಫ್ ಡೆಮಾಕ್ರಸಿ: ಜೆ.ಪಿ. ಮೂವ್‌ಮೆಂಟ್ ಅಂಡ್ ಎಮರ್ಜೆನ್ಸಿ(೨೦೦೩)* ಕೃತಿಯ ಕೇಂದ್ರ ವಿಚಾರವಾಗಿದೆ. ಜಯಪ್ರಕಾಶ್ ನಾರಾಯಣ ಅವರ ರಾಜಕೀಯ ಜೀವನದ ಅಪರಿಪೂರ್ಣ ಕ್ರಾಂತಿಯಾಗಿ ಜೆ.ಪಿ. ಚಳವಳಿ ಹಾಗೂ ತುರ್ತುಪರಿಸ್ಥಿತಿ ಕಾಲಘಟ್ಟದ ವಿಮರ್ಶೆಯನ್ನು *ಅನ್‌ಫಿನಿಷ್ಡ್ ರೆವಲ್ಯೂಷನ್: ಎ ಪೊಲಿಟಿಕಲ್ ಬಯೋಗ್ರಫಿ ಆಫ್ ಜಯಪ್ರಕಾಶ್ ನಾರಾಯಣ್(೨೦೦೪)* ಎಂಬ ಕೃತಿಯಲ್ಲಿ ಕಾಣಬಹುದು. ಭಾರತದ ಪ್ರಜಾಪ್ರಭುತ್ವ, ಎರಡನೆ ಸ್ವಾತಂತ್ರ್ಯ ಹೋರಾಟ ಮತ್ತು ತುರ್ತುಪರಿಸ್ಥಿಯ ವಿರೋಧಿ ಹೋರಾಟ ಮುಂತಾದ ವಿಷಯಗಳನ್ನು ಕೇಂದ್ರವಾಗಿ ಅನೇಕ ಕೃತಿಗಳು ಚರ್ಚಿಸಿವೆ. ಉದಾಹರಣೆಗೆ, *ಇಂದಿರಾ ಗಾಂಧಿ – ದಿ ಎಮರ್ಜೆನ್ಸಿ ಅಂಡ್ ಇಂಡಿಯನ್ ಡೆಮಾಕ್ರಸಿ(೨೦೦೦), ಇಂಡಿಯಾಸ್ ಸೆಕೆಂಡ್ ಫ್ರೀಡಂ: ಅನ್‌ಟೋಲ್ಡ್ ಸಾಗ(೨೦೦೪), ದಿ ಪೀಪಲ್ ವರ್ಸಸ್ ಎಮರ್ಜೆನ್ಸಿ: ಎ ಸಾಗಾ ಆಫ್ ಸ್ಟ್ರಗಲ್(೧೯೯೧), ಸ್ಟೇಟ್ ಆಫ್ ಎಮರ್ಜೆನ್ಸಿ: ದಿ ಇಂಡಿಯನ್ ಎಕ್ಸ್‌ಪೀರಿಯನ್ಸ್(೨೦೦೦)* ಇತ್ಯಾದಿ ಕೃತಿಗಳನ್ನು ನೋಡಬಹುದು.

ಸಮಕಾಲೀನವಾಗಿ ಆಡಳಿತ ಪಕ್ಷದ ಪರವಿದ್ದು, ತುರ್ತುಪರಿಸ್ಥಿತಿ ಕಾಲಘಟ್ಟ ಕುರಿತು ರಚಿಸಿರುವ ಮತ್ತೊಂದು ಬಗೆಯ ಕೃತಿಗಳಿವೆ. ಈ ದಿಸೆಯಲ್ಲಿ ವೈ ಐ *ಸಪೋರ್ಟೆಡ್ ಎಮರ್ಜೆನ್ಸಿ: ಎಸ್ಸೇಸ್ ಅಂಡ್ ಪ್ರೊಫೈಲ್(೨೦೦೯), ಆಪತ್‌ಸ್ಥಿತಿಯ ಆಲಾಪಗಳು: ತುರ್ತುಪರಿಸ್ಥಿತಿಯ ಮರು ಅವಲೋಕನ(೨೦೧೩)* ಮೊದಲಾದವು ಗಮನಸೆಳೆಯುತ್ತವೆ. ಆಪತ್‌ಸ್ಥಿತಿಯ ಆಲಾಪಗಳಲ್ಲಿ ತುರ್ತುಪರಿಸ್ಥಿತಿ ಜಾರಿಯ ಅಗತ್ಯ, ಅನಗತ್ಯ, ಸಮಕಾಲೀನ ರಾಜಕಾರಣದ ವಿಮರ್ಶೆ ಕಂಡುಬರುತ್ತದೆ. ಕೃತಿಯ ಹಲವು ಭಾಗಗಳಲ್ಲಿ ಪ್ರಸ್ತುತ ರಾಜಕಾರಣದ ಪ್ರಭಾವ ಮೇಲ್ನೋಟಕ್ಕೆ ಗುರುತಿಸಬಹುದು. ತುರ್ತುಪರಿಸ್ಥಿತಿ ನೆನಪುಗಳನ್ನು ನಿರೂಪಿಸುವ ಕನ್ನಡ ಭಾಷೆಯ ಪ್ರಮುಖ ಕೃತಿ ತುರ್ತುಪರಿಸ್ಥಿತಿಯ ಕರಾಳ ಮುಖ(೨೦೦೭). ಇದು ಈಚರ್ ವಾರಿಯರ್ ರಚಿಸಿರುವ ಒರು *ಅಚ್ಚಂತೆ ಒರುಮಾಕಲ್(ಮಲೆಯಾಳಿ, ೨೦೦೪)*[೧೯] ಪುಸ್ತಕದ ಕನ್ನಡ ಅನುವಾದ. ಸಮಕಾಲೀನವಾಗಿ ಪ್ರಸಿದ್ಧವಾಗಿದ್ದ ಕೇರಳದ ರಾಜನ್ ಕೇಸ್, ಆತನ ತಂದೆಯ ಹುಡುಕಾಟ ಮತ್ತು ಹೋರಾಟದ ಕಥೆಯಾಗಿದೆ. ಜೊತೆಗೆ ಆತ್ಮಚರಿತ್ರೆಯಂತೆಯೂ ಕಂಡುಬರುವುದು. ಇದರ ಇಂಗ್ಲಿಷ್ ಅನುವಾದ *ಮೆಮೋರಿಸ್ ಆಫ್ ಎ ಫಾದರ್(೨೦೦೪)* ಏಷ್ಯನ್ ಹ್ಯೂಮನ್ ರೈಟ್ಸ್ ಕಮಿಷನ್ ಪ್ರಕಟಿಸಿದೆ. ಇದೇ ಕೃತಿ *ನಾನ್ನ ರಾಜನ್ ತಂಡ್ರಿ ಅನ್ವೇಷಣ(೨೦೦೫)* ಎಂದು ತೆಲುಗಿಗೂ, ತೆಲುಗಿನಿಂದ ಕನ್ನಡಕ್ಕೆ *ಹುಡುಕಾಟ ಕಳೆದುಹೋದ ಮಗನಿಗಾಗಿ ತಂದೆಯೊಬ್ಬನ ತಲ್ಲಣವೆಂದು(೨೦೧೨)* ಅನುವಾದವಾಗಿದೆ. ಕನ್ನಡದ ಅನುವಾದಗಳಲ್ಲಿ ಸಾರಾ ಅಬೂಬ್‌ಕರ್‌ರ ಕೃತಿ ಉತ್ತಮವಾಗಿದೆ. ಸುಜ್ಞಾನಮೂರ್ತಿ ಅವರು ಈ ಕೃತಿಯನ್ನು ಗಮನಿಸಿದಂತೆ ಕಂಡುಬರುವುದಿಲ್ಲ. ಕೃತಿಯ ಅಂತ್ಯದಲ್ಲಿ 'ತುರ್ತುಪರಿಸ್ಥಿತಿಯ ಕಪ್ಪು ಕೈಗಳು ಇನ್ನೂ ನಾಶವಾಗಿಲ್ಲ. ಅವುಗಳನ್ನು ಹುತ್ತದೊಳಗೆ ಅಡಗಿಸಲಾಗಿದೆ. ಅವಕಾಶ ದೊರೆತರೆ ಅವು ಮತ್ತೊಮ್ಮೆ

ತಲೆ ಎತ್ತುತ್ತವೆ ... ಇನ್ನೂ ಇಂತಹ ಘಟನೆ ಇಂಡಿಯಾ ದೇಶದಲ್ಲಿ ನಡೆಯಬಾರದು. ಆ ಒಂದು ಗುರಿಗಾಗಿ ಈವರೆಗೆ ನಾನು ಪ್ರಯತ್ನಿಸಿದೆ' ಎಂದಿದೆ. ಇಂಥ ಆಶಯಗಳನ್ನು, ಈ ರೀತಿಯ ಅನೇಕ ಕೃತಿಗಳಲ್ಲಿ ಕಾಣಬಹುದು. ಆರಂಭಿಕ ಬರಹಗಳು ಮತ್ತು ಇತ್ತೀಚಿನ ಬರಹಗಳೆರಡರಲ್ಲಿಯೂ ಪ್ರಜಾಪ್ರಭುತ್ವ, ಮಾನವೀಯತೆ, ಸ್ವಾತಂತ್ರ್ಯ ಹಾಗೂ ನಂತರದ ರಾಜಕೀಯ ಬೆಳವಣಿಗೆಗಳ ನೆಲೆಗಳಲ್ಲಿ ತುರ್ತುಪರಿಸ್ಥಿತಿಯ ಪರಿಣಾಮಗಳ ವಿಮರ್ಶೆ ಚರ್ಚೆಗೊಳಗಾಗುವ ಪ್ರಮುಖ ವಸ್ತುಗಳು. ಆದರೆ ಆರಂಭಿಕ ಬರವಣಿಗೆಗಳಲ್ಲಿ ಸುದ್ದಿಪತ್ರಿಕೆಗಳ ರೀತಿಯ ಬರವಣಿಗೆಗಳು ಹೆಚ್ಚಿದ್ದು, ಸತ್ಯಶೋಧದಂತೆ ಘಟನೆಗಳನ್ನು ನೋಡಲಾಗಿದೆ. ಆಕ್ರೋಶ, ಭಾವೋದ್ವೇಗ, ದಮನಿತವಾಗಿದ್ದ ಸುಪ್ತ ಪ್ರತಿಭಟನಾ ಮನೋಭಾವದ ಆಸ್ಫೋಟದಂತೆ ಕಂಡುಬರುವುದು.

*** *** ***

ಆಂತರಿಕ ತುರ್ತುಪರಿಸ್ಥಿತಿ ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆಯಲ್ಲಿ ಸ್ಥಿತ್ಯಂತರ ಹಾಗೂ ನಿರ್ಣಾಯಕವಾದ ಕಾಲಘಟ್ಟವಾಗಿದ್ದು, ಸಂಕೀರ್ಣವಾಗಿದೆ. ತುರ್ತುಪರಿಸ್ಥಿತಿ ಕಾಲಘಟ್ಟ ಮತ್ತು ಅದರ ಪರಿಣಾಮಗಳು ರಾಷ್ಟ್ರಾದ್ಯಂತ ಏಕರೂಪವಾಗಿ ಕಂಡುಬರುವುದಿಲ್ಲ. ರಾಜ್ಯದಿಂದ ರಾಜ್ಯಕ್ಕೆ ವಿಭಿನ್ನವಾಗಿದ್ದು, ಹಲವು ಹಂತ ಮತ್ತು ವಲಯಗಳಲ್ಲಿ ಕಾಣುವುದು. ಇವು ಪ್ರಾದೇಶಿಕವಾಗಿದ್ದ ಇತರ ಸಮಸ್ಯೆಗಳು, ಅವುಗಳಿಗೆ ದೊರೆತ ಸ್ಪಂದನೆ ರಾಜಕಾರಣ ಮತ್ತು ಇತರ ಹೋರಾಟಗಳಿಂದ ಹೆಚ್ಚು ಪ್ರಭಾವಿತವಾಗಿವೆ. ಸಮಕಾಲೀನವಾಗಿದ್ದ ಇತರ ಹೋರಾಟಗಳು ಹಾಗೂ ಸರ್ಕಾರದ ಪ್ರಕ್ರಿಯೆಗಳು ತುರ್ತುಪರಿಸ್ಥಿತಿ ಕುರಿತ ಅಧ್ಯಯನಗಳಲ್ಲಿ ಅಧಿಕವಾಗಿ ಕಂಡುಬರುವುದಿಲ್ಲ. ಈ ಎಲ್ಲ ಪ್ರತಿಭಟನೆ, ಹೋರಾಟ, ಚಳವಳಿಗಳ ನಡುವೆ ಇರುವ ಸಂಬಂಧ ಮತ್ತು ಪ್ರತಿಕ್ರಿಯೆಗಳ ಸಂಶ್ಲೇಷಣಾತ್ಮಕ ನೋಟದ ಚಿಂತನೆಯ ಅಗತ್ಯವಿದೆ. ಇವುಗಳ ಕೇಂದ್ರ ಬಿಂದು 'ಪ್ರಜಾಪ್ರಭುತ್ವ ಮತ್ತು ಅದರ ಗ್ರಹಿಕೆ'ಗಳು. ಇಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆ ಮತ್ತು ಅದರ ಗ್ರಹಿಕೆಗಳು, ೧೯೭೦ರ ದಶಕದ ಇತರ ಹೋರಾಟಗಳ ನೆಲೆಗಳಲ್ಲಿ ತುರ್ತುಪರಿಸ್ಥಿತಿಗೆ ಕರ್ನಾಟಕದಲ್ಲಿ ಕಂಡುಬಂದ ಪ್ರತಿಕ್ರಿಯೆಗಳನ್ನು ಅಧ್ಯಯನ ಮಾಡಲಾಗಿದೆ. ತುರ್ತುಪರಿಸ್ಥಿತಿಯನ್ನು ೧೯೭೦ರ ದಶಕದ ಭಾಗವಾಗಿ ಮತ್ತು ವಿಶಿಷ್ಟ ಕಾಲವಾಗಿ ಸಂಶ್ಲೇಷಣಾತ್ಮಕ ಮತ್ತು ವಿಶ್ಲೇಷಣಾತ್ಮಕ ಅಧ್ಯಯನ ಮಾಡುವುದು ಇಲ್ಲಿನ ಮುಖ್ಯ ಉದ್ದೇಶ. ಈ ಮೂಲಕ ಪ್ರಾದೇಶಿಕ, ಪಕ್ಷ ಮತ್ತು ವ್ಯಕ್ತಿ ರಾಜಕಾರಣದ ಚೌಕಟ್ಟಿನಲ್ಲಿ ಕರ್ನಾಟಕ ರಾಜಕಾರಣವನ್ನು ಇತರ ರಾಜ್ಯಗಳೊಂದಿಗೆ ಸಮೀಕರಿಸಿ ಚರ್ಚಿಸಲಾಗಿದೆ. ಈ ದಿಸೆಯಲ್ಲಿ ಮೂರು ಹಂತಗಳಲ್ಲಿ ವಿಮರ್ಶಿಸಲಾಗಿದೆ. ಎರಡನೇ ಅಧ್ಯಾಯದಲ್ಲಿ ೧೯೭೦ರ ದಶಕದ ರಾಜಕಾರಣವನ್ನು ಮೂರು ನೆಲೆಗಳಲ್ಲಿ ವಿಂಗಡಿಸಿ ಚರ್ಚಿಸಿದೆ. ಮುಖ್ಯಮಂತ್ರಿಯಾಗಿ ದೇವರಾಜ ಅರಸು, ಭೂ ಸುಧಾರಣಾ ಕಾಯ್ದೆ ಜಾರಿ ಮತ್ತು ಹಾವನೂರು ವರದಿ ಜಾರಿ ಹಿನ್ನೆಲೆಯಲ್ಲಿ ೧೯೭೦ರ ದಶಕದ ರಾಜಕೀಯ ಮತ್ತು ಸಾಮಾಜಿಕ ನೆಲೆಗಳ ಸಮಗ್ರ ಅವಲೋಕನ ಮಾಡಲಾಗಿದೆ. ಇದರೊಡನೆ ೧೯೭೦ರ ದಶಕದ ಭಾಗವಾಗಿ ತುರ್ತುಪರಿಸ್ಥಿತಿಯನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ. ೧೯೭೫ರಿಂದ ೧೯೭೭ರವರೆಗಿದ್ದ ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳ ಸ್ವರೂಪ ಮತ್ತು ಪ್ರಕ್ರಿಯೆಯನ್ನು ಅರಿಯಲು ಪೂರ್ವಭಾವಿ ಚೌಕಟ್ಟನ್ನು ಒದಗಿಸುತ್ತದೆ. ನಂತರ ಮೂರನೇ ಅಧ್ಯಾಯದಲ್ಲಿ ತುರ್ತುಪರಿಸ್ಥಿತಿ ವಿರೋಧಿ ನೆಲೆಯಲ್ಲಿ ಕರ್ನಾಟಕದಲ್ಲಿ ಕಂಡುಬಂದ ಸಂವಿಧಾನಾತ್ಮಕ ಮತ್ತು ಭೂಗತ ಪ್ರತಿಭಟನೆಗಳ ಸ್ವರೂಪ ರೂಪುಗೊಂಡ ಪ್ರಕ್ರಿಯೆಗಳನ್ನು, ಇತರ ರಾಜ್ಯಗಳೊಂದಿಗೆ ಸಮೀಕರಿಸಿ ವಿಮರ್ಶಿಸಲು ಪ್ರಯತ್ನಿಸಲಾಗಿದೆ. ತುರ್ತುಪರಿಸ್ಥಿತಿ ನಂತರದ ಕರ್ನಾಟಕ ರಾಜಕಾರಣವನ್ನು ಪ್ರಾದೇಶಿಕ, ಪಕ್ಷ ಮತ್ತು ವ್ಯಕ್ತಿ ರಾಜಕಾರಣದ ನೆಲೆಗಳಲ್ಲಿ ರಾಜಕೀಯ ಮತ್ತು ಸಮೂಹ ಮಾಧ್ಯಮಗಳನ್ನು ನಾಲ್ಕನೆಯ ಅಧ್ಯಾಯದಲ್ಲಿ ಪರಾಮರ್ಶಿಸಿದೆ. ಐದನೆಯ ಅಧ್ಯಾಯದಲ್ಲಿ ಸಂಪ್ರಬಂಧದ ಸಂಶ್ಲೇಷಣಾತ್ಮಕ ನೋಟವನ್ನು ಚಿಂತಿಸಲು ಪ್ರಯತ್ನಿಸಲಾಗಿದೆ.

## ಟಿಪ್ಪಣಿ

೧. ಕರ್ನಾಟಕ ಶಾಸಕಾಂಗದ ಮಂತ್ರಿಗಳ ಜಾತಿವಾರು ಪಟ್ಟಿಯನ್ನು ಮಿನಿಸ್ಟ್ರೀಸ್ ಆಫ್ ಲೆಜಿಸ್ಲೇಟಿವ್ ಅಸೆಂಬ್ಲಿ ಎಂಬ ಕೃತಿಯನ್ನು ಆಧರಿಸಿ ಪಟ್ಟಿ ಸಿದ್ಧಪಡಿಸಲಾಗಿದೆ.

೨. ಅನುಶಾಸನ ಪರ್ವ ಎಂದರೆ ಶಿಸ್ತುಬದ್ಧವಾದ, ನಿರ್ದೇಶನದಂತೆ ನಡೆಯುವ ಕಾಲ ಎಂದರ್ಥವಿದೆ. ಮಹಾಭಾರತದ ಈ ಪರ್ವದಲ್ಲಿ ಯುದ್ಧ ಕೊನೆಗೊಂಡಿದ್ದು ಧರ್ಮ ಅಧರ್ಮಗಳ ಚರ್ಚೆ, ಧರ್ಮದ ವಿಜಯ ಹಾಗೂ ಭೀಷ್ಮನ ಇಚ್ಛಾ ಮರಣ ಕುರಿತ ವಿಚಾರಗಳು ಇಲ್ಲಿ ಪ್ರಮುಖವಾಗಿವೆ.

೩. ೧೯೭೮ರಲ್ಲಿ ಗ್ರಂಥ್ ಕೇಂದ್ರದಿಂದ ಪ್ರಕಟವಾದ ಕನ್ಹಯ್ಯ ಸಿಂಹ್ ಅವರ ಅಂಧೇರ್ ಕೆ ಅಧ್ಯಾಯ್ ಕೃತಿಯಲ್ಲಿ ತುರ್ತುಪರಿಸ್ಥಿತಿಯನ್ನು ಕತ್ತಲ ಕಾಲ ಎಂದು ಕರೆದಿದ್ದಾರೆ.

೪. ಭಾರತದ ಸಂವಿಧಾನದಲ್ಲಿ ರಾಷ್ಟ್ರದ ರಕ್ಷಣಾ ಭದ್ರತೆಯ ಅಸ್ತಿತ್ವಕ್ಕೆ ಧಕ್ಕೆಯಾದರೆ ಅಥವಾ ರಾಷ್ಟ್ರದ ಯಾವುದಾದರೂ ಒಂದು ಭಾಗ ಯುದ್ಧದ ಭೀತಿ ಎದುರಿಸುತ್ತಿದ್ದರೆ ಅಥವಾ ಹೊರಗಿನಿಂದ ಆಕ್ರಮಣವಾದರೆ ಅಥವಾ ಸಶಸ್ತ್ರ ದಂಗೆ ಅಥವಾ ಹೋರಾಟ ನಡೆದರೆ ಆ ಸಂದರ್ಭದಲ್ಲಿ ವಿಧಿ ೩೫೨ರ ಪ್ರಕಾರ ರಾಷ್ಟ್ರಪತಿ ರಾಷ್ಟ್ರೀಯ ತುರ್ತುಪರಿಸ್ಥಿತಿ ಘೋಷಿಸಬಹುದು. ತುರ್ತುಪರಿಸ್ಥಿತಿ ಘೋಷಣೆಯ ಅಧಿಕಾರವನ್ನು ವಿಸ್ತರಿಸುತ್ತ ಸಂವಿಧಾನದಲ್ಲಿ ರಾಷ್ಟ್ರಪತಿ ಹೊರಗಿನಿಂದ ಆಕ್ರಮಣ ಅಥವಾ ಶಸ್ತ್ರ ಹೋರಾಟ ನಡೆಯುವ ಸಂಭಾವ್ಯತೆಯನ್ನು ಮುಂಚೂಣಿಯಾಗಿ ಗುರುತಿಸಿದಾಗಲೂ ರಾಷ್ಟ್ರೀಯ ತುರ್ತುಪರಿಸ್ಥಿತಿ ಘೋಷಿಸಬಹುದು. ಆದರೆ ಪ್ರಧಾನಮಂತ್ರಿ ಮತ್ತು ಕ್ಯಾಬಿನೆಟ್ ಮಂತ್ರಿಗಳು ಈ ಕುರಿತು ಶಿಫಾರಸ್ಸು ಮಾಡಿ ಲಿಖಿತ ರೂಪದಲ್ಲಿ ಕೊಟ್ಟರೆ ತುರ್ತುಪರಿಸ್ಥಿತಿ ಘೋಷಣೆ ಮಾತ್ರ ಅವಕಾಶ ನೀಡಲಾಗಿದೆ. ಇದು ತುರ್ತುಪರಿಸ್ಥಿತಿಯೋತ್ತರದಲ್ಲಿ ಆಂತರಿಕ ತುರ್ತುಪರಿಸ್ಥಿತಿ ಜಾರಿಗೊಳಿಸಲು ಇರುವ ನಿಯಮವಾಗಿದೆ.

೫. ರಾಜಕೀಯ ನ್ಯಾಯ(political justice) ಎಂದರೆ ರಾಜಕೀಯ ವಲಯದಲ್ಲಿ ವ್ಯಕ್ತಿ ವ್ಯಕ್ತಿಗಳ ನಡುವೆ ಯಾವುದೇ ಕಟ್ಟುಪಾಡಿನ ಅಂತರವಿಲ್ಲದಿರುವುದು. ಈ ನಿಟ್ಟಿನಲ್ಲಿ ಭಾರತದ ಸಂವಿಧಾನ ರಾಜಕೀಯ ನ್ಯಾಯವನ್ನು ಉಳಿಸುವ ಉದ್ದೇಶದಿಂದ ಸಾರ್ವತ್ರಿಕ ವಯಸ್ಕ ಮತದಾನವನ್ನು ಅಳವಡಿಸಿಕೊಂಡಿದೆ.

೬. ಸಂವಿಧಾನದಲ್ಲಿ ಮೂಲಭೂತ ಹಕ್ಕುಗಳ ಕುರಿತು ವಿಧಿ ೧೪ರಿಂದ ೩೨ರವರೆಗೆ ಸುದೀರ್ಘ ಚರ್ಚೆಯನ್ನು ನೋಡಬಹುದು. ಇವು ನಾಗರಿಕರಿಗೆ ಸ್ವತಂತ್ರ ಮತ್ತು ಸಂತೋಷಕರ ಜೀವನ ನಡೆಯಲು ಭದ್ರತೆ ಒದಗಿಸುವುದು. ಜೊತೆಗೆ ನ್ಯಾಯಾಂಗದಿಂದ ಅನುಮೋದಿತವಾಗಿದೆಯಾದರೂ ಪರಿಪೂರ್ಣವಾಗಿಲ್ಲದೆ, ಮಿತಿಗಳನ್ನು ಹೊಂದಿದೆ.

೭. ಇಂಡೋನೇಷಿಯ, ದಕ್ಷಿಣ ಕೊರಿಯ ಮತ್ತು ಫಿಲಿಪ್ಪೈನ್ಸ್ ಮತ್ತಿತರ ದೇಶಗಳು. ಅಲ್ಲದೆ ಪಾಕಿಸ್ತಾನ, ಬಾಂಗ್ಲ, ಶ್ರೀಲಂಕಾ ಮತ್ತಿತರ ರಾಷ್ಟ್ರಗಳಲ್ಲಿ ರಾಜಕೀಯ ವ್ಯವಸ್ಥೆ ವಿರುದ್ಧ ತೀವ್ರ ಪ್ರತಿಭಟನೆಗಳು, ರಾಜಕೀಯ ಸ್ಥಿತ್ಯಂತರಗಳನ್ನು ಕಾಣಬಹುದು.

೮. ಕಲಾವಿದರು ಮತ್ತು ಬರಹಗಾರರ ಒಕ್ಕೂಟವನ್ನು ಕೆ.ಎಂ.ಶಂಕರಪ್ಪ ಆರಂಭಿಸಿದವರು. ಆರಂಭದಲ್ಲಿ ಎಲ್ಲೆಡೆ ಓಡಾಡಿ ಸಂಘಟಿಸಿದವರು. ೧೯೭೪ರ ನಂತರ ಇದು ಹೆಚ್ಚು ಪ್ರಸಿದ್ಧಿ ಪಡೆಯಿತು.

೯. ಡಿಫೆನ್ಸ್ ಆಫ್ ಡೆಮಾಕ್ರಟಿಕ್ ರೈಟ್ಸ್ ಎಂಬ ಸಂಸ್ಥೆಯೊಂದು ರಾಷ್ಟ್ರವ್ಯಾಪ್ತಿಯ ರಾಜಕೀಯ ಸ್ಥಿತಿಗತಿ, ಸರ್ಕಾರದ ಧೋರಣೆಗಳ ವಿರುದ್ಧ ಸಹಿ ಶಿಬಿರ ನಡೆಸಿದ ಕುರಿತು ೧೯೭೫ ಜನವರಿ ೧೧ರ ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿಯಲ್ಲಿ ಪ್ರಕಟವಾದ ಸಂಪಾದಕೀಯ ಪತ್ರದಿಂದ ತಿಳಿದುಬರುವುದು.

೧೦. ಕರ್ನಾಟಕ ನವನಿರ್ಮಾಣ ಕ್ರಾಂತಿ ಕರ್ನಾಟಕದಲ್ಲಿ ಕೆಲವು ಸಮಾಜವಾದಿಗಳು ಜೆ.ಪಿ. ಚಳವಳಿ ಅಂಗವಾಗಿ ಆರಂಭಿಸಿದ ಶಾಖೆ. ಕರ್ನಾಟಕದಲ್ಲಿ ಸಮಾಜವಾದಿ ಯುವಜನ ಸಭಾ ಇದರ ನೇತೃತ್ವವನ್ನು ವಹಿಸಿತ್ತು.

೧೧. ತುರ್ತುಪರಿಸ್ಥಿತಿ ವಿರುದ್ಧ ನಡೆದ ಪ್ರತಿಭಟನೆಗಳನ್ನು ಎರಡನೆ ಸ್ವಾತಂತ್ರ್ಯ ಆಂದೋಲನ ಎನ್ನಲಾಗುವುದು. ಹಾಗೆ ಇತ್ತೀಚೆಗೆ ನಡೆದ ಅಣ್ಣಾಹಜಾರೆ ನೇತೃತ್ವದ ಭ್ರಷ್ಟಾಚಾರ ವಿರೋಧಿ ಹೋರಾಟವನ್ನು ಎರಡನೆ ಸ್ವಾತಂತ್ರ್ಯ ಆಂದೋಲನ ಎಂದು ಮಾಧ್ಯಮಗಳು ಕರೆದಿದ್ದು ಚಿಂತನಾರ್ಹ.

೧೨. ಜಯಪ್ರಕಾಶ್ ನಾರಾಯಣ್, ಇಂದಿರಾ ಗಾಂಧಿ, ಮೊರಾರ್ಜಿ ದೇಸಾಯಿ ಮತ್ತಿತರರ ಕುರಿತು ಹಲವಾರು ಅಧ್ಯಯನಗಳು ಭಾರತದ ಅನೇಕ ಭಾಷೆಗಳಲ್ಲಾಗಿವೆ. ಅವನ್ನು ಇಲ್ಲಿ ಉಲ್ಲೇಖಿಸುತ್ತಿಲ್ಲ. ಕರ್ನಾಟಕದಲ್ಲಿ ನಡೆದಿರುವ ಅಧ್ಯಯನಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಲಾಗಿದೆ.

೧೩. ಇಲ್ಲಿ ಉಲ್ಲೇಖಿಸಿರುವ ಕೃತಿಗಳನ್ನು ಕ್ರಮವಾಗಿ ಜಯಪ್ರಕಾಶ್ ನಾರಾಯಣ್, ಅಡ್ವಾನಿ.ಎಲ್.ಕೆ., ಕುಲದೀಪ್ ನಯ್ಯರ್, ಮೊರಾರ್ಜಿ ದೇಸಾಯಿ ಅವರು ಬರೆದಿದ್ದಾರೆ.

೧೪. ಇಲ್ಲಿ ಉಲ್ಲೇಖಿಸಿರುವ ಕೃತಿಗಳನ್ನು ಕ್ರಮವಾಗಿ ಪ್ರಶಾಂತ್ ಕುಮಾರ್, ಕನ್ಹಯ್ಯ ಸಿಂಹ್, ರಘುವಂಶ್, ಶಾಂತ ಕುಮಾರ್, ಚಂದ್ರಶೇಖರ್ ಅವರು ಬರೆದಿದ್ದಾರೆ.

೧೫. ಇದು ಮೊದಲಿಗೆ ಸಂಕ್ರಮಣ ಪತ್ರಿಕೆಯಲ್ಲಿ ಹಲವು ಸಂಚಿಕೆಗಳಲ್ಲಿ ಪ್ರಕಟಗೊಂಡಿತ್ತು. ನಂತರ ೧೯೭೮ರಲ್ಲಿ ಮೊದಲ ಬಾರಿಗೆ ಪ್ರಕಟಗೊಂಡಿತು.

೧೬. ಉದಾಹರಣೆಗೆ, *ದಿ ಪ್ರೆಸ್ ಷಿ ಕುಡ್ ನಾಟ್ ಷ್ಟಿಪ್: ಎಮರ್ಜೆನ್ಸಿ ಇನ್ ಇಂಡಿಯಾ ಆಸ್ ರಿಪೋರ್ಟೆಡ್ ಬೈ ಫಾರಿನ್ ಪ್ರೆಸ್(೧೯೭೭), ಡಿಕ್ಲೈನ್ ಅಂಡ್ ಫಾಲ್ ಆಫ್ ದಿ ಇಂದಿರಾ ಗಾಂಧಿ: ನೈನ್‌ಟೀನ್ ಮಂತ್ಸ್ ಆಫ್ ಎಮರ್ಜೆನ್ಸಿ(೧೯೭೭), ದಿ ಎಮರ್ಜೆನ್ಸಿ ಅಂಡ್ ಕಾನ್ಸಿಟಿಟ್ಯೂಟಲ್ ಚೇಂಜ್ ಇನ್ ಇಂಡಿಯಾ(೧೯೭೭), ದಿ ಜಡ್ಜ್‌ಮೆಂಟ್ ಸ್ಟೋರಿ ಆಫ್ ದಿ ಎಮರ್ಜೆನ್ಸಿ ಇನ್ ಇಂಡಿಯಾ(೧೯೭೭), ರೆವಲ್ಯೂಷನ್ ತ್ರೂ ಬ್ಯಾಲೆಟ್: ಇಂಡಿಯಾ, ಜನವರಿ–ಮಾರ್ಚ್, ೧೯೭೭(೧೯೭೭), ಆಲ್ ದ ಪ್ರೈಮ್ ಮಿನಿಸ್ಟರ್ ಮೆನ್(೧೯೭೭), ಬ್ಲ್ಯಾಕ್ ವೆಡ್‌ನೆಸ್‌ಡೇ: ಪವರ್ ಪಾಲಿಟಿಕ್ಸ್(೧೯೭೭), ಅಂಡರ್‌ಗ್ರೌಂಡ್ ಲಿಟರೇಚರ್ ಡ್ಯೂರಿಂಗ್ ದಿ ಎಮರ್ಜೆನ್ಸಿ(೧೯೭೮), ಇಂಡಿಯಾಸ್ ಬ್ಯಾಲೆಟ್ ಬಾಕ್ಸ್ ರೆವಲ್ಯೂಷನ್(೧೯೭೮), ಮಿಡ್ ನೈಟ್ ನಾಕ್(೧೯೭೮),*

ಇಂದಿರಾ ಗಾಂಧೀಸ್ ಎಮರ್ಜೆನ್ಸ್ ಅಂಡ್ ಸ್ಟೈಲ್(೧೯೭೮), ಆಪತ್ಕಾಲೀನ್ ಅಗ್ನಿಪರೀಕ್ಷ ಔರ್ ರಾಜಸ್ಥಾನ್(೧೯೭೮), ಅಲಹಾಬಾದ್ ಹೈ ಕೋರ್ಟ್ ಟು ಷಾ ಕಮಿಷನ್(೧೯೭೯), ಸ್ಟಾರ್ಮಿ ಡಿಕೇಡ್: ಇಂಡಿಯನ್ ಪಾಲಿಟಿಕ್ಸ್, ೧೯೭೦-೧೯೮೦(೧೯೮೦) ಮೊದಲಾದವು. ಸಮಕಾಲೀನವಾಗಿ ಕನ್ನಡದಲ್ಲಿ ಭುಗಿಲು(೧೯೭೭), ತುರ್ತುಪರಿಸ್ಥಿತಿಯ ದೌರ್ಜನ್ಯಗಳು(೧೯೭೭) ಚರ್ಚಿತ ವಿಚಾರಧಾರೆಗಳಿಗೆ ಪೂರಕವಾಗಿವೆ.

೧೭ ಇದಕ್ಕೆ ಪೂರಕವಾಗಿರುವ ಕೆಲವು ತುರ್ತುಪರಿಸ್ಥಿತಿಯ ಉಲ್ಲೇಖವಿರುವ ಆತ್ಮಚರಿತ್ರೆ ಮತ್ತು ಜೀವನಚರಿತ್ರೆಗಳೆಂದರೆ ಮೈ ಲೈಫ್ ಅಂಡ್ ಪಾಲಿಟಿಕ್ಸ್: ಅನ್ ಆಟೋಬಯೋಗ್ರಫಿ(೨೦೦೦), ನೆನಪಿನ ಸುರುಳಿ ತೆರೆದಾಗ(೧೯೯೮), ಬರೆಯದ ದಿನಚರಿಯ ಮರೆಯದ ಪುಟಗಳು(೨೦೦೩), ನನಸಾಗದ ಕನಸು(೨೦೦೮), ಹುಳಿಮಾವಿನಮರ ಒಂದು ಆತ್ಮ ಕಥನ(೨೦೧೧), ಹೊರಳು ನೋಟ(೨೦೦೬), ತಹ ತಹ(ನನ್ನ ಆತ್ಮಕಥೆ ಜೊತೆಗೆ)(೨೦೦೬), ಸ್ಪೆಸಿಫಿಕೇಷನ್ ಆಫ್ ಬಿಯಾಂಡ್ ದ ಲೈನ್: ಎನ್ ಆಟೋಬಯೋಗ್ರಫಿ(೨೦೧೨), ಮೈ ಕಂಟ್ರಿ ಮೈ ಲೈಫ್(೨೦೦೮), ಇಂದಿರಾ ಗಾಂಧಿ: ಪೊಲಿಟಿಕಲ್ ಲೀಡರ್ ಇನ್ ಇಂಡಿಯಾ (೨೦೦೭), ಪಿ.ಎಂ.ಓ ಡೈರಿ – ಪಿ: ಪ್ರಿಲ್ಯೂಡ್ ಟು ದ ಎಮರ್ಜೆನ್ಸಿ(೨೦೦೩), ಅನ್‌ಫಿನಿಷ್ಡ್ ರೆವಲ್ಯೂಷನ್: ಎ ಪೊಲಿಟಿಕಲ್ ಬಯೋಗ್ರಫಿ ಆಫ್ ಜಯಪ್ರಕಾಶ್ ನಾರಾಯಣ್(೨೦೦೪), ರಾಷ್ಟ್ರರತ್ನ ಕೆಂಗಲ್ ಹನುಮಂತಯ್ಯ ಸಮಗ್ರ ಜೀವನ ಚರಿತ್ರೆ(೨೦೧೧), ಡಿ.ದೇವರಾಜ ಅರಸು(೨೦೦೦), ದೇವರಾಜ್ ಅರಸು-ಒಂದು ಅವಲೋಕನ(೨೦೦೬) ಮೊದಲಾದವು.

೧೮. ಈ ಕೃತಿ ೧೯೪೭ ರಿಂದ ೧೯೬೪ರವರೆಗೆ ನೆಹರೂ ಕಾಲಘಟ್ಟವಾಗಿ, ನಂತರ ೧೯೬೪ ರಿಂದ ೧೯೮೪ರವರೆಗೆ ಕೇಂದ್ರ ಸರ್ಕಾರದ ಹಿನ್ನೆಲೆಯಲ್ಲಿ ನೋಡಿದೆ. ನಂತರ ಪ್ರಾದೇಶಿಕ ರಾಜಕಾರಣ, ಸಾಂಸ್ಕೃತಿಕ ರಾಜಕಾರಣಗಳನ್ನು ಪ್ರಜಾಪ್ರಭುತ್ವದ ನೆಲೆಯಲ್ಲಿ ಚರ್ಚಿಸಿದೆ.

೧೯. ಈ ಕೃತಿಯ ಅನುವಾದಕ ನೀಲನ್ ಅವರ ತಂದೆ ಪಿರವಿ(೧೯೮೮, ಕರುಣ್, ಮಲಯಾಳಿ) ಚಿತ್ರದಲ್ಲಿ ರಾಜನ್ ತಂದೆಯ ಪಾತ್ರ ನಿರ್ವಹಿಸಿದ್ದಾರೆ.

# ಅಧ್ಯಾಯ ೨

## ಸಾಮಾಜಿಕ ಮತ್ತು ಭೂ ಸುಧಾರಣೆಗಳು

ವ್ಯವಸ್ಥೆಯೊಳಗೆ ಉಂಟಾಗುವ ಬದಲಾವಣೆಗಳು ಆಡಳಿತಶಾಹಿ ಹಾಗೂ ಸಮಾಜ ಎರಡರಿಂದಲೂ ಸಾಮಾನ್ಯವಾಗಿ ಪ್ರಭಾವಿತವಾಗಿರುವುದನ್ನು ಕಾಣಬಹುದು. ೧೯೭೦ರ ದಶಕದಲ್ಲಿ ರಾಜಕೀಯ ಮತ್ತು ಸಾಮಾಜಿಕ ನೆಲೆಗಟ್ಟಿನಲ್ಲಿ ಗುರುತರ ಬದಲಾವಣೆಗೆ ಒಳಗಾಯಿತು. ಯುದ್ಧ, ಬರ, ನಿರುದ್ಯೋಗ, ಹಸಿವು ಹಾಗೂ ಇನ್ನಿತರ ಸಮಸ್ಯೆಗಳಿಂದ ಈ ದಶಕದ ಆರ್ಥಿಕತೆ ತೀವ್ರವಾಗಿ ನಲುಗಿತು. ೧೯೭೦ರ ದಶಕದಾದ್ಯಂತ ಕಂಡುಬಂದ ಹಲವಾರು ಬಂದ್, ಹೋರಾಟ, ಚಳವಳಿಗಳು ರಾಜಕೀಯ ಸ್ಥಿತ್ಯಂತರಗಳಿಗೆ ಕಾರಣವಾಯಿತು. ೧೯೭೫ರ ಜೂನ್ ೨೬ರಂದು ಜಾರಿಗೆ ತಂದ ತುರ್ತುಪರಿಸ್ಥಿತಿಯ ಪ್ರಭಾವ ಮತ್ತು ಪರಿಣಾಮಗಳ ಮೇಲೆ ಇವುಗಳು ನಿರ್ಣಾಯಕ ಪಾತ್ರ ನಿರ್ವಹಿಸಿದವು. ಈ ದಿಸೆಯಲ್ಲೇ ರಾಜ್ಯದಿಂದ ರಾಜ್ಯಕ್ಕೆ ಇದರ ಪರಿಣಾಮಗಳು ವಿಭಿನ್ನವಾಗಿದ್ದು, ಹಲವು ವಲಯಗಳಲ್ಲಿ ಕಂಡುಬಂದಿತು. ಇವು ಪ್ರಾದೇಶಿಕ ರಾಜಕಾರಣ ಮತ್ತು ಇತರೆ ಹೋರಾಟಗಳಿಂದ ಹೆಚ್ಚು ಪ್ರಭಾವಕ್ಕೊಳಪಟ್ಟಿತ್ತು. ಈ ಎಲ್ಲ ಹೋರಾಟ ಹಾಗೂ ಚಳವಳಿಗಳ ನಡುವೆ ಇರುವ ಸಂಬಂಧ ಮತ್ತು ಪ್ರತಿಕ್ರಿಯೆಗಳ ಸಂಶ್ಲೇಷಣಾತ್ಮಕ ನೋಟದ ಅಧ್ಯಯನ ನಡೆಸುವುದು ಅಗತ್ಯ. ಈ ದಿಕ್ಕಿನಲ್ಲಿ ೧೯೭೦ರ ದಶಕದ ಕರ್ನಾಟಕದ ರಾಜಕಾರಣ, ಸಮಕಾಲೀನವಾಗಿದ್ದ ಹೋರಾಟಗಳನ್ನು ಹಾಗೂ ಇವುಗಳ ಭಾಗವಾಗಿ ತುರ್ತುಪರಿಸ್ಥಿತಿಯನ್ನು ನೋಡಲು ಈ ಅಧ್ಯಾಯದಲ್ಲಿ ಪ್ರಯತ್ನಿಸಲಾಗಿದೆ. ಈ ಮೂಲಕ ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳ ನೆಲೆಗಳು ಮತ್ತು ಅದರ ಪರಿಣಾಮಗಳ ವಿಸ್ತೃತ ರೂಪಗಳನ್ನು ಗ್ರಹಿಸಲು ಸಾಧ್ಯವಾಗುವುದು. ಈ ದಶಕವನ್ನು ಮೂರು ಪ್ರಮುಖ ಘಟ್ಟಗಳಾಗಿ ನೋಡಲಾಗಿದೆ. ದೇವರಾಜ ಅರಸರ ಕಾಲದಲ್ಲಿ ಕಂಡುಬಂದ ಪ್ರಮುಖ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಘಟ್ಟಗಳನ್ನು ಪರಾಮರ್ಶಿಸಿದೆ. ೧೯೭೪ರಲ್ಲಿ ಜಾರಿಗೆ ಬಂದ ಭೂ ಸುಧಾರಣಾ ಕಾಯ್ದೆಯ ಪರಿಣಾಮಗಳು ರಾಷ್ಟ್ರ ಮತ್ತು ಪ್ರಾದೇಶಿಕ ರಾಜಕಾರಣದಲ್ಲಿ ಪಡೆದುಕೊಂಡ ಸ್ವರೂಪ, ಅವುಗಳ ಪ್ರಕ್ರಿಯೆಗಳನ್ನು ಚರ್ಚಿಸಲು ಎರಡನೇ ಹಂತದಲ್ಲಿ ಪ್ರಯತ್ನಿಸಿದೆ. ಕೊನೆಯದಾಗಿ ಹಾವನೂರು ವರದಿ ಜಾರಿಯನ್ನು ಸಾಮಾಜಿಕ ನ್ಯಾಯ ಮತ್ತು ಮೀಸಲಾತಿ ರಾಜಕಾರಣದ ನೆಲೆಗಳಲ್ಲಿ ವಿಮರ್ಶಿಸಲು ಪ್ರಯತ್ನಿಸಿದೆ. ತುರ್ತುಪರಿಸ್ಥಿತಿ ಕಾಲಘಟ್ಟ ಮತ್ತು ನಂತರದ ರಾಜಕಾರಣದ ಮೇಲೆ ಇದರ ಪರಿಣಾಮ ರೂಪತಳೆದ ಪ್ರಕ್ರಿಯೆಗಳನ್ನು ಸಂಶ್ಲೇಷಣಾತ್ಮಕವಾಗಿ ಅವಲೋಕಿಸುವ ಪ್ರಯತ್ನ ಮಾಡಿದ್ದೇನೆ.

## ತುರ್ತುಪರಿಸ್ಥಿತಿ: ಮುಖ್ಯಮಂತ್ರಿಯಾಗಿ ದೇವರಾಜ ಅರಸು

"ತುರ್ತುಪರಿಸ್ಥಿತಿಯ ಅತಿರೇಕಗಳು ಬೇರೆ ರಾಜ್ಯಗಳಲ್ಲಿ ವಿಜೃಂಭಿಸುತ್ತಿದ್ದಾಗ ಅರಸರು ಅಧಿಕಾರವನ್ನು ಬಡವರ ಕಲ್ಯಾಣಕ್ಕೆ ಬಳಸಿದರು"(ರಾಮಚಂದ್ರಪ್ಪ ೨೦೧೨: ೫೧೮). "ಸಾಮಾಜಿಕ ಮೌನಕ್ರಾಂತಿಯ ಮಾರ್ಗದರ್ಶಿ"(ದಿ ಹಿಂದೂ, ೨೦೦೬). ಈ ಹೇಳಿಕೆಗಳು ಸಮಕಾಲೀನ ಸಕಾರಾತ್ಮಕ ಬದಲಾವಣೆಗಳಿಗೆ ಮುಖ್ಯಮಂತ್ರಿ ಅರಸುರವರನ್ನು ನೇರವಾಗಿ ಹೊಣೆಗಾರರನ್ನಾಗಿಸುವುದು. ಆದರೆ ತುರ್ತುಪರಿಸ್ಥಿತಿ ಮತ್ತು ಅರಸು ಆಡಳಿತ ದುರುಪಯೋಗ ಕುರಿತಂತೆ ಜನತಾ ಸರ್ಕಾರ **ಗ್ರೋವರ್**[1] ಸಮಿತಿ ನೇಮಿಸಿದ್ದನ್ನು ನೋಡಬಹುದು. ಅಧಿಕಾರ ದುರುಪಯೋಗವಾಗಿದೆ ಎಂದು ಈ ಸಮಿತಿ ಮಧ್ಯಂತರ ವರದಿ ನೀಡಿರುವುದು. ಅರಸು ಅವರ ಕುರಿತಂತಿರುವ ಮೇಲಿನ ಅಭಿಪ್ರಾಯವನ್ನು ಪ್ರಶ್ನಿಸುವುದು. ಆದರೆ ೧೯೭೮ರ ಚುನಾವಣೆಯಲ್ಲಿ ಕರ್ನಾಟಕದಲ್ಲಿ ಕಾಂಗ್ರೆಸ್ ಪುನಃ ಆಡಳಿತಕ್ಕೆ ಬರುವುದು ಗಮನ ಸೆಳೆಯುವುದು. ಈ ಸಂದರ್ಭದಲ್ಲಿ ಆಂಧ್ರ ಪ್ರದೇಶ

ದಲ್ಲಿಯೂ ಕಾಂಗ್ರೆಸ್ ಪಕ್ಷ ಅಧಿಕಾರಕ್ಕೆ ಬರುತ್ತದೆಯಾದರೂ ಹಿಂದಿನ ಮುಖ್ಯಮಂತ್ರಿ ವೆಂಗಲ್‌ರಾವ್ ಬದಲಾಗಿ ಚೆನ್ನರೆಡ್ಡಿ ಮುಖ್ಯಮಂತ್ರಿಯಾಗುವ ಮೂಲಕ ನಾಯಕತ್ವ ಬದಲಾಗಿರುವುದನ್ನು ನೋಡಬಹುದು. ಕಾಂಗ್ರೆಸ್ ಪಕ್ಷ ಎರಡೂ ರಾಜ್ಯಗಳಲ್ಲಿಯೂ ಅಧಿಕಾರಕ್ಕೆ ಬಂದರೂ ಪಕ್ಷ ಮತ್ತು ವ್ಯಕ್ತಿ ರಾಜಕಾರಣದ ಸ್ವರೂಪಗಳು ಭಿನ್ನವಾಗಿ ಹೊರಹೊಮ್ಮಿದೆ.

ದೇವರಾಜ ಅರಸು ಅವರ ಆಡಳಿತ ಕುರಿತ ಅಧ್ಯಯನ ಮತ್ತು ಚರ್ಚೆಗಳಲ್ಲಿ ರಾಷ್ಟ್ರೀಯ ರಾಜಕಾರಣ ನಿರ್ಲಕ್ಷ್ಯಕ್ಕೆ ಒಳಗಾಗಿ, ಕರ್ನಾಟಕ ರಾಜಕಾರಣವನ್ನು ಮಾತ್ರ ನೋಡುವ ಪರಿ ಅಧಿಕವಾಗಿದೆ. ರಾಷ್ಟ್ರ ರಾಜಕಾರಣದ ಚೌಕಟ್ಟಿನಲ್ಲಿ ಅರಸರ ಆಡಳಿತದ ಪ್ರಮುಖ ಕಾರ್ಯನೀತಿ ಮತ್ತು ಘಟನೆಗಳನ್ನು, ಮೂರು ಭಿನ್ನ ನೆಲೆಗಳಲ್ಲಿ ನೋಡಲಾಗಿದೆ. ಆರ್ಥಿಕ ಹಿನ್ನೆಲೆಯಲ್ಲಿ ೧೯೭೪ರ ಭೂ ಸುಧಾರಣಾ ಕಾಯ್ದೆ ಮತ್ತು ೨೦ ಅಂಶಗಳ ಜಾರಿಯನ್ನು, ಬೂಸ ಚಳವಳಿ ಮತ್ತು ಹಾವನೂರು ವರದಿ ಸಮಾಜದಲ್ಲಿ ವ್ಯಕ್ತಗೊಂಡ ಸ್ವರೂಪ ಹಾಗೂ ಅದರ ಪರಿಣಾಮಗಳನ್ನು ವಿಮರ್ಶಿಸಲಾಗಿದೆ. ಆಡಳಿತ ಭಾಷೆಯಾಗಿ ಕನ್ನಡವನ್ನು ಜಾರಿಗೆ ತಂದದ್ದು ಮತ್ತು ರಾಜ್ಯಕ್ಕೆ 'ಕರ್ನಾಟಕ' ಎಂದು ಮರು ನಾಮಕರಣ ಮಾಡಿದ್ದನ್ನು ಸಾಂಸ್ಕೃತಿಕ ರಾಜಕಾರಣದ ವಿವಿಧ ನೆಲೆಗಳಲ್ಲಿ ಪರಾಮರ್ಶಿಸಲು ಪ್ರಯತ್ನ ಮಾಡಿದೆ.

### ೨.೧.೧. ಆರ್ಥಿಕ ನೆಲೆಗಟ್ಟು

ಆಂತರಿಕ ತುರ್ತುಪರಿಸ್ಥಿತಿ ಜಾರಿಯ ಮೂಲಕ ಭಾರತದ ರಾಜಕಾರಣ ಹೊಸ ತಿರುವನ್ನು ಪಡೆದಂತೆ ಆರ್ಥಿಕ ನೆಲೆಗಟ್ಟಿನಲ್ಲಿಯೂ ತಿರುವು ಮೂಡಿದುದು ಕಾಣಬರುತ್ತದೆ. ತುರ್ತುಪರಿಸ್ಥಿತಿ ಪೂರ್ವದಲ್ಲಿ ಆರ್ಥಿಕತೆ ದಿನೇ ದಿನೇ ಹದಗೆಡುತ್ತ ಹೋಗಿತ್ತು. ಹಣದುಬ್ಬರ ಬೃಹತ್ ಸಮಸ್ಯೆಯಾಗಿ ನಿಯಂತ್ರಣಕ್ಕೆ ದೊರಕದೆ ವಸ್ತುಗಳ ಬೆಲೆ ಹೆಚ್ಚಾಗಿತ್ತು.

> ೧೯೭೪ರ ಸೆಪ್ಟೆಂಬರ್ ಹೊತ್ತಿಗೆ ಹಣದುಬ್ಬರದ ಒತ್ತಡ ತೀವ್ರತೆ ಪಡೆದುಕೊಂಡಿತ್ತು; ಆಮದು ಮಾಡಿಕೊಳ್ಳುತ್ತಿದ್ದ ಪೆಟ್ರೋಲಿಯಂ ವಸ್ತು ಮತ್ತು ಇತರ ವಸ್ತುಗಳ ಬೆಲೆಯಲ್ಲಾದ ಏರಿಕೆಯು ಸಂಬಳ ಸಂದಾಯ ನಿಯಂತ್ರಣ ಕಳೆದುಕೊಳ್ಳುವಷ್ಟು ಕಟ್ಟಿತ್ತು(ಆರನೇ ಪಂಚವಾರ್ಷಿಕ ಯೋಜನೆ, www.planningcommission.nic.in).

ಇದಕ್ಕೆ ಪೂರಕವಾಗಿ ೧೯೭೩ ರಿಂದ ೧೯೭೪ರವರೆಗೆ ಆಹಾರ ಪದಾರ್ಥ ಮತ್ತು ಕೈಗಾರಿಕೆಗಳ ಕಚ್ಚಾ ಪದಾರ್ಥಗಳ ಬೆಲೆ ಮೂರನೆ ಎರಡರಷ್ಟು ಅಧಿಕಗೊಂಡಿತ್ತು. ಪರಿಣಾಮವಾಗಿ ೧೯೭೪ರ ಕೊನೆ ಹಾಗೂ ೧೯೭೫ರ ಆರಂಭದ ವೇಳೆಗೆ ಬಂದ್, ಮುಷ್ಕರಗಳು ತೀವ್ರಗೊಂಡವು. ಜೆ.ಪಿ. ಚಳವಳಿಗೆ ನಾಂದಿ ಹಾಡಿದ ಗುಜರಾತ್ ವಿದ್ಯಾರ್ಥಿ ಚಳವಳಿಯ ಆರಂಭದ ಸೊಲ್ಲು ಬೆಲೆ ಏರಿಕೆಯ ವಿರುದ್ಧವೇ ಆಗಿತ್ತು. ಇದರ ಜೊತೆಗೆ ತುರ್ತುಪರಿಸ್ಥಿತಿ ಜಾರಿಗೆ ರಾಜ್ಯದಿಂದ ರಾಜ್ಯಕ್ಕೆ ಪ್ರತಿಕ್ರಿಯೆಗಳು ಒಂದೇ ತೆರನಾಗಿರದೆ ಬೇರೆಯಾಗಿದೆ. ಪ್ರಾದೇಶಿಕ ಅಸಮಾನತೆಯ ಪರಿಣಾಮ ಪ್ರಮುಖವಾಗಿ ಕಾರ್ಯನಿರ್ವಹಿಸಿದೆ. ಕರ್ನಾಟಕದ ಆರ್ಥಿಕತೆಯನ್ನು ಗಮನಿಸಿದರೆ

> ಬಡತನ ಮತ್ತು ನಿರುದ್ಯೋಗ ಭಾರತದ ಬಹುದೊಡ್ಡ ಸಮಸ್ಯೆ ಬಡತನದ ವಿರುದ್ಧ ಯುದ್ಧ ಸಾರಲು ನಮಗೆ ಪ್ರತಿ ಔನ್ಸ್ ಶಕ್ತಿಯು ಬೇಕು ... ಸಮಾಜದ ಈ ಸಂಪೂರ್ಣ ರೂಪಾಂತರದ ಮಹತ್ವದ ಬದಲಾವಣೆಯನ್ನು ಆಳವಾಗಿ ಅರ್ಥ ಮಾಡಿಕೊಳ್ಳಬೇಕು ಮತ್ತು ಪ್ರತಿಯೊಬ್ಬರ ಪಾಲ್ಗೊಳ್ಳುವಿಕೆಯು ಸಂಪೂರ್ಣವಾಗಿ ಅವಶ್ಯಕ(ಫೋರ್ಬಡೆ ೧೯೮೩: ೩೧)

ಎಂಬುದು ರಾಜ್ಯದ ಆರ್ಥಿಕತೆಯು ರಾಷ್ಟ್ರದ ಆರ್ಥಿಕತೆಗಿಂತ ಹೊರತಾಗಿರಲಿಲ್ಲ ಎನ್ನುವಂತಿದೆ. ಆದರೆ ಕೆಳಗಿನ ಪಟ್ಟಿ ಭಿನ್ನವಾದ ಚಿತ್ರಣ ಮುಂದಿಡುವುದು.

| ಸಂಖ್ಯೆ | ವರ್ಷ | ರಾಜ್ಯದ ಆದಾಯ (ಕೋಟಿಗಳಲ್ಲಿ) | ತಲಾ ಆದಾಯ (ರೂಪಾಯಿಗಳಲ್ಲಿ) |
|---|---|---|---|
| ೧ | ೧೯೭೧-೧೯೭೨ | ೧.೬೩೨.೧೨ | ೫೪೦.೦೦ |
| ೨ | ೧೯೭೩-೧೯೭೪ | ೨.೬೦೯.೯೦ | ೭೦೪.೦೦ |

ಆಧಾರ: ೫ನೇ ಪಂಚವಾರ್ಷಿಕ ಯೋಜನಾ ಡ್ರಾಫ್ಟ್, ಕರ್ನಾಟಕ ಸರ್ಕಾರ. ಪಟ್ಟಿ ಸಂಖ್ಯೆ: ೪.

ಈ ಮೇಲಿನ ಅಂಕಿ ಅಂಶಗಳಲ್ಲಿ ೧೯೭೧-೧೯೭೨ ರಿಂದ ೧೯೭೩-೧೯೭೪ಕ್ಕೆ ರಾಜ್ಯಾದಾಯ ಮತ್ತು ತಲಾದಾಯಗಳೆರಡು ಹೆಚ್ಚಳಗೊಂಡಿದೆ. ಈ ಹೆಚ್ಚಳ ರಾಷ್ಟ್ರದಲ್ಲಿ ಕಂಡುಬಂದ ಆರ್ಥಿಕ ಸಮಸ್ಯೆ ರಾಜ್ಯವನ್ನು ಅಷ್ಟಾಗಿ ತಟ್ಟಲಿಲ್ಲವೆಂಬಂತೆ ಕಾಣುವುದು. ಇದಕ್ಕೆ ಪೂರಕವಾಗಿ ರಾಜ್ಯದಲ್ಲಿ ೧೯೭೭ರ ಲೋಕಸಭಾ ಚುನಾವಣಾ ಫಲಿತಾಂಶ ಅರಸು ಅವರ ಆಡಳಿತದ ಸಮಾಜೋ-ಆರ್ಥಿಕ ನೀತಿಯಿಂದ ಪ್ರಭಾವಿತವಾಗಿದೆ ಎಂಬ ಅಭಿಪ್ರಾಯವಿದೆ. ಈ ದಿಕ್ಕಿನಲ್ಲಿ ೧೯೭೪ರ ಭೂ ಸುಧಾರಣಾ ಕಾಯ್ದೆ ಮತ್ತು ೨೦ ಅಂಶಗಳ ಕಾರ್ಯಕ್ರಮಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

### ೨.೧.೧.೧. ೧೯೭೪ರ ಭೂ ಸುಧಾರಣಾ ಕಾಯ್ದೆ ಮತ್ತು ಜಾರಿ

೧೯೭೪ರಲ್ಲಿ ಕರ್ನಾಟಕದಲ್ಲಿ ಭೂ ಸುಧಾರಣೆಯ ನವೀನ ಸ್ವರೂಪ ಜಾರಿಗೆ ಬಂದಿತು. ಭೂ ಸುಧಾರಣಾ ಕಾಯ್ದೆ ಕುರಿತ ಅರಸು ಅವರ ಆಡಳಿತ ಕಾಲದ ಚಿಂತನೆ ಮತ್ತು ಅರಸರ ವ್ಯಕ್ತಿತ್ವ ರೂಪಿಸಿರುವುದನ್ನು ಇಲ್ಲಿ ಗಮನಿಸಲಾಗಿದೆ.

ಅರಸು ಆಡಳಿತದ ಪ್ರಮುಖ ನೆನಪುಗಳಲ್ಲೊಂದು ಭೂ ಸುಧಾರಣಾ ಕಾಯ್ದೆ. ಈ ಕಾಯ್ದೆ ಅರಸು ಅವರಿಗೆ ಅಪರಿಮಿತ ಕೀರ್ತಿಯನ್ನು ತಂದುಕೊಟ್ಟಿತು. ಅರಸುರವರ ಕಾರ್ಯಕ್ರಮಗಳಲ್ಲಿ ಭೂ ಸುಧಾರಣಾ ಕಾರ್ಯಕ್ರಮ ಕೇಂದ್ರಬಿಂದುವಾಯಿತು. ಮುಂದಿನ ದಿನಗಳಲ್ಲಿ ಈ ನಿಟ್ಟಿನಲ್ಲಿ 'ಸಾಮಾಜಿಕ ಸಮಸ್ಯೆಗೆ ರಾಜಕೀಯ ತಿರುವು ನೀಡಿದವರು, ಭೂ ಸುಧಾರಣೆಯ ಪಿತಾಮಹ, ರೂವಾರಿ' ಎಂಬುದಾಗಿ ಅರಸು ಅವರನ್ನು ಸ್ಮರಿಸಲಾಗುವುದು. ಇದಕ್ಕೆ ಪೂರಕವಾಗಿ ಕೆಳಗಿನ ಉಲ್ಲೇಖಗಳನ್ನು ನೋಡಬಹುದು.

> ೧೯೭೪ರ ಕಾಯ್ದೆ ಆಗಿನ ಆಡಳಿತ ಪಕ್ಷದ ನೀತಿಗಳಲ್ಲಿ ಮಹತ್ವದ ಅಂಶವೂ ಆಯಿತು. ಅದನ್ನು ರೂಪಿಸಿ, ರೂಢಿಗತ ಮಾಡಿದಾಗ ಕರ್ನಾಟಕದ ಮುಖ್ಯಮಂತ್ರಿಯಾಗಿದ್ದ ಡಿ.ದೇವರಾಜ ಅರಸರು ಇದರಿಂದ ಸಮಾಜದ ಪ್ರಭಾವಶಾಲಿ ವಿಭಾಗಗಳನ್ನು ಧಿಕ್ಕರಿಸಿ ಜನಹಿತ ಕಾರ್ಯಕ್ರಮಗಳನ್ನು ಅನುಸರಿಸಿದ ಒಬ್ಬ ತೀವ್ರವಾದಿ ರಾಜಕಾರಣಿ ಎಂದು ಖ್ಯಾತಿ ಗಳಿಸಿದರು(ರಾಜನ್ ೧೯೮೭: ೧೦).

ಮತ್ತು

> ಹಿಂದಿನ ಎಲ್ಲ ಕಾಯಿದೆಗಳಿಗಿಂತ ಪರಿಣಾಮಕಾರಿಯಾದ್ದದ್ದು, ಹಾಗೂ ಗೇಣಿದಾರರಿಗೆ ಅನುಕೂಲಕರವಾಗಿದ್ದು ದೊಡ್ಡ ಭೂ ಮಾಲಿಕರಿಗೆ ಸ್ವಲ್ಪ ಬಿಸಿ ಮುಟ್ಟಿಸಬಲ್ಲದಾಗಿತ್ತು. ರಾಜ್ಯಾದ್ಯಂತ ತಾಲೂಕಿಗೊಂದರಂತೆ ಭೂ ನ್ಯಾಯ ಮಂಡಲಿಗಳು ನೇಮಿಸಲ್ಪಟ್ಟು, ಈ ಮಂಡಳಿಯ ಶೇಕಡಾ ೬೦ಕ್ಕೂ ಹೆಚ್ಚಿನ ತೀರ್ಮಾನಗಳು ಗೇಣಿದಾರರ ಪರವಾಗಿವೆ(ಚಂದ್ರಶೇಖರ್ ೧೯೮೨: ೧೫).

ಅರಸರ ರಾಜಕೀಯ ಚಾತುರ್ಯ ಮತ್ತು ಸಾಧನೆಗಳಿಗೆ ಭೂ ಸುಧಾರಣೆ ಉದಾಹರಣೆಯಾಗಿದೆ ಎಂಬ ಚರ್ಚೆಗಳನ್ನು ಪ್ರತಿನಿಧಿಸಿದೆ. ಅರಸು ಅವರನ್ನು ಭೂ ಸುಧಾರಣೆ ಜಾರಿಗೊಳಿಸಿದ ಮಹಾನ್ ವ್ಯಕ್ತಿ ಎನ್ನುವ ವರ್ಗಗಳ ಚಿಂತನೆಯ ಮೇಲೆ ಇದು ಬೆಳಕು ಚೆಲ್ಲುತ್ತದೆ.

ಕರ್ನಾಟಕದಲ್ಲಿ ಭೂ ಸುಧಾರಣೆ ಕಾರ್ಯಗತಗೊಂಡ ಸನ್ನಿವೇಶ ಮತ್ತು ಸಮಕಾಲೀನ ರಾಜಕಾರಣದೊಂದಿಗೆ, ಅರಸು ಅವರ ಕಾರ್ಯನೀತಿಯ ಪರಿಣಾಮಗಳನ್ನು ಒಟ್ಟಾಗಿ ಗಮನಿಸಿದಾಗ ಪ್ರಗತಿಪರ ರಾಜಕಾರಣಕ್ಕಿಂತ ಭಿನ್ನ ನೋಟ ಕಂಡುಬರುತ್ತದೆ.

> ಭೂ ಸುಧಾರಣೆಯ ಬಗ್ಗೆ ಅರಸು ಅವರ ನಿಲುವನ್ನು ವಿಶ್ಲೇಷಿಸಿದರೆ ಅವರು ಬಹುಮಟ್ಟಿಗೆ ಅನುಕೂಲಸಿಂಧು ತತ್ವದ ವ್ಯವಹಾರ ಜ್ಞಾನಿಯೆಂಬಂತೆ ತೋರುತ್ತಾರೆ ಹೊರತು ವಿಚಾರಗಳನ್ನು ಮೂಲಭೂತವಾಗಿ ಪರ್ಯಾಲೋಚಿಸಿ ಅದರ ಮೇಲೆ ಕಾರ್ಯನೀತಿಯನ್ನು ರೂಪಿಸಿದವರಾಗಿ ತೋರುವುದಿಲ್ಲ(ರಾಜನ್ ೧೯೮೭: ೯).

ಮತ್ತು

> ಭೂ ಮಂಡಳಿಯ ೬೦ಕ್ಕೂ ಹೆಚ್ಚು ತೀರ್ಮಾನಗಳು ಗೇಣಿದಾರರ ಪರವಾಗಿ ಆಗಿವೆ. ಆದರೆ ಈ ಸುಧಾರಣೆ ಭೂ ಹೀನರಿಗೆ ಲಾಭದಾಯಕವಾಗಲೆ ಇಲ್ಲ ಮತ್ತು ಅರಸರ ಇಚ್ಛೆಯೂ ಇದಾಗಿತ್ತೊ ಇಲ್ಲವೊ ಹೇಳಲ್ಲಿಕ್ಕಾಗದು(ಚಂದ್ರಶೇಖರ್ ೧೯೮೨: ೯).

ವ್ಯಕ್ತಿ ನೆಲೆಯಲ್ಲಿ ಅರಸು ಮತ್ತು ಕರ್ನಾಟಕದ ಭೂ ಸುಧಾರಣೆ ಕುರಿತ ರೋಮಾಂಚನಾಕಾರಿ ಪ್ರಮೇಯವನ್ನು ಈ ವಿಚಾರಗಳು ಪ್ರಶ್ನಿಸುವುದು. ಭೂ ಸುಧಾರಣಾ ಕಾಯ್ದೆಯ ಜಾರಿಗಾಗಿ ಸ್ವಾತಂತ್ರ್ಯಪೂರ್ವದಿಂದಲೇ ಹೋರಾಟ ಕಂಡುಬಂದಿದ್ದು, ಸ್ವಾತಂತ್ರ್ಯಾ ನಂತರದಲ್ಲಿ ಒತ್ತಡ ಹೆಚ್ಚಾಗುತ್ತ ಸಾಗಿತು. ೧೯೬೦ರ ದಶಕದ ಕೊನೆಯಲ್ಲಿ ಪ್ರಕಟಗೊಂಡ ನಕ್ಸಲ್ ಹೋರಾಟ ಕೂಡ ಭೂಮಿಯ ಪ್ರಶ್ನೆಯನ್ನೆ ಕೇಂದ್ರವಾಗಿಸಿಕೊಂಡಿತ್ತು. "ಉಳುವವನಿಗೆ ಭೂಮಿ" ೧೯೭೧ರ ಚುನಾವಣೆಯಲ್ಲಿ ಆಡಳಿತ ಕಾಂಗ್ರೆಸ್ಸಿನ ಪ್ರಣಾಳಿಕೆಯ ಜೀವಾಳವಾಗಿದ್ದು, ಕಾಂಗ್ರೆಸ್(ಆರ್) ಬೃಹತ್ ಪ್ರಮಾಣದಲ್ಲಿ ವಿಜಯ ಗಳಿಸಲು ಪೂರಕವಾಯಿತು. ೧೯೭೨ರಲ್ಲಿ ಕೇಂದ್ರ ಸರ್ಕಾರ ಭೂ ಸುಧಾರಣಾ ಕಾಯ್ದೆ ಚೌಕಟ್ಟನ್ನು ನಿರ್ಮಿಸಿ, ರಾಜ್ಯ ಸರ್ಕಾರಗಳಿಗೆ ಅವುಗಳ ಅಗತ್ಯಕ್ಕೆ ತಕ್ಕಂತೆ ಕಾಯ್ದೆಯನ್ನು ಜಾರಿಗೆ ತರಲು ಅವಕಾಶ ಕಲ್ಪಿಸಿತ್ತು. ಕೇಂದ್ರ ಸರ್ಕಾರದ ಈ ಕ್ರಮ ಕರ್ನಾಟಕದಲ್ಲಿ ೧೯೭೪ರ ಭೂ ಸುಧಾರಣಾ ಕಾಯ್ದೆ ಜಾರಿಗೆ ತರುವಲ್ಲಿ ಪ್ರಮುಖ ಪಾತ್ರವಹಿಸಿದ ವಿಚಾರಗಳಲ್ಲೊಂದಾಗಿದೆ.

೧೯೭೭ರ ಲೋಕಸಭಾ ಚುನಾವಣೆಯಲ್ಲಿ ಕರ್ನಾಟಕದಲ್ಲಿ ಕಾಂಗ್ರೆಸ್ ಪುನಃ ಅಧಿಕಾರಕ್ಕೆ ಬರಲು ಭೂ ಸುಧಾರಣಾ ಕಾಯ್ದೆ ಪ್ರಮುಖ ಕಾರಣಗಳಲ್ಲಿ ಒಂದೆಂಬ ಅಭಿಮತವಿದೆ. ಆದರೂ ಈ ಕಾಯ್ದೆ ಭೂ ಹೀನ ಕೃಷಿ ಕಾರ್ಮಿಕರಿಗೆ ಹೆಚ್ಚಿನ ಪ್ರಯೋಜನ ಉಂಟುಮಾಡಲಿಲ್ಲ. ೧೯೭೧ರ ಅಂಕಿಅಂಶದ ಪ್ರಕಾರ ರಾಜ್ಯದಲ್ಲಿ ಸುಮಾರು ೩೦ ಲಕ್ಷದಷ್ಟು ಭೂ ಹೀನ ಕುಟುಂಬಗಳಿದ್ದವು. ಇವರಲ್ಲಿ ಶೇಕಡ ೦.೩ರಷ್ಟು ಜನರಿಗೆ ಮಾತ್ರ ಭೂಮಿ ದೊರೆಯಿತು. ಆದರೆ ಕರ್ನಾಟಕದ ಭೂ ಸುಧಾರಣಾ ಕಾಯ್ದೆ ಭಾರತದ ಇತರ ರಾಜ್ಯಗಳಲ್ಲಿ (ಕೇರಳ ಮತ್ತು ಪಶ್ಚಿಮ ಬಂಗಾಳ ಹೊರತುಪಡಿಸಿ) ಬಂದ ಕಾಯ್ದೆಗಳಿಗಿಂತ ಉತ್ತಮವಾಗಿದೆ ಎಂಬ ಅಭಿಪ್ರಾಯವಿದೆ. ಹಾಗಾದರೆ ಭೂ ಸುಧಾರಣೆಯ ಲಾಭ ಯಾವ ವರ್ಗಕ್ಕೆ ದೊರೆಯಿತೆಂಬ ಪ್ರಶ್ನೆಗೆ ಪೂರಕವಾಗಿ 'ಚೋಮನ ಮಕ್ಕಳ ಹಾಡು' ಕವನ ನೋಡಬಹುದು.

> ಕಾಳ ನೀಲ ಬೆಳ್ಳಿ ಗುರುವ ಚನಿಯ
> ಚೋಮನ ಮಕ್ಕಳು ನಾವುಗಳು
> ....
> ಉಕ್ಕಿನ ಮಯ್ಯಿ ಹೂವಿನ ಮನಸ್ಸು
> ಮೂಡುವ ಭೂಮಿಯ ಗೇಣಿಯ ಕನಸು
> ಭೂತಾಯಿಯ ಮಲಮಕ್ಕಳು ನಾವು
> ಚೋಮನ ಎಲುಬುಗಳು(ಸಿದ್ಧಲಿಂಗಯ್ಯ ೨೦೦೧: ೧೯೨).

೧೯೪೦ರ ದಶಕದಲ್ಲಿ ಪ್ರಕಟಗೊಂಡ ಸಾಮಾಜಿಕ, ಆರ್ಥಿಕ ಸಮಸ್ಯೆಗಳ ಮೇಲೆ ಬೆಳಕು ಬೀರುವ ಶಿವರಾಮ ಕಾರಂತರ *ಚೋಮನದುಡಿ* ಕಾದಂಬರಿಯಿಂದ ಪ್ರಭಾವಿತವಾಗಿದೆ. ಕಾದಂಬರಿಯಲ್ಲಿ

ಚೋಮನ ಸ್ವಂತ ಉಳುಮೆ ಮಾಡುವ ಕನಸು ನನಸಾಗುವುದಿಲ್ಲ. ಕಾದಂಬರಿಯ ಕೊನೆಗೆ ಚೋಮ ಸತ್ತರೂ ಆತನ ಕನಸು ಸಾಯುವುದಿಲ್ಲ ಎಂಬುದಕ್ಕೆ ಪ್ರತೀಕವಾಗಿ ಕಾಡಿನಲ್ಲಿ ಬಿಟ್ಟಿದ್ದ ಎತ್ತುಗಳು ಮನೆಗೆ ಹಿಂದಿರುಗುವುವು. 'ಈತ ಕಾರಂತರ ಕಾಲ್ಪನಿಕ ವ್ಯಕ್ತಿಯಾದರೂ, ೧೯೭೦ರ ದಶಕದ ತನಕ ಭೂಹೀನರನ್ನು, ಹಿಂದುಳಿದವರನ್ನು ಪ್ರತಿನಿಧಿಸುವ ವ್ಯಕ್ತಿ ... ಈ ದಶಕದ ತನಕ ನೂರಾರು, ಸಾವಿರಾರು ಚೋಮನ ಪ್ರತಿನಿಧಿಗಳಿದ್ದದ್ದು ಕೂಡ ಅಷ್ಟೇ ವಾಸ್ತವ' ಎಂದು ಮುಝಾಫರ್ ಅಸ್ಸಾದಿಯವರು ವಿಶ್ಲೇಷಿಸುವರು. ಈ ವಿಶ್ಲೇಷಣೆಯು ಭೂ ಸುಧಾರಣಾ ಕಾಯ್ದೆ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಜಾರಿಗೊಂಡ ಪ್ರಕ್ರಿಯೆ ಹಾಗೂ ೧೯೭೪ರ ಕಾಯ್ದೆ ಕುರಿತು ಪರೋಕ್ಷ ಬೆಳಕು ಚೆಲ್ಲುತ್ತದೆ. ೧೯೪೦ರ ದಶಕದ ಕನಸುಗಳು ನನಸಾಗಿಲ್ಲ ಎಂಬುದು ಕವನದ ಒಳದನಿ. ಆ ಕನಸುಗಳ ಪ್ರತಿನಿಧಿಗಳಂತೆ ಕವನದ ಶೀರ್ಷಿಕೆ ಚೋಮನ ಮಕ್ಕಳ ಹಾಡು ಎಂದಿದ್ದು, ಭೂ ತಾಯಿಯ ಮಲಮಕ್ಕಳೆಂಬ ನೋವಿದೆ. ೧೯೭೪ರ ಭೂ ಸುಧಾರಣಾ ಕಾಯ್ದೆ ಜಾರಿಯಾಗಿ ಹಲವು ವರ್ಷಗಳ ನಂತರ ಕವನ ಪ್ರಕಟವಾಗಿರುವುದು, ಭೂಮಿಯಲ್ಲಿ ಗೇಣಿದಾರರಾಗದೆ ಕೂಲಿ ಕೆಲಸ ಮಾಡುತ್ತಿದ್ದ ವರ್ಗದ ಜನತೆಗೆ ಲಾಭ ಪಡೆಯಲು ಸಾಧ್ಯವಾಗಿಲ್ಲ ಎಂಬುದನ್ನು ಸೂಚಿಸುವುದು. ಹಾಗಾಗಿ ಕವನದಲ್ಲಿ ಭೂಮಿಯ ಗೇಣಿ ಕನಸು ಕಂಡುಬರಲು ಸಾಧ್ಯವಾಗಿದೆ. ಹಾಗಾದರೆ ಚುನಾವಣೆಯಲ್ಲಿ ಭೂ ಸುಧಾರಣಾ ಕಾಯ್ದೆ ಪ್ರಭಾವಿಯಾಗಿ ಪರಿಣಾಮ ಬೀರಿರುವುದು ಹೇಗೆ ಎಂಬ ಪ್ರಶ್ನೆ ಹುಟ್ಟುವುದು. ಭೂ ಸುಧಾರಣಾ ಕಾಯ್ದೆ ಜಾರಿ ತರುವ ಪ್ರಯತ್ನ ಹಾಗೂ ದೇವರಾಜ ಅರಸು ಅವರ ಆಡಳಿತ ಕಾರ್ಯಕ್ರಮಕ್ಕೆ ದೊರೆತ ಮಾನ್ಯತೆ ಕಾರ್ಯನಿರ್ವಹಿಸಿರುವಂತಿದೆ.



ಸುಧಾ ಸಮೀಕ್ಷೆ, ೧೯೭೬. ಪ್ರಗತಿ ಪಥದಲ್ಲಿ ಕರ್ನಾಟಕ. ಪುಟ-೮. ಚಿತ್ರ ಸಂಖ್ಯೆ: ೨.೧

ಭಾರತದಲ್ಲಿ ಭೂ ಸುಧಾರಣಾ ಕಾಯ್ದೆ ಜಾರಿಯಾಗಿರುವ ರಾಜ್ಯಗಳಲ್ಲಿ ಬಹುತೇಕ ಕಮ್ಯುನಿಸ್ಟ್ ಪಕ್ಷಗಳು ಪ್ರಬಲವಾಗಿದ್ದ ಹಾಗೂ ನಕ್ಸಲ್ ಹೋರಾಟಗಳಿದ್ದ ಪ್ರದೇಶಗಳು ಪ್ರಮುಖವಾಗಿವೆ. ಆದರೆ ಸಮಕಾಲೀನವಾಗಿ ಕರ್ನಾಟಕದಲ್ಲಿ ಕಮ್ಯುನಿಸ್ಟ್ ಪಕ್ಷ ಅಥವಾ ನಕ್ಸಲ್ ಸಂಘಟನೆಗಳು ಪ್ರಬಲವಾಗಿರಲಿಲ್ಲ. ಸದನದಲ್ಲಿ ಅನೇಕ ಸಲ ಭೂ ಸುಧಾರಣೆ ಕುರಿತ ಚರ್ಚೆ ನಡೆದಿದ್ದರೂ ಜನಸಾಮಾನ್ಯರ ಪಾಲ್ಗೊಳ್ಳುವಿಕೆ ಅಲ್ಲಲ್ಲಿ ಚದುರಿದಂತೆ ಕೆಲವು ಪ್ರದೇಶಗಳಲ್ಲಿ ಮಾತ್ರ

ತೀವ್ರವಾಗಿತ್ತು. ಅರಸು ಅವರು ಸಂದರ್ಶನವೊಂದರಲ್ಲಿ ಭೂ ಸುಧಾರಣೆಯ ಹಿನ್ನೆಡೆ ಕುರಿತ ಹೇಳಿಕೆ ಇದಕ್ಕೆ ಪೂರಕವಾಗಿದೆ.

> ಭೂ ಸುಧಾರಣೆ ವಿಚಾರದಲ್ಲಿ ಕರ್ನಾಟಕ ರಾಜ್ಯದ ಗುರಿ ಸ್ಪಷ್ಟ ... ಭೂ ಒಡೆಯರಿಂದ ಅಡ್ಡಿ ಆತಂಕ ಇಲ್ಲದಿಲ್ಲ. ಯಾವುದೆ ಪಟ್ಟಭದ್ರ ಹಿತಾಸಕ್ತಿಯನ್ನು ತೊಡೆದುಹಾಕುವ ಯತ್ನ ನಡೆಸಿದಾಗಲೂ ಇಂಥ ವಿರೋಧ ನಿರೀಕ್ಷಿತವೆ. ನಮ್ಮ ಗೇಣಿದಾರ ರೈತರೂ ಸಂಘಟಿತರಾಗಿಲ್ಲ. ತಮ್ಮ ಹಕ್ಕುಗಳೇನೆಂಬುದನ್ನು ಅರಿತು ಒಟ್ಟಾಗಿ ನಡೆದಾಗ ಬದಲಾವಣೆ ಹೆಚ್ಚು ಶೀಘ್ರ ಸಾಧ್ಯವಾದೀತು(ಅರಸು ೧೯೭೬: ೮).

ಇವೆಲ್ಲವೂ ಈ ಕಾಯ್ದೆ ಬಗೆಗಿನ ಅರಸು ಅವರ ಆಡಳಿತ ಕಾಲದ ಚಿಂತನೆಗಳಾಗಿವೆ. ಭೂ ಸುಧಾರಣೆ ೨೦ ಅಂಶಗಳ ಕಾರ್ಯಕ್ರಮದ ಭಾಗವಾಗಿದ್ದು, ಅರಸು ಅವರ ವ್ಯಕಿತ್ವ ರೂಪಿಸುವಲ್ಲಿ ಪ್ರಮುಖ ಪಾತ್ರವಹಿಸಿತು.

**ಆಡಳಿತದಲ್ಲಿ ಕಾರ್ಯಮಗ್ನರಾಗಿರುವ ದೇವರಾಜ ಅರಸು**



ಕೃಪೆ : ವಾರ್ತಾ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು. ಚಿತ್ರ ಸಂಖ್ಯೆ ೨.೨

## ೨.೧.೧.೨. ಇಪ್ಪತ್ತು ಅಂಶಗಳ ಕಾರ್ಯಕ್ರಮ

ಆಂತರಿಕ ತುರ್ತುಪರಿಸ್ಥಿತಿಯ ಜೊತೆಗೆ ಯಾವಾಗಲೂ ೨೦ ಅಂಶಗಳ ಕಾರ್ಯಕ್ರಮಗಳ ಪ್ರಸ್ತಾಪವಿರುತ್ತದೆ. ಆರ್ಥಿಕ ಸಮಸ್ಯೆಗಳನ್ನು ನಿಯಂತ್ರಿಸಲು ಪ್ರಧಾನಿಯವರು ೧೯೭೫ರ ಜುಲೈನಲ್ಲಿ ಯೋಜನೆಯನ್ನು ಪ್ರಕಟಿಸಿದರು. ಸರ್ಕಾರದಿಂದ ಅಧಿಕ ಮಾನ್ಯತೆ ಪಡೆದ ಹಾಗೂ ಚಾಲ್ತಿಯಲ್ಲಿದ್ದ ಯೋಜನೆಯಾಗಿದ್ದು, ಸಂಜಯ್ ಗಾಂಧಿ ಅವರ ೫ ಅಂಶಗಳು ಇದರೊಡನೆ ಅತಿ ಹೆಚ್ಚು ಪ್ರಾಮುಖ್ಯತೆ

ಪಡೆಯಿತು. ಈ ಕಾರ್ಯಕ್ರಮ ಕರ್ನಾಟಕದ ರಾಜಕಾರಣ ಮತ್ತು ಆರ್ಥಿಕತೆಯ ಮೇಲೆ ಬೀರಿದ ಪ್ರಭಾವವನ್ನು ರಾಷ್ಟ್ರೀಯ ಚೌಕಟ್ಟಿನಲ್ಲಿ ನೋಡಲಾಗಿದೆ.

ಈ ಕಾರ್ಯಕ್ರಮ ಆರಂಭದಿಂದಲೂ ವಿವಾದಾಸ್ಪದ ವಿಚಾರವಾಗಿದೆ. ಸರ್ಕಾರ ಇದನ್ನು ಅತ್ಯಂತ ಉಪಯುಕ್ತ ಯೋಜನೆ ಎಂದು ಸಾರುತ್ತಿದ್ದರೆ, ಮತ್ತೊಂದೆಡೆ ಕೆಲಸಕ್ಕೆ ಬಾರದ ಯೋಜನೆ ಎಂಬ ಅಭಿಪ್ರಾಯ. ಅಸಮಾಧಾನವು ಕಂಡುಬರುವುದು.

> ತುರ್ತುಪರಿಸ್ಥಿತಿ ಜಾರಿಗೆ ಬಂದ ನಂತರ ಪ್ರಧಾನ ಮಂತ್ರಿಯವರು ರಾಷ್ಟ್ರಾದ್ಯಂತ ಮೊದಲು ಕೈಗೊಂಡ ಕಾರ್ಯಕ್ರಮವಾಗಿ, ಇದನ್ನು ಜಾರಿಗೊಳಿಸಲು ವಿಚಾರಮಾಡಿದ್ದಾರೆ. ಈ ಮೂಲಕ ಎಲ್ಲರಿಗೂ ಪುನರ್ ಭರವಸೆ ಕೊಡುತ್ತಿರುವುದು ಏನೆಂದರೆ, ಸರ್ಕಾರ ಯಾವುದೇ ಕೈಗಾರಿಕೆಗಳನ್ನು ರಾಷ್ಟ್ರೀಕರಣಗೊಳಿಸಲು ಚಿಂತಿಸುವುದಿಲ್ಲ ಅಥವಾ ಹೊಸ ಆರ್ಥಿಕ ನಿಯಂತ್ರಣಗಳನ್ನು ಪರಿಚಯಿಸುವುದಿಲ್ಲ. ಇದರ ಮತ್ತೊಂದು ಸ್ಪಷ್ಟ ಲಕ್ಷಣವೆಂದರೆ, ೨೦ ಕಾರ್ಯಕ್ರಮಗಳು ಹಳ್ಳಿಗಾಡಿನ ಬಡವರಿಗೆ ಅಧಿಕ ಮಹತ್ವ ನೀಡುತ್ತದೆ(ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ ೧೯೭೫: ೭೩೦).

ಮತ್ತು

> ಒಂದೇ ಮಾತಿನಲ್ಲಿ ಹೇಳುವುದಾದರೆ, ಈ ಕಾರ್ಯಕ್ರಮ ಹಳ್ಳಿಗಾಡಿನ ಬಡವರ ಜೀವನದ ಮೂಲಭೂತ ಸ್ಥಿತಿಯಲ್ಲಿ ಸಣ್ಣ ಮಟ್ಟದ ಬದಲಾವಣೆಯನ್ನು ತರಲು ಸಾಧ್ಯವಾಯಿತು(ಚಂದ ೨೦೦೩: ೨೫೬).

ಇವು ಸಮಕಾಲೀನವಾಗಿ ಹಾಗೂ ದೀರ್ಘಕಾಲದ ನಂತರ ಬಂದ ಪ್ರತಿಕ್ರಿಯೆಗಳು, ಚಿಂತನೆಗಳಾಗಿವೆ. ಮೊದಲನೆಯದಾಗಿ, ಆಡಳಿತಶಾಹಿಯ ಆರ್ಥಿಕ ನೀತಿಗಳಲ್ಲಿ ಸಮಾಜವಾದಿ ಸಿದ್ಧಾಂತಗಳಿಂದ ಪಲ್ಲಟಗೊಳ್ಳುವ ಪ್ರಕ್ರಿಯೆಯನ್ನು ಗುರುತಿಸಿ, ಪರೋಕ್ಷವಾಗಿ ಪ್ರಶ್ನಿಸಲಾಗಿದೆ. ಎರಡನೆಯದಾಗಿ, ಹಳ್ಳಿಗಾಡಿನ ಜನಜೀವನದಲ್ಲಿ ನಿರ್ಣಾಯಕ ಸ್ಥಾನ ನಿರ್ವಹಿಸಿದ್ದನ್ನು ತಿಳಿಸುವುದು. ಇದಕ್ಕೆ ಅಡಚಣೆ ಒಡ್ಡಿದವರು ಭೂ ಮಾಲಿಕ ಮತ್ತು ಶ್ರೀಮಂತ ರೈತ ಹಾಗೂ ಕರುಣೆ ಇಲ್ಲದ ನೌಕರಶಾಹಿ ವರ್ಗವೆಂದು ಬಿಪನ್ ಚಂದ್ರ ಅವರು ವಿಶ್ಲೇಷಿಸುವರು. ಈ ಎರಡು ಉಲ್ಲೇಖಗಳು ೨೦ ಅಂಶದ ಕಾರ್ಯಕ್ರಮ ಹಳ್ಳಿಗಾಡಿನ ಜನಜೀವನವನ್ನು ಕೇಂದ್ರವಾಗಿಸಿಕೊಂಡಿದೆ ಎಂಬುದಕ್ಕೆ ಒತ್ತುನೀಡಿದೆ. ಇದನ್ನು ಗಮನಿಸುತ್ತ ಕರ್ನಾಟಕ ಸರ್ಕಾರ ಜಾರಿಗೆ ತಂದ ೨೦ ಅಂಶಗಳ ಕಾರ್ಯಕ್ರಮವನ್ನು ಕುರಿತು ಚರ್ಚಿಸಲಾಗಿದೆ.



ಸುಧಾ,[೩] ೧೯೭೬ ಜುಲೈ ೪. ಚಿತ್ರ ಸಂಖ್ಯೆ: ೨.೨

ಕರ್ನಾಟಕದಲ್ಲಿಯೂ ಇಪ್ಪತ್ತು ಅಂಶಗಳ ಕಾರ್ಯಕ್ರಮಕ್ಕೆ ವಿವಿಧ ರೀತಿಯ ಪ್ರತಿಕ್ರಿಯೆಗಳನ್ನು ಕಾಣಬಹುದು. ಮೊದಲಿಗೆ ಆಡಳಿತಶಾಹಿಯ ಚಿಂತನೆಗಳು ಈ ರೀತಿ ಇವೆ.

> ಆರ್ಥಿಕ ಕಾರ್ಯಕ್ರಮ ಅತ್ಯಂತ ಪ್ರಶಂಸನೀಯವಾದುದು ಮತ್ತು ಎಲ್ಲ ದೇಶಭಕ್ತ ನಾಗರಿಕರು ಇದನ್ನು ಸ್ವಾಗತಿಸುತ್ತಾರೆ. ಇವರೆಲ್ಲರೂ ಭಾರತೀಯ ಜನರ ಸಾಮಾಜಿಕ ಮತ್ತು ಆರ್ಥಿಕ ಜೀವನ ಪರಿವರ್ತನೆಗೆ ಸಹಾಯ ಮಾಡುತ್ತಾರೆ ಎಂಬುದರಲ್ಲಿ ನನಗೆ ಅನುಮಾನವಿಲ್ಲ(ಅರಸು ೧೯೭೫: ೬೩).

ದೇಶಭಕ್ತ ನಾಗರಿಕರು ಎಂಬುದು ತುರ್ತುಪರಿಸ್ಥಿತಿಯ ವಿರೋಧಿಗಳನ್ನು ಎಚ್ಚರಿಸಿದಂತಿದ್ದು, ಸರ್ಕಾರದ ನೆಲೆ ವ್ಯಕ್ತವಾಗಿದೆ. ಅರಸು ಅವರ ಕಾಲದ ಹಲವು ಸಮಾಜ ಸುಧಾರಣಾ ಕಾರ್ಯಕ್ರಮಗಳು ಇಪ್ಪತ್ತು ಅಂಶಗಳ ಕಾರ್ಯಕ್ರಮದೊಳಗೇ ಬರುವುದು. ಉದಾಹರಣೆಗೆ, ಜೀತ ಪದ್ಧತಿ ರದ್ದು, ಗ್ರಾಮೀಣಸಾಲ ಮನ್ನ ಮೊದಲಾದವು. ಸಮಕಾಲೀನ ಸಮಾಜದ ಮೇಲೆ ಬೀರಿರುವ ಪ್ರಭಾವ ಅಪಾರವಾಗಿದ್ದು, ಅರಸರು ಆಡಳಿತ ಜಾರಿಗೆ ತಂದದ್ದು ಎಂದೇ ಹೆಚ್ಚು ಪ್ರಚಲಿತವಾಗಿದೆ.

> ೨೦ ಅಂಶಗಳ ಕಾರ್ಯಕ್ರಮ ಜನಪ್ರಿಯವಾಗುತ್ತಿದೆ. ಇದರಿಂದ ವ್ಯವಸಾಯ ಹಾಗೂ ಕೈಗಾರಿಕಾ ಕ್ಷೇತ್ರಗಳಲ್ಲಿ ಉತ್ಪಾದನೆ ಹೆಚ್ಚುತ್ತಿದೆ. ಅಗತ್ಯ ವಸ್ತುಗಳು ಸುಲಭವಾಗಿ ದೊರೆಯುತ್ತಿವೆ. ಅವುಗಳ ಬೆಲೆ ಇಳಿದಿದೆ. ಇದೆಲ್ಲ ಬಲವಾದ ಸರ್ಕಾರದ ವ್ಯವಸ್ಥೆಯಿಂದ ಆದದ್ದು(ಅರಸು ೧೯೭೫: ೫).

ಮತ್ತು

> ಪ್ರಧಾನಮಂತ್ರಿ ಘೋಷಿಸಿದ ೨೦ ಅಂಶಗಳ ಕಾರ್ಯಕ್ರಮ ನಮ್ಮ ಆರ್ಥಿಕ ಕಾರ್ಯನೀತಿಯ ಕೆಲವು ಪ್ರಮುಖ ನೋಟಗಳ ಮೇಲೆ ಬೆಳಕು ಬೀರುತ್ತದೆ. ಬಡವರ ಅತ್ಯುತ್ತಮ ಲಾಭಕ್ಕಾಗಿ ಉತ್ತಮವಾಗಿ ಜಾರಿಗೊಳಿಸುವುದು ಅಗತ್ಯ . ಕರ್ನಾಟಕದಲ್ಲಿ ನಾವು ಈ ಕಾರ್ಯಕ್ರಮವನ್ನು ಕರಾರುವಕ್ಕಾಗಿ ಮತ್ತು ಉತ್ಸಾಹದಿಂದ ಜಾರಿಗೆ ತರಲು ಹಲವು ಹಂತಗಳನ್ನು ಪಾಲಿಸುತ್ತಿದ್ದೇವೆ(ಘೋರ್ಪಡೆ ೧೯೭೬: ೨).

ಇಪ್ಪತ್ತು ಅಂಶಗಳ ಕಾರ್ಯಕ್ರಮದ ಉತ್ತಮ ಅಂಶಗಳನ್ನೇ ಒತ್ತಿ ಒತ್ತಿ ಹೇಳುತ್ತಿರುವುದು ಹಲವು ಪ್ರಶ್ನೆಗಳನ್ನು ಮೂಡಿಸುವುದು. ಜೊತೆಗೆ ಸರ್ಕಾರದ ನಿಲುವು, ಕ್ರಮಗಳನ್ನು ಅರ್ಥಸಚಿವರು ವಿವರಿಸಿರುವುದು ಆಡಳಿತಶಾಹಿಯ ಕಾರ್ಯನೀತಿ ಸ್ವರೂಪ ಮತ್ತು ಅನುಷ್ಠಾನಗೊಳಿಸುವ ಪ್ರಕ್ರಿಯೆಯನ್ನು ತೆರೆದಿಡುವುದು.




CM's call to officers on 20-point plan

ಕನ್ನಡಪ್ರಭ: ೭ ನವೆಂಬರ್ ೧೯೭೫ ಮತ್ತು ಡೆಕ್ಕನ್ ಹೆರಾಲ್ಡ್: ೧೯೭೭ ಸೆಪ್ಟೆಂಬರ್ ೨೦ರಲ್ಲಿ ಪ್ರಕಟವಾದ ಚಿತ್ರ.. ಚಿತ್ರ ಸಂಖ್ಯೆ: ೨.೪.

ರಕ್ಷಣೆ ಕಾರ್ಯ ಮತ್ತು ಕಾನೂನು ನಿರ್ವಹಣೆಯಲ್ಲಿ ಹೆಚ್ಚಾಗಿ ತೊಡಗಿರುವ ಪೊಲೀಸ್ ಇಲಾಖೆ ಇಪ್ಪತ್ತು ಅಂಶಗಳ ಕಾರ್ಯಕ್ರಮದ ಜಾರಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಿರುವುದು ವಿಶೇಷವಾಗಿದೆ. ೧೯೭೬ರ ಪೊಲೀಸ್ ವಾರ್ಷಿಕದಲ್ಲಿ ೨೦ ಅಂಶಗಳ ಕಾರ್ಯಕ್ರಮ ಜಾರಿತಂದ ಹಾಗೂ ಇಲಾಖೆಯ ಸಾಧನೆಗಳ ಸುಧೀರ್ಘ ವಿವರವಿದೆ. 'ಪ್ರದೇಶದಲ್ಲಿನ ಸೂಕ್ತ ಕಾನೂನು ನಿರ್ವಹಣೆ ಮತ್ತು ಶಾಂತಿಯುತ ಪರಿಸ್ಥಿತಿಯ ಮೂಲಕ ಕಾರ್ಯಕ್ರಮದ ಯಶಸ್ಸು ವ್ಯಾಪಕವಾಗಿ ನಿರ್ಧರಿಸಲ್ಪಡುತ್ತದೆ. ಬಿ.ಎಲ್.ಡಿ ಮತ್ತಿತರ ವಿರೋಧ ಪಕ್ಷಗಳ ನಾಯಕರು ರಾಜ್ಯದಲ್ಲಿ ದೇಶದ ಇತರ ಭಾಗಗಳಂತೆ ತುರ್ತುಪರಿಸ್ಥಿತಿಯನ್ನು ವಿರೋಧಿಸಿ, ಆಡಳಿತಯಂತ್ರ ನಿರ್ವಹಣೆಯಲ್ಲಿ ತೊಂದರೆ ನೀಡಿದ್ದನ್ನು ಈಗ ನಿಯಂತ್ರಿಸಿದೆ. ಸಾರ್ವಜನಿಕರ ಶಾಂತಿಯುತ ಜೀವನದಲ್ಲಿ ಯಾವ ತೊಂದರೆಯಾಗುವುದಿಲ್ಲವೆಂದು ನಮ್ಮೆಲ್ಲ ಅಧಿಕಾರಿಗಳು ಆಶ್ವಾಸನೆ ನೀಡುತ್ತೇವೆ' ಎಂದಿರುವುದು ಗಮನಾರ್ಹ. ನಂತರ 'ಕಾನೂನು ಪಾಲನೆಗಾಗಿ ಮೀಸಾ, ಕಾಫಿಪೋಸ, ಡಿ.ಐ.ಆರ್ ಕಾಯ್ದೆಗಳ ಅಡಿಯಲ್ಲಿ ಸಮಾಜ ವಿರೋಧಿ ಚಟುವಟಿಕೆಗಳನ್ನು ನಿಯಂತ್ರಿಸಲಾಗಿದೆ' ಎಂಬ ಮಾಹಿತಿಯಿದೆ. ಈ ಕಾರ್ಯಕ್ರಮಗಳ ಜಾರಿಗೆ ಪೊಲೀಸ್ ಇಲಾಖೆಯು ಸರ್ಕಾರಕ್ಕೆ ಸಂಪೂರ್ಣ ಸಹಕಾರ ನೀಡಿದೆ ಎಂದು ದಾಖಲಿಸಿದೆ. ಇದು ಕೇವಲ ಆರ್ಥಿಕ ಸುಧಾರಣೆಯ ನಿಟ್ಟಿನಲ್ಲಿ ಜಾರಿಯಾಗಿತ್ತೆ ಎಂಬ ಪ್ರಶ್ನೆಯನ್ನು

ಮುಂದಿಡುವುದು. ಮೀಸಾ, ಡಿ.ಐ.ಆರ್ ಕಾಯ್ದೆಗಳ ಜಾರಿಯನ್ನು ತುರ್ತುಪರಿಸ್ಥಿತಿ ವಿರೋಧಿ ಚಟುವಟಿಕೆಯಲ್ಲಿ ತೊಡಗಿದ್ದವರ ಮೇಲೆ ಬಳಸಲಾಗುತ್ತಿತ್ತು. ಹಾಗಾಗೇ ಇಪ್ಪತ್ತು ಅಂಶಗಳ ಕಾರ್ಯಕ್ರಮವು ಹಲವು ಉತ್ತಮ ಅಂಶಗಳನ್ನು ಹೊಂದಿದ್ದರೂ ಸಮಾಜದ ಕೆಲವು ವರ್ಗಗಳಿಂದ ನಿರ್ಲಕ್ಷ್ಯಕ್ಕೆ ಒಳಗಾಯಿತು. ಆದರೆ ಇತರ ಆರ್ಥಿಕ ಕಾರ್ಯಕ್ರಮಗಳಿಗಿಂತ ಜನರ ಸ್ಮರಣೆಯಲ್ಲಿ ಉಳಿದುಬಂದಿರುವುದು ಗಮನ ಸೆಳೆಯುವುದು. ಕರ್ನಾಟಕದಲ್ಲಿ ದೇವರಾಜ ಅರಸು ಅವರ ಆಡಳಿತ ನೀತಿಯ ಭಾಗವಾಗಿ ಸಕಾರಾತ್ಮಕ ನೆಲೆಯಲ್ಲಿ ಪ್ರಸ್ತಾಪವಾಗುವುದು. ಈ ದಿಸೆಯಲ್ಲಿ ಕರ್ನಾಟಕದಲ್ಲಿ ಇಪ್ಪತ್ತು ಅಂಶಗಳ ಕಾರ್ಯಕ್ರಮ ಕುರಿತ ವಿವಿಧ ಆಯಾಮಗಳನ್ನು ಗಮನಿಸುವ ಅಗತ್ಯವಿದೆ.

ದೇಶಾದ್ಯಂತ ಜಾರಿಯಾದ ೨೦ ಅಂಶಗಳ ಕಾರ್ಯಕ್ರಮ ಉತ್ತಮ ರೀತಿಯಲ್ಲಿ ಅನುಷ್ಠಾನಗೊಳ್ಳದೇ ಕೇವಲ ನಾಮಕಾವಸ್ಥೆಯಾಗಿತ್ತು. ಆದರೆ ಕರ್ನಾಟಕದಲ್ಲಿ ಉಳಿದ ಕಡೆಗಳಿಗಿಂತ ಉತ್ತಮವಾಗಿ ಜಾರಿಗೆ ತರಲಾಯಿತು ಎಂಬ ಅಭಿಮತವನ್ನು ತುರ್ತುಪರಿಸ್ಥಿತಿಯೋತ್ತರದಲ್ಲಿ ಹಲವು ರಾಜಕಾರಣಿಗಳು ಮತ್ತು ವಿದ್ವಾಂಸರು ವ್ಯಕ್ತಪಡಿಸುವರು. ಪೂರಕವಾಗಿ ರಾಜ್ಯದಲ್ಲಿ ಅನುಷ್ಠಾನಗೊಂಡ ೨೦ ಅಂಶಗಳ ಕಾರ್ಯಕ್ರಮದ ಯಶಸ್ಸನ್ನು ಅರಸರಿಗೆ ನೀಡಲಾಗುವುದು.

> ಇಂದಿರಾಜಿಯವರ ೨೦ ಅಂಶಗಳ ಕಾರ್ಯಕ್ರಮವನ್ನು ಜಾರಿಗೆ ತರುವಾಗ ಅರಸರು ಬಹಳ ಉತ್ಸುಕತೆಯನ್ನು ಹೊಂದಿದ್ದರು. ಏಕೆಂದರೆ ೨೦ ಅಂಶಗಳ ಕಾರ್ಯಕ್ರಮಗಳಲ್ಲಿ ಬಹುತೇಕ ಬಡವರಿಗೆ ಲಾಭ ದೊರೆಯುವಂತಹವೇ ಆಗಿದ್ದವು. ಬಡವರ ಕೆಲಸ ಮಾಡುವುದು ಎಂದರೆ ಎಲ್ಲಿಲ್ಲದ ಉತ್ಸಾಹ ಬರುತ್ತಿತ್ತು(ನಾಯ್ಕರ್ ೨೦೦೦: ೫೧)

ಹಾಗೂ

> ಇಂದಿರಾ ಗಾಂಧಿಯವರು ೨೦ ಅಂಶದ ಕಾರ್ಯಕ್ರಮ ಕೊಟ್ರು, ಅದೆ ಭಾರತದಲ್ಲಿ ಅದನ್ನು ತತ್‌ಕ್ಷಣ ಜಾರಿಗೆ ತಂದವರು ದೇವರಾಜ ಅರಸು ಒಬ್ಬರೇ. ಬ್ರಹ್ಮಾಸ್ತ್ರ ಬಳಸಿದಂಗೆ ಬಳಸಿಕೊಂಡ್ರು ... ಅವತ್ತು ನಾವೆಲ್ಲ ಯೂತ್ ಕಾಂಗ್ರೆಸ್‌ನಲ್ಲಿದ್ವಿ, ಮನೆಮನೆಗೆ ಹೋಗಿ ಆನ್ ಡಿಮ್ಯಾಂಡ್ ಪ್ರೋನೋಟ್‌ಗಳನ್ನ ಹರಿದೀಲಿ ತಗೊಂಡು ಸುಟ್ಟಾಕಿದ್ವಿ ಅವತ್ತು(ವಿಶ್ವನಾಥ್ ೨೦೦೬: ೧೨೫)

ಎಂಬುದು ಮೇಲಿನ ಅಂಶವನ್ನೆ ಸಾಬೀತು ಪಡಿಸುತ್ತದೆ. ಈ ಕುರಿತ ಕವನವೊಂದು ಹೀಗಿದೆ.

**ದೇವರಾಜ ಅರಸು ಮತ್ತು ಇಂದಿರಾ ಗಾಂಧಿ ಅವರು ಛಾಯಾಚಿತ್ರದಲ್ಲಿ**



ಕೃಪೆ : ಡೆಕ್ಕನ್ ಹೆರಾಲ್ಡ್, ಎಂ.ಜಿ.ರೋಡ್, ಬೆಂಗಳೂರು. ಚಿತ್ರ ಸಂಖ್ಯೆ : ೨.೫.

ಅಂತೂ ತಂತೊಮ್ಮೆ ಬದಲಾವಣೆ
೨೦ ಅಂಶಗಳ ಮಾ ಘೋಷಣೆ
ಸಾವಿರದ ಕಾಲದಿಂದ ಹಾಕಿದ ಜಾಲ
ಹರಿದು ಹಾಕುತ ಬಂತು ಬದಲಾವಣೆ
೨೦ ಅಂಶಗಳ ಮಾ ಘೋಷಣೆ
ಬಹುಜನರ ಕನಸಿಂದು ನನಸಾಯಿತು
ಕೆಲವರದು ನನಸಿಂದು ಕನಸಾಯಿತು
ಅವರವರ ಭಾವಕ್ಕೆ ಅವರವರ ತೆರನಂತೆ
ಹೊಸ ಅಲೆ ತಂತಿಂದು ಬದಲಾವಣೆ(ಹಣಮಂತ ತೆಗ್ಗಳ್ಳಿ ೧೯೭೮: ೧).

ಇಪ್ಪತ್ತು ಅಂಶಗಳ ಕಾರ್ಯಕ್ರಮದ ಮಹಾಘೋಷಣೆಯಿಂದಾಗಿ ಹಲವಾರು ಶತಮಾನಗಳ ವ್ಯವಸ್ಥೆಯ ಜಾಲ ಹರಿದು ಬಹುಜನರ ಕನಸನ್ನು ನನಸಾಗಿಸಿದೆ ಎಂಬ ಭಾವವಿದೆ. ಜೊತೆಯಲ್ಲಿಯೇ ಅಸ್ತಿತ್ವದಲ್ಲಿದ್ದ ವಿರುದ್ಧ ನೆಲೆಯಲ್ಲಿಯೂ ಇರುವ ಅನೇಕ ಅಭಿಮತಗಳನ್ನು ಸೂಚಿಸುವುದು.

ಇಪ್ಪತ್ತು ಅಂಶಗಳ ಕಾರ್ಯಕ್ರಮ ಕೇವಲ ಪ್ರಜೆಗಳ ಕಣ್ಣಿಗೆ ಮಣ್ಣೆರೆಚುವ ತಂತ್ರ ಎಂಬ ಅಭಿಮತ ಹಲವರಲ್ಲಿತ್ತು. 'ಇಪ್ಪತ್ತೇಳು ವರ್ಷ ಸಾಧಿಸಲಾರದ್ದನ್ನು ೨೦ ಅಂಶಗಳಿಂದ ಸಾಧಿಸುತ್ತಾರಂತೆ!' ಎಂಬ ಅಣಕ ಪೂರಕವಾಗಿ ಕಂಡುಬರುವ ಘೋಷಣೆಯಾಗಿತ್ತು. ಈ ನಕಾರಾತ್ಮಕ ಭಾವವನ್ನು ಜಾವಳಿಯವರ '೨೦.೫ ಕವಿತೆಗಳು' ಎಂಬ ಕವನಸಂಕಲನದಲ್ಲಿ ನೋಡಬಹುದು. ಇದು ಸರ್ಕಾರದ ಕಾರ್ಯಕ್ರಮದ ವ್ಯಂಗ್ಯ ಅಣಕ ಹಾಗೂ ತುರ್ತುಪರಿಸ್ಥಿತಿ ವಿರೋಧಿಸಿ ರಚಿತವಾಗಿದೆ. ಈ ಕುರಿತು

> ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಇಂದಿರಾಗಾಂಧಿಯವರು ೨೦ ಅಂಶಗಳ ಕಾರ್ಯಕ್ರಮವನ್ನು ಘೋಷಿಸಿದರು. ಬಹುಬೇಗನೆ ಅದು ಕೆಲಸಕ್ಕೆ ಬಾರದ ಘೋಷಣೆಯಾಗಿತ್ತೆಂದು ಕಾರ್ಯದಲ್ಲಿ ಕಂಡುಬಂತು. ಆ ಸಮಯದಲ್ಲಿ ಬೇರೆ ಕೆಲವು ರಾಜ್ಯದಲ್ಲಿ ಮಾಡಿದ ಹಾಗೆಯೇ ಕರ್ನಾಟಕ ರಾಜ್ಯದಲ್ಲಿ ಪಕ್ಷದ ಕಾರ್ಯಕರ್ತರು ಕೊಳಚೆ ಪ್ರದೇಶಗಳಿಗೆ, ಹಿಂದುಳಿದ ಪ್ರದೇಶಗಳಿಗೆ, ಕುಗ್ರಾಮಗಳಿಗೆ ಭೇಟಿ ನೀಡಿ ಜನರ ಬವಣೆಗಳನ್ನು ದಾಖಲಿಸಿ ರಾಜ್ಯ ಹಾಗೂ ಕೇಂದ್ರ ಸರಕಾರಗಳಿಗೆ ಮನವಿಯನ್ನು ಅರ್ಪಿಸಿದರು(ಕಕ್ಕಿಲಾಯ ೨೦೦೩: ೩೭೧).

ಹಾಗೂ

> ಜನರ ಕಣ್ಣಿಗೆ ಮಣ್ಣೆರಚಲು ಶ್ರೀಮತಿ ಇಂದಿರಾಗಾಂಧಿಯವರು ಒಂದು ೨೦ ಅಂಶದ ಕಾರ್ಯಕ್ರಮವನ್ನು ಮುಂದಿಟ್ಟಿದ್ದಾರೆ. ಆದರೆ ಇದರಲ್ಲಿ ಹೊಸತೇನಿದೆ? ಭೂಮಿತಿಯ ಕಾನೂನುಗಳನ್ನು ಜಾರಿ ಮಾಡಲು ಇಷ್ಟು ವರ್ಷ ಅಡ್ಡಿ ಮಾಡಿದವರು ಯಾರು? ರಾಜಕೀಯ ಸಂಕಲ್ಪದ ಕೊರತೆ ಮತ್ತು ಭೂಮಾಲಿಕರಿಗೆ ಆಡಳಿತದೊಡನಿರುವ ಅಸಂಖ್ಯ ಸಂಪರ್ಕಗಳ ಕಾರಣದಿಂದಾಗಿ ಕಾಂಗ್ರೆಸ್ ಸರಕಾರ ಮತ್ತು ಕಾಂಗ್ರೆಸ್ ಪಕ್ಷವು ಭೂ ಸುಧಾರಣಾ ಕಾಯ್ದೆಗಳನ್ನು ಜಾರಿಯಾಗದಂತೆ ಯಶಸ್ವಿಯಾಗಿದೆ(ಗೋಪಾಲನ್ ೨೦೦೭: ೩೫೨).

ಮೇಲಿರುವ ಇಬ್ಬರ ಅಭಿಪ್ರಾಯದಲ್ಲಿ ಸಾಕಷ್ಟು ಸಾಮ್ಯತೆಗಳಿವೆಯಾದರೂ ಕಕ್ಕಿಲಾಯ ಅವರಿಗೆ ನಿಧಾನವಾಗಿ ಇದರಲ್ಲಿ ತಿರುಳಿಲ್ಲವೆನಿಸಲು ಕಾರಣವೇನೆಂಬ ಪ್ರಶ್ನೆ ಮೂಡುವುದು. ಆ ಸಂದರ್ಭದಲ್ಲಿ ಕಕ್ಕಿಲಾಯರು ಆಡಳಿತ ಪಕ್ಷದ ಭಾಗವಾಗಿದ್ದು, ತುರ್ತುಪರಿಸ್ಥಿತಿ ಜಾರಿಯನ್ನು ಒಪ್ಪಿಕೊಂಡಿದ್ದರು. ಹೊಸ ನಿಟ್ಟಿನ ಆರ್ಥಿಕ ಬದಲಾವಣೆಗೆ ಸಹಕಾರಿ ಆಗಬಹುದು ಎಂಬ ನಂಬಿಕೆ ಹೊಂದಿದ್ದರು. ಗೋಪಾಲನ್ ಅವರು ಕೇರಳದ ಭೂ ಸುಧಾರಣಾ ಹೋರಾಟಗಳಲ್ಲಿ ೧೯೬೮ ರಿಂದ ೧೯೭೩-೧೯೭೮ಳರವರೆಗೆ ಸಕ್ರಿಯರಾಗಿ ತೊಡಗಿಸಿ ಕೊಂಡಿದ್ದವರು. ಜೊತೆಗೆ ಕಮ್ಯುನಿಸ್ಟ್ ಸಿದ್ಧಾಂತದ ನೆಲೆಯಿಂದ ಬಂದವರಾದರೂ ಸಿಪಿಐಗಿಂತ ಭಿನ್ನ ವಿಚಾರಧಾರೆ ಹೊಂದಿದ್ದ ಸಿಪಿಎಂನ ಪಕ್ಷದವರಾಗಿದ್ದರು. ಸಿಪಿಎಂ ತುರ್ತುಪರಿಸ್ಥಿತಿ ವಿರೋಧಿ ನೆಲೆಯಲ್ಲಿ ಪ್ರತಿಭಟನೆಗಳನ್ನು ಕೈಗೊಂಡಿತ್ತು. ಹಲವಾರು ಆರ್ಥಿಕ ಕಾರ್ಯಕ್ರಮಗಳಲ್ಲಿ, ೨೦ ಅಂಶಗಳ ಕಾರ್ಯಕ್ರಮ ಸಮಾಜದ ನೆನಪಿನಲ್ಲಿ ಉಳಿದು ಬಂದಿರುವುದು ಆಶ್ಚರ್ಯಕರ ಸಂಗತಿಯಾಗಿದೆ. ಸಮಕಾಲೀನವಾಗಿ ರಾಜ್ಯ ದಲ್ಲಿ ಜಾರಿಗೊಂಡ ಹಲವು ಪ್ರಮುಖ ಆರ್ಥಿಕ ಕಾರ್ಯಕ್ರಮಗಳು ಕೇಂದ್ರ ಸರ್ಕಾರದಿಂದ ಸೂಚಿತವಾಗಿತ್ತು. ಆದರೆ ಕರ್ನಾಟಕದಲ್ಲಿ ಕಂಡುಬರುವ ಸಾಮಾಜಿಕ ಸುಧಾರಣೆಗಳು ಪ್ರಾದೇಶಿಕವಾಗಿ ರೂಪುಗೊಂಡಿರುವು ದಾಗಿದೆ. ಈ ದಿಸೆಯಲ್ಲಿ ಸಾಮಾಜಿಕ ನೆಲೆಗಟ್ಟಿನ ಕಾರ್ಯಕ್ರಮಗಳ ಅಧ್ಯಯನ ನಡೆಸುವ ಅಗತ್ಯವಿದೆ.

### ೨.೧.೨. ಸಾಮಾಜಿಕ ನೆಲೆಗಟ್ಟು

ತುರ್ತುಪರಿಸ್ಥಿತಿಗೆ ಕರ್ನಾಟಕದಲ್ಲಿ ಕಂಡುಬಂದ ಪ್ರತಿಕ್ರಿಯೆಗಳು ಹೊಂದಿರುವ ಸಾಮಾಜಿಕ ನೆಲೆಗಳನ್ನು ಗಮನಿಸುವ ಅಗತ್ಯವಿದೆ. ಈಗಾಗಲೇ ಗಮನಿಸಿರುವಂತೆ ಜೆ.ಪಿ. ಚಳವಳಿಗೆ ಕರ್ನಾಟಕ ಸ್ಪಂದಿಸಿತಾದರೂ ವ್ಯಾಪಕವಾಗಿರಲ್ಲಿಲ್ಲ. ಈ ಚಳವಳಿಯಲ್ಲಿ ಸರ್ವೋದಯದವರು, ಸಮಾಜವಾದಿಗಳು, ಬುದ್ಧಿಜೀವಿಗಳ ಪಾಲ್ಗೊಳ್ಳುವಿಕೆ ಹೆಚ್ಚಾಗಿತ್ತು. ಹಿಂದುಳಿದ ವರ್ಗದ ಬಹುಸಂಖ್ಯಾತರು ಈ ಚಳವಳಿ ಹಾಗೂ ನಂತರದ ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳಿಗೆ ನೇರವಾಗಿ ಸ್ಪಂದಿಸಲಿಲ್ಲ. ಈ ದಿಸೆಯಲ್ಲಿ ೧೯೭೦ರ ದಶಕದ ಸಮಾಜವನ್ನು ಪ್ರಭಾವಿಸಿದ ಎರಡು ಮುಖ್ಯ ವಿಚಾರಗಳೆಂದರೆ ಹಾವನೂರು ವರದಿ ಜಾರಿ ಹಾಗೂ ಬೂಸಾ ಚಳವಳಿ. ಬೂಸಾ ಚಳವಳಿ ಘಟನೆಯೊಂದು ರಾಜಕೀಯ ಲೇಪ ಪಡೆದು, ನಂತರದಲ್ಲಿ ಪ್ರಗತಿಪರ ಚಳವಳಿಗಳಿಗೆ ಅಡಿಗಲ್ಲಾಗಿ ಪರಿಣಮಿಸಿತು. ಹಾವನೂರು ವರದಿ ಹಿಂದುಳಿದ ವರ್ಗಗಳ ಬೈಬಲ್ ಎಂದು ಪ್ರಸಿದ್ಧವಾಗಿದ್ದು, ಹಿಂದುಳಿದ ವರ್ಗಗಳ ಮೇಲ್ಮುಖ ಚಲನೆಯಲ್ಲಿ ಮೈಲುಗಲ್ಲಾಗಿದೆ. ಇವುಗಳಿಂದಾದ ಸಾಮಾಜಿಕ ಬದಲಾವಣೆಗಳ ಸ್ವರೂಪ ಮತ್ತು ಪರಿಣಾಮಗಳನ್ನು ಮಾತ್ರ ಚರ್ಚಿಸಲು ಪ್ರಯತ್ನಿಸಲಾಗಿದೆ. ಇದರೊಡನೆ ಭೂ ಸುಧಾರಣಾ ಕಾಯ್ದೆ ಮತ್ತು ಇಪ್ಪತ್ತು ಅಂಶಗಳ ಪ್ರಭಾವವವನ್ನು ಗಣನೆಯಲ್ಲಿಡುವುದು ಅಗತ್ಯ. ಇದು ತುರ್ತುಪರಿಸ್ಥಿತಿ ಕಾಲದ ಸಾಮಾಜಿಕ ನೆಲೆಗಟ್ಟನ್ನು ಅರ್ಥೈಸಲು ನೆರವಾಗುವುದಲ್ಲದೇ ಅನೇಕ ಹೊಸ ಹೊಳಹುಗಳಿಗೆ ದಾರಿ ಮಾಡಿಕೊಡಲು ಸಾಧ್ಯವಿದೆ.

#### ೨.೧.೨.೧. ಬೂಸಾ ಚಳವಳಿ

ದೇವರಾಜ ಅರಸು ಅವರ ಕಾಲದ ಆರ್ಥಿಕ ಅಥವಾ ಸಾಮಾಜಿಕ ಸುಧಾರಣಾ ಕಾರ್ಯಕ್ರಮವಾಗಿ ಸರ್ಕಾರದಿಂದ ಅನುಷ್ಠಾನಗೊಳ್ಳಲಿಲ್ಲ. ಈ ಘಟನೆ ಚಳವಳಿಗಳನ್ನು ಕಟ್ಟಲು ಅಗತ್ಯ ಚೈತನ್ಯ ನೀಡುವಷ್ಟು ಶಕ್ತಿಯುತವಾಗಿತ್ತು. ಮುಂದೆ ಕಂಡುಬಂದ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಸಾಹಿತ್ಯಿಕ ಚಳವಳಿಗಳಿಗೆ ನಾಂದಿ ಹಾಡಿದ ಘಟನೆ ಇದು. ಒಂದು ರೀತಿಯಲ್ಲಿ ೧೯೭೦ರ ದಶಕದ ಕೊನೆ ಹಾಗೂ ೧೯೮೦ರ ದಶಕದ ಆರಂಭದಲ್ಲಿ ಹುಟ್ಟಿದ ಎಲ್ಲ ಚಳವಳಿಗಳಿಗೆ ಅಡಿಗಲ್ಲನ್ನು ಹಾಕಿದ್ದು ಈ ಬೂಸಾ ಪ್ರಕರಣವೆಂದು ಹೇಳಬಹುದು. ಸಮಕಾಲೀನವಾಗಿ ಬೂಸಾ ಚಳವಳಿ ಎಂದು ಪ್ರಖ್ಯಾತವಾಗಿರದಿದ್ದರೂ ಸಾಹಿತ್ಯಿಕ ಮತ್ತು ಸಾಮಾಜಿಕ ವಲಯದಲ್ಲಿ ಅಪಾರ ಪ್ರಭಾವ ಬೀರಿತ್ತು. ಇದಕ್ಕೆ ನಿದರ್ಶನವಾಗಿ ಕೆಳಗಿನ ಕವಿತೆ ಹೀಗಿದೆ:

> ನೀವು ಆ ಹಾಳಾದ, ಹಾಳು ಮಾಡಿದ
> ಆ ಹಿರಿ ಕವಿಗಳ ಹಾದಿಯಲ್ಲಿ ಹೆಜ್ಜೆಯಲ್ಲಿ
> ಹೆಜ್ಜೆಹಾಕಿ, ಅವರ ನೆರಳಾಗಿ, ಬಾಲವಾಗಿ
> ತಂದು ಕೊಳ್ಳ ಬೇಡಿ–ನಾಳಿನ ಪೀಳಿಗೆಯಲ್ಲಿಯ
> ಸಾವಿರ ಸಾವಿರ 'ಬಸವಲಿಂಗಪ್ಪನಂಥವ'ರಿಂದ,
> ಇದೋ ಈ ಹಡಿಬಿಟ್ಟ ಸಾಹಿತಿಗಳೇ ಬೂಸಾ
> ಸಾಹಿತ್ಯದ ತೂಕ ಹೆಚ್ಚಿಸಿದರು ಅಂತ–ಬೀದಿ ಬೀದಿಯಲ್ಲಿ
> ಬೊಟ್ಟು ಮಾಡಿಸಿಕೊಂಡು ಹೆಟ್ಟಿಸಿಕೊಳ್ಳುವ, ಮೆಟ್ಟಿನಿಂದ
> ತಟ್ಟಿಸಿಕೊಳ್ಳುವ ಅನಿವಾರ್ಯ ಪ್ರಸಂಗವನ್ನ(ಪಾಟೀಲ ೧೯೭೭: ೭).

ಇದಕ್ಕೆ ಪೂರಕವಾಗಿ 'ನಾವು ಈ ಕವಿಗಳ ಮೇಲೆ ಮಾಡುವ ಆಪಾದನೆಗಳಿಗೆ ವ್ಯತಿರಿಕ್ತವಾದ, ಮಾರ್ಗದರ್ಶಕ ಆಗಬಹುದಾದ, ಇವೆಲ್ಲವುಗಳಿಗಿಂತ ಮುಖ್ಯವಾಗಿ ಯುವಜನಾಂಗದ ಹೊಸ ಸಾಹಿತ್ಯಿಕ ಧೋರಣೆ ವ್ಯಕ್ತಪಡಿಸಬಲ್ಲ ಕವನ ಸಂಗ್ರಹ ಯಾಕೆ ತರಬಾರದು ಎಂಬ ಪ್ರಶ್ನೆಗೆ ಉತ್ತರವಾಗಿ ಈ ಸಂಗ್ರಹ ಹೊರಬರುತ್ತಿದೆ' ಎಂದು ಮುನ್ನುಡಿಯಲ್ಲಿ ತಿಳಿಸಲಾಗಿದೆ. ಬೂಸಾ ಪ್ರಕರಣದ ಪ್ರಭಾವ ನೇರವಾಗಿ ಕಂಡುಬರುತ್ತಿದ್ದು, ಸಮಾಜದೊಳಗೆ ಪ್ರತಿಭಟನೆಗಳು ಹೊಂದಿರುವ ನೆಲೆಗಳನ್ನು ಚಿತ್ರಿಸುವುದು.

ಬಸವಲಿಂಗಪ್ಪನವರು ಕನ್ನಡ ಸಾಹಿತ್ಯ ಎಂದರೆ 'ಬೂಸಾ' ಸಾಹಿತ್ಯ ಎಂದರು.

> ಇದರಿಂದ ಕನ್ನಡ ಸಾಹಿತ್ಯ ಸರಸ್ವತಿಗೆ ಮೋರೆಯ ಮೇಲೆ ಹೊಡೆದಂತಾಯಿತು. ಅವರ ವಿರುದ್ಧ ಬಹು ದೊಡ್ಡ ಆಂದೋಲನ ಎದ್ದಿತು. ಅವರು ಮಂತ್ರಿ ಸ್ಥಾನಕ್ಕೆ ರಾಜೀನಾಮೆಯನ್ನು ಕೊಡಬೇಕಾಯಿತು. ಆದರೆ ಇದರಿಂದ ದಲಿತರಲ್ಲಿ, ಬುದ್ಧಿಜೀವಿಗಳಲ್ಲಿ ಜಾಗೃತಿ ಮುಗಿಲು ಮುಟ್ಟುವಂತಾಯಿತು(ಭಂಡಾರಿ ೨೦೦೩: XVII).

ಮೂರು ದಶಕಗಳ ನಂತರ ಘಟನೆ ಕುರಿತಂತೆ ಕಂಡುಬರುವ ಬಹುತೇಕರ ವಿಶ್ಲೇಷಣೆ ಮತ್ತು ಅಭಿಪ್ರಾಯವಿದು. ೧೯೭೩ರಲ್ಲಿ ಪೌರಾಡಳಿತ ಸಚಿವರಾದ ಬಸವಲಿಂಗಪ್ಪನವರು ಭಾಷಣವೊಂದರಲ್ಲಿ 'ಕನ್ನಡ ಪುಸ್ತಕಗಳನ್ನು ಓದುವುದರಿಂದ ಸ್ವತಂತ್ರ ವಿಚಾರಶಕ್ತಿಯಾಗಲಿ, ಸೇವಾ ಮನೋಭಾವವಾಗಲಿ ಬರುವುದಿಲ್ಲ. ಏಕೆಂದರೆ ಕನ್ನಡ ಸಾಹಿತ್ಯ ಬಹುಪಾಲು ಬೂಸ' ಎಂದಿದ್ದರು. ಪತ್ರಿಕೆಗಳಲ್ಲಿ 'ಕನ್ನಡ ಸಾಹಿತ್ಯ ಬೂಸ - ಬಿ.ಬಸವಲಿಂಗಪ್ಪ' ಎಂದು ವರದಿ ಪ್ರಕಟಿತವಾಗಿತ್ತು. ನಂತರ ರಾಜಕೀಯ ಸ್ವರೂಪ ಪಡೆದು, ಬಸವಲಿಂಗಪ್ಪ ಮತ್ತು ಆ ಸಮಾರಂಭದಲ್ಲಿ ಭಾಗವಹಿಸಿದ್ದ ಕೆಲವು ಸಚಿವರು ರಾಜೀನಾಮೆ ನೀಡಬೇಕಾಯಿತು. ಇದು ಸಾರ್ವಜನಿಕ ವಲಯದಲ್ಲಿ ಬಿರುಸಿನ ವಾತಾವರಣ ಸೃಷ್ಟಿಸಿತು. ಸಮೂಹ ಮಾಧ್ಯಮಗಳಲ್ಲಿ ಬಸವಲಿಂಗಪ್ಪನವರನ್ನು ಕನ್ನಡ ವಿರೋಧಿಯಾಗಿ ಬಿಂಬಿಸಲಾಯಿತು. ವಾರದೊಳಗೇ ಬಸವಲಿಂಗಪ್ಪನವರ ವಿರುದ್ಧ ರಾಜ್ಯಾದ್ಯಂತ ಮುಷ್ಕರಗಳು ಆರಂಭವಾದವು. ವಿದ್ಯಾರ್ಥಿಗಳಲ್ಲಿ ಪರ ವಿರೋಧ ಪ್ರತಿಭಟನೆಗಳು ರೂಪುಗೊಂಡವು. ರಾಜ್ಯದ ಕೆಲವು ಪ್ರದೇಶಗಳಲ್ಲಿ ದಲಿತ ವಿದ್ಯಾರ್ಥಿಗಳ ಮೇಲೆ ಹಲ್ಲೆ ನಡೆಯತೊಡಗಿತು. ಮುಖ್ಯಮಂತ್ರಿ ಅರಸು ಅವರು ಶಾಂತಿ ಕಾಪಾಡಲು ಜನತೆಯನ್ನು ಕೋರಿದರು. ಕುವೆಂಪು, ಅನಂತಮೂರ್ತಿ ಮತ್ತಿತರ ಸಾಹಿತಿಗಳು ಹೇಳಿಕೆಯ ಹಿಂದಿನ ಅರ್ಥ ಹೇಳಿ ನೈತಿಕವಾಗಿ ಬೆಂಬಲಿಸಿದರು. ಆದರೆ ಆ ಹೊತ್ತಿಗೆ ರಾಜೀನಾಮೆ ನೀಡಾಗಿತ್ತು. ಈ ಹೋರಾಟಗಳಲ್ಲಿ ಪಾಲ್ಗೊಂಡಿದ್ದ ದಲಿತ ಕವಿ ಸಿದ್ಧಲಿಂಗಯ್ಯ ಅವರು 'ಬಸವಲಿಂಗಪ್ಪನವರ ರಾಜೀನಾಮೆ ದಲಿತ ವರ್ಗಗಳಲ್ಲಿ ಅವರನ್ನು ಅತಿ ಜನಪ್ರಿಯ ವ್ಯಕ್ತಿಯನ್ನಾಗಿಸಿತು' ಎಂದಿರುವುದು ಸಮಾಜದೊಳಗಿದ್ದ ವಿವಿಧ ರೀತಿಯ ವಿಚಾರಧಾರೆಗಳೆಡೆಗೆ ಗಮನ ಸೆಳೆಯುವುದು. ರಾಜಕಾರಣದ ಪ್ರಭಾವ ಸಮಾಜದ ವಿವಿಧ ವರ್ಗಗಳಲ್ಲಿ ರೂಪುಗೊಂಡ ರೀತಿ ಹಾಗೂ ಪ್ರಕ್ರಿಯೆಯನ್ನು ತೆರೆದಿಡುವುದು. ಸಾಂಸ್ಕೃತಿಕ ಶ್ರೇಣೀಕರಣವಿರುವ ಸಮಾಜದೊಳಗಿನ ಸಾಂಸ್ಕೃತಿಕ ಸಮಾನತೆಗಾಗಿ ಆರಂಭವಾದ ಹೋರಾಟವಾಗಿ ಮೇಲ್ನೋಟಕ್ಕೆ ಕಾಣುವುದು.

ವಿವಾದಿತ ಭಾಷಣವೊಂದು ಪ್ರಕರಣವಾಗಿ ರೂಪ ಪಡೆದುದಲ್ಲದೆ ದೀರ್ಘಕಾಲಿಕವಾಗಿ ಪ್ರಭಾವ ಬೀರಿರುವುದು ಚಳವಳಿಯನ್ನಾಗಿ ಮಾರ್ಪಡಿಸಿತು. ಬೂಸಾ ಪ್ರಕರಣ ಸಾಮಾಜಿಕ ಚಳವಳಿಗಳಿಗೆ, ಆ ಮೂಲಕ ಜನ ಸಾಮಾನ್ಯರ ಬದುಕಿನ ಬದಲಾವಣೆಗಳಿಗೆ ಕಾರಣವಾಗಿ ಪರಿಣಮಿಸಿತು. ರಾಷ್ಟ್ರದಲ್ಲಿ ಕಂಡು ಬಂದ ಜೆ.ಪಿ.ಚಳವಳಿ ಮತ್ತು ತುರ್ತುಪರಿಸ್ಥಿತಿ ವಿರೋಧಿ ಹೋರಾಟಗಳಿಗೆ ಕರ್ನಾಟಕ ಸ್ಪಂದಿಸಿತಾದರೂ ವ್ಯಾಪಕವಾಗಿರದೆ, ಹೋರಾಟದ ಹಾದಿ ಬೇರೆ ರೀತಿಯಲ್ಲಿ ರೂಪುಗೊಂಡಿತ್ತು.

ಈ ಪ್ರಕರಣಕ್ಕೂ ಅಂದಿನ ಮುಖ್ಯಮಂತ್ರಿಯಾಗಿದ್ದ ದೇವರಾಜ ಅರಸು ಅವರಿಗೂ ನೇರವಾಗಿ ಅಥವಾ ಪರೋಕ್ಷವಾಗಿ ಯಾವುದೇ ಸಂಬಂಧ ಮೇಲ್ನೋಟಕ್ಕೆ ಕಂಡುಬರುವುದಿಲ್ಲ. ಆದರೂ ಅರಸರ ಆಡಳಿತ ಕಾಲದ ಪ್ರಮುಖ ಘಟ್ಟ, ಇದರ ಪರಿಣಾಮ ದೀರ್ಘಕಾಲಿಕವಾಗಿದ್ದರಿಂದ ಅರಸು ಆಡಳಿತ ಸಂಬಂಧಿ ಅಧ್ಯಯನದಲ್ಲಿ ಈ ಪ್ರಕರಣವನ್ನು ನಿರ್ಲಕ್ಷಿಸಲು ಸಾಧ್ಯವಾಗುವುದಿಲ್ಲ. ತುರ್ತುಪರಿಸ್ಥಿತಿ ಪೂರ್ವ ರಾಜಕಾರಣ ಮತ್ತು ಸಮಾಜವನ್ನು ಬಿಂಬಿಸುವುದು. ಮುಂದೆ ಅರಸರ ಕಾರ್ಯನೀತಿಗಳ ಮೇಲೆ ಇದರ ಪ್ರಭಾವವನ್ನು ಗುರುತಿಸಬಹುದು. ಇದರೊಡನೇ ಕನ್ನಡ ಸಾಹಿತ್ಯದಲ್ಲಿ ದೊಡ್ಡ ಸಂಚಲನ ಉಂಟುಮಾಡುವಷ್ಟು ಶಕ್ತಿಯುತವಾಗಿತ್ತು. ತುರ್ತುಪರಿಸ್ಥಿತಿಯ ನಂತರ ಕಂಡುಬಂದ ಬಂಡಾಯ, ದಲಿತ ಮೊದಲಾದ ಸಾಹಿತ್ಯ ಪಂಥದ ಸಾಹಿತಿಗಳು ಇದರಿಂದ ಪ್ರಭಾವಿತರಾಗಿರುವುದನ್ನು ಗಮನಿಸಬಹುದು. ಈ ದಿಸೆಯಲ್ಲಿ ಹಾವನೂರು ವರದಿ ತಯಾರಿ ಮತ್ತು ಜಾರಿಯು ಪರಿಣಾಮಕಾರಿಯಾಗಿ ಪ್ರಭಾವಿಸಿರುವುದನ್ನು ನೋಡಬಹುದು.

## ೨.೧.೨.೨. ಹಾವನೂರು ವರದಿ ಮತ್ತು ಹಿಂದುಳಿದ ವರ್ಗಗಳ ಮೇಲ್ಮುಖ ಚಲನೆ

ದೇವರಾಜ ಅರಸರ ಆಡಳಿತದಲ್ಲಿ ಭೂ ಸುಧಾರಣಾ ಕಾಯ್ದೆಯಷ್ಟೆ ಪ್ರಬಲ ಪ್ರಭಾವಿಯಾದ ಕಾರ್ಯಕ್ರಮವೆಂದರೆ ಹಾವನೂರು ವರದಿ ಅನುಷ್ಠಾನವಾಗಿದೆ. ಹಿಂದುಳಿದ ವರ್ಗಗಳ ಅಭಿವೃದ್ಧಿ ಹಿನ್ನೆಲೆಯಲ್ಲಿ ಕರ್ನಾಟಕ ರಾಜಕಾರಣದ ಪರಿಧಿಯನ್ನು ವಿಸ್ತರಿಸಿದ್ದಲ್ಲದೆ, ಸ್ವರೂಪವನ್ನೇ ಬದಲಾಯಿಸಿತು. 'ಪ್ರಾದೇಶಿಕ ರಾಜಕಾರಣದ ಆಡಳಿತದಲ್ಲಿ ಪ್ರಗತಿಪರತೆಯ ದೇವರಾಜ ಅರಸು' ಅವರನ್ನು ಕರ್ನಾಟಕದ ಮುಖ್ಯಮಂತ್ರಿಗಳಲ್ಲಿ ಸಾಮಾಜಿಕ ಕ್ರಾಂತಿಯುಗ ನಿರ್ಮಾಪಕ ಎಂಬಂತೆ ಬಿಂಬಿಸಲು ಪ್ರಮುಖ ಅಂಶಗಳಲ್ಲೊಂದು ಇದು. ಈ ದಿಕ್ಕಿನಲ್ಲಿ ಎರಡು ಹಂತಗಳನ್ನು ನೋಡಬಹುದು. ಮೊದಲಿಗೆ ಹಿಂದುಳಿದ ವರ್ಗಗಳ ಅಭಿವೃದ್ಧಿಗೆ ಸಮಿತಿಯನ್ನು ನೇಮಿಸಿ ವರದಿ ಅನುಷ್ಠಾನಗೊಳಿಸಿದ್ದು, ಎರಡನೆಯ ಹಂತ ರಾಜ್ಯ ರಾಜಕಾರಣದಲ್ಲಿ ಹಿಂದಿನ ಸಂಪ್ರದಾಯ ಮುರಿದು ರಾಜಕಾರಣದ ಮುಖ್ಯವಾಹಿನಿಗೆ ಹಿಂದುಳಿದ ವರ್ಗಗಳನ್ನು ಚುನಾವಣೆಯ ಮೂಲಕ ಬೃಹತ್ ಪ್ರಮಾಣದಲ್ಲಿ ತಂದು, ಪರ್ಯಾಯ ರಾಜಕೀಯ ಶಕ್ತಿಯಾಗಿ ಬೆಳೆಸಲು ಸಶಕ್ತಗೊಳಿಸಿದ್ದಾಗಿದೆ. ಇದಕ್ಕೆ ಪೂರಕವಾಗಿ

> ಹಾವನೂರು ವರದಿಯನ್ನಂತೂ ಅಲ್ಪಸಂಖ್ಯಾತರನ್ನು, ಹರಿಜನರನ್ನು ಒಂದುಗೂಡಿಸಲು ಮತ್ತು ಸಾಮಾಜಿಕ ಆರ್ಥಿಕ ರಂಗಗಳಲ್ಲಿ ಮೇಲ್ಮೈ ಪಡೆದಿದ್ದವರ ಬಲವನ್ನು ಮುರಿದು ಒಂದು ರೀತಿಯ ಹೊಸ ರಾಜಕೀಯ ಪರ್ಯಾಯ ಶಕ್ತಿಯನ್ನು ಹುಟ್ಟುಹಾಕಲು ಜಾರಿ ಮಾಡಿದರು(ಚಂದ್ರಶೇಖರ್ ೧೯೮೨: ೧೬)

ಎಂಬ ಅಭಿಮತವನ್ನು ನೋಡಬಹುದು. ಇಲ್ಲಿ ಹಾವನೂರು ವರದಿ ಮತ್ತು ಕರ್ನಾಟಕದ ರಾಜಕಾರಣದ ಬೆಳವಣಿಗೆಗಳನ್ನು ಅವಲೋಕಿಸಲು ಪ್ರಯತ್ನಿಸಲಾಗಿದೆ.

ಹಿಂದುಳಿದ ವರ್ಗಗಳಲ್ಲಿ ಹೊಸ ಅಲೆ ಹುಟ್ಟುಹಾಕಿ ಸ್ವಲ್ಪ ಸಮಯದವರೆಗೆ ಅದನ್ನು ಪರ್ಯಾಯ ರಾಜಕೀಯ ಶಕ್ತಿಯಾಗಿ ಬೆಳೆಸಿದವರು ಅರಸರು. ಕರ್ನಾಟಕ ರಾಜಕಾರಣದಲ್ಲಿ ೧೯೭೦ರ ದಶಕದಲ್ಲಿ ಕಂಡು ಬಂದ ಬದಲಾವಣೆಯಲ್ಲಿ ಜಾತಿ ಪಾತ್ರ ಕುರಿತು ಸಾಮಾನ್ಯವಾಗಿ ಚರ್ಚಿಸಲಾಗುವುದು. ಹಾವನೂರು ಸಮಿತಿಯ ನೇಮಕ ಮತ್ತು ಅದರ ಜಾರಿ ಮಹತ್ವದ ಮೈಲುಗಲ್ಲಾಗಿದೆ. ಸ್ವತಃ ದೇವರಾಜ ಅರಸು ಅವರು ಹಾವನೂರು ವರದಿಯನ್ನು 'ಹಿಂದುಳಿದ ವರ್ಗಗಳ ಬೈಬಲ್' ಎಂದು ಕರೆಯುವುದನ್ನು ನೋಡಬಹುದು.

> ಕರ್ನಾಟಕ ಮತ್ತು ಭಾರತದ ರಾಜಕಾರಣವನ್ನು ಒಟ್ಟಾಗಿ ಅಧ್ಯಯನ ಮಾಡುವವರಿಗೆ ಗಣನೀಯ ಮಹತ್ವದ ಒಂದು ರಾಜಕೀಯ ಘಟನೆ ದೇವರಾಜ ಅರಸು ಆಡಳಿತ. ಇವರನ್ನು ಮೂರು ಅಂಶಗಳು ವಿಶಿಷ್ಟರನ್ನಾಗಿಸುತ್ತದೆ – ಅರಸು ಸಾಂಖ್ಯಿಕವಾಗಿ ಚಿಕ್ಕದಾಗಿರುವ ಜಾತಿಯ ಗುಂಪಿನಿಂದ ಹೊರಹೊಮ್ಮಿದ ಮುಖ್ಯಮಂತ್ರಿ, ನಿಸ್ಸಂಶಯವಾಗಿ ರಾಷ್ಟ್ರೀಯ ನೆಲೆಯಲ್ಲಿ ರಾಜಕಾರಣವನ್ನು ಪ್ರಭಾವಿಸಿದ ರಾಜ್ಯದ ಮೊದಲ ರಾಜಕಾರಣಿ(ನಟರಾಜ್ ೧೯೮೨: ೧೫೦೩).

ರಾಷ್ಟ್ರೀಯ ನೆಲೆಯಲ್ಲಿ ಹಿಂದುಳಿದ ವರ್ಗಗಳ ರಾಜಕಾರಣದ ಪ್ರಭಾವವನ್ನು ಸೂಚಿಸುವುದು. ಈ ಲೇಖನದಲ್ಲಿ 'ಮೊದಲಿನಿಂದಲೂ ಕರ್ನಾಟಕ ರಾಜಕಾರಣದಲ್ಲಿ ಜಾತಿಯ ಪಾತ್ರ ಹಿರಿದಿದೆ; ಸರ್ಕಾರಿ ಕೆಲಸದಲ್ಲಿ ಮೀಸಲಾತಿ ಹಾಗೂ ಜಾತಿ ಒಕ್ಕೂಟ ಪ್ರಮುಖ ಪಾತ್ರ ವಹಿಸಿದೆ; ಅಲ್ಲಿಯವರೆಗಿನ ಮುಖ್ಯಮಂತ್ರಿಗಳ ಆಯ್ಕೆಯಲ್ಲಿ ಜಾತಿ ಪಾತ್ರ ವಿಶ್ಲೇಷಿಸುತ್ತ ಅರಸು ಅವರ ಬೆಳವಣಿಗೆಗೆ ಹಲವು ಜಾತಿಗಳ ಒಗ್ಗೂಡುವಿಕೆ ಕಾರಣ' ಎಂದು ವಿಮರ್ಶಿಸಲಾಗಿದೆ. ೧೯೭೨ರ ಚುನಾವಣೆಯಲ್ಲಿ ಕಾಂಗ್ರೆಸ್ ಶಾಸಕರಲ್ಲಿ ಅಲ್ಪಸಂಖ್ಯಾತ ಜಾತಿ ಮತ್ತು ಧರ್ಮಗಳ ಸದಸ್ಯರು ಹೆಚ್ಚಾಗಲು, ಆ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದ ಟಿಕೆಟ್ ಹಂಚುವ ಕಾರ್ಯ ಅರಸರು ನಿರ್ವಹಿಸಿದ್ದು ಪ್ರಮುಖವಾಗಿತ್ತು. ೧೯೭೨ರ ಡಿಸೆಂಬರ್ ಹೊತ್ತಿಗೆ ಹಾವನೂರು ನೇತೃತ್ವದಲ್ಲಿ ಸಮಿತಿ ರಚಿಸಿ, ರಾಜ್ಯ ರಾಜಕಾರಣದಲ್ಲಿ ಎರಡು ಪ್ರಬಲ ಜಾತಿಗಳ ಅಸಮಾಧಾನಕ್ಕೆ ಒಳಗಾದರು. ಇದರೊಡನೆ ಹಿಂದುಳಿದ ವರ್ಗಗಳ ಪ್ರತಿನಿಧಿಗಳ ರಾಜಕಾರಣ ಪ್ರವೇಶಕ್ಕೆ ವಿಶಾಲ ತಳಹದಿ ಒದಗಿಸಿದರು. ಹಾವನೂರು ಅವರು ವರದಿಯನ್ನು ಸರ್ಕಾರಕ್ಕೆ ೧೯೭೫ರ ನವೆಂಬರ್‌ನಲ್ಲಿ ಸಲ್ಲಿಸುವ

ವೇಳೆಗಾಗಲೇ ಮೂರು ವರ್ಷಗಳಾಗಿತ್ತು. ಈ ಸಂದರ್ಭದಲ್ಲಿ ಅರಸರು ತಮ್ಮ ಭಾಷಣಗಳಲ್ಲಿ ಜಾತಿ ವರ್ಗಗಳ ಅಸಮಾನತೆ ಹಾಗೂ ನಿವಾರಣೆ ಕುರಿತಂತೆ ಒತ್ತಿ ಒತ್ತಿ ಮಾತನಾಡುತ್ತಿದ್ದರು. ಅಲ್ಲಿಯವರೆಗೆ ರಾಜಕೀಯ ಶಕ್ತಿಯನ್ನೆ ಹೊಂದಿರದ ಜಾತಿಗಳ ನಾಯಕರನ್ನು ಮುಂಚೂಣಿಯಲ್ಲಿ ಬಿಂಬಿಸಲಾಗುತ್ತಿತ್ತು. ಇದಕ್ಕೆ ಪೂರಕವಾಗಿ ಅರಸು ಅವರ ಸರ್ಕಾರ ಹಿಂದಿನ ಸರ್ಕಾರಗಳಿಗಿಂತ ಹಿಂದುಳಿದ ವರ್ಗಗಳ ಅಭಿವೃದ್ಧಿಗೆ ಹೆಚ್ಚು ಹಣವನ್ನು ವೆಚ್ಚ ಮಾಡಿರುವುದನ್ನು ಕೆಳಗಿನ ದಾಖಲೆಯಲ್ಲಿ ನೋಡಬಹುದು.

> ನಾಲ್ಕನೇ ಪಂಚವಾರ್ಷಿಕ ಯೋಜನೆಯಲ್ಲಿ ೫೫೯ ಕೋಟಿಗಳಿದ್ದದ್ದು, ಐದನೇ ಪಂಚವಾರ್ಷಿಕ ಯೋಜನೆಯಲ್ಲಿ ೧೨೬೦ಕೋಟಿಗಳಾಗಿದೆ. ೧೯೭೪ - ೧೯೭೫ರಲ್ಲಿ ೨೦೮ ಕೋಟಿಗಳನ್ನು ಖರ್ಚು ಮಾಡಲಾಗಿದೆ(ಕರ್ನಾಟಕ ಸರ್ಕಾರ ೧೯೭೫: ೪೫).

ಇದರೊಡನೆ ಸಾರ್ವಜನಿಕ ವಲಯದಲ್ಲಿ ಜಾತಿ ವಿನಾಶ ಹೋರಾಟ, ಲೇಖಕರ ಒಕ್ಕೂಟ ಮೊದಲಾದ ಇತರ ಕಾರ್ಯಚಟುವಟಿಕೆಗಳನ್ನು ಕಾಣಬಹುದು.

**೨೫ ಅಕ್ಟೋಬರ್ ೧೯೭೬ರಂದು ತೆಗೆದ ಅರಸು ಅವರ ಭಾವಚಿತ್ರ**



ಕೃಪೆ : ಡೆಕ್ಕನ್ ಹೆರಾಲ್ಡ್, ಎಂ.ಜಿ.ರೋಡ್, ಬೆಂಗಳೂರು. ಚಿತ್ರ ಸಂಖ್ಯೆ : ೨.೬

ಹಿಂದುಳಿದ ವರ್ಗಗಳ ಅಭಿವೃದ್ಧಿ ಕಾರ್ಯಕ್ರಮಗಳ ಹಿನ್ನೆಲೆಯಲ್ಲಿ ೧೯೭೪ರಲ್ಲಿ ಜಾರಿಯಾದ ಭೂ ಸುಧಾರಣಾ ಕಾಯ್ದೆಯನ್ನು ಗಮನಿಸಬೇಕಾಗಿದೆ. ಇದು ಕೇಂದ್ರ ಸರ್ಕಾರದ ನಿರ್ದೇಶನದ ಮೇರೆಗೆ ರಾಜ್ಯದ ಅನುಕೂಲತೆಗೆ ತಕ್ಕಂತೆ ಜಾರಿಯಾದ ಕಾರ್ಯಕ್ರಮವಾಗಿದ್ದು, ಸಾಮಾಜಿಕ ಅಸ್ಮಿತೆಯನ್ನು ಹುಟ್ಟುಹಾಕಿತ್ತು. ಹಾವನೂರು ವರದಿಯ ಕರಡು ಸರ್ಕಾರಕ್ಕೆ ಸಲ್ಲಿಸುವ ವೇಳೆಗೆ ಅರಸು ಸರ್ಕಾರ ಆಡಳಿತಕ್ಕೆ ಬಂದು ಮೂರು ವರ್ಷವಾಗಿತ್ತು. ಹಿಂದುಳಿದ ವರ್ಗಗಳ ಅಭಿವೃದ್ಧಿ ನೆಲೆಯಲ್ಲಿ ಹಲವು ಕಾರ್ಯಕ್ರಮಗಳು ಜಾರಿಗೊಳ್ಳುತ್ತಿದ್ದವು. ೧೯೭೪ರ ಭೂ ಸುಧಾರಣಾ ಕಾಯ್ದೆ ಹಿಂದುಳಿದ ವರ್ಗಗಳಲ್ಲಿ ಜಾಗೃತಿ ಮೂಡಿಸುವಲ್ಲಿ ಪೂರಕವಾಗಿದೆ ಕಾರ್ಯನಿರ್ವಹಿಸಿದೆಯಾದರೂ ಭೂ ಸುಧಾರಣೆ ಬಗ್ಗೆ ಸಮೂಹ ಮಾಧ್ಯಮಗಳಲ್ಲಿ ಚರ್ಚೆ ನಡೆದಷ್ಟು ವಿಸ್ತಾರವಾಗಿ ಹಾವನೂರು ವರದಿಯ ಚರ್ಚೆ ಹಾಗೂ ಪ್ರಚಾರ ಕಂಡುಬರುವುದಿಲ್ಲ.

೧೯೭೨ರ ನಂತರ ಹಿಂದುಳಿದ ವರ್ಗಗಳಲ್ಲಿ ಕಂಡುಬಂದ ಬದಲಾವಣೆಗೆ ದೇವರಾಜ ಅರಸು ಅವರ ಆಡಳಿತದೊಂದಿಗೆ ಭೂ ಹಿಡುವಳಿಯ ಸ್ವರೂಪವೂ ಪೂರಕವಾದ ಅಂಶವಾಗಿದೆ. ಈ ನಿಟ್ಟಿನಲ್ಲಿ

> ಕಡಿದಾಳ್ ಮಂಜಪ್ಪನವರ ಕಾಲದಲ್ಲಿ ಸರಕಾರ ಜಾರಿಗೆ ತಂದ ಭೂ ಸುಧಾರಣಾ ಕಾಯಿದೆಯ ಪರಿಣಾಮವಾಗಿ ಭೂ ಹಿಡುವಳಿದಾರರ ಸಂಖ್ಯೆ ಜಾಸ್ತಿಯಾಗಿರುವುದು ಕಂಡುಬರುತ್ತದೆ. ಇದರಿಂದಾಗಿ ಕೃಷಿಯಲ್ಲಿ ಭೂ ರಹಿತ ಕಾರ್ಮಿಕರಿಗೆ ಯಾವುದೇ ಉಪಯೋಗ ಆಗಲಿಲ್ಲವಾದರೂ ಲಿಂಗಾಯಿತ ಮತ್ತು ಒಕ್ಕಲಿಗರನ್ನು ಹೊರತುಪಡಿಸಿ ಇತರ ಜಾತಿಯ ಗೇಣಿದಾರರು ಭೂ ಒಡೆತನ ಹೊಂದಲು ಸಾಧ್ಯವಾಯಿತು. ೧೯೭೨ರ ನಂತರ ಅಂದರೆ ದೇವರಾಜ ಅರಸುರವರು ಅಧಿಕಾರಕ್ಕೆ ಬಂದ ನಂತರ ಕರ್ನಾಟಕದ ರಾಜಕಾರಣದಲ್ಲಿ ಆದ ಬದಲಾವಣೆಗೆ ಕಾರಣ ಮತ್ತು ಅದರ ಪರಿಣಾಮಗಳನ್ನು ಈ ಹಿನ್ನೆಲೆಯಿಂದಲೇ ನೋಡಬೇಕು(ಸದಾನಂದ ೨೦೧೦: ೪೩೪).

ಹಿಂದುಳಿದ ವರ್ಗಗಳ ಜಾಗೃತಿಯಲ್ಲಿ ಭೂಮಿಯ ಪಾತ್ರ ಮುಖ್ಯವೆಂಬ ಅಂಶಕ್ಕೆ ಒತ್ತು ಕೊಡಲಾಗಿದೆ. ೧೯೭೪ರ ಭೂ ಸುಧಾರಣೆ ಮತ್ತು ಹಿಂದುಳಿದ ವರ್ಗಗಳ ಅಭಿವೃದ್ಧಿಯ ನಡುವಿನ ಸಂಬಂಧಗಳ ಕುರಿತ ಆಳವಾದ ಅಧ್ಯಯನ ಪ್ರಜಾಪ್ರಭುತ್ವ ಮತ್ತು ಆಡಳಿತ ವ್ಯವಸ್ಥೆಯ ಹಲವು ಪದರಗಳನ್ನು ತೆರೆದಿಡುವುದು.

> ದಲಿತರು ಮತ್ತು ಅಲ್ಪಸಂಖ್ಯಾತರ ಸಲುವಾಗಿ ಇಂದಿರಾ ಗಾಂಧಿ ಅವರು ಮಾಡಿದ್ದ ಸುಧಾರಣೆಗಳನ್ನು ದೇವರಾಜ ಅರಸರು ಕರ್ನಾಟಕದ ಮಟ್ಟಿಗೆ ಹಿಂದುಳಿದ ವರ್ಗದವರಿಗೆ ಅನ್ವಯಿಸಿದ್ದರು. ಈ ನೀತಿಯು ಅವರ ರಾಜಕೀಯ ಉನ್ನತಿಗೆ ಸೋಪಾನವಾಗಿತ್ತು(ರಾಮಚಂದ್ರ ೨೦೦೦: ೧೨೬).

ಹಾವನೂರು ವರದಿ ಜಾರಿ ಮತ್ತು ಹಿಂದುಳಿದ ವರ್ಗಗಳ ಅಭಿವೃದ್ಧಿ ಕಾರ್ಯಕ್ರಮ ಹೊಂದಿರುವ ನೆಲೆ ಕುರಿತ ಮತ್ತೊಂದು ಆಯಾಮವಾಗಿದೆ. ಈ ಮಾತು ಅರಸರ ಕಾರ್ಯನೀತಿಯ ಹಿಂದಿನ ಪ್ರೇರಣೆಯನ್ನು ಸೂಚಿಸುತ್ತಲೇ ರಾಷ್ಟ್ರೀಯ ನೆಲೆಯ ಚೌಕಟ್ಟನ್ನು ಒದಗಿಸುತ್ತಿದೆ. ಭಾರತದ ಕೆಲವು ರಾಜ್ಯಗಳಲ್ಲಿ ಅಂದು ಕಂಡುಬಂದ ಹಿಂದುಳಿದ ವರ್ಗಗಳ ಅಭಿವೃದ್ಧಿಗೆ ಕರ್ನಾಟಕದ ಆಡಳಿತ ಮಾದರಿಯಾಗಿ, ಪ್ರೇರಣೆ ಒದಗಿಸಿತ್ತು. ಈ ಹೊತ್ತಿಗೆ ಆರ್ಥಿಕ, ಸಾಮಾಜಿಕ ಹಿನ್ನೆಲೆಯಲ್ಲಿ ಪ್ರಗತಿ ಸಾಧಿಸಲು ರಾಜಕೀಯ ಶಕ್ತಿಯ ಅವಶ್ಯಕತೆಯ ಅರಿವು ಹಿಂದುಳಿದ ವರ್ಗಗಳಲ್ಲಿ ಉಂಟಾಗಿತ್ತು. ಹಾವನೂರು ವರದಿ ನೇಮಕ ಮತ್ತು ಅನುಷ್ಠಾನ ಅರಸು ಅವರನ್ನು ಮುತ್ಸದ್ದಿ ರಾಜಕಾರಣಿಯನ್ನಾಗಿಸಿ, ಸಮಕಾಲೀನ ರಾಜ್ಯ ರಾಜಕಾರಣ ಹಾಗೂ ಸಾಮಾಜಿಕ ಬದಲಾವಣೆಗಳಿಗೆ ನಾಂದಿ ಹಾಡಿತ್ತು. ಇದರೊಡನೆ ೧೯೭೪ರ ಭೂ ಸುಧಾರಣಾ ಕಾಯ್ದೆ ಮತ್ತು ಇಪ್ಪತ್ತು ಅಂಶಗಳ ಕಾರ್ಯಕ್ರಮಗಳು ಪೂರಕವಾಗಿ ನೆಲೆಗಟ್ಟನ್ನು ಒದಗಿಸಿ ಕೊಟ್ಟಿತ್ತು.

### ೨.೧.೩. ಸಾಂಸ್ಕೃತಿಕ ನೆಲೆಗಟ್ಟು

ಸಂಸ್ಕೃತಿ ಆಯಾ ಪ್ರದೇಶದ ಮನೋಭಾವದ ಸಂಕೇತವೂ ಹೌದು. ಸಮಕಾಲೀನ ಸಂಸ್ಕೃತಿ ಮತ್ತು ರಾಜಕಾರಣವನ್ನು ಒಟ್ಟಾಗಿ ಚಿಂತಿಸುವ ಮೂಲಕ ಸಾಂಸ್ಕೃತಿಕ ನೆಲೆಗಟ್ಟಿನ ಹರವನ್ನು ಅರಿಯಬಹುದಾಗಿದೆ. ದೇವರಾಜ ಅರಸು ಅವರ ಆಡಳಿತ ಕುರಿತಂತೆ ಇರುವ ಹೆಗ್ಗಳಿಕೆಗಳಲ್ಲಿ ಸಾಂಸ್ಕೃತಿಕ ಲೋಕದ ಮಾನ್ಯತೆ ಪಡೆಯಲು ಸಾಧ್ಯವಾದುದು ಸಹ ಮುಖ್ಯವಾಗಿದೆ. ಈ ನಿಟ್ಟಿನಲ್ಲಿ ಎರಡು ವಿಚಾರಗಳನ್ನು ಮುಖ್ಯವಾಗಿ ಕಾಣಬಹುದು. ಬಹುದಿನಗಳ ಮತ್ತು ಬಹುಜನಗಳ ಬೇಡಿಕೆಯಾದ 'ಕರ್ನಾಟಕ' ಎಂದು ರಾಜ್ಯಕ್ಕೆ ಪುನರ್ ನಾಮಕರಣ ಮಾಡಿದುದು. 'ಆಡಳಿತ ಭಾಷೆ'ಯಾಗಿ ರಾಜ್ಯದ ಬಹುಸಂಖ್ಯಾತರ ಮನೆಮಾತಾದ ಕನ್ನಡವನ್ನು ಜಾರಿಗೊಳಿಸಿದುದು. ಇಲ್ಲಿ ಚರ್ಚಿಸುತ್ತಿರುವ ಸಾಂಸ್ಕೃತಿಕ ನೆಲೆಗಟ್ಟಿಗೂ ತುರ್ತುಪರಿಸ್ಥಿತಿಗೆ ಮೇಲ್ನೋಟಕ್ಕೆ ನೇರ ಸಂಬಂಧವಿಲ್ಲ. ಆದರೆ ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳಲ್ಲಿ ಕನ್ನಡ ಭಾಷಾ ಹೋರಾಟಗಾರರು ಬಹುಸಂಖ್ಯೆಯಲ್ಲಿ ನೇರವಾಗಿ ಪಾಲ್ಗೊಂಡಿಲ್ಲದಿರುವುದನ್ನು ಗಮನಿಸಬಹುದು. ಈ ದಿಸೆಯಲ್ಲಿ ಅರಸು ಅವರ ಭಾಷಾ ನಿಲುವುಗಳೊಡನೆ ಇರುವ ಪರಸ್ಪರ ಸಂಬಂಧವಿರುವುದನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ.

### ೨.೧.೩.೧. ಕರ್ನಾಟಕ ನಾಮಕರಣ

ರಾಜ್ಯದ ಮರುನಾಮಕರಣ ಕನ್ನಡ ಸಾಂಸ್ಕೃತಿಕ ಜಗತ್ತು ಹಾಗೂ ಭಾಷಿಕರಿಗೆ ಸಂಬಂಧವಿರುವಂತೆ ಮೇಲ್ನೋಟಕ್ಕೆ ಕಂಡುಬಂದರೂ ವಿಶಾಲವಾದ ರಾಜಕೀಯ ಹರವನ್ನು ಹೊಂದಿದೆ. ಕರ್ನಾಟಕ ಏಕೀಕರಣ ಮತ್ತು ನಾಮಕರಣ ಹಲವು ದಶಕಗಳ ಹೋರಾಟದ ಕಥನವಾಗಿದೆ. ಏಕೀಕರಣದ[1] ನಂತರ ರಾಜ್ಯದ ನಾಮಕರಣಕ್ಕೆ ಎರಡು ದಶಕಗಳ ಹೋರಾಟ ನಡೆಯಿತು. ೧೯೭೩ರಲ್ಲಿ 'ವಿಶಾಲ ಮೈಸೂರು ರಾಜ್ಯ'ಕ್ಕೆ ಕರ್ನಾಟಕವೆಂದು ಮರುನಾಮಕರಣ ಆಗಬೇಕೆಂಬ ಕನಸು ನನಸಾದ ಗಳಿಗೆ. ಆ ಸಂದರ್ಭದ ಮುಖ್ಯಮಂತ್ರಿ ಆದ ದೇವರಾಜ ಅರಸು ಅವರು ಇದರ ಶ್ರೇಯಸ್ಸಿಗೆ ಪಾತ್ರರಾಗಿದ್ದರು.

ಕರ್ನಾಟಕ ನಾಮಕರಣ ದೇವರಾಜ ಅರಸರಿಗೆ ಸಾಂಸ್ಕೃತಿಕ ಲೋಕದಲ್ಲಿ ಮಾನ್ಯತೆ ತಂದುಕೊಟ್ಟಿತ್ತು. ಅಲ್ಲಿಯವರೆಗೆ ಸಾಂಸ್ಕೃತಿಕವಾಗಿ ಒಪ್ಪಿತವಾಗಿದ್ದ 'ಕರ್ನಾಟಕ' ಎಂಬ ಹೆಸರು ರಾಜಕೀಯವಾಗಿ ಒಪ್ಪಿಗೆ ಪಡೆಯಲು ಸಾಧ್ಯವಾಗಿರಲಿಲ್ಲ. ಏಕೀಕರಣ ಕಾಲದ ಮುಖ್ಯಮಂತ್ರಿಗಳಿಗೆ ನಾಮಕರಣ ಕುರಿತ ಸಾಂಸ್ಕೃತಿಕ ಜಗತ್ತಿನ ಬಯಕೆ ಬಗ್ಗೆ ಅರಿವಿತ್ತಾದರೂ ಅಗ ಪೂರೈಸಲು ಆಗಿರಲಿಲ್ಲ. ಅರಸು ಅವರ ಕಾಲದಲ್ಲಿ ನಾಮಕಾರಣ ಸಾಧ್ಯವಾದ ಕುರಿತು ಕೆಳಗಿನ ಅಭಿಮತವನ್ನು ನೋಡಬಹುದಾಗಿದೆ.

> ಅಧಿವೇಶನ ಹೋಗಿ ಹೊತ್ತವರು ಈ ನಿರ್ಧಾರವನ್ನು ಕೈಗೊಳ್ಳುವುದಕ್ಕೆ ಅಳೆದು ಸುರಿದು ಹಿಂದುಮುಂದು ನೋಡುತ್ತಿದ್ದಾಗ ೧೯೭೩ರಲ್ಲಿ ಅರಸುರವರ ನಾಯಕತ್ವದಲ್ಲಿ ದೃಢವಾದ ಒಂದು ನಿರ್ಧಾರವು ಮೂಡಿ ನಾಡಿಗೆ 'ಕರ್ನಾಟಕ' ಎಂಬ ಹೆಸರು ಪುನರುದಿತವಾಯಿತು(ವೆಂಕಟಸುಬ್ಬಯ್ಯ ೧೯೮೯: ೩).

**ಕರ್ನಾಟಕ ನಾಮಕರಣ ಸಂದರ್ಭದ ಚಿತ್ರ**



ಕೃಪೆ: ವಾರ್ತಾ ಇಲಾಖೆ, ಕರ್ನಾಟಕ ಸರ್ಕಾರ. ಮುಖ್ಯಮಂತ್ರಿ ದೇವರಾಜ ಅರಸು ಮತ್ತು ರಾಜ್ಯಪಾಲರಾದ ಉಮಾಶಂಕರ್. ಚಿತ್ರ ಸಂಖ್ಯೆ : ೨.೭

೧೯೫೬ರಿಂದ ೧೯೭೩ರವರೆಗೆ ಕರ್ನಾಟಕವೆಂದು ಮರುನಾಮಕರಣ ಆಗುವವರೆಗೆ ಸದನದಲ್ಲಿ ಚರ್ಚೆಗಳು ನಡೆಯುತ್ತಿತ್ತು. ೧೯೬೫ರ ನಂತರ ಈ ಹೋರಾಟಗಳು ತೀವ್ರವಾಗತೊಡಗಿದ್ದು, ರಾಜ್ಯದ ಮರು ನಾಮಕರಣ ಅನಿವಾರ್ಯ ಎಂಬಂಥ ಪರಿಸ್ಥಿತಿ ಉಂಟಾಗಿತ್ತು. ಈ ಹಿನ್ನೆಲೆಯಲ್ಲಿ ಕನ್ನಡದ ಪ್ರಮುಖ ಸಾಹಿತಿಯಾದ ಕುವೆಂಪು ಅವರು 'ಅನೇಕರ ತಪಸ್ಸಿನ ಫಲ ಅರಸು ಅದೃಷ್ಟಯೋಗದಲ್ಲಿ ಸಿದ್ಧಿಸಿದೆ' ಎಂದಿರುವುದನ್ನು ಗಮನಿಸಬಹುದು.

> ಇಂಥ ಮಹತ್ವದ ಕಾರ್ಯಗಳು ಆಗುವಾಗ, ನಾವು ಒಂದೊಂದು ಕಾಲಕ್ಕೆ ನಿಮಿತ್ತ ಮಾತ್ರವಾಗುತ್ತೇವೆ ಅಷ್ಟೆ ಎಂದು ನಾನು ತಿಳಿದುಕೊಂಡಿದ್ದೇನೆ. ಇದು ನನಗೆ ವೈಯಕ್ತಿಕವಾಗಿ ಹೆಮ್ಮೆ ಎಂದಲ್ಲ. ನಾನು ಒಂದು ನಿಮಿತ್ತವಾಗಿದ್ದೇನೆ, ಅದಕ್ಕೆ ಸಂದರ್ಭ ಕಾರಣ ... ವೈಯಕ್ತಿಕವಾಗಿ ಇದರಲ್ಲಿ ನನ್ನ ಪ್ರತಿಷ್ಠೆ ಇಲ್ಲ. ಜನಮನಕ್ಕೆ ಸ್ಪಂದಿಸಿದ್ದೇನೆ. ನುಡಿದಂತೆ ನಡೆದಿದ್ದೇನೆ ಎಂಬ ನಂಬಿಕೆ(ಅರಸು ೨೦೦೦: ೪೩).

ಸದನದಲ್ಲಿ ರಾಜ್ಯದ ಮರು ನಾಮಕರಣದ ಮಸೂದೆ ಅಂಗೀಕರಿಸಿದಾಗಿನ ಅರಸು ಅವರ ಭಾಷಣದ ಭಾಗವಿದು. ಅರಸು ಅವರಿಗೆ ಸಮಕಾಲೀನ ಬೇಡಿಕೆ ಹಾಗೂ ಕಾರ್ಯದ ಯಶಸ್ಸಿನ ಅರಿವಿತ್ತು ಎಂಬುದನ್ನು ಸೂಚಿಸುವುದು. ರಾಜ್ಯದ ಮರು ನಾಮಕರಣಕ್ಕೆ ಬಹುಜನರ ಒತ್ತಾಯಗಳಿದ್ದರೂ ಜಾರಿಯಾಗದೆ ಇದ್ದದ್ದೆ ಅದರ ತೊಡಕಿನ ಬಗ್ಗೆ ಗಮನ ಸೆಳೆಯುವುದು. ಇದು ಅರಸು ಆಡಳಿತ ಕಾಲದ ಆರಂಭಿಕ ಘಟನೆಯಾದರೂ ಇಡೀ ಆಡಳಿತಘಟ್ಟದಲ್ಲಿ ಪರ್ಯಾಯ ರಾಜಕೀಯ ಶಕ್ತಿಯಾಗಿ ಬೆಳೆಯುವ ಪ್ರಥಮ ಹಂತವಾಗಿದೆ. ೧೯೭೨ರಲ್ಲಿ ನಡೆದ ಚುನಾವಣೆ ಪ್ರಣಾಳಿಕೆಯಲ್ಲಿ ಪಕ್ಷ ಆಡಳಿತಕ್ಕೆ ಬಂದರೆ ಕರ್ನಾಟಕವೆಂದು ರಾಜ್ಯಕ್ಕೆ ಮರು ನಾಮಕರಣ ಮಾಡುವುದಾಗಿ ಭರವಸೆ ನೀಡಲಾಗಿತ್ತು. ಇದನ್ನು ಪೂರೈಸುವ ಮೂಲಕ ತಮ್ಮ ಸ್ಥಾನ ಮಾನ ಹೆಚ್ಚಿಸಿಕೊಂಡರು ಹಾಗೂ ಆಡಳಿತಕ್ಕೆ ಭದ್ರ ಬುನಾದಿ ಹಾಕಿದರು. ಇದರಿಂದ ಸಾಂಸ್ಕೃತಿಕ ಲೋಕದ ಮಾನ್ಯತೆಯೂ ದೊರೆಯಿತು. ಅರಸು 'ಕರ್ನಾಟಕದ ಅರಸು'ವಾಗಿ ನೆನಪಿನಲ್ಲಿ ಉಳಿಯುವಂತೆ ಮಾಡಿತು.

### ೨.೧.೩.೨. ಆಡಳಿತ ಭಾಷೆಯಾಗಿ ಕನ್ನಡ

ಕರ್ನಾಟಕದಲ್ಲಿ ಕನ್ನಡ ಆಡಳಿತ ಭಾಷೆಯಾಗಬೇಕೆಂಬುದು ಬಹಳ ಕಾಲದ ಬೇಡಿಕೆ. ಭಾಷೆ ಸಾಂಸ್ಕೃತಿಕ ಲೋಕಕ್ಕೆ ಸಂಬಂಧಿಸಿದ್ದರೂ ಆರ್ಥಿಕ ಸಾಮಾಜಿಕ ನೆಲೆಯನ್ನು ಹೊಂದಿರುವುವು. ಇದರೊಡನೆ ಭಾಷಾ ರಾಜಕಾರಣ ರಾಜ್ಯ ರಾಜಕಾರಣದ ಹಲವು ಹಂತಗಳಲ್ಲಿ ಪ್ರಮುಖ ಪಾತ್ರವಹಿಸಿರುವುದನ್ನು ಗುರುತಿಸಬಹುದು. ಆರಂಭದಿಂದಲೂ ಕನ್ನಡಪರ ಹೋರಾಟಗಳನ್ನು ಕಾಣಬಹುದಾದರೂ ೧೯೮೦ರ ದಶಕದಲ್ಲಿ ಹೆಚ್ಚು ತೀವ್ರವಾಗಿ ಪ್ರಕಟಗೊಂಡಿತು. ೧೯೫೬ರಲ್ಲಿ ಭಾಷಾ ಆಧಾರಿತ ಪುನರ್ ವಿಂಗಡನೆಯ ನಂತರ ರಾಷ್ಟ್ರೀಯ ವಲಯದಲ್ಲಿ ಭಾಷೆ ರಾಜ್ಯಗಳ ರಾಜಕಾರಣದಲ್ಲಿ ನಿರ್ಣಾಯಕ ಪಾತ್ರವಹಿಸತೊಡಗಿತ್ತು. ಭಾಷಾ ರಾಜಕಾರಣದಿಂದ ಉಂಟಾಗುವ ಸಾಂಸ್ಕೃತಿಕ ನಷ್ಟ ಅಥವಾ ಪ್ರಭುತ್ವ ವಿರೋಧಿ ಭಾವನೆಗಳ ನಡುವೆಯೂ ಅತ್ಯಂತ ಸಮರ್ಥವಾಗಿ ಭಾಷಾ ಆಧಾರಿತ ರಾಜ್ಯಗಳ ಪುನರ್ ವಿಂಗಡನೆ ಮತ್ತು ಆಡಳಿತ ಭಾಷೆಯ ಠರಾವು ವಿವಾದಿತ ವಿಚಾರವಾಗಿ ರಾಷ್ಟ್ರದಾದ್ಯಂತ ಪ್ರಮುಖ ಪಾತ್ರವಹಿಸಿದೆ. ಪ್ರಾದೇಶಿಕ ರಾಜಕಾರಣದಲ್ಲಿ ಆಂತರಿಕ ಘರ್ಷಣೆಗೆ ಭಾಷಾ ರಾಜಕಾರಣ ಮುಖ್ಯ ಕಾರಣಗಳಲ್ಲೊಂದಾಗಿದೆ.

> ಪ್ರಮುಖವಾಗಿ ಗಮನಾರ್ಹವಾದುದು ರಾಜ್ಯದ ಪ್ರಧಾನ ಭಾಷಿಕ ನಿವಾಸಿಗಳ ಗುಂಪು ಅಥವಾ ಸಂವಿಧಾನಿಕವಾಗಿ ರಚಿತವಾದ ರಾಜ್ಯ. ಅಲ್ಲಿಯ ಪ್ರಧಾನ ಭಾಷೆ ಮಾತನಾಡುವವರ ತಾಯಿನಾಡು ಮತ್ತು ಅವರಿಗೆ ಸೇರುತ್ತದೆ. ಅವರು ಅಲ್ಲಿಯ 'ಮಣ್ಣಿನ ಮಕ್ಕಳು' ಅಥವಾ 'ಸ್ಥಳೀಯ ನಿವಾಸಿಗಳು'(ಚಂದ್ರ ೨೦೦೦: ೧೨೬).

ಈ ಚೌಕಟ್ಟಿನಲ್ಲಿ ಕರ್ನಾಟಕದಲ್ಲಿ ೧೯೭೦ರ ದಶಕದಲ್ಲಿ ಭಾಷಾ ರಾಜಕಾರಣ ಕಂಡುಬಂದ ಮಗ್ಗಲುಗಳನ್ನು ಚರ್ಚಿಸಲಾಗಿದೆ.

ಆಡಳಿತ ಭಾಷೆಯಾಗಿ ಕನ್ನಡ ಈಗಲೂ ಕರ್ನಾಟಕದಲ್ಲಿ ವಿವಾದಿತ ವಿಚಾರ. ಕನ್ನಡವನ್ನು ಹಲವು ಸಲ ಸಂವಿಧಾನಿಕವಾಗಿ ಆಡಳಿತ ಭಾಷೆಯಾಗಿ ಜಾರಿಗೊಳಿಸಿದರೂ ಸಹ ಆಡಳಿತಯಂತ್ರ ಹಾಗೂ ಸಾರ್ವಜನಿಕ ವಲಯಗಳಲ್ಲಿ ಕನ್ನಡ ಆಡಳಿತ ಭಾಷೆಯಾಗಿ ಜಾರಿಯಾಗಿಲ್ಲ ಎಂಬುದು ಕನ್ನಡ ಪರ ಸಂಘಟನೆಗಳ ಅಳಲಾಗಿದೆ.

> ಕರ್ನಾಟಕದ ಆಡಳಿತ ಭಾಷಾ ಕಾಯ್ದೆಯು ೧೯೬೩ರಷ್ಟು ಹಿಂದಿನದಾದರೂ ದೊರಕಿರುವ ಫಲ ಅಲ್ಪವಾಗಿದೆ. ಆಡಳಿತಯಂತ್ರದ ಎಲ್ಲ ಹಂತಗಳಲ್ಲಿಯೂ ಕನ್ನಡವನ್ನು ಆಡಳಿತ ಭಾಷೆಯಾಗಿ ಅಳವಡಿಸುವುದು ಸಾಧ್ಯವಾಗಿಲ್ಲ. ೧೯೭೬, ೧೯೮೩, ೧೯೮೪, ೧೯೮೫, ೧೯೮೮ ... ಕನ್ನಡವನ್ನು ಸಾರ್ವಜನಿಕ ವಲಯದಲ್ಲಿ ಸಂಪರ್ಕ ಮಾಧ್ಯಮವನ್ನಾಗಿ ಬಳಸಲು ನೀಡಿರುವ ಈ ನೋಟಿಫಿಕೇಷನ್‌ಗಳು ಕನ್ನಡ ಅಭಿವೃದ್ಧಿಯು ಬಡವಾಗಿರುವ ಲಕ್ಷಣ. ಕರ್ನಾಟಕ ಪೂರ್ಣ ಪ್ರಮಾಣದಲ್ಲಿ ಭಾಷಾ ಅಭಿವೃದ್ಧಿಗಾಗಿ ಕಾರ್ಯನಿರ್ವಾಹಕ ವಿಭಾಗವೊಂದು ಮೀಸಲಾಗಿರಿಸಿರುವ ಕೆಲವೆ ರಾಜ್ಯಗಳಲ್ಲಿ ಒಂದೆಂಬುದು ಆಕ್ರೋಶ ಉಂಟುಮಾಡುವ ಸತ್ಯ(ನಾಯರ್ ೧೯೯೯: ೨೮೫೩).

ಕನ್ನಡವನ್ನು ಆಡಳಿತ ಭಾಷೆಯಾಗಿ ಜಾರಿಗೊಳಿಸುವಲ್ಲಿನ ವಿಫಲತೆ ಹಾಗೂ ಇರುವ ಸಮಸ್ಯೆಗಳನ್ನು ತೆರೆದಿಡುವುದು. ೧೯೬೩ರಲ್ಲಿ ಕನ್ನಡವನ್ನು ಆಡಳಿತ ಭಾಷೆಯಾಗಿ ಮೊದಲ ಬಾರಿ ಜಾರಿಗೊಳಿಸಿದ ನಂತರ ೧೯೮೦ರ ದಶಕದ ಆರಂಭದ ಹೊತ್ತಿಗೆ, ಕನ್ನಡ ಭಾಷೆ ಕುರಿತ ಸರ್ಕಾರದ ಧೋರಣೆಯ ವಿರುದ್ಧ ತೀವ್ರ ಹೋರಾಟಗಳನ್ನು ಕಾಣಬಹುದು. ತುರ್ತುಪರಿಸ್ಥಿತಿ ಸಂದರ್ಭದಲ್ಲಿ ಈ ವರ್ಗ ಶಾಂತವಾಗಿದ್ದು, ನಂತರದಲ್ಲಿ ತೀವ್ರ ರೂಪದಲ್ಲಿ ಹೊರ ಹೊಮ್ಮುವುದು. ಇದು ಭಾಷಾ ನೀತಿ ಮತ್ತು ಸಮಕಾಲೀನ ಸರ್ಕಾರದ ನಡುವಿನ ಪರಸ್ಪರ ಸಂಬಂಧಗಳೆಡೆಗೆ ಗಮನ ಸೆಳೆಯುವುದು.

••• ••• •••

ಆಡಳಿತ ಭಾಷೆ ಕುರಿತು ಆಡಳಿತಯಂತ್ರದ ಚಿಂತನೆ ಹಾಗೂ ಕನ್ನಡ ಭಾಷಾ ಚಳವಳಿಗಳೆರಡನ್ನೂ ಆರ್ಥಿಕ, ರಾಜಕೀಯ ನೆಲೆಗಟ್ಟಿನಲ್ಲಿ ನೋಡುವುದು ಹೊಸ ಆಯಾಮಗಳನ್ನು ಮುಂದಿಡುವ ಸಾಧ್ಯತೆಯಿದೆ. ೧೯೬೩ರಲ್ಲಿ ಜಾರಿಯಾಗಿದ್ದ ಕನ್ನಡ ಆಡಳಿತ ಭಾಷೆ[೫] ಕಾಯ್ದೆಗೆ ೧೯೭೪ರಲ್ಲಿ ಮರು ತಿದ್ದುಪಡಿ ತರಲಾಯಿತು. ಅಲ್ಲದೆ ಸರ್ಕಾರ ಬಜೆಟ್‌ನಲ್ಲಿ ಕನ್ನಡ ಭಾಷಾ ಅಭಿವೃದ್ಧಿಗಾಗಿ ಆರ್ಥಿಕ ನೆರವು ನೀಡಲು ಆರಂಭಿಸಿದ್ದನ್ನು ಕಾಣಬಹುದು.

**ಕಾರ್ಯಕ್ರಮವೊಂದರಲ್ಲಿ ನಿಜಲಿಂಗಪ್ಪ, ಕೆಂಗಲ್ ಹನುಮಂತಯ್ಯ ಅವರೊಂದಿಗೆ ಅರಸು ಅವರು**



ಕೃಪೆ : ವಾರ್ತಾ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು. ಚಿತ್ರ ಸಂಖ್ಯೆ : ೨.೮.

ಹಿಂದಿನ ವರ್ಷದ ಬಡ್ಜೆಟ್ ಭಾಷಣದಲ್ಲಿ ಕನ್ನಡ ಭಾಷಾ ಬೆಳವಣಿಗೆಗೆ ಸರ್ಕಾರದ ನಿಯಮಗಳು ಸಹಕಾರಿಯಾಗುವಂತೆ ಮಾಡುವುದಾಗಿ ಹೇಳಿದ್ದನ್ನು ಸಭೆಯು ನೆನಪಿಸಿ ಕೊಳ್ಳಬಹುದು. ಇದಕ್ಕಾಗಿ ೧೩ ಲಕ್ಷದ ವಿಸ್ತೃತ ಕಾರ್ಯವನ್ನು ಸರ್ಕಾರ ಹಮ್ಮಿಕೊಂಡಿದೆ. ಸರ್ಕಾರದ ಆಡಳಿತಕ್ಕೆ ಸಂಬಂಧಿಸಿದಂತಹ ಪುಸ್ತಕಗಳ ಕನ್ನಡ ಅನುವಾದ ಇನ್ನಿತರ ೨೩ ವಿಭಿನ್ನ ಕಾರ್ಯಚರಣೆಗಳನ್ನು ಹಮ್ಮಿಕೊಳ್ಳಲಾಗಿದೆ (ಘೋರ್ಪಡೆ ೧೯೮೩: ೨೫).

ಮತ್ತು

ನಮ್ಮ ಒಂದೊಂದು ಹಿರಿಯಾಸೆ ಈಡೇರಿದಂತೆ, ನಮ್ಮ ಮನೋಭೂಮಿಕೆಯೂ ವಿಸ್ತಾರವಾಗಬೇಕು. ಐತಿಹಾಸಿಕ ಕಾರಣಗಳಿಂದ ನಮ್ಮ ರಾಜ್ಯ, ನಮ್ಮ ಭಾಷೆ ಅವನತಿಗೀಡಾಗಿದ್ದ ಕಾಲ ಬದಲಾಗಿ ಅವುಗಳ ಅಭಿವೃದ್ಧಿಯ ಹೊಣೆಯನ್ನು ನಾವೇ ವಹಿಸಿಕೊಂಡಿದ್ದೇವೆ. ಕನ್ನಡ ನುಡಿಯ ಬೆಳವಣಿಗೆಗಾಗಿ ನಾವು ಕೈಗೊಂಡಿರುವ ಕ್ರಮಗಳು ಹಲವಾರು. ಜನರಾಡುವ ಭಾಷೆ, ಆಡಳಿತ ಭಾಷೆಯಾದರೆ ಮಾತ್ರ ಸರಕಾರ ಮತ್ತು ಜನರ ನೇರ ಸಂಪರ್ಕ, ನಿಕಟವಾಗಿ ಬೆಳೆಯಬಲ್ಲದು ... ಆ ಮೂಲಕವೆ ಪ್ರಜಾಪ್ರಭುತ್ವ ಬಲವಾಗಿ ಬೇರೂರಬಲ್ಲದು ಎಂಬ ಅರಿವಿನಿಂದ ಕನ್ನಡ ಜಿಲ್ಲಾ ಮಟ್ಟದಲ್ಲಿ ಆಡಳಿತ ಭಾಷೆಯಾಗ ಬೇಕೆಂದು ಸ್ವಾತಂತ್ರ್ಯೋತ್ಸವದ ದಿನದಂದು ನಿರ್ಧರಿಸಿದ್ದೇವೆ. ಆಡಳಿತ ಮಟ್ಟದಲ್ಲಿ ಮಾತ್ರವಲ್ಲದೆ ಶಾಲೆ, ವಿಶ್ವವಿದ್ಯಾಲಯ, ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಇತರ ಸಂಘ ಸಂಸ್ಥೆಗಳ ಕನ್ನಡ ಪ್ರಸಾರ ಯೋಜನೆಗೆ ಧಾರಾಳವಾಗಿ ನೆರವು ನೀಡುತ್ತಿದ್ದೇವೆ. ಇಲ್ಲಿ ಅತಿ ಮುಖ್ಯವಾದ ಒಂದಂಶವನ್ನು ನಿಮ್ಮ ಗಮನಕ್ಕೆ ತರಬಯಸುತ್ತೇನೆ ... ಕರ್ನಾಟಕ ಭೂಮಿಯಲ್ಲಿ ಬೇರೂರಿವ ಅಲ್ಪಸಂಖ್ಯಾತರ ಭಾಷೆಗಳು ವಿಕಾಸವಾಗುವಂತಹ ಈ ವಾತಾವರಣವನ್ನು ಉಳಿಸುವುದಷ್ಟೇ ಅಲ್ಲ, ಬೆಳೆಸುವುದು ಕರ್ತವ್ಯ(ಅರಸು ೨೦೦೦: ೪೫).

೧೯೭೪ರಲ್ಲಿ ಕಾಯ್ದೆಗೆ ತಿದ್ದುಪಡಿ ತರುವ ಹಿಂದಿನ ಬದಲಾವಣೆಗಳು ಹಾಗೂ ಮುಖ್ಯಮಂತ್ರಿ ಅರಸು ಸರ್ಕಾರದ ಕನ್ನಡ ಭಾಷಾ ಅಭಿವೃದ್ಧಿ ಕುರಿತ ಆಲೋಚನೆಗಳಿವು. ೧೯೭೯ರವರೆಗೆ ಕೆಲವು ವರ್ಷಗಳನ್ನು ಳಿದಂತೆ ಎಲ್ಲ ಸಂದರ್ಭದಲ್ಲೂ ಕನ್ನಡ ಅಭಿವೃದ್ಧಿಗಾಗಿ ಬಜೆಟ್‌ನಲ್ಲಿ ಹಣ ಮಂಜೂರು ಮಾಡಲಾಗಿದೆ. ಕನ್ನಡ ಭಾಷಾ ಅಭಿವೃದ್ಧಿಗಾಗಿ ಪ್ರತ್ಯೇಕ ವಿಭಾಗವೊಂದನ್ನು ತೆರೆಯಲಾಯಿತು. ಮುಖ್ಯವಾಗಿ ಕನ್ನಡ ಟೈಪ್‌ರೈಟರ್‌ಗಳನ್ನು ಒದಗಿಸಲು ಕ್ರಮ ಕೈಗೊಳ್ಳಲಾಯಿತು. ಕನ್ನಡ ಟೈಪಿಂಗ್ ಕಲಿಯಲು ಪ್ರೋತ್ಸಾಹಿಸುವ, ನ್ಯಾಯಾಂಗದ ತೀರ್ಪುಗಳನ್ನು ಕನ್ನಡದಲ್ಲಿ ನೀಡಿದವರಿಗೆ ಬಹುಮಾನ ವಿತರಿಸುವ ಮುಂತಾದ ಅನೇಕ ಪ್ರೋತ್ಸಾಹಕಾರಕ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿತ್ತು. ಬಹುಮಾನ ಪಡೆದ ಕನ್ನಡದ ನ್ಯಾಯಾಂಗದ ತೀರ್ಪುಗಳನ್ನು ಪ್ರಕಟಿಸಲಾಗುತ್ತಿತ್ತು.

| ಕ್ರಮ ಸಂಖ್ಯೆ | ವರ್ಷ | ಬಡ್ಜೆಟ್‌ನಲ್ಲಿ ಕಾದಿರಿಸಿದ ಹಣ |
|---|---|---|
| ೧ | ೧೯೭೨-೭೩ | ೧೦ (ಲಕ್ಷ) |
| ೨ | ೧೯೭೩-೭೪ | ೧೩(ಲಕ್ಷ) |
| ೩ | ೧೯೭೪-೭೫ | ೨೭.೫(ಲಕ್ಷ) |
| ೪ | ೧೯೭೫-೭೬ | - |
| ೫ | ೧೯೭೬-೭೭ | • |
| ೬ | ೧೯೭೭-೭೮ | • |
| ೭ | ೧೯೭೮-೭೯ | - |
| ೮ | ೧೯೭೯-೮೦ | ೬೭ |

ಆಧಾರ- ೧೯೭೨ ರಿಂದ ೧೯೮೦ರವರೆಗಿನ ಬಡ್ಜೆಟ್ ಭಾಷಣಗಳು, ಕರ್ನಾಟಕ ಸರ್ಕಾರ, ಬೆಂಗಳೂರು. ಪಟ್ಟಿ ಸಂಖ್ಯೆ: ೫.

ಈ ಮೇಲಿನ ಪಟ್ಟಿಯಲ್ಲಿ ೧೯೭೨ ರಿಂದ ೧೯೮೦ರವರೆಗೆ ಕರ್ನಾಟಕ ಸರ್ಕಾರ ಕನ್ನಡ ಭಾಷೆಯ ಅಭಿವೃದ್ಧಿಗಾಗಿ ಬಜೆಟ್‌ನಲ್ಲಿ ಮೀಸಲಿಟ್ಟ ಹಣದ ಮಾಹಿತಿಯಿದೆ. ೧೯೭೨-೧೯೭೩ರಲ್ಲಿ ೧೦ ಲಕ್ಷವಿದ್ದದ್ದು, ಮುಂದಿನ ವರ್ಷಗಳಲ್ಲಿ ಹೆಚ್ಚಾಗುತ್ತ ಹೋಗಿರುವುದನ್ನು ನೋಡಬಹುದು. ೧೯೭೪-೧೯೭೫ರಲ್ಲಿ ಒಂದೇ ಬಾರಿಗೆ ೨೭.೫ ಲಕ್ಷಗಳಿಗೆ ಹೆಚ್ಚಿಸಲಾಗಿದೆ. ೧೯೭೩ರಲ್ಲಿ ರಾಜ್ಯಕ್ಕೆ 'ಕರ್ನಾಟಕ'ವೆಂದು ಮರು ನಾಮಕರಣ ವಾಗಿದ್ದು, ೧೯೭೪ರಲ್ಲಿ ಕನ್ನಡವನ್ನು ಆಡಳಿತ ಭಾಷೆಯಾಗಿ ಜಾರಿ ತರುವ ನಿಟ್ಟಿನಲ್ಲಿ ಚರ್ಚೆಗಳು ತೀವ್ರವಾಗಿ ನಡೆಯುತ್ತಿತ್ತು. ತುರ್ತುಪರಿಸ್ಥಿತಿ ಕಾಲದಲ್ಲಿ ಬಜೆಟ್‌ನಲ್ಲಿ ಹಣ ಮಂಜೂರಾಗುತ್ತಿದ್ದ ಮಾಹಿತಿ ದೊರೆಯುವು ದಾದರೂ, ಅದರ ಪ್ರಮಾಣ ತಿಳಿದುಬಂದಿಲ್ಲ. ೧೯೭೬-೧೯೭೭, ೧೯೭೭-೧೯೭೮ರ ಕುರಿತು ಮಾಹಿತಿ

ದೊರೆತಿಲ್ಲ. ೧೯೭೯ –೧೯೮೦ರಲ್ಲಿ ಹಣದ ಪ್ರಮಾಣ ೬೭ ಲಕ್ಷಗಳಿದ್ದು, ಕನ್ನಡವನ್ನು ಆಡಳಿತ ಭಾಷೆಯಾಗಿ ಮಾಡಲು ಆ ವರ್ಷ ಸರ್ಕಾರ ಮತ್ತೊಂದು ಮಸೂದೆಯನ್ನು ಜಾರಿಗೆ ತಂದಿತ್ತು. ಸಮೂಹ ಮಾಧ್ಯಮಗಳ ಜಾಹೀರಾತುಗಳಲ್ಲಿ ಆಡಳಿತ ಭಾಷೆಯಾಗಿ ಕನ್ನಡವನ್ನು ಜಾರಿ ಮಾಡಿದ 'ಸಾಧನೆಯ ಶಿಲ್ಪಿ' ದೇವರಾಜ ಅರಸು ಎಂಬಂತೆ ಬಿಂಬಿಸಲಾಗುತ್ತಿತ್ತು. ಇದಕ್ಕೆ ಪೂರಕವಾಗಿ ಕೆಳಗಿನ ವ್ಯಂಗ್ಯಚಿತ್ರ ಮತ್ತು ಜಾಹೀರಾತುಗಳನ್ನು ನೋಡಬಹುದು. ಚಿತ್ರ-೧ಎನಲ್ಲಿ 'ಕನ್ನಡಮೆನಿಪ್ಪ ನಾಡು ನಿಜಕ್ಕೂ ಚೆಲ್ವಾಯ್ತು' ಎಂಬುದರ ಪಕ್ಕದಲ್ಲಿ ಅರಸರ ಭಾವಚಿತ್ರವಿದೆ. ಈ ಹೊತ್ತಿಗಾಗಲೆ ರಾಜ್ಯ ರಾಜಕಾರಣದಲ್ಲಿ ಇಂದಿರಾ ಗಾಂಧಿ ಮತ್ತು ದೇವರಾಜ ಅರಸು ನಡುವೆ ವಿರಸವೇರ್ಪಟ್ಟಿತ್ತು. ಜಾಹೀರಾತುಗಳಲ್ಲಿ ಅರಸರ ಕಾರ್ಯನೀತಿಗಳ ಬಗ್ಗೆನೆ ಹೆಚ್ಚು ಕಂಡುಬರುವುದು. ಈ ಜಾಹೀರಾತಿನಲ್ಲಿ ಸಾಧನೆಯ ಶಿಲ್ಪಿ, ಕರ್ನಾಟಕದ ಇತಿಹಾಸದಲ್ಲಿ ಒಂದು ಮೈಲಿಗಲ್ಲೆಂದು ವ್ಯಕ್ತಿ ಮತ್ತು ರಾಜ್ಯ ರಾಜಕಾರಣ ಎರಡನ್ನು ಬಿಂಬಿಸಿದೆ. ಕನ್ನಡವನ್ನು ಆಡಳಿತ ಭಾಷೆಯಾಗಿ ಜಾರಿಗೊಳಿಸಿದ ಮಹಾನ್ ವ್ಯಕ್ತಿಯೆಂದು ಬಿಂಬಿಸಲಾಗಿದೆ. ಈ ಸಂದರ್ಭದಲ್ಲೇ ಭಾರತದಲ್ಲಿ ಭಾಷಾ ರಾಜಕಾರಣದಲ್ಲಿ ಮುಗ್ಧ ಮಕ್ಕಳ ಹೋರಾಟ, ದೇಶ, ಭಾಷೆ, ಜನಾಂಗ ಮತ್ತಿತರ ವಿಚಾರಗಳ ಪಾತ್ರ ಹೆಚ್ಚಾಗಿರುವುದು ಕಂಡುಬರುವುದು. ದಕ್ಷಿಣ ಭಾರತವಾದ್ಯಂತ ಹಿಂದಿ ಹೇರಿಕೆಯ ವಿರುದ್ಧ ಪ್ರಬಲ ಹೋರಾಟಗಳು ರೂಪುಗೊಂಡಿದ್ದು, ಈ ಕಾಲ ಘಟ್ಟದಲ್ಲೆ ಆಗಿದೆ. ಇದರ ಜೊತೆಗೆ ಕನ್ನಡ ಸಾಹಿತ್ಯಲೋಕದಲ್ಲಿ ಉಂಟಾಗುತ್ತಿದ್ದ ಹೊಸ ಸಂಚಲನಗಳನ್ನು ಗಮನಿಸುವ ಅಗತ್ಯವಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಸಮ್ಮೇಳನ ವಿರೋಧಿಸಿ, ಸಾಹಿತ್ಯ ವಲಯವೊಂದು ಪರ್ಯಾಯವಾಗಿ ಪ್ರತ್ಯೇಕ ಸಮ್ಮೇಳನ ನಡೆಸುವ ಮೂಲಕ ಪ್ರತಿಭಟಿಸಲಾಗಿತ್ತು. ಕನ್ನಡ ಭಾಷಾ ಸಾಹಿತ್ಯದಲ್ಲಿ ಶಿಷ್ಟ ಭಾಷೆ ತೊರೆದು ಹೊಸ ರೀತಿಯ ಭಾಷಾ ಪ್ರಯೋಗಗಳು, ಪ್ರಾದೇಶಿಕ ಸೊಗಡು ಅಧಿಕವಾಗಿ ಕಂಡುಬಂದಿತು. ಇದೇ ಸಂದರ್ಭದಲ್ಲಿ ದಕ್ಷಿಣದ ರಾಜ್ಯಗಳಲ್ಲಿ ಹಿಂದಿ ಹೇರಿಕೆ ವಿರುದ್ಧ 'ಮುಖ್ಯಮಂತ್ರಿಗಳ ಒಕ್ಕೂಟ'ವನ್ನು ನೋಡಬಹುದು. ಚಿತ್ರ-೧ರಲ್ಲಿ ಮೂರು ರಾಜ್ಯದ ಮುಖ್ಯಮಂತ್ರಿಗಳು ಹಿಂದಿ ಹೇರಿಕೆಯ ವಿರುದ್ಧ ಕತ್ತಿ ಹಿಡಿದು ಸಮರ ಸಾರುತ್ತಿರುವಂತಿದ್ದು, ಇದು ಪ್ರಕಟವಾಗಿರುವುದು ಇಂಗ್ಲಿಶ್ ದೈನಿಕದಲ್ಲಾಗಿದೆ.




ಆಕರ: ಡೆಕ್ಕನ್ ಹೆರಾಲ್ಡ್ ಜೂನ್ ೬, ೧೯೭೮ ಪ್ರಕಟಿತ ವ್ಯಂಗ್ಯಚಿತ್ರ ವ್ಯಂಗ್ಯಚಿತ್ರಕಾರ: [illegible] ಕನ್ನಡಪ್ರಭ ಮತ್ತು ಡೆಕ್ಕನ್ ಹೆರಾಲ್ಡ್: ಸೆಪ್ಟೆಂಬರ್ ೧೯೭೯ ಪ್ರಕಟಿತ ಜಾಹೀರಾತು. ಚಿತ್ರ ಸಂಖ್ಯೆ: ೨.೯.

(ಚಿತ್ರ-೧) (ಚಿತ್ರ-೧ಎ) (ಚಿತ್ರ-೧ಬಿ)

ರಭಸ ತಡೆಯಲಾರದೆ ಹಿಂದಿ ಸಹಾಯ ಕೇಳುತ್ತಿರುವಂತಿದೆ. ತುರ್ತುಪರಿಸ್ಥಿತಿ ಪೂರ್ವದಲ್ಲೇ ಆಡಳಿತ ಭಾಷೆಯಾಗಿ ಕನ್ನಡವನ್ನು ಜಾರಿ ತರುವ ಚರ್ಚೆ, ಅನೇಕ ಚಟುವಟಿಕೆಗಳು ನಡೆಯುತ್ತಿದ್ದವು. ಇದರಿಂದಾಗಿ ತುರ್ತುಪರಿಸ್ಥಿತಿಯಲ್ಲಿ ಕನ್ನಡ ಪರ ಹೋರಾಟಗಾರರು ಹೆಚ್ಚು ಭಾಗವಹಿಸದಿರುವ ಸಾಧ್ಯತೆಗಳು ಕಾಣುವುವು. ಕರ್ನಾಟಕ ರಾಜ್ಯದ ರಾಜಕಾರಣ ರಾಷ್ಟ್ರ ರಾಜಕಾರಣಕ್ಕಿಂತ ಭಿನ್ನವಾಗಿ ವರ್ತಿಸಲು ಪೂರಕ ವಾಗಿ ಸಹಕರಿಸಿದ್ದು, ಉಪರಾಷ್ಟ್ರೀಯತೆಯ ಪ್ರಭಾವ ಪ್ರಮುಖವಾಗಿ ಕಾರ್ಯನಿರ್ವಹಿಸಿದೆ ಎಂದು ಹೇಳಬಹುದು.

***   ***   ***

ದೇವರಾಜ ಅರಸು ಅವರ ಕಾಲದ ಆಡಳಿತದ ಚರ್ಚೆಗಳು ತುರ್ತುಪರಿಸ್ಥಿತಿಯ ನೆನಪುಗಳೊಂದಿಗೆ ತಳುಕು ಹಾಕಿಕೊಂಡಿವೆ. ಕರ್ನಾಟಕದ ಬೇರೆ ಯಾವ ಮುಖ್ಯಮಂತ್ರಿಗಳಿಗೂ ದೊರಕದಷ್ಟು ಸ್ಥಾನಮಾನ.

ಪ್ರಸಿದ್ಧಿ ಅರಸು ಅವರಿಗೆ ದೊರೆತಿದೆ. ಇಲ್ಲಿ ಚರ್ಚೆಗೊಳಪಟ್ಟ ಕಾಯ್ದೆ ಮತ್ತು ವಿಚಾರಗಳ ಪ್ರಭಾವ ಪರಿಣಾಮಗಳು ವಿಸ್ತೃತವಾದ ಅಸ್ತಿತ್ವ ಹೊಂದಿದ್ದು, ಪ್ರಸ್ತುತ ರಾಜಕಾರಣದಲ್ಲಿಯೂ ಗಮನಾರ್ಹ ಪಾತ್ರ ನಿರ್ವಹಿಸಿವೆ. ಅರಸು ಆಡಳಿತ ಕಾಲದ ಹಲವು ಆಯಾಮಗಳು ಅನೇಕ ವಿಧದಲ್ಲಿ ಪುನರ್ ಚರ್ಚೆಗೆ ಒಳಗಾಗುತ್ತಲೆ ಅರಸು ಕೂಡ ಪ್ರಸ್ತುತರಾಗಿದ್ದಾರೆ. ಅರಸು ಅವರ ರಾಜಕೀಯ ವಿಚಾರಧಾರೆ ಮತ್ತು ರಾಜಕಾರಣ ಚರ್ಚೆಗೆ ಒಳಗಾಗುವಷ್ಟೆ ೧೯೭೦ರ ದಶಕದ ಸಾಂಸ್ಕೃತಿಕ ಚಟುವಟಿಕೆಗಳ ಚರ್ಚೆಗಳಲ್ಲಿಯೂ ಮರುಕಳಿಸುವುದನ್ನು ಕಾಣಬಹುದು. ಈವರೆಗಿನ ಅರಸು ಕುರಿತ ಅಧ್ಯಯನಗಳಲ್ಲಿ ಸಾಮಾಜಿಕ ಸುಧಾರಣೆಗಳು ಮತ್ತು ಭೂ ಸುಧಾರಣೆ ಅಧಿಕವಾಗಿ ಚರ್ಚೆಗೊಳಪಟ್ಟ ವಸ್ತುಗಳಾಗಿದೆ. ಇದಕ್ಕೆ ಪೂರಕವಾಗಿ ಅರಸು ಅವರ ಕಾಲವನ್ನು ಕ್ರಾಂತಿಕಾರಕ ಎನ್ನುವಾಗ ಮೂರು ಅಂಶಗಳು ಮುಖ್ಯವಾಗಿದೆ. ಅರಸು ಅವರು ಬಡವರ ಮತ್ತು ಹಿಂದುಳಿದವರ ದನಿಯಾಗಿದ್ದರು. ಹಿಂದುಳಿದ ವರ್ಗಗಳ ವರದಿಯನ್ನು ಮತ್ತು ಭೂ ಸುಧಾರಣಾ ಕಾಯ್ದೆಯನ್ನು ಜಾರಿಗೆ ತಂದರು. ೧೯೭೪ರ ಭೂ ಸುಧಾರಣಾ ಕಾಯ್ದೆ ಮತ್ತು ಆ ಸಂದರ್ಭದ ಕರ್ನಾಟಕದ ರಾಜಕಾರಣ ಎರಡನ್ನು ಒಟ್ಟಾಗಿ ನೋಡುವ ಕ್ರಮ ಅನೇಕ ಹೊಸ ಹೊಳಹುಗಳನ್ನು ಮುಂದಿಡುವುವು.

## ೧೯೭೪ರ ಭೂ ಸುಧಾರಣಾ ಕಾಯ್ದೆ : ಸ್ವರೂಪಗಳು ಮತ್ತು ಜಾರಿ

> ಭೂ ಸುಧಾರಣೆಯ ಅಂಶಗಳು - ರಾಜಕೀಯ ತಿರುವು ದೊರೆತಿರುವುದು ಅಲ್ಲಲ್ಲಿ ಭಯಾನಕ ವಾತಾವರಣಕ್ಕೆ ಆಸ್ಪದ ನೀಡಿದೆ. ಪಟ್ಟಭದ್ರರು ಒಟ್ಟುಗೂಡಿ ಸಂಘಟಿಸಿದ ಹಿನ್ನೆಲೆಯಲ್ಲಿ ರಾಜಕೀಯ ಪಕ್ಷಗಳ ಮಧ್ಯಪ್ರವೇಶಿಕೆಯನ್ನು ವಿರೋಧಿಸಿದೆ(ಕನ್ನಡಪ್ರಭ ೧೯೭೫: ಮೇ೬).

> ಅತ್ಯಂತ ಕ್ರಾಂತಿಕಾರಿಯಾದ ಒಂದು ಶಾಸನವು ಅದರ ಅನುಷ್ಠಾನದ ವಿಧಾನದಿಂದ ಕೆಲವೊಮ್ಮೆ ಉದ್ದೇಶಕ್ಕೆ ವ್ಯತಿರಿಕ್ತವಾದ ಫಲವನ್ನು ನೀಡುವ ಸಾಧ್ಯತೆ ಇದೆ ಎನ್ನುವುದು ಭೂ ಸುಧಾರಣೆಯನ್ನು ಜಾರಿಗೊಳಿಸುವ ಸರಕಾರದ ಪ್ರಯತ್ನದಲ್ಲಿ ವ್ಯಕ್ತವಾಯಿತು(ಕಕ್ಕಿಲಾಯ ೨೦೦೩: ೩೬೬).

> ಭೂಮಿ ಹಂಚುವುದು, ಭೂಮಿ ಹೋರಾಟ ಇತ್ಯಾದಿಗಳೆಲ್ಲ ಕಳೆದ ಶತಮಾನದ ಎಪ್ಪತ್ತು ಎಂಬತ್ತರ ದಶಕಗಳ ಸರಕುಗಳು. ಆವಾಗ ಈ ಸರಕುಗಳಿಗೆ ಎಲ್ಲ ಕಡೆ ಬೇಡಿಕೆ ಇತ್ತು. ಚೆನ್ನಾಗಿ ಬಿಕರಿ ಆಗುತ್ತಿದ್ದವು. ಕಥೆ ಕಾದಂಬರಿಗಳಿಂದ ಹಿಡಿದು ಚಲನಚಿತ್ರಗಳ ತನಕ ಭೂಮಿ ದೊಡ್ಡ ಕಥಾವಸ್ತು ... ರಾಜಕೀಯ, ಆರ್ಥಿಕ ನೀತಿ ನಿರೂಪಣೆಗಳಲ್ಲಿ, ಪಂಚವಾರ್ಷಿಕ ಯೋಜನೆಗಳಲ್ಲಿ, ಅಭಿವೃದ್ಧಿ ತತ್ವ ಹಾಗೂ ಕಾರ್ಯಕ್ರಮಗಳಲ್ಲಿ, ಸಂಶೋಧಕರ ಓದು ಬರಹಗಳಲ್ಲಿ ಹೀಗೆ ಎಲ್ಲ ಕಡೆ ಭೂಮಿ ಪ್ರಶ್ನೆ ರಾರಾಜಿಸುತ್ತಿತ್ತು(ಪೂಜಾರಿ ೨೦೧೦: ೧).

> ೧೯೭೪ರ ಭೂ ಸುಧಾರಣಾ ಕಾನೂನು ಮತ್ತು ಒ.ಬಿ.ಸಿ. ವರ್ಗಗಳಿಗೆ ಶಿಕ್ಷಣ ಹಾಗೂ ಸರ್ಕಾರಿ ಉದ್ಯೋಗಗಳಲ್ಲಿ ಮೀಸಲಾತಿ ಕಲ್ಪಿಸುವ ಹಾವನೂರು ಆಯೋಗದ ವರದಿಯ ಅನುಷ್ಠಾನ. ಇವೆರಡೂ ದೇವರಾಜ ಅರಸರಿಗೆ ಅಮರತ್ವವನ್ನು ತಂದುಕೊಟ್ಟ ಸಾಧನೆಗಳಾಗಿದ್ದವು ... ಅರಸರು ಈ ಕ್ರಾಂತಿಕಾರಿ ಕ್ರಮಗಳನ್ನು ಜಾರಿಗೊಳಿಸಲು ಮುಂದಾಗಿದ್ದು ೧೯೭೭ರ ಐತಿಹಾಸಿಕ(ತುರ್ತುಪರಿಸ್ಥಿತಿ ನಂತರದ) ಲೋಕಸಭೆ ಚುನಾವಣೆ ಹಾಗೂ ತದನಂತರ ೧೯೭೮ರ ರಾಜ್ಯ ವಿಧಾನಸಭೆ ಚುನಾವಣೆ ಸವಾಲು ಎದುರಿಸಬೇಕಾದ ಕ್ಲಿಷ್ಟ ಮತ್ತು ನಿರ್ಣಾಯಕ ಸಂದರ್ಭದಲ್ಲಿ(ರೇಷ್ಮೆ ೨೦೧೧: ೧೭೩).

ಈ ಮೆಲ್ಕಂಡ ಉಲ್ಲೇಖಗಳು ಭೂ ಸುಧಾರಣೆ ಕುರಿತ ವಿಭಿನ್ನ ಆಯಾಮ ಮತ್ತು ಚಿಂತನೆಗಳಾಗಿವೆ. ಕಾಲದಿಂದ ಕಾಲದಲ್ಲಿ ಭೂ ಸುಧಾರಣಾ ಕಾಯ್ದೆ ಕುರಿತ ಅಭಿಮತ ಮತ್ತು ಚಿಂತನೆಗಳು ತಳೆದ ರೂಪಗಳನ್ನು ಮುಂದಿಡುವುವು. ಆರಂಭದ ಉಲ್ಲೇಖ ಸಮಕಾಲೀನವಾಗಿ ಪತ್ರಿಕೆಯಲ್ಲಿ ಪ್ರಕಟಗೊಂಡ ವರದಿ. ಉಳಿದವು ಭೂ ಸುಧಾರಣೆ ಕುರಿತಂತೆ ಪ್ರಕಟಗೊಂಡ ಅಭಿಪ್ರಾಯ, ಚಿಂತನೆಗಳಾಗಿವೆ. ಭೂ ಸುಧಾರಣಾ ಕಾಯ್ದೆಯ ರಾಜಕಾರಣ ಅಭಿವ್ಯಕ್ತಿಗೊಂಡ ವಿವಿಧ ರೂಪಗಳಿವು. ೧೯೭೪ರಲ್ಲಿ ಭಾರತದ ಬಹುಭಾಗದಲ್ಲಿ ಜೆ.ಪಿ. ಚಳವಳಿ ಮುಗಿಲು ಮುಟ್ಟಿದ್ದಾಗ ಕರ್ನಾಟಕ ಸ್ಪಂದಿಸಿತಾ ದರೂ, ಅದು ವ್ಯಾಪಕತೆ ಪಡೆಯಲಿಲ್ಲ. ಆಗ ಕರ್ನಾಟಕದಲ್ಲಿ ಸಮಾಜವಾದಿಗಳ ಯುವಜನ ಸಭಾ, ಸಾಹಿತಿಗಳ ಒಕ್ಕೂಟ, ಜಾತಿ ವಿನಾಶ ಚಳವಳಿ ಇನ್ನಿತರ ಚಟುವಟಿಕೆಗಳನ್ನು ಕಾಣಬಹುದು. ಇವುಗಳಲ್ಲಿ ದ್ದವರು ಅಕ್ಷರಸ್ಥ ಮೇಲ್‌ಮಧ್ಯಮ

ವರ್ಗಕ್ಕೆ ಸೇರಿದವರಾಗಿದ್ದು, ಅದರಲ್ಲಿಯೂ ಸಮಾಜವಾದಿ ಸಿದ್ಧಾಂತದಿಂದ ಪ್ರಭಾವಿತರಾಗಿದ್ದವರು ಅಧಿಕವಾಗಿದ್ದರು. ಇದರೊಡನೆ ರಾಜ್ಯದಲ್ಲಿ ಭೂ ಸುಧಾರಣಾ ಕಾಯ್ದೆಗಾಗಿ ದನಿ ಎತ್ತುತ್ತಿದ್ದವರೆಲ್ಲ ಕಮ್ಯುನಿಸ್ಟರು ಮತ್ತು ಸಮಾಜವಾದಿಗಳಾಗಿದ್ದರು. ಸಮಕಾಲೀನವಾಗಿ ಕಮ್ಯುನಿಸ್ಟರಲ್ಲಿ ಒಂದು ಬಣ ಆಡಳಿತ ಪಕ್ಷದೊಂದಿಗೆ ಸೇರಿ ಸರ್ಕಾರದಲ್ಲಿ ಭಾಗಿಯಾಗಿತ್ತು. ಇವೆಲ್ಲವೂ ಕಾಯ್ದೆ ಜಾರಿಗೆ ತರುವಲ್ಲಿ ಪೂರಕವಾಗಿ ಸಹಕರಿಸಿತು.

೧೯೭೪ರ ಭೂ ಸುಧಾರಣಾ ಕಾಯ್ದೆ ಮತ್ತು ರಾಜ್ಯ ರಾಜಕಾರಣದ ನಡುವಿನ ಪರಸ್ಪರ ಸಂಬಂಧ ಪ್ರಕಟಗೊಂಡ ರೂಪಗಳನ್ನು ಚರ್ಚಿಸುವ ಪ್ರಯತ್ನ ಮಾಡಿದೆ. ರಾಜ್ಯ ರಾಜಕಾರಣ ಮತ್ತು ರಾಜಕೀಯ ಪಕ್ಷಗಳ ಅಸ್ಮಿತೆಯಾಗಿ ಪಡೆದ ರೂಪಗಳನ್ನು ಎರಡು ಹಂತಗಳಲ್ಲಿ ವಿಂಗಡಿಸಿದೆ. ೧೯೭೪ರ ಭೂ ಕಾಯ್ದೆ ಮತ್ತು ಆಡಳಿತಶಾಹಿಯ ಸ್ವರೂಪಗಳನ್ನು 'ಉಳುವವನಿಗೆ ಭೂ ರಾಜಕಾರಣ'ದ ನೆಲೆಯಲ್ಲಿ ಚರ್ಚಿಸಲಾಗಿದೆ. ಇದರ ಪ್ರತಿಕ್ರಿಯೆಗಳನ್ನು ಪತ್ರಿಕೆ, ಸಾಹಿತ್ಯ ಮತ್ತು ಸಿನಿಮಾಗಳ ಮೂಲಕ ಅವಲೋಕಿಸಲು ಪ್ರಯತ್ನಿಸಿದೆ.

### ೨.೨.೧. ಉಳುವವನಿಗೆ ಭೂಮಿ: ರಾಜಕೀಯ ಮತ್ತು ಆರ್ಥಿಕ ನೆಲೆಗಟ್ಟು

ಉಳುವ ರೈತನು ಹೊಲದ ಒಡೆಯನಾಗಬೇಕು ಎಂಬ ಕೂಗು ಸ್ವತಂತ್ರ ಪೂರ್ವದಿಂದಲೂ ಕೇಳಿ ಬರುತ್ತಿದ್ದದ್ದೆ ಆಗಿತ್ತು. ರಾಜಕೀಯ ಪಕ್ಷಗಳು, ಎಡಪಂಥೀಯರು, ಬುದ್ಧಿಜೀವಿಗಳು, ಸಾಹಿತ್ಯ, ಸಿನಿಮಾ, ಚಳವಳಿಗಳು ಹೀಗೆ ಹತ್ತು ಹಲವು ವರ್ಗ ಮತ್ತು ವಲಯಗಳಲ್ಲಿ ಇದು ಬೇರೆ ಬೇರೆ ರೂಪಗಳಲ್ಲಿ ಧ್ವನಿತವಾಗುತ್ತಿತ್ತು. ಯಾವುದೇ ವ್ಯವಸ್ಥೆಯಲ್ಲಾದರೂ ಹೊರಗಿನಿಂದ ಹೇರಲ್ಪಡುವ ಮತ್ತು ಒಳಗಿನಿಂದ ಉದ್ಭವಿಸುವ ಎರಡು ಶಕ್ತಿಗಳು ಬದಲಾವಣೆಗೆ ಕಾರಣಕರ್ತವಾಗಿರುವುವು. ಸಮಾಜದಲ್ಲಿ ಚರ್ಚಿತವಾಗುವ ಪ್ರಮುಖ ವಿಚಾರ ಗಳು ಅಜೆಂಡದ ರೂಪ ಪಡೆದುಕೊಳ್ಳುವುವು. ಸಾಮಾಜಿಕ ಚಳವಳಿಗಳು ಹೊಸ ವಿಚಾರವನ್ನು ಸಾರ್ವಜನಿಕ ಅಜೆಂಡವನ್ನಾಗಿ ಬದಲಾಯಿಸುವುವು. ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯಲ್ಲಿ 'ಉಳುವವನಿಗೆ ಹೊಲ'[೫] ಸ್ವಾತಂತ್ರ್ಯ ಪೂರ್ವದಿಂದ ಕಮ್ಯುನಿಸ್ಟ್ ಹಾಗೂ ಸಮಾಜವಾದಿ ಪಕ್ಷಗಳಿಗೆ ಪ್ರಮುಖ ಅಜೆಂಡವಾಗಿತ್ತು. ಕಾಂಗ್ರೆಸ್ ಪಕ್ಷವು ಇದಕ್ಕೆ ಹೊರತಾಗಿರಲಿಲ್ಲ. ಭೂ ಸುಧಾರಣಾ ಕಾಯ್ದೆಯ ಅಗತ್ಯ ಕುರಿತ ಚಿಂತನೆ ೧೯೭೦ – ೧೯೫೦ರ ಮಧ್ಯ ಭಾಗದವರೆಗೆ ಬಹುತೇಕ ಎಲ್ಲ ರಾಜಕೀಯ ಪಕ್ಷಗಳ ಅಜೆಂಡದ ಭಾಗವಾಗಿದ್ದು, ಸ್ವಾತಂತ್ರ್ಯೋತ್ತರದಲ್ಲಿ ನಡೆದ ಅನೇಕ ಹೋರಾಟಗಳಿಗೆ, ಚಳವಳಿಗಳಿಗೆ ಪ್ರತ್ಯಕ್ಷ ಅಥವಾ ಪರೋಕ್ಷ ಕಾರಣವಾಗಿದೆ.

ಭೂ ಸುಧಾರಣೆಯ ಚರ್ಚೆ ಅಂತಿಮವಾಗಿ ತೀವ್ರತೆ ಪಡೆದುಕೊಳ್ಳುವುದು ಮತ್ತು ಇಳಿಮುಖದ ಹಾದಿ ಹಿಡಿಯುವ ಎರಡು ಪ್ರಕ್ರಿಯೆಗಳು ೧೯೭೦ರ ದಶಕದಲ್ಲೇ ಕಂಡುಬಂದಿತು. ಈ ದಶಕದ ಅನೇಕ ಸಾರ್ವಜನಿಕ ಹೋರಾಟಗಳು ಮತ್ತು ನಕ್ಸಲಿಸಂ[೬] ರಾಜಕಾರಣಗಳು ಆರ್ಥಿಕ, ಸಾಮಾಜಿಕ ಬದಲಾವಣೆಗಳಿಗೆ ಕಾರಣವಾಯಿತು. ತುರ್ತುಪರಿಸ್ಥಿತಿಯ ನಂತರದಲ್ಲಿ ಕೇಂದ್ರ ಸರ್ಕಾರದ ಭೂ ಸುಧಾರಣೆ ಕುರಿತ ಕ್ರಮಗಳಲ್ಲಿ ಮೊದಲಿನ ತೀವ್ರತೆ ಕಾಣುವುದಿಲ್ಲ. ರಾಜಕೀಯ ಪಕ್ಷಗಳ ಅಜೆಂಡದ ಸ್ವರೂಪದಲ್ಲಿ ಗುರುತರ ಬದಲಾವಣೆ ಕಾಣುವುದು. ತುರ್ತುಪರಿಸ್ಥಿತಿ ಮತ್ತು ನಂತರದಲ್ಲಾದ ರಾಜಕೀಯ ಪಲ್ಲಟವು ಭೂ ಸುಧಾರಣೆಯನ್ನು ಹಿಂದಿಕ್ಕಿರುವುದು ಮೇಲ್ನೋಟಕ್ಕೆ ಗುರುತಿಸಬಹುದು. ಕೇಂದ್ರ ಸರ್ಕಾರ ನಿರ್ದೇಶಿಸಿದ ೧೯೭೨ರ ಭೂ ಸುಧಾರಣಾ ಕಾಯ್ದೆ ರಾಷ್ಟ್ರದಾದ್ಯಂತ ಅನೇಕ ರೀತಿಯ ಸಂಚಲನ ಉಂಟುಮಾಡಿತ್ತು. ಪತ್ರಿಕೆ, ಜರ್ನಲ್, ಅಕಾಡೆಮಿಕ್ ವಲಯಗಳಲ್ಲಿ ಅದರ ಸಾಧಕ ಬಾಧಕಗಳ ಕುರಿತ ಚರ್ಚೆಗಳು ಒಂದೆಡೆಯಿದ್ದರೆ, ಮತ್ತೊಂದೆಡೆ ಭೂ ಮಾಲಿಕ ವರ್ಗ ಮತ್ತು ಭೂ ಸೇನೆಗಳೆರಡೂ 'ಭೂ ಸ್ವಾಮ್ಯ'ದ ರಕ್ಷಣೆಗಾಗಿ ಪೊಲೀಸ್ ಅಧಿಕಾರದ ಬಳಕೆ ಮಾಡುವ ಹಾಗೂ ಭೂ ರಹಿತರ ಮೇಲೆ ದೌರ್ಜನ್ಯಗಳು ಹೆಚ್ಚಾಗುತ್ತಿರುವ ವರದಿಗಳನ್ನು ಕಾಣಬಹುದು. ಜೆ.ಪಿ. ಚಳವಳಿ ಸಂದರ್ಭದಲ್ಲಿ ದೊಡ್ಡ ದೊಡ್ಡ ಭೂ ಮಾಲಿಕರ ಪಾತ್ರ ಚಳವಳಿಯಲ್ಲಿ ಹಿರಿದಾಗಿದ್ದು, ಅನೇಕರಿಗೆ ಜೆ.ಪಿ. ಚಳವಳಿಯನ್ನು ಸಂಶಯಾತ್ಮಕವಾಗಿ ನೋಡುವಂತೆ ಮಾಡಿತ್ತು.

ವರ್ಗಕ್ಕೆ ಸೇರಿದವರಾಗಿದ್ದು, ಅದರಲ್ಲಿಯೂ ಸಮಾಜವಾದಿ ಸಿದ್ಧಾಂತದಿಂದ ಪ್ರಭಾವಿತರಾಗಿದ್ದವರು ಅಧಿಕವಾಗಿದ್ದರು. ಇದರೊಡನೆ ರಾಜ್ಯದಲ್ಲಿ ಭೂ ಸುಧಾರಣಾ ಕಾಯ್ದೆಗಾಗಿ ದನಿ ಎತ್ತುತ್ತಿದ್ದವರೆಲ್ಲ ಕಮ್ಯುನಿಸ್ಟರು ಮತ್ತು ಸಮಾಜವಾದಿಗಳಾಗಿದ್ದರು. ಸಮಕಾಲೀನವಾಗಿ ಕಮ್ಯುನಿಸ್ಟರಲ್ಲಿ ಒಂದು ಬಣ ಆಡಳಿತ ಪಕ್ಷದೊಂದಿಗೆ ಸೇರಿ ಸರ್ಕಾರದಲ್ಲಿ ಭಾಗಿಯಾಗಿತ್ತು. ಇವೆಲ್ಲವೂ ಕಾಯ್ದೆ ಜಾರಿಗೆ ತರುವಲ್ಲಿ ಪೂರಕವಾಗಿ ಸಹಕರಿಸಿತು.

೧೯೭೪ರ ಭೂ ಸುಧಾರಣಾ ಕಾಯ್ದೆ ಮತ್ತು ರಾಜ್ಯ ರಾಜಕಾರಣದ ನಡುವಿನ ಪರಸ್ಪರ ಸಂಬಂಧ ಪ್ರಕಟಗೊಂಡ ರೂಪಗಳನ್ನು ಚರ್ಚಿಸುವ ಪ್ರಯತ್ನ ಮಾಡಿದೆ. ರಾಜ್ಯ ರಾಜಕಾರಣ ಮತ್ತು ರಾಜಕೀಯ ಪಕ್ಷಗಳ ಅಸ್ಮಿತೆಯಾಗಿ ಪಡೆದ ರೂಪಗಳನ್ನು ಎರಡು ಹಂತಗಳಲ್ಲಿ ವಿಂಗಡಿಸಿದೆ. ೧೯೭೪ರ ಭೂ ಕಾಯ್ದೆ ಮತ್ತು ಆಡಳಿತಶಾಹಿಯ ಸ್ವರೂಪಗಳನ್ನು 'ಉಳುವವನಿಗೆ ಭೂ ರಾಜಕಾರಣ'ದ ನೆಲೆಯಲ್ಲಿ ಚರ್ಚಿಸಲಾಗಿದೆ. ಇದರ ಪ್ರತಿಕ್ರಿಯೆಗಳನ್ನು ಪತ್ರಿಕೆ, ಸಾಹಿತ್ಯ ಮತ್ತು ಸಿನಿಮಾಗಳ ಮೂಲಕ ಅವಲೋಕಿಸಲು ಪ್ರಯತ್ನಿಸಿದೆ.

### ೨.೨.೧. ಉಳುವವನಿಗೆ ಭೂಮಿ: ರಾಜಕೀಯ ಮತ್ತು ಆರ್ಥಿಕ ನೆಲೆಗಟ್ಟು

ಉಳುವ ರೈತನು ಹೊಲದ ಒಡೆಯನಾಗಬೇಕು ಎಂಬ ಕೂಗು ಸ್ವತಂತ್ರ ಪೂರ್ವದಿಂದಲೂ ಕೇಳಿ ಬರುತ್ತಿದ್ದದ್ದೆ ಆಗಿತ್ತು. ರಾಜಕೀಯ ಪಕ್ಷಗಳು, ಎಡಪಂಥೀಯರು, ಬುದ್ಧಿಜೀವಿಗಳು, ಸಾಹಿತ್ಯ, ಸಿನಿಮಾ, ಚಳವಳಿಗಳು ಹೀಗೆ ಹತ್ತು ಹಲವು ವರ್ಗ ಮತ್ತು ವಲಯಗಳಲ್ಲಿ ಇದು ಬೇರೆ ಬೇರೆ ರೂಪಗಳಲ್ಲಿ ಧ್ವನಿತವಾಗುತ್ತಿತ್ತು. ಯಾವುದೇ ವ್ಯವಸ್ಥೆಯಲ್ಲಾದರೂ ಹೊರಗಿನಿಂದ ಹೇರಲ್ಪಡುವ ಮತ್ತು ಒಳಗಿನಿಂದ ಉದ್ಭವಿಸುವ ಎರಡು ಶಕ್ತಿಗಳು ಬದಲಾವಣೆಗೆ ಕಾರಣಕರ್ತವಾಗಿರುವುವು. ಸಮಾಜದಲ್ಲಿ ಚರ್ಚಿತವಾಗುವ ಪ್ರಮುಖ ವಿಚಾರ ಗಳು ಅಜೆಂಡದ ರೂಪ ಪಡೆದುಕೊಳ್ಳುವುವು. ಸಾಮಾಜಿಕ ಚಳವಳಿಗಳು ಹೊಸ ವಿಚಾರವನ್ನು ಸಾರ್ವಜನಿಕ ಅಜೆಂಡವನ್ನಾಗಿ ಬದಲಾಯಿಸುವುವು. ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯಲ್ಲಿ 'ಉಳುವವನಿಗೆ ಹೊಲ'[1] ಸ್ವಾತಂತ್ರ್ಯ ಪೂರ್ವದಿಂದ ಕಮ್ಯುನಿಸ್ಟ್ ಹಾಗೂ ಸಮಾಜವಾದಿ ಪಕ್ಷಗಳಿಗೆ ಪ್ರಮುಖ ಅಜೆಂಡವಾಗಿತ್ತು. ಕಾಂಗ್ರೆಸ್ ಪಕ್ಷವು ಇದಕ್ಕೆ ಹೊರತಾಗಿರಲಿಲ್ಲ. ಭೂ ಸುಧಾರಣಾ ಕಾಯ್ದೆಯ ಅಗತ್ಯ ಕುರಿತ ಚಿಂತನೆ ೧೯೭೦ - ೧೯೮೦ರ ಮಧ್ಯ ಭಾಗದವರೆಗೆ ಬಹುತೇಕ ಎಲ್ಲ ರಾಜಕೀಯ ಪಕ್ಷಗಳ ಅಜೆಂಡದ ಭಾಗವಾಗಿದ್ದು, ಸ್ವಾತಂತ್ರ್ಯೋತ್ತರದಲ್ಲಿ ನಡೆದ ಅನೇಕ ಹೋರಾಟಗಳಿಗೆ, ಚಳವಳಿಗಳಿಗೆ ಪ್ರತ್ಯಕ್ಷ ಅಥವಾ ಪರೋಕ್ಷ ಕಾರಣವಾಗಿದೆ.

ಭೂ ಸುಧಾರಣೆಯ ಚರ್ಚೆ ಅಂತಿಮವಾಗಿ ತೀವ್ರತೆ ಪಡೆದುಕೊಳ್ಳುವುದು ಮತ್ತು ಇಳಿಮುಖದ ಹಾದಿ ಹಿಡಿಯುವ ಎರಡು ಪ್ರಕ್ರಿಯೆಗಳು ೧೯೭೦ರ ದಶಕದಲ್ಲೇ ಕಂಡುಬಂದಿತು. ಈ ದಶಕದ ಅನೇಕ ಸಾರ್ವಜನಿಕ ಹೋರಾಟಗಳು ಮತ್ತು ನಕ್ಸಲಿಸಂ[2] ರಾಜಕಾರಣಗಳು ಆರ್ಥಿಕ, ಸಾಮಾಜಿಕ ಬದಲಾವಣೆಗಳಿಗೆ ಕಾರಣವಾಯಿತು. ತುರ್ತುಪರಿಸ್ಥಿತಿಯ ನಂತರದಲ್ಲಿ ಕೇಂದ್ರ ಸರ್ಕಾರದ ಭೂ ಸುಧಾರಣೆ ಕುರಿತ ಕ್ರಮಗಳಲ್ಲಿ ಮೊದಲಿನ ತೀವ್ರತೆ ಕಾಣುವುದಿಲ್ಲ. ರಾಜಕೀಯ ಪಕ್ಷಗಳ ಅಜೆಂಡದ ಸ್ವರೂಪದಲ್ಲಿ ಗುರುತರ ಬದಲಾವಣೆ ಕಾಣುವುದು. ತುರ್ತುಪರಿಸ್ಥಿತಿ ಮತ್ತು ನಂತರದಲ್ಲಾದ ರಾಜಕೀಯ ಪಲ್ಲಟವು ಭೂ ಸುಧಾರಣೆಯನ್ನು ಹಿಂದಿಕ್ಕಿರುವುದು ಮೇಲ್ನೋಟಕ್ಕೆ ಗುರುತಿಸಬಹುದು. ಕೇಂದ್ರ ಸರ್ಕಾರ ನಿರ್ದೇಶಿಸಿದ ೧೯೭೨ರ ಭೂ ಸುಧಾರಣಾ ಕಾಯ್ದೆ ರಾಷ್ಟ್ರದಾದ್ಯಂತ ಅನೇಕ ರೀತಿಯ ಸಂಚಲನ ಉಂಟುಮಾಡಿತ್ತು. ಪತ್ರಿಕೆ, ಜರ್ನಲ್, ಅಕಾಡೆಮಿಕ್ ವಲಯಗಳಲ್ಲಿ ಅದರ ಸಾಧಕ ಬಾಧಕಗಳ ಕುರಿತ ಚರ್ಚೆಗಳು ಒಂದೆಡೆಯಿದ್ದರೆ, ಮತ್ತೊಂದೆಡೆ ಭೂ ಮಾಲಿಕ ವರ್ಗ ಮತ್ತು ಭೂ ಸೇನೆಗಳೆರಡೂ 'ಭೂ ಸ್ವಾಮ್ಯ'ದ ರಕ್ಷಣೆಗಾಗಿ ಪೊಲೀಸ್ ಅಧಿಕಾರದ ಬಳಕೆ ಮಾಡುವ ಹಾಗೂ ಭೂ ರಹಿತರ ಮೇಲೆ ದೌರ್ಜನ್ಯಗಳು ಹೆಚ್ಚಾಗುತ್ತಿರುವ ವರದಿಗಳನ್ನು ಕಾಣಬಹುದು. ಜೆ.ಪಿ. ಚಳವಳಿ ಸಂದರ್ಭದಲ್ಲಿ ದೊಡ್ಡ ದೊಡ್ಡ ಭೂ ಮಾಲಿಕರ ಪಾತ್ರ ಚಳವಳಿಯಲ್ಲಿ ಹಿರಿದಾಗಿದ್ದು, ಅನೇಕರಿಗೆ ಜೆ.ಪಿ. ಚಳವಳಿಯನ್ನು ಸಂಶಯಾತ್ಮಕವಾಗಿ ನೋಡುವಂತೆ ಮಾಡಿತ್ತು.

ತುರ್ತುಪರಿಸ್ಥಿತಿಯ ವಿರುದ್ಧ ಹೋರಾಟದಲ್ಲಿ ಸಾಂಖ್ಯಿಕವಾಗಿ ಅತಿ ಹೆಚ್ಚು ಪಾಲ್ಗೊಂಡ ಆರ್.ಎಸ್.ಎಸ್ ಮತ್ತಿತರ ರಾಜಕೀಯ ಸಂಘಟನೆ ಮತ್ತು ರಾಜಕೀಯ ಪಕ್ಷಗಳ ಭೂ ಸುಧಾರಣೆಯ ಬಗೆಗಿನ ನಿಲುವು ಭಿನ್ನವಾಗಿತ್ತು. ತುರ್ತುಪರಿಸ್ಥಿತಿಯ ನಂತರದಲ್ಲಿ ಸಮಾಜವಾದಿ ಪಕ್ಷ ರಾಜಕಾರಣದಲ್ಲಿ ಹಿಂದಿನ ಅಸ್ತಿತ್ವ ಕಳೆದುಕೊಂಡಿತ್ತು. ಹಾಗಾಗಿ ಭೂ ಸುಧಾರಣಾ ರಾಜಕೀಯ ಸಮಕಾಲೀನ ರಾಜಕಾರಣದ ಮೇಲೂ ಪರೋಕ್ಷ ಪರಿಣಾಮ ಬೀರಿರುವ ಸಾಧ್ಯತೆಯಿದ್ದು, ಅಧ್ಯಯನ ನಡೆಸಬೇಕಾದ ಅವಶ್ಯಕತೆಯಿದೆ.

ಪ್ರಜಾಪ್ರಭುತ್ವದಲ್ಲಿ ಸಮಾನತೆ ಮತ್ತು ಸಾಮಾಜಿಕ ಮೌಲ್ಯಗಳ ನಡುವಿನ ಸಂಬಂಧ ಭೂಮಿಯ ಪ್ರಶ್ನೆ ಹಾಗೂ ಶಾಸನಗಳ ಜೊತೆಗಿನ ಪ್ರಭಾವ ಗಾಢವಾಗಿದೆ. ಭೂ ಸುಧಾರಣಾ ಶಾಸನಗಳು ಪ್ರಜಾಪ್ರಭುತ್ವವನ್ನು, ರಾಜ್ಯವನ್ನು, ಸಮಾಜದ ಪ್ರಕ್ರಿಯೆಗಳನ್ನು ಹಾಗೂ ಸಮಕಾಲೀನ ರಾಜಕಾರಣವನ್ನು ನಿಯಂತ್ರಿಸುವಷ್ಟು ಶಕ್ತವಾಗಿರುವುದು. ಭೂ ಸುಧಾರಣೆಯ ಶಾಸನಗಳ ಜಾರಿಯಲ್ಲಿ ಆರ್ಥಿಕ ಹಿತಾಸಕ್ತಿಗಳಿಗಿಂತ ರಾಜಕೀಯ ಮತ್ತು ಸಾಮಾಜಿಕ ಹಿತಾಸಕ್ತಿಗೆ ಹೆಚ್ಚು ಮಾನ್ಯತೆ ನೀಡಲಾಗಿದೆ. ಹಾಗಾಗಿ ಸಮಕಾಲೀನ ರಾಜಕಾರಣ ಮತ್ತು ಭೂ ಸುಧಾರಣೆ ರಾಜಕಾರಣ ಎರಡನ್ನೂ ಒಟ್ಟಾಗಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಆದರ್ಶ, ಆಡಳಿತ ಮತ್ತು ಆಚರಣೆಗಳ ನಡುವೆ ೧೯೭೪ರ ಕಾಯ್ದೆಯನ್ನು ಎರಡು ಹಂತಗಳಲ್ಲಿ ಚರ್ಚಿಸಲಾಗಿದೆ. ಕಾಯ್ದೆಯ ಸ್ವರೂಪದ ಬದಲಾವಣೆಗಳನ್ನು ೧೯೭೪ ರಿಂದ ೧೯೮೦ರವರೆಗಿನ ಶಾಸನದ ತಿದ್ದುಪಡಿಗಳ ಹಂತಗಳನ್ನು ಮತ್ತು ಕಾಯ್ದೆ ಅನುಷ್ಠಾನ ಪ್ರಕ್ರಿಯೆಯ ರಾಜಕಾರಣದ ನೆಲೆಗಳನ್ನು ವಿಮರ್ಶಿಸಲು ಪ್ರಯತ್ನಿಸಲಾಗಿದೆ. ಇದಕ್ಕೆ ಸಮಾಜ ಮತ್ತು ಮಾಧ್ಯಮಗಳಲ್ಲಿ ಪ್ರತಿಕ್ರಿಯೆ ರೂಪುಗೊಂಡ ಬಗೆಯನ್ನು ವಿಶ್ಲೇಷಿಸಲಾಗಿದೆ. ಭೂ ಮಾಲಿಕ ಮತ್ತು ಗೇಣಿದಾರರ ಸಂಬಂಧ ಹಾಗೂ ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಯ ಬದಲಾವಣೆಗಳನ್ನು ರಾಜ್ಯ ರಾಜಕಾರಣದ ನೆಲೆಯಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ.

### ೨.೨.೧.೧. ಭೂ ಸುಧಾರಣೆ: ಕಾಯ್ದೆ, ತಿದ್ದುಪಡಿಗಳು, ಭೂ ನ್ಯಾಯ ಮಂಡಳಿಗಳು ಹಾಗೂ ಆಡಳಿತಶಾಹಿ

> ಭೂ ಸುಧಾರಣಾ ಶಾಸನದ ಸಂವಿಧಾನದ ಬದ್ಧತೆ ಪ್ರಶ್ನಿಸಿ ರಿಟ್ ಅರ್ಜಿ ವಿಚಾರಣೆಗೆ(ಕನ್ನಡಪ್ರಭ ೧೭ ಏಪ್ರಿಲ್ ೧೯೭೪).

೧೯೭೪ರಲ್ಲಿ ಜಾರಿಗೆ ಬಂದಿರುವ ಭೂ ಸುಧಾರಣಾ(ತಿದ್ದುಪಡಿ) ಕಾಯ್ದೆಯ ಹಲವು ವಿಚಾರಗಳ ಸಂವಿಧಾನ ಬದ್ಧತೆಯನ್ನು ಪ್ರಶ್ನಿಸಿರುವ ಪತ್ರಿಕಾ ವರದಿ ಆಗಿದೆ. ಪ್ರಸ್ತುತದಲ್ಲಿ ಭೂ ಸುಧಾರಣೆ ಕುರಿತು

> ಮತ್ತೊಮ್ಮೆ ಭೂ ಸುಧಾರಣಾ ವಿಚಾರವು ಮುಖ್ಯ ಕ್ಷೇತ್ರಗಳ ಚರ್ಚೆಯು. ಅದರೊಂದಿಗೆ ರಾಜನೀತಿ ಸೂತ್ರೀಕರಣದಲ್ಲಿ ಒತ್ತಿ ಹೇಳುವ ವಿಚಾರವಾಗಿ ಮಾರ್ಪಟ್ಟಿದೆ. ಏಕೆಂದರೆ ಹಲವು ರಾಷ್ಟ್ರಗಳಲ್ಲಿ ಭೂ ಸಂಬಂಧಿ ವಿಚಾರಗಳು ಸಾಮಾಜಿಕ ಹಾಗೆ ರಾಜಕೀಯ ಸಂಘರ್ಷ ಮತ್ತು ಸಮಸ್ಯೆಗಳಿಗೆ ಮೂಲಭೂತ ಕಾರಣವಾಗಿ ಪರಿಣಮಿಸಿದೆ. ಇದು ಕಾಂಬೋಡಿಯ, ಜಿಂಬಾಬ್ವೆ ಮೊದಲಾದ ತೃತಿಯ ಜಗತ್ತಿನ ದೇಶಗಳಲ್ಲಿ ಸ್ಪಷ್ಟವಾಗಿದೆ. ಭಾರತವು ನಿಧಾನವಾಗಿ ಭೂಮಿ ಶಾಸನಗಳ ರಾಜಕೀಯದಲ್ಲಿ ಸಿಲುಕಿ ಕೊಳ್ಳುತ್ತಿದೆ. ಈಗ ಗಂಭೀರವಾದ ಸಾಮಾಜಿಕ ಸಂಘರ್ಷದ ಸಮಸ್ಯೆಯನ್ನು ಎದುರಿಸುತ್ತಿದೆ. ವಾಸ್ತವದಲ್ಲಿ ಪ್ರಸ್ತುತ ಭಾರತದಲ್ಲಿ ಹುಟ್ಟುತ್ತಿರುವ ಆಂದೋಲನಗಳನ್ನು ಪ್ರತಿಫಲಿಸುತ್ತಿದೆ(ಅಸ್ಸಾದಿ ೨೦೧೦: ೩೧).

ಪ್ರಸ್ತುತ ರಾಜಕೀಯ ಸಮಸ್ಯೆಗಳೊಂದಿಗೆ ಕರ್ನಾಟಕದ ಭೂ ಸುಧಾರಣಾ ವಿಚಾರಗಳನ್ನು ಪುನರ್ ಅವಲೋಕನ ಮಾಡುವ ಚರ್ಚೆ ಇಲ್ಲಿದೆ. ಮೇಲ್ನೋಟಕ್ಕೆ ಈ ಮೇಲಿನ ಎರಡೂ ವಿಚಾರಗಳಿಗೆ ಪರಸ್ಪರ ಸಂಬಂಧ ಕಾಣುವುದಿಲ್ಲ. ಆದರೆ ಎರಡರಲ್ಲಿಯೂ ಇರುವ ಮುಖ್ಯ ವಿಚಾರ 'ಭೂ ಒಡೆತನದ ಪ್ರಶ್ನೆ ಮತ್ತು ಸಂಬಂಧಿಸಿದ ಸರ್ಕಾರದ ಕಾರ್ಯನೀತಿ'. ೧೯೭೪ರ ಭೂ ಸುಧಾರಣಾ ಕಾಯ್ದೆಯ ರೂಪ ಮತ್ತು ತಿದ್ದುಪಡಿಗಳ(೧೯೮೦ರವರೆಗೆ) ಮೂಲಕ ಬದಲಾದ ರೂಪಗಳು, ಜಾರಿಗೊಂಡ ಸಂದರ್ಭದ ಆಡಳಿತಶಾಹಿ ಯ ಸ್ವರೂಪ ಮತ್ತು ಸಮಕಾಲೀನ ರಾಜಕಾರಣದಲ್ಲಿ ಭೂ ಒಡೆತನದ ಪ್ರಭಾವವನ್ನು ಎರಡು ಹಂತಗಳಲ್ಲಿ ವಿಶ್ಲೇಷಿಸಲಾಗಿದೆ. ಆಡಳಿತಶಾಹಿ ಮತ್ತು ಭೂ ನ್ಯಾಯ ಮಂಡಳಿಗಳ ಪ್ರಕ್ರಿಯೆಗಳನ್ನು ಚರ್ಚಿಸಲು ಪ್ರಯತ್ನ ಮಾಡಲಾಗಿದೆ.

### ೨.೨.೧.೧. ಶಾಸನದ ಸ್ವರೂಪಗಳು ಮತ್ತು ತಿದ್ದುಪಡಿಗಳು

ಕರ್ನಾಟಕದ ಭೂ ಶಾಸನಗಳಲ್ಲಿ ೧೯೭೪ರ ಭೂ ಶಾಸನವನ್ನು ಅತ್ಯಂತ ಕ್ರಾಂತಿಕಾರಿ ಹಾಗೂ ಹೊಸ ಶಾಸನ ಎಂದೇ ನೋಡುವ ಕ್ರಮ ಸಾಮಾನ್ಯವಾಗಿದೆ. ೧೯೬೧ರಲ್ಲಿ ಬಂದ ಭೂ ಸುಧಾರಣಾ ಕಾಯ್ದೆಗೆ ಮಾಡಿದ ಪ್ರಮುಖ ತಿದ್ದುಪಡಿ ಇದಾಗಿದೆ. ಈ ಮೂಲಕ ಅಸ್ತಿತ್ವದಲ್ಲಿದ್ದ ಕಾಯ್ದೆಯ ಸ್ವರೂಪದಲ್ಲಿ ಬೃಹತ್ ಪ್ರಮಾಣದ ಬದಲಾವಣೆಯನ್ನು ಮಾಡಲಾಯಿತು.

> ಕೇಂದ್ರ ಸರ್ಕಾರದ ಮಾರ್ಗಸೂಚಿಗಳ ವಿಶೇಷ ಗಮನ ಹಿಡುವಳಿಯ ಮಿತಿಯನ್ನು ತಗ್ಗಿಸುವುದು ಮತ್ತು ವಿನಾಯಿತಿಗಳ ಪಟ್ಟಿ ಇವುಗಳ ಮೇಲೆ ಹರಿದಿತ್ತಾದರೂ, ರಾಜ್ಯ ಸರ್ಕಾರವು ಆ ವ್ಯಾಪ್ತಿಯನ್ನು ಮೀರಿ ತಿದ್ದುಪಡಿ ಕಾಯ್ದೆಯಲ್ಲಿ ಗೇಣಿ ನಿಯಂತ್ರಣಗಳನ್ನು ಜಗಿಪಡಿಸಲು ಕ್ರಮಗಳನ್ನು ಸೇರಿಸಿತು ... ಅದು ೧೯೬೧ರ ಕಾಯ್ದೆಯ ಕೇವಲ ತಿದ್ದುಪಡಿಯಾಗಿದ್ದರೂ ಮತ್ತು ಆ ಕಾಯ್ದೆಯ ಎಲ್ಲ ಮುಖ್ಯ ಅಂಶಗಳನ್ನು ಒಳಗೊಂಡಿದ್ದರೂ, ಅದರ ತಿದ್ದುಪಡಿಗಳು ಮೂಲಭೂತವಾಗಿದ್ದು, ಅವುಗಳ ಪರಿಣಾಮ ಮಹತ್ವದವೂ ಶಾಶ್ವತವೂ ಆಗಿರುವಂತಹವಾಗಿರುದರಿಂದ ೧೯೭೪ರ ಕಾಯ್ದೆ ನಿಜವಾದ ಹೊಸ ಶಾಸನವೆಂದೆ ಪರಿಗಣಿತವಾಗಿದೆ(ರಾಜನ್ ೧೯೮೭: ೩೧).

೧೯೭೪ರ ಭೂ ಶಾಸನದ ಸ್ವರೂಪವನ್ನು ಸ್ಥೂಲವಾಗಿ ವಿವರಿಸಿದೆ. ಅಂದಿನ ಸರ್ಕಾರದ ಕಾರ್ಯನೀತಿ ಮತ್ತು ಉದ್ದೇಶಗಳನ್ನು ಬಿಂಬಿಸುವುವು. ಇಲ್ಲಿ ೧೯೭೪ರ ಭೂ ಸುಧಾರಣಾ ಕಾಯ್ದೆಯನ್ನು ಸ್ವತಂತ್ರ ಕಾಯ್ದೆ ಎಂಬ ರೀತಿಯಲ್ಲಿ ನೋಡಲಾಗುವುದು. ಭೂ ಸುಧಾರಣಾ ಕಾಯ್ದೆಯ ತಿದ್ದುಪಡಿಗಳು ಮತ್ತು ಸ್ವರೂಪಗಳನ್ನು ಸಮಕಾಲೀನ ರಾಜಕಾರಣದ ನೆಲೆಯಲ್ಲಿ ವಿಮರ್ಶಿಸಲು ಪ್ರಯತ್ನಿಸಲಾಗಿದೆ.

೧೯೭೪ ರಿಂದ ೧೯೮೦ರವರೆಗೆ ಭೂ ಶಾಸನವು ಹಲವಾರು ಕಾರಣಗಳಿಂದಾಗಿ ಸುಮಾರು ಹತ್ತಕ್ಕಿಂತಲೂ ಹೆಚ್ಚು ಸಲ ತಿದ್ದುಪಡಿಗೆ ಒಳಗಾಯಿತು. ಕಾಯ್ದೆ ಜಾರಿಯ ನಂತರ ಸರ್ಕಾರ ಎದುರಿಸಿದ ಸಮಸ್ಯೆ ಮತ್ತು ಆಡಳಿತಶಾಹಿಯಲ್ಲಿ ಮಾಡಬೇಕಾದ ಬದಲಾವಣೆ ಕೆಲವು ತಿದ್ದುಪಡಿಗಳಿಗೆ ಕಾರಣವಾದರೆ, ಗೇಣಿದಾರರು ಅರ್ಜಿ ಸಲ್ಲಿಸುವ ಸಮಯ ವಿಸ್ತರಣೆ ಮೊದಲಾದ ತಾಂತ್ರಿಕ ಕಾರಣಗಳ ಹಿನ್ನೆಲೆಯನ್ನೂ ಕಾಣಬಹುದು. ಇವುಗಳೊಡನೆ ರಾಜಕಾರಣದಲ್ಲಾದ ಬದಲಾವಣೆ ಮತ್ತು ಒತ್ತಡಗಳು ಸಹ ಪೂರಕವಾಗಿ ಪರಿಣಾಮ ಬೀರಿದೆ. ೧೯೭೬, ೧೯೭೮ ಮತ್ತು ೧೯೭೯ರಲ್ಲಿ ಬಂದ ತಿದ್ದುಪಡಿಗಳು ೧೯೭೪ರ ಭೂ ಶಾಸನದ ಸ್ವರೂಪವನ್ನು ಹಲವು ಹಂತಗಳಲ್ಲಿ ಬದಲಿಸಿರುವುದನ್ನು ನೋಡಬಹುದು.

••• ••• •••

> ಆಡಳಿತದಲ್ಲಿರುವ ರಾಜಕೀಯ ಪಕ್ಷ ಎಷ್ಟು ದೂರ ಹೋಗಬಹುದು ಎನ್ನುವುದನ್ನು ಆಲೋಚನೆ ಮಾಡಿ ಈ ಕಾನೂನು ರಚನೆಯಾಗಿದೆ. ನನ್ನ ದೃಷ್ಟಿಯಲ್ಲಿ ಇನ್ನೂ ಸ್ವಲ್ಪ ದೂರ ಹೋಗುವುದಕ್ಕೆ ಸಾಧ್ಯವಿತ್ತು. ಕೆಲವರ ಅಭಿಪ್ರಾಯ. ಇದು ಜಾಸ್ತಿ. ಬಹಳ ಜಾಸ್ತಿ. ಇದನ್ನೆಲ್ಲಾ ಕಾರ್ಯಗತ ಮಾಡುವುದು ಕಷ್ಟ. ಈ ದೇಶದಲ್ಲಿರತಕ್ಕಂತ ಪರಿಸ್ಥಿತಿಯಲ್ಲಿ ಇಷ್ಟು ದೂರ ಹೋಗುವುದು ಸರಿಯಲ್ಲ ಎಂದು. ಏನೇ ಆಗಲಿ ಇವತ್ತು ಈ ಹಂತ ಮುಗಿದಿದೆ(ಹುಚ್ಚಮಾಸ್ತಿಗೌಡ ೧೯೭೩: ೧೯೫).

ಮತ್ತು

> ನಮ್ಮ ಪಕ್ಷ ಇಂತಹದೊಂದು ಕಾರ್ಯಕ್ರಮ ಹಾಕಿಕೊಂಡಿದೆ ಎಂದಾಗಲಿ. ಅಥವಾ ಅದು ಆಚರಣೆಗೆ ಬಂದಿರುವ ಸಿದ್ಧಾಂತವೆಂದಾಗಲಿ ಭಾವಿಸಿ ನಾವು ಈ ಭೂ ಸುಧಾರಣೆಗಳನ್ನು ಕಾರ್ಯರೂಪಕ್ಕೆ ತರಲು ಅಪೇಕ್ಷಿಸುತ್ತಿಲ್ಲ ಎಂಬುದು ಮತ್ತೊಂದು ಅಂಶ ... ೧೯೬೩ ಮತ್ತು ೧೯೬೭ರಲ್ಲಿ ಮೈಸೂರು ರಾಜ್ಯ ಮತ್ತು ಇತರ ಕಡೆಗಳಲ್ಲಿ ನಿಗದಿಪಡಿಸಲಾಗಿದ್ದ ಗರಿಷ್ಠ ಪರಿಮಿತಿಯನ್ನು ಮತ್ತಷ್ಟು ಕಡಿಮೆ ಮಾಡುತ್ತೇವೆ. ಭಾರತದ ಎಲ್ಲ ರಾಜ್ಯಗಳು ಭೂ ಸುಧಾರಣೆಯನ್ನು ಅಂಗೀಕರಿಸಿವೆ ... ಎಲ್ಲೂ ಅದನ್ನು ಜವಾಬ್ದಾರಿಯುತವಾಗಿ ಕಾರ್ಯರೂಪಕ್ಕೆ ತಂದಿಲ್ಲ ಅಥವಾ ಕಾರ್ಯರೂಪಕ್ಕೆ ತರುತ್ತಿಲ್ಲ. ಈ ಕಾಂಗ್ರೆಸ್ ವ್ಯವಸ್ಥೆಯ ವಿಭಜನೆ ಆದ ಅನಂತರ ಮಾತ್ರ ಅದನ್ನು ಸಂಪೂರ್ಣ ಜವಾಬ್ದಾರಿಯುತವಾಗಿ ಕೈಗೆತ್ತಿಗೊಳ್ಳಲಾಗಿದೆ ... ಕಾರ್ಯರೂಪಕ್ಕೆ ತರುವ ಸಂದರ್ಭದಲ್ಲಿ ಒಂದು ದಶಕದ ಹಿಂದೆ ಇದ್ದಂತಹ ಪರಿಸ್ಥಿತಿಗಳು ಬಹುಮಟ್ಟಿಗೆ ಬದಲಾವಣೆಗೊಂಡಿವೆ ಎಂಬ ವಿಷಯವು ನಮ್ಮ ಗಮನಕ್ಕೆ ಬಂದಿದೆ ... ನಾವು ಈ ಗರಿಷ್ಠ ಪರಿಮಿತಿಯನ್ನು ಮತ್ತೂ ಇಳಿಸಬೇಕೆಂದು ವಿಚಾರ ಮಾಡಿದೆವು ... ಪ್ರಸಕ್ತ

ಸುಧಾರಣೆಗಳು ಅಥವಾ ವಿದೇಯಕವನ್ನು ಕುರಿತು ಚರ್ಚೆ ನಡೆಸಿದ್ದೀರಿ(ಅರಸು ೧೯೭೭: ೨೬೩-೨೬೪).

೧೯೭೪ರ ಭೂ ಶಾಸನ ರಚನೆಯ ಹಿಂದಿರುವ ರಾಜ್ಯ, ರಾಷ್ಟ್ರ ಮತ್ತು ಪಕ್ಷ ರಾಜಕಾರಣವನ್ನು ಸ್ಪಷ್ಟವಾಗಿ ಗುರುತಿಸಬಹುದು. ಹಿಂದಿನ ಶಾಸನದ ಗರಿಷ್ಠ ಭೂ ಮಿತಿಯನ್ನು ಕಡಿಮೆ ಮಾಡಿರುವುದು ಪ್ರಸ್ತುತ ಭೂ ಶಾಸನದ ಮುಖ್ಯ ಲಕ್ಷಣವಾಗಿದೆ.

**ಚರ್ಚೆಯೊಂದರಲ್ಲಿ ಅರಸು ಅವರು**



ಕೃಪೆ: ಚಿಟ್ಟಿನ್ ಪಿರಾಲ್ಸ್, ಎಂ.ಜಿ.ರೋಡ್, ಬೆಂಗಳೂರು. ಚಿತ್ರ ಸಂಖ್ಯೆ: ೩.೧೧

"ಇಂದಿನಿಂದ ಭೂ ಸುಧಾರಣೆ ಶಾಸನ ಜಾರಿಗೆ"(ಕನ್ನಡಪ್ರಭ ೧೯೭೪ ಮಾರ್ಚ್ ೧). ಪತ್ರಿಕಾ ವರದಿಯಲ್ಲಿ 'ಕಾಯ್ದೆಯ ತಕ್ಷಣದ ಪರಿಣಾಮ ೨೧ಲಕ್ಷ ಎಕರೆ ಭೂಮಿಯಲ್ಲಿ ಗೇಣಿದಾರ ಮತ್ತು ಭೂ ಮಾಲಿಕರ ಸಂಬಂಧ ರದ್ದಾಗುವುದು. ಸದ್ಯದಲ್ಲಿ ಒಡೆತನ ಸರ್ಕಾರದ್ದು ಉತ್ತರೋತ್ತರದಲ್ಲಿ ಗೇಣಿದಾರರೆ ಮಾಲಿಕರಾಗುತ್ತಾರೆ. ಹಿಂದಿನ ಭೂ ಮಾಲಿಕರಿಗೆ ಪರಿಹಾರದ ಅಂಶಗಳನ್ನು ತ್ವರಿತವಾಗಿ ಇತ್ಯರ್ಥಗೊಳಿಸಲು ಸರ್ಕಾರ ಪ್ರತ್ಯೇಕ ವ್ಯವಸ್ಥೆ ಮಾಡಲಿದ್ದಾರೆ' ಎಂಬ ವಿಸ್ತೃತ ವಿವರಣೆಯಿದೆ. ಈ ವರದಿ ಪ್ರಕಟವಾಗಿರುವುದು ಎರಡನೆ ಪುಟದ ಸಣ್ಣ ಕಾಲಂವೊಂದರಲ್ಲಿ. ಇಲ್ಲಿ ಶಾಸನದ ಸ್ವರೂಪಕ್ಕಿಂತ ಪರಿಣಾಮ ಮತ್ತು ನಿರ್ವಹಣೆ ಕುರಿತ ಮಾಹಿತಿಗೆ ಒತ್ತು ನೀಡಲಾಗಿದೆ. ಕಾಯ್ದೆಯ ಸ್ವರೂಪ 'ಬಡವರು, ಕೂಲಿ ಕಾರ್ಮಿಕರು, ಸಣ್ಣ ರೈತರ ಪರವಾಗಿದ್ದು, ಅತ್ಯಂತ ಪ್ರಗತಿಪರ ನಿಲುವು ಹೊಂದಿದ್ದಂತಹದ್ದು' ಎಂಬ ಅಭಿಮತವಿದೆ. ಇಂತಹ ಅಭಿಪ್ರಾಯಗಳು ಸಾಮಾನ್ಯವಾಗಿ ಸಮಾಜವಾದಿಗಳು, ಪತ್ರಕರ್ತರು, ರಾಜಕಾರಣಿಗಳಲ್ಲಿ ಅಧಿಕವಾಗಿದೆ. ಶಾಸನದ ಹಿಂದಿನ ಚಿಂತನೆಗಳ ಸ್ವರೂಪ ಕುರಿತು ವಿವರಣೆಯೊಂದು ಹೀಗಿದೆ:

> ಕೃಷಿ ವ್ಯವಸ್ಥೆಯೆಂದರೆ ದೊಡ್ಡ ಭೂಮಾಲಿಕರ, ಸಣ್ಣ ಗೇಣಿದಾರರ ಸಮೂಹ ಎಂಬ ನಂಬಿಕೆ ಇದ್ದಿದ್ದರಿಂದ ಈ ಕಾಯ್ದೆಗೆ ನೀಡಲಾದ ಕೆಲವು ರಿಯಾಯಿತಿಗಳನ್ನು ಕೊರತೆಗಳೆಂದೇ ಭಾವಿಸಲಾಯಿತು. ೧೯೭೪ರಲ್ಲಿ ತಿದ್ದುಪಡಿಯೊಂದನ್ನು ತಂದು ಸಣ್ಣ ರೈತರು, ವಿಧವೆಯರು, ಅಪ್ರಾಪ್ತ ವಯಸ್ಕರು, ಮಾನಸಿಕ ಅಸ್ವಸ್ಥರು, ಅಂಗವಿಕಲರಿಗೆ ಮೊದಲು ನೀಡಿದ್ದ ರಿಯಾಯ್ತಿಯನ್ನು ರದ್ದುಮಾಡಲಾಯಿತು ... ಕಾನೂನಿನ ಮೂಲೋದ್ದೇಶಗಳ ಮೇಲೆ ಎಂಥ ಧೃಡ ವಿಶ್ವಾಸವಿತ್ತೆಂದರೆ ಈ ವಿಷಯದಲ್ಲಿ ನ್ಯಾಯಾಂಗ ವ್ಯವಸ್ಥೆಯು ಅಡ್ಡಿಯೆಂದೆ ಭಾವಿಸಲಾಯಿತು. ಕೋರ್ಟಿನ ದಾವೆಗಳಿಂದ ವಿಳಂಬಗೊಂಡ ಕೇಸುಗಳನ್ನು ಇತ್ಯರ್ಥ ಮಾಡಲು ಭೂ ನ್ಯಾಯ ಮಂಡಳಿಗಳನ್ನು ಸ್ಥಾಪಿಸಲಾಯಿತು. ಸ್ಥಳೀಯರು ಮತ್ತು

ಸುಧಾರಣೆಗಳು ಅಥವಾ ವಿದೇಯಕವನ್ನು ಕುರಿತು ಚರ್ಚೆ ನಡೆಸಿದ್ದೀರಿ(ಅರಸು ೧೯೭೭: ೨೬೩-೨೬೪).

೧೯೭೪ರ ಭೂ ಶಾಸನ ರಚನೆಯ ಹಿಂದಿರುವ ರಾಜ್ಯ, ರಾಷ್ಟ್ರ ಮತ್ತು ಪಕ್ಷ ರಾಜಕಾರಣವನ್ನು ಸ್ಪಷ್ಟವಾಗಿ ಗುರುತಿಸಬಹುದು. ಹಿಂದಿನ ಶಾಸನದ ಗರಿಷ್ಠ ಭೂ ಮಿತಿಯನ್ನು ಕಡಿಮೆ ಮಾಡಿರುವುದು ಪ್ರಸ್ತುತ ಭೂ ಶಾಸನದ ಮುಖ್ಯ ಲಕ್ಷಣವಾಗಿದೆ.

**ಚರ್ಚೆಯೊಂದರಲ್ಲಿ ಅರಸು ಅವರು**



ಕೃಪೆ: ಡೆಕ್ಕನ್ ಹೆರಾಲ್ಡ್, ಎಂ.ಜಿ.ರೋಡ್, ಬೆಂಗಳೂರು. ಚಿತ್ರ ಸಂಖ್ಯೆ ೨.೧೧

"ಇಂದಿನಿಂದ ಭೂ ಸುಧಾರಣೆ ಶಾಸನ ಜಾರಿಗೆ"(ಕನ್ನಡಪ್ರಭ ೧೯೭೪ ಮಾರ್ಚ್ ೧). ಪತ್ರಿಕಾ ವರದಿಯಲ್ಲಿ 'ಕಾಯ್ದೆಯ ತಕ್ಷಣದ ಪರಿಣಾಮ ೨೧ಲಕ್ಷ ಎಕರೆ ಭೂಮಿಯಲ್ಲಿ ಗೇಣಿದಾರ ಮತ್ತು ಭೂ ಮಾಲಿಕರ ಸಂಬಂಧ ರದ್ದಾಗುವುದು. ಸದ್ಯದಲ್ಲಿ ಒಡೆತನ ಸರ್ಕಾರದ್ದು ಉತ್ತರೋತ್ತರದಲ್ಲಿ ಗೇಣಿದಾರರೆ ಮಾಲಿಕರಾಗುತ್ತಾರೆ. ಹಿಂದಿನ ಭೂ ಮಾಲಿಕರಿಗೆ ಪರಿಹಾರದ ಅಂಶಗಳನ್ನು ತ್ವರಿತವಾಗಿ ಇತ್ಯರ್ಥಗೊಳಿಸಲು ಸರ್ಕಾರ ಪ್ರತ್ಯೇಕ ವ್ಯವಸ್ಥೆ ಮಾಡಲಿದ್ದಾರೆ' ಎಂಬ ವಿಸ್ತೃತ ವಿವರಣೆಯಿದೆ. ಈ ವರದಿ ಪ್ರಕಟವಾಗಿರುವುದು ಎರಡನೆ ಪುಟದ ಸಣ್ಣ ಕಾಲಂವೊಂದರಲ್ಲಿ. ಇಲ್ಲಿ ಶಾಸನದ ಸ್ವರೂಪಕ್ಕಿಂತ ಪರಿಣಾಮ ಮತ್ತು ನಿರ್ವಹಣೆ ಕುರಿತ ಮಾಹಿತಿಗೆ ಒತ್ತು ನೀಡಲಾಗಿದೆ. ಕಾಯ್ದೆಯ ಸ್ವರೂಪ 'ಬಡವರು, ಕೂಲಿ ಕಾರ್ಮಿಕರು, ಸಣ್ಣ ರೈತರ ಪರವಾಗಿದ್ದು, ಅತ್ಯಂತ ಪ್ರಗತಿಪರ ನಿಲುವು ಹೊಂದಿದ್ದಂತಹದ್ದು' ಎಂಬ ಅಭಿಮತವಿದೆ. ಇಂತಹ ಅಭಿಪ್ರಾಯಗಳು ಸಾಮಾನ್ಯವಾಗಿ ಸಮಾಜವಾದಿಗಳು, ಪತ್ರಕರ್ತರು, ರಾಜಕಾರಣಿಗಳಲ್ಲಿ ಅಧಿಕವಾಗಿದೆ. ಶಾಸನದ ಹಿಂದಿನ ಚಿಂತನೆಗಳ ಸ್ವರೂಪ ಕುರಿತು ವಿವರಣೆಯೊಂದು ಹೀಗಿದೆ:

> ಕೃಷಿ ವ್ಯವಸ್ಥೆಯೆಂದರೆ ದೊಡ್ಡ ಭೂಮಾಲಿಕರ, ಸಣ್ಣ ಗೇಣಿದಾರರ ಸಮೂಹ ಎಂಬ ನಂಬಿಕೆ ಇದ್ದಿದ್ದರಿಂದ ಈ ಕಾಯ್ದೆಗೆ ನೀಡಲಾದ ಕೆಲವು ರಿಯಾಯಿತಿಗಳನ್ನು ಕೊರತೆಗಳೆಂದೇ ಭಾವಿಸಲಾಯಿತು. ೧೯೭೪ರಲ್ಲಿ ತಿದ್ದುಪಡಿಯೊಂದನ್ನು ತಂದು ಸಣ್ಣ ರೈತರು, ವಿಧವೆಯರು, ಅಪ್ರಾಪ್ತ ವಯಸ್ಕರು, ಮಾನಸಿಕ ಅಸ್ವಸ್ಥರು, ಅಂಗವಿಕಲರಿಗೆ ಮೊದಲು ನೀಡಿದ್ದ ರಿಯಾಯ್ತಿಯನ್ನು ರದ್ದುಮಾಡಲಾಯಿತು ... ಕಾನೂನಿನ ಮೂಲೋದ್ದೇಶಗಳ ಮೇಲೆ ಎಂಥ ಧೃಡ ವಿಶ್ವಾಸವಿತ್ತೆಂದರೆ ಈ ವಿಷಯದಲ್ಲಿ ನ್ಯಾಯಾಂಗ ವ್ಯವಸ್ಥೆಯು ಅಡ್ಡಿಯೆಂದೆ ಭಾವಿಸಲಾಯಿತು. ಕೋರ್ಟಿನ ದಾವೆಗಳಿಂದ ವಿಳಂಬಗೊಂಡ ಕೇಸುಗಳನ್ನು ಇತ್ಯರ್ಥ ಮಾಡಲು ಭೂ ನ್ಯಾಯ ಮಂಡಳಿಗಳನ್ನು ಸ್ಥಾಪಿಸಲಾಯಿತು. ಸ್ಥಳೀಯರು ಮತ್ತು

> ರಾಜಕಾರಣಿಗಳೆ ಮುಖಂಡರುಗಳಾಗಿರುತ್ತಿದ್ದ ಮಂಡಳಿಗಳಿಗೆ ಭೂ ಸುಧಾರಣೆ ಜಾರಿಗೆ ತರುವ ಪ್ರಮುಖ ಪಾತ್ರವಹಿಸಲಾಗಿತ್ತು. ಇವುಗಳಿಗೆ ವ್ಯಾಪಕ ಅಧಿಕಾರ ನೀಡಿ ಹಕ್ಕುಪತ್ರ ಪರಿಶೀಲಿಸದೆ ಯಾರು ಗೇಣಿದಾರನೆಂದು ನಿರ್ಣಯಿಸುವ ಅಧಿಕಾರ ಕೊಡಲಾಗಿತ್ತು(ಪಾಣಿ ೨೦೧೧: ೨೧೮).

ಆರ್ಥಿಕತೆ ಮತ್ತು ಕೃಷಿಯ ನಡುವಿನ ಸಂಬಂಧದ ಗ್ರಹಿಕೆಗಳನ್ನು, ಅದರೊಂದಿಗೆ ತಳುಕು ಹಾಕಿಕೊಂಡಿರುವ ರಾಜಕಾರಣವನ್ನು ಇದು ಅನಾವರಣಗೊಳಿಸಿದೆ.

*** *** ***

೧೯೭೪ರ ಭೂ ಶಾಸನ ಕಾಯ್ದೆ ಜಾರಿಗೆ ಆಚಳಿತದ ಅನೇಕ ಹಂತಗಳಲ್ಲಿ ಕಂಡುಬಂದ ಸಮಸ್ಯೆಗಳು ಅನೇಕ ತಿದ್ದುಪಡಿಗಳಿಗೆ ಕಾರಣವಾಯಿತು. ೧೯೮೦ರವರೆಗೆ ಸುಮಾರು ಹತ್ತಕ್ಕಿಂತಲೂ ಹೆಚ್ಚು ಸಲ ತಿದ್ದುಪಡಿಗಳಾಗಿದ್ದು, ಮೂರು ತಿದ್ದುಪಡಿಗಳು ಪ್ರಮುಖವಾಗಿವೆ. ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಿ ಮತ್ತು ನಂತರದಲ್ಲಿ ತಿದ್ದುಪಡಿಗಳ ಮೂಲಕ ಭೂ ಶಾಸನದ ಸ್ವರೂಪದಲ್ಲಿ ಮುಖ್ಯ ಬದಲಾವಣೆಗಳು ಕಂಡುಬಂದವು. ತುರ್ತುಪರಿಸ್ಥಿತಿ ಪೂರ್ವದಲ್ಲಿಯೂ ಅನೇಕ ತಿದ್ದುಪಡಿಗಳನ್ನು ಕಾಣಬಹುದಾದರೂ ಶಾಸನದ ಸ್ವರೂಪದಲ್ಲಿ ಮಹತ್ವದ ಬದಲಾವಣೆಗಳು ಕಾಣುವುದಿಲ್ಲ. ತಾಂತ್ರಿಕ ಕಾರಣ, ಗೇಣಿಗೆ ಅರ್ಜಿ ಹಾಕುವ ಕಾಲ ವಿಸ್ತರಣೆ ಮೊದಲಾದವುಗಳಿಗೆ ಸಂಬಂಧಿಸಿದಂತೆ ತಿದ್ದುಪಡಿಗಳಾಗುತ್ತಿದ್ದವು. ಭೂ ಶಾಸನವನ್ನು ಪ್ರಶ್ನಿಸಿ ನ್ಯಾಯಾಲಯದಲ್ಲಿ ಮೊಕದ್ದಮ್ಮೆ ಹೂಡಲಾಗಿತ್ತು. ಭೂ ಸೇನೆ’ ಮತ್ತು ಮಹಿಳಾ ಭೂ ರಕ್ಷಣಾ ಕ್ರಿಯಾ ಸಮಿತಿಗಳು’ ಭೂ ರಕ್ಷಣಾ ಸಮಿತಿಗಳೂ ಅಸ್ತಿತ್ವದ್ದು, ಭೂಮಿಯ ಒಡೆತನದ ಹಕ್ಕಿಗಾಗಿ ಭಿನ್ನ ಭಿನ್ನ ಹಾದಿಯಲ್ಲಿ ಹೋರಾಟ ನಡೆಸಿದ್ದನ್ನು ನೋಡಬಹುದು. ಇಂತಹ ಪ್ರಕ್ರಿಯೆಗಳನ್ನು ತಮಿಳುನಾಡು, ಬಿಹಾರ ಮೊದಲಾದ ರಾಜ್ಯಗಳಲ್ಲಿಯೂ ಕಾಣಬಹುದು. ತಮಿಳುನಾಡಿನ[೨೦] ಭೂ ಶಾಸನ ಸ್ವರೂಪ ಕುರಿತು 'ಬಂಡವಾಳಶಾಹಿ ಕೃಷಿಯನ್ನು ಉತ್ತೇಜಿಸಲು ಕೈಗೊಂಡತಿದೆ. ಹಳ್ಳಿಗಾಡುಗಳಲ್ಲಿ ರಾಜಕೀಯ ಮತ್ತು ಆರ್ಥಿಕ ಶಕ್ತಿ ಕೇಂದ್ರೀಕರಣದ ಮೂಲಕ ಗ್ರಾಮೀಣ ಭಾರತದ ಅನೇಕ ಜನಪ್ರಿಯ ಆದರ್ಶ ಘೋಷಣೆಗಳ ಕೇಂದ್ರವಾಗಿರುವ ಸಣ್ಣ ರೈತನನ್ನು ಪ್ರೋತ್ಸಾಹಿಸುತ್ತಿಲ್ಲ' ಎಂಬ ಚರ್ಚೆ ಕಂಡುಬರುವುದು. ಭೂ ಶಾಸನ ಜಾರಿಗೊಂಡ ನಂತರ ಬಿಹಾರದಲ್ಲಿ 'ಭೂ ಮಾಲೀಕರ ಆಜ್ಞೆ ಮೇರೆಗೆ ಕೊಲೆ'ಯಂತಹ ಸುದ್ದಿಗಳು ನಿಯತಕಾಲಿಕೆಗಳಲ್ಲಿ ಅಧಿಕಗೊಳ್ಳತೊಡಗಿದವು. ಬಿಹಾರವು ನಕ್ಸಲಿಸಂ ತೀವ್ರವಾಗಿದ್ದ ರಾಜ್ಯಗಳಲ್ಲೊಂದಾಗಿತ್ತು. ೧೯೭೪ರ ಹೊತ್ತಿಗೆ ಆಡಳಿತ ಸರ್ಕಾರದ ವಿರುದ್ಧ ಬೆಳೆದುಬಂದ ಜೆ.ಪಿ. ಚಳವಳಿಯು ಆರಂಭದಲ್ಲಿ ಸಮಾಜವಾದಿಗಳಂತಹ ಎಡಪಂಥೀಯರು, ಸರ್ವೋದಯವಾದಿಗಳು, ಗಾಂಧಿವಾದಿಗಳು ಹಾಗೂ ಬುದ್ಧಿಜೀವಿಗಳಿಂದ ಕೂಡಿತ್ತು. ಕ್ರಮೇಣ ಆರ್.ಎಸ್.ಎಸ್. ಸ್ವತಂತ್ರ ಪಕ್ಷ ಮೊದಲಾದ ಬಲಪಂಥೀಯರ ಹಿಡಿತಕ್ಕೆ ಜಾರಿದ್ದನ್ನು ಗಮನಿಸಬಹುದು. ಬಲಪಂಥೀಯರು ಭೂ ಶಾಸನಗಳ ಕುರಿತು ತಮ್ಮದೇ ಆದ ನಿಲುವನ್ನು ಹೊಂದಿದ್ದರು. ಇದರ ಪ್ರಭಾವ ಸಮಕಾಲೀನ ರಾಜಕಾರಣದ ಮೇಲಿರುವ ಸಾಧ್ಯತೆಯಿದ್ದು, ಈ ನಿಟ್ಟಿನ ಅಧ್ಯಯನ ಭೂ ರಾಜಕಾರಣದ ಮತ್ತೊಂದು ಆಯಾಮದ ಮೇಲೆ ಬೆಳಕು ಬೀರುವುವು.

ಭೂ ಶಾಸನ ಮತ್ತು ಅದರ ಜಾರಿ ಚಲನಾತ್ಮಕ ಮುಖವನ್ನು ಹೊಂದಿರುವುವು. ಸಮಾನ ರೂಪದಲ್ಲಿ ಒತ್ತಡ ಬೀರುವ ಹಲವು ಮೂಲಗಳು ಇದಕ್ಕೆ ಪೂರಕವಾಗಿ ಕಾರ್ಯನಿರ್ವಹಿಸುತ್ತಿರುವುವು. ತುರ್ತುಪರಿಸ್ಥಿತಿ ಕಾಲದಲ್ಲಾದ ತಿದ್ದುಪಡಿಗಳ ಮೂಲಕ ಭೂ ಶಾಸನದ ಸ್ವರೂಪದಲ್ಲಾದ ಬದಲಾವಣೆಗಳನ್ನು ಇಲ್ಲಿ ಚರ್ಚಿಸಲಾಗಿದೆ. ೧೯೭೬ರಲ್ಲಿ ಮುಖ್ಯವಾಗಿ ನಾಲ್ಕು ತಿದ್ದುಪಡಿಗಳನ್ನು ಕಾಣಬಹುದು. ಅದರಲ್ಲಿ ಎರಡು ಭೂ ನ್ಯಾಯಮಂಡಳಿಗಳ ಕುರಿತ ತಿದ್ದುಪಡಿಗಳಾಗಿವೆ. '೧೯೭೬ರ ಕರ್ನಾಟಕ ಕಾಯ್ದೆ ಸಂಖ್ಯೆ ೧೮'ರಲ್ಲಿ ತಾಲ್ಲೂಕಿಗೆ ಒಂದಿದ್ದ ಭೂ ನ್ಯಾಯ ಮಂಡಳಿಗಳನ್ನು ಅವಶ್ಯಕತೆಗೆ ತಕ್ಕಂತೆ ಹೆಚ್ಚಿಸಿಕೊಳ್ಳಲು ಅವಕಾಶ ಮಾಡಿಕೊಡಲಾಗಿದೆ. ಅದೇ ವರ್ಷ ಬಂದ 'ಕರ್ನಾಟಕ ಕಾಯ್ದೆ ಸಂಖ್ಯೆ ೪೪'ರಲ್ಲಿ ಹೆಚ್ಚುವರಿ ಭೂಮಿ ವಿಲೇವಾರಿಯನ್ನು ಸಾಧ್ಯವಾದಷ್ಟು ಬೇಗ ಭೂ ರಹಿತರಿಗೆ ಹಂಚಬೇಕೆಂದು ನಿರ್ಧರಿಸಿದೆ. ಹೆಚ್ಚುವರಿ ಭೂಮಿ ಹಂಚುವ ಅಧಿಕಾರ ಅಲ್ಲಿಯವರೆಗೆ ತಹಸಿಲ್ದಾರರಿಗಿತ್ತು. ಅದನ್ನು ಬದಲಾಯಿಸಿ ಖಾಸಗಿ ವ್ಯಕ್ತಿಗಳಿಗೆ(ಸರ್ಕಾರಿ

ಅಧಿಕಾರಿಗಳಲ್ಲದವರು) ಅಧಿಕಾರ ನೀಡಲಾಯಿತು. ೧೯೭೬ರ ಫೆಬ್ರವರಿಯಲ್ಲಿ ನಡೆದ ಶಾಸನ ಸಭೆಯಲ್ಲಿ ತಿದ್ದುಪಡಿ ಕುರಿತು 'ಭೂ ಸುಧಾರಣಾ ಕಾಯ್ದೆಗೆ ಅವಶ್ಯಕವಾಗಿ ಬೇಕಾದಂಥ ಕೆಲವು ತಿದ್ದುಪಡಿಗಳನ್ನು ಶಾಸನ ಸಭೆಯ ಅಧಿವೇಶನ ಇಲ್ಲದಿರುವ ಪ್ರಯುಕ್ತ, ಸುಗ್ರೀವಾಜ್ಞೆಯ ಮೂಲಕ ತಂದಿದ್ದೇವೆ. ಎಲ್ಲೆಲ್ಲಿ ಜಾಸ್ತಿ ಅರ್ಜಿಗಳು ಬಂದು, ಈಗ ಹಾಲಿ ಇರತಕ್ಕ ಭೂ ನ್ಯಾಯ ಮಂಡಳಿಗಳು ಆ ಅರ್ಜಿಗಳನ್ನು ತೀರ್ಮಾನ ಮಾಡುವುದಕ್ಕೆ ಸಾಧ್ಯವಿಲ್ಲವೊ ಅಂಥ ಕಡೆ ಪರಿಶೀಲನೆ ಮಾಡಿ ಹೆಚ್ಚು ಭೂ ನ್ಯಾಯ ಮಂಡಳಿಗಳ ಸ್ಥಾಪನೆ. ಪ್ರಸ್ತುತ ನ್ಯಾಯ ಮಂಡಳಿಗಳಲ್ಲಿ ಒಬ್ಬರು ಶಾಸಕರು ಇರಲೆ ಬೇಕೆನ್ನುವುದು ಕಡ್ಡಾಯ. ಹೆಚ್ಚು ನ್ಯಾಯ ಮಂಡಳಿಗಳು ಸ್ಥಾಪನೆಯಾದಾಗ ಎಲ್ಲೆಡೆ ಶಾಸಕರನ್ನು ಹಾಕಲಾಗದ ಕಾರಣ ಕಡ್ಡಾಯವಾಗಿ ಶಾಸಕರಿರ ಬೇಕಾಗಿಲ್ಲ ಎಂಬ ಬದಲಾವಣೆ ಮಾಡಲಾಗಿದೆ' ಎಂದು ಹುಚ್ಚ ಮಾಸ್ತಿಗೌಡ(ಕಂದಾಯ ಮಂತ್ರಿ) ಅವರು ಹೇಳಿಕೆ ನೀಡಿರುವರು. ಈ ಹೇಳಿಕೆಯಲ್ಲಿ ಕಾಯ್ದೆಯ ಸ್ವರೂಪದಲ್ಲಿ ಉಂಟಾದ ಗುರುತರ ಬದಲಾವಣೆಯನ್ನು ಗಮನಿಸಬಹುದು. ಆ ಸಂದರ್ಭದ ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶಗಳಲ್ಲಿಯೂ ಕಾಯ್ದೆಗೆ ಭೂ ನ್ಯಾಯ ಮಂಡಳಿಗಳಿಂದ ಶಾಸಕರನ್ನು ತೆಗೆದುಹಾಕುವ ಸಾಮೂಹಿಕ ಪ್ರಕ್ರಿಯೆ ಕಂಡುಬರುವುದು. ರಾಜ್ಯದ ವಿರೋಧ ಪಕ್ಷದ ಸದಸ್ಯರು, ಇದನ್ನು ಗುರುತಿಸಿ ವಿರೋಧಿಸಿರುವುದನ್ನು ನೋಡಬಹುದು. ಈ ಪ್ರಕ್ರಿಯೆ ಮತ್ತು ತಿದ್ದುಪಡಿಯನ್ನು ರಾಷ್ಟ್ರ ರಾಜಕಾರಣದ ನೆಲೆಯಲ್ಲಿ ಗುರುತಿಸಬೇಕಾಗಿದೆ. ಭೂ ಶಾಸನದ ತಿದ್ದುಪಡಿ ಕುರಿತ ಆಡಳಿತಶಾಹಿ ಚಿಂತನೆ, ತುರ್ತುಪರಿಸ್ಥಿತಿ ಕಾಲದ ರಾಜಕಾರಣ ಹಾಗೂ ಕಾರ್ಯನೀತಿಗಳ ನಡುವಿನ ಸಂಬಂಧಗಳನ್ನು ಅನಾವರಣಗೊಳಿಸುವುದು.

ತುರ್ತುಪರಿಸ್ಥಿತಿ ಕಾಲದ ಶಾಸನ ತಿದ್ದುಪಡಿಗಳಲ್ಲಿ ಅನುಸರಿಸುತ್ತಿದ್ದ ವಿಧಾನವು ಕಾಯ್ದೆಯ ಸ್ವರೂಪದ ಬದಲಾವಣೆಯಲ್ಲಿ ನಿರ್ಣಾಯಕ ಸ್ಥಾನ ನಿರ್ವಹಿಸಿದೆ. ಈ ನಿಟ್ಟಿನಲ್ಲಿ



> ೧೯೭೪ರ ಜೂನ್ ಮತ್ತು ೧೯೭೫ರ ಜೂನ್ ನಡುವೆ ಭೂ ಸುಧಾರಣೆಯನ್ನು ಕುರಿತು ಚರ್ಚೆ ನಡೆಸಲು ವಿಧಾನಸಭೆ ಮತ್ತು ವಿಧಾನಪರಿಷತ್ತುಗಳೆರಡರಲ್ಲು ಹಲವಾರು ಅವಕಾಶಗಳಿದ್ದವು ... ಅಧಿಕಾರಿ ವರ್ಗ ಅಥವಾ ಸ್ಥಳೀಯ ರಾಜಕಾರಣಿ ವರ್ಗ ನಡೆಸುತ್ತಿದ್ದ ಅಕ್ರಮಗಳ ವಿರುದ್ಧವಾಗಿ ಖಂಡನೆ ಮತ್ತು ಟೀಕೆ ಎರಡು ಕೇಳಬರುತ್ತಿತ್ತು, ಅವುಗಳಲ್ಲಿ ಎಲ್ಲವೂ ವಾಸ್ತವಾಂಶಗಳ ಮೇಲೆ ಆಧಾರ ಪಡೆದಿರಲಿಲ್ಲವಾದರು ಹಲವು ಸಂದರ್ಭಗಳಲ್ಲಿ ಟೀಕೆಯ ಗುರಿ ಸಮಂಜಸವಾಗಿತ್ತು ... ೧೯೭೫ರ ಜುಲೈ ನಂತರ ಪರಿಸ್ಥಿತಿ ಬದಲಾಗಿಹೋಯಿತು. ಆ ಕಾಲದ ವಿಧಾನಸಭಾ ಅಧಿವೇಶನಗಳು ನಕಲಿ ನಾಟಕಗಳಂತಿದ್ದವು. ವಿರೋಧ ಪಕ್ಷದ ಆಸನಗಳಲ್ಲಿ ಐದಾರು ಮಂದಿಯನ್ನು ಬಿಟ್ಟು ಯಾರು ಇರುತ್ತಿರಲಿಲ್ಲ ... ಮಂತ್ರಿಗಳು ಯಾವುದಾದರು ವಿಚಾರವನ್ನೊ, ದಾಖಲೆಯನ್ನೊ ಸಭೆ ಮುಂದೆ ಮಂಡಿಸಲು ಅನುಮತಿ ಕೋರುತ್ತಿದ್ದರು; ಸಭೆ ಅಂತಹ ಅನುಮತಿ ನೀಡುತಿತ್ತು; ಆನಂತರ ಚರ್ಚೆ; ಮಂತ್ರಿಯ ಪೀಠಿಕಾ ಭಾಷಣ; ಅನಂತರ ಕೆಲವೆ ಸದಸ್ಯರು ಅಂದರೆ ಆಳುವ ವರ್ಗದ ಆಪ್ತ ಬೆಂಬಲಿಗರು ಮಾಡುವ ವಿಚಾರ ಕುರಿತು ಭಾಷಣಗಳು; ಕೊನೆಗೆ ಸಭಾಪತಿಯ ಮುಂದಿರುವ ಠರಾವನ್ನು ಕುರಿತು ಮತ ವ್ಯಕ್ತಪಡಿಸಲು ಸದಸ್ಯರಲ್ಲಿ ಕೋರಿಕೆ ಮತ್ತು ಕೊನೆಗೆ 'ಸಭೆಯ ಮತ ಪರ'ವಾಗಿದೆ ಎಂದು ಗಂಭೀರವಾಗಿ ದಾಖಲಿಸಿ. ... ಠರಾವು ಅನುಮೋದಿತವಾಯಿತೆಂದು ಘೋಷಿಸುವುದು. ಆ ಕಾಲದಲ್ಲಿ ಅನುಮೋದಿತವಾದ ಪ್ರತಿ ಒಂದು ಶಾಸನ ವಿಧಿಯು ಈ ಸಂಭ್ರಮದ ಮೆರವಣಿಗೆಯಲ್ಲಿ ಸಾಗಿತ್ತು ... ಅಗತ್ಯವಾದ ಕಾಯಿದೆಯನ್ನೊ, ತಿದ್ದುಪಡಿಯನ್ನೊ ಬರೆದು ಕಾನೂನು ಪರಿಣಿತನಿಂದ ಸರಿಯೆನಿಸಿಕೊಂಡು. ಮಂತ್ರಿಮಂಡಲದ ಒಪ್ಪಿಗೆ ಪಡೆದರೆ ಸಾಕಿತ್ತು. ಒಂದು ಬೆಳಗಿನಲ್ಲಿ ಇವನ್ನೆಲ್ಲ ಮುಗಿಸಿ. ಮಧ್ಯಾಹ್ನ ಏಕಪಕ್ಷೀಯ ವಿಧಾನಸಭೆಯ ಮತದಿಂದ ಅವುಗಳ ಅನುಮೋದನೆ ಪಡೆದುಕೊಳ್ಳಬಹುದಿತ್ತು(ರಾಜನ್ ೧೯೮೭: ೧೮೬-೧೮೭).

ಶಾಸಕಾಂಗದ ಕಾರ್ಯನೀತಿ ಮತ್ತು ಶಾಸನಗಳ ತಿದ್ದುಪಡಿಗಳ ಸ್ವರೂಪದಲ್ಲಾದ ಬದಲಾವಣೆಯನ್ನು ತುರ್ತುಪರಿಸ್ಥಿತಿ ಪೂರ್ವ ಕಾಲಘಟ್ಟದೊಂದಿಗೆ ಸಮೀಕರಿಸಿ ವಿಶ್ಲೇಷಿಸಿದೆ. ಕಾಯ್ದೆ ತಿದ್ದುಪಡಿಯ ಪ್ರಕಿಯೆ ಮೇಲೆ ಬೆಳಕು ಚೆಲ್ಲುತ್ತಲೇ, ಅದರ ಹಿಂದಿನ ಪ್ರಭಾವವನ್ನು ಅನಾವರಣಗೊಳಿಸುತ್ತಿದೆ. ಭೂ ಶಾಸನದ ತಿದ್ದುಪಡಿಯೊಡನೆ ಭೂ ಕಂದಾಯ ವ್ಯವಸ್ಥೆಯಲ್ಲಾಗುವ ಬದಲಾವಣೆಗಳು ಸಹ ಪ್ರಮುಖವಾಗಿವೆ. ಈ ಕಾಲದಲ್ಲಿ ಭೂ ಕಂದಾಯ ವ್ಯವಸ್ಥೆಗೂ ಕೆಲವು ತಿದ್ದುಪಡಿಗಳನ್ನು ತರಲಾಗಿದ್ದು, ಈ ದಿಸೆಯಲ್ಲಿ ಆಳವಾದ ಅಧ್ಯಯನ ಮಾಡುವ ಅಗತ್ಯವಿದೆ.

ಭೂ ಶಾಸನಕ್ಕೆ ಸಂಬಂಧಿಸಿದಂತೆ ೧೯೭೭ ರಿಂದ ೧೯೮೦ರವರೆಗೆ ಮುಖ್ಯವಾಗಿ ಎರಡು ತಿದ್ದುಪಡಿಗಳನ್ನು[೧೧] ಕಾಣಬಹುದು. ಅವುಗಳೆಂದರೆ, ಕರ್ನಾಟಕ ಭೂ ಸುಧಾರಣೆಗಳ(೨ನೇ ತಿದ್ದುಪಡಿ) ಅಧಿನಿಯಮ, ೨೩, ೧೯೭೭ ಮತ್ತು ಕರ್ನಾಟಕ ಭೂ ಸುಧಾರಣೆಗಳ(ತಿದ್ದುಪಡಿ) ಅಧಿನಿಯಮ, ೧, ೧೯೭೮ಗಳಾಗಿವೆ(೧೯೭೯). ಈ ಹೊತ್ತಿಗೆ ಲೋಕಸಭಾ ಚುನಾವಣೆಯಲ್ಲಿ ಜನತಾಪಕ್ಷ ಆಧಿಕಾರಕ್ಕೆ ಬಂದಿತ್ತು. ಜನತಾಪಕ್ಷದಲ್ಲಿದ್ದ ಸಮಾಜವಾದಿಗಳು(ಹೊರತುಪಡಿಸಿ), ಸಂಸ್ಥಾ ಕಾಂಗ್ರೆಸ್, ಸ್ವತಂತ್ರ ಪಕ್ಷ, ಆರ್.ಎಸ್.ಎಸ್ ಮತ್ತಿತರ ಪಕ್ಷಗಳು ಭೂ ಸುಧಾರಣಾ ಶಾಸನ ಕುರಿತ ತಮ್ಮದೇ ಆದ ನಿಲುವುಗಳನ್ನು ಹೊಂದಿದ್ದವು. ಅದೇ ಸಂದರ್ಭದಲ್ಲಿ ರಾಜ್ಯದಲ್ಲಿ ಆಡಳಿತ ಕಾಂಗ್ರೆಸ್ ಅಧಿಕಾರದಲ್ಲಿತ್ತು. ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಎರಡು ಕ್ಷೇತ್ರಗಳನ್ನುಳಿದು, ಉಳಿದವುಗಳಲ್ಲಿ ಆಡಳಿತ ಕಾಂಗ್ರೆಸ್ ಪಕ್ಷದವರೇ ಗೆದ್ದು ಬಂದಿದ್ದರು. ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರಡು ಭಿನ್ನ ರಾಜಕೀಯ ಪಕ್ಷವಾಗಿದ್ದು, ಆಸಕ್ತಿಯನ್ನು ಹೊಂದಿದ್ದವು. ರಾಜಕೀಯ ಸ್ಥಿತ್ಯಂತರದ ನೆಲೆಯಲ್ಲಿ ತುರ್ತುಪರಿಸ್ಥಿತಿಯೋತ್ತರ ಭೂ ಶಾಸನ ತಿದ್ದುಪಡಿಗಳನ್ನು ಚರ್ಚಿಸುವ ಅಗತ್ಯವಿದೆ.

ತುರ್ತುಪರಿಸ್ಥಿತಿ ನಂತರದ ತಿದ್ದುಪಡಿಗಳು, ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರದ ನಡುವಿನ ರಾಜಕಾರಣ ಹಾಗೂ ಪಕ್ಷಗಳ ಸೈದ್ಧಾಂತಿಕತೆಯಿಂದ ಪ್ರಭಾವಿತವಾಗಿದೆ. 'ಕರ್ನಾಟಕ ಭೂ ಸುಧಾರಣೆಗಳ(೨ನೇತಿದ್ದುಪಡಿ) ಅಧಿನಿಯಮ, ೨೩, ೧೯೭೭' ರಾಜ್ಯ ಸರ್ಕಾರದ ತಿದ್ದುಪಡಿ ಆಗಿದೆ. ಇದರಲ್ಲಿ 'ಭೂ ನ್ಯಾಯ ಮಂಡಳಿಗಳಲ್ಲಿ ದಾವೆ ನಡೆಯುತ್ತಿರುವ ಒಡುವಳಿದಾರರ ಅರ್ಜಿ ಫೈಸಲಾಗದಿದ್ದಲ್ಲಿ ಗೇಣಿದಾರರಿಂದ ಯಾವುದೆ ಬಾಡಿಗೆ ವಸೂಲಿ ಮಾಡುವಂತಿಲ್ಲ. ಹೆಚ್ಚುವರಿ ಭೂಮಿಯನ್ನು ಸೆಕ್ಷನ್ ೭೭ರ ಅಡಿಯಲ್ಲಿ ವಿತರಿಸುವ ಮುನ್ನವೇ ಅನಧಿಕೃತವಾಗಿ ಭೋಗಿಸುತ್ತಿರುವವರನ್ನು ಉಚ್ಚಾಟಿಸುವ ಕುರಿತು ಮತ್ತು ಭೂ ನ್ಯಾಯ ಮಂಡಳಿಯ ಯಾವುದಾದರೂ ಸದಸ್ಯ ಕ್ರಮವಾಗಿ ಮೂರು ಸಭೆಗಳಿಗೆ ಹಾಜರಾಗದಿದ್ದಲ್ಲಿ ಆತನ ಸದಸ್ಯತ್ವ ಸ್ಥಗಿತಗೊಳಿಸಲು ಆದೇಶಿಸಲಾಗಿತ್ತು. ಬ್ಯಾಂಕ್ ಮೊದಲಾದ ಸಂಸ್ಥೆಗಳಿಂದ ಎಷ್ಟು ಕಂತುಗಳಲ್ಲಿ ಸಾಲ ದೊರೆಯುವುದೋ ಅಷ್ಟೇ ಕಂತುಗಳಲ್ಲಿ ಗೇಣಿದಾರನು ಕಟ್ಟಬೇಕಾದ ಪ್ರೀಮಿಯಂ ಸಂಖ್ಯೆಯನ್ನು

**ಭೂ ಸುಧಾರಣಾ ಕಾಯ್ದೆ: ಫಲಾನುಭವಿಗಳ ಜೊತೆ**



೧೯೭೬ ಜುಲೈ ೨೫ರ ಕಾರ್ಯಕ್ರಮವೊಂದರಲ್ಲಿ ಮುಖ್ಯಮಂತ್ರಿ ದೇವರಾಜ ಅರಸು ಗೇಣಿದಾರರಿಗೆ ಖಾತೆ ಹಂಚುತ್ತಿರುವುದು. ಕೃಪೆ: ವಾರ್ತಾ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು. ಚಿತ್ರ ಸಂಖ್ಯೆ: ೨.೧೧.

ನಿರ್ಧರಿಸುವುದು' ಮೊದಲಾದ ಅಂಶಗಳು ಮುಖ್ಯವಾಗಿದ್ದವು. ಮತ್ತೊಂದು ತಿದ್ದುಪಡಿ ಅನೇಕ ಕಾರಣಗಳಿಂದ ಪ್ರಮುಖವಾಗಿದೆ. ಇದನ್ನು(ಕರ್ನಾಟಕ ಭೂ ಸುಧಾರಣೆಗಳ(ತಿದ್ದುಪಡಿ) ಅಧಿನಿಯಮ, ೧, ೧೯೭೮(೧೯೭೯)) ಕರ್ನಾಟಕದಲ್ಲಿ ಅಧ್ಯಕ್ಷೀಯ ಆಳ್ವಿಕೆ ಇರುವಾಗ ಕೇಂದ್ರ ಸರ್ಕಾರದ ನೇರ ಹಸ್ತಕ್ಷೇಪದಿಂದ ಉಂಟಾದ ತಿದ್ದಪಡಿಯಾಗಿದೆ. ಈ ಹೊತ್ತಿಗಾಗಲೇ ಕೇಂದ್ರ ಸರ್ಕಾರ ಭೂ ಮಸೂದೆಗೆ ಸಂಬಂಧಿಸಿದಂತೆ 'ಹಿಂದುಳಿದವರಿಗೆ ಆಯೋಗ: ತ್ವರಿತ ಭೂ ಕ್ರಾಂತಿ ಆಶ್ವಾಸನೆ'ಯನ್ನು(ಕನ್ನಡಪ್ರಭ ೧೯೭೮ ಜನವರಿ ೨೨) ನೀಡುವ ಮೂಲಕ ಮೂರು ವರ್ಷಗಳಲ್ಲಿ ಭೂ ಸುಧಾರಣೆಯನ್ನು ಪೂರ್ಣವಾಗಿ ಅನುಷ್ಠಾನಗೊಳಿಸುವ ಭರವಸೆಯನ್ನು ನೀಡಿತ್ತು. ಮುಖ್ಯವಾಗಿ ಈ ಕಾಯ್ದೆಯನ್ನು ಜಾರಿಗೆ ತಂದ ಸಮಯಕ್ಕೆ ನಾಲ್ಕು ರಾಜ್ಯಗಳ ವಿಧಾನಸಭಾ ಚುನಾವಣೆ ಘೋಷಣೆಯಾಗಿತ್ತು. ಚುನಾವಣಾ ಮುನ್ನ ದಿನಗಳಲ್ಲಿ ಕೇಂದ್ರ ಸರ್ಕಾರದಲ್ಲಿದ್ದ ಜನತಾ ಪಕ್ಷ ರಾಜ್ಯಗಳಲ್ಲಿಯೂ ಅಧಿಕಾರ ಪಡೆಯಲು ಕೊಟ್ಟ ಆಶ್ವಾಸನೆಯಾಗಿದೆ.

'ಸರ್ಕಾರ ಖಾಸಗಿ ವ್ಯಕ್ತಿಗಳನ್ನು ಭೂ ನ್ಯಾಯ ಮಂಡಳಿಗಳಿಂದ ತೆಗೆಯುತ್ತಿದೆ'(ಡೆಕ್ಕನ್ ಹೆರಾಲ್ಡ್ ೧೯೭೮ ಜನವರಿ ೧೬). ಈ ಮೇಲಿನ ವರದಿಯಲ್ಲಿ 'ವಾರದೊಳಗೆ ಕಾಯ್ದೆ ಜಾರಿ ತರಲು ಪ್ರಯತ್ನಿಸಲಾಗುತ್ತದೆ. ಖಾಸಗಿ ವ್ಯಕ್ತಿಗಳನ್ನು ಭೂ ನ್ಯಾಯ ಮಂಡಳಿಗಳಿಂದ ತೆಗೆಯುವುದರೊಂದಿಗೆ ಅಸಿಸ್ಟೆಂಟ್ ಕಮಿಷನರ್‌ನನ್ನು ಏಕವ್ಯಕ್ತಿ ನ್ಯಾಯಮಂಡಳಿಯಾಗಿ ನೇಮಿಸುತ್ತಾರೆ. ಈ ಸಂಬಂಧ ಜಿಲ್ಲಾ ನ್ಯಾಯಾಧೀಶ ಅಥವಾ ಡೆಪ್ಯುಟಿ ಕಮಿಷನರ್ ಸಂಪೂರ್ಣ ಅಧಿಕಾರ ಹೊಂದಿರುತ್ತಾರೆ. ಅವರ ತೀರ್ಮಾನವೇ ಗೇಣಿ ಅರ್ಜಿಗಳ ನಿರ್ವಹಣೆಯಲ್ಲಿ ಅಂತಿಮಗೊಳಿಸಲಾಗುವುದು' ಎಂದು ಮೊದಲಾದ ಹೊಸ ಭೂ ಶಾಸನ ತಿದ್ದುಪಡಿಯ ಮಾಹಿತಿಯ ವಿವರಣೆಯಿದೆ. ಇದರೊಂದಿಗೆ 'ರಾಜ್ಯದಲ್ಲಿ ಅಧ್ಯಕ್ಷೀಯ ಆಡಳಿತವಿರುವುದರಿಂದ ಕೇಂದ್ರ ಸರ್ಕಾರದ ಕ್ಯಾಬಿನೆಟ್ ಮಂತ್ರಿಮಂಡಲ ತಿದ್ದುಪಡಿಯನ್ನು ಅಂಗೀಕರಿಸಿದೆ. ಅಧ್ಯಕ್ಷರಿಂದ ಒಪ್ಪಿಗೆ ಪಡೆದಿದೆ ಎಂದು ಕರ್ನಾಟಕದ ಭೂ ಮಸೂದೆಯಲ್ಲಿ ತರುತ್ತಿರುವ ತಿದ್ದುಪಡಿ' ಕುರಿತ ವಿಚಾರವಿದೆ. ವರದಿಯಲ್ಲಿ ಹೊಸ ತಿದ್ದುಪಡಿ ವಿರೋಧ ಪಕ್ಷಗಳ ಬೇಡಿಕೆಯೂ ಆಗಿತ್ತೆಂದು ಪ್ರಸ್ತಾಪಿಸಿರುವುದು ಗಮನ ಸೆಳೆಯುವುದು. ಈ ಮೂಲಕ ಶಾಸಕಾಂಗದಲ್ಲಿನ ಒಂದು ವರ್ಗದ ಒಪ್ಪಿಗೆ ಇರುವುದನ್ನು ಗಮನಕ್ಕೆ ತರಲು ಪ್ರಯತ್ನಿಸಿರುವುದು ಸ್ಪಷ್ಟವಾಗುವುದು. ತುರ್ತುಪರಿಸ್ಥಿತಿ ಕಾಲದಲ್ಲಿ ರಾಜ್ಯ ಸರ್ಕಾರ ಶಾಸಕಾಂಗದ ಒಪ್ಪಿಗೆ ಪಡೆಯದೆ ಸುಗ್ರೀವಾಜ್ಞೆ ಮೂಲಕ ಭೂ ಶಾಸನಕ್ಕೆ ತಿದ್ದುಪಡಿ ಮಾಡಿತ್ತು. ಈ ತಿದ್ದುಪಡಿಯ ಮೂಲಕ ನೌಕರಶಾಹಿ ಮತ್ತು ಶಾಸಕರಿಗಿಂತ ಅಧಿಕ ಅವಕಾಶವನ್ನು ಖಾಸಗಿ ವ್ಯಕ್ತಿಗಳಿಗೆ ಭೂ ನ್ಯಾಯ ಮಂಡಳಿಗಳಲ್ಲಿ ಕೊಡಲಾಗಿತ್ತು. ಆ ಕಾಯ್ದೆಗೆ ಅಧ್ಯಕ್ಷೀಯ ಆಡಳಿತವಿದ್ದಾಗ ಮತ್ತು ಚುನಾವಣೆಯ ಹಿಂದಿನ ದಿನಗಳಲ್ಲಿ ತಿದ್ದುಪಡಿ ತಂದಿರುವುದು ರಾಜಕೀಯ ಉದ್ದೇಶವನ್ನು ಹೊರಹಾಕಿದೆ. ಇದರೊಡನೆ 'ಗೇಣಿದಾರ' ಎಂಬ ವ್ಯಾಖ್ಯಾನದಲ್ಲಿ ಸಣ್ಣ ಬದಲಾವಣೆಯನ್ನು ಮತ್ತು ಸತ್ತ ಸೈನಿಕರ ಭೂಮಿಯನ್ನು ಗೇಣಿಯಿಂದ ಪಡೆಯಲು ಅವಕಾಶ ಮಾಡಿಕೊಡಲಾಯಿತು. ಈ ತಿದ್ದುಪಡಿಯ ಮೂಲಕ ಹೆಚ್ಚಿನ ಅನುಕೂಲವಾಗಿರುವುದು ಭೂ ಮಾಲಿಕರಿಗೆ ಎಂಬುದು ಮೇಲ್ನೋಟಕ್ಕೆ ಸ್ಪಷ್ಟವಾಗುವುದು.

ಭೂ ಶಾಸನದ ಸ್ವರೂಪದಲ್ಲಿ ಗುರುತರ ಬದಲಾವಣೆ ಉಂಟುಮಾಡಿದ ತಿದ್ದುಪಡಿಗಳನ್ನು ಮಾತ್ರ ಮೇಲೆ ಚರ್ಚಿಸಿದೆ. ಇವುಗಳೊಡನೆ ೧೯೭೪ ರಿಂದ ೧೯೭೯ ಜೂನ್ ೩೦ರವರೆಗೆ ತಾಂತ್ರಿಕ ಕಾರಣಕ್ಕಾಗಿ ಅರ್ಜಿ ಹಾಕುವ ಸಮಯ ವಿಸ್ತರಣೆಗೆ ಅನೇಕಸಾರಿ ತಿದ್ದುಪಡಿಗಳು ಉಂಟಾಗಿದೆ. ಇದು ಸಹಜವಾದ ವಿಚಾರವಾದರೂ ಗೇಣಿದಾರರು ಅರ್ಜಿ ಹಾಕಲಿರುವ ಕಾಲಾವಧಿ ವಿಸ್ತೃತಗೊಳ್ಳುವ ಅವಶ್ಯಕತೆ ಗಮನ ಸೆಳೆಯುವುದು. ಇದಕ್ಕೆ ಅರ್ಜಿ ಹಾಕಲಿರುವ ತೊಡಕುಗಳು, ಸ್ವತಂತ್ರವಾಗಿ ಅರ್ಜಿ ತುಂಬಲಿರುವ ತೊಂದರೆಗಳು, ಸ್ವತಃ ಅರ್ಜಿ ತುಂಬಲಾರದೆ ಇತರರ ಸಹಾಯ ಪಡೆಯಬೇಕಾದ ಅಸಹಾಯಕತೆ, ಗೇಣಿದಾರರು ಹಾಕಿದ ಅರ್ಜಿಗಳಲ್ಲಿನ ಹಲವಾರು ಲೋಪದೋಷಗಳಿಂದಾಗಿ ಬಹಳಷ್ಟು ಅರ್ಜಿಗಳು ತಿರಸ್ಕೃತವಾಗಿರುವುದಕ್ಕೆ ಪ್ರಮುಖ ಕಾರಣಗಳು. ಆದರೆ ಅದರಾಚೆಗಿನ ವಸ್ತುಸ್ಥಿತಿ ಎಂದರೆ ಭೂಮಿ ಪಡೆಯಲು ಅನುಸರಿಸಬೇಕಾದ ಕ್ರಮ ಜನಸಾಮಾನ್ಯರಿಗೆ ಸುಲಭವಾಗಿರದೆ ಕಠಿಣವಾಗಿದ್ದು,

ಅರ್ಥವಾಗುತ್ತಿರಲಿಲ್ಲ ಎನ್ನುವುದಾಗಿದೆ. ಭೂ ಶಾಸನ, ಭೂ ಮಾಲಿಕ ಹಾಗೂ ಭೂ ರಹಿತರ ನಡುವಿನ ಸಂಬಂಧಗಳಲ್ಲಿ ಬದಲಾವಣೆಗೊಂಡಿರುವುದು ಹೆಚ್ಚು ಸ್ಪಷ್ಟವಾಗಿ ಗೋಚರಿಸುವುದು.

*** *** ***

ತುರ್ತುಪರಿಸ್ಥಿತಿಯೋತ್ತರ ನಡೆದ ಭೂ ಶಾಸನಗಳ ತಿದ್ದುಪಡಿಗಳಲ್ಲಿ ರಾಜಕಾರಣ, ಸಮಾಜ ಮತ್ತು ಆರ್ಥಿಕ ನೀತಿ ಕುರಿತ ವಿಚಾರಗಳ ಬದಲಾವಣೆಯ ಪ್ರಕ್ರಿಯೆಗಳನ್ನು ಹಂತಹಂತವಾಗಿ ಕೆಳಗೆ ವಿವರಿಸಲಾಗಿದೆ. ಜನತಾ ಸರ್ಕಾರ ಚುನಾವಣೆಗಳು ನಡೆಯ ಬೇಕಿದ್ದ ರಾಜ್ಯಗಳಿಗೆ ಭೂ ಸುಧಾರಣೆ ಪ್ರಕ್ರಿಯೆಯನ್ನು ಮೂರು ವರ್ಷಗಳಲ್ಲಿ ಪೂರ್ಣಗೊಳಿಸುವ ಭರವಸೆಯನ್ನು ಕೊಟ್ಟಿತ್ತು. ಮತ್ತೊಂದೆಡೆ ಭೂ ಸುಧಾರಣಾ ಕಾಯ್ದೆಯನ್ನು ನ್ಯಾಯಾಲಯದಲ್ಲಿ ಪ್ರಶ್ನಿಸಲು ೯ನೇ ವಿಧಿಯಿಂದ ಹೊರ ತೆಗೆಯುವ ಚರ್ಚೆಗಳು ಕಂಡುಬರುವುವು. ಭೂ ಮಾಲಿಕರ ಒತ್ತಡ ಸರ್ಕಾರವನ್ನು ಭೂ ಸುಧಾರಣೆಗೆ ವಿರುದ್ಧ ದಿಕ್ಕಿನಲ್ಲಿ ಕಾರ್ಯೋನ್ಮುಖರಾಗಿಸುವಲ್ಲಿ ಸಫಲತೆ ಪಡೆದಂತಿದೆ. ಸಮಕಾಲೀನವಾಗಿ ರಾಷ್ಟ್ರದ ಅನೇಕ ಭಾಗಗಳಲ್ಲಿ ಭೂ ಒಡೆತನಕ್ಕಾಗಿ, ಭೂಮಿ ಉಳ್ಳವರಿಂದ ಭೂ ರಹಿತರ ಮತ್ತು ಭೂಮಿ ಪಡೆಯಲು ಪ್ರಯತ್ನಿಸುವವರ ಮೇಲೆ ದಮನಕಾರಿ ಚಟುವಟಿಕೆಗಳು ಅಧಿಕಗೊಳ್ಳುತ್ತಿದ್ದವು. ಅಂತಹ ಪ್ರದೇಶಗಳಲ್ಲಿ ಕಿಸಾನ್ ಸಂಘಟನೆಗಳು ರೈತರ ಹಕ್ಕಿನ ವಿರುದ್ಧ ಸಂಘಟಿತರಾಗುತ್ತಿದ್ದು, ಇವು ಜಾತಿ[೨೨] ಆಧಾರಿತವಾಗಿದ್ದವು. ಆದರಲ್ಲಿಯೂ ಹಿಂದುಳಿದ ವರ್ಗಗಳ ವಿರುದ್ಧ ಕಾರ್ಯನಿರತವಾಗಿದ್ದವು. ಈ ಹಿನ್ನೆಲೆಯಲ್ಲಿ ೧೯೭೪ ರಿಂದ ೧೯೮೦ರವರೆಗಿನ ಆಡಳಿತಶಾಹಿ ಮತ್ತು ಭೂ ನ್ಯಾಯಮಂಡಳಿಗಳ ಪ್ರಕ್ರಿಯೆಗಳನ್ನು ಗಮನಿಸುವ ಆವಶ್ಯಕತೆ ಇದೆ.

**೨.೨.೧.೧.೨. ಆಡಳಿತಶಾಹಿ ಮತ್ತು ಭೂ ನ್ಯಾಯ ಮಂಡಳಿಗಳು**

೧೯೭೪ರ ಭೂ ಸುಧಾರಣಾ ಕಾಯ್ದೆ ಎರಡು ಮುಖ್ಯ ಉದ್ದೇಶಗಳನ್ನು ಹೊಂದಿತ್ತು. ಗೇಣಿಯನ್ನು ರದ್ದುಗೊಳಿಸುವ ಮೂಲಕ ಉಳುವವನಿಗೆ ಭೂಮಿ ದೊರೆಯುವ ಅವಕಾಶ ಕಲ್ಪಿಸುವುದು ಮತ್ತು ಹೆಚ್ಚುವರಿ ಭೂಮಿಯನ್ನು ಸಂಗ್ರಹಿಸಿ ಭೂ ರಹಿತರಿಗೆ ವಿತರಿಸುವುದು. ಯಾವುದೇ ಕಾಯ್ದೆ ಯಶಸ್ವಿಯಾಗಿ ಜಾರಿಯಾಗುವಲ್ಲಿ ಆಡಳಿತಶಾಹಿಯ ಪಾತ್ರ ಕಾಯ್ದೆಯ ಸ್ವರೂಪದಷ್ಟೇ ಪ್ರಮುಖವಾಗಿದೆ. ಸ್ವಾತಂತ್ರ್ಯ ನಂತರದಲ್ಲಿ ಭೂ ಸುಧಾರಣಾ ಕಾಯ್ದೆ ಜಾರಿಗೊಳಿಸುವ ಪ್ರಕ್ರಿಯೆ ಸಾಕಷ್ಟು ವಿಳಂಬ ಕಂಡಿತು, ನಿರ್ಲಕ್ಷ್ಯಕ್ಕೆ ಒಳಗಾಯಿತು. ಸದಾಕಾಲ ಕಾಯ್ದೆ ರೂಪಿಸಿದವರು ಮತ್ತು ಅದನ್ನು ಶಾಸಕಾಂಗದಲ್ಲಿ ಮಂಡಿಸಿದವರ ಉದ್ದೇಶ ಪೂರಕವಾಗಿ ಕಾರ್ಯನಿರ್ವಹಿಸುವುದು. ಸರ್ಕಾರದ ಆಡಳಿತಯಂತ್ರ ಮತ್ತು ನ್ಯಾಯಾಂಗದ ಪಾತ್ರ ಕಾಯ್ದೆಯನ್ನು ಅನುಷ್ಠಾನಕ್ಕೆ ತರುವಲ್ಲಿ ಅಪಾರವಾಗಿದೆ. ಇದರೊಡನೆ ಭೂ ಒಡೆತನದ ರಾಜಕಾರಣವು ಸಮಕಾಲೀನ ರಾಜಕೀಯ ಮತ್ತು ಆಡಳಿತಶಾಹಿಯನ್ನು ನಿಯಂತ್ರಿಸಲು ಸದಾಕಾಲ ಪ್ರಯತ್ನಿಸುತ್ತಿರುವುದು. ೧೯೭೪ರ ಭೂ ಕಾಯ್ದೆ ಜಾರಿಯ ಹಿಂದಿನ ಉದ್ದೇಶ ಮತ್ತು ಒತ್ತಡಗಳು ಕೆಳಗಿನಿಂದ ಬಂದದ್ದೊ ಅಥವಾ ಮೇಲಿನಿಂದ ಬಂದದ್ದೊ ಎಂಬುದು ಆಡಳಿತಶಾಹಿಯ ನಿರ್ಣಾಯಕವಾಗಿ ಪ್ರಭಾವಿಸುವುದು. ಈ ಹಿನ್ನೆಲೆ ಯಲ್ಲಿ ೧೯೭೪ ರಿಂದ ೧೯೮೦ರವರೆಗೆ ಭೂ ಸುಧಾರಣಾ ಕಾಯ್ದೆ ಜಾರಿಗೊಳಿಸುವಲ್ಲಿ ಆಡಳಿತಶಾಹಿಯ ಪಾತ್ರವನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ. ಆಡಳಿತಶಾಹಿಯ ಪ್ರಮುಖ ಭಾಗವಾದ ಭೂ ನ್ಯಾಯ ಮಂಡಳಿಗಳನ್ನು ಇಲ್ಲಿ ಪ್ರತ್ಯೇಕವಾಗಿ ನೋಡಲಾಗಿದೆ. ಸರ್ಕಾರದ ವತಿಯಿಂದ ಬಿಂಬಿಸಲ್ಪಟ್ಟ ವಿಚಾರ, ಅದಕ್ಕೆ ಪ್ರತಿಯಾಗಿ ವಿರೋಧ ಪಕ್ಷ, ಪತ್ರಿಕೆ ಮೊದಲಾದವುಗಳಲ್ಲಿ ಕಂಡುಬಂದ ಪ್ರತಿಕ್ರಿಯೆ ಮತ್ತು ವಿಚಾರಧಾರೆಗಳನ್ನು ಪೂರಕವಾಗಿ ಅವಲೋಕಿಸಲಾಗಿದೆ. ಸಮಕಾಲೀನ ಬಡ್ಜೆಟ್ ಭಾಷಣ, ಜಾಹೀರಾತು, ಶಾಸಕಾಂಗ ಸಭೆಗಳಲ್ಲಿನ ಚರ್ಚೆ ಹಾಗೂ ಪತ್ರಿಕೆಗಳಲ್ಲಿನ ಮಾಹಿತಿಗಳನ್ನು ಸಮೀಕರಿಸಿ ಸಂಶ್ಲೇಷಣಾತ್ಮಕವಾಗಿ ಪರಾಮರ್ಶಿಸಲು ಪ್ರಯತ್ನ ಮಾಡಿದೆ. ೧೯೭೪ ರಿಂದ ೧೯೮೦ರವರೆಗಿನ ಕಾಲಾವಧಿಯನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಿದ್ದರೂ, ಕೆಲವೆಡೆ ಕಾಲದ ಚೌಕಟ್ಟನ್ನು ಮೀರಿ ನೋಡಲಾಗಿದೆ.

೧೯೭೪ ರಿಂದ ೧೯೮೦ರವರೆಗಿನ ಬಡ್ಜೆಟ್ ಭಾಷಣಗಳಲ್ಲಿ[೧೩] ಭೂ ಶಾಸನಕ್ಕೆ ಸಂಬಂಧಿಸಿದಂತೆ ಸರ್ಕಾರದ ಕ್ರಮವನ್ನು ಮೊದಲು ಚರ್ಚೆಗೆ ತೆಗೆದುಕೊಳ್ಳಲಾಗಿದೆ. ಇದು ಅಂದಿನ ರಾಜಕಾರಣವು ಸರ್ಕಾರದ ಚಿಂತನೆ ಮತ್ತು ಕಾರ್ಯಕ್ರಮಗಳಲ್ಲಿ ಪಡೆದ ರೂಪವನ್ನು ಗುರುತಿಸಲು ಸಹಾಯಕವಾಗಿದೆ. ಕಾಯ್ದೆ ಅನುಷ್ಠಾನಗೊಂಡ ಆರಂಭದ ಎರಡು ವರ್ಷಗಳ ತನಕ ರಾಜ್ಯ ಸರ್ಕಾರವು ಕೇಂದ್ರ ಸರ್ಕಾರದಿಂದ ಸಹಾಯಧನ ದೊರಕಬಹುದು ಎಂಬ ನಿರೀಕ್ಷೆ ಹೊಂದಿತ್ತು. ಸಮಕಾಲೀನ ಭಾಷಣಗಳಲ್ಲಿ ಪದೇ ಪದೇ ಪ್ರಕಟಗೊಳ್ಳುವುದನ್ನು ನೋಡಬಹುದು. ರಾಜ್ಯದಲ್ಲಿ ೧೯೭೮ರಲ್ಲಿ ನಡೆದ ವಿಧಾನಸಭಾ ಚುನಾವಣೆಯಲ್ಲಿ ಆಡಳಿತರೂಢವಾಗಿದ್ದ ಕಾಂಗ್ರೆಸ್ ಪಕ್ಷವೇ ಪುನಃ ಅಧಿಕಾರಕ್ಕೆ ಬರಲು ಭೂ ಸುಧಾರಣಾ ಕಾಯ್ದೆ ಜಾರಿಯು ಪ್ರಮುಖವಾಗಿದೆ ಎಂಬ ಅಭಿಮತವಿದೆ. ಈ ಸಂದರ್ಭದಲ್ಲೇ ತುರ್ತುಪರಿಸ್ಥಿತಿ ಕಾಲದಲ್ಲಿ ರಾಜ್ಯ ಸರ್ಕಾರ ತಂದಿದ್ದ ತಿದ್ದುಪಡಿಗೆ ಜನತಾ ಸರ್ಕಾರ ಮರುತಿದ್ದುಪಡಿ ಮಾಡುವುದು. ಅದು ಚುನಾವಣಾ ಮುನ್ನಾ ದಿನಗಳು ಎಂಬುದು ಮುಖ್ಯವಾಗಿದೆ. ಈ ಕುರಿತು ಹಿಂದಿನ ಭಾಗದಲ್ಲಿ ವಿಸ್ತಾರವಾಗಿ ಚರ್ಚಿಸಲಾಗಿದೆ. ರಾಜ್ಯ ಮತ್ತು ಕೇಂದ್ರ ಸರ್ಕಾರದ ನಡುವಿನ ಘರ್ಷಣೆಗಳು ೧೯೭೮ರ ವಿಧಾನಸಭಾ ಚುನಾವಣೆಯ ನಂತರವೂ ತೀವ್ರವಾಗಿ ಮುಂದುವರೆದಿರುವುದನ್ನು ನೋಡಬಹುದು. ಈ ದಿಸೆಯಲ್ಲಿ ಭೂ ನ್ಯಾಯ ಮಂಡಳಿಗಳ ಕಾರ್ಯಾಚರಣೆ ಚುರುಕುಗೊಳ್ಳಲು ಕೈಗೊಂಡಕ್ರಮ ಕುರಿತು ೧೯೭೫ರ ಬಡ್ಜೆಟ್‌ನಲ್ಲಿ ಅರಸುರವರು ನೀಡಿರುವ ಹೇಳಿಕೆ ಗಮನ ಸೆಳೆಯುವುದು. ಕೇಂದ್ರ ಮತ್ತು ರಾಜ್ಯ ಸರ್ಕಾರದ ನಡುವಿನ ಪರಸ್ಪರ ಸಂಬಂಧ ಹಾಗೂ ರಾಜಕಾರಣ ತುರ್ತುಪರಿಸ್ಥಿತಿ ನಂತರ ಪಡೆದುಕೊಂಡ ಹೊಸರೂಪವನ್ನು ಚಿತ್ರಿಸುವುದು. ಸಮಕಾಲೀನವಾಗಿ ಅನೇಕ ರಾಜ್ಯಗಳಲ್ಲಿ ಈ ಬೆಳವಣಿಗೆ ಕಂಡುಬರುವುದು. ಇದರೊಡನೆ ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಕರ್ನಾಟಕದಲ್ಲಿ ಜನತಾ ಪಕ್ಷದಿಂದ ಆಯ್ಕೆ ಆಗಿದ್ದವರು ಕಡಿಮೆ ಸಂಖ್ಯೆಯಲ್ಲಿದ್ದರು. ಮೇಲ್‌ಸ್ತರದಲ್ಲಿ ಬೇರೆ ಬೇರೆ ವಿಚಾರಗಳ ರೂಪದಲ್ಲಿ ರಾಜಕೀಯ ಘರ್ಷಣೆ, ಮುಖಾಮುಖಿ ಹಾಗೂ ವೈರುಧ್ಯಗಳಂತೆ ವ್ಯಕ್ತಗೊಂಡಿದ್ದರೂ ಆಂತರಿಕವಾಗಿ ಪ್ರಜಾಪ್ರಭುತ್ವ, ಸಾಮಾಜಿಕ ನ್ಯಾಯ, ಸ್ವಾತಂತ್ರ್ಯದ ಗ್ರಹಿಕೆಗಳ ನೆಲೆಗಳಾಗಿವೆ.

••• ••• •••

ಭೂ ನ್ಯಾಯ ಮಂಡಳಿ ಆಡಳಿತಶಾಹಿಯ ಭಾಗವಾದರೂ ಪ್ರತ್ಯೇಕವಾಗಿ ನೋಡುತ್ತಿರುವುದನ್ನು ಪುನಃ ಇಲ್ಲಿ ನೆನಪಿಸುತ್ತಿದ್ದೇನೆ. ೧೯೭೪ರಲ್ಲಿ ಭೂ ಸುಧಾರಣಾ ಕಾಯ್ದೆ ಜಾರಿಗೊಳ್ಳುವ ಪ್ರಕ್ರಿಯೆ ಆರಂಭವಾಯಿತು. ತರುವಾಯ ೧೯೭೫ರ ವೇಳೆಗೆ ಭೂ ನ್ಯಾಯ ಮಂಡಳಿಗಳ ಕಾರ್ಯಾಚರಣೆ ಶುರುವಾಯಿತು. ಭೂ ನ್ಯಾಯ ಮಂಡಳಿ ಕಾರ್ಯಾಚರಣೆಯೇ ೧೯೭೫ ರಿಂದ ೧೯೮೦ರವರೆಗಿನ ಶಾಸನ ಸಭೆಗಳಲ್ಲಿ ಪದೇ ಪದೇ ಚರ್ಚೆಗೊಳಗಾಗಿದೆ. ಭೂ ನ್ಯಾಯ ಮಂಡಳಿ ಸದಸ್ಯರ ನೇಮಕಾತಿ, ಅಕ್ರಮ, ಅನ್ಯಾಯ, ಕಾರ್ಯ ನಿರ್ವಹಣೆಯ ಪ್ರಗತಿ ಮೊದಲಾದ ವಿಚಾರಗಳು ಅಧಿಕವಾಗಿ ಚರ್ಚೆಗೊಳಗಾದ ವಿಚಾರಗಳು. ಈ ನಿಟ್ಟಿನಲ್ಲಿ ೧೯೭೬ರಲ್ಲಾದ ತಿದ್ದುಪಡಿ, ಅದಕ್ಕೆ ೧೯೭೮ರಲ್ಲಾದ ಮರು ತಿದ್ದುಪಡಿ ಪಕ್ಷ ರಾಜಕಾರಣ ಮತ್ತು ಪ್ರಾದೇಶಿಕ ರಾಜಕಾರಣವನ್ನು ಅನಾವರಣಗೊಳಿಸುವುದು. ೧೯೭೬ರಲ್ಲಿ ಆಡಳಿತ ಕಾಂಗ್ರೆಸ್ ಭೂ ನ್ಯಾಯ ಮಂಡಳಿಯಲ್ಲಿ ಅಧಿಕಾರೇತರ ವರ್ಗವನ್ನು ಸದಸ್ಯರನ್ನಾಗಿ ಮಾಡಲು ಕಲ್ಪಿಸಿದ್ದ ಅವಕಾಶವನ್ನು ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಅಧಿಕಾರಕ್ಕೆ ಬಂದ ಜನತಾ ಸರ್ಕಾರ ತೆಗೆದುಹಾಕಿತ್ತು. ೧೯೭೮ರಲ್ಲಿ ರಾಜ್ಯ ವಿಧಾನಸಭಾ ಚುನಾವಣೆಯಲ್ಲಿ ಆಡಳಿತದ ಚುಕ್ಕಾಣಿ ಹಿಡಿದ ಕಾಂಗ್ರೆಸ್(ಐ) ಆರು ತಿಂಗಳೊಳಗೆ ಕಾನೂನಿನ್ವಯ ಅಧಿಕಾರೇತರ ವರ್ಗವನ್ನು ಭೂ ನ್ಯಾಯ ಮಂಡಳಿಯಲ್ಲಿ ಸದಸ್ಯರನ್ನಾಗಿ ಪುನಃ ನೇಮಿಸಿದ್ದು ಪಕ್ಷ ರಾಜಕಾರಣ ಮತ್ತು ಪ್ರಾದೇಶಿಕ ರಾಜಕಾರಣದ ಪದರಗಳನ್ನು ತೆರೆದಿಡುವುದು.

ಭೂ ಶಾಸನವನ್ನು ಜಾರಿ ತರುವಲ್ಲಿ ಭೂ ನ್ಯಾಯ ಮಂಡಳಿ ಮತ್ತು ಆಡಳಿತಶಾಹಿ ಪ್ರಮುಖ ಕಾರ್ಯನಿರ್ವಹಿಸಿದೆ. ಭೂ ನ್ಯಾಯ ಮಂಡಳಿ ಹಾಗೂ ಆಡಳಿತಶಾಹಿಯ ಕಾರ್ಯಕ್ರಮದ ಯಶಸ್ಸನ್ನು ಭೂಮಿ ಪಡೆದವರ ಅಂಕಿಅಂಶಗಳನ್ನು ಗಮನಿಸುವ ಮೂಲಕ ಅಳೆಯುವುದು ಸಾಮಾನ್ಯವಾಗಿದೆ. ಈ ಕೆಳಗಿನ ಚಿತ್ರ–

೨ರಲ್ಲಿರುವ ಕರ್ನಾಟಕ ಸರ್ಕಾರದ ಜಾಹೀರಾತು ಪ್ರಮುಖ ಆಕರವಾಗಿದೆ. ೧೯೭೮ರ ಕೊನೆಯ ವೇಳೆಗೆ ಪ್ರಕಟಗೊಂಡ ಜಾಹೀರಾತಾಗಿದ್ದು, ಎರಡು ಲಕ್ಷ ಗೇಣಿದಾರರು ಲಾಭ ಪಡೆದಿದ್ದಾರೆಂಬ ಅಂಕಿಅಂಶಗಳನ್ನು




ಕರ್ನಾಟಕ೭೭[೭೧] ಕಾಂಪ್ರಹೆನ್ಸಿವ್ ರಿಫೈನ್ಡ್ ಎಸ್ಟ್ಯಾಬ್ಲಿಷ್ ಆಫ್ ಇಂಡಿಯಾಸ್ ಮೋಸ್ಟ್ ಪ್ರೋಗ್ರೆಸಿವ್ ಸ್ಟೇಟ್ ಪುಸ್ತಕದ ಹಿಂಬದಿಯಲ್ಲಿ ಭೂ ಸುಧಾರಣೆ ಹಿನ್ನೆಲೆಯಲ್ಲಿ ಪ್ರಕಟವಾಗಿರುವ ಕರ್ನಾಟಕ ಸರ್ಕಾರದ ಜಾಹೀರಾತು[೭೨] ಚಿತ್ರ ಸಂಖ್ಯೆ ೨.೧೨

(ಚಿತ್ರ-೨)

ಸಾಧನೆಯ ರೂಪದಲ್ಲಿ ತೋರಿಸಲಾಗಿದೆ. ಆದರೆ ೧೯೭೪ರಲ್ಲಿ ಸರ್ಕಾರ ಕಾಯ್ದೆ ಜಾರಿ ತರುವ ಸಂದರ್ಭದಲ್ಲಿ ಹೊಂದಿದ್ದ ಲಕ್ಷ್ಯಕ್ಕಿಂತ ಕಡಿಮೆ ಪ್ರಮಾಣದಲ್ಲಿ ಭೂಮಿ ಸಂಗ್ರಹ ಮತ್ತು ವಿಲೇವಾರಿ ಆಗಿರುವುದು ಕಂಡುಬರುವುದು. ಭೂ ನ್ಯಾಯ ಮಂಡಳಿ ಮತ್ತು ಆಡಳಿತಶಾಹಿ ಭೂ ಕಾಯ್ದೆ ಜಾರಿ ತರುವಲ್ಲಿ ಹೊಂದಿದ ವಿಫಲತೆಯಾಗಿದ್ದರೂ ಸರ್ಕಾರ ಸಾಧನೆಯ ರೂಪದಲ್ಲಿ ಬಿಂಬಿಸಿದೆ.

**ಭೂ ನ್ಯಾಯ ಮಂಡಳಿಗಳಿಗೆ ಮಾಡಿರುವ ವೆಚ್ಚ(೧೯೭೪ ರಿಂದ ೧೯೮೧).**



ಮೂಲ – ರಾಜನ್.ಎಂ.ಎ.ಎಸ್.,[೭೩] **ಕರ್ನಾಟಕದಲ್ಲಿ ಭೂ ಸುಧಾರಣೆ ನಾನೂ ಸಹ ಹತ್ತಿರದಿಂದ ಕಂಡೆ**, ಐಬಿಹೆಚ್ ಪ್ರಕಾಶನ, ಬೆಂಗಳೂರು, ೧೯೮೭, ಪುಟ – ೨೧೨+೮. ರೇಖಾನಕ್ಷೆ ಸಂಖ್ಯೆ: ೧.

*ರಾಜನ್ ಅವರು ಕರ್ನಾಟಕ ಸರ್ಕಾರ, ಖಾಸಗಿ ಪತ್ರಗಳ ಮೂಲಕ ಅಂಕಿಅಂಶಗಳನ್ನು ಪಡೆದುಕೊಂಡಿರುವುದಾಗಿ ಕೃತಿಯಲ್ಲಿ ದಾಖಲಿಸಿದ್ದಾರೆ(ಪುಟ – ೧೭೩). ಆ ದಾಖಲೆಗಳ ಆಧಾರದ ಮೇಲೆ ಈ ರೇಖಾನಕ್ಷೆ ತಯಾರಿಸಲಾಗಿದೆ.

ಈ ಮೇಲಿನ ರೇಖಾನಕ್ಷೆಯಲ್ಲಿ ಭೂ ನ್ಯಾಯ ಮಂಡಳಿಗಳ ವೆಚ್ಚ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಾ ಸಾಗಿರುವುದನ್ನು ನೋಡಬಹುದು. ವೆಚ್ಚದ ಹೆಚ್ಚಳದಲ್ಲಿ ೧೯೭೫ ರಿಂದ ೧೯೭೮ರವರೆಗೆ ದೊಡ್ಡ ಮಟ್ಟದ ವ್ಯತ್ಯಾಸಗಳು ಉಂಟಾಗಿಲ್ಲ. ಮೊದಲ ಬಾರಿಗೆ ೧೯೭೮–೧೯೭೯ರಲ್ಲಿ ವೆಚ್ಚ ಹೆಚ್ಚಳದ ಪ್ರಮಾಣ ತೀವ್ರವಾಗಿ ಕುಸಿತಗೊಂಡಿದೆ. ಈ ವರ್ಷದ ಪೂರ್ವಾರ್ಧದಲ್ಲಿ ಭೂ ನ್ಯಾಯ ಮಂಡಳಿಯ ಕಾರ್ಯಚಟುವಟಿಕೆ ಅತ್ಯಂತ ನಿಧಾನಗತಿ ಹೊಂದಿತ್ತು. ಭೂ ನ್ಯಾಯ ಮಂಡಳಿಯ ಸದಸ್ಯರನ್ನಾಗಿ ಪುನಃ ಅಧಿಕಾರೇತರ ವರ್ಗದವರನ್ನು

ಸೇರಿಸುವ ಮೂಲಕ ಉತ್ತರಾರ್ಧದಲ್ಲಿ ಚುರುಕುಗೊಂಡಿತು ಎಂಬ ಮುಖ್ಯಮಂತ್ರಿ ದೇವರಾಜ ಅರಸು ಅವರ ಹೇಳಿಕೆಯು ಇದಕ್ಕೆ ಪೂರಕವಾಗಿದೆ. ಭೂ ನ್ಯಾಯ ಮಂಡಳಿಯ ವೆಚ್ಚದಲ್ಲಿ ದಿಢೀರ್ ಹೆಚ್ಚಳ ೧೯೭೮ – ೧೯೭೯ರಲ್ಲಿ ಕಂಡುಬರುವುದು. ಇದು ಮುಂದುವರೆದು, ೧೯೮೦–೧೯೮೧ರಲ್ಲಿ ಅತ್ಯಂತ ದೊಡ್ಡ ಪ್ರಮಾಣದಲ್ಲಿ ಹೆಚ್ಚಳ ಕಾಣಬಹುದು. ಭೂ ನ್ಯಾಯ ಮಂಡಳಿಯ ವೆಚ್ಚದಲ್ಲಿ ಏರುಪೇರುಗಳು ಉಂಟಾಗಿರುವ ಸಂದರ್ಭ ರಾಜಕೀಯ ಸ್ಥಿತ್ಯಂತರಗಳಿಗೆ ಸಾಕ್ಷಿಯಾಗಿದ್ದು, ಅವುಗಳ ಪ್ರಭಾವವಾಗಿದೆ.

**ಭೂ ನ್ಯಾಯಮಂಡಳಿಗಳ ಸಂಖ್ಯೆ ಮತ್ತು ಕಾರ್ಯನಿರ್ವಹಣಾ ಪಟ್ಟಿ. ಪಟ್ಟಿ ಸಂಖ್ಯೆ: ೬.**

| ಜಿಲ್ಲೆಗಳು | ಮಂಡಳಿಗಳ ಸಂಖ್ಯೆ | | ಗೇಣಿದಾರರ ಅರ್ಜಿಗಳ ಸಂಖ್ಯೆ | | ಒಕ್ಕಲಿಗರ ಘೋಷಣೆ ಸಂಖ್ಯೆ | | ಕೂಲಿಮನೆ ಅರ್ಜಿದಾರರ ಸಂಖ್ಯೆ | | ಒಟ್ಟು ವ್ಯವಹಾರಗಳ ಸಂಖ್ಯೆ | |
|---|---|---|---|---|---|---|---|---|---|---|
| | ೧೯೭೪ರ ವರೆಗೆ | ೧೯೮೧ರ ವರೆಗೆ | ಸ್ವೀಕೃತ | ಇತ್ಯರ್ಥ ೧೯೮೨ರವರೆಗೆ | ಸ್ವೀಕೃತ | ಇತ್ಯರ್ಥ ೧೯೮೨ರವರೆಗೆ | ಸ್ವೀಕೃತ | ಇತ್ಯರ್ಥ ೧೯೮೨ರವರೆಗೆ | ಸ್ವೀಕೃತ | ಇತ್ಯರ್ಥ ೧೯೮೨ರವರೆಗೆ |
| ಉತ್ತರ ಕನ್ನಡ | ೧೧ | ೧೩ | ೯೦೯೭೩ | ೯೦೦೦೯ | ೩೯೪೨ | ೩೭೦೩ | ೧೯೧೯ | ೧೩೫೭ | ೧೦೯೩೩೭ | ೧೦೯೦೨೯ |
| ದಕ್ಷಿಣ ಕನ್ನಡ | ೮ | ೨೨ | ೧೭೭೨೩೫ | ೧೭೭೨೦೪ | ೧೦೦೦ | ೧೭೨೫ | ೩೨೫೬ | ೩೦೪೫ | ೧೮೧೧೪೯ | ೧೮೦೭೭೩ |
| ಶಿವಮೊಗ್ಗ | ೯ | ೧೦ | ೫೯೫೩೩ | ೫೯೫೩೯ | ೭೯೪೮ | ೭೨೯೨ | ೨೩೮ | ೨೩೮ | ೬೭೭೮೨ | ೬೭೨೨೫ |
| ಚಿಕ್ಕಮಗಳೂರು | ೬ | ೬ | ೧೯೫೪೩ | ೧೯೯೩೩ | ೨೯೫೨ | ೨೬೨೫ | ೭೯ | ೭೯ | ೨೧೭೫೯ | ೨೧೫೬೨ |
| ಹಾಸನ | ೮ | ೮ | ೨೯೭೩೬ | ೨೯೨೬೫ | ೧೨೩೩ | ೧೨೩೧ | ೫೯ | ೫೯ | ೩೦೭೯೩ | ೩೦೭೦೦ |
| ಕೊಡಗು | ೩ | ೩ | ೩೨೨೨ | ೩೨೨೧ | ೨೫೩ | ೨೫೩ | ೧೨೨ | ೧೨೨ | ೯೭೯೦ | ೯೭೯೧ |
| ಬೆಳಗಾಂ | ೧೦ | ೧೧ | ೭೨೩೨೦ | ೭೨೩೨೦ | ೧೬೯೯೯ | ೧೬೯೨೨ | ೨೨ | ೨೨ | ೮೯೩೨೧ | ೮೯೨೫೯ |
| ಬಿಜಾಪುರ | ೧೧ | ೧೧ | ೯೧೯೨೯ | ೯೧೯೨೯ | ೫೫೯೦೦ | ೫೫೯೭೬ | ೭೦ | ೭೦ | ೬೯೯೮೭ | ೬೯೯೮೭ |
| ಧಾರವಾಡ | ೧೭ | ೧೭ | ೬೨೭೫೫ | ೬೦೫೭೨ | ೧೫೫೨೧ | ೧೫೨೯೧ | ೩೦ | ೩೦ | ೭೮೧೫೯ | ೭೯೭೧೮ |
| ಬೀದರ್ | ೫ | ೫ | ೬೨೯೧ | ೬೨೮೦ | ೪೩೨೧ | ೪೩೨೫ | ೮ | - | ೧೦೬೩೦ | ೧೦೭೦೫ |
| ಗುಲ್ಬರ್ಗ | ೧೦ | ೧೧ | ೬೧೨೩೩ | ೬೧೨೯೨ | ೧೮೨೩೫ | ೧೮೭೪೮ | ೧೫೯ | ೧೫೯ | ೮೦೦೩೭ | ೭೯೯೩೦ |
| ರಾಯಚೂರು | ೯ | ೯ | ೨೯೭೫೯ | ೨೯೭೯೭ | ೯೧೭೬ | ೯೧೨೨ | ೧೩೩ | ೧೩೩ | ೯೧೬೨೮ | ೯೧೫೩೫ |
| ಬಳ್ಳಾರಿ | ೫ | ೫ | ೧೫೮೫೧ | ೧೭೭೩೭ | ೬೨೨೭ | ೫೫೩೬ | - | - | ೨೫೧೨೮ | ೨೩೯೧೦ |
| ಚಿತ್ರದುರ್ಗ | ೯ | ೯ | ೭೯೫೨ | ೭೩೭೬ | ೭೯೬೫ | ೭೯೬೫ | ೧೩೯ | ೧೩೯ | ೧೭೯೭೧ | ೧೭೩೯೭ |
| ತುಮಕೂರು | ೧೦ | ೧೦ | ೧೯೭೭೦ | ೧೯೭೯೯ | ೫೫೭೬ | ೫೫೭೨ | ೫೯ | ೫೯ | ೧೭೮೦೭ | ೧೭೫೬೯ |
| ಮಂಡ್ಯ | ೬ | ೬ | ೧೯೬೫೩ | ೧೯೭೩೭ | ೫೧೧ | ೫೦೬೫ | ೧೦ | ೧೦ | ೧೭೦೭೯ | ೧೭೭೨೨ |
| ಮೈಸೂರು | ೧೧ | ೧೧ | ೩೩೭೩೬ | ೩೩೯೫೯ | ೩೩೧೦ | ೩೩೧೬ | ೨ | ೨ | ೯೭೯೭೦ | ೯೦೦೫೩ |
| ಕೋಲಾರ | ೧೧ | ೧೧ | ೫೯೩೩೭ | ೫೯೫೩೬ | ೧೯೫೨ | ೧೯೫೩ | ೯ | ೯ | ೨೩೧೭೫ | ೨೫೯೭೩ |
| ಬೆಂಗಳೂರು | ೧೧ | ೧೧ | ೯೫೨೮೨ | ೯೫೭೯೯ | ೨೨೨೯ | ೧೩೯೯ | ೨ | ೨ | ೫೭೯೩೩ | ೯೯೭೯೯ |
| | ೧೭೫ | ೧೯೪ | ೮೧೩೨೫೧ | ೮೧೧೧೫೩ | ೧೯೨೯೫೦ | ೧೫೯೧೫೬ | ೫೩೨೯ | ೫೫೫೧ | ೯೭೧೭೫೫ | ೯೫೮೮೨೯೨ |

ಮೂಲ – ರಾಜನ್.ಎಂ.ಎ.ಎಸ್., ಕರ್ನಾಟಕದಲ್ಲಿ ಭೂ ಸುಧಾರಣೆ ದಾಖಲೆ ಸಹ ಪಟ್ಟಿಯಿಂದ ಕಂಡಿ. ಐಬಿಹೆಚ್ ಪ್ರಕಾಶನ, ಬೆಂಗಳೂರು, ೧೯೮೭, ಪುಟ – ೨೧೨+೮.

ಈ ಮೇಲಿನ ಪಟ್ಟಿಯಲ್ಲಿ ೧೯೮೨ರವರೆಗೆ ಗೇಣಿದಾರರ ಸ್ವೀಕೃತ ಅರ್ಜಿಗಳು ಬಹುತೇಕ ಇತ್ಯರ್ಥಗೊಂಡಿರುವುದು ಕಂಡುಬಂದಿದೆ. ೧೯೭೪ರಲ್ಲಿ ಭೂ ನ್ಯಾಯ ಮಂಡಳಿಗಳ ಒಟ್ಟು ಸಂಖ್ಯೆ ೧೭೫ ಇದ್ದದ್ದು ೧೯೮೧ರವರೆಗೆ ೧೯೪ಕ್ಕೆ ಏರಿದೆ. ಗೇಣಿದಾರರ ಒಟ್ಟು ಅರ್ಜಿ ಸಂಖ್ಯೆ ೮೧೩೨೫೧ ಇದ್ದು, ೮೧೧೧೫೩ ಅರ್ಜಿ ಇತ್ಯರ್ಥಗೊಂಡಿರುವುದಾಗಿ ತಿಳಿದುಬರುವುದು. ಇದರಲ್ಲಿ ಅತ್ಯಧಿಕ ಪ್ರಮಾಣದ ಅರ್ಜಿಯನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮತ್ತು ಕಡಿಮೆ ಅರ್ಜಿಯನ್ನು ಕೊಡಗಿನಲ್ಲಿ ಕಾಣಬಹುದಾಗಿದೆ. ಬೀದರ್ ಮತ್ತು ಚಿತ್ರದುರ್ಗ ಪ್ರದೇಶಗಳಲ್ಲಿಯೂ ಗೇಣಿದಾರರು ಅರ್ಜಿ ಹಾಕಿರುವ ಸಂಖ್ಯೆ ಕಡಿಮೆಯಿದೆ. ಆ ಸಂದರ್ಭದಲ್ಲಿ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಪ್ರದೇಶಗಳು ಕಮ್ಯುನಿಸ್ಟ್ ಪಕ್ಷ ಪ್ರಬಲವಾಗಿತ್ತು. ಭೂ ಸುಧಾರಣಾ ಕಾಯ್ದೆಯ ಪ್ರಮುಖ ಉದ್ದೇಶಗಳಲ್ಲಿ ಭೂ ಹಿಡುವಳಿಗಳ ಘೋಷಣೆ ಹಾಗೂ ಅದನ್ನು ವಶಪಡಿಸಿಕೊಳ್ಳುವುದು ಮುಖ್ಯವಾಗಿದೆ. ಭೂ ಹಿಡುವಳಿಯ ಪ್ರಮಾಣ ಅತ್ಯಧಿಕವಿರುವುದು ಬಿಜಾಪುರ ದಲ್ಲಾದರೆ, ಕಡಿಮೆ ಇರುವದು ಕೊಡಗಿನಲ್ಲಿ. ಗೇಣಿದಾರರು ಅರ್ಜಿ ಹಾಕಿರುವ ಮತ್ತು ಭೂ ಹಿಡುವಳಿ ಘೋಷಣೆ ಮಾಡಿರುವ ಪ್ರಮಾಣದಲ್ಲಿ ಬಹುದೊಡ್ಡ ವ್ಯತ್ಯಾಸವನ್ನು ನೋಡಬಹುದು. ಭೂ ಶಾಸನದ ಮತ್ತೊಂದು ಮುಖ್ಯ ಆಶಯಕ್ಕೆ ಹೆಚ್ಚಿನ ಒತ್ತು ದೊರೆತಿಲ್ಲದಿರುವುದನ್ನು ಸೂಚಿಸುವುದು. ಈ ನಿಟ್ಟಿನಲ್ಲಿ 'ಕರ್ನಾಟಕದಲ್ಲಿ ಭೂ ಸುಧಾರಣೆ ಸಾಕಷ್ಟು ಪರಿಣಾಮಕಾರಿ ಆಗಿತ್ತಾದರೂ ಪೂರ್ಣವಾಗಿ ದೊಡ್ಡ ಹಿಡುವಳಿದಾರರ ಹಿಡಿತದಿಂದ ಹೊರಬಂದಿರಲಿಲ್ಲ. ಜೊತೆಗೆ ಪಕ್ಷ ಹಾಗೂ ಸಂಘಟನೆಗಳ ಮುಖ್ಯ ಉದ್ದೇಶ ಮೇಲಿಂದ ಕೆಳಗೆ ಇಳಿಯುವ ಅಭಿವೃದ್ಧಿ ಲಾಭಗಳನ್ನು ಪಡೆಯುವುದು ಮಾತ್ರವಾಗಿತ್ತು. ಜನರಿಗೆ ಇದರೊಳಗೆ ಕ್ರಿಯಾಶೀಲ ಪಾತ್ರವಿರಲಿಲ್ಲ. ಪಶ್ಚಿಮ ಬಂಗಾಳಕ್ಕೆ ಹೋಲಿಸಿದರೆ ಕರ್ನಾಟಕದಲ್ಲಿ ಭೂ

ಸುಧಾರಣೆ ಪರಿಣಾಮಕಾರಿಯಾಗಿ ನಡೆದಿಲ್ಲ. ಆದರೆ ಉತ್ತರ ಪ್ರದೇಶಕ್ಕೆ ಹೋಲಿಸಿದರೆ ಕರ್ನಾಟಕದ ಭೂ ಸುಧಾರಣೆ ಹೆಚ್ಚು ಪರಿಣಾಮಕಾರಿ' ಎಂಬ ಕೋಹ್ಲಿ ಅವರ ವಾದ ಪೂರಕವಾಗಿದೆ.



ಡೆಕ್ಕನ್ ಹೆರಾಲ್ಡ್: ಡಿಸೆಂಬರ್ [illegible] ರಲ್ಲಿ ಪ್ರಕಟವಾದ ಚಿತ್ರ. [illegible] ಗೇಣಿದಾರರು [illegible] ಅರ್ಜಿ ಸಲ್ಲಿಸಲು ಬೆಂಗಳೂರಿನ [illegible] ಎಂದು ವಿವರಿಸಲಾಗಿದೆ. ಚಿತ್ರ ಸಂಖ್ಯೆ [illegible]

ಭೂ ನ್ಯಾಯ ಮಂಡಳಿಯ ಕಾರ್ಯಾಚರಣೆ ಅಸಮರ್ಪಕವಾಗಿತ್ತು ಎಂಬುದಕ್ಕೆ ಕೆಳಗಿನ ಚಿತ್ರ-೩ರಲ್ಲಿರುವ ವ್ಯಂಗ್ಯಚಿತ್ರ ಮೇಲಿನ ಚರ್ಚೆಗಳಿಗೆ ಪೂರಕವಾಗಿದೆ. ಭೂ ನ್ಯಾಯ ಮಂಡಲಿ ಕಾರ್ಯಚಟುವಟಿಕೆ ಕುರಿತು ಸುಧಾ ವಾರಪತ್ರಿಕೆಯಲ್ಲಿ ಪ್ರಕಟಗೊಂಡ ವ್ಯಂಗ್ಯಚಿತ್ರವಿದು. ೧೯೭೫ರಲ್ಲಿ ಭೂ ನ್ಯಾಯ ಮಂಡಳಿ ಕಾರ್ಯಾಚರಣೆ ಆರಂಭಗೊಂಡಾಗಿನಿಂದಲೂ ಕೇಳಿಬರುತಿದ್ದ ಸಾಮಾನ್ಯ ಆರೋಪದ ಚಿತ್ರಣವಿದೆ. ಚಿತ್ರದಲ್ಲಿ ಮಂಡಳಿಯ ಸದಸ್ಯರುಗಳು ರಾಜಕಾರಣಿಗಳ ದಿರಿಸಿನಲ್ಲಿ, ಅರ್ಜಿಗಳ ರಾಶಿಯ ಮೇಲೆ ಎತ್ತರದಲ್ಲಿ ಕೂತಿರುವರು. ಗೇಣಿದಾರನೊಬ್ಬ ಅರ್ಜಿಯನ್ನು ಮೇಲೆಕ್ಕೆತ್ತಿಕೊಡಲು ಪ್ರಯತ್ನಿಸುತ್ತಿದ್ದರೆ, ಮಂಡಳಿಯ ಸದಸ್ಯನೊಬ್ಬ ಸ್ವಲ್ಪ ಬಗ್ಗಿ ಅರ್ಜಿ ಸ್ವೀಕರಿಸಲು ಯತ್ನಿಸುತ್ತಿರುವುದು ಕಂಡು ಬರುವುದು. ಭೂ ನ್ಯಾಯ ಮಂಡಳಿಯ ಸದಸ್ಯ ಮತ್ತು ಅರ್ಜಿದಾರನ ನಡುವೆ ಇರುವ ದೊಡ್ಡದಾದ ಅಂತರದಿಂದಾಗಿ ಅರ್ಜಿ ಕೊಡಲು ಸಹ ಸಾಧ್ಯವಾಗದಂತಹ ಪರಿಸ್ಥಿತಿಯನ್ನು ನಿರ್ಮಿಸಿದಂತಿದೆ. ಭೂ ನ್ಯಾಯ ಮಂಡಳಿಗಳ ಕಾರ್ಯಾಚಾರಣೆ ಗೇಣಿದಾರರಿಗೆ ಸಹಕಾರಿಯಾಗಿಲ್ಲ ಎಂಬುದನ್ನು ನೇರವಾಗಿ ಟೀಕಿಸುತ್ತಿದೆ. ಈ ಹೊತ್ತಿಗೆ ಭೂ ಸುಧಾರಣಾ ಕಾಯ್ದೆ ಜಾರಿಗೊಳಿಸುವ



ಸುಧಾ, [illegible]

(ಚಿತ್ರ-೩)

ಪ್ರಕ್ರಿಯೆ ರಾಷ್ಟ್ರಾದ್ಯಂತ ತನ್ನ ತೀವ್ರತೆ ಕಳೆದುಕೊಂಡಿತ್ತು. ಕರ್ನಾಟಕದಲ್ಲಿ ಭೂ ಸುಧಾರಣಾ ಕಾಯ್ದೆ ಜಾರಿಗೊಳಿಸುವ ಪ್ರಕ್ರಿಯೆ ಪೂರ್ಣಗೊಂಡಂತಿದೆ ಎಂಬ ಸರ್ಕಾರದ ಧೋರಣೆ ಕಂಡುಬರುತ್ತಿದ್ದು, ಅಣಕವಾಗಿದೆ.

**ಗೇಣಿದಾರ ಅರ್ಜಿಗಳ ವರ್ಷವಾರು ಸ್ವೀಕೃತಿ ಮತ್ತು ಇತ್ಯರ್ಥಗಳ ಪಟ್ಟಿ**




ಮೂಲ - ರಾಜನ್ ಎಂ.ಎ.ಎಸ್., ಕರ್ನಾಟಕದಲ್ಲಿ ಭೂ ಸುಧಾರಣೆ ನಾಲ್ಕು ದಶಕ ಹಿನ್ನೋಟದಿಂದ ಕಂಡ, ವಿಕಸನ ಪ್ರಕಾಶನ, ಬೆಂಗಳೂರು, ೧೯೮೭, ಪುಟ - ೨೧೨-೨೧೪. ಇವರು ಕರ್ನಾಟಕ ಸರ್ಕಾರ, ಖಾಸಗಿ ಪತ್ರಗಳ ಮೂಲಕ ಅಂಕಿಅಂಶಗಳನ್ನು ಪಡೆದುಕೊಂಡಿರುವುದಾಗಿ ದಾಖಲಿಸಿದ್ದಾರೆ(ಪುಟ ೧೨೬-೧೨೭). ಈ ಅಂಕಿಅಂಶಗಳ ಆಧಾರದ ಮೇಲೆ ರೇಖಾನಕ್ಷೆ ತಯಾರಿಸಲಾಗಿದೆ. ರೇಖಾನಕ್ಷೆ ಸಂಖ್ಯೆ ೨

ಈ ಮೇಲಿನ ರೇಖಾಚಿತ್ರದಲ್ಲಿ ೧೯೭೫ರ ನಂತರ ಗೇಣಿದಾರರ ಅರ್ಜಿ ಸ್ವೀಕೃತಿ ಇಳಿಮುಖವಾಗುತ್ತಾ (೧೯೭೯ನ್ನು ಉಳಿದಂತೆ) ಸಾಗುವುದು ಕಂಡುಬರುವುದು. ೧೯೭೭ ಮತ್ತು ೧೯೭೮ರಲ್ಲಿ ಸ್ವೀಕೃತವಾದ ಅರ್ಜಿಗಳ ಸಂಖ್ಯೆಯ ಪ್ರಮಾಣ ತೀವ್ರವಾಗಿ ಇಳಿತ ಕಂಡಿದೆ. ಇದು ೧೯೭೯ರ ಸಾಲಿನಲ್ಲಿ ಸ್ವಲ್ಪ ಚೇತರಿಸಿಕೊಂಡಂತೆ ಅರ್ಜಿಗಳ ಪ್ರಮಾಣದಲ್ಲಿ ಏರಿಕೆ ಉಂಟಾಗಿದೆ. ಇದರೊಡನೆ ಇತ್ಯರ್ಥಗೊಂಡ ಅರ್ಜಿಗಳ ಸಂಖ್ಯೆಯ ಪ್ರಮಾಣ ೧೯೭೬, ೧೯೭೭, ೧೯೭೯ರಲ್ಲಿ ಅಧಿಕವಾಗುತ್ತಾ ಹೋಗಿದೆ. ಇತ್ಯರ್ಥಗೊಂಡ ಅರ್ಜಿಗಳ ಸಂಖ್ಯೆಯ ಪ್ರಮಾಣ ೧೯೭೫, ೧೯೭೮ ಮತ್ತು ೧೯೮೦ರಲ್ಲಿ ಕಡಿಮೆಗೊಳ್ಳುತ್ತಾ ಸಾಗಿರುವುದನ್ನು ಗಮನಿಸಬಹುದು. ಕುಸಿತದ ಪ್ರಮಾಣದಲ್ಲಿ ೧೯೭೮ ಮತ್ತು ೧೯೮೦ರಲ್ಲಿ ತೀವ್ರ ಪ್ರಮಾಣ ಹೊಂದಿದೆ. ಅರ್ಜಿ ಸ್ವೀಕೃತಿ ಮತ್ತು ಇತ್ಯರ್ಥಗಳಲ್ಲಿ ಬೃಹತ್ ಪ್ರಮಾಣದ ಏರುಪೇರುಗಳಾಗಿರುವ ೧೯೭೭, ೧೯೭೮ ಹಾಗೂ ೧೯೮೦ರಲ್ಲಿ ಕರ್ನಾಟಕ ರಾಜಕಾರಣ ಪ್ರಮುಖ ತಿರುವು ಪಡೆದುಕೊಂಡಿತ್ತು. ಈ ಅವಧಿಗಳಲ್ಲಿ ೧೯೭೭ ಮತ್ತು ೧೯೮೦ರಲ್ಲಿ ಲೋಕಸಭಾ ಚುನಾವಣೆ ನಡೆದಿದ್ದರೆ, ೧೯೭೮ರಲ್ಲಿ ವಿಧಾನಸಭಾ ಚುನಾವಣೆ ಕಾಣಬಹುದು. ಸಮೂಹ ಮಾಧ್ಯಮಗಳ ಎಣಿಕೆಗಿಂತ ಭಿನ್ನವಾಗಿ ಈ ಎಲ್ಲಾ ಚುನಾವಣೆಗಳಲ್ಲಿ ಫಲಿತಾಂಶ ನೋಡಬಹುದು. ಇವುಗಳ ಮೇಲೆ ಭೂ ರಾಜಕಾರಣ ಮತ್ತು ಭೂ ಸುಧಾರಣಾ ಕಾಯ್ದೆ ಪ್ರಭಾವಿಸಿರುವುದು ಮೇಲ್ನೋಟಕ್ಕೆ ಕಂಡುಬರುವುದು.

ಕರ್ನಾಟಕದಲ್ಲಿ ೧೯೮೨ರ ವೇಳೆಗಾಗಲೇ ೧೯೭೪ರ ಭೂ ಸುಧಾರಣಾ ಕಾಯ್ದೆ ಜಾರಿಗೊಳಿಸುವ ಪ್ರಕ್ರಿಯೆ ಸಂಪೂರ್ಣವಾಗಿತ್ತೆಂಬ ನಿಲುವು ಕಂಡುಬರುತ್ತಿತ್ತು. ಭೂ ಹಿಡುವಳಿ ಮಿತಿಯ ಅನುಷ್ಠಾನವು ಈ ಕಾಯ್ದೆಯ ಮುಖ್ಯ ಉದ್ದೇಶವಾಗಿತ್ತು. ಈ ದಿಸೆಯಲ್ಲಿ ಕೆಳಗಿರುವ ಹಿಡುವಳಿ ಮಿತಿ ಪ್ರಸಂಗ ಪಟ್ಟಿಯು ಭೂ ಸುಧಾರಣಾ ಕಾಯ್ದೆ ಯಶಸ್ವಿಯಾಗಿಲ್ಲದಿರುವ ಹಾಗೂ ಪರೋಕ್ಷವಾಗಿ ಭೂ ಒಡೆತನದ ರಾಜಕಾರಣ ವ್ಯಕ್ತಗೊಂಡ ರೂಪದ ಮೇಲೆ ಬೆಳಕು ಹರಿಸುವುದು. ಭೂ ಹಿಡುವಳಿ ಘೋಷಣೆಗೊಂಡ ಒಟ್ಟು ಭೂಮಿಯಲ್ಲಿ ಸರ್ಕಾರ ವಶಪಡಿಸಿ ಕೊಂಡಿರುವ ಪ್ರಮಾಣ ಶೇಕಡಾ ೬.೫ರಷ್ಟಿದೆ. ರಾಯಚೂರು ಮತ್ತು ಗುಲ್ಬರ್ಗಾ ಜಿಲ್ಲೆಗಳಲ್ಲಿ ಅತಿ ಹೆಚ್ಚಿನ ಪ್ರಮಾಣದಲ್ಲಿ ಭೂ ಹಿಡುವಳಿಯನ್ನು ವಶಪಡಿಸಿಕೊಂಡಿರುವುದು ಕಂಡುಬರುವುದು. ಕೊಡಗು ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಭೂ ಹಿಡುವಳಿಯನ್ನು

ವಶಪಡಿಸಿಕೊಳ್ಳಲಾಗಿದೆ. ಭೂ ಹಿಡುವಳಿ ಘೋಷಣೆ ಮತ್ತು ವಶಪಡಿಸಿಕೊಳ್ಳುವ ಬಗೆಗೆ ಆಡಳಿತಯಂತ್ರ ಹೆಚ್ಚು ಆಸಕ್ತಿ ತೋರಿಸಿದಂತೆ ಕಾಣುವುದಿಲ್ಲ. ಎಲ್ಲ ಆಡಳಿತ ವ್ಯವಸ್ಥೆಗಳನ್ನು ಸಾಮಾನ್ಯವಾಗಿ ಕಾಡುವ

**ಹಿಡುವಳಿ ಮಿತಿ ಪ್ರಸಂಗಗಳು: ಹೆಚ್ಚುವರಿ ಹಿಡುವಳಿದಾರರ ಮತ್ತು ಅಳತೆಯ ಪ್ರಮಾಣ**

| ಜಿಲ್ಲೆಗಳು | ಸ್ವೀಕೃತ ಘೋಷಣೆಗಳು | | | ೧೯೮೭ರ ಕೊನೆಯವರೆಗೆ ನಿರ್ಧರಿತವಾದ ಹೆಚ್ಚುವರಿ ಜಮೀನು | | |
|---|---|---|---|---|---|---|
| | ಸಂಖ್ಯೆ | ಘೋಷಣೆಗೆ ಸರಾಸರಿ ವಿಸ್ತೀರ್ಣ (ಎಕರೆಗಳಲ್ಲಿ) | ಪ್ರಸಂಗಗಳ ಸಂಖ್ಯೆ | ವಿಸ್ತೀರ್ಣ(ಎಕರೆಗಳಲ್ಲಿ) | ಪ್ರಸಂಗಕ್ಕೆ ಸರಾಸರಿ (ಎಕರೆಗಳು) | ಒಟ್ಟು ಘೋಷಣೆಗಳಲ್ಲಿ ಹೆಚ್ಚುವರಿ ಪ್ರಸಂಗಗಳ ಪ್ರಮಾಣ(ಶೇ) |
| ಉತ್ತರ ಕನ್ನಡ | ೩೯೦೩ | ೨೨ | ೪೪ | ೩೪೮ | ೮ | ೧.೧ |
| ದಕ್ಷಿಣ ಕನ್ನಡ | ೧೮೮೮ | ೬೫ | ೧೪ | ೨೩೯೬ | ೧೭೧ | ೦.೭ |
| ಶಿವಮೊಗ್ಗ | ೭೪೪೫ | ೩೨ | ೨೦೪ | ೪೫೫೯ | ೨೨ | ೨.೭ |
| ಚಿಕ್ಕಮಗಳೂರು | ೨೧೫೩ | ೫೯ | ೪೮ | ೫೪೮ | ೧೧ | ೨.೨ |
| ಹಾಸನ | ೧೨೬೩ | ೫೩ | ೩೧ | ೧೨೦೫ | ೪೧ | ೨.೫ |
| ಕೊಡಗು | ೭೫೩ | ೫೫ | ೪ | ೪೬ | ೧೨ | ೦.೫ |
| ಬೆಳಗಾಂ | ೧೫೭೨೯ | ೪೭ | ೪೪೫ | ೨೮೮೭ | ೬೩ | ೩.೨ |
| ಬಿಜಾಪುರ | ೨೬೪೦೮ | ೪೫ | ೧೭೬೪ | ೫೧೦೮೮ | ೩೧ | ೭.೧ |
| ಬೀದರ್ | ೧೭೩೯೬ | ೫೩ | ೬೭೭ | ೨೧೩೪೬ | ೩೨ | ೩.೮ |
| ಧಾರವಾಡ | ೪೬೩೧ | ೫೯ | ೩೨೦ | ೭೭೭೬ | ೨೯ | ೬.೯ |
| ಗುಲ್ಬರ್ಗ | ೧೫೭೬೫ | ೬೩ | ೧೩೫೯ | ೪೫೪೮೮ | ೨೭ | ೮.೮ |
| ರಾಯಚೂರು | ೧೯೭೩೬ | ೪೭ | ೨೬೬೫ | ೫೮೧೪೮ | ೨೨ | ೧೪.೦ |
| ಬಳ್ಳಾರಿ | ೬೦೭೭ | ೪೭ | ೯೬೧ | ೧೬೭೦೮ | ೧೯ | ೧೫.೮ |
| ಚಿತ್ರದುರ್ಗ | ೮೦೭೫ | ೫೧ | ೨೯೭ | ೬೭೬೫ | ೨೬ | ೩.೩ |
| ತುಮಕೂರು | ೨೫೧೦೮ | ೫೮ | ೭೬ | ೧೪೯೬ | ೧೭ | ೩.೪ |
| ಮಂಡ್ಯ | ೨೦೧೬ | ೨೭ | ೬೧ | ೯೫೫ | ೧೬ | ೩.೨ |
| ಮೈಸೂರು | ೩೩೯೦ | ೩೫ | ೩೨ | ೧೧೮೩ | ೫೭ | ೦.೯ |
| ಕೋಲಾರ | ೧೫೮೦೨ | ೫೨ | ೪೫ | ೧೪೯೮ | ೩೩ | ೨.೯ |
| ಬೆಂಗಳೂರು | ೨೨೨೯ | ೨೮ | ೧೬ | ೫೬೪ | ೪೬ | ೦.೫ |
| | ೧೪೯೧೪೫೮ | ೫೦ | ೯೩೬೨ | ೨೯೨೮೭೮ | ೩೭ | ೬.೫ |

ಮೂಲ – ರಾಜನ್ ಎಂ.ಎ.ಎಸ್., ಕರ್ನಾಟಕದಲ್ಲಿ ಭೂ ಸುಧಾರಣೆ ದಾಸೂ ಸಹ ಪಟ್ಟರದಿಂದ ಕಂಡೆ, ಪವನಜ ಪ್ರಕಾಶನ, ಬೆಂಗಳೂರು, ೧೯೮೭, ಪುಟ – ೨೧೨-೮, ಪಟ್ಟಿ ಸಂಖ್ಯೆ ೭

*೧೦೦ಕ್ಕಿಂತ ಕಡಿಮೆ ಹೆಚ್ಚುವರಿ ಪ್ರಸಂಗಗಳಿದ್ದ ಜಿಲ್ಲೆಗಳನ್ನು ಲೆಕ್ಕಾಚಾರ ಮಾಡಿಲ್ಲ.

ಸಮಸ್ಯೆಗಳೇ ಭೂ ನ್ಯಾಯ ಮಂಡಳಿಯನ್ನು ಕಾಡಿರುವಂತಿದೆ. ಈ ದಿಸೆಯಲ್ಲಿ 'ಮಂಡಳಿಗಳು ರಚನೆಗೊಳ್ಳುವಾಗ ಯಾವುದಾದರೊಂದು ದೃಷ್ಟಿಕೋನ ಅಥವಾ ತಾತ್ವಿಕ ಹಿನ್ನೆಲೆ ರಾಜಕಾರಣಿಗಳ ಗುಂಪು ಆಡಳಿತಾಧಿಕಾರಿಗಳೊಂದಿಗೆ ಕೂಡಿ ಮಾಡಿದ ಸೃಷ್ಟಿ. ಇದರ ಪ್ರಮುಖ ಲಕ್ಷಣ ಅವುಗಳ ಅಲ್ಪಾಯುಷ್ಯ. ಆಡಳಿತಕ್ಕೆ ಸಂಬಂಧ ಪಟ್ಟ ಸನ್ನಿವೇಶಗಳಲ್ಲಿ ಹೊಸ ಭಾವನೆ ಮತ್ತು ವ್ಯವಸ್ಥೆಗಳನ್ನು ಒಂದು ನಿಶ್ಚಿತ ಕಾಲ ಮಿತಿಗೆ ಮೀರಿ ಚೈತನ್ಯಶಾಲಿಗಳಾಗಿ ಇಡುವುದು ಕಷ್ಟ ... ಇದರಿಂದ ಕಾರ್ಯಗತವಾಗಲು ಹಲವಾರು ವರ್ಷಗಳು ಹಿಡಿಯುವ ಭೂ ಸುಧಾರಣೆಯಂತಹ ಬೃಹತ್ ಪ್ರಮಾಣದ ಕಾರ್ಯಕ್ರಮಕ್ಕೆ ಇವೇ ಆತಂಕಕಾರಿ. ಆದ್ದರಿಂದಲೇ ಈ ಭೂ ನ್ಯಾಯ ಮಂಡಳಿ ಹುಟ್ಟು ಹಾಕಿದ ಭಾವನೆಗಳು, ಕಾರ್ಯಭಾರ ಮುಕ್ತಾಯ ಗೊಳಿಸುವ ಮುನ್ನ ಚೈತನ್ಯವನ್ನು ಕಳೆದುಕೊಳ್ಳುತ್ತವೆ ಎಂಬುದು ಮೊದಲಿನಿಂದ ಇದ್ದ ಪ್ರತೀಕ್ಷೆ. ಅದೆ ಗುಂಪು ರಾಜ್ಯದಲ್ಲಿ ಅಧಿಕಾರದಲ್ಲಿದ್ದರು, ಸುಧಾರಣಾ ಕಾರ್ಯಕ್ರಮ ವಿಶಾಲವಾದ ಜನಾಧಾರಣೆಯ ಬೆಂಬಲ ಪಡೆದಿದ್ದರೂ ಆಡಳಿತಾತ್ಮಕ ಭಾವನೆಗಳ ಆಯಸ್ಸಿನ ಮಿತಿ ಸುಧಾರಣಾ ಕಾರ್ಯಕ್ರಮ ಮುಗಿಯುವವರೆಗೆ ಶುದ್ಧ ಮೂಲರೂಪ ಉಳಿಸಿಕೊಂಡಿರಲು ಸಾಧ್ಯವಾಗದಂತೆ ನೋಡಿಕೊಳ್ಳುತ್ತದೆ' ಎಂದು ರಾಜನ್[೧೭] ಅವರು ವಿಶ್ಲೇಷಿಸುವರು. ಇದು ೧೯೭೪ರ ಭೂ ಸುಧಾರಣಾ ಕಾಯ್ದೆ ಅನುಷ್ಠಾನಕ್ಕೆ ಪ್ರತ್ಯೇಕ ಆಡಳಿತಯಂತ್ರವಿದಿದ್ದರೆ ಯಶಸ್ವಿಯಾಗುತ್ತಿತ್ತೆ ಎಂಬ ಪ್ರಶ್ನೆ ಮೂಡಿಸುವುದು. ಇದಕ್ಕೆ ಸಮಕಾಲೀನವಾಗಿ ಭೂ ನ್ಯಾಯ ಮಂಡಳಿಯ ಸದಸ್ಯರಾಗಿದ್ದ ಸಮಾಜವಾದಿ ಹಿನ್ನೆಲೆ ಕಾಗೋಡು ತಿಮ್ಮಪ್ಪರವರ ಪ್ರತಿಕ್ರಿಯೆ ಹೀಗಿದೆ.

> ಹೌದು. ಅದು ಇದ್ದಿದ್ರೆ ಚೆನ್ನಾಗಿರೋದು. ಅದು ಆಗ್ಲಿಲ್ಲ. ಕಾರಣ ಏನು ಅಂತ ಅಂತಾಂದ್ರೆ ಒಂದು ನಮ್ಮ ಗೇಣಿದಾರರ ಸಮಸ್ಯೆ ಬಗೆಹರಿದ ಕೂಡ್ಲೇನೆ 'ಸೋಷಲಿಸ್ಟ್ ಪಾರ್ಟಿ ಉಳೀಲಿಲ್ಲ' ಆ ಜಾಗದಲ್ಲಿ ಬೇರೆ ರ್‍ಯಾಡಿಕಲ್ ಪಾರ್ಟಿ ಬರಲಿಲ್ಲ. ಆಮೇಲೆ ಕೆಲವರು ಕಾಂಗ್ರೆಸ್ಸಿನಲ್ಲಿ ಸೇರ್‍ಕೊಂಡ್ರು, ಕೆಲವರು ಜನತಾ ಪಾರ್ಟಿ ಸೇರ್‍ಕೊಂಡ್ರು, ಹಾಗಾಗಿ ಜನತಾ ಪಾರ್ಟಿಯಲ್ಲಿದ್ದೋರು ಮೂಲತಃ ಜಮೀನ್ದಾರರೇ ಆಗಿದ್ದವರು. ಕಾಂಗ್ರೆಸ್ಸಿಗೆ ಸೇರಿದವರು ಅರ್ಧ ಸಮಾಜವಾದ, ಅರ್ಧ ಕಾಂಗ್ರೆಸ್. ಯಾವಾಗ ಗೇಣಿದಾರರು ಹೋಗಿ ಬಿಟ್ರೋ ಅವರೂ ಕೂಡ ಬಾಯಿ ಮುಚ್ಚಿಕೊಂಡು ಬಿಟ್ರು ... ಯಾವಾಗ ಭೂ ಸುಧಾರಣೆ ಇದೆಲ್ಲ ಬಂತಲ್ಲ ಆವಾಗ ಕಾಂಗ್ರೆಸ್ಸಿಗೆ ವಿರುದ್ಧವಾಗಿ ಅವರೆಲ್ಲ ಈ ರೈತಸಂಘಕ್ಕೆ ಬೆಂಬಲ ಕೊಡಲಿಕ್ಕೆ ಹತ್ತಿದ್ರು(ತಿಮ್ಮಪ್ಪ ೨೦೦೭: ೫೬).

ಈ ಪ್ರತಿಕ್ರಿಯೆಯು ಮೇಲಿನ ಭೂ ನ್ಯಾಯ ಮಂಡಳಿಗಳ ಅಸಫಲತೆಗೆ ಪೂರಕವಾಗಿದೆ. ಆಡಳಿತಯಂತ್ರ ದೊಡನೆ ಸಮಕಾಲೀನ ರಾಜಕಾರಣ ಮತ್ತು ಸಮಾಜದ ಪ್ರಭಾವವನ್ನು ಒಟ್ಟಾಗಿ ನೋಡುವ ಕ್ರಮ ಪ್ರತಿಕ್ರಿಯೆಗಳ ಸ್ವರೂಪವನ್ನು ತೆರೆದಿಡುವುದು. ಈ ನಿಟ್ಟಿನಲ್ಲಿ ಭೂ ಸುಧಾರಣಾ ಕಾಯ್ದೆ ಜಾರಿಗೆ ಸಮಾಜ ಮತ್ತು ರಾಜಕಾರಣದಲ್ಲಿ ಬಂದ ಪ್ರತಿಕ್ರಿಯೆಗಳನ್ನು ಪ್ರತ್ಯೇಕವಾಗಿ ಗಮನಿಸುವುದು ಅಗತ್ಯವಿದೆ.

### ೨.೨.೨. ಪ್ರತಿಕ್ರಿಯೆ: ಸಮಾಜ, ರಾಜಕಾರಣ ಮತ್ತು ಮಾಧ್ಯಮಗಳು

> ತ್ರಾಣವಿರುವ ಗೇಣಿದಾರರು ಸುಖವಾಗಿದ್ದರೆ, ತ್ರಾಣವಿರುವ ಒಡೆಯರೂ ಸುಖವಾಗಿದ್ದಾರೆ. ಬೀದಿ ಪಾಲಾಗಿರುವವರೂ ಉಭಯವರ್ಗದಲ್ಲೂ ತ್ರಾಣವಿಲ್ಲದವರು(ಕಾರಂತ ೧೯೭೫ ಮೇ ೬).
>
> ಭೂ ಸುಧಾರಣೆಯ ವಿಚಾರದಲ್ಲಿ ಕರ್ನಾಟಕ ರಾಜ್ಯದ ಗುರಿ ಸ್ಪಷ್ಟವಾಗಿದೆ ... ಭೂ ಒಡೆಯರಿಂದ ಅಡ್ಡಿ ಆತಂಕಗಳೂ ಇಲ್ಲದಿಲ್ಲ. ಯಾವುದೇ ಪಟ್ಟಭದ್ರ ಹಿತಾಸಕ್ತಿಯನ್ನೂ ತೊಡೆದುಹಾಕುವ ಯತ್ನ ನಡೆಸಿದಾಗಲೂ ಇಂಥ ವಿರೋಧ ನಿರೀಕ್ಷಿತವೆ. ನಮ್ಮ ಗೇಣಿದಾರ ರೈತರು ಸಂಘಟಿತರಾಗಿಲ್ಲ. ತಮ್ಮ ಹಕ್ಕುಗಳೇನೆಂಬುದನ್ನು ಅರಿತು ಒಟ್ಟಾಗಿ ನಡೆದಾಗ ಬದಲಾವಣೆ ಹೆಚ್ಚು ಶೀಘ್ರವಾಗಿ ಸಾಧ್ಯವಾದೀತು (ಅರಸು ೧೯೭೬: ೮).

ಮತ್ತು

> ಭೂ ಸುಧಾರಣಾ ಕಾಯ್ದೆಯ ಪರಿಣಾಮಗಳು ಹಲವಾರು. ಅವು ಬೇರೆ ಬೇರೆ ಕಾಲದಲ್ಲಿ ಜರುಗುವಂತಹದ್ದು. ಕಾಯ್ದೆ ಬರುತ್ತದೆಂಬ ಭೀತಿಯೆ ಸಾಕು; ಅದು ಜಾರಿಯಾಗುವುದಕ್ಕಿಂತ ಮುಂಚೆಯೆ ಕೆಲವು ಪರಿಣಾಮಗಳು ಉಂಟಾಗುತ್ತವೆ ... ಭೂ ಸುಧಾರಣೆಯ ಪ್ರಭಾವವನ್ನು ಅಂದರೆ ಮುಖ್ಯವಾಗಿ ಅದರಿಂದಾಗುವ ಸಾಮಾಜಿಕ, ಆರ್ಥಿಕ ಬದಲಾವಣೆಗಳನ್ನು ಕಾರ್ಯಪೂರ್ಣವಾದ ನಂತರದಲ್ಲಿ ನಿರೀಕ್ಷಿಸಬಹುದು. ಕೆಲವು ಪರಿಣಾಮಗಳು ಕಟಿದೋರಲು ಸಾಕಷ್ಟು ಕಾಲ ತೆಗೆದು ಕೊಳ್ಳುವುದರಿಂದ ಕಾಯ್ದೆಯ ಕೆಲಸ ಪೂರೈಸಿದ ಮೇಲೆ ಬಹುಕಾಲದ ನಂತರ ಮಾತ್ರ ಅವುಗಳನ್ನು ಕಾಣಲು ಸಾಧ್ಯ(ರಾಜನ್ ೧೯೮೭: ೯೯).

ಭೂ ಸುಧಾರಣಾ ಕಾಯ್ದೆಗೆ ಕಂಡುಬಂದ ಪ್ರತಿಕ್ರಿಯೆಗಳ ಬೇರೆ ಬೇರೆ ಆಯಾಮಗಳಾಗಿವೆ. ನಿರಂಕುಶಾಧಿಕಾರ ಮತ್ತು ಪ್ರಜಾಪ್ರಭುತ್ವದ ಸಾಮಾಜಿಕ ಮೂಲ ಕೃಷಿ ಹಾಗೂ ಭೂ ಸುಧಾರಣೆಗಳ ನಡುವೆ ಪರಸ್ಪರ ಸಂಬಂಧವನ್ನು ಹೊಂದಿರುವುವು. ಸಮಕಾಲೀನವಾಗಿ ವಸಾಹತುಶಾಹಿ ಆಡಳಿತಕ್ಕೆ ಒಳಗಾಗಿದ್ದ, ಹೊಸದಾಗಿ ಸ್ವತಂತ್ರಗೊಂಡ ಹಲವು ರಾಷ್ಟ್ರಗಳಲ್ಲಿ ಭೂ ಸುಧಾರಣೆ ಜಾರಿಯ ಪ್ರಕ್ರಿಯೆಗಳಿಗೆ ಸಂಬಂಧಿಸಿ ದಂತೆ ಅನೇಕ ಸಮಾನ ಅಂಶಗಳನ್ನು ಗಮನಿಸಬಹುದಾಗಿದೆ. ಆಫ್ರೋ–ಏಷ್ಯನ್ ಖಂಡದ ಅನೇಕ ರಾಷ್ಟ್ರಗಳಲ್ಲಿ ಭೂ ಸುಧಾರಣೆ ಜಾರಿ ತರುವ ಕಾರ್ಯಗಳಿಗೆ ಕೊನೆಯ ಬಾರಿ ಅಧಿಕ ಮಹತ್ವ ದೊರೆತಿದ್ದು ೧೯೭೦ರ ದಶಕದಲ್ಲೇ. ನಂತರ ಅಲ್ಲಿಯೂ ಭೂ ಸುಧಾರಣೆ ನಿಧಾನವಾಗಿ ರಾಜಕೀಯ ಪಕ್ಷಗಳ ಗಮನದಿಂದ ಜಾರಿ ಹೋಗುವುದನ್ನು ಗುರುತಿಸಬಹುದು. ಭಾರತದ ಕೃಷಿ ಸುಧಾರಣೆಯ ಭರವಸೆಗಳು ಸಹ ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವದ ಆಚರಣೆಯೊಡನೆ ಸಂಬಂಧ ಹೊಂದಿದೆ. ಈ ಮೇಲಿನ ಉಲ್ಲೇಖಗಳು ಸಮಾಜ, ರಾಜಕಾರಣ ಮತ್ತು ಮಾಧ್ಯಮಗಳಲ್ಲಿ ಭೂ ಸುಧಾರಣೆ ಬಿಂಬಿತವಾಗಿರುವ ಬಗೆ ಹಾಗೂ ಪ್ರತಿಕ್ರಿಯೆಗಳ ಸ್ವರೂಪದ ಮೇಲೆ ಬೆಳಕು ಹರಿಸುವುದು. ಭೂ ಸುಧಾರಣಾ ಕಾಯ್ದೆಗೆ ಬಂದ ಪ್ರತಿಕ್ರಿಯೆಗಳನ್ನು ೧೯೭೪ ರಿಂದ ೧೯೮೦ರವರೆಗೆ ಚರ್ಚಿಸಲು ಪ್ರಯತ್ನಿಸಲಾಗಿದೆ. ಈ ಸಂಬಂಧ ಈಗಾಗಲೇ ಅನೇಕ ಅಧ್ಯಯನಗಳಾಗಿದ್ದು, ರಾಜಕಾರಣ, ಸಮಾಜ ಮತ್ತು ಆರ್ಥಿಕ ವಲಯಗಳಲ್ಲಿ ಕಂಡುಬಂದ ಪ್ರತಿಕ್ರಿಯೆಗಳ ವಿವಿಧ ಆಯಾಮಗಳನ್ನು ಗುರುತಿಸಲಾಗಿದೆ. ಇಲ್ಲಿ ಪತ್ರಿಕೆ, ಸಾಹಿತ್ಯ ಮತ್ತು

ಸಿನಿಮಾ ಮೂಲಕ ಪ್ರಜಾಪ್ರಭುತ್ವ ವ್ಯವಸ್ಥೆ ಹಾಗೂ ತುರ್ತುಪರಿಸ್ಥಿತಿ ಕಾಲಘಟ್ಟದ ನೆಲೆಯಲ್ಲಿ ಭೂ ಸುಧಾರಣೆಗೆ ಸಮಾಜದ ಪತ್ರಿಕ್ರಿಯೆಗಳನ್ನು ವಿಮರ್ಶಿಸಲು ಪ್ರಯತ್ನಿಸಲಾಗಿದೆ.

### ೨.೨.೨.೧. ಪತ್ರಿಕೆ: ಭೂ ಶಾಸನ ಮತ್ತು ಪತ್ರಕರ್ತ

ಪತ್ರಿಕೆ ಸಮಾಜದ ವಿಚಾರಧಾರೆ, ಆಗುಹೋಗುಗಳನ್ನು ದಾಖಲಿಸುವುದು ಸಾಮಾನ್ಯ ಸಂಗತಿಯಾಗಿದೆ. ಪತ್ರಿಕೆ ಮತ್ತು ಪತ್ರಕರ್ತರ ಸೈದ್ಧಾಂತಿಕ ನಿಲುವು ವರದಿಯ ಸ್ವರೂಪದ ಮೇಲೆ ನಿರ್ಣಾಯಕವಾಗಿ ಕಾರ್ಯ ನಿರ್ವಹಿಸುವುದು. ಇದು ಸಮಾಜದ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಬೃಹತ್ ವೇದಿಕೆಯೂ ಹೌದು. ಇಲ್ಲಿ ೧೯೭೪ರ ಭೂ ಸುಧಾರಣಾ ಕಾಯ್ದೆಗೆ ಪತ್ರಿಕೆಗಳಲ್ಲಿ ಕಂಡುಬಂದ ಪ್ರತಿಕ್ರಿಯೆಗಳನ್ನು(೧೯೮೦ರವರೆಗೆ) ವಿಮರ್ಶಿಸಲಾಗಿದೆ. ಈಗಾಗಲೇ ಭೂ ಸುಧಾರಣಾ ಕಾಯ್ದೆಯ ವಿವಿಧ ಆಯಾಮಗಳನ್ನು ಚರ್ಚಿಸುವಾಗ ಪತ್ರಿಕೆಯ ಅಭಿಪ್ರಾಯಗಳನ್ನು ಸಾಕಷ್ಟು ಬಾರಿ ಬಳಸಿರುವುದರಿಂದ, ಅವುಗಳನ್ನುಳಿದಂತೆ ಇಲ್ಲಿ ವಿಮರ್ಶಿಸಲು ಪ್ರಯತ್ನಿಸಲಾಗಿದೆ. ಭೂ ಸುಧಾರಣಾ ಕಾಯ್ದೆ ಜಾರಿಗೊಳಿಸುವ ಪ್ರಕ್ರಿಯೆ ಕುರಿತು ಶಾಸನ ಸಭೆಗಳಲ್ಲಿ ಚರ್ಚಿತವಾದ ವಿಚಾರಗಳಿಗೆ ಬಂದ ಪ್ರತಿಕ್ರಿಯೆಗಳನ್ನು ಮಾತ್ರ ಅವಲೋಕಿಸಲು ಪ್ರಯತ್ನಿಸಲಾಗಿದೆ.

ಸಮಾಜ ಮತ್ತು ರಾಜಕಾರಣ ಒಂದೆ ನಾಣ್ಯದ ಎರಡು ಮುಖಗಳು. ಪತ್ರಿಕೆಗಳು ಸಮಾಜ ಮತ್ತು ರಾಜಕಾರಣಗಳಲ್ಲಿ ಕಂಡುಬರುವ ಪ್ರತಿಕ್ರಿಯಿ, ಅಭಿಪ್ರಾಯ ಹಾಗೂ ವೈಯಕ್ತಿಕ(ಪತ್ರಿಕೆ) ನಿಲುವುಗಳನ್ನು ಸದಾಕಾಲ ವ್ಯಕ್ತಪಡಿಸುತ್ತಿರುತ್ತವೆ. ಪತ್ರಿಕೆಗಳು ಅಕ್ಷರಸ್ಥ ಓದುಗರಿಂದ ಅಕ್ಷರಸ್ಥ ಓದುಗರನ್ನೆ ಉದ್ದೇಶವಾಗಿಟ್ಟುಕೊಂಡು ಸೃಷ್ಟಿಯಾಗುವ ಸಮೂಹ ಮಾಧ್ಯಮ. ಹಾಗಾಗಿ ೧೯೭೪ರ ಭೂ ಸುಧಾರಣಾ ಕಾಯ್ದೆ ಕುರಿತ ಪ್ರತಿಕ್ರಿಯೆಗಳು ಸಮಾಜದಲ್ಲಿನ ಅಕ್ಷರಸ್ಥ ವಲಯದ ಕೆಲವು ವರ್ಗಗಳ ಅಭಿಪ್ರಾಯ, ಆಶಯ ಹಾಗೂ ಭಾವನೆಗಳ ಅಭಿವ್ಯಕ್ತಿ ರೂಪವಾಗಿದೆ. ಈ ದಿಸೆಯಲ್ಲಿ ಟಿ.ಎಸ್.ರಂಗಣ್ಣ[೧೮] ಅವರು 'ಪತ್ರಕರ್ತರು ಈ ಎರಡೂ ಗುಂಪಿನ ರಾಜಕೀಯ ಪಕ್ಷಗಳು ಮತ್ತು ಗುಂಪುಗಳ ಜೊತೆಗೆ ಗುರುತಿಸ್ಕೊಂಡಿದ್ದರೂ ಹಾಗಾಗಿ ಅವರಿಗೆ ಬೇಕಾದವರ ಪರ ಸುದ್ದಿಗಳನ್ನು ಬರೆಯುತ್ತಿದ್ದಿದ್ದನ್ನು ಕಾಣಬಹುದು. ಉದಾಹರಣೆಯಾಗಿ, ದೇವರಾಜ ಅರಸು ಲ್ಯಾಂಡ್ ರಿಫಾರ್ಮ್ ಜಾರಿಗೆ ತಂದಾಗ ಪತ್ರಕರ್ತರೂ ಜಮೀನು ಕಳೆದುಕೊಂಡಿದ್ದರು. ಅವರೆಲ್ಲ ನ್ಯಾಚುರಲಿ ವಿರುದ್ಧವಾಗಿದ್ದರು. ಅಲ್ಲೊಬ್ಬರೂ ಇಲ್ಲೊಬ್ಬರೂ ಬಿಟ್ಟು, ಸೋಷಿಯಲಿಸ್ಟ್ ಬ್ಯಾಕ್‌ಗ್ರೌಂಡ್ ನವರೂ ದೇವರಾಜ ಅರಸು ಜೊತೆ ಇದ್ದರು' ಎಂದು ಹೇಳಿರುವುದು ಮೇಲಿನ ವಿಚಾರಗಳಿಗೆ ಪೂರಕವಾಗಿದ್ದು, ಸೈದ್ಧಾಂತಿಕ ನಿಲುವು ಆ ಸಂದರ್ಭದ ಪತ್ರಿಕಾ ವರದಿಯಲ್ಲಿ ರೂಪುಗೊಂಡ ಬಗೆಯನ್ನು ಚಿತ್ರಿಸುವುದು. ಪತ್ರಿಕೆ ಮತ್ತು ಪತ್ರಕರ್ತರಿಗೆ ಭೂ ಸುಧಾರಣೆ ಕುರಿತಂತಿದ್ದ ಅಭಿಪ್ರಾಯ ವ್ಯಕ್ತಪಡಿಸುವುದರ ಜೊತೆಗೆ ಸಮಕಾಲೀನ ವರದಿಗಳ ಸ್ವರೂಪ ಗ್ರಹಿಸಲು ಸಹಕಾರಿಯಾಗುವುದು.

ಪತ್ರಿಕೆಗಳ ಪ್ರತಿಕ್ರಿಯೆಗಳನ್ನು, ಅದರ ಸೈದ್ಧಾಂತಿಕ ನಿಲುವುಗಳ ನೆಲೆಯಲ್ಲಿ ಕೆಳಗಿನ ವರದಿಗಳನ್ನು ನೋಡಲು ಪ್ರಯತ್ನಿಸಲಾಗಿದೆ. "ಭೂ(ಭಾರ) ನ್ಯಾಯ ಮಂಡಳಗಳ ವಿಚಾರ ಕಾರ್ಯ ವೈಖರಿ"; "ಭೂ ನ್ಯಾಯ ಮಂಡಳಗಳು ಭೂ ಭಾರವಾದ ಬಗೆ"; "ಭೂ ನ್ಯಾಯ ಮಂಡಳಗಳ ಬೇರೆಬೇರೆ ಚೇಷ್ಟೆಗಳು"; "ಭೂ ನ್ಯಾಯ ಮಂಡಳಿಯಲ್ಲಿ ನಖ್ಲ ಪಡೆಯಲಿಕ್ಕೆ ತಪಸ್ಸು ಮಾಡಬೇಕು"; "ಕುಮಟಾ ಭೂ ನ್ಯಾಯಮಂಡಳದಲ್ಲಿ ಅರಾಜಕತೆ"; "ಕುಮಟಾ ಭೂ ನ್ಯಾಯ ಮಂಡಳಕ್ಕೆ ಅಮಲೇರಿ ಎಚ್ಚರ ತಪ್ಪಿತಲ್ಲ?" ಮೊದಲಾದ ವರದಿಗಳು[೧೯] ಭೂ ನ್ಯಾಯ ಮಂಡಳಿಗಳ ಕುರಿತ ಪ್ರತಿಕ್ರಿಯೆಗಳೂ ಆಗಿವೆ. ಇವು ಚುನಾವಣೆ ಎಂಬ ಸ್ಥಳೀಯ ಪತ್ರಿಕಾ ವರದಿಗಳ ಶೀರ್ಷಿಕೆಗಳಾಗಿದ್ದು, ಬಲಪಂಥೀಯ ಸೈದ್ಧಾಂತಿಕ ನೆಲೆಯನ್ನು ಹೊಂದಿದೆ. ಭೂ ನ್ಯಾಯ ಮಂಡಳಿಗಳಲ್ಲಿನ ಅಧಕ್ಷತೆ, ಪರಿಹಾರಧನ ವಿಳಂಬ, ಭೂ ಮಾಲಿಕರಿಗಾಗಿರುವ ಅನ್ಯಾಯ, ಭ್ರಷ್ಟಾಚಾರ, ನಿಖಾಲೆಯಾದ ಪ್ರಕರಣಗಳಿಗೆ ಭೂ ಸ್ವಾಮ್ಯದ ನಕಲು ಪ್ರತಿ ನೀಡುವಲ್ಲಿ ತೊಂದರೆ ನೀಡುತ್ತಿರುವುದು ಮೊದಲಾದವು ಪತ್ರಿಕೆಗಳಲ್ಲಿ ಸಾಮಾನ್ಯವಾಗಿ ಚರ್ಚೆಗೆ ಒಳಗಾಗುತ್ತಿದ್ದ ವಿಚಾರಗಳಾಗಿದ್ದವು. ಈ ಕಾಲದಲ್ಲಿ ತುರ್ತುಪರಿಸ್ಥಿತಿಯನ್ನು ವಿರೋಧಿಸಿ ಕೇಂದ್ರ ಸರ್ಕಾರದ ಕಾರ್ಯನೀತಿಯನ್ನು ಮೇಲಿನ ಪತ್ರಿಕೆಯಲ್ಲಿ ನೇರವಾಗಿ ಖಂಡಿಸಿ ಬರೆದರೆ, ರಾಜ್ಯ ಸರ್ಕಾರಕ್ಕೆ ಸಂಬಂಧಿಸಿದಂತೆ ಭೂ ಸುಧಾರಣಾ(ಭಟ್ಕಳಕ್ಕೆ

ಸಂಬಂಧಿಸಿದಂತೆ) ಕಾಯ್ದೆ ಜಾರಿಗೊಳಿಸುವ ಪ್ರಕ್ರಿಯೆಯನ್ನು ಟೀಕಿಸಿ ಬರೆಯಲಾಗುತ್ತಿತ್ತು. ಇವು ಪತ್ರಿಕೋದ್ಯಮದಲ್ಲಿ ಪತ್ರಿಕೆಗಳ ಪ್ರತಿಕ್ರಿಯೆಯ ಆಯಾಮವೊಂದನ್ನು ತೆರೆದಿಡುವುದು. ಇದರೊಡನೆ ಸರ್ಕಾರ ಮತ್ತು ಸಮಾಜದ ಪ್ರತಿಕ್ರಿಯೆಗಳು ಜಾಹೀರಾತು ಹಾಗೂ ಅಭಿಮತಗಳ ರೂಪದಲ್ಲಿ ಪ್ರಕಟವಾಗುತ್ತಿದ್ದು, ಗಮನ ಸೆಳೆಯುವುದು.

ಈ ಕೆಳಗಿನ ಚಿತ್ರ-೩ರಲ್ಲಿ ಭೂ ಸುಧಾರಣಾ ಕಾಯ್ದೆಗೆ ಸಮಾಜ ಮತ್ತು ಸರ್ಕಾರದ ಪ್ರತಿಕ್ರಿಯೆಗಳು ಜಾಹೀರಾತಿನ ಮೂಲಕ ಅಭಿವ್ಯಕ್ತಗೊಂಡ ರೂಪವನ್ನು ಕಾಣಬಹುದು. ಈ ಜಾಹೀರಾತು ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದ ಮನವಿ ಆಗಿದೆ. ಉಳುವವನೆ ಹೊಲದೊಡೆಯ ಶೀರ್ಷಿಕೆಯ ಪಕ್ಕದಲ್ಲಿ 'ಐದು ಲಕ್ಷ ಗೇಣಿದಾರರು ೩೦ ಲಕ್ಷ ಎಕರೆ ಭೂಮಿಯ ಒಡೆಯರಾಗುವರು. ಶೇಕಡಾ ೩೦ರಷ್ಟು ಹೆಚ್ಚಿನ ವ್ಯವಸಾಯ ಕೂಲಿ ಪುನರ್ ವಿಮರ್ಶೆಯಿಂದಾಗಿ ಲಕ್ಷ ವ್ಯವಸಾಯ ಕೂಲಿಗಾರರಿಗೆ ಪ್ರಯೋಜನವಾಗುವುದು' ಎಂದಿದೆ. ಇದರ ಕೆಳಗಡೆ ಕಾಂಗ್ರೆಸ್ಸಿಗೆ ಮತ ಸುಭದ್ರ ಸರ್ಕಾರಕ್ಕಾಗಿ ಎಂಬ ಉದ್ಘೋಷವಿದೆ. ಚಿತ್ರದಲ್ಲಿ ಎರಡು ಕೈಗಳ ಮೇಲಿರುವ ಭೂಮಿಯಲ್ಲಿ ನಿರಾಂತಕವಾಗಿ ರೈತ ಹೊಲ ಉಳುತ್ತಿರುವನು. ಭೂ ಸುಧಾರಣಾ ಕಾಯ್ದೆಯಿಂದ ಉಂಟಾಗುವ ಅನುಕೂಲವನ್ನು ಬಿಂಬಿಸುತ್ತಾ, ಮತ ಪಡೆಯುವ ಯತ್ನವಾಗಿದೆ. ಕರ್ನಾಟಕದಲ್ಲಿ ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಅಡಳಿತ ಕಾಂಗ್ರೆಸ್ ಗೆದ್ದು ಬರಲು ಭೂ ಕಾಯ್ದೆ ಜಾರಿಯು ಪ್ರಮುಖ ಕಾರಣಗಳಲ್ಲೊಂದು ಎಂಬ ವಿಶ್ಲೇಷಣೆ ಇದಕ್ಕೆ




ಪ್ರಜಾವಾಣಿ ಮಾರ್ಚ್ ೪, ೧೯೭೭ ಚಿತ್ರ ಸಂಖ್ಯೆ ೩.೦೩.

(ಚಿತ್ರ-೩)

ಪೂರಕವಾಗಿದೆ. ಈ ಜಾಹೀರಾತು ಸಮಾಜದಲ್ಲಿನ ಭೂ ರಹಿತ ವರ್ಗಗಳ ಆಶಯವನ್ನು ಬಿಂಬಿಸುತ್ತಿದ್ದು, ಭೂ ಒಡೆತನ ಪಡೆಯುವ ಆಕಾಂಕ್ಷೆ ಪ್ರತಿಕ್ರಿಯೆಯ ರೂಪದಲ್ಲಿ ಚುನಾವಣಾ ಫಲಿತಾಂಶದಲ್ಲಿ ವ್ಯಕ್ತವಾಗಿದೆ.

*** *** ***

ಭೂಮಿಯ ಮಾಲಿಕತ್ವಕ್ಕಾಗಿ ನಿರಂತರವಾಗಿ ಸಂಘರ್ಷ ಬೇರೆ ಬೇರೆ ರೂಪಗಳಲ್ಲಿ ಪ್ರಕಟವಾಗುವುದು. ೧೯೭೪ರ ಭೂ ಸುಧಾರಣಾ ಕಾಯ್ದೆಯಿಂದ ಭೂ ಒಡೆತನ ಹೊಂದಿದವರ ಸಂಖ್ಯೆ ವಿಸ್ತೃತವಾಯಿತು. ಈ ಪ್ರಕ್ರಿಯೆಗೆ ಸಮಾಜದೊಳಗೆ ಕಂಡುಬಂದ ವಿರೋಧಿ ಪ್ರತಿಕ್ರಿಯೆಗಳು ಮುಖ್ಯವಾಗಿವೆ. 'ಪೀಪಲ್ಸ್ ಫೋರಮ್' ನ 'ಇನ್ ದ ನೇಮ್ ಆಫ್ ಲ್ಯಾಂಡ್ ರಿಫಾರ್ಮ್' ಎಂಬ ಅಂಕಣ ಸಮಕಾಲೀನವಾಗಿ ಪ್ರಕಟವಾಗುತ್ತಿತ್ತು. ಇದರಲ್ಲಿ ಭೂ ಸುಧಾರಣೆ ಕಾಯ್ದೆ ಕಾರ್ಯಾಚರಣೆ, ಪರಿಣಾಮಗಳ ಬಗೆಗೆ ವಾಚಕರ ಅಭಿಮತಗಳನ್ನು ನೋಡಬಹುದು. ಇವುಗಳಲ್ಲಿ 'ಇನ್‌ಜಸ್ಟೀಸ್ ಟು ಸ್ಮಾಲ್ ಲ್ಯಾಂಡ್ ಓನರ್ಸ್' ಎಂದು ವ್ಯಕ್ತವಾಗಿರುವ ಪ್ರತಿಕ್ರಿಯೆಯು[೩೦] ಗಮನಾರ್ಹವಾಗಿದ್ದು, ಅದರ ಸಾರ ಹೀಗಿದೆ: '೧೯೭೪ರಲ್ಲಿ ಭೂ ಸುಧಾರಣಾ ಕಾಯ್ದೆ ಜಾರಿಗೊಂಡ ತರುವಾಯ, ಅಲ್ಲಿಯವರೆವಿಗೂ ಉತ್ತಮವಾಗಿದ್ದ ಗೇಣಿದಾರ ಮತ್ತು ಭೂ ಮಾಲಿಕನ ಸಂಬಂಧದಲ್ಲಿ ಬಿರುಕು ಕಂಡುಬರುತ್ತಿದೆ. ಮನೆಯವನಂತಿರುತ್ತಿದ್ದ ಗೇಣಿದಾರರು ಕಣ್ಣು ಮುಚ್ಚಿ ಅರ್ಜಿ ಹಾಕುವ ಮೂಲಕ ವ್ಯಕ್ತಿಯ ನಂಬಿಕೆಗಳು ಕಳೆದುಹೋಗುತ್ತಿವೆ. ಇದರಿಂದಾಗಿ ಸಣ್ಣ ಭೂ ಮಾಲಿಕರಿಗೆ ಆಗುತ್ತಿರುವ ಅನ್ಯಾಯದ ಕುರಿತು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಜೊತೆಗೆ ಕೃಷಿ ಉತ್ಪನ್ನ

ಹೆಚ್ಚಿಸಲು ಕೃಷಿ ಭೂಮಿಯ ಮಾಲಿಕತ್ವ ಬದಲಾಯಿಸುವ ಅಗತ್ಯವಿಲ್ಲ. ಹಾಗೆಯೂ ಮಾಡಲು ಸಾಧ್ಯ' ಎಂದು ಸರ್ಕಾರಕ್ಕೆ ಸಲಹೆ ಸಹ ನೀಡಿರುವರು. ಈ ಪ್ರತಿಕ್ರಿಯೆ ಭೂಮಿ ಕಳೆದುಕೊಂಡ ಮಧ್ಯಮ, ಮೇಲ್‌ಮಧ್ಯಮ ವರ್ಗದವರಲ್ಲಿ ಕಾಣಸಿಗುವ ಸಾಮಾನ್ಯ ಅಭಿಮತ. ಕಾಯ್ದೆಯಿಂದ ಭೂಮಿಯನ್ನು ಉಳಿಸಿ ಕೊಳ್ಳಲು ಸಾಕಷ್ಟು ಹಣ ವ್ಯಯ ಮಾಡಿರುವ ಸಣ್ಣ ಭೂ ಮಾಲಿಕ ವರ್ಗದ ಪ್ರತಿನಿಧಿ ಬರೆದ ಪತ್ರವಿದು. ಕಾಯ್ದೆ ಜಾರಿಯ ಪರಿಣಾಮ ಸ್ವಲ್ಪ ಮಟ್ಟದಲ್ಲಿ ತಟ್ಟಲು ಸಾಧ್ಯವಾಗಿದ್ದು, ಈ ವರ್ಗದವರಿಗೇ ಆಗಿದೆ. ದೊಡ್ಡ ಭೂ ಮಾಲಿಕರಿಗೆ ಕಾಯ್ದೆ ಪರಿಣಾಮಕಾರಿಯಾಗಿರಲಿಲ್ಲ. ಈ ಮೇಲಿನ ಪ್ರತಿಕ್ರಿಯೆಗಿಂತ ಭಿನ್ನವಾದ ಪ್ರತಿಕ್ರಿಯೆ ಯನ್ನು 'ಲ್ಯಾಂಡ್ ಟ್ರಿಬ್ಯೂನಲ್ಸ್ ಅಟ್ ವರ್ಕ್'ನಲ್ಲಿ ಕಾಣಬಹುದು. ನ್ಯಾಯಾಲಯವು ಭೂ ನ್ಯಾಯ ಮಂಡಳಿಯಲ್ಲಿರುವ ಅಧಿಕಾರೇತರ ವರ್ಗವನ್ನು ಪ್ರಶ್ನಿಸಿದ್ದನ್ನು ವಿರೋಧಿಸಿರುವುದು. ಈ ಪ್ರತಿಕ್ರಿಯೆ ನೀಡಿರುವವರು ಸಮಾಜವಾದಿ ಹಿನ್ನೆಲೆಯ ಶಾಸಕರಾಗಿರುವುದು ಮುಖ್ಯವಾಗಿದೆ. ಭೂ ಸುಧಾರಣಾ ಕಾನೂನಿನ ಜಾರಿಗಾಗಿ ಹೋರಾಟಗಳಲ್ಲಿ ತೊಡಗಿಕೊಂಡಿದ್ದ ವ್ಯಕ್ತಿ ಎಂಬುದು ಗಮನಾರ್ಹ. ಪತ್ರಿಕೆಯಲ್ಲಿ ಕಂಡುಬಂದ ಪ್ರತಿಕ್ರಿಯೆಗಳು ಭೂ ಒಡೆತನದ ಬದಲಾವಣೆಗೆ ಸಮಾಜದಲ್ಲಿ ವ್ಯಕ್ತವಾದ ವಿರೋಧ, ಅಸಮಾಧಾನ ವರ್ಗದಿಂದ ವರ್ಗಕ್ಕೆ ಬೇರೆ ಬೇರೆ ರೂಪದಲ್ಲಿರುವುದು ಗಮನ ಸೆಳೆಯುವುದು. ತುರ್ತುಪರಿಸ್ಥಿತಿ ಕಾಲದಲ್ಲಿ ಮುಕ್ತವಾಗಿ ಕಾಣಿಸಿಕೊಳ್ಳದಿದ್ದ ಪ್ರತಿಕ್ರಿಯೆಗಳು, ತುರ್ತುಪರಿಸ್ಥಿತಿ ನಂತರ ಮುಕ್ತವಾಗಿ ಪ್ರಕಟವಾಗತೊಡಗಿತ್ತು. ಇಂತಹ ವಿಚಾರಗಳನ್ನೇ ಸಾಹಿತ್ಯದಲ್ಲಿಯೂ ಕಾಣಬಹುದು. ಇದು ಭೂ ಸುಧಾರಣೆಯ ಪರಿಣಾಮಗಳ ಸ್ವರೂಪವನ್ನು ವಿಸ್ತೃತಗೊಳಿಸುವುದು.

### ೨.೨.೨.೨. ಸಾಹಿತ್ಯ: ಭೂಮಿಯ ಕನಸು ಮತ್ತು ಭೂ ಒಡೆತನ

ಭೂ ಒಡೆತನದ ಕನಸು ಎಲ್ಲ ಸಮಾಜಗಳಲ್ಲಿಯೂ ಕಂಡುಬರುವ ಬಹುತೇಕರ ಆಶಯವಾಗಿರುವುದು. ಭೂಮಿಯ ಮೇಲಿನ ಮಾಲಿಕತ್ವಕ್ಕಾಗಿ ನಿರಂತರವಾದ ಹೋರಾಟ ಅನೇಕ ಸ್ವರೂಪಗಳಲ್ಲಿ ಹಾಗೂ ಪ್ರಮಾಣಗಳಲ್ಲಿ ನಡೆಯುವುವು. ರಾಜಕಾರಣ ಮತ್ತು ಸಾಮಾಜಿಕ ವ್ಯವಸ್ಥೆಯನ್ನೇ ಪಲ್ಲಟಗೊಳಿಸುವಷ್ಟು ಇವು ಶಕ್ತಿಯುತವಾಗಿರುವುವು. ರಾಜಕೀಯ ವಿಪ್ಲವ, ಬದಲಾವಣೆಗಳು ಭೂ ಒಡೆತನದ ಮೇಲೆ ಬೀರುವ ಪ್ರಭಾವ ಮತ್ತು ಪರಿಣಾಮ ಅಪಾರವಾದುದು. ಭೂ ಕಾಯ್ದೆಯ ಬೇರುಗಳ ಮೂಲವು ವರಮಾನದ ಉತ್ಪನ್ನ ಮತ್ತು ಭಾವನೆಗಳ ನಡುವೆ ಸಂಬಂಧ ಹೊಂದಿದೆ. ಹಾಗಾಗಿ ಕೆಲವೊಮ್ಮೆ ಆರ್ಥಿಕ ನೆಲೆಯಲ್ಲಿ, ಮತ್ತೆ ಕೆಲವೊಮ್ಮೆ ಸಾಮಾಜಿಕ ನ್ಯಾಯವಾಗಿ, ಇನ್ನೂ ಕೆಲವೊಮ್ಮೆ ಭಾವನಾತ್ಮಕವಾಗಿ ನಿರಂತರವಾಗಿ ಸಾಹಿತ್ಯದಲ್ಲಿ ಭೂ ಒಡೆತನದ ನೆಲೆಯನ್ನು ಕಾಣಬಹುದು. ಕನ್ನಡ ಸಾಹಿತ್ಯದಲ್ಲಿ ಭೂ ಸುಧಾರಣಾ ಕಾಯ್ದೆಗೆ ಸಮಾಜದಲ್ಲಿ ಮೂಡಿಬಂದ ಪ್ರತಿಕ್ರಿಯೆಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ. 'ಭೂಮಿ ಕೇಂದ್ರವಾಗಿ' ಬಂದ ಸಾಹಿತ್ಯದಲ್ಲಿರುವ ಸಮಾಜದ ಪ್ರತಿಕ್ರಿಯೆಗಳ ರೂಪಗಳನ್ನು ಅವಲೋಕಿಸುವ ಪ್ರಯತ್ನ ಮಾಡಿದೆ. ೧೯೭೦ ರಿಂದ ೧೯೮೫ರವರೆಗೆ ಪ್ರಕಟಗೊಂಡ ಸಾಹಿತ್ಯವನ್ನು ಸಮಕಾಲೀನ ರಾಜಕಾರಣ ಹಾಗೂ ಸಾಹಿತಿಯ ಸೈದ್ಧಾಂತಿಕ ನೆಲೆಯಲ್ಲಿ ಗಮನಿಸಲು ಪ್ರಯತ್ನಿಸಲಾಗಿದೆ.

ಭೂ ಒಡೆತನ ಮತ್ತು ಸಾಂಪ್ರದಾಯಿಕ ಸಂಬಂಧಗಳ ರೂಪದಲ್ಲಿ 'ಭೂ ಶಾಸನ'ದಿಂದಾದ ಬದಲಾವಣೆಗಳು ಗಮನ ಸೆಳೆಯುವುದು. ಸಮಾಜದೊಳಗಿದ್ದ ಚಿಂತನೆಗಳು, ಭಾವನೆಗಳು, ಆಶಯಗಳು ಸಾಹಿತ್ಯದಲ್ಲಿ ಪಡೆದುಕೊಂಡ ರೂಪದ ಹಲವಾರು ಆಯಾಮಗಳನ್ನು ಸೆರೆಹಿಡಿದಿಡುವುದು. ಜಮೀನ್ದಾರ, ರೈತ, ಗೇಣಿದಾರ, ಕೃಷಿ ಕೂಲಿಕಾರ್ಮಿಕರು ಭೂಮಿಯೊಂದಿಗೆ ಹೊಂದಿರುವ ಸಂಬಂಧ, ಈ ವರ್ಗಗಳ ನಡುವಿನ ಸಂಬಂಧದ ಸ್ವರೂಪದಲ್ಲಾದ ಬದಲಾವಣೆಗಳು ಸಾಹಿತ್ಯದಲ್ಲಿ ಕೇಂದ್ರ ಬಿಂದುವಾಗಿ ಅಭಿವ್ಯಕ್ತವಾಗಿದೆ. ಭೂ ಒಡೆತನಕ್ಕೆ ನೇರವಾಗಿ ವಿರೋಧ ೧೯೭೪ ರಿಂದ ೧೯೭೫ರವರೆಗೆ ಕಂಡುಬಂದರೆ, ೧೯೭೭ರ ನಂತರ ನಿಶ್ಶಬ್ಧ ಯುದ್ಧ ರಾಜಕಾರಣದಲ್ಲಿ ಕಂಡುಬರುವುದು. ಸಾಹಿತ್ಯದಲ್ಲಿ ಇದಕ್ಕೆ ಪೂರಕವಾಗಿ ಹಾಗೂ ಭಿನ್ನವಾದ ಪ್ರತಿಕ್ರಿಯೆ ಕಾಣಸಿಗುವುದು.

'ಜೀತ ವಿಮುಕ್ತನಾದ ಹಳ್ಳಿಯ ಬೋರೇಗೌಡನ ಮುಖದಲ್ಲಿ ಮಿನುಗುವ ಮಿಂಚು ಸಾಹಿತ್ಯದಲ್ಲಿ ಮೂಡಿ ಬರಬೇಕು. ಕಾವ್ಯದಲ್ಲಿ ಇಳಿದು ಬರಬೇಕು. ಒಂದು ಕಾಲಕ್ಕೆ ಗೇಣಿದಾರನ ಅಸಹ್ಯ ಬದುಕು ಇಂದು ಒಂದು ಹಂತಕ್ಕೆ ಮುಟ್ಟಿದ್ದನ್ನು ಶ್ರೀ ಸಾಮಾನ್ಯನಿಗೆ ಸಮರ್ಥ ರೀತಿಯಲ್ಲಿ ತಿಳಿಸುವ ಚಿತ್ರಣ ಕಾದಂಬರಿಗಳ ಕಥಾವಸ್ತು ಆಗಬೇಕು' ಎಂದು ಕನ್ನಡ ಸಾಹಿತ್ಯ ಸಮ್ಮೇಳನದ(ಧರ್ಮಸ್ಥಳ-೧೯೭೯) ಭಾಷಣದಲ್ಲಿ ಸಾಹಿತಿಯೊಬ್ಬರ ಮಾತಾಗಿದೆ. ಭೂ ಸುಧಾರಣೆಯ ಮೂಲಕ ಉಂಟಾಗ ಬಯಸಿದ್ದ ಆಶಯ ಹಾಗೂ ಕಾಯ್ದೆ ಜಾರಿಯು ಸಫಲಗೊಂಡಿದೆ ಎಂಬ ಅಭಿಮತ ಇದರಲ್ಲಿದೆ. ಇಂಥ ಅಭಿಪ್ರಾಯ ಬಹುತೇಕವಾಗಿ ಪತ್ರಕರ್ತರು, ಸಮಾಜವಾದಿಗಳು ಮತ್ತು ಸಾಹಿತಿಗಳು ವ್ಯಕ್ತಪಡಿಸುವುದು ಸಾಮಾನ್ಯವಾಗಿ ಕಂಡುಬರುವುದು. ಅದೇ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನವನ್ನು(೧೯೭೯) ವಿರೋಧಿಸಿ, ಹೊಸ ರೀತಿಯ ಸಾಹಿತ್ಯ ಪಂಥ ಬೆಳೆಸಬೇಕೆಂಬ ಮನೋಭಾವ ಮೂಡಿಬರುವುದನ್ನು ಗಮನಿಸುವುದು ಅಗತ್ಯ. ಈ ವಲಯದ ಸಾಹಿತಿಗಳಲ್ಲಿ ಮೇಲಿನ ಚಿಂತನೆ ಕಂಡುಬರುವುದು ಕಡಿಮೆಯಾಗಿದೆ. ಭೂಮಿಯ ಒಡೆತನಕ್ಕಾಗಿ ಸಮಾಜದ ಕೆಳವರ್ಗ ಮತ್ತು ಜಾತಿಗಳಲ್ಲಿ ಇರುವ ತುಡಿತ, ಅಸಹಾಯಕತೆ, ಆದರ ಅಗತ್ಯವು ಹಸಿವು, ನಿರುದ್ಯೋಗ, ಸ್ವಾಭಿಮಾನ ಮೊದಲಾದ ರೂಪಗಳಲ್ಲಿ ವ್ಯಕ್ತಗೊಂಡಿದೆ.

ಭೂ ಸಂಬಂಧಿ ಸಾಹಿತ್ಯ ಕವನ ರೂಪದಲ್ಲಿ ಕಡಿಮೆಯಿದ್ದು, ಕಥೆ, ಕಾದಂಬರಿ, ನಾಟಕ ಮೊದಲಾದ ರೂಪದಲ್ಲಿ ಅಧಿಕವಾಗಿದೆ. ಇದರೊಂದಿಗೆ ಭೂ ಒಡೆತನ ಕುರಿತ ಕವನ, ಲೇಖನಗಳಲ್ಲಿ ಶಿವರಾಮ ಕಾರಾಂತರ 'ಚೋಮ' ಮತ್ತೆ ಮತ್ತೆ ಬರುವುದು ಭೂ ಒಡೆತನದ ಕನಸು ಪೂರ್ಣಗೊಳ್ಳದಿರುವುದನ್ನು ಸೂಚಿಸುವುದು. ಉದಾಹರಣೆಗೆ, ದಲಿತ ಕವಿ ಸಿದ್ಧಲಿಂಗಯ್ಯನವರ 'ಚೋಮನ ಮಕ್ಕಳ ಹಾಡು', ಸಿದ್ಧಲಿಂಗಯ್ಯನವರ(ಹಿರಿಯ ಕವಿ) ಮುಖಾಮುಖಿ ಕವನ ಸಂಕಲನದ 'ನೀನು ಚೋಮ ಅಲ್ಲ', ಮುಝಾಫರ್ ಅಸ್ಸಾದಿ ಅವರ 'ಚೋಮನದುಡಿಯ ಚೋಮ ಮತ್ತು ಗ್ರೆಗೋರಿ ಪರ್ತಾವೋ: ಮತ್ತೆ ನೆನಪಾಗುವ ದೇವರಾಜ ಅರಸು' ಮೊದಲಾದವನ್ನು ನೋಡಬಹುದು. ಭೂ ಸುಧಾರಣೆ ಕುರಿತ ಚರ್ಚೆ ಮತ್ತು ವಿಮರ್ಶೆಗಳು ಆರಂಭದಿಂದಲೂ ಸಾಹಿತ್ಯಿಕ ನಿಯತಕಾಲಿಕೆಗಳಲ್ಲೇ ಅಧಿಕ ಪ್ರಮಾಣದಲ್ಲಿ ಪ್ರಕಟಗೊಂಡಿದೆ. ಇದು ಕನ್ನಡ ಭಾಷಾ ಸಾಹಿತಿಗಳು ಮತ್ತು ಸಾಮಾಜಿಕ ಬದ್ಧತೆಯನ್ನು ಸಮಕಾಲೀನ ರಾಜಕೀಯ ಚೌಕಟ್ಟಿನಲ್ಲಿ ನೋಡುವ ಕ್ರಮಕ್ಕೆ ಒತ್ತು ಕೊಡುವುದು.

ಭೂ ಸುಧಾರಣೆಯ ಹೋರಾಟಗಳು ಮತ್ತು ಕಾಯ್ದೆ ಜಾರಿ ತರುವ ಚರ್ಚೆಗಳು ೧೯೭೦ರ ದಶಕದ ಆರಂಭದಲ್ಲಿ ರಾಷ್ಟ್ರದಾದ್ಯಂತ ತೀವ್ರತೆಯನ್ನು ಪಡೆದುಕೊಂಡಿತ್ತು. ಆ ಕಾಲಘಟ್ಟದ ಭೂ ಹೋರಾಟದ ಪ್ರಭಾವ ಅನಂತಮೂರ್ತಿ ಅವರ *ಭಾರತೀಪುರ(೨೦೦೨)* ಮತ್ತು *ಅವಸ್ಥೆ(೨೦೦೪)* ಕಾದಂಬರಿಗಳಲ್ಲಿ ಭೂಮಿಯ ಒಡೆತನ ಮತ್ತು ರೈತರ ಪ್ರಶ್ನೆಗಳಾಗಿ ಮೂಡಿದೆ. ಈ ಕಾದಂಬರಿಗಳಲ್ಲಿ ಸಾಮಾಜಿಕ ವ್ಯವಸ್ಥೆಯ ಪರಂಪರೆ ಮತ್ತು ಮೌಲ್ಯಗಳು, ಸಮಕಾಲೀನ ರಾಜಕಾರಣ ಹಾಗೂ ವಾಸ್ತವಗಳೊಂದಿಗೆ ಮುಖಾಮುಖಿಯಾಗಿದೆ. ಭಾರತೀಪುರದಲ್ಲಿ ಚಿತ್ರಿತವಾಗಿರುವ ಭೂ ಸುಧಾರಣೆ ಕುರಿತ ವಿಮರ್ಶೆಗಳು ಹೀಗಿದೆ:

> ಹರಿಜನರನ್ನೊಳಗೊಂಡು ನಮ್ಮ ದೇಶದ ಬಹುತೇಕ ಕೀಳುಜಾತಿಗಳ ಬಹುತೇಕ ಜನ ಹಳ್ಳಿಗಳಲ್ಲಿ ಭೂಹೀನ ಕೃಷಿ ಕಾರ್ಮಿಕ ಆಗಿರುವುದು, ವಂಚನೆಯ ಭೂ ಸುಧಾರಣೆಗಳ ದೆಸೆಯಿಂದ ... ತಮಗೆ ಅನುಕೂಲವಾಗಿರುವ ಭೂ ಸುಧಾರಣೆ, ಇವುಗಳಿಂದ ಹಳ್ಳಿಯ ಊಳಿಗಮಾನ್ಯ ಜಮೀನ್ದಾರರು ಈಗ ಕೃಷಿಕಾರ್ಮಿಕರನ್ನು ದುಡಿಸುವ ಹಳ್ಳಿಯ ಬಂಡವಾಳಶಾಹಿಗಳಾಗುತ್ತಿರುವುದು. ಅಂದರೆ ಒಟ್ಟಿನಲ್ಲಿ ಗ್ರಾಮೀಣ ಪಾಳೇಗಾರಿಕೆ ಅರ್ಥ ವ್ಯವಸ್ಥೆ ಈಗ ನಿಧಾನವಾಗಿ ಬಂಡವಾಳಶಾಹಿಯಾಗಿ ಮಾರ್ಪಡುತ್ತಿರುವುದು ... ಜೊತೆಗೆ ಈ ದೇಶದ ರಾಜಕೀಯದಲ್ಲಿ ಅರ್ಥಪೂರ್ಣವಾಗಿರುವ ತೆಲಾಂಗಣ ಚಳವಳಿ, ಕೇರಳ ಮತ್ತು ಬಂಗಾಳ ಕಮ್ಯುನಿಸ್ಟ್ ಸರಕಾರಗಳ ಅನುಭವಗಳು, ದುರಂತದಲ್ಲಿ ಕೊನೆಗೊಂಡ ನಕ್ಸಲೀಯ ಚಳುವಳಿ ಇವುಗಳ ಮೂಲದಲ್ಲಿ ನ್ಯಾಯಬದ್ಧ ಭೂ ಒಡೆತನದ ಪ್ರಶ್ನೆಗಳೆ ಆಗಿವೆ ... ಭೂಮಿಯ ನ್ಯಾಯಬದ್ಧ ಒಡೆತನದ ಪ್ರಶ್ನೆ ಬಗೆಹರಿಯಬೇಕಾದದ್ದು ಪ್ರಜಾಸತ್ತಾತ್ಮಕ ಹೋರಾಟದ ಮುಖಾಂತರವೆ ಮತ್ತು ಪ್ರಜಾಸತ್ತಾತ್ಮಕ ಹೋರಾಟಗಳಿಗೆ ತುಳಿಯಲ್ಪಟ್ಟವರಲ್ಲಿ ಪ್ರಜಾಸತ್ತಾತ್ಮಕ ಒತ್ತಾಸೆಗಳಿರಬೇಕಾಗುತ್ತದೆ. ಈ ದೇಶದ ಭೂ ಸುಧಾರಣೆಗಳು ... ತಮ್ಮ ಅಧಿಕಾರದ ಪ್ರಚಾರದ ರಾಜಕೀಯಕ್ಕೆ ಬಳಸಿಕೊಂಡ ತಂತ್ರಗಳಾಗಿದ್ದು ನೈಜ ಭೂ ಸುಧಾರಣೆಗೆ ಈ ದೇಶದ ಕೃಷಿ ಕಾರ್ಮಿಕರಿಂದ ಯಾವುದೆ ಪ್ರಜಾಸತ್ತಾತ್ಮಕವಾದ ಹೋರಾಟ ನಡೆಯದೆ ಇರುವುದರಿಂದ, ಇವು ಅವರ

ಪಾಲಿಗೆ ವಂಚನೆಯಲ್ಲಿ ಕೊನೆಗೊಂಡಿವೆ. ಕಾದಂಬರಿಯ ನಾಯಕನ ಉದ್ದೇಶ ಹರಿಜನರನ್ನು ಭಾರತೀಯ ಸಂದರ್ಭದಲ್ಲಿ ಇಂಥ ಪ್ರಜಾಸತ್ತಾತ್ಮಕ ಹೋರಾಟಕ್ಕೆ ತಯಾರು ಮಾಡುವುದಾಗಿದೆ (ರಾಜಶೇಖರ್ ೧೯೭೫: ೧೦೬-೧೦೭).

ಕಾದಂಬರಿಯಲ್ಲಿ ಭೂ ಒಡೆತನದ ಬೇರುಗಳನ್ನು, ಅದರ ಸ್ವರೂಪದಲ್ಲಿ ಉಂಟಾಗಬೇಕಾದ ಬದಲಾವಣೆಗೆ ಪ್ರಜಾಸತ್ತಾತ್ಮಕ ಹೋರಾಟಗಳ ಅಗತ್ಯಕ್ಕೆ ಒತ್ತು ನೀಡಲಾಗಿದೆ ಎಂಬುದರ ಪರ ಇರುವ ಅಭಿಪ್ರಾಯವಿದು. ಭೂ ಸುಧಾರಣೆ ಪ್ರಜಾಸತ್ತಾತ್ಮಕ ಹೋರಾಟವಾಗಿರಬೇಕು ಎಂಬುದಕ್ಕೆ ಒತ್ತು ಕೊಟ್ಟಿರುವುದನ್ನು ನೋಡ ಬಹುದು. ಭೂ ಒಡೆತನದ ಸ್ವರೂಪದಲ್ಲಿ ಆಳವಾಗಿರುವ ಪ್ರಜಾಪ್ರಭುತ್ವದ ಬೇರುಗಳು ೧೯೭೦ರ ದಶಕದಲ್ಲಿ ಕಂಡುಬಂದ ಅನೇಕ ಹೋರಾಟಗಳು, ರಾಜಕೀಯ ಸ್ಥಿತ್ಯಂತರಗಳಿಗೆ ಪೂರಕವಾಗಿದೆ.

ಭೂಮಿ ಒಡೆತನದ ರಾಜಕಾರಣ *ಅವಸ್ಥೆಯಲ್ಲಿ(೨೦೦೪)* 'ಗೇಣಿ ಶಾಸನದ ಬಗ್ಗೆ ನನ್ನ ತಿಳುವಳಿಕೆ ಅಲ್ಪವಾಗಿತ್ತೆಂದೂ, ಬಲಾಚ ಪೃಥವೀ ಎನ್ನುವ ತತ್ವ ಈಗ ಸಲ್ಲದೆಂದೂ, ಕೃಷ್ಣಪ್ಪಗೌಡರ ಹೋರಾಟದಿಂದ ಈಗ ತಾನೂ ಕೂಡ ಮಠದ ಸ್ವಲ್ಪ ತೋಟದ ಮಾಲಿಕನಾಗುವುದು ಸಾಧ್ಯವಾಯಿತೆಂದೂ, ಸ್ವಾಮಿಗಳಿಗೂ ತನಗೂ ಈಗ ಅಷ್ಟಕಷ್ಟೆ ಎಂದು ನರಸಿಂಹ ಭಟ್ಟ ಹೇಳಿದ' ಎಂದು ಗೇಣಿ ಶಾಸನದ ರಾಜಕಾರಣವನ್ನು ಚಿತ್ರಿಸಲಾಗಿದೆ. ಈ ಸಂಬಂಧ ಬಲವಿದ್ದವನು ಭೂ ಒಡೆತನ ಪಡೆಯುತ್ತಾನೆ ಎಂಬ ವಾಸ್ತವ ಸಂಗತಿಯನ್ನು ಕೃಷ್ಣಪ್ಪನ ಬಾಯಿಂದ ಹೇಳಿಸಲಾಗಿದೆ ಎಂದು ಮಲ್ಲಿಕಾರ್ಜುನ ಕೂಡ್ಲಿಗೆರೆ ಅವರು ವಿಶ್ಲೇಷಿಸುವರು. ಕಾದಂಬರಿ ಉದ್ದಕ್ಕೂ ಭೂ ಸುಧಾರಣಾ ಕಾಯ್ದೆ ಮತ್ತು ರೈತರ ಅಭಿವೃದ್ಧಿ ರಾಜಕಾರಣ ಮುಖ್ಯವಾಗಿದೆ. ಭೂ ಸುಧಾರಣೆ ಹಾಗೂ ಸಮಕಾಲೀನ ರಾಜಕಾರಣವನ್ನು ಚರ್ಚಿಸಲು ಈ ಕಾದಂಬರಿಗಳು ಸಾಕಷ್ಟು ಅವಕಾಶಗಳನ್ನು ಸೃಷ್ಟಿಸಿತು.

ಅನೇಕ ಸಾಹಿತಿಗಳ ಕಥೆಗಳಲ್ಲಿಯೂ ಭೂ ಒಡೆತನ ಮತ್ತು ಅದರ ಸಂಬಂಧಗಳು ಹಲವಾರು ರೂಪಗಳಲ್ಲಿ ಒಳಹೊಕ್ಕಿದೆ. ದೇವನೂರು ಮಹಾದೇವ ಅವರ ಕಥೆಗಳಲ್ಲಿ ಸಾಮಾನ್ಯವಾಗಿ ಹಸಿವು ಮತ್ತು ಶೋಷಣೆ ಪ್ರಧಾನವಾಗಿದೆ. ಒಳನೋಟದಲ್ಲಿ ಇದು ಭೂಮಿಯ ಒಡೆತನ ಹಾಗೂ ಭೂಮಿಯೊಡನೆ ದಲಿತರ ಸಂಬಂಧದ ಚಿತ್ರಣದ ಮತ್ತೊಂದು ಚಿತ್ರವಾಗಿದೆ. ಭೂಮಿಯ ಮೇಲೆ ಹಕ್ಕು ಸ್ಥಾಪಿಸುವ, ಕೌಟುಂಬಿಕ ನೆಲೆಯಲ್ಲಿ ಭೂಮಿಯ ಸಂಬಂಧ ಕಂಡುಬರುವ, ದಲಿತರ ಭೂಮಿ ಹೋರಾಟದ ವಿವರಗಳನ್ನು 'ಒಡಲಾಳ' ಮತ್ತು 'ಕುಸುಮಬಾಲೆ'ಗಳಲ್ಲಿ ಕಾಣಬಹುದು. 'ಭೂಮಿಗಾಗಿ ನೇರ ಹೋರಾಟ ಮೇಲ್ನೋಟದಲ್ಲಿ ಇಲ್ಲ ವಾದರೂ, ಅದು ದಲಿತರ ಬದುಕಿನ ಭಾಗವಾಗಿ ಮತ್ತು ಭೂ ಒಡೆತನದ ಆಶಯವಾಗಿ ವ್ಯಕ್ತವಾಗುವುದು ಕಂಡುಬರುತ್ತದೆ' ಎಂದು ಮಲ್ಲಿಕಾರ್ಜುನ ಕೂಡ್ಲಿಗೆರೆ ಅವರು ಗುರುತಿಸುವರು. ೧೯೭೦ ದಶಕದ ಆರಂಭ ದಿಂದ ಭೂಮಿ ಮತ್ತು ದಲಿತರ ಸಂಬಂಧಗಳೊಳಗಿರುವ ಸೂಕ್ಷ್ಮ ಭಾವನೆಗಳನ್ನು, ಹುಟ್ಟುಹಾಕಿದ ಕನಸು ಮತ್ತು ನಿರಾಶೆಗಳನ್ನು ಇವು ತೆರೆದಿಡುವುದು. ಕಾನೂನಿನ ಮೂಲಕ ಸಮಾಜದ ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ಕಂಡುಬರತೊಡಗಿದ್ದ ಬದಲಾವಣೆಗಳು, ಭೂ ಮಾಲಿಕ ವರ್ಗದಲ್ಲಿ ಹುಟ್ಟುಹಾಕಿದ್ದ ಆತಂಕ, ಭಯ-ಅಭದ್ರತೆ ಪ್ರಕಟಗೊಂಡ ಅನೇಕ ಮುಖಗಳನ್ನು ಊರಿನ ಪ್ರಮುಖರು, ಮೇಲ್ಜಾತಿಯವರ ಮಾತುಗಳಲ್ಲಿ ನೋಡಬಹುದಾಗಿದೆ. ಇದರೊಂದಿಗೆ ದಲಿತ ವರ್ಗದೊಳಗೇ ಇರುವ ತಲೆಮಾರಿನ ನಡುವಿನ ಆಲೋಚನೆಗಳ ಭಿನ್ನತೆಯನ್ನು ಸಹ ತೆರೆದಿಡುವುದು. ಉದಾಹರಣೆಗೆ, ಕುಂ.ವೀರಭದ್ರಪ್ಪನವರ ಕಥೆಗಳಾದ 'ಕಪ್ಪು ನೆಲದಲ್ಲೊಂದು ಕೆಂಪು ಕತೆ', 'ಡೋಮ', 'ಪರ್ಯಾವಸನ', 'ಕೊಟ್ರ ಹೈ ಸ್ಕೂಲಿಗೆ ಸೇರಿದ್ದು' ಮೊದಲಾದವುಗಳಲ್ಲಿ ಸಾಮಾಜಿಕವಾಗಿ ಕೆಳಸ್ತರದ ಜನಗಳಲ್ಲಿ, ಭೂಮಿ ಒಡೆತನದ ಸ್ವಾಭಿಮಾನ ಸಮಾಜದಲ್ಲಿ ಉಂಟುಮಾಡಿದ ಸಂಚಲನವಿದೆ. ಸರಕಾರದ ಭೂ ಸುಧಾರಣಾ ಕಾನೂನಿನ ಉದ್ದೇಶ, ಕಾನೂನಿನ ಮೂಲಕ ಭೂಮಿ ಪಡೆಯಲು ಗೇಣಿದಾರ, ರೈತರು ಮತ್ತು ದಲಿತವರ್ಗಗಳ ನಡುವಿನ ಹೋರಾಟ, ಯಥಾಸ್ಥಿತಿ ಕಾಪಾಡಲು ಭೂ ಮಾಲಿಕರ ಮತ್ತು ನೌಕರಶಾಹಿಯ ರಾಜಕಾರಣ ಕಾಣಬಹುದು.

ಭೂಮಿ ಹಕ್ಕಿನ ಪ್ರಶ್ನೆಯು ಸಮಾಜದ ವಿವಿಧ ವರ್ಗಗಳಲ್ಲಿ ಗಟ್ಟಿನೆಲೆ ಪಡೆದುಕೊಳ್ಳುವ ಪ್ರಕ್ರಿಯೆಯನ್ನು ಸಾಹಿತ್ಯದಲ್ಲಿ ಗುರುತಿಸಬಹುದಾಗಿದೆ. ಲಿಂಗ ತಾರತಮ್ಯವನ್ನು ಪ್ರಶ್ನಿಸುತ್ತ ಮಹಿಳೆಯ ಆಸ್ತಿ ಹಕ್ಕಿನ ಪ್ರಶ್ನೆಯು ಮೂಡಿಬಂದಿದೆ. ಮಹಿಳೆಯ ಭೂ ಒಡೆತನದ ಪ್ರಶ್ನೆಗಳನ್ನು ವೈದೇಹಿ ಮತ್ತು ವೇದಾ.ಎಂ.ಎಸ್. ಅವರ

ಕಥೆಗಳ ಮೂಲಕ ಅವಲೋಕಿಸುವ ಪ್ರಯತ್ನ ಮಾಡಿದೆ. ವೈದೇಹಿ ಅವರ 'ಹಕ್ಕಿಲ್ಲದವರು' ಕಥೆಯ ನಾಯಕಿ ತನ್ನ ತಂದೆಯ ಭೂಮಿಯನ್ನು ಉಳಿಸಿ, ಬೆಳೆಸಲು ತನ್ನೆಲ್ಲ ಶ್ರಮವನ್ನು ಸುರಿಯುತ್ತಾಳಾದರೂ ಆ ಭೂಮಿಯ ಮೇಲೆ ಕಾನೂನಿನ ಪ್ರಕಾರ ಯಾವ ರೀತಿಯ ಹಕ್ಕಿಲ್ಲದ ವ್ಯಂಗ್ಯವಿದೆ. ೧೯೭೦ರ ಭೂ ಸುಧಾರಣಾ ಕಾಯ್ದೆ ಜಾರಿಗೊಳ್ಳುವ ಪ್ರಕ್ರಿಯೆ ಆರಂಭಗೊಂಡಾಗಿನಿಂದ ಸುಮಾರು ಒಂದು ವರ್ಷದ ಕಾಲ ಮಹಿಳಾ ಸಂಘಟನೆ ಭೂ ಒಡೆತನದ ಸಮಾನ ಹಕ್ಕಿಗಾಗಿ ಹೋರಾಟ ನಡೆಸಿ ವಿಫಲವಾಗಿತ್ತು. ೧೯೭೦ರ ಭೂ ಶಾಸನದ ಮೂಲ ಆಶಯ ದುಡಿಮೆಗಾರನಾದ ಗೇಣಿದಾರ ಭೂಮಿ ಒಡೆಯನಾಗುವುದಾಗಿದ್ದು, ಸಾಂಪ್ರದಾಯಿಕ ನೆಲೆಯಲ್ಲಿ ಭೂ ಒಡೆತನವನ್ನು ಬಹುಪಾಲು ಪುರುಷನೊಂದಿಗೆ ನೋಡಲಾಗಿತ್ತು. ಈ ಕಥೆಯಲ್ಲಿ ಕಂಡುಬರುವ ಹೋರಾಟ ಸರ್ಕಾರ ಅಥವಾ ಕಾನೂನಿನ ವಿರುದ್ಧ ನಡೆಯುವುದಲ್ಲ. ಬದಲಿಗೆ ಮಹಿಳೆ ಕುರಿತ ಸಾಂಪ್ರದಾಯಿಕ ನಿಲುವುಗಳು ವಿರುದ್ಧ. ಸಾಂಪ್ರದಾಯಿಕ ನಿಲುವುಗಳು ಕಾನೂನು ಮತ್ತು ಸಾಮಾನ್ಯ ಜನರ ಜೀವನದಲ್ಲಿ ಪಡೆದುಕೊಳ್ಳುವ ರೂಪಗಳಿವೆ. ವೇದಾ ಅವರ ತಾಯವ್ವನ ಕಥೆಯಲ್ಲಿ ಭೂಮಿಯ ಹಕ್ಕಿನ ಪ್ರಶ್ನೆ ಬಂದಾಗ ಸಾಂಪ್ರದಾಯಿಕ ನಿಲುವಿನ ವಿರುದ್ಧ ಹೋರಾಡಿ, ಹೆಣ್ಣು ಮಕ್ಕಳಿಗೂ ದೊರೆಯಬೇಕೆಂಬ ಬೆಳವಣಿಗೆಯನ್ನು ಕಾಣಬಹುದು. ಭೂಮಿ ಒಡೆತನದ ಪ್ರಶ್ನೆ ಸಮಾಜದ ಸಾಮಾಜಿಕ ಸಂರಚನೆಯಲ್ಲಿ ಸಂಚಲನವನ್ನು ಉಂಟುಮಾಡಿದ್ದಲ್ಲದೆ, ಭೂಮಿ ಪಡೆದ ಭೂ ರಹಿತ ವರ್ಗದಲ್ಲಿ ಸ್ವಾಭಿಮಾನವನ್ನು ಹುಟ್ಟುಹಾಕಿತ್ತು.

ತುರ್ತುಪರಿಸ್ಥಿತಿ ಕಾಲದಲ್ಲಿ ಭೂಸುಧಾರಣ ಕಾಯ್ದೆಯ ಅನುಷ್ಠಾನ, ಗೇಣಿದಾರ ಮತ್ತು ರೈತರ ಇಕ್ಕಟ್ಟು, ಭೂಮಿ ಹಕ್ಕಿಗಾಗಿ ನಡೆಯುವ ಹೋರಾಟಗಳ ವಿವಿಧ ಸ್ವರೂಪವನ್ನು ವಿಶುಕುಮಾರ್‌ರ ಭೂಮಿ ಕಾದಂಬರಿಯಲ್ಲಿ ಕಾಣಬಹುದು. ಕಾದಂಬರಿಯ ಮುನ್ನುಡಿಯಲ್ಲಿ 'ತುರ್ತುಪರಿಸ್ಥಿತಿಯಲ್ಲಿ ತುರ್ತಾಗಿ ಬರೆದ ಹಾಗೆ ಅನ್ನಿಸಿದೆ. ಧಣಿ ಒಕ್ಕಲುಗಳು ತುರ್ತುಪರಿಸ್ಥಿತಿ ಅವಧಿಯಲ್ಲಿ ಭೂ ಮಸೂದೆ ಕಾನೂನಿನ ನೆರಳಲ್ಲಿ ಅನುಭವಿಸಿದ ಹಲವಾರು ಘಟನೆ ಮತ್ತು ವ್ಯಕ್ತಿಗಳ ಚಿತ್ರಣ ಒಂದು ಹಳ್ಳಿಯಲ್ಲಿ ಕ್ರೋಢೀಕರಿಸಿ ಕಾದಂಬರಿಯಾಗಿ ಬಂದಿದೆ. ಕಾದಂಬರಿಯನ್ನು ಕರ್ಮವೀರದಲ್ಲಿ ಓದಿದ ಧಣಿಗಳನೇಕರು ಒಕ್ಕಲುಗಳ ಪರವಾಗಿ ಬರೆದಿದೆ, ಧಣಿಗಳ ಬವಣೆ ಲೇಖಕರಿಗೆ ಇದ್ದಂತಿಲ್ಲ ಎಂದಿದ್ದಾರೆ. ಮನಃಪೂರ್ವಕವಾಗಿ ಎರಡೂ ಬಣಗಳ ಕಷ್ಟನಷ್ಟ ಇಷ್ಟಗಳನ್ನು ನಿರೂಪಿಸಲು ಪ್ರಯತ್ನಿಸಿದ್ದೇನೆ. ಕಾದಂಬರಿ ಬಹುದಿನಗಳವರೆಗೆ ಒಳಗೆಯೆ ಇರಲು ಕಾರಣ, ಇದನ್ನು ಪ್ರಕಟಿಸಲು ಭಯ ಇತ್ತು. ಭೂ ಮಸೂದೆಯ ಸಿಹಿಕಹಿಗಳನ್ನು ಪ್ರಕಟಿಸಿದರೆ ಸರಕಾರದ ವಿರುದ್ಧವಂತೂ ಏನನ್ನೂ ಬರೆಯಲಾರೆ. ಆದರೆ ಪರಿಸರದ ಆಗುಹೋಗುಗಳನ್ನು ಇದ್ದಂತೆ ಬರೆಯುವುದಕ್ಕೆ ಹೆದರಲಾರೆ' ಎಂದು ಇದೆ. ವಿಶುಕುಮಾರ್ ಅವರು ಚರ್ಚಿಸಿರುವ ಸಮಕಾಲೀನ ಪರಿಸ್ಥಿತಿ ಹಾಗೂ ಕಥಾವಸ್ತುವಿನ ಸ್ವರೂಪ ಕುರಿತ ವಿವರಗಳನ್ನು ಒಟ್ಟಾಗಿ ಗಮನಿಸುವುದು ಅಗತ್ಯ. ಕಾದಂಬರಿಯಲ್ಲಿ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿದ್ದ ಭೂ ಸಮಸ್ಯೆಗಳ ಜಟಿಲ ಸ್ವರೂಪ ಕಥಾವಸ್ತುವಾಗಿದೆ. ೧೯೭೦ಳರಲ್ಲಿ ಭೂ ಸುಧಾರಣಾ ಕಾಯ್ದೆ ಹೊಂದಿದ್ದ ಆಶಯ ಮತ್ತು ವಾಸ್ತವದಲ್ಲಿ ಭೂ ನ್ಯಾಯ ಮಂಡಳಿಗಳ ರಾಜಕಾರಣದಿಂದ ಗೇಣಿ ರೈತರಿಗೆ ಭೂಮಿ ದಕ್ಕದೆ ಇರುವಂಥ ವೈರುಧ್ಯಗಳನ್ನು ನೋಡಬಹುದು. ಇಲ್ಲಿ ಗೇಣಿ ಮತ್ತು ರೈತ ಸಮಸ್ಯೆಗಳ ಪ್ರಶ್ನೆ, ಅದರ ವ್ಯಂಗ್ಯವಿದೆ. ಸಮಕಾಲೀನವಾಗಿ ಭೂ ಸುಧಾರಣಾ ಕಾಯ್ದೆ ಅನುಷ್ಠಾನದ ವಾಸ್ತವ ಬಿಕ್ಕಟ್ಟು ಹಾಗೂ ಉಂಟುಮಾಡಿದ ಸಂಚಲನವನ್ನು ಕಾದಂಬರಿ ಅನಾವರಣಗೊಳಿಸುವುದು. ಕಾಯ್ದೆಯಿಂದಾಗಿ ಗೇಣಿದಾರರಿಗೆ ಭೂ ಮಾಲಿಕರ ಎದುರು ನಿಂತು ಮಾತನಾಡುವ ಸ್ವಾಭಿಮಾನ ಮತ್ತು ಧೈರ್ಯ ಒಂದೆಡೆ ಕಂಡುಬಂದರೆ, ಸಮಕಾಲೀನ ಸಾಮಾಜಿಕ ವ್ಯವಸ್ಥೆ ಬದಲಾವಣೆ ಆಗದೆ ಉಳಿಯ ಬೇಕೆಂಬ ಭೂ ಮಾಲಿಕರ ಮನೋಭಾವ, ಅದಕ್ಕಾಗಿ ಮಾಡುವ ಭೂ ಮಾಲಿಕರ ತಂತ್ರಗಳಿಂದ ಹಳ್ಳಿಯ ಎಲ್ಲಾ ವಿಚಾರಗಳಲ್ಲಿಯೂ ಹುಟ್ಟುವ ಸಂಚಲನ ಹಾಗೂ ಪಡೆದುಕೊಳ್ಳುವ ರೂಪವಿದೆ. ಈ ನಿಟ್ಟಿನಲ್ಲಿ

> ಈ ಎರಡೂ ಸನ್ನಿವೇಶಗಳು ಭೂ ಮಸೂದೆಯ ಒಟ್ಟು ಪರಿಣಾಮವನ್ನು ಎತ್ತಿ ತೋರುತ್ತಿವೆ. ಈ ಕಾದಂಬರಿಯ ಭೂ ಮಾಲಿಕತ್ವದ ಯಾಥಾಸ್ಥಿತಿ ವಾದವನ್ನು ಮಂಡಿಸಿದರೆ, ಎರಡನೆಯದು ಹೋರಾಟವು ಜೀವಂತ ಬದುಕಿನ ಅರ್ಥ ಶೋಧಿಸುವ ಆಶಯವಿದೆ. ಪ್ರಜಾಪ್ರಭುತ್ವ ವ್ಯವಸ್ಥೆಯ

> ಭಯ, ಮತ್ತೊಂದೆಡೆ ಭೂ ಮಾಲಿಕರ ಭಯ, ಇನ್ನೊಂದೆಡೆ ರೈತರ ಮೇಲಿನ ಪ್ರೀತಿ ಇಂತಹ ಇಕ್ಕಟ್ಟುಗಳ ನಡುವೆ ಭೂ ಹಕ್ಕಿಗಾಗಿ ಹೋರಾಟ ನಡೆಸುವ ಆಶಯವನ್ನು ಕಾದಂಬರಿ ಧ್ವನಿಸಿದೆ(ಕೂಡ್ಲಿಗೆರೆ ೨೦೦೯: ೩೫೨)

ಎಂಬ ವಿಶ್ಲೇಷಣೆಯನ್ನು ಕಾಣಬಹುದು. ಭೂ ಶಾಸನದ ಪರಿಣಾಮದ ವಿವಿಧ ಆಯಾಮಗಳನ್ನು ನಾ.ಡಿಸೋಜ, ಪಿ.ಲಂಕೇಶ್, ಬರಗೂರು ರಾಮಚಂದ್ರಪ್ಪ, ಬೆಸಗರಳ್ಳಿ ರಾಮಣ್ಣ, ಚೆನ್ನಣ್ಣ ವಾಲೀಕಾರ, ಚಂದ್ರಶೇಖರ ಕಂಬಾರ ಮೊದಲಾವರ ಸಾಹಿತ್ಯದಲ್ಲಿ ವ್ಯಕ್ತಗೊಂಡಿರುವುದನ್ನು ಕಾಣಬಹುದು. ಭೂ ರಾಜ ಕಾರಣದ ಪರಿಣಾಮಗಳು ಸಿನಿಮಾರಂಗದಲ್ಲಿ ಪಡೆದುಕೊಂಡ ರೂಪ ಆಸಕ್ತಿಕರವಾಗಿದ್ದು, ಈ ಸಂಬಂಧ ಪ್ರತ್ಯೇಕ ಅಧ್ಯಯನದ ಅಗತ್ಯವಿದೆ.

**೨.೨.೨.೩. ಸಿನಿಮಾ: ಭೂ ಶಾಸನದ ಬಿಂಬ, ಪ್ರತಿಬಿಂಬ**

'ಭಾರತೀಯ ಸಾಹಿತ್ಯ ಮತ್ತು ಸಿನಿಮಾಗಳಲ್ಲಿ ಕಂಡುಬರಬೇಕಾದ ಇಂಪು ಮತ್ತು ವಿಷಾದ ಅತಿಯಾಗಿ ಭಾವಪರವಶವಾಗಿ ಸತ್ಯಗಳಿಂದ ದೂರವಾಗುತ್ತಿವೆ. ಅವು ದಿಗಿಲು, ಭಯ, ಹೇಸಿಕೆ, ಗಾಬರಿಯ ವಿಚಾರ ಗಳನ್ನು ಉತ್ತಮ ಸದ್ಗುಣಗಳಿಗೆ ಇಳಿಸಿವೆ; ಭಾರತೀಯ ಭಾವಾವೇಶಗಳು ಅಥವಾ ಅನಿಸಿಕೆಗಳು ಕಳಕಳಿ ಅಥವಾ ಕಾಳಜಿಗೆ ವಿರುದ್ಧವಾಗಿದೆ' ಎಂದು ನೈಪುಲ್ ಅವರು ವಿಶ್ಲೇಷಿಸಿರುವರು. ಭಾರತೀಯ ಚಿತ್ರಗಳು ರಾಜಕೀಯವಾಗಿ ಸರಳತೆ ಅಥವಾ ಅಮಾಯಕತೆಯನ್ನು ಹೊಂದಿಲ್ಲ. ಅಸಮಾನತೆಗಳ ವಿರುದ್ಧ ಹೋರಾಟ ವನ್ನು ಮಾಡುವಂತೆ ಜಾಗೃತಿ ಬೆಳೆಸಿಲ್ಲ. ಸಾಮಾಜಿಕ ಅಸಮಾನತೆ ಮತ್ತು ವಾಸ್ತವಿಕತೆಯ ದಿಕ್ಕಿನಲ್ಲಿ ಮುಖಮಾಡದೆ ಪಲಾಯನವಾದವನ್ನು ಬೆಂಬಲಿಸುತ್ತವೆ ಎಂಬ ಟೀಕೆಗಳು 'ವಾಣಿಜ್ಯ ಚಿತ್ರ'ಗಳ ಕುರಿತು ಸಾಮಾನ್ಯವಾಗಿ ಕಂಡುಬರುವುದು. ಉದಾಹರಣೆಯಾಗಿ, ೧೯೬೦ರವರೆಗೆ ಭಾರತದ ಬಹುತೇಕ ಎಲ್ಲಾ ಭಾಷೆಯ ಚಲನಚಿತ್ರಗಳು ನೆಹರೂಪಿನ ಭಾರತವನ್ನೆ ನೆಲೆಗೊಳಿಸುವ ದಿಕ್ಕಿನಲ್ಲಿದ್ದವು. ಆದರ್ಶವಾದಿ ಯುವಕ ಅಥವಾ ನಾಯಕ ಅಥವಾ ಮುಖ್ಯ ಪಾತ್ರದಾರಿ ಸಮಾಜದ ಒಳಿತಿಗಾಗಿ ತನ್ನೆಲ್ಲವನ್ನು ಸಂತೋಷದಿಂದ ಸಮರ್ಪಿಸಿ, ಸಮಾಜವನ್ನು ಪ್ರೇರೇಪಿಸುವ ಹಾಗೂ ಸಮಾನತೆಯನ್ನು ಸಾರುವ ದೃಶ್ಯಗಳನ್ನು ಚಿತ್ರಗಳಲ್ಲಿ ನೋಡಬಹುದು. ಇವುಗಳಲ್ಲಿ ನಗರದಲ್ಲಿರುವ ದೊಡ್ಡ ಅಧಿಕಾರಿ ಅಥವಾ ವಕೀಲ ಹಳ್ಳಿಯಲ್ಲಿ ದೊಡ್ಡ ಜಮೀನ್ದಾರನೂ ಆಗಿರುವನು. ಸ್ವಯಂ ಪ್ರೇರಣೆಯಿಂದ ಭೂಮಿಯನ್ನು ಗೇಣಿದಾರರಲ್ಲಿ ಹಂಚುತ್ತಾನೆ. ಇಂತಹ ಚಲನಚಿತ್ರಗಳ ಕಥೆಯ ಕೇಂದ್ರ 'ಸಾಮಾಜಿಕವಾಗಿ ಬೂರ್ಜ್ವಾಗಳನ್ನು ಒಳಗೊಂಡಿರುತ್ತದೆ' ಎಂದು ದೇಶ್‌ಪಾಂಡೆ ಅವರು ವಿಶ್ಲೇಷಿಸುವರು.

ವಾಣಿಜ್ಯ ಚಿತ್ರಗಳ ಅತಿಯಾದ ಭಾವಾತಿರೇಕ, ವಾಸ್ತವಿಕತೆಯಿಂದ ದೂರಾದ ಚಿತ್ರಣಗಳ ನಡುವೆಯು ಸಮಕಾಲೀನ ಸಮಾಜದ ಆಶಯ, ಪ್ರತಿಕ್ರಿಯೆಗಳು ಸೂಕ್ಷ್ಮವಾಗಿ ನುಸುಳಿಕೊಂಡಿರುತ್ತದೆ. ರಾಜಕಾರಣ ಮತ್ತು ಸಾಮಾಜಿಕ ಸಮಸ್ಯೆಗಳಿಗೆ ಸಮಾಜದಲ್ಲಿ ಕಂಡುಬರುವ ಪ್ರತಿಕ್ರಿಯೆಗಳ ಛಾಯೆಯನ್ನು ಗುರುತಿಸಬಹುದು. ಇಲ್ಲಿ ೧೯೭೪ರ ಭೂ ಸುಧಾರಣಾ ಕಾಯ್ದೆ, ಸಮಾಜದಲ್ಲುಂಟು ಮಾಡಿದ ಸಂಚಲನದ ಬಿಂಬಗಳನ್ನು ೧೯೭೪ ರಿಂದ ೧೯೮೫ರವರೆಗಿನ ಕನ್ನಡ ಚಲನಚಿತ್ರಗಳಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ. ಚಿತ್ರಗಳನ್ನು ಸಮುದಾಯಗಳ ನಿರ್ಮಾಣ ಮತ್ತು ರಾಜಕಾರಣದ ಹಿನ್ನೆಲೆಯಲ್ಲಿ ನೋಡುವ ಅಗತ್ಯವಿದೆ. ಭೂ ಸುಧಾರಣಾ ಕಾಯ್ದೆಯಿಂದ ಉಂಟಾದ ಹೊಸ ಭೂ ಸಂಬಂಧಗಳು, ಹೊಸ ಬದಲಾವಣೆಗಳು ಹಾಗೂ ಅದಕ್ಕೆ ಸಮಾಜದ ಪ್ರತಿಕ್ರಿಯೆಗಳನ್ನು ಕನ್ನಡ ಭಾಷೆಯ ಚಿತ್ರಗಳಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ. ಪತ್ರಿಕೆ ಮತ್ತು ಸಾಹಿತ್ಯ ಅಕ್ಷರಸ್ಥ ವರ್ಗವನ್ನೇ ಮುಖ್ಯ ಉದ್ದೇಶವಾಗಿಟ್ಟುಕೊಂಡು ಸೃಷ್ಟಿ ಆಗಿದ್ದರೆ, ಸಿನಿಮಾದ ಭಾಷೆ ಅಕ್ಷರಸ್ಥರಿಂದ ಅನಕ್ಷರಸ್ಥರವರೆಗೆ ಎಲ್ಲರಿಗಾಗಿ ಸೃಷ್ಟಿ ಆಗಿರುವುದಾಗಿದೆ. ಚಲನಚಿತ್ರಗಳನ್ನು ವಿಶ್ಲೇಷಿಸುವಾಗ ಸಿನಿಮಾ ಒಂದು ಉದ್ಯಮ, ಲಾಭ ಗಳಿಕೆ ಇದರ ಮುಖ್ಯ ಗುರಿ ಎಂಬದನ್ನು ಮರೆಯುವಂತಿಲ್ಲ. ಚಿತ್ರ ನಿರ್ಮಾಪಕರು ಬಹುತೇಕ ಜಮೀನ್ದಾರರು ಅಥವಾ ಬಂಡವಾಳಶಾಹಿಗಳಾಗಿರುತ್ತಾರೆ. ಸಹಜವಾಗಿ ಸಮಾಜ ದ ಭೂ ಮಾಲಿಕ, ಮೇಲ್ವರ್ಗಗಳ ದೃಷ್ಟಿಕೋನ ಹೆಚ್ಚಾಗಿರುವುದು. ಇಲ್ಲಿಸಿನಿಮಾ ಸಾಮಾಜಿಕ ವ್ಯವಸ್ಥೆಯನ್ನು ಪ್ರಭಾವಿಸಬಲ್ಲ ಪ್ರಮುಖ ಸಮೂಹ ಮಾಧ್ಯಮ ಎನ್ನುವುದನ್ನು ಸೂಚಿಸುತ್ತಲೇ ಸತ್ಯ ಮತ್ತು ವಾಸ್ತವತೆಗೆ

ಹತ್ತಿರವಾಗಿರ ಬೇಕೆನ್ನುವ ಆಶಯವನ್ನು ವ್ಯಕ್ತಪಡಿಸುವುದು. ಸಿನಿಮಾ ಸಾಮಾಜಿಕ ವ್ಯವಸ್ಥೆಯನ್ನು ಪ್ರಭಾವಿಸ ಬಲ್ಲ ಪ್ರಮುಖ ಸಮೂಹ ಮಾಧ್ಯಮ ಎನ್ನುವುದನ್ನು ಸೂಚಿಸುತ್ತಲೇ ಸತ್ಯ ಮತ್ತು ವಾಸ್ತವತೆಗೆ ಹತ್ತಿರವಾಗಿರ ಬೇಕೆನ್ನುವ ಆಶಯವನ್ನು ವ್ಯಕ್ತಪಡಿಸುವುದು. ಸಿನಿಮಾ ಸಾಮಾಜಿಕ ವ್ಯವಸ್ಥೆಯನ್ನು ಪ್ರಭಾವಿಸಬಲ್ಲ ಪ್ರಮುಖ ಸಮೂಹ ಮಾಧ್ಯಮ ಎನ್ನುವುದನ್ನು ಸೂಚಿಸುತ್ತಲೇ ಸತ್ಯ ಮತ್ತು ವಾಸ್ತವತೆಗೆ ಹತ್ತಿರವಾಗಿರಬೇಕೆನ್ನುವ ಆಶಯವನ್ನು ವ್ಯಕ್ತಪಡಿಸುವುದು. ಇಲ್ಲಿ ಭೂ ಒಡೆತನ, ಕಾಯ್ದೆಯಿಂದ ಪ್ರಭಾವಿತವಾಗಿರುವ ಕೆಲವು ಚಿತ್ರಗಳನ್ನು ಚರ್ಚಿಸಲು ಯತ್ನಿಸಿದೆ. ಅವುಗಳೆಂದರೆ, ಮಣ್ಣಿನ ಮಗಳು(ರಂಗ.ಬಿ.ಎಸ್., ೧೯೭೪), ಬೂತಯ್ಯನ ಮಗ ಅಯ್ಯು(ಸಿದ್ಧಲಿಂಗಯ್ಯ, ೧೯೭೪), ಚೋಮನ ದುಡಿ(ಕಾರಂತ್, ೧೯೭೫), ನಾಗ, ಕಾಳ, ಭೈರವ(ರಘು, ೧೯೮೧) ಮತ್ತು ಮುನಿಯನ ಮಾದರಿ(ನಾಗೇಂದ್ರಪ್ಪ ಮತ್ತು ಪ್ರಕಾಶ್, ೧೯೮೧).

ಮಣ್ಣಿನ ಮಗಳು(ರಂಗ.ಬಿ.ಎಸ್., ೧೯೭೪) ಚಿತ್ರದಲ್ಲಿ ಭೂಮಿ ಮತ್ತು ಹೆಣ್ಣಿನ ನಡುವಿನ ಸಂಬಂಧ ವನ್ನು ಭಾವತೀರೇಕ ಹಾಗೂ ಆದರ್ಶಮಯವಾಗಿ ಚಿತ್ರಿಸಿಲಾಗಿದೆ. ಈ ಚಿತ್ರದಲ್ಲಿ ನಾಯಕಿಯ ಅಳಿಯನಾಗುವವನು ಹಳ್ಳಿಯ ದೊಡ್ಡ ಜಮೀನ್ದಾರನ ಮಗ. ಈತ ವಿದ್ಯಾವಂತನಾದ ನಂತರ ಆದರ್ಶ ಸಮಾಜವಾದದಿಂದ ಪ್ರಭಾವಿತನಾದವನು. ಆತನ ತಂದೆ ಮತ್ತು ಶ್ರೀಮಂತವರ್ಗದವರು ಈ ವಯಸ್ಸಿನಲ್ಲಿ ಇಂತಹ ಆದರ್ಶಗಳು ಇರುವುದು ಸರಿಯಾದರೂ, ಮೇಲ್ನೋಟಕ್ಕಷ್ಟೆ ಇರಬೇಕೆಂದು ಸಲಹೆ ನೀಡುವರು. ಇಲ್ಲದಿದ್ದರೆ ಪರಿಣಾಮ ಸರಿಹೋಗದೆಂದು ಎಚ್ಚರಿಸುವುದನ್ನು ಕಾಣಬಹುದು. ನಾಯಕಿಯ ಮಗ ಮತ್ತು ಆತನ ಸ್ನೇಹಿತರು ಆರಂಭದಲ್ಲಿ ಈ ಯುವಕನನ್ನು ಅನುಸರಿಸಿದರೂ, ನಂತರದಲ್ಲಿ ಪ್ರಾಮಾಣಿಕತೆಯ ಮೇಲೆ ಅಪನಂಬಿಕೆ ಹೊಂದಿ ಹಿಂಸಾತ್ಮಕ ಹಾದಿ ಹಿಡಿಯಲು ಪ್ರಯತ್ನಿಸುವರು. ಆದರೆ ನಾಯಕಿ ಅವರನ್ನು ತಡೆದು ಅಹಿಂಸಾ ಮಾರ್ಗಕ್ಕೆ ಒತ್ತು ನೀಡುವಳು. ಕಡೆಗೆ ಜಮೀನ್ದಾರನಿಂದ ಭೂಮಿಯನ್ನು ಹಿಂದಕ್ಕೆ ಪಡೆಯುವಲ್ಲಿ ಯಶಸ್ವಿಯಾಗುವುದನ್ನು ಕಾಣಬಹುದು. ಚಿತ್ರದಲ್ಲಿ ನಾಯಕಿ ಮತ್ತು ಜಮೀನ್ದಾರನ ವೈಭವೀಕರಣ ಹೊರತುಪಡಿಸಿದರೆ ಉಳಿದವು ಪೇಲವವಾಗಿ ಚಿತ್ರಿತವಾಗಿದೆ. ಇದು ಭೂ ಹೋರಾಟದ ಮುಂಚೂಣಿಯಲ್ಲಿದ್ದ ಜಮೀನ್ದಾರಿ ವರ್ಗದ ನಾಯಕರ ಬಗೆಗೆ ಸಮಾಜದಲ್ಲಿ ಕಂಡುಬರುತ್ತಿದ್ದ ಆಯಾಮವೊಂದನ್ನು ಪ್ರತಿನಿಧಿಸುವುದು. ಯಾವುದನ್ನು ನಂಬದೆ ಹಿಂಸಾತ್ಮಕ ಮಾರ್ಗದ ಮೂಲಕ ಹಕ್ಕನ್ನು ಪಡೆಯ ಬೇಕೆನ್ನುವ ಯುವ ಮನಸ್ಸಿನ ವಿಚಾರವನ್ನು ಕಾಣಬಹುದು. ಈ ಮಾರ್ಗವನ್ನು ವಿರೋಧಿಸಿ ಅಹಿಂಸ ಮಾರ್ಗಕ್ಕೆ ಒತ್ತು ಕೊಡುವ ಹಿರಿಯ ತಲೆಮಾರಿನ ವ್ಯಕ್ತಿಯ ಚಿತ್ರಣವಿರುವುದು ಗಮನಾರ್ಹ. ಇದು ಕೃಷ್ಣಮೂರ್ತಿ ಪುರಾಣಿಕರ ಕಾದಂಬರಿ ಆಧರಿಸಿದ ಸಿನಿಮಾ ವಾಗಿದೆ. ಇದೇ ವರ್ಷ ತೆರೆಕಂಡ ಮತ್ತೊಂದು ಪ್ರಮುಖ ಚಲನಚಿತ್ರ ಬೂತಯ್ಯನ ಮಗ ಅಯ್ಯು (ಸಿದ್ಧಲಿಂಗಯ್ಯ, ೧೯೭೪) ಗೊರೂರು ರಾಮಸ್ವಾಮಿಯವರ ಸಣ್ಣಕಥೆ ಆಧಾರಿತವಾದುದು. ಈ ಚಿತ್ರದಲ್ಲಿ ಮುಖ್ಯವಾಗಿ ಜಮೀನ್ದಾರಿಕೆ ದಬ್ಬಾಳಿಕೆಯ ವಿರುದ್ಧದ ಹೋರಾಟ ವೈಯಕ್ತಿಕ ನೆಲೆಯಲ್ಲಿ ನಡೆಯುವುದು. ಊರಿನ ಬಹುತೇಕ ಜಮೀನಿನ ಒಡೆಯ ಅಯ್ಯು ಮತ್ತು ಗುಳ್ಳನ ನಡುವೆ ಭೂಮಿಯ ಒಡೆತನಕ್ಕಾಗಿ ನಡೆಯುವ ಸಂಘರ್ಷವಿದೆ. ಇದರಿಂದಾಗಿ ಉಂಟಾಗುವ ಸಮಸ್ಯೆಗಳು, ವ್ಯಕ್ತಿ ವ್ಯಕ್ತಿಗಳ ನಡುವಿನ ಮಾನವೀಯ ಸಂಬಂಧಗಳಲ್ಲಿ ಕಂಡುಬರುವ ಅಸಹನೆ, ದ್ವೇಷದ ಬೆಳವಣಿಗೆಯ ಚಿತ್ರಣವಿದೆ. ಚಿತ್ರದ ಕಡೆಗೆ ಈರ್ವರ ನಡುವಿನ ಸಂಘರ್ಷ ಸ್ನೇಹಮಯ ಮಾನವೀಯ ಸಂಬಂಧವಾಗಿ ಪರಿವರ್ತನೆಗೊಳ್ಳುವುದು. ಸಿನಿಮಾದಲ್ಲಿ ಭೂಮಿ ಒಡೆತನದ ಹೋರಾಟದಿಂದ ಇಬ್ಬರಿಗೂ ನಷ್ಟವಾದರೂ ಭರಿಸುವ ಮತ್ತು ಸಹಿಸಿಕೊಳ್ಳುವ ಶಕ್ತಿ ಜಮೀನ್ದಾರನ ಮಗನಾದ ಅಯ್ಯುವಿಗಿದ್ದು, ಗುಳ್ಳ ಬೀದಿಗೆ ಬೀಳಬೇಕಾದ ಸ್ಥಿತಿ ಬಂದೊದಗುವುದು. ಜಮೀನ್ದಾರ ಮತ್ತು ರೈತರ ನಡುವಿನ ಸಂಬಂಧ ಹಾಗೂ ಘರ್ಷಣೆಗಳು ಪಡೆದು ಕೊಳ್ಳಬಹುದಾದ ರೂಪದ ಚಿತ್ರಣವಿದು. ಈ ಚಿತ್ರ ತೆರೆಕಂಡ ಕಾಲಘಟ್ಟದಲ್ಲಿ ಭೂ ಸುಧಾರಣಾ ಕಾಯ್ದೆ ಜಾರಿಗೊಳಿಸುವ ಪ್ರಕ್ರಿಯೆ ಆರಂಭವಾಗಿತ್ತು. ಗೇಣಿದಾರರು ಭೂಮಿಯನ್ನು ಪಡೆಯುವ ಕ್ರಮ, ಭೂ ನ್ಯಾಯ ಮಂಡಳಿ ಕಾರ್ಯಾಚರಣೆಗಳ ಚರ್ಚೆಗಳು ಶಿಖರವನ್ನು ಮುಟ್ಟಿತ್ತು. ಭೂ ಕಾಯ್ದೆಯ ಪ್ರಭಾವದಿಂದ ಉಂಟಾಗಬಹುದಾದ ಪರಿಣಾಮಗಳು ಮನೋಜ್ಞವಾಗಿ ಮೂಡಿಬಂದಿದೆ.

ಭೂಮಿಯ ಒಡೆತನದ ಹಿನ್ನೆಲೆಯಲ್ಲಿ ಸಮಕಾಲೀನವಾಗಿ ತೆರೆಕಂಡ ಪ್ರಮುಖ ಚಿತ್ರಗಳಲ್ಲೊಂದು ಚೋಮನ ದುಡಿ(ಕಾರಂತ್, ೧೯೭೫). ಇದು ಶಿವರಾಮ ಕಾರಂತ ಅವರ ಚೋಮನ ದುಡಿ ಕಾದಂಬರಿ ಆಧರಿಸಿ ತೆಗೆದ ಸಿನಿಮಾ. ದಲಿತನೊಬ್ಬ ಭೂ ಒಡೆತನಕ್ಕಾಗಿ ಹಂಬಲಿಸುವ ಕನಸು, ಅವುಗಳಿಗೆ ಸಮಾಜದ ಪ್ರತಿಕ್ರಿಯೆಗಳನ್ನು ತೆರೆದಿಡುವುದು. ಭೂ ಕಾಯ್ದೆ ಜಾರಿಗೊಳ್ಳುತ್ತಿದ್ದ ಆರಂಭಿಕ ಕಾಲದಲ್ಲೆ, ಸ್ವಂತ ಕೃಷಿ ಮಾಡುವ ಚೋಮನ ಕನಸು ಹಾಗೂ ಅಸಫಲತೆ ಚಲನಚಿತ್ರವಾಗಿ ತೆರೆಕಂಡಿದೆ. ಇವೆಲ್ಲವೂ ಭೂ ಸುಧಾರಣಾ ಕಾಯ್ದೆ ಜಾರಿಗೆ ತಂದ ಆರಂಭಿಕ ಹಂತದ ಚಿಂತನೆಗಳು ಮತ್ತು ಆತಂಕಗಳ ಮೇಲೆ ಬೆಳಕು ಹರಿಸುವುದು.

ಭೂ ಸುಧಾರಣಾ ಕಾಯ್ದೆ ಸಾಮಾಜಿಕ ವಲಯದಲ್ಲಿ ಹೊಸ ಸಂಚಲನದೊಂದಿಗೆ ಬದಲಾವಣೆಯನ್ನು ಹುಟ್ಟುಹಾಕಿತ್ತು. ಈ ನೆಲೆಯಲ್ಲಿ ನಾಗ, ಕಾಳ, ಭೈರವ(ರಘು, ೧೯೮೧) ಮತ್ತು ಮುನಿಯನ ಮಾದರಿ (ನಾಗೇಂದ್ರಪ್ಪ ಮತ್ತು ಪ್ರಕಾಶ್, ೧೯೮೧) ಚಲನಚಿತ್ರಗಳನ್ನು ವಿಶ್ಲೇಷಿಸಲು ಪ್ರಯತ್ನ ಮಾಡಲಾಗಿದೆ. ನಾಗ, ಕಾಳ, ಭೈರವದಲ್ಲಿ(ರಘು, ೧೯೮೧) ನಾಯಕನ ತಂದೆಯ ಸಾವು ಮತ್ತು ಕುಟುಂಬದ ಹೀನಸ್ಥಿತಿಗೆ ಕಾರಣವಾದ ಘಟನೆಗಳಲ್ಲಿ ಭೂ ಸುಧಾರಣಾ ಕಾಯ್ದೆ ಕುರಿತ ನಕಾರಾತ್ಮಕ ಧೋರಣೆಗಳಿವೆ. ನಾಯಕನ ತಂದೆ ದೇವಸ್ಥಾನದ ಧರ್ಮದರ್ಶಿ ಮತ್ತು ನೂರಾರು ಎಕರೆ ಭೂಮಿ ಹೊಂದಿರುವ ಉತ್ತಮ ಗುಣಗಳ ಜಮೀನ್ದಾರನಾಗಿರುವನು. ಆತನ ನಂಬಿಕಸ್ಥ ಹಾಗೂ ವಂಶಪಾರಂಪರ್ಯವಾಗಿ ಬಂದ ಆಳು ಭೂಮಿಯ ಮೇಲ್ವಿಚಾರಣೆಯಲ್ಲಿ ತೊಡಗಿರುವನು. ಸರ್ಕಾರ ತಂದ ಕಾನೂನಿನ ಮೂಲಕ ಅನೇಕ ಹಳ್ಳಿಗಳಲ್ಲಿ ಭೂಮಿಯನ್ನು ಆಳುಗಳು ವಶಪಡಿಸಿಕೊಳ್ಳುತಿದ್ದಾರೆಂದು, ಜಾಗೃತನಾಗಿರಲು ಹಾಗೂ ಕೆಲಸದಿಂದ ತೆಗೆಯುವಂತೆ ಹಿತೈಷಿಗಳು ಸಲಹೆ ನೀಡುವುದನ್ನು ನೋಡಬಹುದು. ಆದರೆ ನಾಯಕನ ತಂದೆಗೆ ಆಳಿನ ಮೇಲಿದ್ದ ನಂಬಿಕೆ ಕೆಲಸದಿಂದ ತೆಗೆದುಹಾಕಲು ಮುಂದಾಗುವುದಿಲ್ಲ. ಮತ್ತೊಂದು ಕಡೆ ಆಳಿಗೂ ಕಾನೂನಿನ ಪ್ರಕಾರ ಭೂಮಿ ಮೇಲೆ ಸ್ವಾಧೀನ ಪಡೆಯಲು ಆತನ ಸ್ನೇಹಿತರು ಸಲಹೆ ನೀಡುತ್ತಿರುವುದನ್ನು ಕಾಣಬಹುದು. ಆರಂಭದಲ್ಲಿ ಒಪ್ಪದಿದ್ದರೂ ಕ್ರಮೇಣ ನಾಯಕನ ತಂದೆಯ ಅರಿವಿಗೆ ಬಾರದಂತೆ ಕಾನೂನಿನನ್ವಯ ಭೂಮಿ ವಶಪಡಿಸಿಕೊಳ್ಳಲು ಮುಂದಾಗುತ್ತಾನೆ. ಅದನ್ನು ತಿಳಿದ ನಾಯಕನ ತಂದೆ ಮತ್ತು ಆಳಿನ ನಡುವೆ ನಡೆಯುವ ಹೊಡೆದಾಟದಲ್ಲಿ ನಾಯಕನ ತಂದೆ ಕೊಲೆಯಾಗುತ್ತಾನೆ. ಇಡೀ ಆಸ್ತಿಯನ್ನು ಆಳು ಲಪಟಾಯಿಸುತ್ತಾನೆ. ನಾಯಕನ ತಾಯಿ ಆಕೆಯ ಮತ್ತು ಪುಟ್ಟ ಮಗುವಿನ ಜೀವ ರಕ್ಷಿಸಿಕೊಳ್ಳಲು ದೂರದ ಊರಿಗೆ ಹೋಗಿ ನೆಲೆಸುತ್ತಾಳೆ. ಮುಂದೆ ಆಕಸ್ಮಿಕವಾಗಿ ಈ ವಿಚಾರ ತಿಳಿದ ನಾಯಕ, ತಂದೆಯ ಹಳ್ಳಿಗೆ ಹಿಂದಿರುಗಿ ದುಷ್ಟನ ವಿರುದ್ಧ ಹೋರಾಡಿ ಯಶಸ್ವಿಯಾಗುವ ಕಥಾ ಹಂದರ. ಇದು ಕಾಯ್ದೆ ಜಾರಿಯ ಕುರಿತು ವಾಸ್ತವಿಕತೆಗೆ ದೂರವಾದ ಅತಿರೇಕಗಳಿಂದ ಕೂಡಿದೆ. ಭೂ ಒಡೆತನದ ನೆಲೆಯಲ್ಲಿ ಬದಲಾದ ಸಂಬಂಧಗಳು ಹಾಗೂ ಭೂ ಸ್ವಾಮ್ಯ ಉಳಿಸಿಕೊಳ್ಳುವ ಮತ್ತು ಹಕ್ಕಿಗಾಗಿ ಕಾನೂನಿನ ನೆರವು ಬಳಸಲು ಗೇಣಿದಾರರ ಯತ್ನ ಮೊದಲಾದ ಅನೇಕ ವರ್ಗಗಳಲ್ಲಿ ಕಂಡು ಬರುತ್ತಿದ್ದ ಪ್ರಕ್ರಿಯೆಗಳನ್ನು ಇಲ್ಲಿ ಗುರುತಿಸಬಹುದು. ಭೂ ಮಾಲಿಕ ವರ್ಗದಲ್ಲಿ ಆಳಿನ(ಗೇಣಿದಾರ) ಕುರಿತು ಬೆಳೆದಿರುವ ಕಹಿ ಭಾವನೆ ಮತ್ತು ಕಳೆದು ಕೊಂಡ ಭೂಮಿ ಪುನಃ ಸ್ವಾಧೀನಕ್ಕೆ ಪಡೆದುಕೊಳ್ಳಬೇಕೆಂಬ ಆಶಯದ ಸ್ಥೂಲರೂಪ ಹೊರಹೊಮ್ಮಿದೆ. ಈ ಆಶಯ ಸಿನಿಮಾದ ಕೇಂದ್ರವಾಗಿರದಿದ್ದರೂ ಭೂ ಮಾಲಿಕ ವರ್ಗದ ಭಾವನೆ, ದೃಷ್ಟಿಕೋನವನ್ನು ಬಿಂಬಿಸುತ್ತದೆ. ಇದಕ್ಕೆ ವಿರುದ್ಧದ ನೆಲೆ ಹೊಂದಿರುವ ಚಿತ್ರ, ಮುನಿಯನ ಮಾದರಿ(ನಾಗೇಂದ್ರಪ್ಪ ಮತ್ತು ಪ್ರಕಾಶ್, ೧೯೮೧) ಅಶ್ವತ್ ಅವರ ಕಾದಂಬರಿ ಆಧಾರಿತವಾಗಿದೆ. ಇದರಲ್ಲಿ ದೊಡ್ಡೇಗೌಡರ ಜೀತದಾಳು ಮುನಿಯ ಚಲನಚಿತ್ರದ ಕೇಂದ್ರಬಿಂದು. ದೊಡ್ಡೇಗೌಡರ ಮಗ ನ್ಯಾಯಶಾಸ್ತ್ರ ಓದಿದ ಪ್ರಗತಿಪರ ವಿಚಾರಧಾರೆಗಳನ್ನು ಹೊಂದಿದವನಾಗಿದ್ದನು. ಹಳ್ಳಿಗೆ ಬಂದಾಗ ಬಾಲ್ಯದ ಗೆಳೆಯ ಹಾಗೂ ಜೀತದಾಳು ಮತ್ತು ಅನಕ್ಷರಸ್ಥನಾಗಿದ್ದ ಮುನಿಯನಲ್ಲಿ ಕ್ರಾಂತಿಬೀಜ ಬಿತ್ತುತ್ತಾನೆ. ನಂತರ ಮುನಿಯ ಸಾಂಪ್ರದಾಯಿಕವಾಗಿದ್ದ ಜಮೀನ್ದಾರಿಕೆ ಮತ್ತು ಜೀತದ ವಿರುದ್ಧ ಪ್ರತಿಭಟಿಸಿ ಹೋರಾಡಿ ಸಫಲನಾಗುವ ಮೂಲಕ ಹಳ್ಳಿಗೆ ಮಾದರಿಯಾಗುವನು. ಜಮೀನ್ದಾರಿಕೆ ಮತ್ತು ಜೀತಪದ್ಧತಿಯ ಹಲವು ಮಗ್ಗುಲುಗಳು ಚಿತ್ರಿತವಾಗಿದೆ. ಸಾಂಪ್ರದಾಯಿಕವಾಗಿದ್ದ ಜಮೀನ್ದಾರಿಕೆ ಮತ್ತು ಶ್ರೀಮಂತಿಕೆಯನ್ನು

ಹೊಸ ತಲೆಮಾರಿನ ವಿದ್ಯಾವಂತ ವರ್ಗ ದಿಕ್ಕರಿಸುತ್ತಿರುವುದನ್ನು ಕಾಣಬಹುದು. ಆದರ್ಶವಾದಿ ಯುವ ಜನಾಂಗ ಸಾಮಾಜಿಕ ಅಸಮಾನತೆಯನ್ನು ಕ್ರಾಂತಿಯ ಮೂಲಕ ಹೋಗಲಾಡಿಸಬಹುದು ಎಂಬ ಆಶಯ ವ್ಯಕ್ತವಾಗಿದೆ. ಈ ಮೇಲಿನ ಭೂ ಒಡೆತನ ಕುರಿತಂತೆ ಪ್ರಗತಿಪರ ಧೋರಣೆ ಹೊಂದಿರುವ ಚಿತ್ರಗಳೆಲ್ಲವೂ ಸಾಹಿತ್ಯ ಆಧಾರಿತ ಚಲನಚಿತ್ರಗಳಾಗಿರುವುದು ವಿಶೇಷವಾಗಿದೆ.

*** *** ***

ಭೂ ಮಸೂದೆ ಜಾರಿಯು ಆರ್ಥಿಕ ಅಸಮಾನತೆಯ ನಿವಾರಣೆ ಮತ್ತು ಸಾಮಾಜಿಕ ನ್ಯಾಯವನ್ನು ಪ್ರಮುಖ ಉದ್ದೇಶವಾಗಿ ಹೊಂದಿತ್ತು. ಸಮಕಾಲೀನವಾಗಿ ಸಾಮಾಜಿಕ ಸಂರಚನೆಯಲ್ಲಿ ಸಂಚಲನ ಹುಟ್ಟುಹಾಕಿತ್ತು. ಆ ಸಂದರ್ಭದ ರಾಜಕೀಯ ಸ್ಥಿತ್ಯಂತರಗಳಿಗೆ ಪೂರಕವಾಗಿದ್ದು, ಪ್ರಸ್ತುತ ರಾಜಕೀಯ ಪಕ್ಷಗಳು ಭೂ ಸುಧಾರಣಾ ಕಾಯ್ದೆ ಜಾರಿಗೊಳಿಸಿದ್ದನ್ನು, ಪಕ್ಷದ ಅಸ್ಮಿತೆಯಾಗಿ ಬಳಸುವುದನ್ನು ನೋಡ ಬಹುದು. ಇದರೊಂದಿಗೆ 'ಅಲ್ಲಿವರೆಗೆ ಮಧ್ಯಮವರ್ಗ ತೆಲುವಾಗಿದ್ದಿತು. ಈ ತೆಲುವಾಗಿದ್ದ ಮಧ್ಯಮವರ್ಗವೆ ತುರ್ತುಪರಿಸ್ಥಿತಿ ಸಂದರ್ಭದಲ್ಲಿ ಬಹುತೇಕ ಜನ ವಿರೋಧಿಯಾಗಿ ಸರ್ಕಾರದಿಂದ ಗುರುತಿಸಲ್ಪಟ್ಟಿರುವುದು. ಈ ಗುಂಪಿನೊಳಗೆ ಬುದ್ಧಿಜೀವಿಗಳ ವರ್ಗವು ಬರುತ್ತಿದ್ದದ್ದನ್ನು ನೋಡಬಹುದು' ಎಂದು ಮುಝಾಫರ್ ಅಸ್ಸಾದಿ ಅವರು ಗುರುತಿಸುತ್ತಾರೆ. ಜೆ.ಪಿ. ಚಳವಳಿಯಲ್ಲಿ ಕ್ರಮೇಣ ಸಮಾಜವಾದಿಗಳ ಪಾತ್ರ ಕಡಿಮೆಯಾಗಿ, ಬಲಪಂಥೀಯರು, ಭೂ ಮಾಲೀಕರು ಮತ್ತು ಬಂಡವಾಳಶಾಹಿಗಳ ಹಿಡಿತಕ್ಕೆ ಜಾರುವುದನ್ನು ಗಮನಿಸ ಬಹುದು. ತುರ್ತುಪರಿಸ್ಥಿತಿಯ ನಂತರದಲ್ಲಿ ಭೂ ಸುಧಾರಣೆ ಜಾರಿಗೊಳಿಸುವ ವಿಚಾರ ಸರ್ಕಾರ ಮತ್ತು ಬಹುಪಾಲು ರಾಜಕೀಯ ಪಕ್ಷಗಳ ಅಜೆಂಡಾದಿಂದ ಜಾರಿಹೋಗಿ, ತೀವ್ರತೆ ಕಳೆದುಕೊಂಡಿತು. ಕರ್ನಾಟಕದಲ್ಲಿ ಜೆ.ಪಿ. ಚಳವಳಿಗೆ ವ್ಯಾಪಕವಾದ ಪ್ರತಿಕ್ರಿಯೆ ಕಂಡುಬರಲಿಲ್ಲ. ಆ ಸಮಯದಲ್ಲಿ ಸಮಾಜವಾದಿಗಳ ಯುವಜನ ಸಭಾ, ಸಾಹಿತಿಗಳ ಒಕ್ಕೂಟ, ಜಾತಿ ವಿನಾಶ ಚಳವಳಿ ಕರ್ನಾಟಕದಲ್ಲಿ ಪ್ರಧಾನವಾಗಿ ಕಂಡುಬರುತ್ತಿದ್ದವು. ಸಮಾನಾಂತರವಾಗಿ ಭೂ ಸುಧಾರಣಾ ಕಾಯ್ದೆಯನ್ನು ಜಾರಿಗೊಳಿಸುವ ಚರ್ಚೆಗಳು ಶಿಖರತೆಯನ್ನು ಮುಟ್ಟಿತ್ತು. ಇವೆಲ್ಲವು ವ್ಯವಸ್ಥೆಯೊಳಗೆ ಅನೇಕ ಬದಲಾವಣೆಗಳಿಗೆ ಅವಕಾಶ ಮಾಡಿಕೊಟ್ಟಿತು. ಕಾಯ್ದೆ ಜಾರಿಗೊಳಿಸುವ ಪ್ರಕ್ರಿಯೆಯಲ್ಲಿ ವಿರುಪೇರು ರಾಜಕೀಯ ಸ್ಥಿತ್ಯಂತರಗಳ ಸಂದರ್ಭದಲ್ಲಿ ಉಂಟಾಗಿರುವುದು ಅನೇಕ ಆಕರಗಳಿಂದ ಸ್ಪಷ್ಟವಾಗಿದೆ. ತುರ್ತುಪರಿಸ್ಥಿತಿ ನಂತರ ರಾಜ್ಯದಲ್ಲಿ ಕಂಡುಬಂದ ಚುನಾವಣಾ ಫಲಿತಾಂಶಗಳು ಮತ್ತು ರಾಜಕೀಯ ಬೆಳವಣಿಗೆಗಳ ಮೇಲೆ ಭೂ ಸುಧಾರಣಾ ಕಾಯ್ದೆ ಬೀರಿರುವ ಪ್ರಭಾವವನ್ನು ಅಲ್ಲಗೆಳೆಯಲು ಸಾಧ್ಯವಿಲ್ಲ.

ರಾಜ್ಯದಲ್ಲಿ ಭೂ ಸುಧಾರಣಾ ಕಾಯ್ದೆ ಮತ್ತು ಸಾಮಾಜಿಕ ಸುಧಾರಣೆಗಳು ಜಾರಿಗೊಳಿಸುವ ಸರ್ಕಾರದ ಕ್ರಮಗಳು ದೀರ್ಘಕಾಲೀನವಾಗಿ ಪ್ರಭಾವ ಬೀರಿದೆ. ಇಲ್ಲಿ ಸಾಮಾಜಿಕ ಸುಧಾರಣೆ ಎಂದು ೧೯೭೭ ಫೆಬ್ರವರಿಯಲ್ಲಿ ಜಾರಿಗೊಂಡ ಹಾವನೂರು ವರದಿಯನ್ನು ನೋಡಲಾಗಿದೆ. ವರದಿ ಜಾರಿಗೊಂಡ ಕಾಲ ತುರ್ತುಪರಿಸ್ಥಿತಿ ಕೊನೆಯ ಹಂತವಾಗಿದ್ದು, ಲೋಕಸಭಾ ಚುನಾವಣೆಯನ್ನು ಘೋಷಿಸಲಾಗಿತ್ತು. ಅಲ್ಲದೇ ೧೯೭೩ರಿಂದಲೂ ಈ ಕುರಿತ ಚರ್ಚೆಗಳನ್ನು ಕಾಣಬಹುದು. ರಾಜ್ಯದಲ್ಲಿ ಅಧಿಕಾರ ಗ್ರಹಣ ಮತ್ತು ಅದರ ಬಳಿಕ ವಹಿಸಿದ ಪಾತ್ರದ ಅವಲೋಕನ ಹಲವು ಹೊಸ ಹೊಳಹುಗಳನ್ನು ಮುಂದಿಡುತ್ತಿದ್ದು, ಈ ದಿಸೆಯಲ್ಲಿ ಅಧ್ಯಯನ ಅಗತ್ಯವಾಗಿದೆ.

## ಸಾಮಾಜಿಕ ಸುಧಾರಣೆ: ರಾಜಕೀಯ ಮತ್ತು ಸಾಮಾಜಿಕ ನೆಲೆ

ಯಾವುದೇ ಸರ್ಕಾರದ ಕಾರ್ಯನೀತಿಯು ಆ ಕಾಲದ ಆರ್ಥಿಕ ವಿಚಾರಧಾರೆ, ಸಾಮಾಜಿಕ ಸ್ಥಿತಿಗತಿ ಹಾಗೂ ರಾಜಕಾರಣದಿಂದ ಪ್ರಭಾವಿತವಾಗಿರುವುದು. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ರಾಜಕಾರಣವನ್ನು ಸಮಾಜದಲ್ಲಿರುವ ಅನೇಕ ಸಾಮಾಜಿಕ ಶಕ್ತಿಗಳು ನಿಯಂತ್ರಿಸುತ್ತಿರುವುವು. ಪ್ರಮುಖವಾಗಿ ಎರಡು ರೀತಿಯ ಶಕ್ತಿ ಸಂಚಲನವನ್ನು ಗುರುತಿಸಬಹುದು. ಮೊದಲನೆಯದು, ಸಾಂಪ್ರದಾಯಿಕವಾಗಿದ್ದು, ತಲತಲಾಂತರದಿಂದ ಸಮಾಜದ ವ್ಯವಸ್ಥೆ ಮತ್ತು ರಾಜಕಾರಣವನ್ನು ನಿಯಂತ್ರಿಸುತ್ತಿರುವುದು. ಈ ನೆಲೆಯಲ್ಲೇ

ವ್ಯಕ್ತಿ ನಿಷ್ಠೆ ಅನೇಕಸಾರಿ ಹೊರಹೊಮ್ಮುವುದು. ಎರಡನೆಯದು, ಭಾರತವು ಸ್ವಾತಂತ್ರ್ಯೋತ್ತರದಲ್ಲಿ ಹೊಸ ಸಂವಿಧಾನವನ್ನು ಅಳವಡಿಸಿಕೊಳ್ಳುವ ಮೂಲಕ ಹೊಸ ಸಾಮಾಜಿಕ ವ್ಯವಸ್ಥೆ ಮತ್ತು ರಾಜಕೀಯ ವ್ಯವಸ್ಥೆಯನ್ನು ರೂಪಿಸಿ ಆಡಳಿತ ನಿರ್ವಹಿಸಲು ಯತ್ನಿಸುತ್ತಿರುವುದು. 'ಸಾಮಾಜಿಕ ನ್ಯಾಯ'ದ ಪರಿಕಲ್ಪನೆ ವಿವಿಧ ರೂಪಗಳಲ್ಲಿ ವ್ಯಕ್ತವಾಗುವುದು. ಇಂತಹ ಕಾರ್ಯಕ್ರಮಗಳು ಆಡಳಿತಶಾಹಿಯ ಮೂಲಕ ಅನುಷ್ಠಾನಗೊಳ್ಳುವುದು ಸಾಮಾನ್ಯವಾಗಿದೆ. ಈ ಹಂತಗಳಲ್ಲಿ ಸರ್ಕಾರದ ಮೇಲೆ ಪಕ್ಷ ರಾಜಕಾರಣ ಹಾಗೂ ನೌಕರಶಾಹಿಯ ಪ್ರಭಾವ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುವುದು. ಈ ನಿಟ್ಟಿನಲ್ಲಿ ಆಧುನಿಕ ಸರ್ಕಾರ ಮತ್ತು ಸಾಂಪ್ರದಾಯಿಕ ವ್ಯವಸ್ಥೆಗಳೆರಡಕ್ಕೂ ನಿರಂತರವಾದ ಸಂಘರ್ಷ ಅನೇಕ ರೂಪಗಳಲ್ಲಿ ಹೊರಹೊಮ್ಮಿರುವುದು.

ಸ್ಥಳೀಯ ಸಮಾಜದ ಸಂವೇದನೆಗಳು ಚಳವಳಿಗಳು ರೂಪುಗೊಳ್ಳುವ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರ ನಿರ್ವಹಿಸುವುದು. ಕರ್ನಾಟಕದಲ್ಲಿ ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳಿಗೆ ಸಮಾಜದ ಕೆಳಜಾತಿ ಮತ್ತು ವರ್ಗಗಳು ನೇರವಾಗಿ ಪ್ರತಿಕ್ರಿಯಿಸಲ್ಲಿಲ್ಲ. ಆ ಸಂದರ್ಭದಲ್ಲಿ ಸರ್ಕಾರ ಜಾರಿಗೊಳಿಸಿದ ಸಾಮಾಜಿಕ ಕಾರ್ಯಕ್ರಮಗಳ ಪರಿಣಾಮಗಳನ್ನು ಗಮನಿಸುವ ಮೂಲಕ ವರ್ಗಗಳ ಸಂವೇದನೆಯನ್ನು ಗುರುತಿಸಲು ಸಹಾಯವಾಗುವುದು. ಈ ಹಿನ್ನೆಲೆಯಲ್ಲಿ ಹಾವನೂರು ವರದಿ ರಚನೆ ಮತ್ತು ಅನುಷ್ಠಾನದಿಂದ ಉಂಟಾದ ಪರಿಣಾಮಗಳನ್ನು ಸಮಕಾಲೀನ ರಾಜಕಾರಣ ಮತ್ತು ಆಡಳಿತ ನೀತಿಯ ಮೂಲಕ ಚರ್ಚಿಸಲು ಪ್ರಯತ್ನ ಮಾಡಲಾಗಿದೆ. ಈ ಮೂಲಕ ಕರ್ನಾಟಕ ರಾಜಕೀಯ ವ್ಯವಸ್ಥೆಯ ನೆಲೆಗಟ್ಟು, ತುರ್ತುಪರಿಸ್ಥಿತಿ ಮತ್ತು ತುರ್ತುಪರಿಸ್ಥಿತಿಯೋತ್ತರದಲ್ಲಿ ಹೊಂದಿದ ಪರಿವರ್ತನೆಗಳನ್ನು ಗ್ರಹಿಸುವುದು ಪ್ರಮುಖ ಉದ್ದೇಶವಾಗಿದೆ. ಹಾವನೂರು ವರದಿ ಅನುಷ್ಠಾನವು ಹಿಂದುಳಿದ ವರ್ಗಗಳ ಚಳವಳಿಯಲ್ಲಿ ಮೈಲುಗಲ್ಲಾಗಿದೆ. ಆ ಸಂದರ್ಭದಲ್ಲಿ ಕಂಡುಬಂದ ಮೀಸಲಾತಿ ರಾಜಕಾರಣವನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಸಾಮಾಜಿಕ ನ್ಯಾಯದ ವಿಸ್ತರಣೆಯ ಯತ್ನ, ಪ್ರಾದೇಶಿಕ ರಾಜಕಾರಣ ಮತ್ತು ಸಮಾಜದಲ್ಲಿ ಪಡೆದುಕೊಂಡ ರೂಪಗಳನ್ನು, ಅದಕ್ಕೆ ಬಂದ ಪ್ರತಿಕ್ರಿಯೆಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ.

### ೨.೩.೧. ಹಾವನೂರು ವರದಿ: ಸಾಮಾಜಿಕ ಸುಧಾರಣೆ ಹಿನ್ನೆಲೆ

> ಪ್ರಬಲ ಕೋಮಿನ ರಾಜಕೀಯ ಪ್ರಭಾವ, ಅಧಿಕಾರಗಳ ವಿರುದ್ಧ ಅಸಮಾಧಾನದ ಹೊಗೆಯನ್ನು ಗುರುತಿಸುವ ಸಮರ್ಥ ನಾಯಕತ್ವ ಬರುವವರೆಗೂ ಕರ್ನಾಟಕ ರಾಜಕೀಯದಲ್ಲಿ ಯಾವುದೆ ಮಹತ್ತರ ಬದಲಾವಣೆಯನ್ನು ನಾವು ಕಾಣುವುದಿಲ್ಲ. ಹಿಂದುಳಿದ ವರ್ಗಗಳವರಿಗೆ ಅಂತಹ ಅವಕಾಶ ದೊರೆತಿದ್ದು ಡಿ.ದೇವರಾಜ ಅರಸುರವರಲ್ಲಿ. ಅರಸುರವರ ಅಧಿಕಾರಾವಧಿಯಲ್ಲಿ ಕರ್ನಾಟಕದ ಜಾತಿ ರಾಜಕೀಯದ ಸ್ವರೂಪದಲ್ಲಿ ಸಂಪೂರ್ಣ ಬದಲಾವಣೆಯನ್ನು ನಾವು ಕಾಣುತ್ತೇವೆ(ಸದಾನಂದ ೨೦೧೦: ೪೨೪).
>
> ಸಾಮಾಜಿಕ ಪರಿವರ್ತನೆಯ ಅರಸು ರಾಜಕಾರಣ: ಒಂದಿಷ್ಟು ನೆನಪುಗಳು(ದಂಡಾವತಿ ೨೦೧೧: ೭).

ಇವು ಸಾಮಾಜಿಕ ನ್ಯಾಯದ ನೆಲೆಯಲ್ಲಿ ಸಮಕಾಲೀನ ರಾಜಕಾರಣ ಮತ್ತು ಸಮಾಜದಲ್ಲಿ ಹಿಂದುಳಿದ ವರ್ಗಗಳ ಮೇಲ್ಮುಖ ಬೆಳವಣಿಗೆ ಹೊಂದಿದ ಪ್ರಕ್ರಿಯೆಯ ನೆನಪುಗಳು. ಅರಸು ಅವರ ರಾಜಕೀಯ ನೀತಿ ಸಾಮಾಜಿಕ ಪರಿವರ್ತನೆಯಲ್ಲಿ ಮಹತ್ವದ ಸ್ಥಾನ ಪಡೆದಿರುವುದು ವ್ಯಕ್ತಿ ರಾಜಕಾರಣದ ನೆಲೆಯಲ್ಲಿ 'ಅರಸು ರಾಜಕಾರಣ' ಎಂಬಂತೆ ಬಿಂಬಿತಗೊಂಡಿದೆ. ಈ ಕಾಲಘಟ್ಟದಲ್ಲಿ ರಾಜ್ಯ ಕಂಡ ಅನೇಕ ಚಳವಳಿ ಮತ್ತು ಹೋರಾಟಗಳು ಲೋಹಿಯಾ ಅವರ ತತ್ವಗಳಿಂದ ಪ್ರೇರಿತವಾಗಿದ್ದವು. ಜಾತಿ ವಿನಾಶ, ಲೇಖಕರ ಒಕ್ಕೂಟ ಮೊದಲಾದ ಚಟುವಟಿಕೆಗಳಲ್ಲಿ ಸಮಾಜವಾದಿಗಳ ಗುಂಪು ತೊಡಗಿಕೊಂಡಿದ್ದವು. ಈ ಗುಂಪು ಜಾತಿಯ ಹೆಸರಿನಲ್ಲಿ ಸಮಾಜದಲ್ಲಿರುವ ಅಸಮಾನತೆಯನ್ನು ತೊಡೆದುಹಾಕಲು ಅನೇಕ ವಲಯಗಳಲ್ಲಿ ಚರ್ಚೆ ಮತ್ತು ಚಟುವಟಿಕೆಗಳನ್ನು ನಡೆಸುತ್ತಿತ್ತು. ಈ ವೇಳೆಗಾಗಲೇ ಶೋಷಣೆಯ ವಿರುದ್ಧ ತಳಸಮುದಾಯಗಳಲ್ಲೇ ಜಾಗೃತಿ ಉಂಟಾಗಲು ಆರಂಭವಾಗಿದ್ದು, ದಲಿತ ಸಂಘರ್ಷ ಸಮಿತಿ, ದಲಿತ ಕ್ರಿಯಾ ಸಮಿತಿ ಮೊದಲಾದ ಸಂಘಟನೆಗಳು ಕ್ರಿಯಾಶೀಲವಾಗಿದ್ದವು. ಜೊತೆಗೆ ಸಾಹಿತ್ಯ ಲೋಕದಲ್ಲಿ ನವ್ಯದ 'ವ್ಯಕ್ತಿ ಮತ್ತು ವೈಯಕ್ತಿಕ ಸಂವಾದ'ದ ಪ್ರಸ್ತುತೆಯ ಪ್ರಶ್ನಾರ್ಹವಾಗಿ ಕಾಣತೊಡಗಿತ್ತು. ಕ್ರಮೇಣ ಅನೇಕ ಸಮುದಾಯಗಳ

ಸಂವೇದನೆಗಳು ಮತ್ತು ಸಮಕಾಲೀನ ರಾಜಕಾರಣ ಸಾಹಿತ್ಯದ ಮುಖ್ಯವಾಹಿನಿಯಲ್ಲಿ ಪ್ರಾಮುಖ್ಯತೆ ಪಡೆಯ ತೊಡಗಿತ್ತು. ಬೂಸ ಚಳವಳಿ ಸಾಹಿತ್ಯ ಹಾಗೂ ರಾಜಕೀಯದಲ್ಲಿರುವ ಕೆಲವು ವಲಯಗಳನ್ನು 'ಸಾಮಾಜಿಕ ನ್ಯಾಯ'ದ ಕುರಿತು ಚಿಂತಿಸುವಂತೆ ಮಾಡಲು ಯಶಸ್ವಿ ಆಗಿತ್ತು. ಈ ಕಾಲಘಟ್ಟದಲ್ಲಿ ಉಂಟಾದ ರಾಜಕೀಯ ಸ್ಥಿತ್ಯಂತರಗಳು ಪೂರಕವಾಗಿ ಕಾರ್ಯನಿರ್ವಹಿಸಿದೆ. ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಯಲ್ಲಿ ಹಿಂದುಳಿದ ವರ್ಗಗಳು ನೇರವಾಗಿ ಪ್ರತಿಭಟಿಸಲಿಲ್ಲ ಹಾಗೂ ರಾಜ್ಯದಲ್ಲಿ ವ್ಯಾಪಕವಾದ ಪ್ರತಿಭಟನೆಗಳು ಕಂಡುಬರಲಿಲ್ಲ. ಆದರೆ ತುರ್ತುಪರಿಸ್ಥಿತಿಯ ನಂತರ ಕರ್ನಾಟಕದಲ್ಲಿ ಹಲವು ಚಳವಳಿಗಳು ರೂಪುಗೊಂಡಿದ್ದನ್ನು ಕಾಣ ಬಹುದು. ಈ ದಿಸೆಯಲ್ಲಿ ಸರ್ಕಾರದ ಆಡಳಿತ ನೀತಿಯ ಪಾತ್ರ ನಿರ್ಣಾಯಕವಾಗಿದ್ದು, ವಿಶೇಷವಾಗಿ ಹಿಂದುಳಿದ ವರ್ಗಗಳ ಅಭಿವೃದ್ಧಿ ಕಾರ್ಯಕ್ರಮದ ಭಾಗವಾದ ಹಾವನೂರು ವರದಿಯ ರಚನೆ ಮತ್ತು ಅನುಷ್ಠಾನ ಅಪರಿಮಿತ ಪರಿಣಾಮ ಬೀರಿದೆ. ಆ ಸಂದರ್ಭದ ಸಾಮಾಜಿಕ ನೆಲೆಗಳನ್ನು ಎರಡು ಭಾಗವಾಗಿ ನೋಡಲಾಗಿದೆ. ೧೯೭೦ರ ದಶಕದ ಆರಂಭದಲ್ಲಿ ಕಂಡುಬಂದ ಜಾತಿ ವಿನಾಶ ಚಳವಳಿ ಹಾಗೂ ಸರ್ಕಾರದ ಕಾರ್ಯನೀತಿಗಳನ್ನು ಪ್ರಜಾಪ್ರಭುತ್ವದ ವಿಸ್ತರಣೆಯ ನೆಲೆಯಲ್ಲಿ ಚರ್ಚಿಸಲಾಗಿದೆ. ಸಾಮಾಜಿಕ ನ್ಯಾಯ ಹಾಗೂ ಮೀಸಲಾತಿ ರಾಜಕಾರಣವು ಅಂದಿನ ಸರ್ಕಾರ ಮತ್ತು ರಾಜಕಾರಣದಲ್ಲಿ ಪಡೆದ ರೂಪವನ್ನು ವಿಮರ್ಶಿಸಲು ಪ್ರಯತ್ನಿಸಿದೆ. ಕರ್ನಾಟಕದ ಪ್ರಾದೇಶಿಕ ರಾಜಕಾರಣದಲ್ಲಿ ಪ್ರಜಾಪ್ರಭುತ್ವದ ಆದರ್ಶ, ವೈರುಧ್ಯಗಳು ಹೊಂದಿರುವ ಸಾಮಾಜಿಕ ಮತ್ತು ರಾಜಕೀಯ ನೆಲೆಗಳಾಗಿದ್ದು, ಅವು ರೂಪುಗೊಳ್ಳುವ ಪ್ರಕ್ರಿಯೆಗಳನ್ನು ಅರಿಯಲು ಸಹಕಾರಿಯಾಗಿದೆ.

### ೨.೩.೧.೧. ಹಿಂದುಳಿದ ವರ್ಗಗಳ ಚಳವಳಿ: ಒಂದು ಮೈಲುಗಲ್ಲು

> ಹಾವನೂರು ಆಯೋಗದ ಶಿಫಾರಸ್ಸು - ಹಿಂದುಳಿದವರ ಸಂಖ್ಯೆ ಜನಸಂಖ್ಯೆಯ ಶೇ. ೪೫ರಷ್ಟು(ಕನ್ನಡಪ್ರಭ ೧೯೭೫ ನವೆಂಬರ್ ೨೦).
> ಕಳೆದ ಇಪ್ಪತ್ತು ವರ್ಷಗಳಿಂದ ನಾನು ಹಿಂದುಳಿದ ವರ್ಗಗಳ ಕಲ್ಯಾಣದ ಬಗ್ಗೆ ಚಿಂತನೆ, ಅಧ್ಯಯನ, ದುಡಿಮೆ ಮಾಡಿದ್ದರ ಸಾರ್ಥಕತೆ ಎನ್ನುವಂತೆ ಈ ವರದಿಯಿದೆ(ಹಾವನೂರು ೧೯೭೫: ೧).

ವರದಿಯ ಅನುಷ್ಠಾನ ಕುರಿತು ಪತ್ರಿಕೆಯಲ್ಲಿ ಪ್ರಕಟವಾದ ವರದಿಯ ರೂಪ ಹಾಗೂ ಈ ಆಯೋಗದ ಅಧ್ಯಕ್ಷರಾಗಿದ್ದ ಎಲ್.ಜಿ.ಹಾವನೂರು ಅವರ ಅಭಿಮತ. ಸ್ವಾತಂತ್ರ್ಯ ನಂತರದಲ್ಲಿ ಹಾವನೂರು ವರದಿಯು ಹಿಂದುಳಿದಿರುವಿಕೆಯನ್ನು ವ್ಯಾಖ್ಯಾನಿಸುವಲ್ಲಿ ಹೊಸ ಮಾದರಿಯನ್ನು ಮುಂದಿಟ್ಟಿತ್ತು. ಈ ವರದಿಯು ಕರ್ನಾಟಕದ ಜನಸಂಖ್ಯೆಯ ಶೇ.೪೫ರಷ್ಟು ಜನರನ್ನು ಹಿಂದುಳಿದ ವರ್ಗವೆಂದು ಗುರುತಿಸಿ, ಆ ವರ್ಗಗಳಿಗೆ ನೌಕರಿ ಹಾಗೂ ಶಿಕ್ಷಣ ಸಂಸ್ಥೆಗಳಲ್ಲಿ ಶೆ.೩೨ರಷ್ಟು ಸ್ಥಾನಗಳನ್ನು ಮೀಸಲಿಡಲು ಶಿಫಾರಸ್ಸು ಮಾಡಿತ್ತು. ಪ್ರಜಾಪ್ರಭುತ್ವ ವ್ಯವಸ್ಥೆ ಮತ್ತು ಸಾಮಾಜಿಕ ನ್ಯಾಯವು ಜಾತಿ ವಿನಾಶ ಚಳವಳಿ ಹಾಗೂ ಹಾವನೂರು ವರದಿಯ ಮೇಲೆ ಬೀರಿರುವ ಪ್ರಭಾವವನ್ನು ಈ ಭಾಗದಲ್ಲಿ ಚರ್ಚಿಸುವ ಪ್ರಯತ್ನ ಮಾಡಿದೆ.

#### ೨.೩.೧.೧.೧. ಜಾತಿ ವಿನಾಶ ಚಳವಳಿ

ರಾಷ್ಟ್ರ ರಾಜಕಾರಣದಲ್ಲಿ ಸಾಮಾಜಿಕ ನ್ಯಾಯದ ಅನೇಕ ಹೊಸ ಅಲೆಗಳು ೧೯೭೦ರ ದಶಕದ ಆರಂಭದ ಹೊತ್ತಿಗೆ ಕಾಣಿಸುವುದು. ಈ ದಿಸೆಯಲ್ಲಿ 'ಸಾಮಾಜಿಕ ತಳಹದಿಯ ಆಧಾರದ ಮೇಲೆ ನಾಯಕತ್ವ ರೂಪಿಸಿಕೊಳ್ಳುವ ಪ್ರಯತ್ನಗಳನ್ನು ನೋಡಬಹುದಾಗಿದೆ. ಜಾತಿ ಹಿನ್ನೆಲೆಯಲ್ಲಿ ಸಾಮಾಜಿಕ ತಳಹದಿಯ ನಾಯಕತ್ವ ರೂಪಿಸಿಕೊಂಡವರನ್ನು ಪರಿಶೀಲಿಸಿದರೆ ತಮ್ಮ ಶಕ್ತಿಯನ್ನು ಒಂದೂಗೂಡಿಸುವ ಮೂಲಕ ರಾಜಕಾರಣದಲ್ಲಿ ಹೊಸ ಬೆಳಕನ್ನು ಪರಿಚಯಿಸಲು ಪ್ರಯತ್ನಿಸಿದವರು ಶ್ರೀಮತಿ ಗಾಂಧಿ ಮತ್ತು ಅರಸು ಅವರು ಆಗಿದ್ದಾರೆ' ಎಂದು ರಾಘವೇಂದ್ರ ರಾವ್ ಅವರು ವಿಶ್ಲೇಷಿಸಿರುವರು. ರಾಜಕಾರಣದಲ್ಲಿ ಕಂಡು ಬರುತ್ತಿದ್ದ ಬದಲಾವಣೆಗಳೊಡನೆ ಸಮಾಜದಲ್ಲಿಯೂ ಹಲವಾರು ಪೂರಕ ಬದಲಾವಣೆಗಳನ್ನು ನೋಡ ಬಹುದು. ನಾಗನಗೌಡ ಸಮಿತಿಯ[೨೧] ವರದಿ ಜಾರಿಗೊಳಿಸುವ ಪ್ರಯತ್ನ ವಿಫಲಗೊಂಡಿದ್ದು ಹಿಂದುಳಿದ ವರ್ಗಗಳಲ್ಲಿ ಜಾಗೃತಿ ಉಂಟುಮಾಡಿತ್ತು. ಆದರೆ ಈ ವರ್ಗಗಳು ರಾಜಕೀಯವಾಗಿ ಪ್ರಬಲವಾಗಿರದ ಕಾರಣ ಗುರುತರವಾದ ಪರಿವರ್ತನೆಗಳನ್ನು ಗುರುತಿಸುವುದು ಕಷ್ಟಕರವಾಗಿದೆ. ಇವುಗಳನ್ನು ಗಮನಿಸುತ್ತಾ ೧೯೭೦ರ

ದಶಕದ ಆರಂಭದಲ್ಲಿ ಕಂಡುಬಂದ ಜಾತಿ ವಿನಾಶ ಚಳವಳಿಯನ್ನು ಸಮಾಜ ಮತ್ತು ಪ್ರಭುತ್ವದ ನೆಲೆಯಲ್ಲಿ ಚರ್ಚಿಸಲು ಪ್ರಯತ್ನಿಸಿದೆ. ಆ ಸಂದರ್ಭದ ಸಾಮಾಜಿಕ ಹೋರಾಟಗಳು ರೂಪುಗೊಂಡ ಪ್ರಕ್ರಿಯೆಯ ಮೇಲೆ ಬೆಳಕು ಹರಿಸುವುದು.

ಜಾತ್ಯಾತೀತ ರಾಷ್ಟ್ರ ನಿರ್ಮಾಣದ ನೆಲೆಯಲ್ಲೇ ಜಾತಿ ವಿನಾಶ ಚಳವಳಿಯ ಮೂಲವಿದೆ. ಕರ್ನಾಟಕದಲ್ಲಿ ಇದರಲ್ಲಿ ತೊಡಗಿಕೊಂಡಿದ್ದ ಬಹುತೇಕ ಸಮಾಜವಾದಿಗಳು ಲೋಹಿಯಾ ಅವರ ಜಾತಿ ನಿರ್ನಾಮ ಸಿದ್ಧಾಂತದಿಂದ ಪ್ರಭಾವಿತರಾಗಿದ್ದರು. ೧೯೭೦ರ ದಶಕದ ಆರಂಭದಲ್ಲಿ ವಿಚಾರವಾದಿ ಒಕ್ಕೂಟ,[೨೨] ಸಮಾಜವಾದಿ ಯುವಜನ ಸಭಾ, ದಲಿತ ಸಂಘರ್ಷ ಸಮಿತಿ, ದಲಿತ ಕ್ರಿಯಾ ಸಮಿತಿಗಳು ಒಟ್ಟಾಗಿ ಕರ್ನಾಟಕದಾದ್ಯಂತ ರಾಜಕೀಯ ಹಾಗೂ ಸಾಮಾಜಿಕ ಅವ್ಯವಸ್ಥೆಗಳನ್ನು ವಿರೋಧಿಸಿ ಹೋರಾಟ ನಡೆಸುತ್ತಿದ್ದವು. ಜಾತಿ ಆಧಾರದ ಅಸಮಾನತೆಯ ವಿರುದ್ಧ ಪ್ರತಿಭಟನೆಗಳು ಪ್ರಬಲವಾಗುತ್ತ ಹೋಗಿದ್ದು, ೧೯೭೩ರ ನಂತರ ತೀವ್ರತೆ ಪಡೆದುಕೊಂಡಿತ್ತು. ಈ ಸಂದರ್ಭದಲ್ಲಿ ಜಾತಿ ವಿನಾಶ ಚಳವಳಿಯನ್ನು[೨೩] ಎರಡು ಹಂತಗಳಲ್ಲಿ ಕಾರ್ಯರೂಪಕ್ಕೆ ತರುವ ಯತ್ನಗಳನ್ನು ನೋಡಬಹುದು. ಜಾತಿವ್ಯವಸ್ಥೆಯ ವಿರುದ್ಧ ಹೋರಾಟ ಮೊದಲನೆಯ ಹಂತವಾಗಿದೆ. ಯಜ್ಞ ಯಾಗಾದಿಗಳು ನಡೆಯುತ್ತಿದ್ದ ಸ್ಥಳಗಳಿಗೆ ಹೋಗಿ ವಿರೋಧಿಸುವುದು, ಮೂಢ ನಂಬಿಕೆಗಳ ವಿರುದ್ಧ ಜಾಗೃತಿ ಉಂಟುಮಾಡುವುದು, ಪುರೋಹಿತಶಾಹಿ ಆಚರಣೆಗಳಿಗೆ ಪರ್ಯಾಯವಾಗಿ ಬೇರೆ ಆಚರಣೆಗಳನ್ನು ರೂಪಿಸುವುದು, ಪ್ರೇಮವಿವಾಹ, ಅಂತರ್ಜಾತಿ ವಿವಾಹಗಳಿಗೆ ಪ್ರೋತ್ಸಾಹ ನೀಡುವುದು ಮೊದಲಾದವು ಮುಖ್ಯ ಚಟುವಟಿಕೆಗಳಾಗಿದ್ದವು. ಈ ಚಟುವಟಿಕೆಗಳು ಜಾತಿ ವ್ಯವಸ್ಥೆಯನ್ನು ಶಿಥಿಲಗೊಳಿಸಿ ನಿರ್ನಾಮ ಮಾಡಬೇಕೆನ್ನುವ ಉದ್ದೇಶದಿಂದ ರೂಪುಗೊಂಡಿತ್ತು. ಈ ಚಳವಳಿಗಳಲ್ಲಿದ್ದ ಅನೇಕರು ಹಿಂದುಳಿದ ವರ್ಗಗಳಲ್ಲಿ ಅಕ್ಷರ ಕಲಿತ ಮೊದಲ ತಲೆಮಾರಿನವರಾಗಿದ್ದರು. ಎರಡನೆಯ ಹಂತ ಸಂಘಟನಾತ್ಮಕ ಕಾರ್ಯಕ್ರಮಗಳು. ಜಾತಿ ವ್ಯವಸ್ಥೆಯನ್ನು ಒಡೆಯಲು ರಾಮಸ್ವಾಮಿ ಪೆರಿಯಾರ್, ಅಂಬೇಡ್ಕರ್,[೨೪] ಲೋಹಿಯ ಮೊದಲಾದ ಚಿಂತಕರು, ಅವರ ಚಿಂತನೆಗಳನ್ನು ಅಧ್ಯಯನ ಶಿಬಿರಗಳ ಮೂಲಕ ಪರಿಚಯಿಸುವ ಪ್ರಯತ್ನ ಕೈಗೊಳ್ಳಲಾಗಿತ್ತು. ವೈಚಾರಿಕವಾಗಿ ಪ್ರಬುದ್ಧ ಹೋರಾಟ ಕಟ್ಟುವ ನೆಲೆಯಲ್ಲಿ ಕೈಗೊಂಡ ಕಾರ್ಯಚಟುವಟಿಕೆಗಳಿವು. ಇವೆಲ್ಲವೂ ಜಾತಿ ವಿನಾಶ ಹೋರಾಟದಲ್ಲಿ ನಡೆಯುತ್ತಿದ್ದ ಕಾರ್ಯಚಟುವಟಿಕೆಗಳ ವಿವರಣಾತ್ಮಕ ವಿವರಗಳು. ಈ ದಿಸೆಯಲ್ಲಿ ಅತ್ಯಂತ ಮುಖ್ಯ ಹಂತ ೧೯೭೪ರಲ್ಲಿ ನಡೆದ ಜಾತಿ ವಿನಾಶ ಸಮ್ಮೇಳನವಾಗಿದೆ. ಮುಂದಿನ ದಿನಗಳಲ್ಲಿ ಕಲಾವಿದರು ಮತ್ತು ಸಾಹಿತಿಗಳ ಒಕ್ಕೂಟವನ್ನು[೨೫] ಕಾಣಬಹುದು. ಆದರೆ ಜಾತಿ ವ್ಯವಸ್ಥೆಯ ಬದಲು ಜಾತಿ ಒಳಗಿರು ವವರ ವಿರುದ್ಧ ಹೋರಾಟ ಮಾಡುತ್ತಿದೆ ಎಂಬ ಭಾವನೆ ಸಮಾಜದಲ್ಲಿ ಬಿತ್ತಿದ್ದು ವಿಪರ್ಯಾಸವಾಗಿದೆ.

ಜಾತಿ ವಿನಾಶ ಹೋರಾಟ ವ್ಯಾಪಕವಾಗಿತ್ತಾದರೂ ಚಳವಳಿಯ ಸ್ವರೂಪ ಪಡೆದುಕೊಳ್ಳಲಿಲ್ಲ ಎಂದು ಅನೇಕ ಚಿಂತಕರು ಗುರುತಿಸುವರು. ಈ ಹೋರಾಟಗಳಲ್ಲಿ ಭಾಗಿಯಾಗಿದ್ದ ರಾಜಶೇಖರ್ ಕೋಟಿ ಅವರ ಅಭಿಮತ ಹೀಗಿದೆ: 'ನೇರವಾಗಿ ಜಾತಿ ವಿನಾಶ ಕಾರ್ಯಕ್ರಮ ಅಂದರಾ ಯಾರ್ ಬರ್ತಾರ, ನಮ್ಮನ್ನ ದೂರ ಇಡ್ತಾರ. ಅದರ ಬದಲಾಗಿ ಒಟ್ಟು ಸಮುದಾಯವನ್ನು ಜೊತೆಯಾಗಿ ಕರೆದುಕೊಂಡು ಹೋಗಬೇಕು. ಜನ ಒಂದು ರೀತಿಯಿಂದ ನಮ್ಮ ಮೂವ್‌ಮೆಂಟ್‌ನಲ್ಲಿ ತೊಡಗಿಸಿ ಕೊಳ್ಳೋಕೆ ಹಿಂಜರಿದರು ... ನನ್ನಂಥರದವರು ಕೆಲವರು ಬಂದ್ರು, ... ಜಾತಿ ವಿನಾಶ ಮಾಡ್ತೀವಿ ಅಂತ ಸಮ್ಮೇಳನ ಮಾಡೋದು ... ಹಿಂಗೆಲ್ಲ ಮಾಡೋದ್ರಿಂದ ಜನರನ್ನ ನಾವು ಹತ್ತಿರಕ್ಕೆ ತಗೋಳೋಕ್ಕೆ ಆಗಾದಿಲ್ಲ. ದೂರ ಉಳಿದು ಬಿಡ್ತಾರ ... ಸಮಾನತೆಯ ಸಮಾಜ ಕಟ್ತೀವಿ ಅಂದ್ರೆ ಜನರಿಗೆ ಹಿಡಿಸತ್ತೆ ... ಹಂಗಾಗಿ ಬಹಳ ಯೋಚನೆ ಮಾಡಿದಾಗ ಅನ್ಸೋದು ನಾವು ಅಲ್ಲಿ ಒಂದಷ್ಟು ತಪ್ಪು ಮಾಡಿದ್ವೇನೊ ಜಾತಿ ವಿನಾಶ ಮಾಡ್ತೀನಿ ಅಂತ ಹೇಳಿ'. ಇದಕ್ಕೆ ಪೂರಕವಾಗಿ ಜನಸಾಮಾನ್ಯರ ಭಾಗವಹಿಸುವಿಕೆ ಹೆಚ್ಚಿರಲಿಲ್ಲ. ಆದರೆ 'ಇಂದಿಗಿಂತ ಹೆಚ್ಚು ಆರೋಗ್ಯಕರ ಚಿಂತನೆ ಜಾತಿ ಕುರಿತಂತಿತ್ತು. ಜಾತಿಯತೆ ಅಥವಾ ಜಾತಿ ಶಕ್ತಿ ಕೇಂದ್ರಗಳ ಮೂಲಕ ರೂಪಿಸುವ ರಾಜಕಾರಣ ಅಂದಿರಲಿಲ್ಲ' ಎಂದು ಶಿವರಾಮ ಕಾಡನಕುಪ್ಪೆ ಅವರು ಅಭಿಪ್ರಾಯ ವ್ಯಕ್ತಪಡಿಸುವರು. ಇವೆಲ್ಲವುಗಳ ನಡುವೆಯೂ ಸಮಾಜ ಮತ್ತು ರಾಜಕಾರಣದ ಮೇಲೆ ಬೀರಿದ ಪ್ರಭಾವ ಅಪಾರವಾಗಿತ್ತು.

ಸಮಾಜದಲ್ಲಿ ಕಂಡುಬಂದ ಪ್ರಜಾಸತ್ತಾತ್ಮಕ ಗುಣಗಳು, ಹಕ್ಕುಗಳಿಗಾಗಿ ನಡೆದ ಹೋರಾಟಗಳಿವು ಎಂಬುದನ್ನು ಮರೆಯುವಂತಿಲ್ಲ. ತುರ್ತುಪರಿಸ್ಥಿತಿಯಲ್ಲಿ ನಡೆದ ಹೋರಾಟಗಳು ಮೂಲಭೂತ ಹಕ್ಕುಗಳ ನೆಲೆಯಲ್ಲೇ ಎಂಬುದನ್ನು ಗಮನಿಸಬೇಕಾಗಿದೆ. ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳಲ್ಲಿ ಹಿಂದುಳಿದ ವರ್ಗಗಳು ಮತ್ತು ದಲಿತರು ನೇರವಾಗಿ ಪ್ರತಿಭಟಿಸಿ ವಿರೋಧಿಸಿರುವುದು ಕಡಿಮೆ. ಆದರೆ ಈ ಸಮುದಾಯಗಳಲ್ಲಿ ಮೇಲಿನ ಹೋರಾಟಗಳಲ್ಲಿ ಸಕ್ರಿಯರಾಗಿದ್ದ ವಲಯ ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳಲ್ಲಿ ತೊಡಗಿಸಿಕೊಂಡಿದ್ದವರು. ಈ ಮೇಲಿನ ಹೋರಾಟಗಳು ವ್ಯವಸ್ಥೆಯೊಳಗೆ ಕೇಂದ್ರೀಕೃತವಾಗಿದ್ದ ಅಧಿಕಾರವನ್ನು ವಿಕೇಂದ್ರೀಕರಣಗೊಳಿಸುವ ಪ್ರಯತ್ನವಾಗಿದೆ. ಸಾಮಾಜಿಕ ನೆಲೆಯಲ್ಲಿ ಕೆಲವೊಮ್ಮೆ ಚಳವಳಿಯಂತೆ, ಕೆಲವೊಮ್ಮೆ ಪ್ರಬಲ ಹೋರಾಟಗಳಂತೆ ಕಂಡುಬರುವುದು. ಇವುಗಳಿಗೆ ಸರ್ಕಾರ ಪ್ರತಿಕ್ರಿಯಿಸಿದ ಬಗೆಯನ್ನು ಗಮನಿಸುವುದು ಅಗತ್ಯ

### ೨.೩.೧.೧.೨. ಸಾಮಾಜಿಕ ಚಳವಳಿ ಮತ್ತು ಸರ್ಕಾರ

ಸಾಮಾಜಿಕ ಚಳವಳಿ, ರಾಜ್ಯ ಮತ್ತು ಪ್ರಜಾಪ್ರಭುತ್ವದ ಸ್ವರೂಪವನ್ನು ಏಕ ಚೌಕಟ್ಟಿನೊಳಗೆ ನೋಡುವ ಅಗತ್ಯವಾಗಿದೆ. ಈ ಮೂಲಕ ರಾಜಕೀಯ ಸ್ಥಿತ್ಯಂತರಗಳು ರೂಪುಗೊಂಡ ಪ್ರಕ್ರಿಯೆ ಹಾಗೂ ಪರಸ್ಪರ ಸಂಬಂಧವನ್ನು ಅರಿಯಲು ಸಾಧ್ಯವಿದೆ. ಸಾಮಾಜಿಕ ಚಳವಳಿಗಳು ಸಮಕಾಲೀನ ಸಮೂಹ ರಾಜಕಾರಣ ಮತ್ತು ಸರ್ಕಾರದ ಕಾರ್ಯನೀತಿಗಳನ್ನು ಪ್ರಭಾವಿಸುತ್ತಿರುವುವು. ಈ ದಿಸೆಯಲ್ಲಿ ಜಾತಿ ವಿನಾಶ ಹೋರಾಟಗಳು ಸಾಮಾಜಿಕ ವ್ಯಾಪಕತೆಯನ್ನು ಪಡೆಯುವ ಮೊದಲೇ ಆಡಳಿತಶಾಹಿಯ ಪೂರಕ ಪ್ರತಿಕ್ರಿಯೆಯನ್ನು ಕಾಣಬಹುದು. ೧೯೭೨ರ ವಿಧಾನಸಭಾ ಚುನಾವಣೆಯ ನಂತರ ಅಲ್ಲಿಯವರೆಗಿದ್ದ ಪ್ರಬಲ ಜಾತಿಗಳ ರಾಜಕೀಯ ಸಂರಚನೆಯಲ್ಲಿ ದೊಡ್ಡ ಬದಲಾವಣೆ ಕಂಡುಬಂದಿತ್ತು. 'ದೇವರಾಜ ಅರಸು ರೂಪಿಸಿದ ಜಾತಿ ಸಮೀಕರಣದಿಂದ ಅಹಿಂದ ಜಾತಿಗಳಿಗೆ ದನಿ ಸಿಕ್ಕಿ ರಾಜಕೀಯ ಸ್ಥಿತ್ಯಂತರವಾಯಿತು' ಎಂದು ಮಹಾದೇವ ಪ್ರಕಾಶ್ ಅವರು 'ಹಿಂದುಳಿದವರನ್ನು ಧ್ರುವೀಕರಿಸಿದ ಕಾಂಗ್ರೆಸ್ ವಿಭಜನೆ' ಲೇಖನದಲ್ಲಿ ವಿಮರ್ಶಿಸಿರುವು ದನ್ನು ನೋಡಬಹುದು. ೧೯೭೨ರ ಚುನಾವಣೆಯಲ್ಲಿ ಹಿಂದುಳಿದ ಜಾತಿಗಳ ಪ್ರತಿನಿಧಿಗಳಿಗೆ ಹೆಚ್ಚು ಪ್ರಾಮುಖ್ಯತೆ ನೀಡುವ ಮೂಲಕ ಅಧಿಕ ಸಂಖ್ಯೆಯಲ್ಲಿ ವಿಧಾನಸಭೆ ಪ್ರವೇಶಿಸಲು ಸಾಧ್ಯವಾಗಿತ್ತು. ಅಲ್ಲಿಯವರೆಗೆ ಕಂಡುಬರುತ್ತಿದ್ದ ಲಿಂಗಾಯಿತರು ಮತ್ತು ಒಕ್ಕಲಿಗರೇ ಪ್ರಾತಿನಿಧ್ಯ ಹೊಂದಿರುವ ರಾಜಕೀಯ ಸಂರಚನೆಯನ್ನು ಮುರಿದು ಪರ್ಯಾಯ ರಾಜಕೀಯ ಸಂರಚನೆಗೆ ಅವಕಾಶ ಮಾಡಿಕೊಟ್ಟಿತ್ತು. ಅರಸು ಅವರ ರಾಜಕೀಯ ನೀತಿಯನ್ನು ಸಾಮಾಜಿಕ ನ್ಯಾಯ ಸಿದ್ಧಾಂತದ 'ಲಿಟ್ಮಸ್ ಟೆಸ್ಟ್' ಪರಿಣಾಮಕಾರಿಯಾಗಿ ಅನಾವರಣಗೊಂಡಿತು ಎಂದು ಮಹಾದೇವ ಪ್ರಕಾಶ್ ಅವರು ವಿಶ್ಲೇಷಿಸಿರುವರು. ಸಾಮಾಜಿಕ ನ್ಯಾಯದ ನೆಲೆಯಲ್ಲಿ ಅರಸು ಅವರ ಆಡಳಿತನೀತಿ ರೂಪುಗೊಂಡಿತ್ತು ಎಂಬ ವಿಶ್ಲೇಷಣೆಯನ್ನು ಅನೇಕ ರಾಜಕಾರಣಿಗಳು, ಬುದ್ಧಿಜೀವಿಗಳು, ಪತ್ರಕರ್ತರು, ರಾಜ್ಯಶಾಸ್ತ್ರಜ್ಞರು ಒಪ್ಪಿಕೊಳ್ಳುವರು. ಆದರೂ ಸಾಮಾಜಿಕ ನ್ಯಾಯದ ಜಾತಿ ರಾಜಕಾರಣ, ಮೀಸಲಾತಿ ರಾಜಕಾರಣ ಎಂಬ ಟೀಕೆಗಳನ್ನು ಕಾಣಬಹುದು. ಈ ದಿಸೆಯಲ್ಲಿ ಹಾವನೂರು ವರದಿ ಜಾರಿ ಅನೇಕ ದ್ವಂದ್ವಗಳನ್ನು ಹುಟ್ಟಿಸುವುದು. ಹಾವನೂರು ಅವರ ನೇತೃತ್ವದಲ್ಲಿ ನೇಮಿಸಿದ ಹಿಂದುಳಿದ ವರ್ಗಗಳ ಸಮಿತಿ[೨೬] ೧೯೭೫ ನವೆಂಬರ್‌ನಲ್ಲಿ ವರದಿ ಸಲ್ಲಿಸಿತ್ತು. ೧೯೭೬ರಲ್ಲೇ ವರದಿ ಜಾರಿಗೊಳಿಸಲು ಶಾಸನ ಸಭೆಯ ಮುಂದಿಡಲಾಗಿತ್ತಾದರೂ ೧೯೭೭ರ ಫೆಬ್ರವರಿಯ ತನಕ ಮಸೂದೆ ಆಗಿ ಜಾರಿಗೊಂಡಿರಲಿಲ್ಲ. ಈ ಹೊತ್ತಿಗೆ ಲೋಕಸಭಾ ಚುನಾವಣಾ ಘೋಷಣೆಯಾಗಿದ್ದು ವರದಿಯಲ್ಲಿ ಸೂಚಿಸಿರುವುದಕ್ಕಿಂತ ಅಧಿಕ ಪ್ರಮಾಣದ ಮೀಸಲಾತಿಯನ್ನು ಸರ್ಕಾರ ಜಾರಿಗೊಳಿಸಿತ್ತು. ತುರ್ತುಪರಿಸ್ಥಿತಿಯ ಕಾಲದಲ್ಲಿ ಶಾಸನಗಳನ್ನು ರೂಪಿಸಲು, ಅದನ್ನು ಜಾರಿಗೊಳಿಸಲು ಸರ್ಕಾರ ಹೆಚ್ಚು ಶಕ್ತವಾಗಿತ್ತು. ಆದರೂ ವರ್ಷಕ್ಕಿಂತ ಹೆಚ್ಚು ಕಾಲ ಜಾರಿಗೊಳಿಸಿರಲಿಲ್ಲ ಎಂಬುದು ಚುನಾವಣಾ ರಾಜಕಾರಣವಾಗಿ ಕಾಣಲು ಕಾರಣವಾಗಿದೆ. ಇದರೊಡನೆ ಸರ್ಕಾರ ಪ್ರತ್ಯೇಕ ಹಿಂದುಳಿದಿರುವ ಗುಂಪೊಂದನ್ನು ಸೃಷ್ಟಿಸಿ, ಶೇ.೫ರಷ್ಟು ಉದ್ಯೋಗ ಮತ್ತು ಶೈಕ್ಷಣಿಕ ವ್ಯವಸ್ಥೆಯಲ್ಲಿ ಮೀಸಲಾತಿಯನ್ನು ನೀಡಿಲಾಗಿತ್ತು. ಇದನ್ನು ಶೇ.೧೫ಕ್ಕೆ ಹೆಚ್ಚಿಸಲಾಯಿತು. ವರದಿ ಮತ್ತು ಜಾರಿಗೊಂಡ ನೀತಿಯಲ್ಲಿ ಕಂಡುಬಂದ ಕೆಲವು ಮಹತ್ತರ ಬದಲಾವಣೆಗಳು

ಸಾಮಾಜಿಕ ನ್ಯಾಯದ ಹೆಸರಿನ ಮೀಸಲಾತಿ ರಾಜಕಾರಣದಂತೆ ಕಂಡುಬರಲು ಕಾರಣವಾಗಿದೆ. ಇವೆಲ್ಲವೂ ಅಂದಿನ ರಾಜಕೀಯ ಒತ್ತಡ ಮತ್ತು ಇಚ್ಛೆಗಳು ಅಥವಾ ರಾಜಕೀಯ ಉದ್ದೇಶದ ರೂಪಗಳನ್ನು ಅನಾವರಣ ಗೊಳಿಸುವುದು. ಇದರೊಡನೆ ಸಮಕಾಲೀನವಾಗಿ ಆಡಳಿತ ಪಕ್ಷದೊಳಗೇ ಕಂಡುಬಂದ ಭಿನ್ನ ನಿಲುವುಗಳನ್ನು ಮತ್ತು ಸಮೂಹ ಮಾಧ್ಯಮದ ಪ್ರತಿಕ್ರಿಯೆಗಳಲ್ಲಿ ಸರ್ಕಾರದ ಕ್ರಮ ಕುರಿತ ನಿಲುವುಗಳನ್ನು ಗಮನಿಸುವುದು ಅಗತ್ಯ.

**ಅರಸು ಅವರ ಜೊತೆಯಲ್ಲಿ ಎಲ್.ಜಿ.ಹಾವನೂರು ಅವರು**



ಕೃಪೆ - ಡೆಕ್ಕನ್ ಹೆರಾಲ್ಡ್, ಎಂ.ಜಿ.ರೋಡ್, ಬೆಂಗಳೂರು. ... ನವೆಂಬರ್ ೧೯೭೫ ... ವಿಧಾನಸೌಧದಲ್ಲಿ ನಡೆದ ಕಾರ್ಯಕ್ರಮದಲ್ಲಿ ಹಾವನೂರು ವರದಿಯನ್ನು ಮುಖ್ಯಮಂತ್ರಿ ದೇವರಾಜ ಅರಸರಿಗೆ ಹಸ್ತಾಂತರಿಸುತ್ತಿರುವುದು. ಚಿತ್ರ - ಸಂಖ್ಯೆ : ೨.೧೬

೧೯೭೭ರಲ್ಲಿ ಜಾರಿಗೆ ತಂದ ಹಾವನೂರು ವರದಿ[೨೨] ಹಿಂದುಳಿದ ವರ್ಗಗಳ ಚಳವಳಿಗಳಲ್ಲಿ ಕಂಡುಬರುವ ಪ್ರಗತಿಪರ ಮುಖ. ಆದರೆ ಆಡಳಿತ ಪಕ್ಷದಲ್ಲೇ ಈ ಕುರಿತ ಭಿನ್ನಾಭಿಪ್ರಾಯಗಳನ್ನು ಕಾಣಬಹುದು. ಈ ನಿಟ್ಟಿನಲ್ಲಿ

> ಕಾಂಗ್ರೆಸ್ ಪಾರ್ಟಿಯೊಳಗೆ ಎರಡಕ್ಕೂ ಭಾರಿ ವಿರೋಧ. ಒಂದು ಭೂ ಸುಧಾರಣೆ ಇನ್ನೊಂದು ಮೀಸಲಾತಿದು. ಹಾವನೂರು ವರದಿಗೆ ಒಕ್ಕಲಿಗರೆಲ್ಲ ಭಾರಿ ವಿರೋಧ ಮಾಡಿದರು. ದೇವೇಗೌಡ, ಎಸ್.ಎಂ.ಕೃಷ್ಣ ಅವರೆಲ್ಲ(ತಿಮ್ಮಪ್ಪ ೨೦೧೨: ೬೧)

ಎಂಬ ಹೇಳಿಕೆಯನ್ನು ಗಮನಾರ್ಹ. ಇದು ಸಮಕಾಲೀನವಾಗಿ ಪ್ರಾದೇಶಿಕ ರಾಜಕಾರಣದೊಳಗಿದ್ದ ಅನೇಕ ಒಳಸುಳಿಗಳನ್ನು ತೋರಿಸುವುದು. ಅಲ್ಲದೇ ಹಾವನೂರು ವರದಿ ಜಾರಿಗೆ ಪತ್ರಿಕೆಗಳಲ್ಲಿ ತೀವ್ರವಾದ ಚರ್ಚೆಗಳು ಕಂಡುಬಾರದಿದ್ದರೂ ಬೇರೆಬೇರೆ ಸ್ವರೂಪಗಳಲ್ಲಿ ನಿಶ್ಯಬ್ಧವಾಗಿ ಗೋಚರಿಸುತ್ತದೆ. 'ಹಿಂದುಳಿದವರು ಮುಂದುವರಿದವರ ನಡುವೆ ಭೇದ?'(ಪ್ರಜಾಮತ ೧೯೭೫ ಫೆಬ್ರವರಿ ೨) ಎಂಬ ಲೇಖನದಲ್ಲಿ

> ಎಲ್ಲಕ್ಕಿಂತಲೂ ಸ್ವಾರಸ್ಯವೆಂದರೆ ಈಚೆಗೆ ಪ್ರಧಾನಿಗಳು ಜೆ.ಪಿ. ಚಳವಳಿಗೆ ಹಿಂದುಳಿದವರು, ಹರಿಜನರು, ಮುಸ್ಲಿಂರ ಬೆಂಬಲವಿಲ್ಲವೆಂದು ಹೇಳಿರುವುದು. ಈ ಮೂಲಕ ಹಿಂದುಳಿದ ಜನರು ಈ ಚಳುವಳಿಗೆ ಸೇರಿಲ್ಲವೆಂದೂ ಅವರೆಲ್ಲರೂ ಆಡಳಿತ ಪಕ್ಷದೊಂದಿಗೆ ಇದ್ದಾರೆಂದು ಅವರು ವರ್ಣಿಸಿದ್ದಾರೆ ... ಈ ರೀತಿ ವರ್ಗಗಳ ನಡುವೆ ಭೇದ ಭಾವದ ವಾತಾವರಣ ಸೃಷ್ಟಿಸುತ್ತಿರುವ ಕಾಂಗ್ರೆಸಿಗರಿಗೆ ಪರಿಸ್ಥಿತಿಯ ಅರಿವಿದ್ದಂತಿಲ್ಲ. ಹಿಂದೂಗಳೆ ಬೇರೆ, ಹಿಂದುಳಿದವರೆ ಬೇರೆ ಎಂಬ ಮನೋಸ್ಥಿತಿ ಕಲ್ಪಿಸಿ ಅಧಿಕಾರ ಉಳಿಸಿಕೊಳ್ಳುವ ನೀತಿ ಎಷ್ಟು ದಿನ ಫಲ ನೀಡುವುದು. ಈಗ ರಾಷ್ಟ್ರಾದ್ಯಂತ ಚುನಾವಣೆಗಳು ಹತ್ತಿರ ವಾದಂತೆ ಮತ್ತೊಮ್ಮೆ ಹಿಂದುಳಿದವರ ಬಗ್ಗೆ ಸುಧಾರಣೆಯ ಮಾತುಗಳನ್ನಾಡುತ್ತಿದೆ(ಪ್ರಜಾಮತ ೧೯೭೫ ಫೆಬ್ರವರಿ ೨)

ಎಂದಿದೆ. ಸರ್ಕಾರ ಹಿಂದುಳಿದ ವರ್ಗ, ಅಲ್ಪ ಸಂಖ್ಯಾತರು, ದಲಿತ ಸಮುದಾಯದವರು ಜೆ.ಪಿ. ಚಳವಳಿಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಭಾಗವಹಿಸುತ್ತಿಲ್ಲವೆಂದು ಗುರುತಿಸಿದ್ದು, ಹಿಂದುಗಳಲ್ಲಿ ಸರ್ಕಾರ ಹಿಂದುಳಿದವರನ್ನು ಬೇರೆಯಾಗಿಸಿ ಭೇದಭಾವದ ವಾತಾವರಣ ಸೃಷ್ಟಿಸಿರುವುದು ಅಧಿಕಾರಕ್ಕಾಗಿ ಎಂಬ

ಟೀಕೆಯನ್ನು ಕಾಣಬಹುದು. ಇದನ್ನು ಚುನಾವಣಾ ರಾಜಕಾರಣ ಎಂದು ಹೇಳುತ್ತಲೇ ಹಿಂದುಳಿದ ವರ್ಗ ಕುರಿತ ಆಲೋಚನೆಗಳಲ್ಲಿ ಉಂಟಾಗಿರುವ ಬದಲಾವಣೆಗಳ ಮೇಲೆ ಬೆಳಕು ಚೆಲ್ಲುವುದು. ಮೊದಲನೆಯದಾಗಿ, ಸಾಮಾಜಿಕ ನೆಲೆಯಲ್ಲಿ ವಿಭಿನ್ನ ಸ್ವರೂಪಗಳಲ್ಲಿ ಪ್ರತಿಭಟನೆ ಕಂಡುಬಂದರೂ ಪೂರ್ಣವಾಗಿ ಸಾಮಾಜಿಕ ಚಳವಳಿಯಾಗಿ ಬೆಳೆದುಬರುವುದಿಲ್ಲ. ಅಲ್ಲದೇ ಈ ಹೋರಾಟಗಳು ರಾಜಕೀಯ ನೆಲೆಯ ಜೆ.ಪಿ. ಚಳುವಳಿಯೊಂದಿಗೆ ಗುರುತಿಸಿಕೊಂಡಿರಲ್ಲಿಲ್ಲ. ಸರ್ಕಾರದ ಕಾರ್ಯನೀತಿಗಳು ಸಾಮಾಜಿಕ ನ್ಯಾಯ ಹಾಗೂ ಸಾಮಾಜಿಕ ನ್ಯಾಯದ ಹೆಸರಿನ ರಾಜಕಾರಣವಾಗಿ ಎರಡೂ ಆಯಾಮಗಳಲ್ಲಿಯೂ ಪ್ರಕಟಗೊಳ್ಳುತ್ತಿದ್ದವು. ಎರಡನೆಯದಾಗಿ, ಸಮೂಹ ಮಾಧ್ಯಮಗಳು ಹಿಂದುಳಿದ ವರ್ಗಗಳ ಬಗ್ಗೆ ಎರಡು ರೀತಿಯ ಮನಸ್ಥಿತಿಯನ್ನು ವ್ಯಕ್ತಪಡಿಸುತ್ತಿರುವುದು. ಹಿಂದೂ ಧರ್ಮಿಯರನ್ನು ಸರ್ಕಾರ ವರ್ಗದ ಆಧಾರದ ಮೇಲೆ ಬಲವಂತವಾಗಿ ವಿಭಾಗಿಸಿದ್ದು, ಅಧಿಕಾರ ರಾಜಕಾರಣಕ್ಕಾಗಿ ಹಿಂದುಳಿದವರನ್ನು ಬಳಸಿ ಕೊಳ್ಳಲಾಗುತ್ತಿದೆ ಎಂಬ ಆರೋಪವೇ ಇದರಲ್ಲಿರುವ ವೈರುಧ್ಯ ನಿಲುವುಗಳನ್ನು ಪ್ರದರ್ಶಿಸಿದೆ. ಆರ್ಥಿಕವಾಗಿ ಮತ್ತು ಸಾಮಾಜಿಕ ವಾಗಿ ಹಿಂದುಳಿದಿರುವ ವರ್ಗ ಇದೇ ಎಂಬ ಅರಿವಿದ್ದರೂ, ಅದನ್ನು ಒಪ್ಪುವ ಮೂಲಕ ನಡೆಯುತ್ತಿದ್ದ ಸಾಮಾಜಿಕ ಚಳವಳಿಗೆ ಪೂರಕವಾಗಿ ಸಹಕರಿಸುವ ಮನಸ್ಥಿತಿ ಕಂಡುಬರುವುದಿಲ್ಲ. ಭಾರತದ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿಯೂ ೧೯೦೦ರ ನಂತರ ಸಾಮಾಜಿಕ ಸುಧಾರಣೆಗಳು ಹಿಮ್ಮುಖ ವಾಗಿ ರಾಜಕೀಯ ಸುಧಾರಣೆಗೆ ಹೆಚ್ಚು ಒಲವು ವ್ಯಕ್ತವಾಗಿತ್ತು. ರಾಜಕೀಯ ಚಳವಳಿಗಳಿಗೆ ದೊರಕುವ ಪ್ರಾಧಾನ್ಯತೆ ಸಾಮಾಜಿಕ ಚಳವಳಿ, ಸಾಮಾಜಿಕ ಸುಧಾರಣೆಗಳ ವಿಚಾರದಲ್ಲಿ ದೊರಕದಿರುವುದು ಪ್ರಜಾ ಸತ್ತಾತ್ಮಕ ಹೋರಾಟಗಳು ಹಾಗೂ ವ್ಯವಸ್ಥೆಯನ್ನು ಆಳವಾಗಿ ಅಧ್ಯಯಿಸಲು ಪ್ರೇರೇಪಿಸುತ್ತದೆ. ಈ ದಿಸೆಯಲ್ಲಿ ಹಾವನೂರು ವರದಿ, ಮೀಸಲಾತಿ ನೀತಿ ಮತ್ತು ರಾಜಕಾರಣವನ್ನು ಚರ್ಚಿಸುವ ಅಗತ್ಯ ಕಾಣುವುದು.

### ೨.೩.೧.೨. ಹಾವನೂರು ವರದಿ: ಸಾಮಾಜಿಕ ನ್ಯಾಯ ಮತ್ತು ಮೀಸಲಾತಿ ರಾಜಕಾರಣ

'ಸಮಾಜವಿಜ್ಞಾನಿಗಳು ದೇವರಾಜ ಅರಸು ಕಾಲಘಟ್ಟದ ಮೀಸಲಾತಿ ನೀತಿಯನ್ನು ಪರಿಶೀಲಿಸಿದಾಗ ಸಾಮಾನ್ಯವಾಗಿ ಕಂಡುಬರುವ ವಿಚಾರಗಳೆಂದರೆ, ಇದು ವಿಸ್ತಾರವಾದ ಮತ್ತು ತೀವ್ರಗಾಮಿ ಸ್ವರೂಪ ಹೊಂದಿರುವಂತದ್ದು. ಭಾರತದ ಯಾವುದೇ ಮುಖ್ಯಮಂತ್ರಿಯು ಜಾರಿಗೆ ತರದಂತದ್ದಾಗಿದೆ' ಎಂದು ಶ್ರೀನಿವಾಸ್ ಮತ್ತು ಪಾಣಿನಿ ಅವರು ಗುರುತಿಸುವರು. ಈ ಅಭಿಪ್ರಾಯ ಬಹುತೇಕವಾಗಿ ಎಲ್ಲೆಡೆ ಕಂಡುಬರುವುದು. ಅಧಿಕಾರ ರಾಜಕಾರಣ ಮತ್ತು ಸಾಮಾಜಿಕ ಚಳವಳಿಗಳೆರಡೂ ಕರ್ನಾಟಕದ ಮೀಸಲಾತಿ ರಾಜಕಾರಣದಲ್ಲಿ ಪ್ರಮುಖ ಪಾತ್ರವಹಿಸಿದೆ. ಸಾಮಾಜಿಕ ಚಳವಳಿ ಮತ್ತು ಸಾಮಾಜಿಕ ಸುಧಾರಣೆಗಳ ಪ್ರಜಾಪ್ರಭುತ್ವದ ನೆಲೆಗಳು ಹೊಂದಿರುವ ಅಧಿಕಾರ ರಾಜಕಾರಣದ ಬೇರುಗಳನ್ನು, ಸಾಮಾಜಿಕ ನ್ಯಾಯ ಮತ್ತು ಹಾವನೂರು ವರದಿಯ ಮೂಲಕ ಚರ್ಚಿಸುವ ಪ್ರಯತ್ನ ಮಾಡಿದೆ. ಇದರಿಂದ ಉಂಟಾದ ನೇರ ಪರಿಣಾಮಗಳನ್ನು ೧೯೮೦ರವರೆಗೆ ಇತರ ರಾಜ್ಯಗಳೊಡನೆ ಸಮೀಕರಿಸಿ ನೋಡಲಾಗಿದೆ.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿರುವ ವೈರುದ್ಯಗಳು ಸಾಮಾಜಿಕ ನ್ಯಾಯ ಮತ್ತು ಮೀಸಲಾತಿ ರಾಜಕಾರಣದ ಅನೇಕ ಒಳನೋಟಗಳನ್ನು ತೆರೆದಿಡುವುದು. ಈ ಹಿನ್ನೆಲೆಯಲ್ಲಿ ಅರಸು ಅವರು ಜಾರಿ ಗೊಳಿಸಿದ ಹಾವನೂರು ವರದಿ ಹಾಗೂ ಮೀಸಲಾತಿ ರಾಜಕಾರಣದ ಪಾತ್ರ ಅತ್ಯಂತ ನಿರ್ಣಾಯಕವಾಗಿದೆ. ಈ ಕೆಳಗಿನ ಉಲ್ಲೇಖವು ಅದಕ್ಕೆ ಪೂರಕವಾಗಿದೆ.

> ಚುನಾವಣೆಗಳಲ್ಲಿ ಜಾತಿಯು ವಹಿಸುತ್ತಿದ್ದ ಪಾತ್ರದ ಬಗ್ಗೆ ಬಹುತೇಕ ವಿದೇಶಿ ಮುತ್ಸದ್ದಿಗಳು ಸೋಜಿಗ ವ್ಯಕ್ತಪಡಿಸುತ್ತಿದ್ದು, ಜೇಮ್ಸ್ ಮೇನರ್ ಎಂಬ ಖ್ಯಾತ ರಾಜಕೀಯ ಚರಿತ್ರಕಾರನಿಗೆ ಜಾತಿಯ ಈ ವಿಸ್ಮಯಕಾರಿ ಪಾತ್ರದ ಬಗ್ಗೆ ತೀರಾ ಕುತೂಹಲ ... ಹಿಂದುಳಿದ ವರ್ಗಗಳ ಅಭಿವೃದ್ಧಿಗಾಗಿ ಜಾರಿಗೆ ತಂದಿದ್ದ ಹಲವು ಕಾರ್ಯಕ್ರಮಗಳ ಬಗ್ಗೆ ಅವರಿಗೆ ವಿಶೇಷ ಮೆಚ್ಚುಗೆಯಿತ್ತು. ದಲಿತರು ಮತ್ತು ಅಲ್ಪಸಂಖ್ಯಾತರ ಸಲುವಾಗಿ ಇಂದಿರಾ ಗಾಂಧಿ ಅವರು ಮಾಡಿದ್ದ ಸುಧಾರಣೆಗಳನ್ನು ದೇವರಾಜ ಅರಸರು ಕರ್ನಾಟಕದ ಮಟ್ಟಿಗೆ ಹಿಂದುಳಿದ ವರ್ಗದವರಿಗೆ ಅನ್ವಯಿಸಿದ್ದರು. ಈ ನೀತಿ ವೈಯಕ್ತಿಕ ವಾಗಿಯೂ ಅವರ ರಾಜಕೀಯ ಉನ್ನತಿಯ ಸೋಪಾನವಾಗಿತ್ತು(ರಾಮಚಂದ್ರ ೨೦೦೦: ೧೨೬).

ಏಕಕಾಲದಲ್ಲೇ ವರ್ಗ ಮತ್ತು ಜಾತಿ ರಾಜಕಾರಣವಾಗಿದ್ದು, ದೇವರಾಜ ಅರಸು ಅವರ ಹಿಂದುಳಿದ ವರ್ಗಗಳ ಅಭಿವೃದ್ಧಿ ಕಾರ್ಯನೀತಿಗೆ ರಾಷ್ಟ್ರೀಯ ಚೌಕಟ್ಟನ್ನು ನೀಡಲಾಗಿದೆ. ಇಂತಹ ವಿಮರ್ಶೆ ಅತಿ

ವಿರಳವಾಗಿ ಕಂಡುಬರುವುದು. ವರದಿಯ ಸ್ವರೂಪ, ಅದು ಜಾರಿಗೊಂಡ ನಂತರದ ರಾಜಕೀಯ ಪ್ರಕ್ರಿಯೆ ಕುರಿತ ವಿಶ್ಲೇಷಣೆಯೊಂದು ಹೀಗಿದೆ:

> ಈ ಸಮಿತಿಯು ಸಲ್ಲಿಸಿದ ವರದಿ ಕರ್ನಾಟಕದ ರಾಜಕೀಯದ ದಿಕ್ಕನ್ನೆ ಬದಲಿಸಿತು ಎಂದು ಹೇಳಬಹುದು. ರಾಜಕೀಯವಾಗಿ ಜಾತಿಗಳ ಬಲಾಬಲಗಳಲ್ಲಿ ಏರುಪೇರಾದ್ದರಿಂದ ಹಾವನೂರು ವರದಿಯ ಅನುಷ್ಠಾನದ ತೀರ್ಮಾನ ಬಿಸಿಬಿಸಿ ಚರ್ಚೆ, ವಾಗ್ವಾದಕ್ಕೆ ಅನುವು ಮಾಡಿಕೊಟ್ಟಿತು. ಇದೂವರೆಗೂ ಅಧಿಕಾರದ ವಲಯದ ಅಂಚಿನಲ್ಲಿಯೆ ಇದ್ದ ಹಲವಾರು ಜಾತಿ ಸಮುದಾಯಗಳು ಹಿಂದುಳಿದ ವರ್ಗಗಳಾಗಿ ಗುರುತಿಸಿಕೊಳ್ಳಲು ಸಾಕಷ್ಟು ಪೈಪೋಟಿ ಪ್ರಾರಂಭಿಸಿದವು. ಸರ್ಕಾರದ ಮೇಲೆ ತಮ್ಮನ್ನೂ ಹಿಂದುಳಿದ ವರ್ಗಗಳಿಗೆ ಸೇರಿಸಿದ್ದು ಮತ್ತೆ ಕೆಲವರನ್ನೂ ಅದರಿಂದ ಹೊರಗಿಟ್ಟಿದ್ದು ವರದಿಯ ಬಗ್ಗೆ ಅಸಮಾಧಾನಕ್ಕೆ ಕಾರಣವಾಯಿತು ... ಸಮಿತಿಯು ಸುಮಾರು ೧೫೫ ಜಾತಿಗಳನ್ನು ಹಿಂದುಳಿದ ವರ್ಗಗಳಾಗಿ ಸೇರಿಸಿದರೆ ಸರ್ಕಾರ ವರದಿಯನ್ನು ಅನುಷ್ಠಾನಗೊಳಿಸುವಾಗ ... ೨೦ ಜಾತಿಗಳನ್ನು ಸೇರಿಸಬೇಕಾಯಿತು. ಎಷ್ಟು ಮೀಸಲಾತಿ ಇರಬೇಕು ಎನ್ನುವುದರ ಬಗ್ಗೆ ಸಮಿತಿಯ ಶಿಫಾರಸ್ಸಿಗೂ ಸರ್ಕಾರದ ತೀರ್ಮಾನಕ್ಕೂ ಬಹಳ ವ್ಯತ್ಯಾಸವಿರುವುದು ಗೊತ್ತಾಗುತ್ತದೆ(ಸದಾನಂದ ೨೦೧೦: ೪೩೫).

ಮೀಸಲಾತಿ ಹಿನ್ನೆಲೆಯಲ್ಲಿ ಕರ್ನಾಟಕ ರಾಜಕಾರಣದ ಬಗ್ಗೆ ಸಾಮಾನ್ಯವಾಗಿ ಕೇಳಿಬರುವಂತಹ ಚರ್ಚೆ ಆಗಿದೆ. ವರದಿಯ ಆಧಾರದ ಮೇಲೆ ಜಾರಿಗೊಂಡ ಮೀಸಲಾತಿ ನೀತಿಯು ಪದೇಪದೇ ಸಾಮಾಜಿಕ ನ್ಯಾಯವೇ ಅಥವಾ ಮೀಸಲಾತಿ ರಾಜಕಾರಣವೇ ಎಂಬ ಪ್ರಶ್ನೆ ಹುಟ್ಟುಹಾಕುವುದು. ಸಾಮಾಜಿಕ ನ್ಯಾಯದ ರಾಜಕಾರಣದ ಪ್ರಸ್ತುತ ರೂಪಾಂತರ ಕುರಿತ ಈ ಕೆಳಗಿನ ಚರ್ಚೆ ಗಮನ ಸೆಳೆಯುವುದು.

> ನಮ್ಮ ಈವರೆಗಿನ ಎಲ್ಲ ಜಾತಿ ವಿರೋಧಿ ಅಥವಾ ಜಾತಿ ವಿನಾಶ ಕಾರ್ಯಕ್ರಮಗಳೂ ಬಹುಪಾಲು ವಿರುದ್ಧ ಪರಿಣಾಮ ಬೀರಿದ್ದವೆ. ಅದಕ್ಕೆ ಮುಖ್ಯ ಕಾರಣಗಳು ಎರಡು. ಒಂದು ಸಾಂಪ್ರದಾಯಿಕ ಜಾತಿ ಪದ್ಧತಿಗಳ ಒಳಿತು ಕೆಡುಕುಗಳ ಬಗ್ಗೆ ಮುಗ್ಧವಾಗಿದ್ದು, ... ಒಂದು ಸ್ಪಷ್ಟ ನಿಲುವನ್ನು ನಿರ್ದೇಶಿಸದೇ ಇರುವುದು ... ಈ ಪದ್ಧತಿಯನ್ನು ನಿರಾಕರಿಸದ ಹೊರತು, ನಿರ್ಮೂಲನ ಮಾಡದ ಹೊರತು ಯಾರ ಸಮಸ್ಯೆಯೂ ಬಗೆಹರಿಯಲಾರದು ... ಸಾಮಾಜಿಕ ದೃಷ್ಟಿಕೋನವನ್ನು ತನ್ನ ತಾತ್ವಿಕ ನೆಲೆಗಟ್ಟಾಗಿ ಕೆಳವರ್ಗಗಳ ಹೋರಾಟ ರೂಪಿಸಿಕೊಳ್ಳಲು ಆಗಲಿಲ್ಲ ಎಂಬುದು. ಎರಡನೇ ಮುಖ್ಯ ಕಾರಣ ... ಇಂದು ಸಾಮಾಜಿಕ ನ್ಯಾಯದ ಹೆಸರಲ್ಲಿ ವಿತರಿಸಲಾಗುತ್ತಿರುವ ವಿಶೇಷ ಸವಲತ್ತುಗಳು ಮೂಲತಃ ಸಾಮಾಜಿಕ ನ್ಯಾಯವಲ್ಲ. ಬದಲಿಗೆ ಜಾತಿ ನ್ಯಾಯ ಮಾತ್ರವಾಗಿದೆ ಎಂದೇ ಹೇಳಬಹುದು(ನಾಗಭೂಷಣ್ ೨೦೧೧: ೩೩).

ಸಾಮಾಜಿಕ ಚಳವಳಿಗಳು ಮತ್ತು ಸಾಮಾಜಿಕ ನ್ಯಾಯದ ರಾಜಕಾರಣದೊಳಗಿನ ವೈರುಧ್ಯಗಳು ಕಾಲಾಂತರದಲ್ಲಿ ಪಡೆದುಕೊಂಡ ರೂಪದ ಒಂದು ಆಯಾಮವಿದು. ಪ್ರಸ್ತುತ ರಾಜಕಾರಣ ಹಾಗೂ ಸಮಸ್ಯೆಗಳ ನೆಲೆಯಲ್ಲಿ ಸಾಮಾಜಿಕ ನ್ಯಾಯ ಕಾಲಾಂತರದಲ್ಲಿ ಜಾತಿ ನ್ಯಾಯವಾಗಿ ಬದಲಾಗಿರುವುದು ಮೀಸಲಾತಿ ರಾಜಕಾರಣದ ವಿವಿಧ ಮುಖಗಳಾಗಿವೆ. ಇದಕ್ಕೆ ಪೂರಕವಾಗಿ ರಾಜ್ಯದಲ್ಲಿ ಮೀಸಲಾತಿ ರಾಜಕಾರಣ ಮತ್ತು ಚುನಾವಣೆ ನಡುವಿನ ಸಂಬಂಧಗಳು ಅನೇಕ ಒಳನೋಟಗಳನ್ನು ಮುಂದಿಡುವುದು.

ಚುನಾವಣೆಗೆ ಸಂಬಂಧಿಸಿದಂತೆ ಸಮಾಜವಿಜ್ಞಾನಿಗಳು ಮತ್ತು ರಾಜಕಾರಣಿಗಳು ನಡೆಸುವ ಜಾತಿ ಲೆಕ್ಕಾಚಾರ ಕುರಿತ ಚರ್ಚೆಗಳು ಸಾಮಾನ್ಯ ಸಂಗತಿಯಾದರೂ, ಇದು ಮೀಸಲಾತಿ ರಾಜಕಾರಣದ ನೆಲೆಯನ್ನು ಹೊಂದಿರುವುದನ್ನು ಕಾಣಬಹುದು. ಈ ಹಿನ್ನೆಲೆಯಲ್ಲಿ ೧೯೭೭ ರಿಂದ ೧೯೮೦ರವರೆಗಿನ ರಾಜಕಾರಣ ಸಾಮಾಜಿಕ ನ್ಯಾಯವಾಗಿ ಹಾಗೂ ಮೀಸಲಾತಿ ರಾಜಕಾರಣವಾಗಿ ಹಲವು ಹಂತಗಳಲ್ಲಿ ರೂಪಾಂತರ ಹೊಂದುತ್ತಾ ಸಾಗುವುದು. ಇದರ ಪರಿಣಾಮ ಸಮಾಜವಲ್ಲಿ ಗಾಢವಾಗಿದ್ದು, ಪ್ರಸ್ತುತದವರೆಗೂ ನೋಡಬಹುದು. ಹಾವನೂರು ವರದಿ ಅನುಷ್ಠಾನಗೊಂಡ ಕಾಲದ ರಾಜಕೀಯ ನೆಲೆ, ಗ್ರಹಿಕೆಗಳನ್ನು ಕೆಳಗಿನ ದಿನಪತ್ರಿಕೆಯ ವರದಿ ಹಾಗೂ ಉಲ್ಲೇಖ ತೆರೆದಿಡುವುದು.


ಕನ್ನಡಪ್ರಭ
ಮೂಲ ಹಕ್ಕುಗಳಲ್ಲಿ

ಕನ್ನಡಪ್ರಭ. ೧೯೭೭

> ಕರ್ನಾಟಕ ಸರ್ಕಾರವು ಇಂದು ಹಿಂದುಳಿದ ವರ್ಗಗಳ ಸಮಿತಿಯ ಸಲಹೆಯನ್ನು ಸಂವಿಧಾನ ಬದ್ಧಗೊಳಿಸಲು ನಿರ್ಧರಿಸಿದೆ. ಮತಾಂತರಗೊಂಡ ಕ್ರಿಶ್ಚಿಯನ್ನರು, ಕ್ರಿಶ್ಚಿಯನ್ನರು ಮತ್ತು ಮುಸ್ಲಿಂರು ಲಾಭವನ್ನು ಪಡೆಯುವವರಲ್ಲಿ ಸೇರುತ್ತಾರೆ. ಅವರು ರಾಜ್ಯದ ಮೂರು ಕೋಟಿ ಜನಸಂಖ್ಯೆಯಲ್ಲಿ ಶೇ.೪೫ರಷ್ಟು ಜನಸಂಖ್ಯೆಯನ್ನು ಪ್ರತಿನಿಧಿಸುತ್ತಾರೆ(ಪೇಟ್ರಿಯಟ್ ೧೯೭೭: ಫೆಬ್ರವರಿ ೨೩).

ಈ ವರದಿ ಅಡಿಯಲ್ಲಿ ಆವರಣ ಚಿಹ್ನೆಯೊಳಗೆ ಚುನಾವಣಾ ತಂತ್ರವೇ ಎಂಬ ಪ್ರಶ್ನಾರ್ಥಕ ಚಿಹ್ನೆ ಮೀಸಲಾತಿ ರಾಜಕಾರಣ ಎಂದು ಪರೋಕ್ಷವಾಗಿ ಸೂಚಿಸುವುದು. ಇದೇ ಅಭಿಮತ ೧೯೮೩ರ ಚುನಾವಣೆಯ ಫಲಿತಾಂಶದ ವಿಶ್ಲೇಷಣೆಯಲ್ಲಿಯೂ ವ್ಯಕ್ತವಾಗಿದೆ. ಲಲಿತ ನಟರಾಜ್ ಅವರು 'ಕಾಂಗ್ರೆಸ್(ಐ) ಪಕ್ಷದ ಕೆಲವರು ವೈಯಕ್ತಿಕವಾಗಿ ಪಕ್ಷದ ಬೃಹತ್ ಪ್ರಮಾಣದ ಸೋಲಿಗೆ ಬೃಹತ್ ಸಂಖ್ಯೆಯಲ್ಲಿ 'ಅಲ್ಪ ಸಂಖ್ಯಾತ' ಜಾತಿ ಮತ್ತು ಸಮುದಾಯಗಳ ಅಭ್ಯರ್ಥಿಗಳನ್ನು ಕಣಕ್ಕಿಳಿಸುವ ದೇವರಾಜ ಅರಸು ಅವರ ತಂತ್ರ ತೊರೆದದ್ದೆ ಕಾರಣವೆಂದು ಅಭಿಮತ ವ್ಯಕ್ತಪಡಿಸಿರುವರು. ಕರ್ನಾಟಕ ಹಿಂದುಳಿದ ವರ್ಗಗಳ ಸಮಿತಿಯ ಅಧ್ಯಕ್ಷರಾಗಿದ್ದ ಹಾವನೂರು ಅವರು, ೧೯೮೩ರ ವಿಧಾನಸಭಾ ಚುನಾವಣೆಯ ನಂತರ, ಮೊದಲ ಬಾರಿಗೆ ಬಹಿರಂಗವಾಗಿ ಹೇಳಿಕೆ ನೀಡಿರುವರು. ಅರಸು ಅವರ ಈ ತಂತ್ರದ ಸಾಮರ್ಥ್ಯವನ್ನು ಪ್ರಸ್ತುತ ಮತ್ತು ಹಿಂದಿನ ಚುನಾವಣೆಯ ಅಂಕಿಅಂಶಗಳ ಸಮೀಕರಣದೊಂದಿಗೆ ಮಾತ್ರ ವಿಶ್ಲೇಷಿಸಲು ಸಾಧ್ಯ. ಅದರಲ್ಲಿಯೂ ೧೯೭೮ರ ಚುನಾವಣೆಯನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ' ಎಂದು ವಿಶ್ಲೇಷಿಸುವರು. ಇದು ಸಾಮಾಜಿಕ ನ್ಯಾಯದ ರಾಜಕಾರಣದೊಳಗೆ ಇರುವ ಮೀಸಲಾತಿ ರಾಜಕಾರಣದ ನೆಲೆಗಳನ್ನು ಸೂಚಿಸುವುದು. ಹಾವನೂರು ವರದಿಯನ್ನು ೧೯೭೫ರ ಕೊನೆಯ ವೇಳೆಗೆ ಸರ್ಕಾರಕ್ಕೆ ಸಲ್ಲಿಸಲಾಗಿದ್ದು, ತುರ್ತುಪರಿಸ್ಥಿತಿ ಸಂದರ್ಭದ ಶಾಸಕಾಂಗ ಸಭೆಗಳಲ್ಲಿ ನ್ಯಾಯಾಂಗದ ಆಜ್ಞೆ ಪಡೆದು ಹೆಚ್ಚಿನ ಚರ್ಚೆಗಳಿಲ್ಲದೆ ಅನೇಕ ಶಾಸನಗಳು ಜಾರಿಗೆ ತರಲಾಗುತ್ತಿತ್ತು. ಆದರೂ ಲೋಕಸಭಾ ಚುನಾವಣೆ ಘೋಷಣೆಯಾದ ನಂತರ ಜಾರಿಗೊಳಿಸಲಾಯಿತು. ಈ ನಡುವೆ ವರದಿಯ ಅನುಷ್ಠಾನ ವಿಳಂಬವಾಗುತ್ತಿರುವುದಕ್ಕೆ ನಂಜುಂಡಸ್ವಾಮಿ ಮೊದಲಾದವರು ಪ್ರತಿಭಟನೆಗಳನ್ನು ನಡೆಸುತ್ತಿದ್ದರಾದರೂ ಜಾರಿಗೊಂಡಿರಲ್ಲಿಲ್ಲ. ವರದಿ ಜಾರಿಯ ಪರಿಣಾಮ ೧೯೭೭ರ ಲೋಕಸಭಾ ಚುನಾವಣೆ ಮಾತ್ರವಲ್ಲದೇ, ೧೯೭೮ರ ವಿಧಾನಸಭಾ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದ ವಿಜಯಕ್ಕೂ ಪೂರಕವಾಗಿದ್ದದ್ದು ಮೀಸಲಾತಿ ರಾಜಕಾರಣದಂತೆ ತೋರುವುದು. ಈ ದಿಸೆಯಲ್ಲಿ ೧೯೬೭ ರಿಂದ ೧೯೭೮ರವರೆಗಿನ ಚುನಾವಣೆಯಲ್ಲಿ ಜಾತಿ ಮತ್ತು ವೃತ್ತಿ ಆಧಾರಿತವಾಗಿ ಆಯ್ಕೆಗೊಂಡ ಅಭ್ಯರ್ಥಿಗಳ ಅವಲೋಕನ ಅಗತ್ಯವಿದೆ. ಇದು ಜಾತಿ ರಾಜಕಾರಣ ಸಾಮಾಜಿಕ ನ್ಯಾಯದ ನೆಲೆಯಲ್ಲಿ ಮೀಸಲಾತಿ ಸ್ವರೂಪ ತಳೆದಿದೆ. ನಂತರ ಮೀಸಲಾತಿಯು ಜಾತಿ ರಾಜಕಾರಣದ ಪ್ರಮುಖ ತಂತ್ರವಾಗಿ ಪರಿವರ್ತನೆಗೊಂಡ ಪ್ರಕ್ರಿಯೆಯಂತೆ ಕಂಡುಬಂದರೂ, ಸಾಮಾಜಿಕ ನೆಲೆಯಲ್ಲಿ ಉಂಟುಮಾಡಿರುವ ಪರಿಣಾಮಗಳು ಸಾಮಾಜಿಕ ನ್ಯಾಯದೆಡೆಗೆ ಸಾಗುವುದು.

**ಜಾತಿ ಆಧಾರದ ಮೇಲೆ ಶಾಸಕಾಂಗದ ಸದಸ್ಯರ ಪಟ್ಟಿ(೧೯೬೭, ೧೯೭೨ ಮತ್ತು ೧೯೭೮ರ ಚುನಾವಣೆಗಳು. ಪಟ್ಟಿ ಸಂಖ್ಯೆ: ೮.**

| ಜಾತಿ | ೧೯೬೭ | | ೧೯೭೨ | | | ೧೯೭೮ | | |
|---|---|---|---|---|---|---|---|---|
| | ಅಸೆಂಬ್ಲಿ | ಕಾಂಗ್ರೆಸ್ | ಅಸೆಂಬ್ಲಿ | ಕಾಂಗ್ರೆಸ್ (ಆರ್) | ಕಾಂಗ್ರೆಸ್ (ಒ) | ಅಸೆಂಬ್ಲಿ | ಕಾಂಗ್ರೆಸ್ (ಐ) | ಜನತಾ |
| ಲಿಂಗಾಯತರು | ೮೧ | ೫೧ | ೫೬ | ೩೫ | ೧೪ | ೫೨ | ೨೯ | ೧೮ |
| ಒಕ್ಕಲಿಗರು | ೪೫ | ೨೩ | ೪೪ | ೨೮ | ೬ | ೪೩ | ೨೦ | ೨೯ |
| ಇತರ | ೮೬ | ೪೯ | ೧೧೬ | ೧೦೨ | ೪ | ೧೨೯ | ೧೦೨ | ೧೨ |
| ಗೊತ್ತಿಲ್ಲ | ೪ | ೩ | - | - | - | - | - | - |
| ಒಟ್ಟು | ೨೧೬ | ೧೨೬ | ೨೧೬ | ೧೬೫ | ೨೪ | ೨೨೪ | ೧೫೧ | ೫೯ |

ಆಕರ: ರಾಘವೇಂದ್ರ ರಾವ್ ಅವರ ಅಪ್ರಕಟಿತ ಸಂಪ್ರಬಂಧ 'ಚೇಂಜಿಂಗ್ ಪ್ಯಾಟರ್ನ್ ಆಫ್ ಪೊಲಿಟಿಕಲ್ ಲೀಡರ್‌ಶಿಪ್ ಇನ್ ಕರ್ನಾಟಕ', ೧೯೯೫. ರಾಜ್ಯಶಾಸ್ತ್ರ ವಿಭಾಗ, ಬೆಂಗಳೂರು.

**ವೃತ್ತಿ ಆಧಾರದ ಮೇಲೆ ಶಾಸಕಾಂಗದ ಸದಸ್ಯರ ಪಟ್ಟಿ(೧೯೭೨ ಮತ್ತು ೧೯೭೮ರ ಚುನಾವಣೆ. ಪಟ್ಟಿ ಸಂಖ್ಯೆ: ೯.**

| ವೃತ್ತಿ | ೧೯೭೨ | | ೧೯೭೮ | | |
|---|---|---|---|---|---|
| | ಅಸೆಂಬ್ಲಿ | ಕಾಂಗ್ರೆಸ್ | ಅಸೆಂಬ್ಲಿ | ಕಾಂಗ್ರೆಸ್ | ಜನತಾ |
| ಕೃಷಿ | ೮೭ | ೬೦ | ೧೦೪ | ೭೧ | ೨೪ |
| ಇತರೆ ವೃತ್ತಿಗಳು | ೧೨೯ | ೬೬ | ೧೦೦ | ೮೦ | ೩೫ |
| ಒಟ್ಟು | ೨೧೬ | ೧೨೬ | ೨೨೪ | ೧೫೧ | ೫೯ |

ಆಕರ: ರಾಘವೇಂದ್ರ ರಾವ್ ಅವರ ಅಪ್ರಕಟಿತ ಸಂಪ್ರಬಂಧ 'ಚೇಂಜಿಂಗ್ ಪ್ಯಾಟರ್ನ್ ಆಫ್ ಪೊಲಿಟಿಕಲ್ ಲೀಡರ್‌ಶಿಪ್ ಇನ್ ಕರ್ನಾಟಕ', ೧೯೯೫. ರಾಜ್ಯಶಾಸ್ತ್ರ ವಿಭಾಗ, ಬೆಂಗಳೂರು.

*೧೯೭೮ರ ಅಸೆಂಬ್ಲಿಯ ಒಟ್ಟು ಸಂಖ್ಯೆ ೨೨೪ ಇದ್ದು, ಅದನ್ನು ಕೂಡಿದರೆ ೨೦೪ ಬರುವುದು. ಈ ವ್ಯತ್ಯಾಸ ಮೂಲ ಆಕರದಲ್ಲಿಯೇ ಕಂಡುಬರುವುದು.

ಈ ಪಟ್ಟಿಗಳಲ್ಲಿ ಕೃಷಿಯನ್ನು ವೃತ್ತಿಯನ್ನಾಗಿಸಿಕೊಂಡಿರುವ ಶಾಸಕರ ಸಂಖ್ಯೆ ಕಾಂಗ್ರೆಸ್(ಆರ್)ನಲ್ಲಿ ೧೯೭೨ ರಿಂದ ೧೯೭೮ರವರೆಗೆ ಹೆಚ್ಚಾಗಿದ್ದು, ಇತರೆ ವೃತ್ತಿ ಆಧರಿಸುವವರ ಸಂಖ್ಯೆಯ ಪ್ರಮಾಣ ಕಡಿಮೆ ಇದೆ. ಈ ಅಂಕಿ ಅಂಶಗಳನ್ನು ಇತರ ಪಕ್ಷಗಳೊಡನೆ ಸಮೀಕರಿಸಿದಾಗ ಅಂತಹ ವ್ಯತ್ಯಾಸಗಳು ಕಂಡು ಬರುವುದಿಲ್ಲ. ಜಾತಿ ಆಧಾರಿತ ಪಟ್ಟಿಯಲ್ಲಿ ೧೯೬೭ ರಿಂದ ೧೯೭೮ರವರೆಗೆ ಶಾಸಕಾಂಗದಲ್ಲಿ ಲಿಂಗಾಯಿತ ಸದಸ್ಯರ ಸಂಖ್ಯೆ ಈ ರೀತಿ ಇದೆ. ೧೯೬೭ರಲ್ಲಿ ೮೧ ಜನ ಸದಸ್ಯರಿದ್ದಾರೆ. ಈ ಸಂಖ್ಯೆ ೧೯೭೨ ಮತ್ತು ೧೯೭೮ರಲ್ಲಿ ಕ್ರಮವಾಗಿ ೫೬ ಹಾಗೂ ೫೧ ಇದ್ದು, ಕಡಿಮೆಯಾಗುತ್ತಾ ಸಾಗಿದೆ. ಈ ಅವಧಿಗಳಲ್ಲಿ ೧೯೬೭ ಮತ್ತು ೧೯೭೨ರ ನಡುವಿನ ಇಳಿಕೆಯ ಪ್ರಮಾಣ ಅತ್ಯಧಿಕವಾಗಿದೆ. ಇದು ೧೯೭೨ ಮತ್ತು ೧೯೭೮ರ ನಡುವೆ ಇಳಿಕೆಯ ಪ್ರಮಾಣ ಕಡಿಮೆ ಆಗಿದೆ. ಆದರೆ ಒಕ್ಕಲಿಗ ಸದಸ್ಯರ ಸಂಖ್ಯೆ ೧೯೬೭ರಲ್ಲಿ ೪೫ ಇದೆ. ೧೯೭೨ ಮತ್ತು ೧೯೭೮ರಲ್ಲಿ ೪೪ ಹಾಗೂ ೪೩ ಇರುವುದನ್ನು ಕಾಣಬಹುದು. ಕಾಂಗ್ರೆಸ್ ಪಕ್ಷದೊಳಗೆ ೧೯೬೭ರಲ್ಲಿದ್ದ ಒಕ್ಕಲಿಗರ ಸದಸ್ಯರಿಗಿಂತ ೧೯೭೨ರಲ್ಲಿ ಹೆಚ್ಚಾಗಿದೆ. ಆದರೆ ೧೯೭೨ ರಿಂದ ೧೯೭೮ಕ್ಕೆ ಒಕ್ಕಲಿಗರ ಸದಸ್ಯರ ಸಂಖ್ಯೆ ಕಡಿಮೆ ಆಗಿದೆ. ೧೯೭೮ರ ಚುನಾವಣೆಯಲ್ಲಿ ಕಾಂಗ್ರೆಸಿನಲ್ಲಿ ಒಕ್ಕಲಿಗ ಸದಸ್ಯರ ಸಂಖ್ಯೆ ಕಡಿಮೆ ಆಗಿತ್ತಾದರೂ ಜನತಾ ಪಕ್ಷದಲ್ಲಿ ಆ ಸ್ಥಾನ ದೊರೆತಿತ್ತು. ನಂತರದಲ್ಲಿ ಜನತಾ ಪಕ್ಷ ಒಕ್ಕಲಿಗರ ಪಕ್ಷವಾಗಿಯೇ ಜಾತಿ ನೆಲೆಯಲ್ಲಿ ಹೆಚ್ಚು ಗುರುತಿಸಿಕೊಂಡಿದೆ. ಹಳೆ ಮೈಸೂರು ಪ್ರದೇಶದಲ್ಲೆ ಪಕ್ಷದ ಸಂಘಟನೆ ಪ್ರಬಲವಾಗಿರುವುದನ್ನು ಗಮನಿಸಬಹುದು. ಜೊತೆಗೆ ದೇವರಾಜ ಅರಸು ಅವರ ಅವಧಿಯವರೆಗೆ ಹೆಚ್ಚು ಕಡಿಮೆ ಮೂಲೆಗೆ ಸರಿಸಲ್ಪಟ್ಟಿದ್ದ ಹಿಂದುಳಿದ ವರ್ಗಗಳಿಗೆ ಸೇರಿದ ಸಮುದಾಯಗಳು, ಅರಸರ ಕಾಲದ ಅವಧಿಯಲ್ಲಿ ಮತ್ತು ನಂತರ ಕರ್ನಾಟಕ ರಾಜಕಾರಣದಲ್ಲಿ ಪ್ರಬಲ ಶಕ್ತಿಯಾಗಿ ಬೆಳೆದದ್ದನ್ನು ಕಾಣ ಬಹುದಾಗಿದೆ. ೧೯೬೭ರಲ್ಲಿ ಹಿಂದುಳಿದ ವರ್ಗ ಮತ್ತು ದಲಿತರ ಸಂಖ್ಯೆ ಕಾಂಗ್ರೆಸ್‌ನಲ್ಲಿ ೧೯ ಇದ್ದರೆ, ೧೯೭೨ ಮತ್ತು ೧೯೭೮ರಲ್ಲಿ ಅದು ೧೦೨ಕ್ಕೆ ಏರಿರುವುದು ಸಮಾಜದಲ್ಲಿ ಉಂಟಾಗುತ್ತಿದ್ದ ಬದಲಾವಣೆ ಯನ್ನು ಸೂಚಿಸುತ್ತದೆ. ಓಬಿಸಿ-ದಲಿತ ಸಮುದಾಯಗಳ ಮೇಲೇಳುವಿಕೆಯನ್ನು ಈ ಅಂಕಿಅಂಶಗಳ ಆಧಾರದಿಂದ ಗುರುತಿಸಬಹುದಾಗಿದೆ.

**ಕಛೇರಿಯಲ್ಲಿ ಅರಸು ಅವರು**



ಕೃಪೆ: ವಾರ್ತಾ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು. ಚಿತ್ರ ಸಂಖ್ಯೆ: ೨.೧೮.

ಅರಸು ಅವರ ಆಡಳಿತಾವಧಿಯನ್ನು ಸಾಮಾಜಿಕ ನ್ಯಾಯ ಹಾಗೂ ವ್ಯಕ್ತಿ ರಾಜಕಾರಣದಲ್ಲಿ ವಿಶಿಷ್ಟ ಅಧ್ಯಾಯವಾಗಿ ನೋಡಲಾಗುವುದು. ಕರ್ನಾಟಕದಲ್ಲಿ ಸಾಮಾಜಿಕ ಪರಿವರ್ತನೆಯ ಹರಿಕಾರ ಎಂಬಂತೆ ದೇವರಾಜ ಅರಸು ಬಿಂಬಿತವಾಗಲು ಪ್ರಮುಖ ಕಾರಣವಾಗಿದೆ. ಈ ಮೇಲಿನ ಚುನಾವಣಾ ಪಟ್ಟಿಯು ಇದಕ್ಕೆ

ಪೂರಕವಾಗಿದೆ. ೧೯೮೩ರ ಚುನಾವಣೆಯ ನಂತರದಲ್ಲಿ ಹಿಂದುಳಿದ ವರ್ಗ ಮತ್ತು ಜಾತಿಯ ಸದಸ್ಯರ ಪ್ರಮಾಣ ಕಡಿಮೆಗೊಂಡಿದ್ದು, ಸಾಮೂಹಿಕ ಶಕ್ತಿಯಾಗಿ ಹೊರಹೊಮ್ಮುವಲ್ಲಿ ವಿಫಲವಾದಂತೆ ಕಂಡುಬರುವುದು. ಆದರೆ ವ್ಯಕ್ತಿ ನೆಲೆಗಳಲ್ಲಿ ಸಫಲವಾಗಿರುವುದನ್ನು ಗುರುತಿಸಬಹುದು. ೧೯೭೨ ರಿಂದ ೧೯೮೦ರವರೆಗೆ ಅರಸುರವರು ಬೆಳೆಸಿದ ಹಿಂದುಳಿದ ವರ್ಗದ ನಾಯಕರುಗಳು ಮುಂದೆ ಸ್ವತಂತ್ರರಾಗಿ ರಾಜ್ಯದಲ್ಲಿ ಮುಖ್ಯಮಂತ್ರಿ, ಗೃಹಸಚಿವ ಮೊದಲಾದ ಪ್ರಮುಖ ಸ್ಥಾನಗಳಲ್ಲಿ ಬೆಳೆದು ಬಂದಿರುವುದನ್ನು ನೋಡಬಹುದು. ಈ ನಿಟ್ಟಿನಲ್ಲಿ ಎಸ್. ಬಂಗಾರಪ್ಪ, ಎಂ. ವೀರಪ್ಪ ಮೊಯಿಲಿ, ಎನ್. ಧರ್ಮಸಿಂಗ್, ಮಲ್ಲಿಕಾರ್ಜುನ ಖರ್ಗೆ ಮತ್ತು ಕಾಗೋಡು ತಿಮ್ಮಪ್ಪ ಮೊದಲಾದವರು ಕಂಡುಬರುತ್ತಾರೆ. ಅರಸು ಅವರ ಕಾಲದ ರಾಜಕಾರಣವು ಜಾತಿ ಅಥವಾ ಮೀಸಲಾತಿ ರಾಜಕಾರಣಕ್ಕಿಂತ ಭಿನ್ನ ನೆಲೆಯಲ್ಲಿ ಹಿಂದುಳಿದ ವರ್ಗದ ರಾಜಕಾರಣವಾಗಿ ಕಾಲಾಂತರದಲ್ಲಿ ಪರಿವರ್ತಿತವಾಗಿದೆ. ಈ ಕುರಿತು ನಾಲ್ಕನೆ ಅಧ್ಯಾಯದಲ್ಲಿ ವಿಸ್ತೃತವಾಗಿ ಚರ್ಚಿಸಲಾಗುತ್ತದೆ.

*** *** ***

ಹಾವನೂರು ವರದಿಯ ಆಧಾರದ ಮೇಲೆ ಜಾರಿಗೊಳಿಸಿದ ಮೀಸಲಾತಿ ನೀತಿಯು ಸಮಕಾಲೀನ ರಾಜಕಾರಣ ಮತ್ತು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ದೊಡ್ಡಮಟ್ಟದ ಸಂಚಲನವನ್ನು ಹುಟ್ಟುಹಾಕಿತ್ತು. ಸಾಮಾಜಿಕ ನ್ಯಾಯದ ನೆಲೆಯನ್ನು ಹೊಂದಿದ್ದರೂ ಸಮಕಾಲೀನ ರಾಜಕಾರಣ ಮತ್ತು ನಂತರದ ಬೆಳವಣಿಗೆಗಳು, ಇದನ್ನು ಕೆಲವೊಮ್ಮೆ ಮೀಸಲಾತಿ ರಾಜಕಾರಣವಾಗಿ, ಮತ್ತೆ ಕೆಲವೊಮ್ಮೆ ಜಾತಿ ರಾಜಕಾರಣವಾಗಿ ಕಂಡುಬರಲು ಪೂರಕವಾಗಿದೆ.

> ತುರ್ತುಪರಿಸ್ಥಿತಿ ಕೊನೆಯಾದ ಮೇಲೆ ಶ್ರೀಮತಿ ಗಾಂಧಿಯ ವಿರುದ್ಧ ಚಿಕ್ಕಮಗಳೂರಿನಲ್ಲಿ ಪ್ರಚಾರ ಮಾಡಲು ಹೋದ ನನ್ನಂಥವನಿಗೆ ಇನ್ನೊಂದು ಸತ್ಯವನ್ನು ಎದುರಿಸಬೇಕಾಯಿತು. ಇ.ಎಂ.ಎಸ್., ವಿ.ಕೆ.ಜಿಯಂಥ ಹಿರಿಯ ಮಾರ್ಕ್ಸಿಸ್ಟರ ನೇತೃತ್ವದಲ್ಲಿ ಬೆಳೆದ ಕೇರಳದ ರಾಜಕೀಯದಲ್ಲಿ ವರ್ಗ ಕಲಹ ವಿಚಾರ ಬೇರೂರಬೇಕಾಗಿತ್ತು ... ಬದಲಾಗಿ ಅಲ್ಲಿ ನಾವು ಈಗ ಕಾಣುತ್ತಿರುವುದು ನಾಯರ್, ತಿಯಾ, ಕ್ರಿಶ್ಚಿಯನ್, ಮುಸ್ಲಿಂ ಇತ್ಯಾದಿ ಜಾತಿಗಳ ಪಕ್ಷ. ಆದರೆ ಕರ್ನಾಟಕದಲ್ಲಿ ನೇರ ಜಾತಿ ರಾಜಕಾರಣವನ್ನೆ ಮಾಡಿಕೊಂಡು ಬಂದ ಪರಂಪರೆಯಲ್ಲಿ ಶ್ರೀ ಅರಸರು ಮತ್ತು ಹಾವನೂರರು ಜಾತಿಯ ಮೂಲಕವೆ ವರ್ಗಪ್ರಜ್ಞೆಯನ್ನು ಅಲ್ಪಸ್ವಲ್ಪ ಜನರ ನಡುವೆ ಬೇರೂರುವಂತೆ ಮಾಡಿದ್ದರು. ಆದರೆ ಇದರ ಫಲವನ್ನು ಅವರು ಅರ್ಪಣೆ ಮಾಡುತ್ತಿದ್ದದ್ದು ... ಈ ದೇಶದ ವ್ಯವಸ್ಥೆಯನ್ನು ತನ್ನ ಸ್ವಾರ್ಥಕ್ಕೆ ಬಳಸಿಕೊಳ್ಳುತ್ತ ಬಂದಂತಹ ಶ್ರೀಮತಿ ಇಂದಿರಾ ಗಾಂಧಿಯವರಂತಹ ಕುಟಿಲ ನೀತಿಯ ರಾಜಕಾರಣಿಗೆ. ಈ ವಿಪರ್ಯಾಸ ಕೂಡ ನನ್ನನ್ನು ತಬ್ಬಿಬ್ಬು ಮಾಡುವಂಥಾಗಿತ್ತು(ಅನಂತಮೂರ್ತಿ ೨೦೧೦: ೨೩೧).

ಈ ಉಲ್ಲೇಖವು ಜಾತಿರಾಜಕಾರಣಕ್ಕೆ ಒತ್ತುಕೊಡುತ್ತಿದೆಯಾದರೂ ಜಾತಿಯ ಮೂಲಕ ಅಲ್ಪ ಪ್ರಮಾಣದಲ್ಲಿ ವರ್ಗಪ್ರಜ್ಞೆಯನ್ನು ಬೆಳೆಸಿದ್ದನ್ನು ಕೇರಳದ ಜಾತಿ ರಾಜಕಾರಣದೊಂದಿಗೆ ಸಮೀಕರಿಸಲಾಗಿದೆ. ಹಾವನೂರು ವರದಿ ಜಾರಿಯ ಪ್ರಭಾವ ಅನೇಕ ಸ್ವರೂಪದಲ್ಲಿ ರಾಷ್ಟ್ರ ರಾಜಕಾರಣದಲ್ಲಿ ಪ್ರಕಟಗೊಂಡಿತು. ಮಂಡಲ್ ಸಮಿತಿಯ ಮೇಲೆ ಕರ್ನಾಟಕದ ಹಾವನೂರು ವರದಿಯು ಸಾಕಷ್ಟು ಪ್ರಭಾವ ಬೀರಿರುವುದನ್ನು ನೋಡ ಬಹುದಾಗಿದೆ. ಅರಸು ರಾಜಕಾರಣದಿಂದ ಪ್ರಭಾವಿತರಾಗಿ ಬಿಹಾರದ ಮುಖ್ಯಮಂತ್ರಿ ಕರ್ಪೂರಿ ಠಾಕೂರ್ ಅವರು ಹಿಂದುಳಿದ ವರ್ಗ ಮತ್ತು ಜಾತಿಗಳವರಿಗೆ ಮೀಸಲಾತಿ ಜಾರಿಗೊಳಿಸಲು ಪ್ರಯತ್ನಿಸಿದ್ದನ್ನು ಕಾಣಬಹುದು. ಅದಕ್ಕೆ ಪ್ರತಿಕ್ರಿಯೆಯಾಗಿ ಬಿಹಾರದ ರಾಜಕಾರಣ ಮತ್ತು ಸಮಾಜದಲ್ಲುಂಟಾದ ಬಿಗುವಿನ ವಾತಾವರಣದಿಂದ ಕರ್ಪೂರಿ ಠಾಕೂರ್ ಅವರು ರಾಜೀನಾಮೆ ನೀಡಬೇಕಾಯಿತು. ಕರ್ನಾಟಕದಲ್ಲಿ ಬಿಹಾರದಂತೆ ತೀವ್ರ ಪ್ರತಿಕ್ರಿಯೆ ಕಂಡುಬರದಿದ್ದರೂ, ದೇವರಾಜ ಅರಸರ ರಾಜಕೀಯ ಪತನಕ್ಕೆ ಸಾಮಾಜಿಕ ನ್ಯಾಯದ ರಾಜಕಾರಣ ಮುಖ್ಯ ಕಾರಣಗಳಲ್ಲೊಂದಾಗಿರುವ ಸಾಧ್ಯತೆ ಕಂಡುಬರುವುದು. ೧೯೭೨ ರಿಂದ ೧೯೮೦ರವರೆಗೆ ಭೂ ಸುಧಾರಣಾ ಕಾಯ್ದೆ, ಹಾವನೂರು ವರದಿ ಜಾರಿಯು ರಾಜಕೀಯ ಮತ್ತು ಸಾಮಾಜಿಕ ವಲಯಗಳಲ್ಲಿ ಸಾಕಷ್ಟು ವಿರೋಧಿಗಳನ್ನು ಸೃಷ್ಟಿಸಿತ್ತು. ೧೯೭೯ರಲ್ಲಿ ಕಾಂಗ್ರೆಸಿನಿಂದ ಅರಸು ಅವರು ಹೊರಬಂದ ನಂತರ ಕಾಂಗ್ರೆಸ್ಸಿನಿಂದ(೧೯೭೭ರ ನಂತರ) ಹೊರಹೋಗಿದ್ದ ಅನೇಕ ರಾಜಕಾರಣಿ ಗಳು ಕಾಂಗ್ರೆಸ್(ಐ)ಗೆ ಹಿಂದಿರುಗುವುದನ್ನು ಗಮನಿಸಬಹುದಾಗಿದೆ. ಹಾವನೂರು ವರದಿಯನ್ನು ನ್ಯಾಯಾಲಯದಲ್ಲಿ ಪ್ರಶ್ನಿಸುವ ಮೂಲಕ ವರದಿಯ ಸೌಲಭ್ಯಗಳು, ಹಿಂದುಳಿದ ವರ್ಗದವರಿಗೆ ಹೆಚ್ಚು

ದೊರೆತಿರಲಿಲ್ಲ. ಹಿಂದುಳಿದ ವರ್ಗಗಳ ಸಂಘಟನೆಯನ್ನು ಅರಸರು ಕಟ್ಟಲು ಪ್ರಯತ್ನಿಸಿದ್ದು ತಳ ಮಟ್ಟದಿಂದಾಗಿರದೇ ಮೇಲ್ ಮಟ್ಟದಿಂದಾಗಿತ್ತು. ಮೇಲ್ ಮಟ್ಟದಿಂದ ಮಾಡುವ ಸಂಘಟನೆಗಳು ಅಧಿಕಾರ ಕೇಂದ್ರಿತವಾಗಿರುವುವು. ಇವೆಲ್ಲವು ಹಿಂದುಳಿದ ವರ್ಗಗಳು ಮತ್ತು ಅರಸು ಇಬ್ಬರಲ್ಲಿಯೂ ಅನೇಕ ದ್ವಂದ್ವಗಳನ್ನು ಸೃಷ್ಟಿಸಿತ್ತು. ಈ ಎಲ್ಲ ಬೆಳವಣಿಗೆಗಳು ಕರ್ನಾಟಕದ ರಾಜಕೀಯ ಮತ್ತು ಸಾಮಾಜಿಕ ವಾತಾವರಣದಲ್ಲಿ ಗುರುತರ ಬದಲಾವಣೆಗಳನ್ನು ಉಂಟುಮಾಡಿದ್ದವು. ಈ ಬದಲಾವಣೆಗಳು ಸಮಕಾಲೀನ ರಾಜಕೀಯ ಸ್ಥಿತ್ಯಂತರಗಳ ಮೇಲೆ ಪ್ರಭಾವ ಬೀರಿರುವ ಸಾಧ್ಯತೆ ಇದೆ. ಹಾವನೂರು ವರದಿ ಜಾರಿಯು ಸಮಾಜ ಮತ್ತು ಪ್ರಾದೇಶಿಕ ರಾಜಕಾರಣದಲ್ಲಿ ಕಂಡುಬಂದ ಪ್ರತಿಕ್ರಿಯೆಗಳನ್ನು ವಿಸ್ತೃತವಾಗಿ ಅಧ್ಯಯನ ಮಾಡುವ ಅಗತ್ಯವಿದೆ.

### ೨.೩.೨. ಪ್ರತಿಕ್ರಿಯೆ: ಸಮಾಜ ಮತ್ತು ಪ್ರಾದೇಶಿಕ ರಾಜಕಾರಣ

> ಸಮಾನತೆಯೆಂದರೆ ಸಮಾನವಾಗಿರುವ ಜಾತಿಗಳಿಗೆ ಸಮಾನ ಅವಕಾಶವನ್ನು ಒದಗಿಸುವುದು. ಜಾತಿವಾರು ವರ್ಗೀಕರಣವು ಕಾನೂನಿನಲ್ಲಿ ಸಮಾನತೆಯ ಮೂಲಾಂಶವಾಗಿದೆ. ಸಮಾನ ಪರಿಸ್ಥಿತಿಗಳನ್ನು ಸಾರುವ ಜಾತಿಗಳಿಗೆ ಸಮಾನ ಅವಕಾಶವನ್ನು ಕಲ್ಪಿಸುವುದೆ ನಮ್ಮ ಸಂವಿಧಾನದಲ್ಲಿ ಅಡಕವಾಗಿರುವ ಸಮಾನತೆಯ ತತ್ವ. ಹಿಂದುಳಿದ ವರ್ಗಗಳಿಗೆ ಅದ್ಯತೆಯ ಮೇರೆ ವಿಶೇಷ ಅವಕಾಶಗಳನ್ನು ನೀಡುವುದರಿಂದ ಎಲ್ಲರಿಗೂ ಸಮಾನ ಅವಕಾಶ ನೀಡಿದಂತಾಗುತ್ತದೆ(ಹಾವನೂರು ೨೦೦೦: ೧).

ಮತ್ತು

> ನಮ್ಮ ಎರಡು ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷರುಗಳಾಗಿ ಕ್ರಾಂತಿಕಾರಿ ವರದಿ ನೀಡಿದ ಹಾವನೂರು ಮತ್ತು ವೆಂಕಟಸ್ವಾಮಿ ಅವರು ನಿಯೋಜನೆಯಿಂದ ಸಕ್ರಿಯ ರಾಜಕೀಯಕ್ಕೆ ಇಳಿದಿದ್ದವಾದರೂ(ಅದರಲ್ಲಿ ಅವರು ಸಫಲರಾಗುವುದಿಲ್ಲ) ಎಂಥ ರಾಜಕಾರಣದ ಮೂಲಕ ಶ್ರೇಣೀಕೃತ ಜಾತಿ ಪದ್ಧತಿಯನ್ನು ನಮ್ಮ ಪರಂಪರೆಯನ್ನು ಒಂದು ಭಾಗವಾಗಿ ತಾತ್ವಿಕವಾಗಿ ಒಪ್ಪಿಕೊಂಡಿರುವ ರಾಜಕೀಯ ಪಕ್ಷದ ಮೂಲಕ'(ನಾಗಭೂಷಣ್ ೨೦೧೧: ೩೪).

ಮೊದಲ ಉಲ್ಲೇಖದಲ್ಲಿ ಎಲ್.ಜಿ.ಹಾವನೂರು ಅವರು ರಾಜಕೀಯ ಮತ್ತು ಸಾಮಾಜಿಕ ವಲಯದಲ್ಲಿ ಸಮಾನತೆಯ ಅರ್ಥ, ಸಾಮಾಜಿಕ ನ್ಯಾಯದ ಅಗತ್ಯ, ಅದರ ಮಹತ್ವವನ್ನು ಕುರಿತು ಹೇಳಿರುವುದಾಗಿದೆ. ಎರಡನೆಯ ಉಲ್ಲೇಖವು ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷರೀರ್ವರು ಸಕ್ರಿಯ ರಾಜಕಾರಣದಲ್ಲಿ ವಿಫಲರಾಗಲು ರಾಜಕೀಯ ಪಕ್ಷವನ್ನು ಗುರಿಮಾಡಲಾಗಿದೆ. ಸಾಮಾಜಿಕ ನ್ಯಾಯ ಮತ್ತು ಸಮಾನತೆಯ ತತ್ವಗಳ ನೆಲೆಯನ್ನು ಹೊಂದಿದ್ದರೂ, ಸಕ್ರಿಯ ರಾಜಕಾರಣದಲ್ಲಿ ಕಂಡುಬರುವ ವಿಫಲತೆ ವಿರೋಧಾಭಾಸ ದಂತೆ ಕಂಡುಬರುವುದು. ಸದಾಕಾಲ ಚಾಲ್ತಿಯಲ್ಲಿರುವ ಸಂಪ್ರದಾಯ ಮತ್ತು ಆಧುನಿಕ ವಿಚಾರಗಳೆರಡು ಒಟ್ಟೊಟ್ಟಿಗೆ ಸಮಾಜದಲ್ಲಿ ಅಸ್ತಿತ್ವ ಪಡೆದಿರುವುದು. ಇದಕ್ಕೆ ಪೂರಕವಾಗಿ 'ಇದು ಹೆಚ್ಚು ಗೋಚರವಾಗುವುದು ಪಾಶ್ಚಾತ್ಯ ಮಾದರಿಯ ಪ್ರಜಾಪ್ರಭುತ್ವ ರಾಜಕಾರಣವನ್ನು ಅಳವಡಿಸಿ ಕೊಂಡಿರುವಲ್ಲಿ ಆಗಿದೆ' ಎಂಬ ರಜನಿ ಕೊಠಾರಿಯವರ ವಿಶ್ಲೇಷಣೆ ಗಮನಾರ್ಹವಾಗಿದೆ.

ಹಾವನೂರು ವರದಿ ಜಾರಿಗೆ ಕಂಡುಬಂದ ಪ್ರತಿಕ್ರಿಯೆಗಳನ್ನು ಸಮಾಜ ಮತ್ತು ಪ್ರಾದೇಶಿಕ ರಾಜಕಾರಣಗಳೆಂದು ಎರಡು ಭಾಗಗಳಾಗಿ ವಿಂಗಡಿಸಲಾಗಿದೆ. ಪತ್ರಿಕೆ, ಸಾಹಿತ್ಯ ಮತ್ತು ದೃಶ್ಯ ಮಾಧ್ಯಮಗಳಲ್ಲಿ ಸಾಮಾಜಿಕ ನ್ಯಾಯ ಮತ್ತು ಮೀಸಲಾತಿ ಕುರಿತ ಚಿಂತನೆಗಳನ್ನು ಅವಲೋಕಿಸಲು ಪ್ರಯತ್ನಿಸಿದೆ. ಹಾವನೂರು ವರದಿ ಅನುಷ್ಠಾನಕ್ಕೆ ೧೯೭೭ ರಿಂದ ೧೯೮೦ರವರೆಗೆ ರಾಷ್ಟ್ರ ರಾಜಕಾರಣ, ವ್ಯಕ್ತಿ ರಾಜಕಾರಣ ಮತ್ತು ಪ್ರಾದೇಶಿಕ ರಾಜಕಾರಣದಲ್ಲಿ ಕಂಡುಬಂದ ಪ್ರತಿಕ್ರಿಯೆಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ.

### ೨.೩.೨.೧. ಸಮೂಹ ಮಾಧ್ಯಮಗಳು ಮತ್ತು ಸಾಮಾಜಿಕ ಚಿಂತನೆ

ಹಾವನೂರು ವರದಿ ಜಾರಿಯು ಕರ್ನಾಟಕ ರಾಜಕಾರಣ ಮತ್ತು ಸಮಾಜದ ಮೇಲೆ ಬೀರಿದ ಪರಿಣಾಮಗಳು ಅಪಾರ. ವರದಿ ಜಾರಿಗೆ ಸಮಾಜದಲ್ಲಿ ಕಂಡುಬಂದ ಪ್ರತಿಕ್ರಿಯೆಗಳ ಸ್ವರೂಪವನ್ನು ಚರ್ಚಿಸುವುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ. ಸಮಾಜದಲ್ಲಿ ೧೯೮೦ರವರೆಗೆ ಕಂಡುಬಂದ ಪ್ರತಿಕ್ರಿಯೆ ಗಳನ್ನು ಪತ್ರಿಕೆ, ಸಾಹಿತ್ಯ ಮತ್ತು ದೃಶ್ಯ ಮಾಧ್ಯಮಗಳ ಮೂಲಕ ಅವಲೋಕಿಸಲು ಪ್ರಯತ್ನಿಸಿದೆ.

### ೨.೩.೨.೧.೧. ಪತ್ರಿಕಾರಂಗ

"ಹಿಂದುಳಿದವರು ಮತ್ತು ಪರಿಶಿಷ್ಟ ಜಾತಿಯವರು ಕಾಂಗ್ರೆಸ್(ಸಿ) ಪಟ್ಟಿಯಲ್ಲಿ ಪ್ರಧಾನರಾಗಿದ್ದಾರೆ" (ಡೆಕ್ಕನ್ ಹೆರಾಲ್ಡ್ ೧೯೭೮: ೧); "ಅರಸು ನಂಬಿಕೆ ಬಡವರ ಬೆಂಬಲ ಕುಗ್ಗಿಲ್ಲ"(ಕನ್ನಡಪ್ರಭ ೧೯೭೮: ೧); "ಕರ್ನಾಟಕ: ಅರಸ್ ರೈಡ್ಸ್ ಅಗೇನ್"(ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ ೧೯೭೮: ೪೪೦). ಈ ಮೇಲಿನ ವರದಿಗಳು ೧೯೭೮ರ ವಿಧಾನಸಭಾ ಚುನಾವಣೆಯಲ್ಲಿ ಹಿಂದುಳಿದ ವರ್ಗಗಳ ಅಭಿವೃದ್ಧಿ ಕಾರ್ಯಕ್ರಮಗಳಿಗೆ ದೊರೆತ ಬೆಂಬಲ ಹಾಗೂ ಸಮಾಜದ ಪ್ರತಿಕ್ರಿಯೆಗಳಾಗಿವೆ. ಆರಂಭದ ವರದಿಗಳಲ್ಲಿ ಜಾತಿ ಮತ್ತು ಮೀಸಲಾತಿ ರಾಜಕಾರಣದ ನೆಲೆಗಟ್ಟಿನಲ್ಲಿ ಕಂಡುಬರುವ ಚುನಾವಣಾ ಲೆಕ್ಕಾಚಾರವಾದರೆ, ಕೊನೆಯದು ಸಮಾಜದ ಪ್ರತಿಕ್ರಿಯೆಯ ರೂಪವನ್ನು ಸೂಚಿಸುವುದು. ಹಾವನೂರು ವರದಿ ಜಾರಿಗೊಂಡ ನಂತರ ಪತ್ರಿಕೆಯಲ್ಲಿ ನಕಾರಾತ್ಮಕ ಧೋರಣೆಗಳು ಹೆಚ್ಚಾಗಿವೆ. ಈ ದಿಸೆಯಲ್ಲಿ ೧೯೮೦ರವರೆಗೆ ಪತ್ರಿಕೆಗಳಲ್ಲಿ ಕಂಡುಬಂದ ಕೆಲವು ಪ್ರತಿಕ್ರಿಯೆಗಳನ್ನು ಕೆಳಗೆ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

> ಸರಕಾರ ಪ್ರಕಟಸಿರುವ ಈ ನಿರ್ಧಾರಕ್ಕೆ ಹಾವನೂರ್ ಆಯೋಗದ ಶಿಫಾರಸ್ಸುಗಳೆ ಆಧಾರವಾದರೂ ಕೆಲವು ವಿಷಯಗಳಲ್ಲಿ ಸರಕಾರ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ತನ್ನ ಔದಾರ್ಯವನ್ನು ಪ್ರಕಟಿಸಿದೆ. ಹುದ್ದೆಗಳ ಮೀಸಲಾತಿಗೆ ಆಯೋಗ ಸೂಚಿಸಿದ್ದು ಶೇ.೩೨ರಷ್ಟು ಸ್ಥಾನ ಮಾತ್ರ, ಜೊತೆಗೆ ವಿಶೇಷ ತಂಡಕ್ಕೆ ಇದನ್ನು ವಿಸ್ತರಿಸುವ ವಿಚಾರವೂ ಸರಕಾರದ್ದೆ ... ವರ್ಗೀಕರಣ ವ್ಯವಸ್ಥೆಯಲ್ಲಿ ಸುಧಾರಣೆಗೆ ಅವಕಾಶವಿದೆಯೆಂಬುದನ್ನು ಸರಕಾರವೂ ಗ್ರಹಿಸಿದೆ. ಅಸ್ತಿತ್ವಕ್ಕೆ ಬರಲಿರುವ ಹಿಂದುಳಿದ ವರ್ಗಗಳ ಸಲಹಾ ಮಂಡಲಿ ಆ ಕೆಲಸವನ್ನು ಮಾಡಬೇಕು. ಹಾವನೂರು ಆಯೋಗ ತನ್ನ ವರದಿ ಸಲ್ಲಿಸಿ ಎಷ್ಟೋ ಸಮಯವಾಗಿದೆ. ಸರ್ಕಾರ ಈಗಷ್ಟೆ ಆ ಬಗ್ಗೆ ಕ್ರಮ ಕೈಗೊಂಡಿರುದಕ್ಕೂ ಚುನಾವಣೆಗಳಿಗೂ ಜನ ಸಂಬಂಧ ಕಲ್ಪಿಸಬಹುದಾದ ಸಂಭವವೂ ಇಲ್ಲದಿಲ್ಲ(ಪ್ರಜಾವಾಣಿ ೧೯೭೭: ೬).

ಮತ್ತು

> ಹಾವನೂರ ವರದಿಯಿಂದ ಹಿಂದುಳಿದವರಿಗೆ ಅನ್ಯಾಯ: ಬೊಮ್ಮಾಯಿ ಆಪಾದನೆ(ಕನ್ನಡಪ್ರಭ ೧೯೭೭: ೧).

ಇವುಗಳಲ್ಲಿ ಕಂಡುಬರುತ್ತಿರುವ ವಿಚಾರಗಳು ಮೇಲ್ನೋಟಕ್ಕೆ ಭಿನ್ನವಾಗಿದ್ದರೂ ಪರೋಕ್ಷವಾಗಿ ಸರ್ಕಾರ ಕೈಗೊಂಡ ನಿರ್ಧಾರದ ವ್ಯಂಗ್ಯ ಅಣಕವಾಗಿದೆ. ಚುನಾವಣಾ ತಂತ್ರವೆ ಎಂಬ ಅನುಮಾನ ಸಂಪಾದಕೀಯದಲ್ಲಿರುವುದು ಪತ್ರಿಕೆಯ ಆಲೋಚನ ಸ್ವರೂಪದ ಮೇಲೆ ಬೆಳಕು ಚೆಲ್ಲುವುದು. ಇದು ಮಧ್ಯಪಂಥೀಯ ವಿಚಾರಧಾರೆಯ ಪ್ರಮುಖ ಕನ್ನಡ ಪತ್ರಿಕೆಯಾಗಿದ್ದು, ಸಂಪಾದಕೀಯವು ಪತ್ರಿಕೆಯ ಪ್ರಮುಖರ ವಿಚಾರಧಾರೆ ಹಾಗೂ ಪ್ರತಿಕ್ರಿಯೆಯೂ ಆಗಿರುವುದು. ಕನ್ನಡಪ್ರಭದ ವರದಿಯಲ್ಲಿ ಬೊಮ್ಮಾಯಿ ಅವರು 'ಹಾವನೂರು ವರದಿಯ ಕೆಲವು ತತ್ವಗಳನ್ನು ಸ್ವಾಗತಿಸುತ್ತಾ, ಕೆಲವು ಮುಂದುವರಿದ ವರ್ಗಗಳನ್ನು ಹಿಂದುಳಿದ ವರ್ಗಗಳಿಗೆ ಸೇರಿಸಿರುವುದು ಸರಿಯಲ್ಲ. ಹಿಂದುಳಿದವರನ್ನು ವರ್ಗೀಕರಿಸುವುದಕ್ಕೂ ಭೂ ಪ್ರಶ್ನೆಯನ್ನು ಆರ್ಥಿಕ ಆಧಾರವನ್ನಾಗಿ ಪರಿಗಣಿಸಬೇಕು. ಜಾತಿಯೊಂದೆ ಆಧಾರವಾಗಿರಬಾರದು' ಎಂದು ಪ್ರತಿಕ್ರಿಯೆ ವ್ಯಕ್ತಪಡಿಸಿರುವರು. ಈ ಎರಡೂ ಉಲ್ಲೇಖಗಳು ಪತ್ರಿಕೆ ಮತ್ತು ವಿರೋಧ ಪಕ್ಷದ ಶಾಸಕರ ಪ್ರತಿಕ್ರಿಯೆಗಳು. ಈ ವರ್ಗಗಳೇ ಸಮಾಜದ ಮಧ್ಯಮ, ಮೇಲ್‌ಮಧ್ಯಮ ವರ್ಗ ಮತ್ತು ಮೇಲ್‌ಜಾತಿಗಳಾಗಿದ್ದು, ಮುಂದಿನ ಹಂತದಲ್ಲಿ ರಾಜಕೀಯ ಮತ್ತು ಸಾಮಾಜಿಕ ಸ್ಥಿತ್ಯಂತರದ ಮೇಲೆ ಪರಿಣಾಮ ಬೀರುವುದು.

ಪತ್ರಿಕಾ ಮಾಧ್ಯಮಗಳಲ್ಲಿ ಹಾವನೂರು ವರದಿ ಕುರಿತಂತೆ ಪರ, ವಿರೋಧ ಚರ್ಚೆ ಮತ್ತು ಪ್ರತಿಕ್ರಿಯೆಗಳು ಕಂಡುಬರುವುವು. "ಮಲ್ಲಾರಾಧ್ಯರ ಹೇಳಿಕೆ ಪ್ರತಿಭಟಿಸಿ ವರದಿಗೆ ಬೆಂಬಲ"(ಸ್ವಾಮಿ ೧೯೭೭: ೬); "ಹಾವನೂರು ವರದಿ ಜಾತಿಯತೆಯನ್ನು ಪ್ರೋತ್ಸಾಹಿಸುತ್ತದೆ: ರಾವ್"(ರಾವ್ ೧೯೭೮ ಮಾರ್ಚ್ ೧೧); "ಬ್ರಾಹ್ಮಣರಿಗೆ ನೋವು ಮಾಡಿರುವುದು ಸರ್ಕಾರವೆ ಹೊರತು, ಹಾವನೂರಲ್ಲ"(ಡೆಕ್ಕನ್ ಹೆರಾಲ್ಡ್ ೧೯೭೮ ಜೂನ್ ೮); "ಹಾವನೂರು ವರದಿ ವಿರುದ್ಧ ಚಳವಳಿ ಅನಗತ್ಯ"(ಕಟ್ಟಿಮನಿ ೧೯೭೮: ೬); "ಹಾವನೂರು ಸಮಿತಿಯ ನಿಲುವನ್ನು ಸಮರ್ಥಿಸಲಾಯಿತು"(ಡೆಕ್ಕನ್ ಹೆರಾಲ್ಡ್ ೧೯೭೯ ಏಪ್ರಿಲ್ ೧೧) ಮೊದಲಾದವುಗಳು ಸಮಾಜದ ವಿಭಿನ್ನ ವರ್ಗಗಳ ಪ್ರತಿಕ್ರಿಯೆಗಳು. ಈ ವರದಿಗಳಲ್ಲಿ ೧೯೭೯ರವರೆಗೆ ಹಾವನೂರು ವರಿದಿಯ ಅನುಷ್ಠಾನ ಪಡೆದ ರೂಪಗಳನ್ನು ಗುರುತಿಸಬಹುದು. ಆರಂಭದಲ್ಲಿ ನೇರವಾಗಿ

ಕಂಡುಬರುತ್ತಿದ್ದ ವಿರೋಧ ೧೯೭೮ರ ಹೊತ್ತಿಗೆ ಅಧಿಕವಾಗುವುದು. ೧೯೭೬ರಲ್ಲಿ ಹಾವನೂರು ವರದಿ ಜಾರಿಯನ್ನು ಪ್ರಶ್ನಿಸಿ ನ್ಯಾಯಾಲಯಕ್ಕೆ ಅಪೀಲು ಹೋಗಿರುವುದನ್ನು ನೋಡಬಹುದು. ಇದರ ಮತ್ತೊಂದು ಪರಿಣಾಮ ಸಮಾಜದಲ್ಲಿ ಜಾತಿ ಸಂಘಟನೆ ಹಾಗೂ ಜಾತಿ ಸಮ್ಮೇಳನಗಳು ಮೊದಲಿಗಿಂತ ಹೆಚ್ಚಾಗಿರುವುದಾಗಿದೆ. ೧೯೭೩ರ ಲೇಖಕರ ಒಕ್ಕೂಟದ ನಂತರ ಜಾತಿ ನೆಲೆಯಲ್ಲಿ ಬ್ರಾಹ್ಮಣರ ಸಮ್ಮೇಳನಗಳು ಹೆಚ್ಚಿದ್ದು, ವರದಿ ಜಾರಿಯ ನಂತರ ವಿಚಾರ ಸಂಕಿರಣಗಳನ್ನು ಕಾಣಬಹುದು. ಹಾವನೂರು ವರದಿಯ ಜಾರಿಯನ್ನು ಸಮರ್ಥಿಸುವ ಪ್ರತಿಕ್ರಿಯೆಗಳನ್ನು ಕಾಣಬಹುದು. ಈ ಪ್ರತಿಕ್ರಿಯೆಗಳನ್ನು ನೀಡುತ್ತಿದ್ದವರು ಬಹುತೇಕ ಸಮಾಜವಾದಿಗಳು, ಪ್ರಗತಿಪರರೆಂದು ಗುರುತಿಸಲ್ಪಟ್ಟಿದ್ದವರು. ಈ ವಲಯದ ಬಹುತೇಕರು ಸಾಹಿತ್ಯಿಕ ವಲಯಗಳಲ್ಲಿ ಗುರುತಿಸಲ್ಪಟ್ಟಿದ್ದಾರೆ. ಆದರೆ ಹಿಂದುಳಿದ ವರ್ಗಗಳ ಜನಸಾಮಾನ್ಯರ ಪ್ರತಿಕ್ರಿಯೆಗಳು ಪತ್ರಿಕೆಯಲ್ಲಿ ಕಂಡುಬಂದಿಲ್ಲ.

### ೨.೩.೨.೧.೨. ಸಾಹಿತ್ಯರಂಗ

ಸಾಹಿತ್ಯದಲ್ಲಿ ನೇರವಾಗಿ ಹಾವನೂರು ವರದಿಗೆ ಪ್ರತಿಕ್ರಿಯೆಗಳು ಅಷ್ಟಾಗಿ ಕಂಡುಬಂದಿಲ್ಲ. ಆದರೆ ವರದಿಯ ಜಾರಿ ಕುರಿತ ವಿದ್ವಾಂಸರ ಚರ್ಚೆಗಳು ಕನ್ನಡ ಸಾಹಿತ್ಯ ನಿಯತಕಾಲಿಕೆಗಳಲ್ಲೆ ಅಧಿಕವಾಗಿದೆ. ಈ ದಿಸೆಯಲ್ಲಿ 'ಸಂಕ್ರಮಣ' ಪ್ರಮುಖ ವೇದಿಕೆಯಾಗಿ ಕಾರ್ಯನಿರ್ವಹಿಸಿರುವುದು. 'ಅತೋ ಭ್ರಷ್ಟರು ತತೋ ಭ್ರಷ್ಟರು' ಎಂಬ ಜಾವಳಿ ಅವರ ಕವನ ಹಾವನೂರು ವರದಿಗೆ ಬಂದ ಪ್ರತಿಕ್ರಿಯೆಯ ರೂಪವಾಗಿದೆ.

> ಸತ್ಯವೆಂದರೆ
> ಇವರು ಹಿಂದುಳಿದವರು.
> ವಿಚಿತ್ರವೆಂದರೆ
> ಮುಂದುವರೆದವರೆಂದು ಹಣೆ ಮೇಲೆ
> ಪಟ್ಟ ಬರೆಯಿಸಿಕೊಂಡಿರುವ ಭ್ರಷ್ಟರು.
> ದೊಡ್ಡ ಹೆಸರಿನ ಲಿಂಗವಂತರು.
> ...
> ಇವರು-
> ದುಡಿಯುವ ಜಾತಿಯ
> ಹೊಲೆ ಕುರುಬ ಬೇಡ ಕಬ್ಬಲಿಗರ
> ಥೇಟು ತದ್ರೂಪ ನೆರಳು.
> ...
> ಸ್ವತಂತ್ರ-ಜಾತ್ಯಾತೀತ-ಸಮಾಜವಾದಿ
> ದೇಶ ಭಾರತದಲ್ಲಿ
> ಸು-ಕುವಿಶಾಲಕರ್ನಾಟಕದಲ್ಲಿ
> ಇವರಿಗೀಗ ಅವಕಾಶವಿಲ್ಲ
> ಏಕೆಂದರೆ ಇವರ ಜಾತಿಯ
> ಯಾರೋ ಒಬ್ಬಿಬ್ಬರು ಮಂತ್ರಿಗಳಾಗಿ
> ಕಾರುಭಾರು ಮಾಡಿದರಂತೆ(ಜಾವಳಿ ೧೯೯೮: ೮೯-೯೦).

ಆರ್ಥಿಕ ನೆಲೆಯಲ್ಲಿ ಮೀಸಲಾತಿ ನಿರ್ಧಾರ ಆಗಬೇಕೆಂಬ ಧೋರಣೆ ವ್ಯಕ್ತವಾಗಿದೆ. ಜಾತ್ಯಾತೀತ ಸಮಾಜ ವಾದಿ ರಾಷ್ಟ್ರದಲ್ಲಿ, ಸಮಾಜವನ್ನು ಜಾತಿ ಹೆಸರಿನಲ್ಲಿ ವರ್ಗೀಕರಣ ಮತ್ತು ಜಾತಿ ಆಧಾರದ ಮೇಲೆ ಹಿಂದುಳಿದವರೆಂದು ಗುರುತಿಸಲ್ಪಟ್ಟವರಿಗೆ ವಿಶೇಷ ಸೌಲಭ್ಯ ನೀಡುವುದರ ವಿರುದ್ಧ ಅಸಮಾಧಾನ ಕಾಣುವುದು. ಪ್ರಸ್ತುತದಲ್ಲಿಯೂ ಮೀಸಲಾತಿ ವಿರೋಧಿ ಹಿನ್ನೆಲೆ ಕಂಡುಬರುವ ವಿಚಾರವೇ ಆಗಿದೆ. ಆದರೆ ಸಾಮಾಜಿಕ ಹಿನ್ನೆಡೆ ಮತ್ತು ಆರ್ಥಿಕ ಹಿನ್ನೆಡೆಗಿರುವ ಅಂತರ ಅಗಾಧವಾದುದು.

### ೨.೩.೨.೧.೩. ಸಿನಿಮಾರಂಗ

> ಭಾರತೀಯ ಸಿನಿಮಾಗಳ ಆಲೋಚನೆಗಳಲ್ಲಿ ಬೂರ್ಜ್ವಾಗಳು, ಆಧುನಿಕತೆ ಮತ್ತು ಆಧುನೀಕರಣದಲ್ಲಿ ಮೊದಲಿರುವ ಸಾಹಸಿಗಳ ಸುತ್ತ ಕಥೆ ಕೇಂದ್ರೀಕರಿಸಿರುತ್ತದೆ. ಐತಿಹಾಸಿಕವಾಗಿ ಈ ವರ್ಗ ಪಾರಂಪರಿಕವಾಗಿ ಸಮಾಜದಲ್ಲಿ ಶ್ರೇಷ್ಠರಾಗಿರುವುದರ ಜೊತೆಗೆ, ವಸಾಹತು ಕಾನೂನುಗಳೊಡನೆ ಒಡನಾಟ ಹೊಂದಿದ್ದವರು ... ಭಾರತೀಯ ಸಿನಿಮಾಗಳಲ್ಲಿ ರಾಷ್ಟ್ರದ ವಿವಿಧ ಆಯಾಮಗಳ

> ಪ್ರಸಂಗಗಳು ಪ್ರದರ್ಶಿತವಾಗುತ್ತವೆ. ಭಾರತದಲ್ಲಿ ನೇಷನ್ ಸ್ಟೇಟ್‌ನ ಆದರ್ಶಗಳು ನಿರಂತರವಾಗಿ ಬದಲಾವಣೆಗೆ ಒಳಗಾದರೂ, ೨೦ನೇ ಶತಮಾನದ ಆರಂಭದ ಬೂರ್ಜ್ವಾ ಸಾಮಾಜಿಕತೆ ರಾಷ್ಟ್ರದೊಳಗಿರುವ ಪಿತೃಪ್ರಧಾನ ವ್ಯವಸ್ಥೆಯನ್ನು ಎತ್ತಿಹಿಡಿಯುತ್ತದೆ ಮತ್ತು ಜಾತಿಗಳು ಚಾರಿತ್ರಿಕ ಬದಲಾವಣೆಯ ಮನೋಧರ್ಮಕ್ಕೆ ವಿರುದ್ಧವಾಗಿ ಕಂಡುಬರುತ್ತದೆ(ದೇಶ್‌ಪಾಂಡೆ ೨೦೦೭: ೯೫).

ಜಾತೀಯತೆಯ ಪ್ರಬಲ ಹಿಡಿತ ಸಿನಿಮಾರಂಗದಲ್ಲಿ ಅಸ್ತಿತ್ವ ಪಡೆದಿರುವ ಕುರಿತ ವಿಶ್ಲೇಷಣೆ ಆಗಿದೆ. ೧೯೭೦ರ ದಶಕದ ಸಿನಿಮಾಗಳ ವಿಷಯದ ರೂಪಾಂತರಕ್ಕೆ ಭಾರತೀಯ ಮಧ್ಯಮ ವರ್ಗದಲ್ಲುಂಟಾದ ಬದಲಾವಣೆಗಳೆ ಹೊಣೆ ಎಂದು ದೇಶ್‌ಪಾಂಡೆ ಅವರು ಅಭಿಪ್ರಾಯಪಡುವರು. ೧೯೭೭ರಲ್ಲಿ ಜಾರಿಯಾದ ಹಾವನೂರು ವರದಿಯ ಪ್ರಭಾವ ಪರಿಣಾಮಗಳು ಸಿನಿಮಾರಂಗದಲ್ಲಿ ವ್ಯಕ್ತಗೊಂಡ ಸ್ವರೂಪ ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

ಜಾತಿ, ವರ್ಗಗಳ ಹಿನ್ನೆಲೆಯಲ್ಲಿ ೧೯೭೫ ರಿಂದ ೧೯೮೫ರವರೆಗೆ ಪ್ರಕಟವಾದ ಕೆಲವು ಪ್ರಮುಖ ಚಲನಚಿತ್ರಗಳನ್ನು ಚರ್ಚೆಗೆ ತೆಗೆದುಕೊಳ್ಳಲಾಗಿದೆ. ಅವುಗಳೆಂದರೆ ನಂಜುಡ ನಕ್ಕಾಗ(ಕಸ್ತೂರ್, ೧೯೭೫), ಹೇಮಾವತಿ(ಸಿದ್ಧಲಿಂಗಯ್ಯ, ೧೯೭೭), ಕರಾವಳಿ(ವಿಜಯಕುಮಾರ್, ೧೯೭೭), ಹುಲಿ ಬಂತು ಹುಲಿ (ಚಂದ್ರಶೇಖರ್, ೧೯೭೮), ಮಲೆಯ ಮಕ್ಕಳು(ಶಿವರಾಮ್ ಕಾರಂತ, ೧೯೭೮) ಮತ್ತು ಒಂದು ಊರಿನ ಕಥೆ(ರಾಮಚಂದ್ರಪ್ಪ, ೧೯೭೮) ಮೊದಲಾದವುಗಳು. ನಂಜುಡ ನಕ್ಕಾಗ(ಕಸ್ತೂರ್, ೧೯೭೫) ಹಳ್ಳಿಯಲ್ಲಿರುವ ಜಾತಿಯತೆ, ಅಸ್ಪೃಶ್ಯತೆಯ ಚಿತ್ರಣವಾಗಿದೆ. ಮೇಲ್ವರ್ಗ ಮತ್ತು ಕೆಳವರ್ಗದವರ ನಡುವೆ ಅರಳುವ ಪ್ರೀತಿಯನ್ನು ವಿರೋಧಿಸುವ ಹಳ್ಳಿಯ ಮುಖ್ಯಸ್ಥರು ಹಾಗೂ ಜಾತಿಪದ್ಧತಿಯನ್ನು ವಿರೋಧಿಸುವ ಸಾಹಸಿ ತರುಣ ಊರ ಜಾತ್ರೆಯಲ್ಲಿ ಹರಿಜನರಿಂದ ತೇರನ್ನು ಎಳೆಸುವುದಾಗಿ ಪಣ ತೊಟ್ಟು ಯಶಸ್ವಿಯಾಗುವ ಕಥೆಯನ್ನು ಹೊಂದಿದೆ. ಇಂತಹುದೆ ಚಿತ್ರ ಹೇಮಾವತಿ(ಸಿದ್ಧಲಿಂಗಯ್ಯ, ೧೯೭೭) ಗೋರೂರು ರಾಮಸ್ವಾಮಿಯವರ ಕಾದಂಬರಿ ಆಧಾರಿತವಾಗಿದೆ. ಜಾತಿಜಾತಿಗಳ ನಡುವಿನ ಸಂಘರ್ಷಗಳು, ಮೇಲ್ ಜಾತಿಗಳವರಲ್ಲೆ ಇರುವ ಈರ್ಷ್ಯೆ, ಅವಕಾಶವಾದ ಚಿತ್ರಿತವಾಗಿದೆ. ಮತ್ತೊಂದು ಕಡೆ ಬುದ್ಧಿಶಕ್ತಿ, ಕಲೆ, ಚಾತುರ್ಯವನ್ನು ಸರಿಯಾದ ತರಬೇತಿಯ ಮೂಲಕ ಎಲ್ಲ ಜಾತಿಯವರಲ್ಲೂ ಹೆಚ್ಚಿಸಲು ಸಾಧ್ಯವೆಂದು ಸಾಬೀತು ಪಡಿಸುವ ಸಂಗೀತಗಾರ. ಪ್ರೀತಿ ಎಲ್ಲೆಡೆ ಅರಳುತ್ತದೆ, ಜಾತಿ ಭೇದವಿರುವುದಿಲ್ಲವೆಂಬಂತೆ ಊರ ಅಯ್ಯಂಗಾರಿಯೊಬ್ಬರ ಮಗಳು ಕೆಳಜಾತಿ ಹುಡುಗನನ್ನು ಮತ್ತು ಕೆಳಜಾತಿ ಹುಡುಗಿಯನ್ನು ಮೇಲ್‌ಜಾತಿಯ ಹುಡುಗನೊಬ್ಬ ಪ್ರೀತಿಸುವರು. ಚಿತ್ರದ ಕೊನೆಯಲ್ಲಿ ಜಾತಿ ಸಂಘರ್ಷ ತೀವ್ರತೆ ಪಡೆದು, ದೇವಾಲಯ ಪ್ರವೇಶಕ್ಕೆ ಎಲ್ಲ ಜಾತಿಗಳಿಗೆ ಅವಕಾಶ ದೊರೆಯುವುದು. ಈ ಮೂಲಕ ಜಾತಿ ವ್ಯವಸ್ಥೆಯಲ್ಲಿ ಬದಲಾವಣೆ ತರಬಯಸುವರು. ಇದಕ್ಕಿಂತ ಭಿನ್ನವಾದ ಪ್ರಾದೇಶಿಕ ಸೊಗಡಿನ, ಜನಾಂಗವೊಂದರ ಬದುಕಿನ ಚಿತ್ರಣ ಕರಾವಳಿ(ವಿಜಯಕುಮಾರ್, ೧೯೭೭). ಕರ್ನಾಟಕದ ಕರಾವಳಿ ಪ್ರದೇಶದ ಮೀನುಗಾರರ ಬದುಕಿನ ಚಿತ್ರಣ. ಚಿತ್ರದಲ್ಲಿ ಕೋಮು ಸೌಹಾರ್ದವನ್ನು ಬಿಂಬಿಸುವ ಪ್ರಯತ್ನವಿದೆ. ಗ್ರಾಮ ಜೀವನದ ಬಡತನ, ಸಿರಿತನ, ಭ್ರಷ್ಟತೆ, ಜಾತೀಯ ಪ್ರತ್ಯೇಕತೆಯನ್ನು ಚಿತ್ರಿಸಲಾಗಿದೆ. ಈ ಚಲನಚಿತ್ರ ಸೆನ್ಸಾರ್ ಸಮಸ್ಯೆಯನ್ನು ತೀವ್ರವಾಗಿ ಎದುರಿಸಬೇಕಾಯಿತು. ಕೊನೆಗೂ ಕರಾವಳಿ ತೀರದಲ್ಲಿ ಪ್ರದರ್ಶನಕ್ಕೆ ಅವಕಾಶ ದೊರಕಲಿಲ್ಲ. ಜನಾಂಗ ಆಧಾರಿತವಾದ ಹುಲಿ ಬಂತು ಹುಲಿ(ಚಂದ್ರಶೇಖರ್, ೧೯೭೮) ಮತ್ತು ಮಲೆಯ ಮಕ್ಕಳು(ಶಿವರಾಮ್ ಕಾರಂತ, ೧೯೭೮) ಪ್ರಮುಖ ಚಲನಚಿತ್ರಗಳಾಗಿವೆ. ಹುಲಿ ಬಂತು ಹುಲಿ ಜೇನು ಕುರುಬರ ಜೀವನದ ಧಾರುಣತೆಯ ಚಿತ್ರಣವಾದರೆ, ಮಲೆಯ ಮಕ್ಕಳು ಶಿವರಾಮ ಕಾರಂತರ ಕುಡಿಯರ ಕೂಸು ಕಾದಂಬರಿ ಆಧಾರಿತ ಚಿತ್ರ, ಜನಾಂಗವೊಂದರ ಪರಿಸರ, ಜೀವನ ವಿಧಾನ, ಬಡತನದ ಚಿತ್ರಣವಿದೆ. ಇವೆಲ್ಲಕ್ಕಿಂತ ಭಿನ್ನವಾದ ಚಿತ್ರ ಒಂದು ಊರಿನ ಕಥೆ(ರಾಮಚಂದ್ರಪ್ಪ, ೧೯೭೮). ಗ್ರಾಮೀಣ ಪರಿಸರದೊಳಗಿನ ಜಾತಿ, ವರ್ಗ ಭೇಧಗಳ ಚಿತ್ರಣ ಕಾಣಬಹುದು. ಕೆಳಜಾತಿ ಒಳಗಿರುವ ಭೇದ ಭಾವ, ಎಡಗೈ-ಬಲಗೈಗಳ ಗುದ್ದಾಟವನ್ನು ನೋಡಬಹುದು. ಈ ನಡುವೆ ಬೇರೆ ಬೇರೆ ಜಾತಿಯವರ ನಡುವೆ ಅರಳುವ ಪ್ರೇಮ ಪ್ರಸಂಗವಿದ್ದು, ಆ ಮೂಲಕ ಒಳ ರಾಜಕಾರಣವನ್ನು ಪರಿಚಯಿಸುವ ಯತ್ನ ಕಂಡುಬರುವುದು. ಈ ಮೇಲೆ ಚರ್ಚಿಸಿರುವ ಚಲನಚಿತ್ರಗಳೆಲ್ಲವೂ ೧೯೮೦ರ ಒಳಗೆ ತೆರೆ ಕಂಡಂತಹ ಚಿತ್ರಗಳಾಗಿವೆ. ಜಾತಿವ್ಯವಸ್ಥೆ, ಅಸ್ಪೃಶ್ಯತೆ

ಹಾಗೂ ಜನಾಂಗಗಳ ಚಿತ್ರಣ ಅಧಿಕರುವುದು ಸಮಕಾಲೀನ ರಾಜಕಾರಣದಲ್ಲುಂಟಾದ ಸ್ಥಿತ್ಯಂತರಗಳ ಕಡೆಗೆ ಮುಖ ಮಾಡುವುದು.

೧೯೮೦ರ ನಂತರ ಕಂಡುಬರುವ ಮುಖ್ಯ ಚಿತ್ರಗಳೆಂದರೆ ಕುರುಬರ ಲಕ್ಕ(ಕೃಷ್ಣಮೂರ್ತಿ, ೧೯೮೧), ಬೆತ್ತಲೆ ಸೇವೆ(ಜಯರಾಂ, ೧೯೮೨), ನಮ್ಮೂರ ಬಸವಿ(ನರಸಿಂಹ, ೧೯೮೩), ಧರಣಿ ಮಂಡಲ ಮಧ್ಯದೊಳಗೆ(ಕಣಗಾಲ್, ೧೯೮೩) ಮತ್ತು ಶಂಖನಾದ(ಕುಲಕರ್ಣಿ, ೧೯೮೬). ಕುರುಬರ ಲಕ್ಕ (ಕೃಷ್ಣಮೂರ್ತಿ, ೧೯೮೧) ಗ್ರಾಮ ಸಮಾಜದಲ್ಲಿ ಜಾತಿ ವ್ಯವಸ್ಥೆಯ ವಿರುದ್ಧ ಬಂಡೇಳುವ ಜೀತದಾಳಾಗಿದ್ದ ಯುವಕನ ಚಿತ್ರಣವಾಗಿದೆ. ಬೆತ್ತಲೆ ಸೇವೆ(ಜಯರಾಂ, ೧೯೮೨) ಮತ್ತು ನಮ್ಮೂರ ಬಸವಿ(ನರಸಿಂಹ, ೧೯೮೩) ಜಾತಿ–ಧರ್ಮದ ಹೆಸರಿನಲ್ಲಿ ನಡೆಯುವ ಸ್ತ್ರೀ ಶೋಷಣಾ ಪದ್ಧತಿಗಳನ್ನು ವಿರೋಧಿಸುತ್ತ, ಜಾಗೃತಿ ಮೂಡಿಸುವ ಚಲನಚಿತ್ರಗಳಾಗಿವೆ. ಧರಣಿ ಮಂಡಲ ಮಧ್ಯದೊಳಗೆ(ಕಣಗಾಲ್, ೧೯೮೩) ಮೇಲ್‌ವರ್ಗದ ಶ್ರೀಮಂತ ಮನೆತನಕ್ಕೆ ಸೇರಿದ ಬೇಜವಾಬ್ದಾರಿಯ ಮೂವರೂ ಯುವಕರು ಅನಿವಾರ್ಯವಾಗಿ ಕಾಮಗಾರಿ ನಡೆಯುತ್ತಿದ್ದ ಪ್ರದೇಶಕ್ಕೆ ಹೋಗಬೇಕಾಗುವುದು. ಅಲ್ಲಿ ಕೆಳ ಜಾತಿಯ ಹುಡುಗಿಯರನ್ನು ಪ್ರೀತಿಸಿ, ಮನೆಯವರ ಒಪ್ಪಿಗೆಯೊಂದಿಗೆ ಮದುವೆಯಾಗಲು ಹಿಂದಿರುಗುವರು. ಹಳೆಯ ರೂಢಿಗಳಿಂದ ಹೊರಬಂದಿದ್ದ ಯುವಕರು ಕುಟುಂಬ ವರ್ಗದಿಂದ ನಿರೀಕ್ಷಿಸಿರದಂತಹ ಘಟನೆಗಳು ಜರುಗುವುದನ್ನು ಕಾಣಬಹುದು. ಆ ಹುಡುಗಿಯರು ಹಿಂದುಳಿದ ಜಾತಿಗೆ ಸೇರಿದ್ದ ಕಾರಣದಿಂದಾಗಿ ಪ್ರೀತಿಯನ್ನು ತಿರಸ್ಕರಿಸುತ್ತಾರಲ್ಲದೆ, ಕ್ರೂರವಾಗಿ ವರ್ತಿಸುವರು. ಬೇಜವಾಬ್ದಾರರಾಗಿ ಇತರರಿಗೆ ತೊಂದರೆ ಉಂಟು ಮಾಡುತ್ತಿದ್ದಾಗಲೂ ಕಾಳಜಿ ತೋರಿಸುತ್ತಿದ್ದ ಪೋಷಕ ಮತ್ತು ಕುಟುಂಬ ವರ್ಗ ಜಾತಿ ವಿಚಾರದಿಂದ ಪ್ರತಿಕ್ರಿಯೆಯನ್ನು ಬದಲಾಯಿಸುವ ಚಿತ್ರಣವಾಗಿದೆ. ಶಂಖನಾದದಲ್ಲಿ(ಕುಲಕರ್ಣಿ, ೧೯೮೬) ಮೀಸಲಾತಿ ಯಿಂದ ಕೆಳಜಾತಿಗೆ ಸೇರಿದ ಭಿಕ್ಷಾ ವೃತಿಯ ವ್ಯಕ್ತಿ ಚುನಾವಣೆಯಲ್ಲಿ ನಿಲ್ಲಬೇಕಾಗುವ ಪ್ರಸಂಗ ಒದಗುವುದು. ಆ ಚುನಾವಣೆಯಲ್ಲಿ ಛೇರ್ಮನ್ ಪಟ್ಟಕ್ಕಾಗಿ ಕಚ್ಚಾಡುವ ಗೌಡರಿಬ್ಬರು ಸಮಬಲದಿಂದ ಗೆದ್ದಿದ್ದರಿಂದ, ಶಂಖ ಊದಿ ಭಿಕ್ಷೆ ಬೇಡುವ ವ್ಯಕ್ತಿಯ ಸಹಕಾರ ದೊರೆತವನು ಛೇರ್ಮನ್ ಆಗಲು ಸಾಧ್ಯವಿದ್ದು ನಡೆಯುವ ರಾಜಕಾರಣದ ಚಿತ್ರಣವಿದೆ. ಆದರೆ ಇದೆಲ್ಲದರಿಂದ ತೊಂದರೆಗೊಳಗಾದವನು ಕೆಳಜಾತಿಯ ವ್ಯಕ್ತಿ. ನಗರದಿಂದ ಬಂದ ವ್ಯಕ್ತಿಯೊಬ್ಬನ ಸಹಾಯದ ಮೂಲಕ ಮೀಸಲಾತಿಯನ್ನು ಪೂರಕವಾಗಿ ಬಳಸಿಕೊಳ್ಳುವ ನೆಲೆಯಲ್ಲಿ ಚಿತ್ರಿತವಾಗಿದೆ. ಜಾತಿ ಪದ್ಧತಿಯನ್ನು ಗ್ರಾಮೀಣ ವ್ಯವಸ್ಥೆಯೊಂದಿಗೆ ಜೋಡಿಸಿ ನೋಡಿರುವುದನ್ನು ಆ ಕಾಲದ ಹಲವಾರು ಚಿತ್ರಗಳಲ್ಲಿ ಕಾಣಬಹುದು. ನಗರಗಳಲ್ಲಿರುವ ಜಾತಿ ಪದ್ಧತಿಯ ಕುರಿತು ಗಮನಹರಿದಿರುವುದು ಅಧಿಕವಾಗಿಲ್ಲ ಎಂಬುದು ವಿಶೇಷವಾಗಿದೆ.

*** *** ***

ಹಾವನೂರು ವರದಿ ಜಾರಿಗೆ ಸಮೂಹ ಮಾಧ್ಯಮಗಳಲ್ಲಿ ವ್ಯಕ್ತವಾಗಿರುವ ಪ್ರತಿಕ್ರಿಯೆ, ಬದಲಾವಣೆಗಳು ಸಮಕಾಲೀನ ಚಿಂತನೆಯ ರೂಪದ ಕೆಲವು ಆಯಾಮಗಳಾಗಿವೆ. ಸಮಾಜವಾದಿಗಳು, ಪ್ರಗತಿಪರರು ಹೆಚ್ಚಾಗಿ ವರದಿಯ ಪರವಾಗಿ ಪ್ರತಿಕ್ರಿಯೆಗಳನ್ನು ನೀಡುತ್ತಿದ್ದವರು. ವರದಿಯು ಜಾತಿ ವಿನಾಶ ಮಾಡುವ ಬದಲು ಜಾತೀಯತೆಯನ್ನು ಹೆಚ್ಚಿಸುತ್ತದೆಂಬ ಪ್ರತಿವಾದಗಳು ಕಂಡುಬರುವುವು. ಹಿಂದುಳಿದಿರುವಿಕೆಯನ್ನು ಆರ್ಥಿಕ ಆಧಾರದ ಮೇಲೆ ನಿರ್ಣಯಿಸಬೇಕು ಎನ್ನುವ ಕೂಗು ಸಹ ಸಮಕಾಲೀನವಾಗಿ ಪ್ರಚಲಿತವಾಗಿತ್ತು. ಈ ದಿಸೆಯಲ್ಲಿ ಸಾಮಾರ್ಥ್ಯ ಕ್ಷೇತ್ರವನ್ನು(ಮೆರಿಟ್ ಪೂಲ್) ವಿಸ್ತರಿಸಬೇಕೆಂಬ ಚರ್ಚೆಗಳು ವಿರೋಧಿ ನೆಲೆಯಲ್ಲಿ ಕೇಳಿಬರುವುದು ಸಾಮಾನ್ಯವಾಗಿದೆ. ಇವುಗಳನ್ನು ತಿರಸ್ಕರಿಸುತ್ತ ಜಾತಿಯು ತನ್ನ ಲಕ್ಷಣಗಳನ್ನು ಕಳೆದು ಕೊಳ್ಳಬೇಕಾದರೆ ಕೆಲವು ಕನಿಷ್ಠ ಸಾಧನೆಗಳನ್ನು ಮಾಡಬೇಕಾಗುವುದು. ಜಾತಿಯ ಔದ್ಯೋಗಿಕ ಸಾಮರ್ಥ್ಯದಿಂದ ಭಿನ್ನವಾದ ಸಾಮರ್ಥ್ಯವನ್ನು ಬೇರೆಲ್ಲ ಕ್ಷೇತ್ರಗಳಲ್ಲಿ ಬೆಳೆಸಿಕೊಳ್ಳಬೇಕಾಗುವುದು. ಜಾತಿ ವಿನಾಶದ ದೂರಕಾಲಿಕ ಕ್ರಮವಾಗಿ ಹಿಂದಿ ಮತ್ತು ಇಂಗ್ಲಿಶ್ ಭಾಷೆಯ ಬದಲು, ಎಲ್ಲ ಕ್ಷೇತ್ರಗಳಲ್ಲಿ ಮಾತೃ ಭಾಷೆಯ ಬಳಕೆ ಉಪಯುಕ್ತ ಮೊದಲಾದ ಚಿಂತನೆಗಳನ್ನು ಕಾಣಬಹುದಾಗಿದೆ. ಸಮೂಹ ಮಾಧ್ಯಮಗಳಲ್ಲಿ ಕಂಡುಬಂದ ಪ್ರತಿಕ್ರಿಯೆ ಮತ್ತು ಚಿಂತನೆಗಳೆಲ್ಲವು ಅಕ್ಷರಸ್ಥ ಮಧ್ಯಮ, ಮೇಲ್‌ಮಧ್ಯಮ ವರ್ಗಗಳಿಗೆ

ಸೇರಿದವಾಗಿದ್ದು, ಸಮಾಜದ ಕೆಲವು ವರ್ಗಗಳ ಚಿಂತನೆಯನ್ನು ಮಾತ್ರ ಅನಾವರಣಗೊಳಿಸುವುದು. ಹಿಂದುಳಿದ ಮತ್ತು ಕೆಳವರ್ಗದ ಅಭಿಮತವನ್ನು ಪ್ರಾದೇಶಿಕ ರಾಜಕಾರಣದಲ್ಲಿ ಹೆಚ್ಚು ಗುರುತಿಸಬಹುದು. ಪ್ರಾದೇಶಿಕ ರಾಜಕಾರಣದಲ್ಲಿ ಹಾವನೂರು ವರದಿಯು ಪಡೆದುಕೊಂಡ ಸ್ವರೂಪವನ್ನು ಚರ್ಚಿಸುವ ಅಗತ್ಯವಿದೆ.

### ೨.೩.೨.೨. ಪ್ರಾದೇಶಿಕ ರಾಜಕಾರಣ: ಪ್ರಭಾವ ಮತ್ತು ಪರಿಣಾಮಗಳು

> ದೇವರಾಜ ಅರಸು ಹಿಂದುಳಿದ ವರ್ಗಗಳ ಕುರಿತು ಮಾತನಾಡುವಾಗ ಸಾಕಷ್ಟು ಅತಿಶಯೋಕ್ತಿಗಳೊಂದಿಗೆ ಮಾತನಾಡುತ್ತಿದ್ದರು. ಚುನಾವಣೆಯನ್ನು ಉಳ್ಳವರು ಮತ್ತು ಉಳ್ಳದವರ ನಡುವಿನ ವರ್ಗ ಸಂಘರ್ಷವೆಂದು ವರ್ಣಿಸಿದರು. ಜಾತಿಯನ್ನು ಜಾತಿಯೊಂದಿಗೆ ಗುರುತಿಸಲು ಸಂಪೂರ್ಣವಾಗಿ ತಯಾರಾಗಿದ್ದರು. ಈ ದಿಸೆಯಲ್ಲಿ ಸಮಕಾಲೀನವಾಗಿ ಮಾಡಿದ ಕಾರ್ಯ ಮುಗ್ಧತೆಯಿಂದ ಕೂಡಿತ್ತು. ಬಹುಸಂಖ್ಯಾತ ಕೆಳಜಾತಿ ಜನರು ಆರ್ಥಿಕವಾಗಿ ದುರ್ಬಲರಾಗಿದ್ದಾರೆಂಬುದು ಈ ಸಮಯದಲ್ಲಿ ವಾಸ್ತವ. ಇವರ ವರ್ಗ ಸಂಘರ್ಷದ ಉಪಾಯ ಬಹುತೇಕ ಸರಳ ಮತ್ತು ನಿಷ್ಕಪಟವಾಗಿದ್ದರೂ, ಅಲ್ಪಸಂಖ್ಯಾತ ಜಾತಿಗಳನ್ನು ಒಗ್ಗೂಡಿಸುವ ಪ್ರಯತ್ನಗಳನ್ನು ಅಸಂಗತವೆಂದು ತಿರಸ್ಕರಿಸುವುದು ತಪ್ಪಾಗುವುದು(ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ ೧೯೭೮: ೪೪೦).

ಕರ್ನಾಟಕದ ರಾಜಕಾರಣ ಕುರಿತಂತೆ ನಿಯತಕಾಲಿಕೆಯಲ್ಲಿ ಪ್ರಕಟವಾದ ವಿಮರ್ಶೆಯಾಗಿದೆ. ಅರಸರ ಆಡಳಿತದಲ್ಲಿ ಅನುಷ್ಠಾನಗೊಂಡ ಭೂ ಸುಧಾರಣೆ, ಹಿಂದುಳಿದ ಜನಾಂಗಗಳಿಗೆ ಮೀಸಲಾತಿ ಮೊದಲಾದ ಜನಪರ ಯೋಜನೆಗಳು ಕರ್ನಾಟಕದ ಪ್ರಾದೇಶಿಕ ರಾಜಕಾರಣವನ್ನು ಭಿನ್ನ ನೆಲೆಗಟ್ಟಿನಲ್ಲಿ ರೂಪಿಸಿದೆ ಎಂಬ ಅಭಿಪ್ರಾಯವಿದೆ. ಹಾವನೂರು ವರದಿ[೫೮] ಜಾರಿಯಿಂದ ಕರ್ನಾಟಕದಲ್ಲಿ ಕಂಡುಬಂದ ಪ್ರಾದೇಶಿಕ ರಾಜಕಾರಣ ಮತ್ತು ವ್ಯಕ್ತಿ ರಾಜಕಾರಣದ ಸ್ವರೂಪಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ.

ಅರಸು ಅವರ ರಾಜಕೀಯ ಜೀವನ ಮತ್ತು ಕರ್ನಾಟಕದ ರಾಜಕಾರಣದಲ್ಲಾದ ಬದಲಾವಣೆಯ ಚರ್ಚೆಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ವಿಚಾರಗಳು ಹೀಗಿವೆ:

> ಹಾವನೂರು ವರದಿ ಮತ್ತು ಅದರ ಅನುಷ್ಠಾನದ ಮೂಲಕ ಅರಸರು ಸಾಧಿಸ ಹೊರಟಿದ್ದು ಹಿಂದುಳಿದವರ ಏಳ್ಗೆಯ ಅಲ್ಲದೆ ಮುಂದುವರೆದವರ ಬಲ ಮುರಿಯುವುದು ಅನ್ನುವುದು ಸೂಕ್ಷ್ಮವಾಗಿ ಅದರೂ ಗೊತ್ತಾಗುತ್ತದೆ. ಮತ್ತು ಈ ಮೂಲಕ ಅವರು ತಮ್ಮ ರಾಜಕೀಯ ಶಕ್ತಿಯನ್ನು ಬೆಳೆಸಿಕೊಳ್ಳುವ ಪ್ರಯತ್ನ ಮಾಡಿದ್ದನ್ನು ನಾವು ಕಾಣಬಹುದು(ಚಂದ್ರಶೇಖರ್ ೧೯೮೨: ೧೬-೧೭).

ಮತ್ತು

> ನಮ್ಮ ಸಮಾಜದ ನಿರ್ಲಕ್ಷಿತ ಸಾಮಾಜಿಕ ವಲಯಗಳಿಗೆ ರಾಜಕೀಯ ಚೈತನ್ಯ ಬರತೊಡಗಿದ್ದು ಅರಸರ ಅಪೂರ್ವ ಕೊಡುಗೆ ಎಂದು ಹೇಳಲು ಹಿಂಜರಿಯ ಬೇಕಾಗಿಲ್ಲ. ಅರಸರು ಹಾವನೂರು ಆಯೋಗವನ್ನು ರಚಿಸಿ, ಅದರ ವರದಿಯನ್ನು ಪ್ರಧಾನ ಆಶಯಕ್ಕೆ ಧಕ್ಕೆ ತಾರದಂತೆ ಅನುಷ್ಠಾನಗೊಳಿಸಿದ್ದು ಒಂದು ಅಪೂರ್ವ ಸಾಮಾಜಿಕ ಕ್ರಿಯೆ. ಕರ್ನಾಟಕದಲ್ಲಿ ಹಿಂದುಳಿದ ವರ್ಗವನ್ನು ಪ್ರತಿನಿಧಿಸುವ ರಾಜಕೀಯ ಪ್ರಕ್ರಿಯೆಗೆ ಚಾಲನೆ ಕೊಟ್ಟದ್ದು ದೇವರಾಜ ಅರಸರ ದೂರದೃಷ್ಟಿ(ರಾಮಚಂದ್ರಪ್ಪ ೨೦೧೨: ೫೧೭).

ಇವುಗಳಲ್ಲಿ ಅಧಿಕಾರ ಸ್ಥಿತ್ಯಂತರವು ಕೇಂದ್ರ ವಿಚಾರಧಾರೆಯಾಗಿರುವುದನ್ನು ನೋಡಬಹುದು. ಸಮಾಜದ ಹಿಂದುಳಿದವರಲ್ಲಿ ಹೊಸ ಜಾಗೃತಿ ಮೂಡಿಸಲು, ಪರ್ಯಾಯ ನಾಯಕತ್ವ ಬೆಳೆಸಲು ಶ್ರಮಿಸಿದ ಕೀರ್ತಿ ಅರಸು ಅವರಿಗೆ ಸಲ್ಲಬೇಕೆಂಬ ಚಿಂತನೆ ಕಾಣಬಹುದು. ಕರ್ನಾಟಕದಲ್ಲಿ ೧೯೭೭ರ ಲೋಕಸಭಾ ಚುನಾವಣೆ ಮತ್ತು ೧೯೭೮ರ ವಿಧಾನಸಭಾ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷ ಪಡೆದ ಗೆಲುವಿನ ನೆಲೆಯಲ್ಲಿ ನಡೆಯುತ್ತಿದ್ದ ಚರ್ಚೆ ಮತ್ತು ವಿಮರ್ಶೆಗಳಾಗಿವೆ. ಹಿಂದುಳಿದ ವರ್ಗಗಳೆಡೆಗಿನ ಅಧಿಕಾರ ಹಸ್ತಾಂತರ ಅರಸರ ಆಡಳಿತದ ಅಪೂರ್ವ ಕೊಡುಗೆ ಎಂದು ವ್ಯಕ್ತಿ ರಾಜಕಾರಣದ ನೆಲೆಯಲ್ಲಿ ಪ್ರಾದೇಶಿಕ ರಾಜಕಾರಣವನ್ನು ವಿಶ್ಲೇಷಿಸುವ ಉದ್ದೇಶದಂತೆ ಕಾಣುವುದು. ಪ್ರಸ್ತುತದಲ್ಲಿಯೂ ಈ ವಿಚಾರಗಳು ವಿಭಿನ್ನ ಸ್ವರೂಪಗಳಲ್ಲಿ ಕಂಡುಬರುತ್ತಲೇ ಇದೆ.

ಪ್ರಾದೇಶಿಕ ರಾಜಕಾರಣದಲ್ಲಿ ವ್ಯಕ್ತಿ ಅಥವಾ ಪಕ್ಷ ರಾಜಕಾರಣ ಪ್ರಮುಖ ಪಾತ್ರ ನಿರ್ವಹಿಸುವುದು ಸಾಮಾನ್ಯ ಲಕ್ಷಣವಾಗಿದೆ. ಕರ್ನಾಟಕವು ೧೯೭೭ ರಿಂದ ೧೯೮೦ರ ನಡುವೆ ಪ್ರಾದೇಶಿಕ ರಾಜಕಾರಣದಲ್ಲಿ ಅನಿರೀಕ್ಷಿತ ಬದಲಾವಣೆ ಮತ್ತು ಪರಿವರ್ತನೆಗಳನ್ನು ಕಂಡ ಸಮಯ. ಈ ನಿಟ್ಟಿನಲ್ಲಿ ಪತ್ರಿಕಾ ಮಾಧ್ಯಮಗಳಲ್ಲಿ

ಕಂಡುಬಂದ ರಾಜಕೀಯ ವರದಿ ಹಾಗೂ ರಾಜಕಾರಣಿಗಳ ಕುರಿತ ವಿಚಾರಗಳ ಅವಲೋಕನ ಅಗತ್ಯವಾಗಿದ್ದು, ಅವು ರಾಜಕೀಯ ಪ್ರಕ್ರಿಯೆ ಮೇಲೆ ಬೆಳಕು ಬೀರುವುವು. "ಹಿಂದೆ ಯಾವ ಸರಕಾರವೂ ಮಾಡಲಿಲ್ಲ, ಈ ಸರಕಾರ ಮಾಡಿದೆ"(ಬಸವಲಿಂಗಪ್ಪ ೧೯೭೭ ಏಪ್ರಿಲ್ ೩): "ಹಾವನೂರು ಹಿಂದುಳಿದ ವರ್ಗಗಳ ಗುಂಪಿನಿಂದ ಹೊರಬಂದರು"(ಡೆಕ್ಕನ್ ಹೆರಾಲ್ಡ್ ೧೯೭೭ ಜೂನ್ ೧೪); "ಭಾರತದಲ್ಲಿ ವರ್ಗ ಚಲಿಸುತ್ತದೆ. ಆದರೆ ಜಾತಿಗೆ ಕಾಲಿಲ್ಲ"(ಕಲ್ಯಾಣಕರ್ ೧೯೭೭ ಜುಲೈ ೨೯); "ಹಾವನೂರು ಕಾಲೇಲ್ಕರ್ ವರದಿಯನ್ನು ಪ್ರಸ್ತುತವಲ್ಲ ಎಂದು ಹೇಳಿದ್ದಾರೆ"(ಡೆಕ್ಕನ್ ಹೆರಾಲ್ಡ್ ೧೯೭೭ ಆಗಸ್ಟ್ ೨೫); "ಹಾವನೂರು ವರದಿ ಜಾತೀಯತೆಯಿಂದ ಕೂಡಿದೆ"(ನಿಜಲಿಂಗಪ್ಪ ೧೯೭೭ ಜುಲೈ ೨೩); "'ಹಿಂದುಳಿದವರು': ಇನ್ನೂ ಎಷ್ಟು ದಿನ?"(ಪ್ರಜಾಮತ ೧೯೭೭: ೧); "ಹಾವನೂರರ ಪ್ರತಿಕ್ರಿಯೆ ವಿಧಾನಸಭೆಯಲ್ಲಿ ಸಂಚಲನವನ್ನು ಹುಟ್ಟುಹಾಕಿತು"(ಡೆಕ್ಕನ್ ಹೆರಾಲ್ಡ್ ೧೯೭೮ ಆಗಸ್ಟ್ ೨); "ಹಾವನೂರು ಜಾತಿಗಳಿಲ್ಲದ ಸಮಾಜಕ್ಕೆ ಕರೆ ನೀಡಿದರು"(ಡೆಕ್ಕನ್ ಹೆರಾಲ್ಡ್ ೧೯೭೯ ಜನವರಿ ೧೭) ಮೊದಲಾದವು ಪತ್ರಿಕೆಗಳಲ್ಲಿ ಕಂಡುಬಂದ ರಾಜಕಾರಣಿ ಹಾಗೂ ಪ್ರಾದೇಶಿಕ ರಾಜಕಾರಣ ಕುರಿತ ವರದಿಗಳಾಗಿವೆ. ಸರಕಾರ ವರದಿಯ ಅನುಷ್ಠಾನವನ್ನು ವರ್ಗ ಹಾಗೂ ಜಾತಿ ಸಂಘರ್ಷಗಳ ನೆಲೆಯಲ್ಲಿ ಬಿಂಬಿಸುವ ಪ್ರಯತ್ನ ಮಾಡುತ್ತಿರುವುದು ಕಂಡುಬರುವುದು. ವರದಿಯನ್ನು ಜಾತೀಯವಾದ ಎಂದು ವಿರೋಧ ಪಕ್ಷಗಳು ಮತ್ತು ಲಿಂಗಾಯಿತ ಸಮುದಾಯಗಳು ವಿರೋಧಿಸುವುದನ್ನು ಕಾಣಬಹುದು. ಹಾವನೂರು ಅವರು ಹಿಂದುಳಿದ ವರ್ಗಗಳ ಪ್ಯಾನಲ್‌ನಿಂದ ಹೊರಬಂದಿದ್ದು, ವರದಿ ಜಾರಿಯ ತಕ್ಷಣದ ಪ್ರಭಾವ ಪರಿಣಾಮಗಳಲ್ಲೊಂದಾಗಿದೆ. ಹಾವನೂರು ಅವರು ೧೯೭೮ರ ಹೊತ್ತಿಗೆ ಸಕ್ರಿಯ ರಾಜಕಾರಣಕ್ಕೆ ಇಳಿದಿರುವುದು ಪಕ್ಷ ಮತ್ತು ವ್ಯಕ್ತಿ ರಾಜಕಾರಣದ ನೆಲೆಯ ಆಯಾಮಗಳಾಗಿದೆ. ವರದಿ ಜಾರಿಯ ಕುರಿತಂತೆ ಮಾಧ್ಯಮಗಳಲ್ಲಿ ಹೆಚ್ಚು ಕಂಡುಬರುತ್ತಿದ್ದ ವಿಚಾರ ಮತ್ತು ಅಭಿಪ್ರಾಯಗಳಿಗಿಂತ ೧೯೭೭ರ ಲೋಕಸಭಾ ಹಾಗೂ ೧೯೭೮ರ ವಿಧಾನಸಭಾ ಚುನಾವಣೆಗಳಲ್ಲಿ ಭಿನ್ನವಾದ ಫಲಿತಾಂಶ ಕಂಡುಬರುವುದು. ಇದು ಸಮಾಜದ ಬಹುಸಂಖ್ಯಾತರ ಪ್ರತಿಕ್ರಿಯೆಯ ರೂಪವಾಗಿದೆ. ಇವುಗಳನ್ನು ಪಕ್ಷ ಮತ್ತು ಪ್ರಾದೇಶಿಕ ರಾಜಕಾರಣದ ನೆಲೆಯಲ್ಲಿ ಗಮನಿಸುವ ಅವಶ್ಯಕತೆ ಇದೆ. ಇದರಿಂದ ಪ್ರಭಾವಿತಗೊಂಡು ಬಿಹಾರ, ರಾಜಸ್ಥಾನ ಮೊದಲಾದ ರಾಜ್ಯಗಳಲ್ಲಿ ಹಿಂದುಳಿದ ವರ್ಗಗಳಿಗೆ ಮೀಸಲಾತಿ ಜಾರಿಗೆ ತರುವ ಪ್ರಯತ್ನ ನೋಡಬಹುದು.

ಪತ್ರಿಕಾ ಜಾಹೀರಾತುಗಳು ಪ್ರಾದೇಶಿಕ ರಾಜಕಾರಣದ ಸ್ವರೂಪವನ್ನು ಗ್ರಹಿಸಲು ಮುಖ್ಯ ಆಕರವಾಗಿದೆ. ಈ ಕೆಳಗಿನ ಚಿತ್ರ-೫ರಲ್ಲಿ 'ಎ ಪ್ಲೆಡ್ಜ್ ರಿಡೀಮ್ಡ್' ಎಂದು ಹಿಂದುಳಿದ ವರ್ಗಗಳವರಿಗೆ ಹೊಸ ಕಾಣ್ಕೆ ಎಂದು ಜಾಹೀರಾತನ್ನು ಕಾಣಬಹುದು. ಹಿಂದುಳಿದ ವರ್ಗಗಳ ಅಭಿವೃದ್ಧಿಗಾಗಿ ಕರ್ನಾಟಕ ಸರ್ಕಾರದ




ಮೊದಲೆರಡು ಡೆಕ್ಕನ್ ಹೆರಾಲ್ಡ್‌ನಲ್ಲಿ ೧೯೭೭ ನವೆಂಬರ್‌ನಲ್ಲಿ ಪ್ರಕಟವಾದ ಜಾಹೀರಾತುಗಳು. ಮೂರನೆಯದು ಡೆಕ್ಕನ್ ಹೆರಾಲ್ಡ್‌ನಲಿ ೧೯೭೯ ನವೆಂಬರ್ ೧೬ರಂದು ಪ್ರಕಟವಾದ ಜಾಹೀರಾತು.[೫] ಚಿತ್ರ ಸಂಖ್ಯೆ: ೨.೧೯.

(ಚಿತ್ರ-೫) (ಚಿತ್ರ-೫ಎ) (ಚಿತ್ರ-೫ಬಿ)

ಪ್ರತ್ಯೇಕ ಹೆಜ್ಜೆ ಎಂದು ಪ್ರಾದೇಶಿಕ ರಾಜಕಾರಣಕ್ಕೆ ಒತ್ತು ನೀಡಲಾಗಿದೆ. ಚಿತ್ರ-೫ಎನಲ್ಲಿಯೂ ಅದೆ ಶೀರ್ಷಿಕೆಯಿದೆ. ಹಿಂದುಳಿದ ವರ್ಗಗಳ ಸಮಿತಿಯ ನಿರ್ದೇಶಕರು 'ದಿ ಕರ್ನಾಟಕ ಬ್ಯಾಕ್‌ವರ್ಡ್ ಕ್ಲಾಸಸ್

ಅಂಡ್ ಮೈನಾರಿಟಿಸ್ ಡೆವಲಪ್‌ಮೆಂಟ್ ಕಾರ್ಪೋರೇಷನ್' ಎಂಬ ಸಂಸ್ಥೆ ಆರಂಭಿಸುತ್ತಿರುವ ಆಹ್ವಾನ ಪತ್ರಿಕೆಯಾಗಿದೆ. ಈ ಎರಡು ಜಾಹೀರಾತುಗಳು ೧೯೭೭ರಲ್ಲಿ ಪ್ರಕಟವಾಗಿದ್ದು, ಸರ್ಕಾರದ ಸಾಧನೆ ಮತ್ತು ಕಾರ್ಯಕ್ರಮಗಳಿಗೆ ಒತ್ತು ಕೊಟ್ಟಿದೆ. ಪ್ರಾದೇಶಿಕ ರಾಜಕಾರಣದ ನೆಲೆಯಲ್ಲಿ ಚಿತ್ರ-ಶಿಬಿಯಲ್ಲಿರುವ ಜಾಹೀರಾತು ಅತ್ಯಂತ ಪ್ರಮುಖವಾಗಿದೆ. ೧೯೭೮ರ ನವೆಂಬರ್‌ನಲ್ಲಿ ಕಂಡುಬಂದ ಜಾಹೀರಾತು. ನವಸಮಾಜ ನಿರ್ಮಾಣ ಸಮಿತಿಯು(ಬೆಂಗಳೂರು) ಹಿಂದುಳಿದ ವರ್ಗಗಳ ದಿನಾಚರಣೆ ನಡೆಸುತ್ತಿದ್ದು, ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಬಿ.ಪಿ.ಮಂಡಲ್ ಅವರು ವಹಿಸುತ್ತಿರುವ ಮಾಹಿತಿ ನೋಡಬಹುದು. ಮೊದಲೆರಡು ಜಾಹೀರಾತುಗಳು ಕರ್ನಾಟಕ ಸರ್ಕಾರದಿಂದ ಪ್ರಕಟಗೊಂಡಿದ್ದರೆ, ಕೊನೆಯದು ನವ ನಿರ್ಮಾಣ ಸಮಿತಿ ಅಡಿಯಲ್ಲಿ ಪ್ರಕಟಗೊಂಡಿದೆ. ಈ ವೇಳೆಗಾಗಲೇ ದೇವರಾಜ ಅರಸು ಮತ್ತು ಇಂದಿರಾ ಗಾಂಧಿ ಅವರ ನಡುವೆ ಉಂಟಾದ ಭಿನ್ನಾಭಿಪ್ರಾಯದಿಂದ ಕಾಂಗ್ರೆಸ್(ಐ)ನಿಂದ ಹೊರಬಂದಿದ್ದರು. ಹೊಸ ಪಕ್ಷ ಕಟ್ಟುವ ಕಾರ್ಯದಲ್ಲಿ ತೊಡಗಿಕೊಂಡಿದ್ದರು. ಮಧ್ಯಂತರ ಲೋಕಸಭಾ ಚುನಾವಣೆ ಘೋಷಣೆ ಗೊಂಡಿದ್ದು, ಚುನಾವಣಾ ಪೂರ್ವದಲ್ಲಿ ಪ್ರಕಟವಾಗಿರುವ ಜಾಹೀರಾತು. ಅರಸು ಅವರು ರಾಷ್ಟ್ರೀಯ ಮಟ್ಟದಲ್ಲಿ ಹಿಂದುಳಿದ ವರ್ಗಗಳ ನಾಯಕನಾಗಿ ಬಿಂಬಿತವಾಗಿದ್ದರು. ಸಮಾನಾಂತರವಾಗಿ ಪ್ರಾದೇಶಿಕ ರಾಜಕಾರಣದಲ್ಲಿ ಪಕ್ಷ ಮತ್ತು ವ್ಯಕ್ತಿ ರಾಜಕಾರಣದ ಸಂಘರ್ಷಗಳು ತೀವ್ರವಾಗಿ ಅಭಿವ್ಯಕ್ತಗೊಳ್ಳುತ್ತಿತ್ತು.

> ಅರಸು ಕಾಲದ ಮೀಸಲಾತಿ ಪದ್ಧತಿ ಗಮನಿಸಿರುವ ಸಮಾಜವಿಜ್ಞಾನಿಗಳು, ಭಾರತದ ಯಾವುದೆ ಮುಖ್ಯಮಂತ್ರಿ ಜಾರಿಗೆ ತಂದಿರುವ ಹಿಂದುಳಿದ ವರ್ಗಗಳ ಮೀಸಲಾತಿ ನೀತಿಗಿಂತ ದೇವರಾಜ್ ಅರಸು ಕಾಲದ ಮೀಸಲಾತಿ ನೀತಿ ಕ್ರಾಂತಿಕಾರಕ ಮತ್ತು ವಿಶಾಲ ವ್ಯಾಪ್ತಿಯುಳ್ಳದ್ದು ಎಂಬ ದೃಷ್ಟಿಕೋನ ಹೊಂದಿದ್ದಾರೆ(ರಾವ್ ೧೯೯೫: ೧೧೮).

ಪ್ರಾದೇಶಿಕ ರಾಜಕಾರಣದ ಹಿನ್ನೆಲೆಯಲ್ಲಿ ವ್ಯಕ್ತಿ ರಾಜಕಾರಣಕ್ಕೆ ಒತ್ತು ನೀಡಲಾಗಿರುವುದನ್ನು ಗಮನಿಸ ಬಹುದು. ಭಾರತದಲ್ಲಿನ ಜಾತಿಗಳ ಹೋರಾಟವನ್ನು ವರ್ಗ ಹೋರಾಟಗಳಿಗೆ ಸಮಾನವಾಗಿದೆ ಮತ್ತು ಮತದ(ವೋಟ್) ಶಕ್ತಿ ಕೇಂದ್ರ, ಅಧಿಕ ಸಂಖ್ಯೆಯಲ್ಲಿರುವ ದುರ್ಬಲ ವರ್ಗಗಳ ಹಿತಾಸಕ್ತಿ ರಕ್ಷಿಸಲು, ಅವರ ಕೈಯಲ್ಲಿರುವ ಏಕೈಕ ಅಸ್ತ್ರವೆಂದು ಅರಸರು[೨೭] ನಂಬಿದ್ದರು. ಆ ಮತಗಳ ಶಕ್ತಿಯನ್ನು ಅರಸರು ಬಳಸಿದಷ್ಟು ಶಕ್ತಿಯುತವಾಗಿ ಕಾಂಗ್ರೆಸ್ ಪಕ್ಷ ಅಧಿಕಾರ ಕಳೆದುಕೊಂಡ ದಶಕ ಅಥವಾ ಅರ್ಧ ದಶಕದಲ್ಲಿ ಬಳಸಿಲ್ಲವೆಂದು ವಿಶ್ಲೇಷಣೆಯಿದೆ. ಪ್ರಾದೇಶಿಕ ರಾಜಕಾರಣದಲ್ಲಿ ಪಕ್ಷ ರಾಜಕಾರಣದಿಂದ ವ್ಯಕ್ತಿ ರಾಜಕಾರಣದೆಡೆಗಿನ ಸ್ಥಿತ್ಯಂತರದಂತೆ ಕಂಡುಬರುತ್ತದೆ. ಆದರೆ ಇಲ್ಲಿ ಪಕ್ಷ ಪ್ರಾದೇಶಿಕವಾಗಿರದೆ, ರಾಷ್ಟ್ರೀಯ ನೆಲೆಯನ್ನು ಹೊಂದಿದ್ದು, ಭಿನ್ನವಾದ ಅಸ್ತಿತ್ವವನ್ನು ಕಾಣಬಹುದು.

ಹಾವನೂರು ವರದಿ ಜಾರಿಗೊಳಿಸಿದ್ದು ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಬಳಸಿದ ತಂತ್ರ ಎಂಬ ಪ್ರತಿಕ್ರಿಯೆಯು ಕ್ರಮೇಣ ಸಾಮಾಜಿಕ ನ್ಯಾಯವಾಗಿ ಹೆಚ್ಚು ಚರ್ಚಿತವಾಗಿದೆ. ಇಲ್ಲಿ ಅಧಿಕಾರ ರಾಜಕಾರಣ ಮತ್ತು ಸಾಮಾಜಿಕ ಚಳವಳಿಗಳನ್ನು ಪ್ರಜಾಪ್ರಭುತ್ವದ ಚೌಕಟ್ಟಿನಲ್ಲಿ ಚರ್ಚಿಸಲು ಪ್ರಯತ್ನಿಸ ಲಾಗಿದೆ. ಸಾರ್ವತ್ರಿಕ ಚುನಾವಣೆಗಳು ಅಧಿಕಾರ ಗ್ರಹಣದ ಹಿನ್ನೆಲೆಯಲ್ಲಿ ಸಮೂಹ ಮಾಧ್ಯಮಗಳಲ್ಲಿ ಹೆಚ್ಚು ಚರ್ಚೆಗೊಳಗಾಗುವುದು ಸಾಮಾನ್ಯ ಸಂಗತಿಯಾಗಿದ್ದು, ಪ್ರಜಾಪ್ರಭುತ್ವದ ಪ್ರಮುಖ ಲಕ್ಷಣಗಳಲ್ಲೊಂದಾಗಿದೆ. ಸಮಾಜ ಮತ್ತು ಪ್ರಾದೇಶಿಕ ರಾಜಕಾರಣಗಳನ್ನು ಬಹುತೇಕ ಬಾರಿ ಒಂದೆ ಎಂಬಂತೆ ನೋಡಿದೆ. ಸಾಮಾಜಿಕ ಸುಧಾರಣೆಯ ರಾಜಕಾರಣ, ಅದರ ನೆಲೆಗಳು ಪ್ರಾದೇಶಿಕ ರಾಜಕಾರಣವನ್ನು ಅಪಾರವಾಗಿ ಪ್ರಭಾವಿಸಿದೆ. ೧೯೭೦ರ ದಶಕದ ಆರಂಭದಲ್ಲಿ ಜಾತಿ ವಿನಾಶ ಹೋರಾಟ, ಬರಹಗಾರರ ಒಕ್ಕೂಟ ಮೊದಲಾದ ವಿಭಿನ್ನ ರೂಪಗಳಲ್ಲಿ ಕಂಡುಬಂದ ಸಾಮಾಜಿಕ ಚಳವಳಿಗಳು ರಾಜಕೀಯ ನೆಲೆಗಟ್ಟಿನಲ್ಲಿ ರೂಪಾಂತರಗೊಂಡಂತಿದೆ.

*** *** ***

ಭಾರತದಲ್ಲಿ ೧೯೭೦ರ ದಶಕದಲ್ಲಿ ಕಂಡುಬಂದ ರಾಜಕೀಯ ಸ್ಥಿತ್ಯಂತರದ ಪ್ರಭಾವ ಪರಿಣಾಮ ಅಪಾರವಾಗಿದೆ. ಭೂ ಸುಧಾರಣಾ ಕಾಯ್ದೆ ಜಾರಿಗೊಳಿಸುವ ಪ್ರಯತ್ನ, ಸರ್ಕಾರದ ಕಾರ್ಯನೀತಿಗಳಲ್ಲಿ ನಿರಂಕುಶಾಧಿಕಾರದ ಲಕ್ಷಣಗಳ ಬೆಳವಣಿಗೆ ರಾಜಕೀಯ ಸ್ಥಿತ್ಯಂತರಕ್ಕೆ ಪೂರಕವಾಗಿದ್ದು, ಪರಿಣಾಮವಾಗಿ

ದಶಕದ ಕೊನೆಯ ವೇಳೆಗೆ ಎಡಪಂಥೀಯ ಸೈದ್ಧಾಂತಿಕ ರಾಜಕೀಯ ಪಕ್ಷಗಳ ಹಿನ್ನಡೆ ನೋಡಬಹುದು. ಸಮಾನಾಂತರವಾಗಿ ಅಂತರ್ ರಾಷ್ಟ್ರೀಯ ವಲಯದಲ್ಲಿಯೂ ಇಂತಹ ಕೆಲವು ಲಕ್ಷಣಗಳನ್ನು ಗುರುತಿಸ ಬಹುದಾಗಿದೆ. ಅದರಲ್ಲಿಯೂ ವಿಶೇಷವಾಗಿ ವಸಾಹತು ರಾಷ್ಟ್ರಗಳಾಗಿದ್ದೂ, ೧೯೪೦ರ ನಂತರ ಸ್ವತಂತ್ರಗೊಂಡ ಆಫ್ರೋ-ಏಷ್ಯನ್ ರಾಷ್ಟ್ರಗಳಲ್ಲಿ ಈ ಲಕ್ಷಣಗಳು ಕಂಡುಬರುವುದು. ಜೆ.ಪಿ. ಚಳವಳಿಯಲ್ಲಿ ಕ್ರಮೇಣ ದೊಡ್ಡ ಭೂ ಮಾಲಿಕರ ಪಾತ್ರ ಹಿರಿದಾಗಿದ್ದನ್ನು ಗಮನಿಸಬಹುದು. ತುರ್ತುಪರಿಸ್ಥಿತಿಯ ವಿರೋಧಿ ಪ್ರತಿಭಟನೆಗಳಲ್ಲಿ ಸಾಂಖ್ಯಿಕವಾಗಿ ಅತಿ ಹೆಚ್ಚು ಪಾಲ್ಗೊಂಡ ಆರ್.ಎಸ್.ಎಸ್. ಮತ್ತು ಸಹ ಸಂಘಟನೆಗಳು, ಸಂಸ್ಥಾ ಕಾಂಗ್ರೆಸ್, ಸ್ವತಂತ್ರ ಪಕ್ಷ ಮತ್ತಿತರರು ಭೂ ಸುಧಾರಣೆ ಹಾಗೂ ಆರ್ಥಿಕ ನೀತಿಯ ಕುರಿತು ತಮ್ಮದೇ ಆದ ನಿಲುವುಗಳನ್ನು ಹೊಂದಿದ್ದರು. ತುರ್ತುಪರಿಸ್ಥಿತಿ ನಂತರದಲ್ಲಿ ಭೂ ಸುಧಾರಣಾ ಕಾಯ್ದೆಯ ಜಾರಿಯು ತೀವ್ರತೆಯನ್ನು ಕಳೆದುಕೊಂಡಿದ್ದು, ಬಹುತೇಕ ರಾಜಕೀಯ ಪಕ್ಷಗಳು ಇದರಿಂದ ವಿಮುಖವಾಗುವುದನ್ನು ಗುರುತಿಸಬಹುದಾಗಿದೆ.

ಕರ್ನಾಟಕವು ರಾಷ್ಟ್ರೀಯ ವಲಯದಲ್ಲಿ ಕಂಡುಬರುತ್ತಿದ್ದ ಪ್ರತಿಭಟನೆ, ಹೋರಾಟಗಳು, ಚಳವಳಿಗಳಿಗೆ ಪೂರಕವಾಗಿ ಮತ್ತು ವಿಭಿನ್ನವಾಗಿ ಪ್ರತಿಕ್ರಿಯಿಸಿದೆ. ಆ ಸಂದರ್ಭದಲ್ಲಿ ಪ್ರಾದೇಶಿಕವಾಗಿದ್ದ ಹೋರಾಟಗಳು ಮತ್ತು ಸರ್ಕಾರದ ಆಡಳಿತ ನೀತಿ ೧೯೭೪ರ ಜೆ.ಪಿ. ಚಳವಳಿ ರಾಜ್ಯದಲ್ಲಿ ವ್ಯಾಪಕಗೊಳ್ಳದಂತೆ ತಡೆಯುವಲ್ಲಿ ಪ್ರಮುಖವಾಗಿದೆ. ಆದರೆ ಈ ಚಳವಳಿಯಲ್ಲಿದ್ದ ಬಹುತೇಕರು ರಾಷ್ಟ್ರದಲ್ಲಿ ಕಂಡುಬರುತ್ತಿದ್ದ ಹೋರಾಟ, ಪ್ರತಿಭಟನೆಗಳೊಡನೆ ಗುರುತಿಸಿಕೊಂಡಿದ್ದರು ಎಂಬುದು ವಿಶಿಷ್ಟವಾಗಿದೆ. ಕರ್ನಾಟಕದಲ್ಲಿ ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಆಡಳಿತ ಕಾಂಗ್ರೆಸ್ ಹೆಚ್ಚಿನ ಕ್ಷೇತ್ರಗಳನ್ನು ಪಡೆಯಲು ಭೂ ಸುಧಾರಣಾ ಕಾಯ್ದೆಯ ಪಾತ್ರ ಹಿರಿದಾಗಿದೆ. ಸಮೂಹ ಮಾಧ್ಯಮಗಳ ವಿಚಾರಧಾರೆಗಳಿಗಿಂತ ಭಿನ್ನವಾಗಿ ಚುನಾವಣೆಯಲ್ಲಿ ಸಮೂಹ ರಾಜಕಾರಣವನ್ನು ಕಾಣಬಹುದು. ಇಡೀ ದಶಕದಲ್ಲಿ ರಾಷ್ಟ್ರ ಮತ್ತು ರಾಜ್ಯ ರಾಜಕಾರಣದಲ್ಲಿ ಭೂ ರಾಜಕಾರಣದ ಪಾತ್ರ ಪರೋಕ್ಷವಾಗಿ ಕಾರ್ಯನಿರ್ವಹಿಸಿದೆ. ಈ ನಿಟ್ಟಿನಲ್ಲಿ ಇನ್ನೂ ಹೆಚ್ಚಿನ ಅಧ್ಯಯನ ನಡೆಸುವ ಅಗತ್ಯವಿದೆ.

••• ••• •••

೧೯೭೦ರ ದಶಕದ ಕರ್ನಾಟಕದಲ್ಲಿ ರಾಜಕೀಯ ಮತ್ತು ಸಾಮಾಜಿಕ ನೆಲೆಗಳಲ್ಲಿ ಉಂಟಾದ ಗುರುತರ ಬದಲಾವಣೆಗೆ ಅನೇಕ ಹೋರಾಟಗಳು ಹಾಗೂ ಆಡಳಿತಶಾಹಿಯ ನೀತಿ ಕಾರಣವಾಯಿತು. ಕರ್ನಾಟಕದಲ್ಲಿ ಮುಖ್ಯಮಂತ್ರಿ ಅರಸು ಅವರ ರಾಜಕೀಯ ಒಳನೋಟ, ಆಡಳಿತಾತ್ಮಕ ತಂತ್ರಗಳಿಗೆ ಬಂದ ಪ್ರತಿಕ್ರಿಯೆಗಳು, ಆ ಸಂದರ್ಭದ ಪ್ರಾದೇಶಿಕ ರಾಜಕಾರಣದ ವಿಶಾಲ ನೋಟವನ್ನು ನೀಡುತ್ತವೆ. ರಾಷ್ಟ್ರ ರಾಜಕಾರಣದ ನೆರಳು ಕರ್ನಾಟಕವನ್ನು ದಟ್ಟವಾಗಿ ಪ್ರಭಾವಿಸಿದಂತೆ ಕಾಣುವ ಕಾಲಘಟ್ಟವಾದರೂ, ಸರ್ಕಾರದ ಆಡಳಿತ ನೀತಿ ಭಿನ್ನವಾಗಿದ್ದು, ಪ್ರಾದೇಶಿಕ ರಾಜಕಾರಣವನ್ನು ಪ್ರಭಾವಿಸಿದೆ.

ಕರ್ನಾಟಕದಲ್ಲಿ ಸಾಮಾಜಿಕ ನ್ಯಾಯದ ನೆಲೆಯಲ್ಲಿ ಜಾರಿಗೊಂಡ ಹಿಂದುಳಿದ ವರ್ಗಗಳ ವರದಿ ಮತ್ತು ಅಭಿವೃದ್ಧಿ ರಾಜಕಾರಣವೆರಡನ್ನು ಒಟ್ಟಾಗಿ ಗಮನಿಸಿದಾಗ, ಪ್ರಾದೇಶಿಕ ರಾಜಕಾರಣದ ಅನೇಕ ಸ್ತರಗಳು ಕಂಡುಬರುತ್ತವೆ. ಹಿಂದುಳಿದ ವರ್ಗಗಳ ರಾಜಕಾರಣ ತೀವ್ರತೆಯನ್ನು ಪಡೆದು ದಶಕದ ಕೊನೆಯ ಹೊತ್ತಿಗೆ ಇಳಿಯತೊಡಗಿದಂತೆ ಮೇಲ್ನೋಟಕ್ಕೆ ಗೋಚರಿಸುತ್ತದೆ. ಮುಂದಿನ ದಿನಗಳಲ್ಲಿ ಈ ಶಕ್ತಿಗಳು ರಾಜಕೀಯ ಮುಖ್ಯಧಾರೆಯಲ್ಲಿ ಬೃಹತ್ ಪ್ರಮಾಣದಲ್ಲಿ ಕಂಡುಬರುವುದಿಲ್ಲವಾದರೂ, ಅದರ ವಿಸ್ತೃತ ಸ್ವರೂಪ ಅನೇಕ ವಲಯಗಳಲ್ಲಿ ಗುರುತಿಸಬಹುದಾಗಿದೆ. ಇದರೊಡನೆ ಭಾಷಾ ರಾಜಕಾರಣವು ಪೂರಕವಾಗಿ ಕಾರ್ಯ ನಿರ್ವಹಿಸಿರುವಂತಿದೆ. ಆದರೆ ಸಮಕಾಲೀನವಾಗಿ ಮತ್ತು ನಂತರದಲ್ಲಿ ರಾಷ್ಟ್ರದ ಅನೇಕ ರಾಜ್ಯಗಳಂತೆ ಪ್ರಾದೇಶಿಕ ಪಕ್ಷದ ಬೆಳವಣಿಗೆ ಕಂಡುಬಾರದಿರುವುದು ಚಿಂತನಾರ್ಹ. ಪ್ರಾದೇಶಿಕ ರಾಜಕಾರಣವೂ ವ್ಯಕ್ತಿ

ರಾಜಕಾರಣದೆಡೆಗೆ ಸ್ಥಿತ್ಯಂತರಗೊಂಡಂತೆ ಕಂಡುಬರುತ್ತದೆ. ಈ ದಿಸೆಯಲ್ಲಿ ಇನ್ನೂ ಹೆಚ್ಚಿನ ಅಧ್ಯಯನ ಅಗತ್ಯವಿದೆ.

*** *** ***

ತುರ್ತುಪರಿಸ್ಥಿತಿ ಕುರಿತ ಅಧ್ಯಯನದಲ್ಲಿ ಭೂ ಸುಧಾರಣೆ ಮತ್ತು ಹಾವನೂರು ವರದಿಗಳ ಸುಧೀರ್ಘ ಚರ್ಚೆ ಒಂದಕ್ಕೊಂದು ಸಂಬಂಧವಿಲ್ಲದಂತೆ ಮೇಲ್ನೋಟಕ್ಕೆ ಕಂಡರೂ, ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಯ ಸ್ವರೂಪ ಮತ್ತು ನಂತರದ ರಾಜಕಾರಣದ ಅನೇಕ ಬೇರುಗಳನ್ನು ಇಲ್ಲಿ ಕಾಣಬಹುದು. ಈ ಅಧ್ಯಾಯದಲ್ಲಿ ಭೂ ಸುಧಾರಣೆ ಮತ್ತು ಹಾವನೂರು ವರದಿ ಹಿನ್ನಲೆಯಲ್ಲಿ ಚರ್ಚಿಸಿರುವ ಪ್ರತಿಭಟನೆ ಮತ್ತು ಪ್ರತಿಕ್ರಿಯೆಗಳಲ್ಲಿ ಪ್ರಜಾಪ್ರಭುತ್ವ, ಹಕ್ಕು, ಸ್ವಾತಂತ್ರ್ಯವು ಪರೋಕ್ಷವಾಗಿ ಕಾರ್ಯನಿರ್ವಹಿಸಿದೆ. ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಿ ಕಂಡುಬಂದ ಪ್ರತಿಭಟನೆಯು ಪ್ರಜಾಪ್ರಭುತ್ವ ಮತ್ತು ಮೂಲಭೂತ ಹಕ್ಕುಗಳಿಗಾಗಿ ನಡೆದವುಗಳಾಗಿವೆ ಎಂಬುದನ್ನು ಗಮನಿಸಬಹುದು. ಈ ಅಧ್ಯಾಯದಲ್ಲಿ ೧೯೭೦ರ ದಶಕದಲ್ಲಿ ರಾಷ್ಟ್ರ ರಾಜಕಾರಣದಲ್ಲಿ ಕಂಡುಬಂದ ಪ್ರತಿಭಟನೆ, ಪ್ರಕ್ರಿಯೆಗಳಿಗಿಂತ ಬೇರೆಯಾದ ಪತ್ರಿಕ್ರಿಯೆಗಳು ಕರ್ನಾಟಕದಲ್ಲಿ ರೂಪತಳೆಯಲು ಕಾರಣವಾದ ಅಂಶಗಳನ್ನು ವಿಮರ್ಶಿಸಲು ಪ್ರಯತ್ನಿಸಿದೆ. ಇದು ತುರ್ತುಪರಿಸ್ಥಿತಿ ಕಾಲದ ಪ್ರತಿಭಟನೆಗಳ ಸ್ವರೂಪ ಹಾಗೂ ಅನಿವಾರ್ಯತೆಯನ್ನು ಅರಿಯಲು ಪೂರ್ವಭಾವಿ ಚೌಕಟ್ಟನ್ನು ಒದಗಿಸುತ್ತದೆ.

**ಟಿಪ್ಪಣಿ**

೧. ತುರ್ತುಪರಿಸ್ಥಿತಿ ಕಾಲದಲ್ಲಿ ಅಧಿಕಾರ ದುರುಪಯೋಗ ಕುರಿತು ನಡೆದ ತನಿಖಾ ವರದಿ ಎಂದು ಸಾಮಾನ್ಯವಾಗಿ ಹೇಳಲಾಗುವುದು. ಆದರೆ ಇದು ೧೯೭೨ರಲ್ಲಿ ದೇವರಾಜ ಅರಸು ಮುಖ್ಯಮಂತ್ರಿಯಾಗಿ ನೇಮಕಗೊಂಡಾಗಿನಿಂದ ೧೯೭೭ರವರೆಗಿನ ಆಡಳಿತ ಕುರಿತಾದುದು.

೨. ರಾಜ್ಯದಲ್ಲಿ ೨೦ ಅಂಶಗಳ ಕಾಯಕಲ್ಪ(೧೯೭೬) ಎಂಬ ಲೇಖನದ ಅಡಿಯಲ್ಲಿರುವ ವ್ಯಂಗ್ಯಚಿತ್ರ, ಇಲ್ಲಿ ಗುಡಿಸಲಲ್ಲಿ ವಾಸಿಸುವ ಬಡವನಿಗೆ ಮುಖ್ಯಮಂತ್ರಿ ನೇಗಿಲನ್ನು ಕೊಡುತ್ತಿರುವಂತಿದೆ. ಸಾಂಕೇತಿಕವಾಗಿ ಭೂ ಸುಧಾರಣಾ ಕಾಯ್ದೆ ಮೂಲಕ ಉಳುವವನಿಗೆ ಭೂಮಿಯ ಹಕ್ಕನ್ನು ನೀಡಿದ್ದನ್ನು ಸೂಚಿಸುತ್ತದೆ.

೩. ೨೦ ಅಂಶಗಳ ಕುರಿತ ಲೇಖನದಲ್ಲಿ ಕಂಡುಬಂದ ವ್ಯಂಗ್ಯಚಿತ್ರವಾಗಿದೆ. ಅರಸು ಸರ್ಪದ ಹೆಡೆ ತುಳಿಯುತ್ತಿದ್ದು, ಕಾಳಿಂಗ ಮರ್ದನವೆಂಬ ಶೀರ್ಷಿಕೆ ನೀಡಲಾಗಿದೆ. ೨೦ ಅಂಶಗಳ ಕಾರ್ಯಕ್ರಮದ ಮೂಲಕ ಅಭಾವಗಳ ಕಾಳಿಂಗ ಮರ್ದನ ಮಾಡಲಾಗಿದೆ. ಬೆಲೆ ಏರಿಕೆ ಇಳಿಯ ತೊಡಗಿದೆ ಎಂಬುದು ಈ ಲೇಖನದ ಸಾರ.

೪. ಚಂದ್ರ ಪೂಜಾರಿಯವರ ಯಾಕೀಗ ಭೂಮಿಯ ಪ್ರಶ್ನೆಯಲ್ಲಿ(೨೦೧೦) ಕರ್ನಾಟಕದ ಏಕೀಕರಣ ಚಳವಳಿಯನ್ನು ಭೂ ಮಾಲೀಕರ ಭೂಮಿ ಮತ್ತು ಉಪರಾಷ್ಟ್ರೀಯತೆಯ ಪ್ರಶ್ನೆಯನ್ನಾಗಿ ನೋಡಲಿ ಇಲ್ಲ ಎಂದು ಚರ್ಚಿಸುತ್ತಾರೆ. ಕರ್ನಾಟಕದ ರಾಷ್ಟ್ರೀಯತೆಯ ಪ್ರಶ್ನೆಯನ್ನು ಕನ್ನಡ ಭಾಷೆ ಮಾತಾಡುವ ಎಲ್ಲರ ಸಮಸ್ಯೆಯೆಂದು ಬಿಂಬಿಸಲಾಗಿದೆ. ಕನ್ನಡ ಮಾತಾಡುವವರೆಲ್ಲರೂ ಒಂದಾದರೆ ಆಡಳಿತ ಹಾಗೂ ಅಭಿವೃದ್ಧಿ ದೃಷ್ಟಿಯಿಂದ ಒಳ್ಳೆಯದಾಗಬಹುದೆಂಬ ನಂಬಿಕೆ ಮುಖ್ಯಧಾರೆಯ ವಿಚಾರವಾಗಿ ಮೂಡಿಬಂದಿತ್ತು. ವಾಸ್ತವದಲ್ಲಿ ರಾಷ್ಟ್ರೀಯತೆಯ ಪ್ರಶ್ನೆ ಕೇವಲ ಭಾಷೆಯ ಸಮಸ್ಯೆಯಲ್ಲ. ಏಕೀಕರಣ ಚಳವಳಿ ಹುಟ್ಟಿದ ಪ್ರದೇಶದ ಭೂ ಸಮಸ್ಯೆಯ ಸ್ವರೂಪ ಅರ್ಥ ಮಾಡಿಕೊಳ್ಳುವ ಮೂಲಕ, ಭೂ ಮಾಲೀಕರ ಭೂ ಸಮಸ್ಯೆಗಳು ಭಾಷೆಯ ಮುಖವಾಡದಲ್ಲಿ ಹೊರಬಂದಿದೆ ಎಂದು ವಾದ ಪ್ರಸ್ತುತ ಪಡಿಸುತ್ತಾರೆ. ಕರ್ನಾಟಕದ ಪಂಚವಾರ್ಷಿಕ ಯೋಜನೆಗಳು(೨೦೧೦) ಕೃತಿಯಲ್ಲಿಯೂ ಈ ಚರ್ಚೆಯನ್ನು ಕಾಣಬಹುದು. ಯಾಕೀಗ ಭೂಮಿಯ ಪ್ರಶ್ನೆಯಲ್ಲಿ(೨೦೧೦) ಈ ಆಯಾಮದ ಬೆಳವಣಿಗೆಯು ಹೆಚ್ಚು ಸ್ಪಷ್ಟತೆಯನ್ನು ಪಡೆದಿರುವುದನ್ನು ಗುರುತಿಸಬಹುದು.

೫. ಕನ್ನಡವನ್ನು ರಾಜ್ಯದ ಆಡಳಿತ ಭಾಷೆಯಾಗಿ ೧೯೬೩ರಲ್ಲಿ(೧೯೬೩ರಲ್ಲಿ ೨೬ನೇ ಕಾಯ್ದೆ) ಜಾರಿ ಮಾಡಲಾಯಿತು. ನಂತರ ಇದಕ್ಕೆ ಪ್ರಮುಖ ತಿದ್ದುಪಡಿಗಳನ್ನು ೧೯೭೪(೧೯೭೪ರಲ್ಲಿ ೨೬ನೇ ಕಾಯ್ದೆ). ೧೯೮೨ರಲ್ಲಿ(೧೯೮೨ರಲ್ಲಿ ೬ನೇ ಕಾಯ್ದೆ) ಮಾಡಲಾಯಿತು. ಈ ವಿಷಯದಲ್ಲಿ ಹೆಚ್ಚಿನ ಮಾಹಿತಿಗಾಗಿ ಕೆಳಗಿನ ವೆಬ್ ಸೈಟ್ ವಿಳಾಸವನ್ನು ನೋಡಿ.
http://dpal.kar.nic.in/pdf_files/Acts%20Alpha pdf

೬. ಮೊದಲ ಮೂರು ಪಂಚವಾರ್ಷಿಕ ಯೋಜನೆಗಳಲ್ಲಿ ಕಂಡುಬಂದ ಪ್ರಮುಖ ಭೂ ಸಂಬಂಧಿ ಶಾಸನಗಳು(೧೯೫೦-೧೯೬೭). ಮುಂದಿನ ಪುಟದಲ್ಲಿ ಪಟ್ಟಿ ನೀಡಲಾಗಿದೆ.

೭. ೧೯೬೭ರಲ್ಲಿ ನಕ್ಸಲ್ ಬಾರಿ ಎಂಬ ಹಳ್ಳಿಯಲ್ಲಿ ಸಶಸ್ತ್ರ ಬಂಡಾಯದ ಮೂಲಕ ನಕ್ಸಲ್ ಚಳವಳಿ ಆರಂಭವಾಗುವುದು. ಯುವಕರನ್ನು, ಕಾಲೇಜು ಮತ್ತು ವಿಶ್ವವಿದ್ಯಾಲಯದ ವಿದ್ಯಾರ್ಥಿಗಳನ್ನು ಸೆಳೆಯಲು ಇದು ಯಶಸ್ವಿಯಾಯಿತು. ಬಹುತೇಕರು ಸಮಕಾಲೀನ ರಾಜಕಾರಣ ಕುರಿತು ಅಸಮಾಧಾನ ಹೊಂದಿದ್ದರು. ಸಾಮಾಜಿಕ ವ್ಯವಸ್ಥೆಯ ವಿರುದ್ಧ ಕುಪಿತರಾಗಿದ್ದರು, ತಕ್ಷಣ ನಕ್ಸಲರ ಘೋಷಣೆಗಳಿಂದ ಸೆಳೆಯಲ್ಪಟ್ಟರು. ನಕ್ಸಲ್ ಚಳವಳಿ ಸಾಹಿತ್ಯ, ಸಿನಿಮಾ ಮೊದಲಾದವುಗಳ ಮೇಲೆ ಬೀರಿರುವ ಪ್ರಭಾವ ಅಪಾರವಾಗಿದೆ. ಹಾಗೆ ೧೯೬೦ ರಿಂದ ೧೯೭೫ರವರೆಗಿದ್ದ ಬಂಗಾಳಿ ಸಾಹಿತ್ಯದ ಪ್ರಭಾವ ನಕ್ಸಲ್ ಚಳವಳಿಯ ಮೇಲಿರುವ ಸಾಧ್ಯತೆಯಿದೆ. ಈ ಕಾಲದ ಸಾಹಿತ್ಯವನ್ನು ಹಂಗ್ರೀರಿಯಲಿಸ್ಟ್ ಚಳವಳಿ ಅಥವಾ ಹಂಗರಿ ಜನರೇಷನ್ ಸಾಹಿತ್ಯ ಎಂದು ಗುರುತಿಸಲಾಗುವುದು. ಈ ವಲಯವು ಕವನ ರಚನೆಯ ಮೇಲೆ ಹೆಚ್ಚು ಒತ್ತನ್ನು ನೀಡಿತು. ಈ ಸಾಹಿತ್ಯ ಪ್ರಕಾರ ಭಾರತದ ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಬೇರನ್ನು ಹೊಂದಿದೆ. ಇವರು ಸಮಕಾಲೀನ ಭಾರತೀಯ ಸಾಹಿತ್ಯದಲ್ಲಿದ್ದ ಭಾಷೆ ಮತ್ತು ಪದಕೋಶದ ಸ್ವರೂಪ ಪ್ರಶ್ನಿಸಿದರು ಹಾಗೂ ಬದಲಾಯಿಸಿದರು. ಇದು ಹಿಂದಿ, ಮರಾಠಿ, ಉರ್ದು, ತೆಲುಗು, ಅಸ್ಸಾಮಿ ಭಾಷಾ ಸಾಹಿತ್ಯದ ಮೇಲೆ ಪ್ರಭಾವ ಬೀರಿತು. ಇದರ ಪರಿಣಾಮ ಸಾಹಿತ್ಯಿಕ ಚಳವಳಿಯಲ್ಲಿದ್ದ ಪ್ರಮುಖ ಗುಂಪು ಕೆಲಸ ಕಳೆದುಕೊಂಡಿತು. ಸೆರೆವಾಸ ಅನುಭವಿಸ ಬೇಕಾಯಿತು. ಸಾಮಾನ್ಯವಾಗಿ ಸಾಹಿತ್ಯಿಕ ಪಂಥ ಬದಲಾಗುವುದು ಸಮಕಾಲೀನ ಮುಖ್ಯಧಾರೆ ಅಗತ್ಯಕ್ಕೆ ತಕ್ಕಂತೆ ಬೆಳೆದುಬಂದ ಹೊಸ ರೀತಿ ಸಾಹಿತ್ಯ ಕೃಷಿಯಿಂದ. ಆದರೆ ಇಲ್ಲಿ ಹಂಗರಿ ಜನರೇಷನ್ ಸಾಹಿತ್ಯ ಪಂಥ ಕೊನೆಗೊಂಡಿದ್ದು ಪೋಲೀಸ್ ಮತ್ತು ಸರ್ಕಾರದ ಹಸ್ತಕ್ಷೇಪದಿಂದ ಎಂಬುದು ಗಮನಾರ್ಹ.

೮. ಕರ್ನಾಟಕದಲ್ಲಿ ೧೯೭೪ರಿಂದಲೂ ಭೂ ಸೇನೆ ಅಸ್ತಿತ್ವದಲ್ಲಿದ್ದು ಭೂ ಮಾಲೀಕರ ಪರವಾಗಿ ಭಯೋತ್ಪಾದಕ ಚಟುವಟಿಕೆಯಲ್ಲಿ ತೊಡಗಿದೆ ಎಂಬ ಆಪಾದನೆ ಕಾಣಬಹುದು. ಭೂ ಸೇನೆ ಕಟ್ಟಿದ ಮಾಜಿ ಶಾಸಕ ರತ್ನ ಕುಮಾರ ಕಟ್ಟೀಮಾರರ ಪ್ರಕಾರ ಮೇ(೧೯೭೫) ತಿಂಗಳ ವೇಳೆಗೆ ಸದಸ್ಯರ ಸಂಖ್ಯೆ ೪೦೦೦. ಭೂ ಶಾಸನವು ಮಧ್ಯಮ, ಕೆಳ ಮಧ್ಯಮವರ್ಗ ಮತ್ತು ಭೂ ಸೇನೆಯಲ್ಲಿರುವವರಿಗೆ ಅಕಾರಣ ಭೀತಿಯನ್ನು ಹೆಚ್ಚಿಸಿತ್ತೆಂದು ಕನ್ನಡಪ್ರಭದಲ್ಲಿ(೧೯೭೫ರ ಮೇ ೬) ಪ್ರಕಟವಾದ ವರದಿಯ ಸಾರವಾಗಿದೆ.

ಮೊದಲ ಮೂರು ಪಂಚವಾರ್ಷಿಕ ಯೋಜನೆಗಳಲ್ಲಿ ಕಂಡು ಬಂದ ಪ್ರಮುಖ ಭೂ ಸಂಬಂಧಿ ಶಾಸನಗಳು(೧೯೫೦-೧೯೬೨).
ಪಟ್ಟ ಸಂಖ್ಯೆ ೧೦.

| ರಾಜ್ಯ | ವರ್ಷ | ಶೀರ್ಷಿಕೆ |
|---|---|---|
| ಆಂಧ್ರ ಪ್ರದೇಶ | ೧೯೫೦ | (ತೆಲಂಗಾಣ ಪ್ರದೇಶ)ಗೇಣಿ ಮತ್ತು ಕೃಷಿ ಭೂಮಿ ಕಾಯ್ದೆ. |
| | ೧೯೫೨ | ಹೈದರಾಬಾದ್ ನಗದು ಅನುದಾನ ಕಾಯ್ದೆ ರದ್ಧತಿ. |
| | | ಇನಾಮ್ ರದ್ಧತಿ ಕಾಯ್ದೆ |
| | ೧೯೫೫ | ಹೈದರಾಬಾದ್ ಜಾಗಿರ್‌ದಾರ್ ಕಾಯ್ದೆ ಇನಾಮ್ |
| | ೧೯೫೬ | ರದ್ಧತಿ ಕಾಯ್ದೆ. |
| | ೧೯೫೭ | ಗೇಣಿ ಕಾಯ್ದೆ |
| | | ಇನಾಮ್ ರದ್ಧತಿ ಕಾಯ್ದೆ. |
| ಬಿಹಾರ | ೧೯೫೦ | ಭೂ ಸುಧಾರಣಾ ಕಾಯ್ದೆ |
| | ೧೯೬೧ | ಭೂ ಸುಧಾರಣಾ ಕಾಯ್ದೆ |
| | ೧೯೬೧ | ಭೂ ಮಿತಿ ಕಾಯ್ದೆ |
| ಗುಜರಾತ್ | ೧೯೬೦ | ಕೃಷಿ ಭೂ ಮಿತಿ ಕಾಯ್ದೆ |
| ಕರ್ನಾಟಕ | ೧೯೫೪ | ಮೈಸೂರು ಇನಾಮ್ ರದ್ಧತಿ ಕಾಯ್ದೆ |
| | ೧೯೫೫ | ಮೈಸೂರು ಇನಾಮ್ ರದ್ಧತಿ ಕಾಯ್ದೆ |
| | ೧೯೬೧(ಹಾಗೂ ೧೯೬೫) | ಭೂ ಸುಧಾರಣಾ ಕಾಯ್ದೆ |
| ಕೇರಳ | ೧೯೬೦ | ಕೃಷಿ ಸಂಬಂಧಿ ಕಾಯ್ದೆ |
| | ೧೯೬೩ | ಭೂ ಸುಧಾರಣಾ ಕಾಯ್ದೆ |
| | | ಭೂ ಸುಧಾರಣಾ ಕಾಯ್ದೆಗೆ ತಿದ್ದುಪಡಿ |
| ಮಧ್ಯ ಪ್ರದೇಶ | ೧೯೫೦ | ಮಾಲೀಕತ್ವ ಹಕ್ಕುಗಳ ರದ್ಧತಿ ಕಾಯ್ದೆ |
| | ೧೯೫೧ | ಗ್ವಾಲಿಯರ್, ಇಂದೋರ್ ಮತ್ತು ಮಾಳ್ವ ಜಮೀನ್ದಾರಿ ರದ್ಧತಿ ಕಾಯ್ದೆ |
| | ೧೯೫೧ | ಜಾಗೀರ್ದಾರಿ ರದ್ಧತಿ ಕಾಯ್ದೆ |
| | ೧೯೫೨ | ವಿಂಧ್ಯ ಪ್ರದೇಶದ ಜಾಗೀರ್ದಾರಿ ರದ್ಧತಿ ಕಾಯ್ದೆ ಮತ್ತು ಭೂ ಸುಧಾರಣಾ ಕಾಯ್ದೆ |
| | ೧೯೫೯ | ಭೂ ಕಂದಾಯ ಅಧಿನಿಯಮ |
| | ೧೯೬೦ | ಕೃಷಿ ಭೂಮಿ ಹಿಡುವಳಿ ಕಾಯ್ದೆ |
| ಮಹಾರಾಷ್ಟ್ರ | ೧೯೫೦ | ಹೈದರಾಬಾದ್ ಗೇಣಿ ರದ್ಧತಿ ಕಾಯ್ದೆ ಮತ್ತು ಕೃಷಿ ಸುಧಾರಣಾ ಕಾಯ್ದೆ |
| | ೧೯೫೮ | ಬಾಂಬೆ ಗೇಣಿ ಮತ್ತು ಕೃಷಿ ಭೂಮಿ ಕಾಯ್ದೆ |
| | ೧೯೬೧ | ಕೃಷಿ ಭೂಮಿ ಕಾಯ್ದೆ |
| ತಮಿಳುನಾಡು | ೧೯೫೨ | ತಂಜಾವೂರಿನ ಗೇಣೀದಾರರು ಮತ್ತು ಪಣ್ಣೈಯಾಲ್ ಭದ್ರತಾ ಕಾಯ್ದೆ |
| | ೧೯೫೫ | ಮದ್ರಾಸ್ ಕೃಷಿ ಗೇಣಿದಾರರ ಭದ್ರತಾ ಕಾಯ್ದೆ |
| | ೧೯೫೬ | ಸಾರ್ವಜನಿಕ ಗೇಣಿ ಕಾಯ್ದೆ |
| | ೧೯೬೧ | ಭೂ ಸುಧಾರಣಾ ಕಾಯ್ದೆ |
| | ೧೯೬೧ | ಕೃಷಿ ಭೂಮಿ ದಾಖಲಾತಿಗಳ ಗೇಣಿ ಹಕ್ಕಿನ ಕಾಯ್ದೆ |
| | ೧೯೬೯ | ಕುಡಿಯೊರುಪ್ಪು ಅತಿಕ್ರಮಣ ಕಾಯ್ದೆ |
| ಉತ್ತರ ಪ್ರದೇಶ | ೧೯೫೦ | ಜಮೀನ್ದಾರಿ ರದ್ಧತಿ ಮತ್ತು ಭೂ ಸುಧಾರಣಾ ಕಾಯ್ದೆ |
| | ೧೯೫೩ | ಸ್ವಾಧೀನ ಏಕತ್ರೀಕರಣ ಕಾಯ್ದೆ |
| | ೧೯೬೦ | ಭೂ ಹಿಡುವಳಿ ಮಿತಿ ಕಾಯ್ದೆ |
| ಪಶ್ಚಿಮ ಬಂಗಾಳ | ೧೯೫೦ | ಬರ್ಗಾದಾರರ ಕಾಯ್ದೆ |
| | ೧೯೫೩ | ಎಸ್ಟೇಟ್ ಅಕ್ವಿಸಿಷನ್ ಕಾಯ್ದೆ |
| | ೧೯೫೫ | ಭೂ ಸುಧಾರಣಾ ಕಾಯ್ದೆ |

ಆಕರ : ತಿಮೋಟ್ ಬೆಸ್ಲಿ, ರಾಬಿನ್ ಬರ್ಗೆಸ್, ಲ್ಯಾಂಡ್ ರಿಫಾರ್ಮ್, ಪಾವರ್ಟಿ ರಿಡಕ್ಷನ್ ಅಂಡ್ ಗ್ರೋತ್: ಎವಿಡೆನ್ಸ್ ಫ್ರಂ ಇಂಡಿಯಾ, ಲಂಡನ್ ಸ್ಕೂಲ್ ಆಫ್ ಇಕಾನಾಮಿಕ್ಸ್, ಹಾಗಟನ್ ಸ್ಟ್ರೀಟ್, ಲಂಡನ್, ೧೯೯೮.

ಸ್ವಾತಂತ್ರ್ಯಾನಂತರ ೧೯೫೦ಕ್ಕಿಂತ ಮೊದಲು ಜಾರಿಯಾಗಿದ್ದ ಭೂ ಶಾಸನಗಳೆಂದರೆ ೧೯೪೮ರ ತಮಿಳುನಾಡಿನಲ್ಲಿ ಎಸ್ಟೇಟ್ ಕಾಯ್ದೆ, ಗುಜರಾತಿನಲ್ಲಿ ಬಾಂಬೆ ಗೇಣಿ ಕಾಯ್ದೆ ಮತ್ತು ಭೂ ಸುಧಾರಣಾ ಕಾಯ್ದೆಗಳು. ಈ ಪಟ್ಟಿಯಲ್ಲಿ ಭೂ ಸುಧಾರಣೆ ಹಿನ್ನೆಲೆಯಲ್ಲಿ ಮೊದಲ ಪಂಚವಾರ್ಷಿಕ ಯೋಜನೆಯಲ್ಲಿ ಜಾರಿಯಾಗಿರುವ ಶಾಸನಗಳು ದ್ವಂದ್ವ ಹುಟ್ಟಿಸುವಂತಿದೆ.

ಭಾಷಾವಾರು ರಾಜ್ಯಗಳ ಪುನರ್ ವಿಂಗಡನೆಯಾಗಿರದ ಕಾರಣ ಕೆಲವು ಕಾಯ್ದೆಯ ಹೆಸರು ಮತ್ತು ರಾಜ್ಯದ ಹೆಸರು ಹೊಂದಾಣಿಕೆ ಆಗುವುದಿಲ್ಲ.

೯. ಇದು ೧೯೭೪ರ ಭೂ ಸುಧಾರಣಾ ಕಾಯ್ದೆಯಲ್ಲಿನ ಕುಟುಂಬದ ವ್ಯಾಖ್ಯಾನವನ್ನು ಪ್ರಶ್ನಿಸುತ್ತ ಪ್ರತಿಭಟನೆ ಒಡ್ಡಿದ ಸಮಿತಿಯಾಗಿದೆ. ಕಾಯ್ದೆಯ ಪ್ರಕಾರ ಕುಟುಂಬದಲ್ಲಿನ ವಯಸ್ಕ ಮಕ್ಕಳನ್ನು ಮತ್ತೊಂದು ಕುಟುಂಬವೆಂದು ಪರಿಗಣಿಸಲಾಗುತ್ತಿತ್ತು. ಆದರೆ ಇದು ಗಂಡು ಮಕ್ಕಳಿಗೆ ಮಾತ್ರ ಅನ್ವಯವಾಗುತ್ತಿತ್ತು. ಹಾಗಾಗಿ ಇದನ್ನು ಪ್ರಶ್ನಿಸುತ್ತ ಮಹಿಳೆಯರ ಭೂಮಿಯ ಒಡೆತನದ ಹಕ್ಕಿಗಾಗಿ ಸುಮಾರು ವರ್ಷಕ್ಕಿಂತಲೂ ಹೆಚ್ಚು ಕಾಲ ಹೋರಾಟ ನಡೆಸಿತು. ೧೯೭೫ರ ಫೆಬ್ರವರಿ ೧೦ರಂದು ವಿಧಾನಸಭಾ ಅಧಿವೇಶನದ ಸಂದರ್ಭದಲ್ಲಿ ಬೆಂಗಳೂರು ಬಂದ್‌ಗೆ ಕರೆನೀಡಿದ್ದು, ಆ ಸಮಯದಲ್ಲಿ ಲಾಠಿ ಛಾರ್ಜ್ ಆಗಿರುವುದು ತಿಳಿದುಬರುವುದು. ಇದನ್ನು ಪ್ರಶ್ನಿಸಿ ವಿರೋಧ ಪಕ್ಷದ ಮುಖಂಡರಾದ ಬೊಮ್ಮಾಯಿ ಅವರು ವಿರೋಧಿಸಿರುವರು. ಪ್ರಧಾನಿ ಕರೆಗೆ ಓಗೊಟ್ಟು ಮಹಿಳೆಯರು ೧೯೭೧ ಮತ್ತು ೧೯೭೨ರ ಚುನಾವಣೆಯಲ್ಲಿ ಸಮಾನ ಬೆಂಬಲ ಕೊಟ್ಟಿದ್ದಾರೆ. ಆದರೆ ಅವರಿಗೆ ಭೂ ಸುಧಾರಣೆಯಲ್ಲಿ ಸರಿಸಮನಾದ ಹಕ್ಕನ್ನು ಕೊಡದೆ ಇರುವುದು ಸರಿಯಲ್ಲ. ಜೊತೆಗೆ ಈ ರೀತಿ ಭೂ ಶಾಸನದ ವಿಚಾರದಲ್ಲಿ ಬಂದ್‌ಗೆ ಕರೆ ನೀಡಿರುವುದು ಮಹಿಳೆಯರೇ ಮೊದಲೇನು ಅಲ್ಲ. ಇದಕ್ಕೆ ಮೊದಲು ಕಾರ್ಮಿಕರು, ವ್ಯಾಪಾರಸ್ಥರು ಬಂದ್‌ಗೆ ಕರೆ ನೀಡಿದ್ದರು. ಆದರೆ ಮಹಿಳೆಯರ ಮೇಲೆ ಲಾಠಿ ಛಾರ್ಜ್ ಮಾಡಿರುವ ಕುರಿತು ಸಭೆಯಲ್ಲಿ ಚರ್ಚಿಸಲಾಗಿದೆ.

ಗಂಡುಮಕ್ಕಳು, ವಯಸ್ಸಾದವರು ಇನ್ನಿತರರಿಗೆ ಕಾಯ್ದೆಯಲ್ಲಿ ನೀಡುವ ಸವಲತ್ತನ್ನು ವಿವಾಹಿತ ಮತ್ತು ಅವಿವಾಹಿತ ಹೆಣ್ಣು ಮಕ್ಕಳಿಗೂ ನೀಡಬೇಕು ಎಂಬುದು ಪ್ರಮುಖ ಬೇಡಿಕೆ. ಈ ಸಂಘಟನೆಯಲ್ಲಿ ಕ್ರಿಯಾಶೀಲರಾಗಿ ಹೋರಾಟ ಮಾಡುತ್ತಿದ್ದ ಹೆಚ್ಚಿನ ಮಹಿಳೆಯರು ವಕೀಲರು, ಶಿಕ್ಷಕರು ಮತ್ತು ಸಮಾಜದ ಮುಂದಾಳುಗಳು ಎನಿಸಿಕೊಂಡಿದ್ದವರು. ವಿಧಾನಸೌಧದಲ್ಲಿ ಶಾಸನ ಸಭೆಗಳು ನಡೆಯುವ ಸಂದರ್ಭದಲ್ಲಿ ಬಂದ್‌ಗೆ ಕರೆ ನೀಡಲಾಗಿದೆ. ಸರ್ಕಾರದ ಮೇಲೆ ಒತ್ತಡ ಹೇರಲು ಸುಲಭವಾಗುತ್ತಿತ್ತು. ಈ ತಂತ್ರ ಸಮಕಾಲೀನವಾಗಿ ಭಾರತದ ವಿವಿಧ ಭಾಗಗಳಲ್ಲಿಯೂ ನೋಡಬಹುದಾಗಿದೆ. ಮಂತ್ರಿಗಳು, ಶಾಸಕರನ್ನು ಘೇರಾವ್ ಹಾಕುವ ಮೂಲಕ ತಮ್ಮ ಸಮಸ್ಯೆ ಪರಿಹರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದದ್ದು ಸಾಮಾನ್ಯವಾಗಿತ್ತು.

ಸರ್ಕಾರ ಈ ಸಮಿತಿಯ ಹೋರಾಟವನ್ನು ಅನುಮಾನದ ಕಣ್ಣುಗಳಿಂದ ನೋಡುತ್ತ, ಕಾನೂನು ಮಾಡುವಾಗಿನ ಮುಖ್ಯ ಉದ್ದೇಶ ಗೇಣಿ ಪದ್ಧತಿ ತಪ್ಪಿಸುವುದು. ಸಮಿತಿಯ ಪ್ರತಿಭಟನೆಯನ್ನು ತಳ್ಳಿಹಾಕಲು ಸರ್ಕಾರ ನೀಡಿರುವ ಕಾರಣಗಳು ಇಂತಿವೆ. ಮೊದಲಿಗೆ, ಸಾಂಪ್ರದಾಯಿಕ ಪದ್ಧತಿಯಂತೆ ಮದುವೆಗೆ ಮುನ್ನ ತಂದೆ-ತಾಯಿ, ನಂತರ ಗಂಡನ ಮನೆಯಲ್ಲಿ ಹೆಣ್ಣು ಮಕ್ಕಳು ಬದುಕುತ್ತಾರೆ. ಗಂಡು ಮಕ್ಕಳಂತೆ ಸ್ವತಂತ್ರವಾಗಿ ಬದುಕುವುದು ವಿರಳ. ಹಾಗಾಗಿ ಅವರಿಗೆ ಜಮೀನು ಕೊಡುವುದು ಸೂಕ್ತವಲ್ಲವೆಂಬ ತೀರ್ಮಾನವನ್ನು ಕೈಗೊಂಡಿದ್ದೇವೆ. ಎರಡನೆಯದಾಗಿ, ಭೂ ಶಾಸನ ಬಂದು ವರ್ಷ ಕಳೆದಿದೆ. ಗೇಣಿ ಪದ್ಧತಿ ನಿರ್ಮೂಲನೆ ಯಶಸ್ವಿಯಾಗಿ ನಡೆಯುತ್ತಿರುವುದರ ಹಿನ್ನೆಲೆಯಲ್ಲಿ, ಅದನ್ನು ತಡೆಯಲು ಹೊಸ ಸಂಚನ್ನು ಭೂ ಮಾಲಿಕರು ಈ ಮೂಲಕ ಹೂಡಿದ್ದಾರೆ. ಮೂರನೆಯದಾಗಿ ಭೂ ಮಾಲಿಕ ವಿಧವೆಯರು, ಹೆಣ್ಣು ಮಕ್ಕಳ ಬಗ್ಗೆ ಮಾತ್ರ ಮಾತನಾಡುತ್ತೀರಿ. ಹಾಗೆ ಗೇಣಿದಾರರ ವಿಧವೆಯರು ಮತ್ತು ಹೆಣ್ಣು ಮಕ್ಕಳು ಇದ್ದಾರೆ. ಭೂ ಮಾಲಿಕ ಹೆಣ್ಣು ಮಕ್ಕಳೆ ತಾವಾಗಿ ವ್ಯವಸಾಯ ಮಾಡುವುದಾದರೆ ಅವರಿಗೇನು ಅಡ್ಡಿಯಿಲ್ಲ. ಸೀಲಿಂಗ್ ಲಿಮಿಟ್ ಇರುತ್ತದೆ ಅಷ್ಟೆ. ಆದರೆ ಗೇಣಿದಾರರ ಮುಖೇನ ಮಾಡಿಸುವುದನ್ನು ತಪ್ಪಿಸಬೇಕೆನ್ನುವುದು ಉದ್ದೇಶ.

ಇವುಗಳಲ್ಲಿ ಮಹಿಳೆಯರ ಭೂಮಿ ಒಡೆತನದ ಪ್ರಶ್ನೆ ಕುರಿತ ಚಿಂತನೆಗಳನ್ನು ಕಾಣಬಹುದು. ಇಲ್ಲಿ ಪ್ರಮುಖವಾಗಿ ಎರಡು ವಿಚಾರಗಳು ಕಂಡುಬರುತ್ತವೆ. ಮೊದಲನೆಯದು, ಸರ್ಕಾರ ಹೇಳುವಂತೆ ಭೂ ಶಾಸನದ ಮೂಲಕ ಕಳೆದುಕೊಳ್ಳುತ್ತಿದ್ದ ಜಮೀನಿನ ರಕ್ಷಣೆಯ ತಂತ್ರವಂತೆ ಮೇಲ್ನೋಟಕ್ಕೆ ಕಾಣುವುದು. ಈ ಪ್ರತಿಭಟನೆಯಲ್ಲಿದ್ದ ಮಹಿಳೆಯರು ಮೇಲ್‌ಮಧ್ಯಮ, ಶ್ರೀಮಂತ ಹಾಗೂ ಸುಶಿಕ್ಷಿತ ವರ್ಗದವರಾಗಿದ್ದರು. ಇವರಲ್ಲಿ ಬಹುತೇಕರು ಕೃಷಿಯೇತರ ವೃತ್ತಿಗಳಲ್ಲಿ ತೊಡಗಿದ್ದವರು. ಭೂಮಿಯ ಒಡೆತನ ದೊರೆತರೂ ಸ್ವಯಂ ಕೃಷಿ ಮಾಡುವ ಸಾಧ್ಯತೆ ಬಹಳ ವಿರಳವಾಗಿತ್ತು. ಎರಡನೆಯದು, ಮಹಿಳಾ ಭೂ ರಕ್ಷಣಾ ಕ್ರಿಯಾ ಸಮಿತಿ ಎತ್ತಿದ ಭೂ ಒಡೆತನದ ಹಕ್ಕಿನ ಪ್ರಶ್ನೆ, ಇದು ಮೊದಲನೆಯದಕ್ಕಿಂತ ಹೆಚ್ಚು ಮುಖ್ಯವಾಗಿದೆ. ಭೂ ಒಡೆತನದ ಹಕ್ಕು ಮಹಿಳೆಯರಿಗೂ ನೀಡಬೇಕೆನ್ನುವುದನ್ನು ಕೇವಲ ಭೂ ಮಾಲಿಕ ವರ್ಗದಲ್ಲಿರುವ ಹೆಣ್ಣು ಮಕ್ಕಳಿಗೆ ಸೀಮಿತಗೊಳಿಸಬೇಕಿಲ್ಲ. ಇದು ಎಲ್ಲ ವರ್ಗದಲ್ಲಿರುವ ಮಹಿಳೆಯರಿಗೂ ಅನ್ವಯಿಸುತ್ತದೆ. ಸರ್ಕಾರ ಇದನ್ನು ಗಣನೆಗೆ ತೆಗೆದುಕೊಳ್ಳದೆ ಸಾಂಪ್ರದಾಯಿಕ ಹಿನ್ನೆಲೆ ನೀಡುತ್ತ, ಮಹಿಳೆಯರನ್ನು ಭೂಮಿ ಹಕ್ಕಿನಿಂದ ಅನರ್ಹಗೊಳಿಸಿದ್ದನ್ನು ಸಮರ್ಥಿಸಿಕೊಳ್ಳುತ್ತಿರುವುದು ಗಮನಾರ್ಹ. ಇದು ಭೂ ಮಾಲಿಕ ವರ್ಗದಿಂದ ಬಂದ ಮಹಿಳೆಯರ ಬೇಡಿಕೆ ಎಂದು ವಿರೋಧಿಸುತ್ತಲೆ ಇತರ ವರ್ಗಗಳಲ್ಲಿಯೂ ಮಹಿಳೆಯರಿದ್ದಾರೆ. ಅವರಿಗೂ ಭೂಮಿಯ ಮೇಲೆ ಹಕ್ಕಿದೆ ಎಂಬುದನ್ನು ಪರೋಕ್ಷವಾಗಿ ಒಪ್ಪಿಕೊಳ್ಳುವುದು. ಆದರೆ ಅದಕ್ಕೆ ಒತ್ತು ಕೊಡದೆ ಸಮಿತಿ ಮುಂದಿರಿಸಿದ ಮಹಿಳೆಯ ಭೂಮಿ ಮೇಲಿನ ಹಕ್ಕನ್ನು ನಿರಾಕರಿಸಲು ತಂತ್ರವಾಗಿ ಬಳಸಲಾಗಿದೆ. ಭೂಮಿಯ ಒಡೆತನದ ಹಿನ್ನೆಲೆಯಲ್ಲಿ ಮಹಿಳೆಯರ ಸಂಘಟನೆ ಮತ್ತು ಹೋರಾಟ ಲಿಂಗ ತಾರತಮ್ಯವನ್ನು ಪ್ರಶ್ನಿಸುತ್ತಿದೆ. ಇದು ಅಸ್ತಿತ್ವದ ಪ್ರಶ್ನೆಯಾಗಿಯೂ ಮೂಡಿಬರುತ್ತಿದೆ. ಇಲ್ಲಿ ಭೂ ಮಾಲಿಕ ವರ್ಗದಿಂದ ಬಂದ ಸುಶಿಕ್ಷಿತ ಮಹಿಳೆಯರು ಎಂಬುದನ್ನು ಬಿಟ್ಟು ಮಹಿಳಾ ಹಕ್ಕಿನ ಪ್ರಶ್ನೆಯಾಗಿ ನೋಡಬೇಕಾಗುವುದು. ಪಶ್ಚಿಮ ಬಂಗಾಳ ಮೊದಲಾದ ರಾಜ್ಯಗಳು, ಭೂ ಶಾಸನದ ಮೂಲಕ ಭೂಮಿ ವಿತರಿಸುವಾಗ ಜಂಟಿ ಪಟ್ಟಗಳನ್ನು ನೀಡಿದೆ. ಈ ಮೂಲಕ ಗಂಡ ಮತ್ತು ಹೆಂಡತಿ ಇಬ್ಬರಿಗೂ ಭೂಮಿಯ ಮೇಲೆ ಸಮಾನ ಹಕ್ಕನ್ನು ದೊರೆತಿದೆ. ಪ್ರಸ್ತುತದಲ್ಲಿ ಈ ಮಾದರಿಯನ್ನು ಶಾಸನಬದ್ಧಗೊಳಿಸುವ ವಿಚಾರ ಕುರಿತು ಅನೇಕ ರಾಜ್ಯಗಳಲ್ಲಿ ಚರ್ಚೆ ನಡೆಯುತ್ತಿವೆ.

೧೦. ತಮಿಳುನಾಡು: ಭೂ ಶಾಸನದ ಗರಿಷ್ಠ ಮಿತಿಯ ಸತ್ಯ ಮತ್ತು ಮಿಥ್ಯಗಳೆಂಬ ಮೆಂಚರ್ ಅವರ ಲೇಖನದ ಸಾರ.

೧೧. ಕರ್ನಾಟಕ ಭೂದಾನ ಯಜ್ಞ ಅಧಿನಿಯಮ, ೨೬, ೧೯೭೮, ಕರ್ನಾಟಕ ಮತ್ತು ಕೆಲವು ಇನಾಮುಗಳ ರದ್ದಿಯಾತಿ ಅಧಿನಿಯಮ, ೩೨, ೧೯೭೯ ಮತ್ತು ಕರ್ನಾಟಕ ಭೂ ತೆರಿಗೆ ಅಧಿನಿಯಮ, ೧೨, ೧೯೭೯ ಇತರ ಶಾಸನಗಳ

ತಿದ್ದುಪಡಿಗಳಾಗಿವೆ.

೧೨. ಜಾತಿ ಆಧಾರದ ಕಿಸಾನ್ ಸಂಘಟನೆಗಳ ಹೆಸರಿನಲ್ಲಿ ೧೯೭೭ರ ನಂತರ ಭೂ ಸುಧಾರಣಾ ಕಾನೂನುಗಳ ವಿರುದ್ಧ ಭೂ ಮಾಲಿಕರು ಸಂಘಟಿತರಾಗುವುದು ಹೆಚ್ಚಾಯಿತು. ಇದು ಹೆಚ್ಚಾಗಿ ನಕ್ಸಲಿಸಂ ಮತ್ತು ದೊಡ್ಡ ಜಮೀನ್ದಾರರು ಇದ್ದಂತಹ ರಾಜ್ಯಗಳಾದ ಬಿಹಾರ್ ಮತ್ತಿತರಗಳೆಡೆ ಬೆಳೆದು ಬಂದಿರುವುದನ್ನು ಗುರುತಿಸಬಹುದು.

೧೯೭೭ರ ನಂತರ ಸಂಘಟನೆಗಳ ಪಟ್ಟಿಯನ್ನು ಕೆಳಗಡೆ ನೀಡಲಾಗಿದೆ. ಪಟ್ಟಿ ಸಂಖ್ಯೆ: ೧೧.

| ಹೆಸರು | ಆರಂಭವಾದ ವರ್ಷ | ಜಾತಿಯೊಂದಿಗಿನ ಸಂಬಂಧ | ಪ್ರದೇಶಗಳು |
|---|---|---|---|
| ಕುವರ್ ಸೇನ | ೧೯೭೭ | ರಜಪೂತರು | ಭೋಜ್‌ಪುರ್ |
| ಕಿಸಾನ್ ಸುರಕ್ಷ ಸಮಿತಿ | ೧೯೭೯ | ಕುರ್ಮಿ | ಪಾಟ್ನ, ಜಹ್ನಾಬಾದ್, ಗಯಾ |
| ಭೂಮಿ ಸೇನ | ೧೯೮೩ | ಕುರ್ಮಿ | ಪಾಟ್ನ, ನವಾಡ, ನಳಂದ, ಜಹ್ನಾಬಾದ್ |
| ಲೋರಿಕ್ ಸೇನ | ೧೯೮೩ | ಯಾದವ್ | ಪಾಟ್ನ, ನಳಂದ, ಜಹ್ನಾಬಾದ್ |
| ಬ್ರಹ್ಮರ್ಷಿ ಸೇನ | ೧೯೮೧ | ಭೂಮಿಹಾರ್ | ಭೋಜ್‌ಪುರ್, ಔರಂಗಾಬಾದ್, ಜಹ್ನಾಬಾದ್ |
| ಕಿಸಾನ್ ಸಂಘ | ೧೯೮೧ | ರಜಪೂತ್ ಬ್ರಾಹ್ಮಿನ್ | ಪಾಲಮು, ಔರಂಗಾಬಾದ್ |
| ಕಿಸಾನ್ ಸೇವಕ್ ಸಮಾಜ್ | ೧೯೮೩ | ರಜಪೂತ್ | ಪಾಲಮು, ಔರಂಗಾಬಾದ್ |
| ಸನ್‌ಲೈಟ್ ಸೇನ | ೧೯೮೯ | ಪಠಾಣ್ ಮತ್ತು ರಜಪೂತರು | ಪಾಲಮು, ಗರವ, ಔರಂಗಾಬಾದ್, ಗಯಾ |
| ಸವರ್ಣ ಲಿಬರೇಷನ್ ಫ್ರಂಟ್ | ೧೯೯೦ | ಭೂಮಿಹಾರ್ | ಗಯಾ, ಜಹ್ನಾಬಾದ್ |
| ಕಿಸಾನ್ ಸಂಘ | ೧೯೯೦ | ಭೂಮಿಹಾರ್ | ಪಾಟ್ನ, ಭೋಜ್‌ಪುರ್ |
| ಕಿಸಾನ್ ಮೋರ್ಚಾ | ೧೯೮೯-೧೯೯೦ | ರಜಪೂತರು | ಭೋಜ್‌ಪುರ್ |
| ಗಂಗಾ ಸೇನ | ೧೯೯೦ | ಭೂಮಿಹಾರ್ | ಭೋಜ್‌ಪುರ್ |
| ರಣವೀರ್ ಸೇನ | ೧೯೯೪ | ಭೂಮಿಹಾರ್ | ಭೋಜ್‌ಪುರ್, ಪಾಟ್ನ, ಜಹ್ನಾಬಾದ್, ರೋಹಟ್ಸ್, ಔರಂಗಬಾದ್, ಗಯಾ |

ಮೂಲ: ಪ್ರಕಾಶ್ ಲೂಯಿಸ್, ಪೀಪಲ್ ಪವರ್: ದ ನಕ್ಸಲೈಟ್ ಮೂವ್‌ಮೆಂಟ್ ಇನ್ ಸೆಂಟ್ರಲ್ ಬಿಹಾರ್, ವರ್ಲ್ಡ್‌ಸ್ಮಿತ್, ದೆಹಲಿ, ೨೦೦೨.

ಭೂ ಸೇನೆಗಳಿಗೆ ಪ್ರತಿಯಾಗಿ ಲಾಲ್ ಸೇನ ಎಂಬ ನಕ್ಸಲರ ಸೇನೆಯು ಭೂ ಮಾಲೀಕರಿಂದ ದೌರ್ಜನ್ಯವಾಗುವ ಕಡೆಗಳಲ್ಲಿ ರಕ್ತಕ್ಕೆ ಪ್ರತಿರಕ್ತ ಎಂಬ ಕಾರ್ಯನೀತಿಯನ್ನು ಮುಖ್ಯ ಧೋರಣೆಯಾಗಿರುವುದು ತಿಳಿದುಬರುವುದು. ಎಡಪಂಥೀಯ ತೀವ್ರವಾದಿಗಳು, ನಕ್ಸಲರನ್ನು ಎದುರಿಸಲು ಕಳೆದ ಎರಡು ದಶಕಗಳಲ್ಲಿ ಸುಮಾರು ಹನ್ನೊಂದಕ್ಕಿಂತ ಹೆಚ್ಚು ಸಂಘಟನೆಗಳು ಬೇರೆ ಬೇರೆ ಸಮಯದಲ್ಲಿ ಅಸ್ತಿತ್ವದಲ್ಲಿದ್ದವು. ಇವು ಭೂ ಸುಧಾರಣಾ ಕಾಯ್ದೆಯಿಂದಾಗಿ ಭೂ ಮಾಲೀಕ ಮತ್ತು ಭೂ ರಹಿತರ ನಡುವಿನ ಸಂಬಂಧ ಪಡೆದುಕೊಂಡ ಸ್ವರೂಪ, ಉಂಟಾಗಿರುವ ಬಿಕ್ಕಟ್ಟು ಮತ್ತು ಕಾಯ್ದೆ ಜಾರಿ ತರುವಲ್ಲಿನ ವೈಫಲ್ಯವನ್ನು ತೋರಿಸುವುದು.

೧೩. ಪಬ್ಲಿಕೇಷನ್ ಡಿವಿಷನ್, ಬಜೆಟ್ ಭಾಷಣಗಳು ೧೯೭೨ - ೧೯೮೨, ಕರ್ನಾಟಕ ಸರ್ಕಾರ, ಬೆಂಗಳೂರು, ೧೯೮೩.

ಈ ಕೆಳಗಿನ ವರ್ಷಗಳ ಮಾಹಿತಿಯ ಸಾರವನ್ನು ಬಳಸಿಕೊಳ್ಳಲಾಗಿದೆ. ಅವುಗಳೆಂದರೆ,

- ೧೯೭೪ - ೧೯೭೫ ಮಾರ್ಚ್ ೬ ಪುಟ - ೨೧-೨೨.
- ೧೯೭೫ - ೧೯೭೬ ಫೆಬ್ರವರಿ ೨೧, ಪುಟ -೧೬
- ೧೯೭೬ - ೧೯೭೭ ಮಾರ್ಚ್ ೧, ಪುಟ - ೧೬
- ೧೯೭೮ - ೧೯೮೦ ಮಾರ್ಚ್ ೧೯, ಪುಟ - ೮-೯.

೧೪. ಕರ್ನಾಟಕ'೭೭ ಕಾಂಪ್ರಹೆನ್ಸಿವ್ ರೆಫ್ರೆನ್ಸ್ ಎನ್ಯೂಯಲ್, ಆನ್ ಇಂಡಿಯಾ'ಸ ಮೋಸ್ಟ್ ಪ್ರೊಗ್ರೆಸಿವ್ ಸ್ಟೇಟ್ ಕರ್ನಾಟಕ ಎಂಬ ಪುಸ್ತಕವನ್ನು ೧೯೭೭ರಲ್ಲಿ ಬೆಂಗಳೂರಿನ ಮೈರ್ಸ್ ಇಕಾನಾಮಿಕ್ ರಿಸರ್ಚ್, ಮಾರ್ಕೆಟಿಂಗ್ ಇನ್‌ಫಾರ್ಮೇಷನ್ ಡಾಕ್ಯುಮೆಂಟೇಷನ್ ಸೆಂಟರ್ ಸಂಪಾದಿಸಿ ಪ್ರಕಟಿಸಿದೆ. ಸಮಕಾಲೀನ ಪ್ರಮುಖ ಅರ್ಥಶಾಸ್ತ್ರಜ್ಞರ ಸಲಹೆ ಮೇರೆಗೆ ಸಂಪಾದಿಸಿರುವುದಾಗಿ ಆರಂಭದಲ್ಲಿ ತಿಳಿಸಲಾಗಿದೆ. ಇದರಲ್ಲಿ ಕರ್ನಾಟಕ ಸರ್ಕಾರದ ಆರ್ಥಿಕ ಯೋಜನೆಗಳು ಮತ್ತು ಕೈಗಾರೀಕರಣದ ಪ್ರಗತಿಯನ್ನು ಹೊಗಳಲಾಗಿದೆ. ಆದರೆ ಈ ಪುಸ್ತಕದಲ್ಲಿ ಭೂ ಸುಧಾರಣೆಯನ್ನು ಆರ್ಥಿಕ ಪ್ರಗತಿ ನಿಟ್ಟಿನಲ್ಲಿ ಚರ್ಚಿಸಿಲ್ಲ. ಈ ಕುರಿತಂತೆ ಚರ್ಚೆ ಹಾಗೂ ಮಾಹಿತಿ ನೀಡಿಲ್ಲವೆಂಬುದು ಗಮನಾರ್ಹ.

೧೫. ಭೂ ಶಾಸನ ಜಾರಿ ಮೂಲಕ ೧೯೭೭ರವರೆಗಿನ ಸಾಧನೆಗಳ ಕುರಿತ ಕರ್ನಾಟಕ ಸರ್ಕಾರ ನೀಡಿರುವ ಜಾಹೀರಾತು. 'ಇಂದಿನ ಕರ್ನಾಟಕ' ಶೀರ್ಷಿಕೆ ಅಡಿಯಲ್ಲಿ 'ಸ್ವಲ್ಪ ಸ್ಥಳವನ್ನು ಸ್ವಂತ ಭೂಮಿ' ಎಂದು ಕರೆಯಬಹುದೆಂಬ ಉಪಶೀರ್ಷಿಕೆ ಇದೆ. ಇದರ ಕೆಳಗೆ ಸರ್ಕಾರದ ಸಾಧನೆಯ ಮಾಹಿತಿ ಇದೆ. ಸಮಕಾಲೀನವಾಗಿ ಕನ್ನಡ ಮತ್ತು ಇಂಗ್ಲಿಶ್ ಭಾಷೆಯ ಅನೇಕ ಪುಸ್ತಕ, ದೈನಂದಿನ, ವಾರ ಪತ್ರಿಕೆ, ಮಾಸಿಕ, ತ್ರೈ ಮಾಸಿಕಗಳಲ್ಲಿ ಭೂ ಸುಧಾರಣಾ ಕಾಯ್ದೆ ಮತ್ತು ಸರ್ಕಾರದ ಕಾರ್ಯನೀತಿ ಕುರಿತಂತೆ ಜಾಹೀರಾತುಗಳನ್ನು ಕಾಣಬಹುದು. ಇದರೊಡನೆ ಕರ್ನಾಟಕ ಭಾರತದಲ್ಲೆ ಅತ್ಯಂತ ಪ್ರಗತಿಪರ ರಾಜ್ಯವೆಂಬ ಪ್ರಚಾರ ಅಥವಾ ಜಾಹೀರಾತು ನೀಡುವುದನ್ನು ಪ್ರಶ್ನಿಸಿ ಶಾಸನ ಸಭೆಯಲ್ಲಿ ಸುಧೀರ್ಘ ಚರ್ಚೆಯನ್ನು ನೋಡಬಹುದು. ಜೊತೆಗೆ ೧೯೭೭ರ ಲೋಕಸಭೆ ಚುನಾವಣೆಯಲ್ಲಿ ಭೂ ಸುಧಾರಣಾ ಕಾಯ್ದೆಯ ಜಾರಿ ಪ್ರಮುಖ ಪಾತ್ರನಿರ್ವಹಿಸುವಲ್ಲಿ, ಸರ್ಕಾರದ ಪ್ರಚಾರತಂತ್ರದ ಪ್ರಭಾವವನ್ನು ಕಡೆಗಣಿಸುವಂತಿಲ್ಲ.

೧೬. ಇವರು ೧೯೭೬ ರಿಂದ ೧೯೮೦ರ ದಶಕದ ಪೂರ್ವಾರ್ಧದವರೆಗೆ ಭೂ ಸುಧಾರಣಾ ಕಾಯ್ದೆ ಅನುಷ್ಠಾನದ ಕಾರ್ಯಕಾರಿ

ವ್ಯವಸ್ಥೆಯ ನೌಕರಶಾಹಿ ವರ್ಗ ಪ್ರತಿನಿಧಿಸುತ್ತಾರೆಂಬುದು ಗಮನಾರ್ಹ.

೧೭. ಇವರು ಕರ್ನಾಟಕ ಸರ್ಕಾರ, ಖಾಸಗಿ ಪತ್ರಗಳ ಮೂಲಕ ಪಡೆದುಕೊಂಡಿರುವುದಾಗಿ ದಾಖಲಿಸಿದ್ದಾರೆ. ಪುಟ – ೧೨೨-೧೨೩. ಪುಸ್ತಕದಲ್ಲಿ ದಾಖಲಾಗಿರುವ ಅಂಕಿಅಂಶದ ಒಟ್ಟು ಮೊತ್ತದ ಕಾಲಂ ೮ ಮತ್ತು ೧೨ರಲ್ಲಿ ಕೂಡಿರುವುದು ವ್ಯತ್ಯಾಸವಿದ್ದು, ೮ ನೇ ಕಾಲಂನಲ್ಲಿ ೨೦ ಎಕರೆ ಮತ್ತು ೧೨ನೇ ಕಾಲಂನಲ್ಲಿ ೨೧೧೦ಎಕರೆ ವ್ಯತ್ಯಾಸವಿದೆ.

೧೮. ಟಿ.ಎಸ್.ರಂಗಣ್ಣರವರನ್ನು ೨೦೧೧ನೇ ಸೆಪ್ಟಂಬರ್ ೬ರಂದು ಟೆಲಿಫೋನ್ ಮೂಲಕ ಸಂದರ್ಶನ ಮಾಡಿ ಸಂಗ್ರಹಿಸಿದ ಸಾರ.

೧೯. ಈ ಶೀರ್ಷಿಕೆಗಳನ್ನು ಚುನಾವಣೆ ಎಂಬ ಸ್ಥಳೀಯ ಪತ್ರಿಕೆಗಳಿಂದ ಬಳಸಿಕೊಳ್ಳಲಾಗಿದೆ. ಈ ಪತ್ರಿಕೆ ಕುಮಟಾ ಸುತ್ತಮುತ್ತ, ಸಿದ್ದಾಪುರ, ಭಟ್ಕಳ ಮತ್ತಿತರ ಪ್ರದೇಶಗಳಲ್ಲಿ ಹೆಚ್ಚು ಪ್ರಸಾರವಾಗುತ್ತಿತ್ತು. ಇಲ್ಲಿ ಬಳಸಿರುವ ಶೀರ್ಷಿಕೆಗಳು ಪ್ರಕಟವಾದ ದಿನಾಂಕವನ್ನು ಕ್ರಮವಾಗಿ ನೀಡಲಾಗಿದೆ. ಅವುಗಳು ೧೯೭೬ ಜುಲೈ ೨೬, ೧೯೭೬ ಆಗಸ್ಟ್ ೨, ೧೯೭೬ ಸೆಪ್ಟೆಂಬರ್ ೨೭, ೧೯೭೭ ಜನವರಿ ೧೭, ೧೯೭೭ ಏಪ್ರಿಲ್ ೧೮ ಮತ್ತು ೧೯೭೭ ಮೇ ೨.

೨೦. ಭೂ ಸುಧಾರಣಾ ಕಾಯ್ದೆಗೆ ಬಂದಿರುವ ಈ ಪ್ರತಿಕ್ರಿಯೆ. ಜುಲೈ ೧೯೭೭ರಲ್ಲಿ ಡೆಕ್ಕನ್ ಹೆರಾಲ್ಡ್‌ನಲ್ಲಿ ಪ್ರಕಟವಾಗಿದೆ.

೨೧. ೧೯೬೦ರಲ್ಲಿ ನಾಗನಗೌಡರ ನೇತೃತ್ವದಲ್ಲಿ ಶೈಕ್ಷಣಿಕ ಮತ್ತು ಸಾಮಾಜಿಕವಾಗಿ ಹಿಂದುಳಿದ ವರ್ಗಗಳ ಸಮಿತಿಯನ್ನು ರಚಿಸಲಾಯಿತು. ಸಮಿತಿಯ ಪ್ರಕಾರ ೧೯೬೦ರಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡಗಳನ್ನು ಹೊರತುಪಡಿಸಿ ಸರ್ಕಾರಿ ಹುದ್ದೆಗಳಲ್ಲಿರುವ ಹಿಂದುಳಿದ ಜಾತಿಯವರು ಕಡಿಮೆ ಪ್ರಮಾಣದಲ್ಲಿದ್ದರು. ಅದರ ಸರಾಸರಿ ಪ್ರಮಾಣ ರಾಜ್ಯದ ಒಟ್ಟು ಜನಸಂಖ್ಯೆ ಶೇ.೫೭ರಷ್ಟಿತ್ತು. ೧೯೫೧ರಲ್ಲಿ ಜನಗಣತಿಯಲ್ಲಿ ಜಾತಿ ನಮೂದಿಸುವುದನ್ನು ನಿಷೇಧಿಸಿದ್ದರಿಂದ ಅದಕ್ಕೂ ಹಿಂದಿನ ಜನಗಣತಿ ಬಳಸಿಕೊಂಡು ಮಾಡಲಾಗಿತ್ತು. ಈ ಪಟ್ಟಿಯಲ್ಲಿ ಲಿಂಗಾಯಿತರನ್ನು ಸೇರಿಸಲಾಗಿರಲಿಲ್ಲ. ೧೯೬೨ರಲ್ಲಿ ರಾಜ್ಯ ಸರ್ಕಾರ ಸರಾಸರಿ ಶೇಕಡ ವಿದ್ಯಾರ್ಥಿಗಳ ಪಟ್ಟಿಯನ್ನು ಶೇಕಡ ೬೮ಕ್ಕೆ ಏರಿಸಿ, ಆ ಮೂಲಕ ಲಿಂಗಾಯಿತರನ್ನು ಹಿಂದುಳಿದ ವರ್ಗಗಳ ಪಟ್ಟಿಗೆ ಸೇರಿಸಿತು. ಮೀಸಲಾತಿ ಸೌಲಭ್ಯ ಪಡೆಯುವವರ ಒಟ್ಟು ಸಂಖ್ಯೆ ಶೇ.೬೮ಕ್ಕೆ ಏರಿತು.

೧೯೬೧ ಮತ್ತು ೧೯೬೨ರಲ್ಲಿ ವರದಿಯನ್ನು ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಲಾಯಿತು. ನ್ಯಾಯಾಲಯವು ಸರ್ಕಾರದ ಈ ಆಜ್ಞೆಯನ್ನು ಅಸಿಂಧುಗೊಳಿಸಿತು. ನ್ಯಾಯಾಲಯದ ತೀರ್ಮಾನದಲ್ಲಿ ಹಿಂದುಳಿದಿರುವಿಕೆಗೆ ಜಾತಿಯೂ ಒಂದು ಕಾರಣ ಎಂದು ಒಪ್ಪಿಕೊಂಡಿತಾದರೂ, ಜಾತಿಯನ್ನು ಮಾತ್ರ ಆಧಾರವಾಗಿಟ್ಟುಕೊಂಡು ಹಿಂದುಳಿದಿರುವುದನ್ನು ನಿರ್ಧರಿಸುವುದು ಸರಿಯಲ್ಲವೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿತು. ಇದನ್ನು ಭಾರತದ ಸರ್ವೋಚ್ಚ ನ್ಯಾಯಾಲಯದ ಶ್ರೇಷ್ಠ ತೀರ್ಪುಗಳಲ್ಲಿ ಒಂದೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಈ ಎಲ್ಲ ವಿಚಾರಗಳು ಹಿಂದುಳಿದ ವರ್ಗಗಳ ಜನರನ್ನು ಜಾಗೃತರನ್ನಾಗಿ ಮಾಡುವಲ್ಲಿ ಸಫಲವಾಯಿತು. ಆದರೆ ಆ ವೇಳೆಗೆ ರಾಜಕೀಯವಾಗಿ ಶಕ್ತಿಯಾಗಿ ಹೊರಹೊಮ್ಮಲು ಸಾಧ್ಯವಿಲ್ಲದಂತೆ ಹಿಂದುಳಿದ ವರ್ಗಗಳಲ್ಲಿನ ಜನ ನೂರಾರು ಜಾತಿಗಳಲ್ಲಿ ಹರಿದು ಹಂಚಿಹೋಗಿದ್ದರು ಎಂದು ಸದಾಶಿವ ಅವರು ವಿಮರ್ಶಿಸುತ್ತಾರೆ. ತದ ನಂತರದಲ್ಲಿ ಹಿಂದುಳಿದಿರುವ ಜಾತಿಗಳು ಸಂಘಟನೆ ಮಾಡಿಕೊಳ್ಳುವ ಪ್ರಯತ್ನವನ್ನು ಕಾಣಬಹುದು. ೧೯೭೦ರಲ್ಲಿ ಬೆಂಗಳೂರಿಗೆ ಬಂದಿದ್ದ ರಾಷ್ಟ್ರಪತಿಗಳನ್ನು ಹಿಂದುಳಿದ ವರ್ಗಗಳ ಸಮಿತಿಯನ್ನು ಆದಷ್ಟು ಬೇಗ ಸರ್ಕಾರ ನೇಮಿಸುವಂತೆ ಮನವಿ ಪತ್ರ ಸಲ್ಲಿಸಿರುವುದನ್ನು ನೋಡಬಹುದು. ನಂತರದ ಕೆಲವೆ ತಿಂಗಳಲ್ಲಿ ಹಿಂದುಳಿದ ವರ್ಗಗಳು ಮತ್ತು ಪರಿಶಿಷ್ಟ ವರ್ಗಗಳ ಜಂಟಿ ಸಮ್ಮೇಳನದಲ್ಲಿ ಸಮಿತಿ ರಚನೆಗೆ ಸರ್ಕಾರದ ಮೇಲೆ ಒತ್ತಡ ತರುವ ನಿರ್ಧಾರವನ್ನು ಕೈಗೊಂಡರು. ಇವೆಲ್ಲವೂ ಅರಸು ಅವರು ಅಧಿಕಾರಕ್ಕೆ ಬರುವ ಪೂರ್ವಭಾವಿಯಾಗಿ ರಾಜ್ಯ ರಾಜಕಾರಣದಲ್ಲಿ ಕಂಡುಬಂದ ಸಾಮಾಜಿಕ ಹೋರಾಟಗಳು ಎಂಬಂತೆ ನೋಡುವ ಅವಶ್ಯಕವಿದೆ.

೨೨. ಕರ್ನಾಟಕ ವಿಚಾರವಾದಿ ಒಕ್ಕೂಟ ಎಂಬುದು ಇದರ ಪೂರ್ತಿ ಹೆಸರು. ಇದರ ಸ್ಥಾಪಕ ಮತ್ತು ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಿದ್ದವರು ಮಲ್ಲೇಶ್.ಪಿ. ಇದು ಸಮಕಾಲೀನವಾಗಿ ಸಮಾಜವಾದಿಗಳ ಜನ ಜಾಗೃತಿ ನೆಲೆಯ ಕಾರ್ಯಕ್ರಮಗಳಲ್ಲೊಂದಾಗಿತ್ತು. ಇದರಲ್ಲಿ ಸಮಾಜವಾದಿಗಳಷ್ಟೇ ಅಲ್ಲದೆ ಎಡಪಂಥೀಯ ಧೋರಣೆಯ ಮನಸ್ಸುಳ್ಳವರು ಭಾಗವಹಿಸುತ್ತಿದ್ದರು. 'ಆ ಸಂಧರ್ಭದಲ್ಲಾದದ್ದು ನೆನಪಿರುವಂತಹದ್ದು ಈ ದಲಿತ ಸಂಘರ್ಷ ಸಮಿತಿ ಏನಿತ್ತು ಅವರನ್ನ ನಮ್ಮ ಕಡೆಗೆ ಸೇರಿಸಿಕೊಳ್ಳಲು ಅವಕಾಶವಾಯಿತೆಂದು' ವಿಚಾರವಾದಿ ಒಕ್ಕೂಟದ ಅಧ್ಯಕ್ಷರಾಗಿದ್ದ ಮಲ್ಲೇಶ್ ಅವರು ಅಭಿಪ್ರಾಯಪಡುವರು. ೨೦೧೨, ಮೇ ೩ ಸಂದರ್ಶನದ ಮೂಲಕ ಸಂಗ್ರಹಿಸಿದ್ದಾಗಿದೆ.

೨೩. ಜಾತಿ ವಿನಾಶ ಚಳವಳಿ ಕಾರ್ಯಚಟುವಟಿಕೆಗಳ ಕುರಿತ ಮೌಖಿಕ ಆಕರವಾಗಿದೆ. ೧೧ ಏಪ್ರಿಲ್ ೨೦೧೩ರಂದು ಶಿವರಾಮ್ ಕಾಡನಕುಪ್ಪೆ ಅವರೊಂದಿಗೆ ದೂರವಾಣಿ ಮುಖೇನ ಸಂಗ್ರಹಿಸಲಾಗಿದೆ. ಶಿವರಾಮ್ ಕಾಡನಕುಪ್ಪೆ ಅವರು ಸಮಕಾಲೀನ ಸಮಾಜವಾದಿ ಹೋರಾಟಗಳಲ್ಲಿ ಸಂಪರ್ಕ ಹೊಂದಿದ್ದ ಹೋರಾಟಗಾರರು.

೨೪. ೧೯೭೦ರ ದಶಕದಲ್ಲಿ ಜಾತಿ ವಿನಾಶ ಚಳವಳಿ ಮತ್ತು ದಲಿತ ಸಂಘರ್ಷ ಸಮಿತಿಗಳು ಅಂಬೇಡ್ಕರ್‌ನ್ನು ಕರ್ನಾಟಕಕ್ಕೆ ವಿಸ್ತೃತವಾಗಿ ಪರಿಚಯ ಮಾಡಿಕೊಟ್ಟವು. ಅಲ್ಲಿಯವರೆಗೆ ಅಂಬೇಡ್ಕರ್ ಅವರ ಪರಿಚಯ ಅತಿ ಕಡಿಮೆಯಿತ್ತು. ಜಾತಿ ವಿನಾಶ ಚಳವಳಿ ಮತ್ತು ಕೆಳ ಜಾತಿಗಳನ್ನು ಜಾಗೃತಿಗೊಳಿಸುವ ನೆಲೆಯಲ್ಲಿ ಈ ಸಂಬಂಧಿ ಪುಸ್ತಕಗಳನ್ನು ಓದುವ, ಕನ್ನಡಕ್ಕೆ ಅನುವಾದ ಮಾಡುವ ಮೂಲಕ ಹೆಚ್ಚು ವಿಶಾಲವಾಗಿ ಪ್ರಸಿದ್ಧರನ್ನಾಗಿ ಮಾಡಲಾಯಿತು ಎಂಬುದು ಶಿವರಾಮ್ ಕಾಡನಕುಪ್ಪೆ ಅವರಿಂದ ತಿಳಿದುಬಂದ ವಿಚಾರ. ಮೌಖಿಕ ಆಕರ ೧೧ ಏಪ್ರಿಲ್ ೨೦೧೩ರಂದು ದೂರವಾಣಿ ಮುಖೇನ ಸಂಗ್ರಹಿಸಲಾಯಿತು.

೨೫. ಕಲಾವಿದರು ಮತ್ತು ಸಾಹಿತಿಗಳ ಒಕ್ಕೂಟವು ಪುರೋಹಿತಶಾಹಿ ವಿರೋಧಿ ಹಿನ್ನೆಲೆಯಲ್ಲಿ ಹಿಂದುಳಿದ ಮತ್ತು ದಲಿತ ವರ್ಗದವರಿಗೆ ಪೂರಕವಾಗಲೆಂದು ನಿರ್ಮಿತವಾದ ಸಂಘಟನೆಯಾಗಿದೆ. ಸಮಕಾಲೀನವಾಗಿ ಹಲವು ವಿವಾದಸ್ಪದ ವಿಚಾರಗಳಿಗೆ ಕಾರಣವಾಯಿತು. ಅಲ್ಲಿಯವರೆಗೆ ಬ್ರಾಹ್ಮಣ ಮತ್ತು ಬ್ರಾಹ್ಮಣೇತರರೆಂದು ಕರ್ನಾಟಕದ ಬೌದ್ಧಿಕ ವರ್ಗದೊಳಗಿನ ಮುಸುಕಿನ ವಿಭಜನೆಯನ್ನು ಬಹಿರಂಗವಾಗಿ ಸೀಳಿತು. ಮುಂದೆ ಕುವೆಂಪುರವರ ಅಧ್ಯಕ್ಷತೆಯಲ್ಲಿ ಒಕ್ಕೂಟ ಸಮ್ಮೇಳನವನ್ನು ನಡೆಸಿತು. ಈ ಕಾರ್ಯಕ್ರಮಕ್ಕೆ ಕಿಶನ್ ಪಟ್ನಾಯಕ್ ಅವರು ಬಂದಿದ್ದು, ಕರ್ನಾಟಕದ ಆಚೆಗೂ ಗಮನಸೆಳೆಯುವಲ್ಲಿ ಯಶಸ್ವಿಯಾಯಿತು.

೨೬. ೧೯೭೨ರಲ್ಲಿ ನೇಮಕವಾದ ಹಿಂದುಳಿದ ವರ್ಗಗಳ ಸಮಿತಿಗೆ ಎಲ್.ಜಿ.ಹಾವನೂರು ಅವರನ್ನು ಅಧ್ಯಕ್ಷರನ್ನಾಗಿ ನೇಮಿಸಲಾಯಿತು. ಈ ಸಮಿತಿಯಲ್ಲಿದ್ದ ಇತರ ಆರು ಜನ ಸದಸ್ಯರುಗಳೆಂದರೆ, ವೈ.ರಾಮಚಂದ್ರ, ಕೆ.ಆರ್.ಶ್ರೀನಿವಾಸಲು ನಾಯ್ಡು, ಕೆ.ಎಂ.ನಾಗಣ್ಣ, ಎಂ.ಮಸಣ ಶೆಟ್ಟಿ, ಎನ್.ಧರ್ಮಸಿಂಗ್ ಮತ್ತು ಪಿ.ಟಿ.ಹಜೀಬ್. ಈ ಸಮಿತಿ ನೀಡಿದ ವರದಿಯು ನಾಲ್ಕು ಸಂಪುಟಗಳ ಬೃಹತ್ ಪ್ರಮಾಣದ ವರದಿಯಾಗಿದೆ.

೨೭. ಈ ವರದಿಯು ೪೨೫ ಪರಿಶೀಲಕರಿಂದ ಪರಿಶೀಲಿಸಲ್ಪಟ್ಟಿತ್ತು. ೩,೫೫,೦೦೦ ವ್ಯಕ್ತಿಗಳಿಂದ ಅಂಕಿ ಅಂಶವನ್ನು ಸಂಗ್ರಹಿಸಲಾಗಿತ್ತು. ಸುಮಾರು ೩,೨೫ ಸಾಕ್ಷಿದಾರರು ವರದಿ ಕುರಿತಂತೆ ಅಭಿಪ್ರಾಯವನ್ನು ಮಂಡಿಸಿದ್ದಾರೆ.

೨೮. ಹಾವನೂರು ವರದಿ ಸಿದ್ಧಪಡಿಸುವ ಕಾಲದ ಅನುಭವದ ದಾಖಲೆ. ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿ ಬಂದ ಗೋವಿಂದಭಟ್ಟರು ಹಿಂದುಳಿದ ವರ್ಗಗಳ ಆಯೋಗದೊಂದಿಗೆ ಸಹಕರಿಸಲಿಲ್ಲ. ಇವರು ಜಾತಿವಾದಿಯೆಂದು ನೋವಿನಿಂದ ದಾಖಲಿಸುತ್ತಿದ್ದೇನೆ ಎಂದು ಎಲ್.ಜಿ.ಹಾವನೂರು ಅವರು ವರದಿಯಲ್ಲಿ ಅನುಭವವನ್ನು ದಾಖಲಿಸಿದ್ದರು. ತರುವಾಯದಲ್ಲಿ ಅದನ್ನು ಸರ್ಕಾರ ತೆಗೆದುಹಾಕಿತು. ಜಾಗೀರ್ದಾರ್ ಅವರ 'ಅರಸು ಆಡಳಿತರಂಗ' ಎಂಬ ಅಂಕಣದಲ್ಲಿದೆ. ೧೯೭೫ರ ಫೆಬ್ರವರಿಯಲ್ಲಿ ಸುಧಾ ವಾರಪತ್ರಿಕೆಯಲ್ಲಿ ಪ್ರಕಟವಾಗಿದೆ. ಅಂಕಣದಲ್ಲಿ ನ್ಯಾಯಾಧೀಶ ಗೋವಿಂದಭಟ್ಟ ಅವರ ಚಿತ್ರ ಮತ್ತು ಹಾವನೂರು ವರದಿಯಿಂದ ತೆಗೆದುಹಾಕಿರುವ ಭಾಗವನ್ನು ನೀಡಲಾಗಿದೆ.



The Commission is thankful to the former Chief Justice [illegible] Narayan Pai who furnished the employment particulars relating to the Subordinate judiciary and permitted the Chairman to make use of the High Court library. With much reluctance the Commission is constrained to record here the arrogant attitude of Chief Justice G. K. Govinda Bhat of the High Court, who, inspite of repeated requests, refused to furnish employment particulars pertaining to the High Court Establishment. The Commission regrets to observe that Chief Justice G. K. Govinda Bhat is against the interests of SCs, STs and OBCs. He creates false evidence and deliberately misinterprets the official correspondence.

ಚಿತ್ರ ಸಂಖ್ಯೆ: ೨.೨೦.

೨೯. ೧೯೭೯ರ ಹೊತ್ತಿಗೆ ಹಿಂದುಳಿದ ವರ್ಗಗಳ ದಿನಾಚರಣೆ ಎಂದು ಆಚರಿಸುತ್ತಿರುವುದು ಗಮನಾರ್ಹವಾಗಿದೆ. ನವ ಸಮಾಜ ನಿರ್ಮಾಣ ಸಮಿತಿಯು ಈ ಕಾರ್ಯಕ್ರಮವನ್ನು ಆಯೋಜಿಸಿದ್ದು, ಬಿ.ಪಿ.ಮಂಡಲ್ ಅಧ್ಯಕ್ಷತೆಯನ್ನು ವಹಿಸಿದ್ದರು. ಈ ಹೊತ್ತಿಗೆ ಅರಸು ಕಾಂಗ್ರೆಸ್‌ನಿಂದ(ಐ) ಹೊರಗೆ ಬಂದಿದ್ದರು. ಹಾಗೆ ಬಿ.ಪಿ.ಮಂಡಲ್ ಜನತಾ ಪಕ್ಷ ನೇಮಿಸಿದ ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷ ಎಂಬುದು ಗಮನಾರ್ಹ.

೩೦. ಅರಸು ರಾಜಕಾರಣ ಕುರಿತಂತೆ ಹಲವಾರು ಕೃತಿಗಳು ರಚಿತವಾಗಿವೆ. ಈ ಸಾಲಿನಲ್ಲಿ 'ಸಮಾನತೆಯ ಸರದಾರ ಅರಸು ಹಿಂದುಳಿದವರ ನೇತಾರ' ಎಂಬ ಪುಸ್ತಕ ವಿಭಿನ್ನ ಶೈಲಿಯಲ್ಲಿದೆ. ಇಲ್ಲಿ ಅರಸು ಅವರ ರಾಜಕಾರಣದ ಪ್ರಮುಖ ವಿಚಾರಗಳನ್ನು ಚುಟುಕಗಳ ರೂಪದಲ್ಲಿ ಬರೆದಿದ್ದಾರೆ. ಹಾವನೂರು ವರದಿ ಕುರಿತಂತೆ ೮ ಚುಟುಕಗಳಿವೆ. ಅವುಗಳಲ್ಲಿ ಕೆಲವನ್ನು ಕೆಳಗೆ ನೀಡಲಾಗಿದೆ.

ಲಿಂಗಯ್ಯ.ವೈ.ಎಸ್., ಸಮಾನತೆಯ ಸರದಾರ ಅರಸು ಹಿಂದುಳಿದವರ ನೇತಾರ. ಸಚಿತ್ರ ಪ್ರಕಾಶನ. ಬೆಂಗಳೂರು.

ಮುಖ್ಯಮಂತ್ರಿಯಾಗಿ ಅರಸು ಆಡಳಿತ ಸೂತ್ರ ಹಿಡಿದು
ಕರ್ನಾಟಕ ರಾಜಕೀಯದಲ್ಲಿ ಧ್ರುವತಾರೆಯಾಗಿ ಮೆರೆದು
೧೯೭೨-೧೯೭೯ರ ಅವಧಿಯು ಅರಸರ ದಶಕವಾಯಿತು
ಈ ಅವಧಿ ಹಿಂದುಳಿದ ವರ್ಗಗಳಿಗೊಂದು
ಸುವರ್ಣಾವಕಾಶವಾಯಿತು.(೪೦)
ಹಿಂದುಳಿದ ವರ್ಗಗಳ ಆಯೋಗ ರಚಿಸಿ
ಹಾವನೂರರ ವರದಿ ಜಾರಿ ಸಲುವಾಗಿ
ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೇ ಅನುಕೂಲವಾಗಿ
ಸರಕಾರಿ ನೌಕರಿಗಳಲ್ಲಿ ಮೀಸಲಾತಿ ದೊರೆಯಲಾಗಿ
ನಡೆಯುತ್ತಿದೆ ಕಛೇರಿ ಈಗ. ಹಿಂದುಳಿದ ವರ್ಗಗಳ
ನಿರ್ದೇಶನಾಲಯವಾಗಿ(೫೫)

ಸಮಾಜವಾದಿ ಸಮಾಜ ನಿರ್ಮಾಣಕ್ಕೆ ಧಮ್ಮುನಾದಿದಾಕಿ
ಸಾಮಾಜಿಕ ಆರ್ಥಿಕ ಸಮಾನತೆಗೆ ತಾಳೆಹಾಕಿ
ಸಮಾನತೆಯ ನ್ಯಾಯವನ್ನು ದೊರಕಿಸಲು ಶ್ರಮಿಸಿ
ಆಳಿದರು. ದೀನದಲಿತರ ಹಿಂದುಳಿದವರ ಮತ್ತು
ಅಲ್ಪಸಂಖ್ಯಾತರ ಅವಲೋಕಿಸಿ.(೪೨)
ಅರಸುರವರ ಮಾತಿನಲ್ಲೇ ಹೇಳುವುದಾದರೇ
'ಹಾವನೂರು ಆಯೋಗ'
ಮಾತು ಬಾರದವರಿಗೆ ಮಾತು ಬರಿಸುತ್ತಿದೆ. ಈಗ
ಅವರ ಬಾಯಿಮುಚ್ಚಿಸಲು ಸಾಧ್ಯ ಯಾರಿಂದ
ಈಗ. ನಾನು ತೃಪ್ತ ಈ ಒಂದು ಸಣ್ಣ ಕೆಲಸದಿಂದ(೬೬)

## ಅಧ್ಯಾಯ ೩

# ಪ್ರತಿಭಟನೆಯ ಸ್ವರೂಪಗಳು ಮತ್ತು ನೆಲೆಗಳು

೩.೧. ಸಂವಿಧಾನಾತ್ಮಕ ಪ್ರತಿಭಟನೆಗಳು: ಸ್ವರೂಪ ಮತ್ತು ಪ್ರಕ್ರಿಯೆಗಳು
೩.೧.೧. ವಿರೋಧ ಪಕ್ಷಗಳು: ಶಾಸನ ಸಭೆ ಮತ್ತು ಸಾರ್ವಜನಿಕ ಪ್ರತಿಭಟನೆಗಳು
೩.೧.೧.೧. ಶಾಸನ ಸಭೆಗಳು ಮತ್ತು ಪ್ರತಿಭಟನೆಯ ಸ್ವರೂಪ
೩.೧.೧.೧.೧. ಪ್ರಜಾಪ್ರಭುತ್ವದ ಗ್ರಹಿಕೆಗಳು
೩.೧.೧.೧.೨. ಆಡಳಿತಶಾಹಿ ಕಾರ್ಯನೀತಿ
೩.೧.೧.೧.೩. ವಿರೋಧ ಪಕ್ಷಗಳು ಮತ್ತು ಪ್ರತಿಭಟನೆ
೩.೧.೧.೧.೪. ಸಾರ್ವಜನಿಕ ಪ್ರತಿಭಟನೆಗಳು
೩.೧.೧.೨. ಸಮೂಹ ಮಾಧ್ಯಮಗಳು: ಸ್ವರೂಪ ಮತ್ತು ಪ್ರತಿಕ್ರಿಯೆಗಳು
೩.೧.೧.೨.೧. ಸರ್ಕಾರ ಮತ್ತು ಸೆನ್ಸಾರ್‌ಷಿಪ್
೩.೧.೧.೨.೧.೧. ಪತ್ರಿಕಾ ಮಾಧ್ಯಮ
೩.೧.೧.೨.೧.೨. ಸಿನಿಮಾ ಮತ್ತು ವ್ಯಂಗ್ಯಚಿತ್ರಗಳು
೩.೧.೧.೨.೨. ಸಮಾಜ ಮತ್ತು ಪ್ರತಿಭಟನೆ
೩.೧.೧.೨.೨.೧. ಪತ್ರಿಕಾರಂಗದಲ್ಲಿ ಪ್ರತಿಭಟನೆ
೩.೧.೧.೨.೨.೨. ಸಾಹಿತ್ಯರಂಗದಲ್ಲಿ ಪ್ರತಿಭಟನೆ
೩.೧.೧.೨.೨.೨.೧. ವೈಯಕ್ತಿಕ ನೆಲೆಗಟ್ಟು
೩.೧.೧.೨.೨.೨.೨. ಸಂಘಟಿತ ನೆಲೆಗಟ್ಟು
೩.೧.೧.೨.೨.೩. ದೃಶ್ಯ ಮಾಧ್ಯಮಗಳಲ್ಲಿ ಪ್ರತಿಭಟನೆ
೩.೧.೧.೨.೨.೩.೧. ರಂಗಭೂಮಿ
೩.೧.೧.೨.೨.೩.೨. ಸಿನಿಮಾರಂಗ
೩.೧.೧.೨.೨.೩.೨.೧. ಸಿನಿಮಾ ಮತ್ತು ಸೆನ್ಸಾರ್‌ಷಿಪ್
೩.೧.೧.೨.೨.೩.೨.೨. ಸಿನಿಮಾ ಮತ್ತು ತುರ್ತುಪರಿಸ್ಥಿತಿ
೩.೧.೧.೨.೨.೩.೨.೩. ಜನಪ್ರಿಯ ಸಿನಿಮಾ ಮತ್ತು ಪ್ರತಿಭಟನೆ
೩.೧.೧.೨.೨.೩.೩. ವ್ಯಂಗ್ಯಚಿತ್ರ ಮತ್ತು ಜಾಹೀರಾತುಗಳು
೩.೨. ಭೂಗತ ಹೋರಾಟಗಳು: ಸ್ವರೂಪ ಮತ್ತು ಪ್ರತಿಕ್ರಿಯೆಗಳು
೩.೨.೧. ವಿರೋಧ ಪಕ್ಷಗಳು: ಎಡಪಂಥೀಯರು, ಸಮಾಜವಾದಿಗಳು, ಆರ್.ಎಸ್.ಎಸ್. ಮತ್ತಿತರರು
೩.೨.೧.೧. ನೇರ ಪ್ರತಿಭಟನೆಯ ಸ್ವರೂಪಗಳು ಮತ್ತು ಪ್ರಕ್ರಿಯೆಗಳು
೩.೨.೧.೧.೧. ಭೂಗತ ಹೋರಾಟಗಾರರು ಮತ್ತು ಸೈದ್ಧಾಂತಿಕ ನೆಲೆಗಳು
೩.೨.೧.೧.೧.೧. ಎಡಪಂಥೀಯರು
೩.೨.೧.೧.೧.೨. ಸಮಾಜವಾದಿಗಳು
೩.೨.೧.೧.೩. ಬಲಪಂಥೀಯರು ಮತ್ತು ಇತರರು

೩.೨.೧.೧.೨. ಭೂಗತ ಸಾಹಿತ್ಯ, ಪತ್ರಿಕೆ ಮತ್ತು ಕರಪತ್ರಗಳು
೩.೨.೧.೨. ಪರೋಕ್ಷ ಪ್ರತಿಭಟನೆಯ ಸ್ವರೂಪಗಳು ಮತ್ತು ಪ್ರತಿಕ್ರಿಯೆಗಳು
೩.೨.೨. ಭೂಗತ ಹೋರಾಟ: ಸರ್ಕಾರ ಮತ್ತು ಸಮಾಜ
೩.೨.೨.೧. ಭೂಗತ ಹೋರಾಟಗಾರರು ಮತ್ತು ಸರ್ಕಾರ
೩.೨.೨.೧.೧. ಭೂಗತ ಹೋರಾಟಗಾರರ ದೃಷ್ಟಿಯಲ್ಲಿ ಸರ್ಕಾರದ ಕ್ರಮಗಳು
೩.೨.೨.೧.೨. ಸರ್ಕಾರದ ದೃಷ್ಟಿಯಲ್ಲಿ ಭೂಗತ ಹೋರಾಟಗಾರರು
೩.೨.೨.೨. ಭೂಗತ ಹೋರಾಟಗಾರರು ಮತ್ತು ಸಮಾಜ

ಸಂವಿಧಾನದಲ್ಲಿರುವ ೩೫೨ನೇ ವಿಧಿಯ ಅಧಿನಿಯಮ ೧ರ ಶಕ್ತಿಯ ಬಳಕೆಯ ಮೂಲಕ ನಾನು, ಫಕ್ರುದ್ದೀನ್ ಅಲಿ ಅಹಮದ್, ಭಾರತದ ರಾಷ್ಟ್ರಪತಿ, ಆಲೋಚಿಸಿ ಸ್ಪಷ್ಟವಾಗಿ ಘೋಷಿಸುವುದೇನೆಂದರೆ, ಆಂತರಿಕ ದಂಗೆಗಳಿಂದಾಗಿ ಭಾರತದ ಆಂತರಿಕ ಭದ್ರತೆಗೆ ಅಪಾಯವಿರುವುದರಿಂದ ಗಂಭೀರವಾದ ತುರ್ತುಪರಿಸ್ಥಿತಿ ಅಸ್ತಿತ್ವದಲ್ಲಿದೆ(ಅಹಮ್ಮದ್ ೧೯೭೫: ೭).

ದೇಶದಲ್ಲಿ ಗಂಡಾಂತರ ಸ್ಥಿತಿ; ರಾಷ್ಟ್ರಪತಿಗಳ ಘೋಷಣೆ; ಆಂತರಿಕ ಭದ್ರತೆಗೆ ಮುಂಜಾಗ್ರತೆ; ಎಲ್ಲೆಡೆ ಶಾಂತ ವಾತಾವರಣ; ೬೭೬ ಜನರ ಬಂಧನ; ಕೆಲವೆಡೆ ಹರತಾಳ(ಬಜಾರ); ನಿಷ್ಠ ನಾಗರಿಕರಿಗೆ ಯಾವ ಭೀತಿ ಇಲ್ಲ – ಪ್ರಧಾನಿ ಇಂದಿರಾರ ವಿವರಣೆ(ಸಂಯುಕ್ತ ಕರ್ನಾಟಕ ೧೯೭೫ ಜೂನ್ ೨೭: ೧).

ಮೊದಲನೆಯದು, ರಾಷ್ಟ್ರಪತಿ ಅವರು ೧೯೭೫ ಜೂನ್ ೨೬ರಂದು ಆಂತರಿಕ ತುರ್ತುಪರಿಸ್ಥಿತಿ ಜಾರಿಗೊಳಿಸಿದ ಘೋಷಣೆ. ಎರಡನೆಯದು, ಅದರ ವರದಿಗಳು ಹಾಗೂ ಪ್ರತಿಕ್ರಿಯೆಯ[೧] ಸ್ವರೂಪಗಳಾಗಿವೆ. ೧೯೭೪ ರಿಂದಲೂ ಜೆ.ಪಿ. ಚಳವಳಿ, ರೈಲ್ವೆ ಮುಷ್ಕರ ಮುಂತಾದ ವಿಭಿನ್ನ ಸ್ವರೂಪಗಳಲ್ಲಿ ಆಡಳಿತಶಾಹಿಯ ವಿರುದ್ಧ ಪ್ರತಿಭಟನೆಗಳು ಪ್ರಾರಂಭವಾಗಿದ್ದವು. ಅಲಹಾಬಾದ್ ಉಚ್ಚ ನ್ಯಾಯಾಲಯದ ತೀರ್ಪು ಹಾಗೂ ಗುಜರಾತ್ ಚುನಾವಣಾ ಫಲಿತಾಂಶಗಳು ಆಂತರಿಕ ತುರ್ತುಪರಿಸ್ಥಿತಿ ಘೋಷಿಸಲು ತಕ್ಷಣದ ಕಾರಣವಾಗಿ ಪರಿಣಮಿಸಿದವು. ತುರ್ತುಪರಿಸ್ಥಿತಿ ಘೋಷಣೆಗೆ ಪತ್ರಿಕೆಗಳಲ್ಲಿ ಕಂಡುಬಂದ ಶೀರ್ಷಿಕೆ ಹಾಗೂ ವರದಿಗಳು ಹೀಗಿವೆ : "ಭಾರತದ ಭದ್ರತೆಗೆ ಆಂತರಿಕ ಗಲಭೆಗಳಿಂದ ತೊಂದರೆ"; "ಮುಂಜಾಗ್ರತ ಬಂಧನಗಳು: ಪತ್ರಿಕಾ ಸೆನ್ಸಾರ್‌ಷಿಪ್ ಜಾರಿಗೆ ತರಲಾಗಿದೆ";[೨] "ರಾಜ್ಯ ಸಂಪುಟದ ಸ್ವಾಗತ"(ಕನ್ನಡಪ್ರಭ ೧೯೭೫ ಜೂನ್ ೨೭: ೧). ಇದರಡಿಯಲ್ಲಿ 'ತುರ್ತುಪರಿಸ್ಥಿತಿ ಘೋಷಣೆಯಿಂದ ಉಂಟಾಗಿರುವ ಪರಿಸ್ಥಿತಿಯನ್ನು ಇಂದು ಕರ್ನಾಟಕ ರಾಜ್ಯದ ಸಚಿವ ಸಂಪುಟ ತನ್ನ ತುರ್ತುಸಭೆಯಲ್ಲಿ ಪರಿಶೀಲಿಸಿತು. ಸಭೆಯ ಕಲಾಪದ ಬಗ್ಗೆ ಪತ್ರಿಕೆಗಳಿಗೆ ವಿವರವೇನು ಸಿಗಲಿಲ್ಲ. ಸಕಾಲದಲ್ಲಿ ತುರ್ತುಪರಿಸ್ಥಿತಿ ಘೋಷಣೆಯಾಗಿದೆ ಎಂದು ಸಂಪುಟ ಸಭೆ ಮುಗಿಸಿ ಹೊರಬಂದ ಮುಖ್ಯಮಂತ್ರಿ ಶ್ರೀ ದೇವರಾಜ ಅರಸು ಪತ್ರಕರ್ತರಿಗೆ ತಿಳಿಸಿದರು' ಎಂಬ ವಿವರಣೆಯಿದೆ. ಈ ಸುದ್ದಿಗಳು ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರ ಕೈಗೊಂಡ ಕಾರ್ಯನೀತಿಗಳ ವಿವರಣೆಯ ಜೊತೆಗೆ ಪ್ರತಿಭಟನೆಗಳನ್ನು ಒಳಗೊಂಡಿತ್ತು. ತುರ್ತುಪರಿಸ್ಥಿತಿ ಜಾರಿಗೊಳಿಸಿರುವುದನ್ನು ವಿರೋಧಿಸಿ ರಾಜ್ಯದೆಲ್ಲೆಡೆ ದೊಡ್ಡ ಮತ್ತು ಸಣ್ಣ ಪ್ರಮಾಣದ ಪ್ರತಿಭಟನೆಗಳು ಬಹಿರಂಗವಾಗಿ ಹಾಗೂ ಪರೋಕ್ಷವಾಗಿ ಹಲವು ಸ್ವರೂಪಗಳಲ್ಲಿ ಪ್ರಕಟಗೊಂಡವು. ತುರ್ತುಪರಿಸ್ಥಿತಿ ಕೊನೆಗೊಳ್ಳುವರೆಗೂ ಪ್ರತಿಭಟನೆಗಳು ಅನೇಕ ರೂಪಗಳಲ್ಲಿ ಮರುಕಳಿಸುತ್ತಿದ್ದವು. ಈ ಪ್ರತಿಭಟನೆಗಳ ಸ್ವರೂಪ ಮತ್ತು ತೀವ್ರತೆ ರಾಜ್ಯದಿಂದ ರಾಜ್ಯಕ್ಕೆ ಒಂದೇ ತೆರನಾಗಿಲ್ಲದೆ ಬೇರೆ ಬೇರೆಯಾಗಿತ್ತು. ಪ್ರಾದೇಶಿಕ ರಾಜಕಾರಣ, ಆರ್ಥಿಕತೆ, ಸಾಮಾಜಿಕ ನೀತಿ ಮತ್ತು ಸಮಕಾಲೀನವಾಗಿದ್ದ ಇತರ ಹೋರಾಟಗಳ ಸ್ವರೂಪದ ಮೇಲೆ ಈ ಭಿನ್ನತೆಯು ಆಧಾರಿತವಾಗಿತ್ತು. ಪ್ರಜಾಪ್ರಭುತ್ವ, ಸ್ವಾತಂತ್ರ್ಯ ಮತ್ತು ಸಮಾನತೆಯ ಗ್ರಹಿಕೆಗಳು ಸಹ ಪ್ರಭಾವ ಬೀರಿದ್ದವು.

ಭಾರತದ ಸಂವಿಧಾನದಲ್ಲಿ[೩] 'ಭಾರತ ಕೇವಲ ರಾಜಕೀಯವಾಗಿ ಮಾತ್ರವಲ್ಲದೇ ಸಾಮಾಜಿಕ ನೆಲೆಯಲ್ಲಿಯೂ ಪ್ರಜಾಪ್ರಭುತ್ವ ರಾಷ್ಟ್ರ. ಪ್ರಜಾಪ್ರಭುತ್ವ ಮಾದರಿಯ ಸರ್ಕಾರವನ್ನಷ್ಟೇ ಅಲ್ಲದೆ ಪ್ರಜಾಪ್ರಭುತ್ವ ಸಮಾಜದ ನಿರ್ಮಾಣಕ್ಕೆ ಅವಕಾಶ ಕಲ್ಪಿಸುವುದು ರಾಷ್ಟ್ರದ ಪ್ರಮುಖ ಉದ್ದೇಶ' ಎಂದಿದೆ. ತುರ್ತುಪರಿಸ್ಥಿತಿ ಪ್ರಜಾಪ್ರಭುತ್ವ ವ್ಯವಸ್ಥೆಗೆ ಮಾರಕವಾಗಿದ್ದು, ಪ್ರಜಾಪ್ರಭುತ್ವದ ಪುನರ್ ಸ್ಥಾಪನೆಗಾಗಿ ಪ್ರತಿಭಟನೆಗಳು ರೂಪುಗೊಂಡಿದ್ದವು. ತುರ್ತುಪರಿಸ್ಥಿತಿ ಜಾರಿಗೊಳಿಸುವ ಪೂರ್ವದಲ್ಲೇ ಸಮಕಾಲೀನ ರಾಜಕಾರಣ ಹಾಗೂ ಸರ್ಕಾರದ ಕಾರ್ಯನೀತಿಯಿಂದಾಗಿ ನಿರಂಕುಶ ಆಡಳಿತ ಬರುವ ಸಾಧ್ಯತೆಗಳಿವೆ ಎಂಬ ಭಯ ಸಮಾಜದ ಕೆಲ ವಲಯಗಳಲ್ಲಿತ್ತು. ತುರ್ತುಪರಿಸ್ಥಿತಿ ಘೋಷಣೆಯಿಂದ ನಿಜವಾಗುವಂತೆ ಭಾಸವಾಗತೊಡಗಿತ್ತು.

ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳಲ್ಲಿ ಪಾಲ್ಗೊಂಡಿದ್ದ ವರ್ಗ ಹೆಚ್ಚಾಗಿ ಮೇಲ್ ಮಧ್ಯಮವರ್ಗ, ಬುದ್ಧಿಜೀವಿಗಳು, ರಾಜಕಾರಣಿಗಳು ಮತ್ತು ರಾಜಕೀಯ ಸಂಘ ಸಂಸ್ಥೆಗಳೊಡನೆ ಸಂಪರ್ಕ ಇದ್ದಂತಹವರರಾಗಿದ್ದರು. ಇದಕ್ಕೆ ಹಿಂದುಳಿದ ವರ್ಗಗಳು, ದಲಿತರು ಮತ್ತು ಅಲ್ಪಸಂಖ್ಯಾತ ಸಮುದಾಯದ ಬಹುಸಂಖ್ಯಾತರು ನೇರವಾಗಿ ಪ್ರತಿಭಟಿಸಲಿಲ್ಲ. ಕರ್ನಾಟಕದಲ್ಲಿಯೂ ಈ ಪ್ರಕ್ರಿಯೆ ಕಂಡುಬಂದಿತು. 'ಕರ್ನಾಟಕ, ಕೇಂದ್ರ ಸರ್ಕಾರದ ಸುಭದ್ರ ನೆಲೆಗಳಲ್ಲೊಂದಾಗಿ ಗುರುತಿಸಿಕೊಂಡಿತ್ತು. ಹಾಗಾಗಿ ಲಾಲ್‌ಕೃಷ್ಣ ಅಡ್ವಾನಿ, ಮಧುದಂಡವತೆ ಮೊದಲಾದವರನ್ನು ಕರ್ನಾಟಕದ ಜೈಲಿನಲ್ಲಿಡಲಾಗಿತ್ತು. ರಾಜ್ಯದ ವಿರೋಧ ಪಕ್ಷದ ಶಾಸಕರಾದ ಎ.ಕೆ.ಸುಬ್ಬಯ್ಯ, ಹೆಚ್.ಡಿ.ದೇವೇಗೌಡ, ರಾಮಕೃಷ್ಣ ಹೆಗಡೆ ಮೊದಲಾದವರನ್ನು ಬಂಧಿಸಲಾಯಿತು. ಉಳಿದಂತೆ ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಿ ಹೆಚ್ಚು ಶಾಂತವಾಗಿತ್ತು' ಎಂಬ ವಿವರಣೆ ಸಾಮಾನ್ಯವಾಗಿ ನೋಡಬಹುದು. ಇವೆಲ್ಲವೂ ತುರ್ತುಪರಿಸ್ಥಿತಿಗೆ ಕರ್ನಾಟಕ ಭಿನ್ನವಾಗಿ ಪ್ರತಿಕ್ರಿಯಿಸಿದಂತೆ ಹೊರನೋಟಕ್ಕೆ ತೋರುವುದು. ಇದು ಸಮಕಾಲೀನ ಪ್ರಾದೇಶಿಕ ರಾಜಕಾರಣ ಮತ್ತು ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳೆರಡನ್ನು ಒಟ್ಟಾಗಿ ನೋಡಲು ಪ್ರೇರೇಪಿಸುವುದು. ಈ ದಿಸೆಯಲ್ಲಿ ರಾಜ್ಯದಲ್ಲಿ ಕಂಡುಬಂದ ಸಂವಿಧಾನಿಕ ಪ್ರತಿಭಟನೆಗಳು ಮತ್ತು ಭೂಗತ ಹೋರಾಟಗಳ ಸ್ವರೂಪ, ಅದರ ಪ್ರಕ್ರಿಯೆಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ. ಪ್ರತಿಭಟನೆಗಳಲ್ಲಿ ಭಿನ್ನ ಮಾರ್ಗಗಳನ್ನು ಬಳಸಬೇಕಾದ ಅಗತ್ಯ, ಅನಿವಾರ್ಯತೆಯ ಹಿಂದಿನ ಒತ್ತಡವನ್ನು ಪರಾಮರ್ಶಿಸಲು ಪ್ರಯತ್ನ ಮಾಡಿದೆ. ಪ್ರತಿಭಟನಾ ಮಾರ್ಗದ ಸ್ವರೂಪಗಳ ಮೂಲಕ ಸರ್ಕಾರ ಮತ್ತು ಪ್ರತಿಭಟನಾಕಾರರ ನಡುವಿನ ಸಂಬಂಧದ ನೆಲೆಗಳು, ಪ್ರತಿಭಟನೆಯ ವಿವಿಧ ಆಯಾಮಗಳನ್ನು ಗುರುತಿಸಲು ಯತ್ನಿಸಿದೆ. ಇವುಗಳಿಂದಾಗಿ ರಾಜಕಾರಣ ಮತ್ತು ಸಮಾಜದಲ್ಲಿ ಉಂಟಾದ ಬದಲಾವಣೆ, ಅದರ ಪ್ರಕ್ರಿಯೆಗಳನ್ನು ಚರ್ಚಿಸಲಾಗಿದೆ. ಸಮಾಜ ಮತ್ತು ರಾಜಕಾರಣದ ನಡುವಿನ ಸಂಬಂಧದ ಸ್ವರೂಪವನ್ನು ಗ್ರಹಿಸಲು ಇದು ಪೂರಕವಾಗಿದೆ. ಮೊದಲಿಗೆ ಸಂವಿಧಾನಾತ್ಮಕ ಪ್ರತಿಭಟನೆಯ ಸ್ವರೂಪ, ಅದರ ಪ್ರಕ್ರಿಯೆಗಳನ್ನು ಪರಾಮರ್ಶಿಸಲು ಪ್ರಯತ್ನ ಮಾಡಲಾಗಿದೆ.

## ಸಂವಿಧಾನಾತ್ಮಕ ಪ್ರತಿಭಟನೆಗಳು: ಸ್ವರೂಪ ಮತ್ತು ಪ್ರಕ್ರಿಯೆಗಳು

"ರಾಷ್ಟ್ರ ಕುರಿಮಂದೆ ಆಗಬಾರದು"(ಚುನಾವಣೆ ೧೯೭೬ ಮೇ ೧೦) ಸ್ಥಳೀಯ ಪತ್ರಿಕೆಯೊಂದರ ಸಂಚಿಕೆಯಲ್ಲಿ ತುರ್ತುಪರಿಸ್ಥಿತಿ ವಿರುದ್ಧ ನೇರ ಪ್ರತಿಭಟನೆಯ ರೂಪ ಕಂಡುಬಂದ ಬಗೆ. "ಸುಪೆಯಲ್ಲಿ ದೇವರಾಜ ಕೃಪಾಪೋಷಿತ ನಾಟಕ ಪಾಲಿಸಕ್ಕಿ – ಕದಂ ನಾಟಕ"(ಚುನಾವಣೆ ೧೯೭೭ ಜನವರಿ ೧೦) ರಾಜ್ಯ ಸರ್ಕಾರವನ್ನು ವ್ಯಂಗ್ಯವಾಗಿ ಟೀಕಿಸಿರುವುದು. ಈ ವರದಿಗಳು ರಾಷ್ಟ್ರ ರಾಜಕಾರಣ ಮತ್ತು ರಾಜ್ಯ ರಾಜಕಾರಣವನ್ನು ಬೇರೆ ಬೇರೆಯಾಗಿ ನೋಡುವ ಕ್ರಮವನ್ನು ಮುಂದಿಡುತ್ತಲೇ ಆಡಳಿತ ಪಕ್ಷದೊಳಗಿದ್ದ ಆಂತರಿಕ ಭಿನ್ನತೆಗಳನ್ನು ತೆರೆದಿಡುವುದು. ಇಲ್ಲಿ ಆಡಳಿತಶಾಹಿಯ ವಿರೋಧಿ ಪ್ರತಿಭಟನೆಯು ರಾಷ್ಟ್ರೀಯ ಮತ್ತು ಪ್ರಾದೇಶಿಕ ನೆಲೆಗಳಲ್ಲಿ ಏಕರೂಪವಾಗಿರದೇ ವಿಭಿನ್ನ ಸ್ವರೂಪಗಳಲ್ಲಿ ಹೊರಬಂದಿದೆ. ಸಾಹಿತ್ಯ ಹಾಗೂ ದೃಶ್ಯಮಾಧ್ಯಮಗಳಲ್ಲಿ ಪ್ರತಿಭಟನೆಯು ಅನೇಕ ರೂಪಗಳಲ್ಲಿ ಪ್ರಕಟಗೊಂಡಿರುವುದನ್ನು ಕಾಣಬಹುದು. ಈ ಸಂಬಂಧ ಸುಧಾ ವಾರಪತ್ರಿಕೆಯಲ್ಲಿ ಪ್ರಕಟವಾದ 'ತಪ್ಪು' ಎಂಬ ಚೌಪದಿಯು ಹೀಗಿದೆ:

ತಪ್ಪುಗೈದರೆ ಮಾಡಬೇಕು ಪ್ರತಿಭಟನೆ.
ಎಂದಿಗೂ ಮಾಡಬಾರದು ನಟನೆ.
ದೇವರೂ ತಪ್ಪು ಮಾಡಿದರೆ ಕಿವಿ ಹಿಂಡಿ
ಹರಿದು ಹಾಕಿರಿ ಅವನ ಶರ್ಟುಗಳ ಗುಂಡಿ(ದೇಸಾಯಿ ೧೯೭೭ ಫೆಬ್ರವರಿ ೧೩).

ಈ ಹೊತ್ತಿಗೆ ಲೋಕಸಭಾ ಚುನಾವಣೆಯ ಘೋಷಣೆ ಆಗಿದ್ದು, ಆಂತರಿಕ ತುರ್ತುಪರಿಸ್ಥಿತಿ ಕುರಿತ ಲೇಖನದ ಅಡಿಯಲ್ಲಿ ಪ್ರಕಟವಾದ ಚುಟುಕ. ಮುಂಬರುವ ಚುನಾವಣೆಯಲ್ಲಿ ಜನತೆ ಜನಪ್ರತಿನಿಧಿಗಳನ್ನು ಆರಿಸಲು ನೀಡಿರುವ ಕಿವಿಮಾತಾಗಿದ್ದು, ಪರೋಕ್ಷವಾಗಿ ತುರ್ತುಪರಿಸ್ಥಿತಿ ಜಾರಿಯನ್ನು ವಿರೋಧಿಸಿದೆ. ಇದರೊಡನೆ ರಾಜಶಾಹಿ ಮತ್ತು ಅಸ್ತಿತ್ವದಲ್ಲಿದ್ದ ಆಡಳಿತಶಾಹಿಯನ್ನು ವಿರೋಧಿಸುವ ಕಾಲ್ಪನಿಕ ಹಾಗೂ ಐತಿಹಾಸಿಕ ಕಥಾಹಂದರದ ಚಲನಚಿತ್ರಗಳು ಅಧಿಕವಾಗಿವೆ. ಇವು ಸಂವಿಧಾನಿಕವಾಗಿ ಕಂಡುಬಂದ ಪ್ರತಿಭಟನೆಯ ವಿವಿಧ ಸ್ವರೂಪಗಳು.

ಪ್ರತಿಭಟನೆಗಳು ಅಭಿವ್ಯಕ್ತಗೊಂಡ ಸ್ವರೂಪ ಮತ್ತು ಮಾರ್ಗಗಳು ಪ್ರತಿಭಟನಾಕಾರರ ಚಿಂತನೆಗಳಿಂದ ಪ್ರಭಾವಿತವಾಗಿವೆ. ಸಂವಿಧಾನಾತ್ಮಕ ಹೋರಾಟವು ಪ್ರತಿಭಟನೆಯ ಪ್ರಮುಖ ಮಾರ್ಗಗಳಲ್ಲೊಂದು. ಸಾರ್ವಜನಿಕವಾಗಿ ಸರ್ಕಾರದ ವಿರುದ್ಧ ನಡೆಸಿದ ಪ್ರತಿಭಟನೆಗಳನ್ನು ನೇರ ಮತ್ತು ಪರೋಕ್ಷ ಎಂದು ಎರಡು ಭಾಗಗಳಾಗಿ ವಿಂಗಡಿಸಲಾಗಿದೆ. ಶಾಸಕಾಂಗದಲ್ಲಿ ವಿರೋಧ ಪಕ್ಷಗಳು ಪ್ರತಿಭಟಿಸಿದ ರೀತಿ, ಅವುಗಳಿಗೆ ಸರ್ಕಾರದ ಪ್ರತಿಕ್ರಿಯೆ, ಆಡಳಿತ ಪಕ್ಷಗಳೊಳಗಿನ[೪] ಪ್ರತಿಭಟನೆ, ಭಿನ್ನಾಭಿಪ್ರಾಯಗಳು ವ್ಯಕ್ತವಾದ ಸ್ವರೂಪವನ್ನು ವಿಮರ್ಶಿಸಲು ಯತ್ನಿಸಲಾಗಿದೆ. ಸರ್ಕಾರದ ಸೆನ್ಸಾರ್‌ಷಿಪ್ ನೀತಿಗೆ ಸಮೂಹ ಮಾಧ್ಯಮಗಳಲ್ಲಿ ಕಂಡುಬಂದ ಪ್ರತಿಭಟನೆಯ ಸ್ವರೂಪ, ಆ ಕುರಿತ ಚರ್ಚೆಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

### ೩.೧.೧. ವಿರೋಧ ಪಕ್ಷಗಳು: ಶಾಸನ ಸಭೆ ಮತ್ತು ಸಾರ್ವಜನಿಕ ಪ್ರತಿಭಟನೆಗಳು

ವಿರೋಧ ಪಕ್ಷಗಳು ಪ್ರಜಾಪ್ರಭುತ್ವದ ಮಹತ್ವದ ಅಂಗ. ಆಂತರಿಕ ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಭಾರತದಾದ್ಯಂತ ವಿರೋಧ ಪಕ್ಷಗಳನ್ನು ಬಲಹೀನಗೊಳಿಸಲಾಗಿತ್ತು. ವಿರೋಧ ಪಕ್ಷದ ಅನೇಕ ನಾಯಕರನ್ನು ಜೈಲಿನಲ್ಲಿಡಲಾಗಿತ್ತು. ಆಡಳಿತ ಕಾಂಗ್ರೆಸ್ಸಿಗೆ ವಿರುದ್ಧವಾಗಿದ್ದ ರಾಜ್ಯ ಸರ್ಕಾರಗಳು ಅಥವಾ ತುರ್ತುಪರಿಸ್ಥಿತಿ ವಿರುದ್ಧ ಪ್ರತಿಭಟನೆಗಳು ಹೆಚ್ಚು ವ್ಯಕ್ತವಾಗುತ್ತಿದ್ದಂತಹ ರಾಜ್ಯಗಳಾದ ಗುಜರಾತ್, ತಮಿಳುನಾಡು ಮೊದಲಾದ ಕಡೆ ಶಾಸಕಾಂಗವನ್ನು ವಿಸರ್ಜಿಸಿ ಅಧ್ಯಕ್ಷೀಯ ಆಳ್ವಿಕೆ ಜಾರಿಗೊಳಿಸಿದ್ದನ್ನು ನೋಡಬಹುದು. ಇವೆಲ್ಲವೂ ರಾಷ್ಟ್ರದಾದ್ಯಂತ ಕಂಡುಬಂದ ವಿರೋಧ ಪಕ್ಷಗಳ ಸ್ಥಿತಿಗತಿ, ಸರ್ಕಾರದ ಕಾರ್ಯನೀತಿಯ ವಿರುದ್ಧ ಪ್ರಕಟಗೊಂಡ ಪ್ರತಿಕ್ರಿಯೆಗಳ ಒಂದು ಮುಖವಾಗಿದೆ. ಕರ್ನಾಟಕದಲ್ಲಿ ಆಡಳಿತರೂಢವಾಗಿದ್ದ ಕಾಂಗ್ರೆಸ್ ಸಿಪಿಐನೊಂದಿಗೆ ಮೈತ್ರಿ ಹೊಂದಿತ್ತು. ತುರ್ತುಪರಿಸ್ಥಿತಿ ವೇಳೆಯಲ್ಲಿ ಯಾವುದೇ ಬಗೆಯ ಪ್ರಬಲವಾದ ರಾಜಕೀಯ ವಿರೋಧಗಳು ಮೇಲು ನೋಟದಲ್ಲಿ ತೋರಿಬರಲ್ಲಿಲ್ಲ. ಕರ್ನಾಟಕದ ವಿರೋಧ ಪಕ್ಷಗಳ ಮುಖಂಡರುಗಳಾದ ರಾಮಕೃಷ್ಣ ಹೆಗಡೆ, ಹೆಚ್.ಡಿ.ದೇವೇಗೌಡ, ಎ.ಕೆ.ಸುಬ್ಬಯ್ಯ ಮೊದಲಾದವರು ತುರ್ತುಪರಿಸ್ಥಿತಿಯ ವಿರುದ್ಧ ಪ್ರತಿಭಟಿಸಿ ಜೈಲಿನಲ್ಲಿದ್ದರು. ತುರ್ತುಪರಿಸ್ಥಿತಿ ವಿರೋಧಿ ನೆಲೆಯಲ್ಲೇ ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೇಸೇತರ ಪಕ್ಷ ಆಡಳಿತ ಪಕ್ಷವಾಗಲು ಸಾಧ್ಯವಾಯಿತಾದರೂ ಕರ್ನಾಟಕದಲ್ಲಿ ಕಾಂಗ್ರೆಸ್ ಪಕ್ಷವೇ ಅತಿ ಹೆಚ್ಚು ಕ್ಷೇತ್ರಗಳಲ್ಲಿ ಆರಿಸಿಬಂದಿತು. ಅಲ್ಲದೇ ೧೯೭೭ ರಿಂದ ೧೯೮೦ರವರೆಗಿನ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷದ ಪ್ರತಿನಿಧಿಗಳೇ ಅಧಿಕ ಕ್ಷೇತ್ರಗಳಲ್ಲಿ ಆರಿಸಿ ಬಂದಿರುವುದು ಕುತೂಹಲವಾಗಿದೆ. ಪ್ರಜಾಪ್ರಭುತ್ವ ಮತ್ತು ರಾಜಕೀಯ ಪಕ್ಷಗಳ ಜನಪ್ರಿಯತೆ, ಅವುಗಳ ಕಾರ್ಯನೀತಿಯನ್ನು ಚುನಾವಣಾ ಫಲಿತಾಂಶಗಳ ಮೂಲಕ ಪರಿಶೀಲಿಸುವ ಸಂಪ್ರದಾಯ ಯಾವಾಗಲೂ ಕಂಡುಬರುವುದು. ಈ ಸಂಬಂಧ ಕರ್ನಾಟಕದ ಚುನಾವಣಾ ಫಲಿತಾಂಶಗಳು ಕುತೂಹಲಕಾರಿಯಾಗಿದ್ದು, ತುರ್ತುಪರಿಸ್ಥಿತಿ ಕಾಲದ ಆಡಳಿತ ಹಾಗೂ ಪ್ರತಿಭಟನೆಗಳ ಸ್ವರೂಪ ಮತ್ತು ಸಮಾಜದ ಪ್ರತಿಕ್ರಿಯೆಗಳನ್ನು ಆಳವಾಗಿ ಅಭ್ಯಸಿಸಲು ಪ್ರೇರೇಪಿಸುವುದು. ಸಮಾಜದಲ್ಲಿ ತುರ್ತುಪರಿಸ್ಥಿತಿಯ ವಿರೋಧಿ ಪ್ರತಿಭಟನೆಗಳು ಕಂಡುಬಂದರೂ ಸರ್ಕಾರದ ಆಯ್ಕೆಯಲ್ಲಿ ಸಮಾಜದ ಪ್ರತಿಕ್ರಿಯೆ ಬೇರೆಯಾಗಿರುವುದು, ಪ್ರತಿಭಟನೆ ಮತ್ತು ಸರ್ಕಾರ ಎರಡನ್ನೂ ಭಿನ್ನ ಭಿನ್ನ ನೆಲೆಗಳಲ್ಲಿ ನೋಡಿರುವಂತಿದ್ದೂ ಅನೇಕ ಪ್ರಶ್ನೆಗಳನ್ನು ಹುಟ್ಟಿಸುವುದು. ಈ ಸಂಬಂಧ ವಿರೋಧ ಪಕ್ಷಗಳ ಕುರಿತಂತೆ ಸರ್ಕಾರದ ನಿಲುವು, ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಕಾರ್ಯನೀತಿಗಳಲ್ಲಿನ ಸಮಾನತೆ ಮತ್ತು ಭಿನ್ನತೆಗಳನ್ನು ಸಮೀಕರಿಸಿ ನೋಡುವ ಮೂಲಕ ಈ ಮೇಲೆ ಚರ್ಚಿಸಿದ ಪ್ರತಿಕ್ರಿಯೆಗಳನ್ನು ಅರಿಯಲು ಪ್ರಯತ್ನಿಸಲಾಗಿದೆ. ವಿರೋಧ ಪಕ್ಷಗಳ ಕುರಿತ ಸರ್ಕಾರದ ಧೋರಣೆಯ ಮೂಲಕ ವಿರೋಧ ಪಕ್ಷಗಳ ಪ್ರತಿಭಟನೆಯ ಮುಖಗಳನ್ನು ಚರ್ಚಿಸಲು ಪ್ರಯತ್ನಿಸಿದೆ. ಈ ದಿಸೆಯಲ್ಲಿ ತುರ್ತುಪರಿಸ್ಥಿತಿ ಘೋಷಣೆಗೆ ವಿರೋಧ ಪಕ್ಷಗಳು ಪ್ರತಿಭಟಿಸಿದ ಸ್ವರೂಪ ಹಾಗೂ ಪ್ರಕ್ರಿಯೆಗಳನ್ನು ಎರಡು ಹಂತಗಳಾಗಿ ವಿಂಗಡಿಸಲಾಗಿದೆ. ಶಾಸನ ಸಭೆಗಳಲ್ಲಿ ವಿರೋಧ ಪಕ್ಷಗಳು ತುರ್ತುಪರಿಸ್ಥಿತಿ ಅಥವಾ ಆಡಳಿತ ನೀತಿಯ ವಿರುದ್ಧ ಪ್ರಶ್ನಿಸಿರುವ ಮತ್ತು ಟೀಕಿಸಿರುವುದನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ. ಸಾರ್ವಜನಿಕ ಪ್ರತಿಭಟನೆಗಳಲ್ಲಿ ವಿರೋಧ ಪಕ್ಷದ ಶಾಸಕರು, ನಾಯಕರು, ರಾಜಕೀಯ ಪಕ್ಷಗಳು ಮತ್ತು ಸಂಘಟನೆಗಳ ಸಾರ್ವಜನಿಕ ಪ್ರತಿಭಟನೆಗಳನ್ನು ವಿಮರ್ಶಿಸಲು ಪ್ರಯತ್ನಿಸಿದೆ. ವೈಯಕ್ತಿಕ ಪ್ರತಿರೋಧಗಳ

ಸ್ವರೂಪ ಮತ್ತು ಚಿಂತನೆಗಳನ್ನು ಇತರ ರಾಜ್ಯಗಳೊಡನೆ ಸಮೀಕರಿಸಿ ಅವಲೋಕಿಸುವ ಪ್ರಯತ್ನ ಮಾಡಲಾಗಿದೆ.

### ೩.೧.೧.೧. ಶಾಸನ ಸಭೆಗಳು ಮತ್ತು ಪ್ರತಿಭಟನೆಯ ಸ್ವರೂಪ

> ತುರ್ತುಪರಿಸ್ಥಿತಿ ಅಡಿಯಲ್ಲಿ ವಿರೋಧ ಪಕ್ಷಗಳು ಮಂದವಾಗಿವೆ. ಆದರೆ, ನಾನು ಎಚ್ಚರಿಸುತ್ತೇನೆ, ಇದು ಇನ್ನೂ ಸಂಪೂರ್ಣವಾಗಿ ಮಾಯವಾಗಿಲ್ಲ(ಗಾಂಧಿ ೧೯೭೬ ಜೂನ್ ೨೫).

ಆಂತರಿಕ ತುರ್ತುಪರಿಸ್ಥಿತಿ ಜಾರಿಯಾದ ವರ್ಷದ ನಂತರ ಇಂದಿರಾ ಗಾಂಧಿಯವರ ಪತ್ರಿಕಾ ಹೇಳಿಕೆ. ರಾಜಕಾರಣ ಮತ್ತು ವಿರೋಧ ಪಕ್ಷಗಳ ಪ್ರತಿಭಟನೆಯ ಸ್ವರೂಪ, ಅದಕ್ಕೆ ಸರ್ಕಾರದ ನಿಲುವನ್ನು ಸೂಚಿಸುವುದು. ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಿ ಸಂವಿಧಾನದಲ್ಲಿ ಉಂಟಾದ ತಿದ್ದುಪಡಿಗಳು ಭಾರತದ ಪ್ರಜಾಪ್ರಭುತ್ವ ವ್ಯವಸ್ಥೆಯ ಸ್ವರೂಪವನ್ನು ಗಮನಾರ್ಹವಾಗಿ ಬದಲಾಯಿಸಿದವು. ಅಲ್ಲಿಯವರೆಗೆ ಯಾವುದೆ ಸಂವಿಧಾನಿಕ ತಿದ್ದುಪಡಿ ತರಬೇಕಾದರೆ ಧೀರ್ಘವಾದ ಚರ್ಚೆಗಳು ಭಾರತದ ಶಾಸನ ಸಭೆಗಳಲ್ಲಿ ಸಾಮಾನ್ಯವಾಗಿ ಕಂಡುಬರುವುವು. ಈ ತಿದ್ದುಪಡಿಗಳು[೫] ಶಾಸನ ಸಭೆಯಲ್ಲಿ ಅತ್ಯಂತ ಕಡಿಮೆ ಅವಧಿ ಚರ್ಚೆಗೆ ಒಳಗಾದಂತಹವುಗಳು. ತುರ್ತುಪರಿಸ್ಥಿತಿ ಜಾರಿಯಲ್ಲಿದ್ದ ೧೯ ತಿಂಗಳುಗಳಲ್ಲಿ ಐದು ಪ್ರಮುಖ ಸಂವಿಧಾನಿಕ ತಿದ್ದುಪಡಿಗಳಾಗಿವೆ. ಇವುಗಳನ್ನು ಗಮನಿಸಿದ ನಂತರ ಶಾಸನಗಳಲ್ಲಿ ವಿರೋಧ ಪಕ್ಷಗಳ ಪ್ರತಿಭಟನೆಯ ಅವಲೋಕನ ಪ್ರತಿಭಟನೆಯ ಸ್ವರೂಪ ಅರಿಯಲು ಸಹಾಯಕವಾಗಿದೆ.

**೧೯೭೫ ರಿಂದ ೧೯೭೭ರವರೆಗಿನ ಸಂವಿಧಾನದ ತಿದ್ದುಪಡಿಗಳು. ಪಟ್ಟಿ ಸಂಖ್ಯೆ: ೧೨.**

| ಸಂವಿಧಾನ ತಿದ್ದುಪಡಿ | ತಿದ್ದುಪಡಿಯನ್ನು ಸದನದಲ್ಲಿ ಮಂಡಿಸಿದ ದಿನಾಂಕ | ಚರ್ಚೆಗಾಗಿ ಪಡೆದದ್ದು | | ರಾಷ್ಟ್ರಪತಿಯ ಒಪ್ಪಿಗೆ ದೊರೆತ ಸಂದರ್ಭ |
|---|---|---|---|---|
| ೩೮ | ೧೯೭೫ ಜುಲೈ ೨೨ | ೧೯೭೫ ಜುಲೈ ೨೩ | ೧೯೭೫ ಜುಲೈ ೨೪ | ೧೯೭೫ ಆಗಸ್ಟ್ ೧ |
| ೩೯ | ೧೯೭೫ ಆಗಸ್ಟ್ ೭ | ೧೯೭೫ ಆಗಸ್ಟ್ ೭ | ೧೯೭೫ ಆಗಸ್ಟ್ ೮ | ೧೯೭೫ ಆಗಸ್ಟ್ ೧೦ |
| ೪೦ | ೧೯೭೬ ಮೇ ೨೧ | ೧೯೭೬ ಮೇ ೨೫ | ೧೯೭೬ ಮೇ ೨೬ | ೧೯೭೬ ಮೇ ೨೭ |
| ೪೧ | ೧೯೭೬ ಆಗಸ್ಟ್ ೨೬ | ೧೯೭೬ ಆಗಸ್ಟ್ ೩೦ | ೧೯೭೬ ಸೆಪ್ಟೆಂಬರ್ ೧ | ೧೯೭೬ ಸೆಪ್ಟೆಂಬರ್ ೭ |
| ೪೨ | ೧೯೭೬ ಸೆಪ್ಟೆಂಬರ್ ೧ | ೧೯೭೬ ಅಕ್ಟೋಬರ್ ೨೫ ರಿಂದ ನವೆಂಬರ್ ೨ | ೧೯೭೬ ನವೆಂಬರ್ ೪ ರಿಂದ ೧೧ | ೧೯೭೬ ಡಿಸೆಂಬರ್ ೧೮ |

ಆಕರ: ಎರ ಸೇಜಿಯನ್(ಸಂ)., ೨೦೧೦, **ಶಾ ಕಮಿಷನ್ ರಿಪೋರ್ಟ್ ಲಾಸ್ಟ್ ಅಂಡ್ ರಿಗೇನ್ಡ್**, ಆಜಿ ಪಬ್ಲಿಷರ್ಸ್, ಚೆನ್ನೈ, ಪುಟ - ೬೦೬

ಈ ಮೇಲಿನ ಪಟ್ಟಿಯಲ್ಲಿ ಆರಂಭದ ಎರಡು ತಿದ್ದುಪಡಿಗಳು ಎರಡು ದಿನ, ನಂತರದ ಎರಡು ತಿದ್ದುಪಡಿಗಳು ಮೂರು ದಿನ ಹಾಗೂ ಕಡೆಯ ತಿದ್ದುಪಡಿ ೧೬ ದಿನಗಳ ಕಾಲ ಸದನದಲ್ಲಿ ಚರ್ಚೆಗೊಳಗಾಗಿ ಅನುಮೋದನೆ ಪಡೆದಿರುವುದನ್ನು ನೋಡಬಹುದು. ಮೊದಲಿನ ಎರಡು ತಿದ್ದುಪಡಿಗಳು ತುರ್ತುಪರಿಸ್ಥಿತಿ ಜಾರಿಯಾದ ಎರಡು ತಿಂಗಳಿನ ಒಳಗೆ ನಡೆದಿದ್ದು, ತುರ್ತುಪರಿಸ್ಥಿತಿ ಜಾರಿಯನ್ನು ಕಾನೂನುಬದ್ಧಗೊಳಿಸಲು ನೆರವಾಯಿತು. ಉಳಿದ ಮೂರು ತಿದ್ದುಪಡಿಗಳು ೧೯೭೬ರ ಮೇ ತಿಂಗಳ ನಂತರ ನಡೆದಿರುವುದು. ಇವು ಸಂವಿಧಾನದ ಸ್ವರೂಪದಲ್ಲಿ ಮೂಲಭೂತ ಬದಲಾವಣೆಗಳನ್ನು ಉಂಟುಮಾಡಿದವು. ಪ್ರಜಾಪ್ರಭುತ್ವದ ನೆಲೆಯಲ್ಲಿ ಈ ಕುರಿತ ಚರ್ಚೆಗಳು ತುರ್ತುಪರಿಸ್ಥಿತಿ ನಂತರವೂ ಮುಂದುವರೆದಿರುವುದು, ಆ ಸಂದರ್ಭದ ರಾಜಕಾರಣದ ಮೇಲೆ ಉಂಟುಮಾಡಿರುವ ಅಪಾರವಾದ ಪ್ರಭಾವವನ್ನು ಸೂಚಿಸುವುದು.

### ೩.೧.೧.೧.೧. ಪ್ರಜಾಪ್ರಭುತ್ವದ ಗ್ರಹಿಕೆಗಳು

ತುರ್ತುಪರಿಸ್ಥಿತಿ ಕಾಲಘಟ್ಟದ ವಿರೋಧ ಪಕ್ಷಗಳ ಪ್ರತಿಭಟನಾ ಸ್ವರೂಪ, ಅದರ ಪ್ರಕ್ರಿಯೆಗಳನ್ನು ಕುರಿತ ಸರ್ಕಾರದ ಧೋರಣೆಯನ್ನು ಚರ್ಚಿಸಲು ಇರುವ ಪ್ರಮುಖ ಆಕರಗಳೆಂದರೆ, *ವೈ ಎಮರ್ಜೆನ್ಸಿ?(೧೯೭೫)* ಮತ್ತು *ಟೈಮ್‌ಲಿ ಸ್ಟೆಪ್ಸ್(೧೯೭೫)* ಎಂಬ ಕಿರುಪುಸ್ತಕಗಳು. ತುರ್ತುಪರಿಸ್ಥಿತಿ ಜಾರಿಗೊಳಿಸುವ ಅಗತ್ಯದ ನೆಲೆಗಳನ್ನು *ವೈ ಎಮರ್ಜೆನ್ಸಿಯಲ್ಲಿ(೧೯೭೫)* ಸರ್ಕಾರ ವಿವರಿಸುತ್ತ ಸಮರ್ಥಿಸಿಕೊಂಡಿದ್ದು, ಅದನ್ನು ಬೆಂಬಲಿಸಿರುವಂತಹ ಪತಿಕ್ರಿಯೆಗಳನ್ನು ನೀಡಲಾಗಿದೆ. *ಟೈಮ್‌ಲಿ ಸ್ಟೆಪ್ಸ್‌ನಲ್ಲಿ(೧೯೭೫)* ಸಮಾಜೋ-ಆರ್ಥಿಕ[೬] ಹಿನ್ನೆಲೆಯ ಕಾರ್ಯಕ್ರಮಗಳಿಗೆ ದೇಶ, ವಿದೇಶಗಳ[೭] ಅಭಿಪ್ರಾಯದ ಜೊತೆಗೆ ಸರ್ಕಾರ ತೆಗೆದುಕೊಂಡ ಕ್ರಮಗಳನ್ನು ಸ್ಪಷ್ಟಪಡಿಸುವ ಉದ್ದೇಶ ಸ್ಪಷ್ಟವಾಗಿ ಕಾಣುವುದು. ವಿದೇಶಗಳ ಅಭಿಮತಗಳು ಸರ್ಕಾರದ ಕಾರ್ಯನೀತಿಯನ್ನು ಬೆಂಬಲಿಸುತ್ತಿರುವುದು ಕಂಡುಬರುವುದು. ಇಲ್ಲಿ ಪ್ರತಿಕ್ರಿಯಿಸಿರುವ ಅನೇಕ ರಾಜ್ಯಗಳ

ಮುಖ್ಯಮಂತ್ರಿಗಳು, ಹಿರಿಯ ರಾಷ್ಟ್ರೀಯ ನಾಯಕರು, ಪಕ್ಷ ಮತ್ತು ಸಂಘಟನೆಗಳು ಪೂರಕವಾಗಿ ಹೇಳಿಕೆಗಳನ್ನು ಕೊಟ್ಟಿದ್ದಾರೆ. ವಿದೇಶಿ ಅಭಿಮತವು ಕೇಂದ್ರ ಸರ್ಕಾರದ ಕಾರ್ಯನೀತಿಯನ್ನೇ ಎತ್ತಿ ಹಿಡಿಯುತ್ತಾ ಬೆಂಬಲಿಸಿದೆ. ಸರ್ಕಾರದ ನೀತಿಯನ್ನು ಬೆಂಬಲಿಸಿರುವ ರಾಷ್ಟ್ರಗಳು ಬಹುಪಾಲು ಅಭಿವೃದ್ಧಿ ಹೊಂದುತ್ತಿರುವ ಅಥವಾ ಹೊಂದದ ಹಾಗೂ ವಸಾಹತುಶಾಹಿ ಆಳ್ವಿಕೆಗೊಳಪಟ್ಟ, ಸಾಕಷ್ಟು ಏಕರೂಪ ಸಮಸ್ಯೆಗಳನ್ನು ಎದುರಿಸುತ್ತಿದ್ದ ರಾಷ್ಟ್ರಗಳು. ಆದರೆ ಅಂತರ್ ರಾಷ್ಟ್ರೀಯ ಶಕ್ತಿವಲಯದಲ್ಲಿ ಪ್ರಮುಖ ಪಾತ್ರ ನಿರ್ವಹಿಸುತ್ತಿದ್ದ ದೇಶಗಳ ಅಭಿಮತಗಳು ಇಲ್ಲಿ ದಾಖಲಾಗಿಲ್ಲ. ಈ ಅಭಿಮತಗಳ ಹಿಂದೆ ಆರ್ಥಿಕತೆ ಮತ್ತು ಅಧಿಕಾರದ ಕೇಂದ್ರೀಕರಣ ನಿರ್ಣಾಯಕ ಪಾತ್ರ ನಿರ್ವಹಿಸಿರುವಂತಿದೆ. 'ಆರ್ಥಿಕ ಬೆಳವಣಿಗೆ ಕುಂಠಿತವಾಗಲು ವಿರೋಧ ಪಕ್ಷಗಳು ಪ್ರಮುಖ ಪಾತ್ರ ನಿರ್ವಹಿಸಿದೆ. ತುರ್ತುಪರಿಸ್ಥಿತಿ ಜಾರಿಯ ಮೂಲಕ ವಿರೋಧ ಪಕ್ಷಗಳು ಸಮಕಾಲೀನವಾಗಿ ಸೃಷ್ಟಿಸಿದ್ದ ಅರಾಜಕತೆಯನ್ನು ತಡೆದು ಪ್ರಜಾಪ್ರಭುತ್ವದ ರಕ್ಷಣೆಯ ಕಾರ್ಯಕೈಗೊಳ್ಳಲಾಗಿದೆ' ಎಂಬ ಧೋರಣೆಯನ್ನು ನೋಡಬಹುದು. ಕೇಂದ್ರ ಸರ್ಕಾರದ ಧೋರಣೆಗಳು ಮತ್ತು ಕಾರ್ಯನೀತಿಗಳಲ್ಲಿ ಸಾಮಾನ್ಯವಾಗಿ ಕಂಡುಬಂದ ವಿಚಾರಗಳಿವು. ಪ್ರಜಾಪ್ರಭುತ್ವದ ಸ್ವರೂಪ ಮತ್ತು ಆಚರಣೆ, ಅದರ ಗ್ರಹಿಕೆಗಳಲ್ಲಿರುವ ಭಿನ್ನತೆ ಹಾಗೂ ವೈರುಧ್ಯಗಳೇ ಸಮಕಾಲೀನವಾಗಿ ಕಂಡುಬಂದ ಚಳವಳಿಗಳು, ಪ್ರತಿಭಟನೆಗಳು, ಸರ್ಕಾರದ ನಿಲುವುಗಳ ಕೇಂದ್ರವಾಗಿರುವುದು.

> ಪ್ರಜಾಪ್ರಭುತ್ವ ಎಂದರೇನು? ಪ್ರಜಾಪ್ರಭುತ್ವ ಎಂದರೆ ಬದುಕುವ ಒಂದು ಮಾರ್ಗ. ನಿರ್ಧಾರಗಳನ್ನು ಬಹಿರಂಗವಾಗಿ ಹೇಳುವಂತದ್ದು, ಸರ್ಕಾರವನ್ನು ಶಾಂತಿಯುತವಾಗಿ ಚುನಾವಣೆಯ ಮೂಲಕ ಬದಲಾಯಿಸುವದಕ್ಕೆ ಸಂವಿಧಾನದಲ್ಲಿ ಅವಕಾಶವಿದೆ. ಸತ್ಯಾಗ್ರಹವೆಂಬ ಆಯುಧ ಬಳಸುವುದು ಪ್ರಜಾಪ್ರಭುತ್ವವಲ್ಲ ಅಥವಾ ಚುನಾವಣೆ ಮೂಲಕ ಗೆದ್ದ ಶಾಸಕರನ್ನು ಬಲವಂತವಾಗಿ ರಾಜೀನಾಮೆ ಕೊಡಿಸಿ ಚುನಾವಣೆ ನಡೆಸುವುದಲ್ಲ(ಗಾಂಧಿ ೧೯೭೫: ೪೩).

'ಪ್ರಜಾಪ್ರಭುತ್ವ'ದ ಗ್ರಹಿಕೆಯು ಸರ್ಕಾರ, ವಿರೋಧ ಪಕ್ಷಗಳು ಮತ್ತು ಪ್ರತಿಭಟನಾಕಾರರಲ್ಲಿರುವ ಭಿನ್ನತೆಯನ್ನು, ಆಚರಣೆಯ ಮಾರ್ಗ ಕುರಿತ ಧೋರಣೆಯಲ್ಲಿ ಮುಖ್ಯ ಪಾತ್ರವಹಿಸಿದೆ. ಪ್ರಜಾಪ್ರಭುತ್ವ ವ್ಯವಸ್ಥೆ ಭಾರತದ ರಾಜಕೀಯ ಚೌಕಟ್ಟಿನಲ್ಲಿ ಪಡೆದುಕೊಂಡ ಸ್ವರೂಪ, ಅದರ ಪ್ರಕ್ರಿಯೆಗಳು ನಿರ್ವಹಿಸಿದ ಪಾತ್ರ ಅನನ್ಯ ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳು, ತಟಸ್ಥವಾಗಿದ್ದ ಮತ್ತು ತುರ್ತುಪರಿಸ್ಥಿತಿಯನ್ನು ಬೆಂಬಲಿಸಿದ ವರ್ಗಗಳನ್ನು ಈ ನೆಲೆಯಲ್ಲೇ ನೋಡುವ ಅವಶ್ಯಕತೆ ಇದೆ. ಇದು ಕರ್ನಾಟಕದಲ್ಲಿ ಕಂಡುಬಂದ ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳು ಮತ್ತು ೧೯೭೭ ರಿಂದ ೧೯೮೦ರವರೆಗೆ ನಡೆದ ಚುನಾವಣಾ ಫಲಿತಾಂಶಗಳ ನೆಲೆಗಳನ್ನು ಅರಿಯಲು ಅನೇಕ ಹೊಸ ಹೊಳಹುಗಳನ್ನು ಮುಂದಿಡುವುದು.

### ೩.೧.೧.೧.೨. ಆಡಳಿತಶಾಹಿ ಕಾರ್ಯನೀತಿ

ಕರ್ನಾಟಕದ ಆಡಳಿತಶಾಹಿಯ ಕಾರ್‍ಯನೀತಿಗಳು ಪ್ರಕಟಗೊಂಡ ರೂಪಗಳನ್ನು, ಅವುಗಳನ್ನು ಶಾಸನ ಸಭೆಗಳಲ್ಲಿ ಪ್ರಶ್ನಿಸುವ ಮತ್ತು ವಿರೋಧಿಸುವ ಅನೇಕ ವಿಧಗಳನ್ನು ಕಾಣಬಹುದು. ವಿರೋಧ ಪಕ್ಷಗಳ ಪ್ರತಿಭಟನೆಯ ಸ್ವರೂಪ ಹಾಗೂ ಪ್ರಕ್ರಿಯೆಗಳನ್ನು ಈ ಭಾಗದಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ.

> ತುರ್ತುಪರಿಸ್ಥಿತಿ ಘೋಷಣೆಯ ನಂತರ ಹಾಗೂ ಈ ವರ್ಷ ಉತ್ತಮವಾದ ಮಾನ್ಸೂನ್ ಇರುವುದರಿಂದ, ಆಹಾರ ಪದಾರ್ಥಗಳ ಬೆಲೆ ಕಿಳಗಿಳಿದಿದೆ. ಆಹಾರ ನಿಯಂತ್ರಣ ಕಾನೂನನ್ನು ಹೆಚ್ಚು ಬಳಸದಂತೆ ಮಾಡಲು ಕಾರಣ. ಸುಮಾರು ೫೨೩ ಪ್ರಕರಣಗಳಲ್ಲಿ ಆಹಾರ ಘಟಕಗಳನ್ನು ವಶಕ್ಕೆ ತೆಗೆದುಕೊಳ್ಳಲಾಗಿದೆ. ಈ ಮೂಲಕ ೧೭ ಲಕ್ಷ ಬೆಲೆ ಬಾಳುವ ಆಹಾರ ಪದಾರ್ಥವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗಿದೆ(ಪೊಲೀಸ್ ವರದಿ ೧೯೭೬: ೧೩).

ಇಲ್ಲಿ ತುರ್ತುಪರಿಸ್ಥಿತಿ ಜಾರಿಗೊಳಿಸಲು ಹಾಗೂ ಸರ್ಕಾರದ ಕೈಗೊಂಡ ಕ್ರಮಗಳಿಗೆ ಆಹಾರದ ಸಮಸ್ಯೆ ಮುಖ್ಯವಾಗಿತ್ತೆಂಬುದಕ್ಕೆ ಒತ್ತು ನೀಡಲಾಗಿದೆ. ಬೃಹತ್ ಪ್ರಮಾಣದ ಆರ್ಥಿಕ ಕಾರ್ಯಕ್ರಮಗಳ ಯಶಸ್ಸು ಕಾನೂನು ಮತ್ತು ಸುವ್ಯವಸ್ಥಿತ ಸ್ಥಿತಿಯು ಪ್ರಶಾಂತವಾದ ವಾತಾವರಣದ ಮೇಲೆ ಅವಲಂಬಿತವಾಗಿದೆ. ಸರ್ಕಾರ ಕೈಗೊಂಡ ಕಾರ್ಯಕ್ರಮಗಳಿಗೆ ಪ್ರಮುಖ ಕಾರಣಗಳಿವು ಎಂಬ ಧೋರಣೆಯು ಆಗಿಂದಾಗ್ಗೆ ಕಾರ್ಯಾಂಗದ ವಿವಿಧ ವಿಭಾಗಗಳಲ್ಲಿ, ಅನೇಕ ವಿಧಗಳಲ್ಲಿ ಪುನರುಚ್ಚಾರಗೊಂಡಿರುವುದನ್ನು ಕಾಣಬಹುದು.

## ಸ್ವಾತಂತ್ರ್ಯ ಹೋರಾಟಗಾರರ ಜೊತೆ ಅರಸು ಮತ್ತು ಇಂದಿರಾ ಗಾಂಧಿ ಅವರು



೧೨ ಫೆಬ್ರವರಿ ೧೯೭೬ರಂದು ಪ್ರಧಾನಿ ಇವರು ಸ್ವಾತಂತ್ರ್ಯ ಹೋರಾಟಗಾರರ ಸಮ್ಮೇಳನ ಉದ್ಘಾಟನಾ ಭಾಷಣ ಮಾಡುತ್ತಿರುವುದು. ಚಿತ್ರ ಕೃಪೆ- ವಾರ್ತಾ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು. ಚಿತ್ರ ಸಂಖ್ಯೆ : ೩೧

> ಬೇರೆ ಬೇರೆ ಗುಂಪುಗಳಿಂದ ಅನೇಕ ಪ್ರತಿಭಟನೆಗಳಿದ್ದಾಗಿಯೂ ರಾಜ್ಯದಲ್ಲಿ ಶಾಂತಿ ಮತ್ತು ಸುವ್ಯವಸ್ಥೆ ಈ ವರ್ಷ ನಿಯಂತ್ರಣದಲ್ಲಿವೆ. ಕಾನೂನು ಮತ್ತು ಸುವ್ಯವಸ್ಥೆ ಅನಿಯಂತ್ರಿತ ಪ್ರಕರಣಗಳಿಂದ ಮುಕ್ತವಾಗಿದೆ. ರಾಜ್ಯ ಪೊಲೀಸ್ ವಿಭಾಗವು ಉಪಾಯವಾಗಿ ಮತ್ತು ದೃಢವಾಗಿ ನಿಯಂತ್ರಿಸಲು ಸಫಲರಾಗಿದ್ದಾರೆ. ರಾಷ್ಟ್ರೀಯ ತುರ್ತುಪರಿಸ್ಥಿತಿ ಘೋಷಣೆಯ ನಂತರ ಸಮಾಜ ವಿದ್ರೋಹಿಗಳು ಮತ್ತು ಕೋಮುವಾದಿಗಳನ್ನು ಸುರಕ್ಷಾ ಹಿನ್ನೆಲೆಯಲ್ಲಿ ಸುಪರ್ದಿಗೆ ತೆಗೆದುಕೊಳ್ಳಲಾಗಿದೆ ... ಆದರೂ ಡಿ.ಎಲ್.ಡಿ ಮತ್ತು ಇತರ ವಿರೋಧ ಪಕ್ಷಗಳ ಕೆಲವು ಹಿರಿಯ ನಾಯಕರು ತುರ್ತುಪರಿಸ್ಥಿತಿ ಘೋಷಣೆಯಾದ ಕೂಡಲೆ ರಾಜ್ಯದಾದ್ಯಂತ ವಾರಗಳವರೆಗೆ ಸಂಚರಿಸಿದರು. ದೇಶದ ಇತರ ಭಾಗಗಳಲ್ಲಿಯೂ ಬೇರೆ ಬೇರೆ ವರ್ಗಗಳನ್ನು ಪ್ರಚೋದಿಸಲು ಪ್ರಯತ್ನಿಸಿದರು. ರಾಜ್ಯದಾದ್ಯಂತ ಸಂಪೂರ್ಣವಾಗಿ ಪ್ರಾಮಾಣಿಕ ಮತ್ತು ಪರಿಣಾಮಕಾರಿ ಕಾರ್ಯಗಳನ್ನು ಕೈಗೊಳ್ಳುವ ಮೂಲಕ ಕಾನೂನು ಸುವ್ಯವಸ್ಥೆಯನ್ನು ಕಾಪಾಡಲಾಗಿದೆ. ಎಲ್ಲ ವರ್ಗದ ಅಧಿಕಾರಿಗಳಿಗೂ ಸಾರ್ವಜನಿಕರ ಶಾಂತಿಗೆ ತೊಂದರೆ ಉಂಟಾಗದಂತೆ ಕಾಪಾಡಲು ತಿಳಿಸಲಾಗಿದೆ. ಮತ್ತು ಸಾಮಾನ್ಯ ನಾಗರಿಕರ ಜೀವನವು ಶಾಂತಿಯುತ ಹಾಗೂ ವ್ಯವಸ್ಥಿತವಾಗಿ ಮುಂದುವರಿಯುತ್ತಿದೆ(ಪೊಲೀಸ್ ವರದಿ ೧೯೭೬: ೯-೨೩).

ಪೊಲೀಸ್ ವ್ಯವಸ್ಥೆ ಮತ್ತು ಕಾನೂನುಗಳು ಸಮಕಾಲೀನ ರಾಜಕಾರಣ ಕುರಿತ ಸರ್ಕಾರದ ನಿಲುವನ್ನು ಪ್ರತಿಬಿಂಬಿಸಿರುವುದು. ತುರ್ತುಪರಿಸ್ಥಿತಿ ಜಾರಿಯಾದ ನಂತರದಲ್ಲಿ ವಿರೋಧ ಪಕ್ಷಗಳ ಪ್ರತಿಕ್ರಿಯೆ ಮತ್ತು ಪ್ರತಿಭಟನೆಗಳನ್ನು ಸ್ಥೂಲವಾಗಿ ಚಿತ್ರಿಸುತ್ತಲೇ, ನಿಯಂತ್ರಣಕ್ಕೆ ತಂದಿರುವ ಕುರಿತ ಮಾಹಿತಿ ಇದಾಗಿದೆ. ಸಾಮಾನ್ಯ ನಾಗರಿಕರ ಜೀವನ ಶಾಂತಿಯುತ ಮತ್ತು ವ್ಯವಸ್ಥಿತವಾಗಿ ಮುಂದುವರಿಯುತ್ತಿದೆ ಎಂಬ ಹೇಳಿಕೆಯು, ತುರ್ತುಪರಿಸ್ಥಿತಿ ವಿರೋಧಿ ನೆಲೆಯ ವಿರೋಧ ಪಕ್ಷಗಳ ನಾಯಕರು, ಸದಸ್ಯರು ಹಾಗೂ ಹೋರಾಟಗಾರರ ಬದುಕು ಶಾಂತಿಯುತ ಮತ್ತು ವ್ಯವಸ್ಥಿತವಾಗಿಲ್ಲವೇ ಎಂಬುದನ್ನು ಪ್ರಶ್ನಿಸುತ್ತಲೇ, ಪರಿಸ್ಥಿತಿಯನ್ನು ಬಿಡಿಸಿಡುವುದು. ಅಲ್ಲದೇ ೨೦ ಅಂಶದ ಕಾರ್ಯಕ್ರಮಗಳ ಜಾರಿಯು ಪೊಲೀಸರ ಸಾಧನೆಗಳ ವರದಿಯ ಭಾಗದಲ್ಲಿರುವುದು ವಿಶೇಷವಾಗಿದ್ದು, ಕುತೂಹಲ ಹುಟ್ಟಿಸುವುದು. ಈ ವಿಚಾರಗಳೇ ಸರ್ಕಾರದ ಎಲ್ಲ ವಿಭಾಗಗಳಲ್ಲಿಯೂ, ರಾಜ್ಯ ಪ್ರಮುಖರ ಭಾಷಣಗಳಲ್ಲಿಯೂ ಪದೇ ಪದೇ ಮರುಕಳಿಸುವುದನ್ನು ಕಾಣಬಹುದು. ಉದಾಹರಣೆಗೆ, ೧೯೭೬ರ ರಾಜ್ಯಪಾಲರ ಭಾಷಣವನ್ನು[೮] ನೋಡಬಹುದು. ಇವು ವಿರೋಧ ಪಕ್ಷಗಳ ಕಾರ್ಯನೀತಿಗೆ ಸಂಬಂಧಿಸಿದಂತೆ ಸರ್ಕಾರ ಹೊಂದಿರುವ ನಿಲುವುಗಳು. ವಿರೋಧ ಪಕ್ಷಗಳು ಸರ್ಕಾರದ ಕಾರ್ಯನೀತಿಗಳನ್ನು ವಿರೋಧಿಸಲು ಮುಖ್ಯ ಕಾರಣವೇ ತುರ್ತುಪರಿಸ್ಥಿತಿ ಜಾರಿ ಹಾಗೂ ಆಡಳಿತನೀತಿಯು ಪ್ರಜಾಪ್ರಭುತ್ವಕ್ಕೆ ವಿರುದ್ಧವಾದುದು ಎಂಬುದು. ಈ ದಿಸೆಯಲ್ಲಿ ಶಾಸನ ಸಭೆಗಳಲ್ಲಿ

ವಿರೋಧ ಪಕ್ಷಗಳು ಪ್ರತಿಭಟಿಸಿದ ವಿಧಗಳ ಚರ್ಚೆ ಸಮಕಾಲೀನ ರಾಜಕಾರಣದ ಇತರ ಆಯಾಮಗಳ ಚಿಂತನೆಗೆ ಅವಕಾಶ ನೀಡುವುದು.

### ೩.೧.೧.೧.೩. ವಿರೋಧ ಪಕ್ಷಗಳು ಮತ್ತು ಪ್ರತಿಭಟನೆ

ತುರ್ತುಪರಿಸ್ಥಿತಿ ಕಾಲದ ಶಾಸನ ಸಭೆಗಳಲ್ಲಿ ವಿರೋಧ ಪಕ್ಷಗಳ ಪ್ರತಿಭಟನೆಗಳ ಸ್ವರೂಪವನ್ನು ಚರ್ಚಿಸುವುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ. ತುರ್ತುಪರಿಸ್ಥಿತಿ ಕಾಲಘಟ್ಟ ಪ್ರಜಾಪ್ರಭುತ್ವ ವ್ಯವಸ್ಥೆಗೆ ಮಾರಕವಾದುದು. ಆದರೆ ಈ ಕಾಲದಲ್ಲಿ ಸಾಮಾನ್ಯ ಸಂದರ್ಭದಲ್ಲಿ ನಡೆಯುತ್ತಿದ್ದಕ್ಕಿಂತಲೂ ಅಧಿಕ ಶಾಸನ ಸಭೆಗಳು ನಡೆದಿರುವುದು ವಿಶೇಷ. ಇದರೊಡನೆ ಶಾಸನ ಸಭೆಗಳಲ್ಲಿ ಚರ್ಚೆ ನಡೆಯದೆ, ಅನೇಕ ಬಾರಿ ಮಂಡನೆಯಾದ ಮಸೂದೆಗಳು ಅಂಗೀಕರಿಸಲ್ಪಡುತ್ತಿತ್ತು. ಈ ಶಾಸನ ಸಭೆಗಳಲ್ಲಿ ನೇರವಾಗಿ ತುರ್ತುಪರಿಸ್ಥಿತಿ ಜಾರಿ, ಸಂಬಂಧಿಸಿದ ಕಾರ್ಯನೀತಿಗಳನ್ನು ಹಾಗೂ ರಾಜ್ಯ ಸರ್ಕಾರದ ಆಡಳಿತ ನೀತಿಯನ್ನು ಪ್ರಶ್ನಿಸಿಸುವ (ಯಾವುದೆ ವಿಚಾರಕ್ಕೆ ಸಂಬಂಧಿಸಿದ್ದರು) ಎರಡು ವಿಧದ ಪ್ರತಿಭಟನೆಗಳನ್ನು ಕಾಣಬಹುದು.

ಶಾಸನ ಸಭೆಯಲ್ಲಿ ೧೯೭೬ರ ಫೆಬ್ರವರಿ ಮತ್ತು ಏಪ್ರಿಲ್‌ನಲ್ಲಿ ತುರ್ತುಪರಿಸ್ಥಿತಿ ಕುರಿತು ಸರ್ಕಾರವನ್ನು ನೇರವಾಗಿ ಪ್ರಶ್ನಿಸುತ್ತಾ, ಪ್ರತಿಭಟಿಸಿರುವುದು ಕಂಡುಬರುವುದು. ಇಲ್ಲಿ ಕೆಲವು ಯುವಕರು ಮತ್ತು ವಿರೋಧ ಪಕ್ಷದ ಕಾರ್ಯಕರ್ತರು ಕಾನೂನಿನ್ವಯ ಬಿಡುಗಡೆಯಾದ ನಂತರ ಪುನಃ ಬಂಧಿಸಿದ್ದು ಮುಖ್ಯವಾಗಿದೆ. ಜೊತೆಗೆ ೧೯೭೫ರ ಡಿಸೆಂಬರ್ ೧೪ ರಿಂದ ೧೯೭೬ರ ಜನವರಿ ೧೪ರವರೆಗೆ ವಿರೋಧ ಪಕ್ಷದವರು ನಡೆಸಿದ ಸತ್ಯಾಗ್ರಹದಲ್ಲಿ ಅನೇಕರನ್ನು ಡಿಐಆರ್ ಅಡಿ ಕಾರಣ ನೀಡದೆ ಬಂಧಿಸಿದ್ದನ್ನು ಪ್ರಶ್ನಿಸಲಾಗಿದೆ. 'ಕಾಯ್ದೆಯ ಚೌಕಟ್ಟಿನೊಳಗೆ ಪ್ರಶ್ನಿಸುವ ಅಧಿಕಾರ ಇರುವದರಿಂದಷ್ಟೆ ಪ್ರಶ್ನಿಸಲಾಗುತ್ತಿದೆ' ಎಂಬ ವ್ಯಂಗ್ಯದೊಡನೆ ತೀಕ್ಷ್ಣವಾಗಿ ವಿರೋಧ ಪಕ್ಷದ ಸದಸ್ಯರೊಬ್ಬರು ಪ್ರತಿರೋಧ ವ್ಯಕ್ತಪಡಿಸಿರುವುದನ್ನು ಕಾಣಬಹುದು. ರಾಷ್ಟ್ರೋತ್ಥಾನ ಪರಿಷತ್‌ನ್ನು ಸರ್ಕಾರ ವಶಪಡಿಸಿಕೊಂಡು ಬೀಗಮುದ್ರೆ ಹಾಕಿರುವುದನ್ನು ಪ್ರಶ್ನಿಸಿ, ಸುದೀರ್ಘ ಚರ್ಚೆಯು ೧೯೭೬ರ ಏಪ್ರಿಲ್ ತಿಂಗಳ ಶಾಸನ ಸಭೆಯಲ್ಲಿ ನಡೆದಿದೆ. ಅವಕಾಶಗಳು ದೊರೆತಾಗ ತುರ್ತು ಪರಿಸ್ಥಿತಿ ವಿರೋಧಿ ಪ್ರತಿಭಟನೆಯಲ್ಲಿ ಭಾಗಿಯಾಗಿರುವ ವ್ಯಕ್ತಿಗಳು ಮತ್ತು ಸಂಘಟನೆಗಳ ವಿರುದ್ಧ ಸರ್ಕಾರದ್ ಕ್ರಮವನ್ನು ಪ್ರಶ್ನಿಸುವುದನ್ನು ನೋಡಬಹುದು. ಕರ್ನಾಟಕದಲ್ಲಿ ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನಾಕಾರರು ಮೀಸ ಅಡಿ ಬಂಧನವಾಗಿರುವುದಕ್ಕಿಂತ ಅಧಿಕ ಸಂಖ್ಯೆಯಲ್ಲಿ ಡಿ.ಐ.ಆರ್ ಮೂಲಕ ಬಂಧನಕ್ಕೊಳಗಾಗಿದ್ದಾರೆ.

**ಶಾಸನ ಸಭೆಯಲ್ಲಿ ಅರಸು ಅವರು**



ಕೃಪೆ: ವಾರ್ತಾ ಇಲಾಖೆ. ಕರ್ನಾಟಕ ಸರ್ಕಾರ. ಬೆಂಗಳೂರು. ಚಿತ್ರ ಸಂಖ್ಯೆ: ೩.೨.

ಶಾಸನ ಸಭೆ(ಅಸೆಂಬ್ಲಿ) ಮತ್ತು ಶಾಸನ ಮಂಡಲಿ(ಕೌನ್ಸಿಲ್) ಎರಡೂ ಕಡೆ ವಿರೋಧ ಪಕ್ಷಗಳ ಪ್ರತಿಭಟನೆ ಕಂಡುಬಂದರೂ ಅಧಿಕ ಪ್ರತಿಭಟನೆ ಶಾಸನ ಸಭೆಗಳಲ್ಲಿ ನೋಡಲುಸಿಗುವುದು. ತುರ್ತುಪರಿಸ್ಥಿತಿ ಜಾರಿ ಮತ್ತು ರಾಜ್ಯ ಸರ್ಕಾರದ ಕಾರ್ಯನೀತಿಗಳನ್ನು ಸಭೆಗಳಲ್ಲಿ ಚರ್ಚಿಸಿ ಪ್ರತಿಭಟಿಸಲಾಗಿದೆ. ರಾಜ್ಯಾಂಗ ತಿದ್ದುಪಡಿಯ ಚರ್ಚೆಗಳಲ್ಲಿ ವಿರೋಧ ಪಕ್ಷದವರಷ್ಟೇ ಅಲ್ಲದೆ ಆಡಳಿತ ಪಕ್ಷದ ಸದಸ್ಯರೂ ಅಸಮಾಧಾನ ವ್ಯಕ್ತ ಪಡಿಸಿರುವುದನ್ನು ನೋಡಬಹುದು. ಈ ಸಂಬಂಧ ಬಿ.ವಿ.ಕಕ್ಕಿಲಾಯ ಅವರು 'ಯಾವ ಕಾರಣಕ್ಕೋಸ್ಕರ ಈ ತುರ್ತುಪರಿಸ್ಥಿತಿಯನ್ನು ಕೇಂದ್ರ ಸರ್ಕಾರ ಘೋಷಿಸಬೇಕಾಗಿ ಬಂತೋ, ಯಾವ ಕಾರಣಕ್ಕಾಗಿ ಈ ೨೦ ಅಂಶಗಳ ಕಾರ್ಯಕ್ರಮವನ್ನು* ಘೋಷಿಸಿದರೊ ಗೊತ್ತಿಲ್ಲ. ನಮ್ಮ ಸರ್ಕಾರ ಈ ತುರ್ತುಪರಿಸ್ಥಿತಿ ಗಂಭೀರತೆಯನ್ನು ಸಾಕಷ್ಟು ತಿಳಿದುಕೊಂಡಿಲ್ಲವೆಂದು ಬಹಳ ವ್ಯಸನದಿಂದ ಹೇಳಬೇಕಾಗಿದೆ' ಎಂದಿದ್ದಾರೆ. ಆಡಳಿತ ಪಕ್ಷಗಳೊಳಗೇ ಇದ್ದ ಭಿನ್ನಾಭಿಪ್ರಾಯಗಳಿಗೆ ಕನ್ನಡಿ ಹಿಡಿಯುವುದು. ಕೇಂದ್ರದಲ್ಲಿ ಮತ್ತು ರಾಜ್ಯದಲ್ಲಿ ಆಳುತ್ತಿದ್ದ ರಾಜಕೀಯ ಪಕ್ಷಗಳು ಒಂದೆಯಾದರೂ, ರಾಜ್ಯ ಸರ್ಕಾರವನ್ನು ಮಾತ್ರ ನಮ್ಮ ಸರ್ಕಾರ ಎಂದಿರುವುದು ಗಮನಾರ್ಹ.

'ಪ್ರಜಾಪ್ರಭುತ್ವ' ತುರ್ತುಪರಿಸ್ಥಿತಿಯ ವಿರೋಧಿ ಚರ್ಚೆಗಳಲ್ಲಿ ಕಂಡುಬರುತ್ತಿದ್ದ ಪ್ರಮುಖ ವಿಚಾರ. ಪ್ರಜಾಪ್ರಭುತ್ವವು ತುರ್ತುಪರಿಸ್ಥಿತಿಯ ಮೂಲಕ ಕೊಲೆ ಆಗುತ್ತಿರುವುದನ್ನು ವಿರೋಧಿಸಲು ಭಗತ್ ಸಿಂಗ್, ರಾಣಾಪ್ರತಾಪ್ ಸಿಂಗ್ ಇನ್ನಿತರ ಸ್ವಾತಂತ್ರ್ಯ ಹೋರಾಟಗಾರರ ವಿಚಾರಗಳನ್ನು ಶಾಸನ ಸಭೆಯಲ್ಲಿ ಓದುವ ಮೂಲಕ ಪ್ರತಿರೋಧ ವ್ಯಕ್ತಪಡಿಸುವುದನ್ನು ಕಾಣಬಹುದು. ಇದಕ್ಕೆ ಪೂರಕವಾಗಿ ಕೋಣಂದೂರು ಲಿಂಗಪ್ಪ (ಸಮಾಜವಾದಿ) ಅವರು ಶಾಸನ ಸಭೆಯ ಇತಿಹಾಸದಲ್ಲಿ ಮತ್ತೊಂದು ಕರಾಳ ದಿನವೆಂದು ಪ್ರಜಾಪ್ರಭುತ್ವ ಕುರಿತಂತೆ ಕವಿಯೊಬ್ಬರ 'ಅಯ್ಯಯ್ಯೋ ಸತ್ತೆ ಸತ್ತೆ, ನಾನು ಪ್ರಜಾ ಸತ್ತೆ' ಎಂಬ ನಾಲ್ಕು ಸಾಲುಗಳ ಚುಟುಕವನ್ನು ಓದಿ ಪ್ರತಿಭಟಿಸಿರುವರು. ಇದರ ರಚನಾಕಾರರಿಗೆ ವಯಸ್ಸಾಗಿರುವುದರಿಂದ ಹೆಸರನ್ನು ಹೇಳುವುದಕ್ಕೆ ಇಷ್ಟಪಡುವುದಿಲ್ಲ ಎಂದು ಹೇಳಿರುವುದನ್ನು ನೋಡಬಹುದು. ಸಂವಿಧಾನದ ೪೨ನೇ ತಿದ್ದುಪಡಿಗೆ, ಎರಡು ಗಂಟೆಗಳ ಕಾಲದಲ್ಲಿ ಚರ್ಚೆ ಮುಗಿದು ಮಸೂದೆ ಅಂಗೀಕಾರವಾಗಿರುವುದು ಸರ್ಕಾರ ಮತ್ತು ಶಾಸನ ಸಭೆಗಳ ಸ್ವರೂಪದ ಮೇಲೆ ಬೆಳಕು ಹರಿಸುವುದು. ಈ ಶಾಸನ ಸಭೆಯಲ್ಲಿ ಮಸೂದೆ ಅಂಗೀಕಾರವನ್ನು ವಿರೋಧಿಸಿ ವಿರೋಧ ಪಕ್ಷದ ಎಲ್ಲ ಸದಸ್ಯರು ಸಭೆಯನ್ನು ತಿರಸ್ಕರಿಸಿ ಹೊರಬಂದರು. ಇತರ ರಾಜ್ಯಗಳಲ್ಲಿಯೂ ಇಂತಹ ಪ್ರತಿಭಟನೆಗಳು ಕಂಡುಬರುವುದು ಸಾಮಾನ್ಯವಾಗಿದೆ. ಹಾಗೇ ಶಾಸನ ಸಭೆಯೊಂದರಲ್ಲಿ ಜಯಪ್ರಕಾಶ್ ನಾರಾಯಣ ಅವರನ್ನು ಟೀಕಿಸಿದ ಸಂದರ್ಭದಲ್ಲಿ ಅನೇಕರು 'ವ್ಯಕ್ತಿಗತ ಟೀಕಿಸುವುದು ಸರಿಯಲ್ಲ ಬೇಕಾದರೆ ತತ್ವಗಳನ್ನು ಟೀಕಿಸಿ' ಎಂದು ಪ್ರತಿಭಟಿಸಿದ್ದಾರೆ. ಆ ಹೊತ್ತಿಗೆ ಜೆ.ಪಿ. ಪ್ರಜಾಪ್ರಭುತ್ವದ ಸಂಕೇತವಾಗಿ ಪರಿವರ್ತಿತವಾಗಿದ್ದರು. ಇದನ್ನು ಸಮೂಹ ಮಾಧ್ಯಮದ ಪ್ರತಿಭಟನೆಗಳಲ್ಲಿ ಯೂ ಗುರುತಿಸಬಹುದು. ೧೯೭೭ರ ಫೆಬ್ರವರಿಯಲ್ಲಿ ಬಂದ ಮಸೂದೆಯನ್ನು ವಿರೋಧಿಸಿ 'ಸಾರ್ವಜನಿಕವಾಗಿ ನಾನು ಹೇಳುವುದೇನೆಂದರೆ, ಪ್ರಜಾಪ್ರಭುತ್ವ ವ್ಯವಸ್ಥೆ ಮತ್ತು ಮೌಲ್ಯವನ್ನು ಬೆಳೆಸಬೇಕೆಂಬ ದೃಷ್ಟಿಯಿಂದ ತಂದಿರತಕ್ಕ ಮಸೂದೆ ವಾಪಸ್ಸು ಪಡೆಯಬೇಕೆಂದು ಕಳಕಳಿಯಿಂದ ಕೇಳಿಕೊಳ್ಳುತ್ತೇನೆ' ಎಂದು ಕಾಗೋಡು ತಿಮ್ಮಪ್ಪ ಅವರು ಹೇಳಿರುವುದು ಗಮನಾರ್ಹ. ಪ್ರಜಾಪ್ರಭುತ್ವ ವ್ಯವಸ್ಥೆ ಮತ್ತು ಮೌಲ್ಯಗಳ ನಡುವಿನ ಅಂತರವನ್ನು ಸ್ಥೂಲವಾಗಿ ಬಿಚ್ಚಿಡುವುದು. ಇದರೊಡನೆ ೨೦ ಅಂಶಗಳ ಕಾರ್ಯಕ್ರಮ ಜಾರಿಗೆ ತುರ್ತುಪರಿಸ್ಥಿತಿ ಜಾರಿಯ ಅಗತ್ಯ ಇರಲಿಲ್ಲ ಎಂಬ ಅಭಿಪ್ರಾಯ ಹೆಚ್ಚಾಗಿ ಕಂಡುಬರುತ್ತಿತ್ತು. ಆ ಕಾಲದಲ್ಲಿ ಅಧಿಕ ಚರ್ಚೆ ಮತ್ತು ವಿವಾದಕ್ಕೆ ಒಳಗಾಗಿದ್ದ ಮತ್ತೊಂದು ವಿಚಾರ ಸಂತಾನ ಹರಣ ಚಿಕಿತ್ಸೆ, ಇದರೊಡನೆ ಇನ್ನಿತರ ವಿಚಾರಗಳ ಕುರಿತು ಆಗಾಗ ಚರ್ಚೆಗಳು ನಡೆಯುತ್ತಿದ್ದವು. ಸಂವಿಧಾನಕ್ಕೆ ೪೪ನೇ ತಿದ್ದುಪಡಿ ತರುವ ಮೂಲಕ ಚುನಾವಣೆಯನ್ನು ಮುಂದೂಡಿದ್ದು ಶಾಸನ ಸಭೆಯಲ್ಲಿ ದೊಡ್ಡ ಸಂಚಲನವನ್ನು ಉಂಟುಮಾಡಿತ್ತು. ಇದನ್ನು ವಿರೋಧಿಸಿ ವಿರೋಧ ಪಕ್ಷದವರಷ್ಟೇ ಅಲ್ಲದೆ ಆಡಳಿತ ಪಕ್ಷಗಳ ಸದಸ್ಯರಾದ ಕಾಗೋಡು ತಿಮ್ಮಪ್ಪ, ಬಿ.ವಿ.ಕಕ್ಕಿಲಾಯ ಮತ್ತಿತರರು ಸಭೆಯಿಂದ ಹೊರಬಂದು ಪ್ರತಿಭಟಿಸಿದ್ದರು. ಸಮಕಾಲೀನವಾಗಿ ಯಾವುದೇ

* ಈ ಕುರಿತು ೨ನೇ ಅಧ್ಯಾಯದಲ್ಲಿ ಚರ್ಚಿಸಿದೆ. ಪುಟ ಸಂಖ್ಯೆ ३೦-३೪.

ವಿಚಾರವಾಗಿ ಸರ್ಕಾರದ ಕ್ರಮವನ್ನು ಪ್ರಶ್ನಿಸಿರುವುದು, ಪ್ರತಿಭಟಿಸಿರುವುದು ಸಹ ತುರ್ತುಪರಿಸ್ಥಿತಿ ಆಡಳಿತ ವನ್ನು ಬಹುತೇಕ ಬಾರಿ ಪ್ರತಿಭಟಿಸಿದಂತೆ ಎಂದು ಪರಿಗಣಿಸುವ ಅಗತ್ಯವಿದೆ. ಇಂತಹ ತಂತ್ರಗಳನ್ನು ಶಾಸನ ಸಭೆಗಳಲ್ಲಿ ಅಧಿಕವಾಗಿ ಬಳಸುತ್ತಿದ್ದರು. ಉದಾಹರಣೆಯಾಗಿ, ಭೂ ಸುಧಾರಣಾ ಕಾಯ್ದೆಯ ಬಳಕೆಯನ್ನು ನೋಡಬಹುದು.

ಶಾಸನ ಸಭೆಗಳಲ್ಲಿ ೧೯೭೫ರ ಸೆಪ್ಟೆಂಬರ್ ನಂತರ ಕಾನೂನು ಬದಲಾವಣೆಗೆ ಚರ್ಚೆಗಳು ನಡೆದರೂ ನಾಮಾಕಾವಸ್ಥೆ ಎಂಬಂತಿದೆ. ಒಂದು ದಿನದ ಅವಧಿಯಲ್ಲೆ ಒಂದು ಮಸೂದೆ ಅಥವಾ ತಿದ್ದುಪಡಿ ಬಗೆಗಿನ ಚರ್ಚೆ ಹಾಗೂ ಅಂಗೀಕಾರ ಮುಗಿದಿರುವುದು. ಕೆಲವು ಬಾರಿ ಕೆಲವರು ಸರ್ಕಾರದ ಲೋಪದೋಷ, ಅಭಿಪ್ರಾಯಗಳನ್ನು ಮುಕ್ತವಾಗಿ ವ್ಯಕ್ತಪಡಿಸಲು ಪ್ರಯತ್ನ ನಡೆಸಿದ್ದರಾದರೂ, ಅದರಲ್ಲಿ ತುರ್ತುಪರಿಸ್ಥಿತಿ ಪೂರ್ವದ ಮೊನಚು ಕಡಿಮೆಯಾಗಿದೆ. ಸಮಕಾಲೀನವಾಗಿ ಶಾಸಕರ ದಿನಾಚಾರಣೆ ಎಂದು ೧೯೭೬ರಲ್ಲಿ ಮೂರು ದಿನಗಳ ಕಾಲ ಹಬ್ಬದಂತೆ ವಿಜೃಂಭಣೆಯಿಂದ ಆಚರಿಸಿದ್ದು ಪ್ರಜಾಪ್ರಭುತ್ವ ವ್ಯವಸ್ಥೆಯ ವ್ಯಂಗ್ಯವಾಗಿದೆ. ಈ ಮೇಲಿನ ಚರ್ಚೆಗಳು ತುರ್ತುಪರಿಸ್ಥಿತಿ ಜಾರಿ ಹಾಗೂ ಸಮಕಾಲೀನ ಕಾಯ್ದೆ ಕಾನೂನು ಗಳ ವಿರುದ್ಧ ಬಂದ ಪ್ರತಿಭಟನೆಗಳ[೨೦] ಸ್ವರೂಪದ ಅನೇಕ ಪದರಗಳನ್ನು ಬಿಡಿಸಿಡುವುದು. ಸಂವಿಧಾನಾತ್ಮಕ ಪ್ರತಿಭಟನೆಗಳು ಶಾಸನ ಸಭೆಗಳಲ್ಲಿ ಕಂಡುಬಂದದ್ದಕ್ಕಿಂತ ಹೆಚ್ಚಾಗಿ ಸಾರ್ವಜನಿಕ ಪ್ರತಿಭಟನೆಗಳ ರೂಪದಲ್ಲಿವೆ. ಈ ಸಂಬಂಧ ಸಾರ್ವಜನಿಕ ಪ್ರತಿಭಟನೆಗಳ ಕುರಿತ ಪ್ರತ್ಯೇಕ ಅಧ್ಯಯನದ ಅಗತ್ಯವಿದೆ.

**೩.೧.೧.೧.೪. ಸಾರ್ವಜನಿಕ ಪ್ರತಿಭಟನೆಗಳು**

ಪ್ರಜಾಪ್ರಭುತ್ವ ಜಗತ್ತಿನಾದ್ಯಂತ ಮನ್ನಣೆ ಪಡೆದಿರುವಂತಹ ಆಡಳಿತ ಪದ್ಧತಿಗಳಲ್ಲೊಂದು. ಆಡಳಿತಾತ್ಮಕ ಪದ್ಧತಿಗಳಲೆಲ್ಲ ಪ್ರಜಾಪ್ರಭುತ್ವವು ಅತ್ಯುತ್ತಮವಾದುದು ಎನ್ನುವುದರಲ್ಲಿ ಅನುಮಾನವಿಲ್ಲ. ಈ ವ್ಯವಸ್ಥೆಯೇ ಬಹುಜನಕ್ಕೆ ಒಳಿತಾಗುವ ಹಾಗೂ ತೃಪ್ತಿಕರವಾದ ಫಲಿತಾಂಶಗಳನ್ನು ಕೊಡಬಲ್ಲದು. ಪ್ರಜಾಪ್ರಭುತ್ವದ ಮುಖ್ಯ ಅಂಶ ಉತ್ತಮ ಆಡಳಿತದ ಮೂಲಕ ಉತ್ತಮ ಜಗತ್ತಿನ ಸೃಷ್ಟಿ ಹಾಗೂ ಜನರ ಸಂಕೋಲೆಗಳನ್ನು ಕಿತ್ತೊಗೆಯುವುದು. ತುರ್ತುಪರಿಸ್ಥಿತಿ ಜಾರಿಯಾದ ಸಂದರ್ಭದಲ್ಲಿ ವಿರೋಧ ಪಕ್ಷದ ಶಾಸಕರು, ನಾಯಕರು, ರಾಜಕೀಯ ಪಕ್ಷಗಳು ಮತ್ತು ಕಾರ್ಯಕರ್ತರು ಮೊದಲಾದವರು ಬೇರೆ ಬೇರೆ ವಿಧಾನಗಳಲ್ಲಿ ಪ್ರತಿಭಟಿಸಿ ಪ್ರತಿಕ್ರಿಯಿಸಿರುವುದನ್ನು ನೋಡಬಹುದು. ಈ ದಿಸೆಯಲ್ಲಿ ಸಾರ್ವಜನಿಕ ಪ್ರತಿಭಟನೆಗಳ ಸ್ವರೂಪ ಮತ್ತು ಪ್ರಕ್ರಿಯೆಗಳನ್ನು ಇಲ್ಲಿ ಚರ್ಚಿಸಲು ಪ್ರಯತ್ನ ಮಾಡಲಾಗಿದೆ.

ಸಂವಿಧಾನಾತ್ಮಕ ನೆಲೆಯಲ್ಲಿ ಕಂಡುಬಂದ ಸಾರ್ವಜನಿಕ ಪ್ರತಿಭಟನೆಗಳನ್ನು ಚರ್ಚಿಸಲು ಸರ್ಕಾರದ ನಿಯಮಗಳು, ಕಾರ್ಯನೀತಿಗಳು ಹಾಗೂ ಅಧಿಕವಾಗಿ ಕಂಡುಬರುವ ಮೌನವನ್ನೇ ಆಕರವನ್ನಾಗಿ ಬಳಸ ಬೇಕಾದ ಅನಿವಾರ್ಯತೆ ಇದೆ. 'ಪತ್ರಿಕಾ ಸೆನ್ಸಾರ್‌ಶಿಪ್ ಜಾರಿಯಲ್ಲಿದ್ದದ್ದರಿಂದ ಬಹುಪಾಲು ಪ್ರತಿಭಟನೆಗಳು ಪತ್ರಿಕೆಗಳಲ್ಲಿ ದಾಖಲಾಗುತ್ತಿರಲಿಲ್ಲ. ತುರ್ತುಪರಿಸ್ಥಿತಿಯನ್ನು ವಿರೋಧಿಸಿ ಬಂದ ನೇರ ಪ್ರತಿಭಟನೆಗಳ ಮುದ್ರಣ ಕ್ಕೆ ಅವಕಾಶವಿರಲಿಲ್ಲ' ಎನ್ನುವುದನ್ನು ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳಲ್ಲಿ ಭಾಗಿ ಆಗಿದ್ದವರೆಲ್ಲರೂ ಒಮ್ಮತದಿಂದ ಒಪ್ಪುತ್ತಾರೆ. ಹಾಗಾಗಿ ಭೂಗತ ಹೋರಾಟಕ್ಕೆ ಹೆಚ್ಚು ಒತ್ತು ದೊರೆಯಿತು. ತುರ್ತುಪರಿಸ್ಥಿತಿ ವಿರೋಧಿ ನೆಲೆಯಲ್ಲಿ ಪ್ರತಿಭಟಿಸುವ ಮಾರ್ಗ ಸಂವಿಧಾನಾತ್ಮಕ ಆಗಿರಬೇಕು ಅಥವಾ ಬಹಿರಂಗವಿರಬೇಕು ಎಂಬುದು ಸಮಕಾಲೀನವಾಗಿ ಕಂಡುಬರುತ್ತಿದ್ದ ಮತ್ತೊಂದು ದೊಡ್ಡ ವಾದವಾಗಿದೆ. ಇದು ಪ್ರತಿಭಟನಾ ಮಾರ್ಗಗಳ ಬಳಕೆಯ ಹಿಂದಿನ ಚಿಂತನೆ, ಉದ್ದೇಶಗಳ ಆಯಾಮಗಳನ್ನು ತೆರೆದಿಡುವುದು. ಈ ದಿಸೆಯಲ್ಲಿ ಕೆಳಗಿನ ಉಲ್ಲೇಖವನ್ನು ಗಮನಿಸುವ ಅಗತ್ಯ ಇದೆ.

> ಈಗಲೂ ಸಹ ನನ್ನ ಆಳವಾದ ನಂಬಿಕೆ ನಿರಂಕುಶಾಧಿಕಾರದ ವಿರುದ್ಧ ಹೋರಾಡಲು ಸತ್ಯಾಗ್ರಹ ಅತ್ಯುತ್ತಮ ಅಸ್ತ್ರ. ನಮ್ಮ ವೈಯಕ್ತಿಕ ನಂಬಿಕೆಗಳು ಏನಾದರೂ ಮತ್ತು ಸೈದ್ಧಾಂತಿಕ ನಂಬಿಕೆಗಳು ಸಹ. ಯಾರಾದರೂ ಸತ್ಯಾಗ್ರಹ ಮಾಡಲು ತೊಂದರೆಯಾಗುವುದಿಲ್ಲ. ಭಾರತದಾದ್ಯಂತ ನಾವು ಒಮ್ಮೆ ಜೈಲಿಗೆ ಹೋಗುವ ಚಳವಳಿಯನ್ನು ಆರಂಭಿಸಿದರೆ, ಪ್ರತಿ ಮನೆಯಿಂದಲೂ ಒಬ್ಬ ಸತ್ಯಾಗ್ರಹಿ ಎಂಬಂತೆ, ರಾಜಕೀಯ ಪಕ್ಷಗಳು, ಟ್ರೇಡ್ ಯೂನಿಯನ್‌ಗಳು, ಯುವಕರು, ಮಹಿಳೆಯರು ಮತ್ತು ವಿದ್ಯಾರ್ಥಿಗಳು ಸತ್ಯಾಗ್ರಹದಲ್ಲಿ ಭಾಗವಹಿಸಲು ಸಹಕಾರ ನೀಡಬೇಕು(ಫರ್ನಾಂಡೀಸ್ ೧೯೭೭: ೧೩).

ಇದು ಭೂಗತರಾಗಿದ್ದ ಮತ್ತು ಸಮಾಜವಾದಿ ಭೂಗತ ಹೋರಾಟಗಾರರಿಗೆ ಮಾದರಿಯಾಗಿದ್ದ ಜಾರ್ಜ್ ಫರ್ನಾಂಡೀಸ್ ಅವರು ಪತ್ರದಲ್ಲಿ ವ್ಯಕ್ತಪಡಿಸಿರುವ ಅಭಿಮತ. ಜೈಲಿಗೆ ಹೋಗುವುದು ಪ್ರತಿಭಟನೆಯ ಸಂಕೇತ. ಹಾಗಾಗಿ ಬಿಡುಗಡೆ ಆದರೆ ಮತ್ತೊಮ್ಮೆ ಜೈಲಿಗೆ ಹಾಕುವವರಿಗೆ ಚಟುವಟಿಕೆಗಳನ್ನು ಮುಂದುವರೆಸಿ ಎಂಬ ಸಂದೇಶ ಆರ್.ಎಸ್.ಎಸ್ ಮತ್ತು ಸಹಚರ ಸಂಘಟನೆಗಳಲ್ಲಿ ಕಂಡುಬರುತ್ತಿದ್ದವು. ಇಲ್ಲಿ ಜಾರ್ಜ್ ಫರ್ನಾಂಡೀಸ್ ಅವರು ಜೈಲಿಗೆ ಹೋಗೋದು ಪ್ರತಿಭಟನೆಯಾದರೂ ಅದರಿಂದ ಉಪಯೋಗವಿಲ್ಲ. ಅದಕ್ಕಿಂತ ಭೂಗತರಾಗಿದ್ದು ನಿರಂಕುಶಾಧಿಕಾರದ ವಿರುದ್ಧ ಪ್ರತಿಭಟನೆ ಮಾಡುವುದು ಉತ್ತಮ. ನಮ್ಮ ವಿಷಯದಲ್ಲಿ ಜೈಲಿಗೆ ಹೋಗುವುದು ಬೇರೆ ಇನ್ನೇನನ್ನು ಮಾಡಲಾಗಂದತಹವರು ಮಾತ್ರ ಎಂಬ ಧೋರಣೆಯನ್ನು[೧೧] ವ್ಯಕ್ತಪಡಿಸಿರುವುದು ಕಾಣಬಹುದು. ಜಾರ್ಜ್ ಫರ್ನಾಂಡೀಸ್ ಅವರ ನಿಲುವುಗಳಲ್ಲಿರುವ ವಿರೋಧಭಾಸಗಳು ಭೂಗತ ಹೋರಾಟದ ಮಾರ್ಗಕ್ಕೆ ನೀಡಿರುವ ಪ್ರಾಶ್ಯಸ್ತ್ಯದ ಹಿಂದಿನ ಕಾರಣ ಹಾಗೂ ಸಾರ್ವಜನಿಕ ಪ್ರತಿಭಟನಾ ರೂಪಗಳ ಕುರಿತು ಪರೋಕ್ಷವಾಗಿ ಬೆಳಕು ಹರಿಸುವುದು. ಸಾರ್ವಜನಿಕ ಪ್ರತಿಭಟನೆಗಳ ಕುರಿತಂತೆ ಸರ್ಕಾರದ ಸ್ಪಂದನೆ ಕಂಡುಬಂದಿರುವುದು ಕಡಿಮೆ. ಈ ಪ್ರತಿಭಟನೆಗಳಲ್ಲಿ ತೊಡಗಿರುವವರನ್ನು ಗುರುತಿಸುವುದು ಸುಲಭವಾಗಿರುವುದರಿಂದ ಪ್ರತಿಭಟನೆಗಳನ್ನು ದಮನ ಮಾಡುವುದು ಬಹಳ ಸುಲಭ ಎಂಬ ಅಭಿಮತ ಭೂಗತ ಹೋರಾಟಗಾರರಲ್ಲಿ ಕಾಣಬಹುದಾಗಿದೆ. ಸಾರ್ವಜನಿಕ ಪ್ರತಿಭಟನೆಗಳ ಸ್ವರೂಪವನ್ನು ಭೂಗತ ಹೋರಾಟಗಾರರ ದೃಷ್ಟಿಕೋನದಿಂದ ನೋಡುವ ಮೂಲಕ ಮತ್ತು ಭೂಗತ ಹೋರಾಟಗಾರರೊಡನೆ ಸಂವಿಧಾನಾತ್ಮಕ ಹೋರಾಟಗಾರರಿಗಿದ್ದ ಪರಸ್ಪರ ಸಂಬಂಧಗಳನ್ನು ಅವಲೋಕಿಸುವ ಮೂಲಕ ಅನೇಕ ಹೊಸ ಹೊಳಹುಗಳು ದೊರೆಯುವ ಸಾಧ್ಯತೆ ಇದೆ.

ತುರ್ತುಪರಿಸ್ಥಿತಿ ಘೋಷಣೆಗೆ ಬಂದ ಅನೇಕ ಪ್ರತಿಕ್ರಿಯೆಗಳಲ್ಲಿ ಸಾರ್ವಜನಿಕ ಪ್ರತಿಭಟನೆಯೂ ಒಂದಾಗಿದೆ. ಸಾಮಾನ್ಯವಾಗಿ ಗುಂಪು ಗುಂಪಾಗಿ ಅಥವಾ ವೈಯಕ್ತಿಕವಾಗಿ ಸಂವಿಧಾನದ ಚೌಕಟ್ಟಿನೊಳಗೆ ನೇರವಾಗಿ ವಿರೋಧಿಸುವುದು ಈ ಪ್ರತಿಭಟನಾ ಸ್ವರೂಪದ ಪ್ರಮುಖ ಲಕ್ಷಣವಾಗಿದೆ. ತುರ್ತುಪರಿಸ್ಥಿತಿಯನ್ನು ವಿರೋಧಿಸಿ ಜೂನ್ ೨೬ರಂದು ರಾಜಧಾನಿಯಲ್ಲಿ ಆರ್.ಎಸ್.ಎಸ್. ಎ.ಬಿ.ವಿ.ಪಿ ಮೊದಲಾದ ರಾಜಕೀಯ ಸಂಘಸಂಸ್ಥೆಗಳು ಹಾಗೂ ರಾಜಕೀಯ ಸಂಘಸಂಸ್ಥೆಗಳೊಡನೆ ಸಂಪರ್ಕವಿದ್ದವರು ಮೈಸೂರು ಬ್ಯಾಂಕ್ ಸರ್ಕಲ್ ಬಳಿ ಪ್ರತಿಭಟನಾ ಮೆರವಣಿಗೆ ನಡೆಸಿದರು. ಇಂಥ ಅನೇಕ ಪ್ರತಿಭಟನೆಗಳು ರಾಜ್ಯದ ಹಲವಾರು ಕಡೆಗಳಲ್ಲಿ ಕಂಡುಬಂದವು. ಜೂನ್ ೨೭ರ ಪತ್ರಿಕೆಯಲ್ಲಿ "ರಾಜ್ಯದಲ್ಲಿ ಶಾಂತ ವಾತಾವರಣ" ಹಾಗೂ "ನಗರದಲ್ಲಿ ೧೫ ದಿನ ನಿಷೇದಾಜ್ಞೆ"(ಕನ್ನಡಪ್ರಭ ೧೯೭೫: ೧) ಎಂಬ ವರದಿಗಳಲ್ಲಿ ಪ್ರತಿಭಟನೆಯ ಇಣುಕು ನೋಟವಿದೆ. ನಗರದಲ್ಲಿ ೧೫ ದಿನ ನಿಷೇದಾಜ್ಞೆ ಎಂಬ ವರದಿಯು ಪ್ರತಿಭಟನೆಗಳನ್ನು ನಿಗ್ರಹಿಸಲು ಸರ್ಕಾರ ಕೈಗೊಂಡಿರುವ ಕ್ರಮವೆಂಬುದು ಮೇಲ್ನೋಟಕ್ಕೆ ತಿಳಿದುಬರುವುದು. ನವೆಂಬರ್ ೧೪ ರಿಂದ ಡಿಸೆಂಬರ್ ೧೪ರವರೆಗೆ ದೇಶದಾದ್ಯಂತ ಸತ್ಯಾಗ್ರಹಗಳು ನಿರಂತರವಾಗಿ ಕಂಡುಬಂದವು. ಈ ಸಂದರ್ಭದಲ್ಲಾದ ಸತ್ಯಾಗ್ರಹಿಗಳ ಬಂಧನದ ಕುರಿತು ಶಾಸನ ಸಭೆಗಳಲ್ಲಿ ಪ್ರಶ್ನಿಸಿರುವುದನ್ನು ಈಗಾಗಲೇ ಚರ್ಚಿಸಲಾಗಿದೆ. ೧೯೭೫ರ ಡಿಸೆಂಬರ್ ೪ರಂದು ಕರ್ನಾಟಕದ ಎಲ್ಲ ವಿರೋಧ ಪಕ್ಷಗಳು ಬಾಯಿಗೆ ಕಪ್ಪು ಬಟ್ಟೆ ಕಟ್ಟಿಕೊಂಡು ಮೌನ ಮೆರವಣಿಗೆ ನಡೆಸಿದ್ದರು. ಆಗಾಗ ಕಾಲೇಜು ಮೊದಲಾದ ಸಾರ್ವಜನಿಕ ಸ್ಥಳಗಳಲ್ಲಿ ವಿಭಿನ್ನ ರೀತಿಯ ಪ್ರತಿಭಟನೆಗಳು ಕಂಡುಬರುತ್ತಿದ್ದವು. ಪ್ರತಿಪಕ್ಷಗಳು ಸರ್ಕಾರ ತಂದ ಪ್ರಗತಿಯ ದಶಕಕ್ಕೆ(೧೯೭೬) ಬದಲಾಗಿ ಡಿಕೇಡ್ ಆಫ್ ಇಕಾನಾಮಿಕ್ ಖೆಯಾಸ್(ರಾಮಕೃಷ್ಣ ಹೆಗಡೆ, ೧೯೭೬) ಪ್ರಕಟಿಸುವ ಮೂಲಕ ಪ್ರತಿರೋಧ ವ್ಯಕ್ತಪಡಿಸಿದ್ದರು. ಈ ಪ್ರತಿಭಟನೆಗಳ ಬಗೆಗೆ ತುರ್ತುಪರಿಸ್ಥಿತಿಯ ನಂತರದಲ್ಲೇ ಹೆಚ್ಚಿನ ದಾಖಲೆಗಳು ದೊರೆಯುವುವು. ಇವುಗಳಲ್ಲಿ ಬಹುತೇಕ ಮೌಖಿಕ ಆಕರವಾಗಿದ್ದು, ಪ್ರತಿಭಟನೆಯಲ್ಲಿ ಭಾಗವಹಿಸಿದ್ದ ವ್ಯಕ್ತಿಗಳ ವೈಯಕ್ತಿಕ ಅನುಭವಗಳು ಪ್ರತಿಭಟನೆಗಿಂತ ಹೆಚ್ಚು ಕಂಡುಬರುತ್ತವೆ. ಈ ಪ್ರತಿಭಟನೆಗಳಲ್ಲಿ ರಾಜಕೀಯ ಸಂಘಟನೆ, ರಾಜಕೀಯ ಪಕ್ಷಗಳ ಕಾರ್ಯಕರ್ತರು, ವಿರೋಧ ಪಕ್ಷದ ನಾಯಕರು, ನಿಷೇಧಿತ ಸಂಘಟನೆಗಳೊಂದಿಗೆ ಸಂಪರ್ಕ ಹೊಂದಿರುವವರು ಅಧಿಕವಾಗಿ ಪಾಲ್ಗೊಂಡಿದ್ದರು. ಪ್ರತಿಭಟನೆಗಳು ಕೆಲವೆಡೆ ಚಿಕ್ಕ ಚಿಕ್ಕ ಗುಂಪುಗಳು, ಮತ್ತೆ ಕೆಲವೆಡೆ ದೊಡ್ಡ ದೊಡ್ಡ ಗುಂಪುಗಳ ಮೂಲಕ ನಡೆಯುತ್ತಿದ್ದವು.



ಆಕರ: ಕಕ್ಕಿಲ್ಲಾಯ.ಬಿ.ವಿ., ೨೦೦೩, ಬರೆಯದ ದಿನಚರಿಯ ಮರೆಯದ ಪುಟಗಳು," ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು ೫೬೦೦೦೧, ಪುಟ - ೪೪೦. ಚಿತ್ರ ಸಂಖ್ಯೆ: ೩.೩.

ಸಾರ್ವಜನಿಕ ಪ್ರತಿಭಟನೆಗಳು ಅನೇಕ ಬಾರಿ ವೈಯಕ್ತಿಕವಾಗಿ ವ್ಯಕ್ತಿ ನೆಲೆಯಲ್ಲಿ ನಡೆಯುತ್ತಿತ್ತು. ಕೆಲವು ಸರ್ಕಾರಿ ಅಧಿಕಾರಿಗಳು, ನ್ಯಾಯಾಧೀಶರು ತುರ್ತುಪರಿಸ್ಥಿತಿ ಕಾಲದ ಕಾನೂನನ್ನು ಪ್ರಶ್ನಿಸುವ ಮೂಲಕ ಪ್ರತಿಭಟಿಸಿರುವುದನ್ನು ನೋಡಬಹುದು. 'ನ್ಯಾಯಾಂಗದ ಹೆಗ್ಗಳಿಕೆ ಸ್ಥಾಪಿಸಿದ ನ್ಯಾಯ ಮೂರ್ತಿಗಳು' (ಪ್ರಜಾಮತ ೧೯೭೭ ಆಗಸ್ಟ್ ೧೪) ಎಂಬ ಲೇಖನದಲ್ಲಿ ತುರ್ತುಪರಿಸ್ಥಿತಿಯಲ್ಲಿ ನ್ಯಾಯಾಧೀಶರು ಸರ್ಕಾರದ ಆಜ್ಞೆಗಳನ್ನು ಪ್ರಶ್ನಿಸಿರುವುದರ ಮಾಹಿತಿಯಿದೆ. ಇದರಿಂದಾಗಿ ಖನ್ನಾ, ಚಂದ್ರಶೇಖರ್, ಸದಾನಂದ ಸ್ವಾಮಿ, ಕೆ.ಎಸ್.ಹೆಗಡೆ ಮೊದಲಾದ ನ್ಯಾಯಾಧೀಶರು ಸರ್ಕಾರದ ಕೆಂಗಣ್ಣಿಗೆ ಒಳಗಾಗಿದ್ದರು ಎಂಬುದು ಈ ಲೇಖನದ ಸಾರವಾಗಿದೆ. ನಿರುದ್ಯೋಗದ ನಿವಾರಣೆಗಾಗಿ, ಉದ್ಯೋಗ ಸೃಷ್ಟಿಗಾಗಿ ಸರ್ಕಾರದಲ್ಲಿ ಸೇವೆಸಲ್ಲಿಸಿದ ಕಾಲಾವಧಿ ಆಧಾರದ ಮೇಲೆ ಜನರನ್ನು ಸ್ವಯಂ ನಿವೃತ್ತಿಗೊಳಿಸಲು ಸರ್ಕಾರ ಪ್ರೇರೇಪಿಸಿತ್ತು. ಸರ್ಕಾರದ ವಿರೋಧಿ ಅಥವಾ ಆಜ್ಞಾಪಾಲಕರಲ್ಲದ ಅಧಿಕಾರಿಗಳ ಮೇಲೆ ಹೆಚ್ಚು ಬಳಕೆಯಾಗುತ್ತಿತ್ತು ಎಂಬುದು ಸರ್ಕಾರಿ ಅಧಿಕಾರಿ ವಲಯದೊಳಗಿದ್ದ ಪ್ರತಿಭಟನೆಗಳನ್ನು ಸ್ಪಷ್ಟಪಡಿಸುವುದು. ಅಕಾಡೆಮಿಕ್ ವಲಯಗಳಲ್ಲಿ ಆಗಾಗ ತುರ್ತುಪರಿಸ್ಥಿತಿ ವಿರೋಧಿಸಿ ಬಹಿರಂಗವಾಗಿ ಪ್ರತಿಭಟನೆ ನಡೆಯುತ್ತಿತ್ತು. ಇದಕ್ಕೆ ಪೂರಕವಾಗಿ

> ಸಮಕಾಲೀನವಾಗಿ ಇಂಡಿಯನ್ ಹಿಸ್ಟರಿ ಕಾಂಗ್ರೆಸ್ಸಿನಲ್ಲಿ ತುರ್ತುಪರಿಸ್ಥಿತಿ ವಿರೋಧಿಸಿ ಗೊತ್ತುವಳಿ ಅಂಗೀಕಾರ ಮಾಡಲು ಆರ್.ಎಸ್.ಶರ್ಮ ಅವರು ಪ್ರಮುಖ ಕಾರಣಕರ್ತರಾಗಿದ್ದರು(ಶ್ರೀಮಾಲಿ ೨೦೧೧: ೪೬-೪೭).

ಅನೇಕ ಸಂಘ ಸಂಸ್ಥೆಗಳಲ್ಲಿ ಇಂತಹ ಧೋರಣೆಗಳನ್ನು ನೋಡಬಹುದು.

ಪ್ರತಿಭಟನೆಗಳು ಪತ್ರಿಕೆಗಳಲ್ಲಿ ವರದಿ, ವ್ಯಂಗ್ಯಚಿತ್ರ ಮತ್ತು ಕವನ ಮೊದಲಾದ ಸ್ವರೂಪಗಳಲ್ಲಿ ಅಭಿವ್ಯಕ್ತಗೊಂಡವು. ಈ ಕೆಳಗಿನ ಚಿತ್ರ-೧ರ ವ್ಯಂಗ್ಯಚಿತ್ರ ಕರ್ನಾಟಕ ರಾಜಕಾರಣಕ್ಕೆ ಸಂಬಂಧಿಸಿದ ಪ್ರಬಲ ಪ್ರತಿಭಟನೆಯನ್ನು ವ್ಯಕ್ತಪಡಿಸುವುದು. ಹೊಸ ವರ್ಷದ ಹಿಂದಿನ ಸಂಚಿಕೆಗಳಲ್ಲಿ ಸಾಮಾನ್ಯವಾಗಿರುವಂತೆ




ಪ್ರಜಾಮತ : ೧೯೭೫ ಡಿಸೆಂಬರ್ ೨೮. ವ್ಯಂಗ್ಯಚಿತ್ರಕಾರ : ಜಿ.ವೈ.ಹುಬ್ಳೀಕರ್. ಚಿತ್ರ ಸಂಖ್ಯೆ ೩.೪.

(ಚಿತ್ರ-೧)

ಸಮಕಾಲೀನ ವರ್ಷದ ಪ್ರಮುಖ ಘಟನೆಗಳನ್ನು '೧೯೭೫' ಎಂಬ ಶೀರ್ಷಿಕೆಯಲ್ಲಿ ವಿಶ್ಲೇಷಿಸಲಾಗಿದೆ. ಈ ಸಂಪಾದಕೀಯದ ಮೇಲಿನ ವ್ಯಂಗ್ಯಚಿತ್ರವಿದು. ಕರ್ನಾಟಕ ಸರ್ಕಾರ ಮತ್ತು ವ್ಯಕ್ತಿ ರಾಜಕಾರಣದ ನೆಲೆಯಲ್ಲಿ

ಈ ವ್ಯಂಗ್ಯಚಿತ್ರವನ್ನು ಚಿತ್ರಿಸಿರುವಂತಿದೆ. 'ಉರುಳಿಸೋಣ ಎಂದು ಬಂದೆ... ನಾನು ಉಳಿದರೆ ಸಾಕಾಗಿದೆ ಈಗ !' ಎಂದು ಅರಸು ಸರಕಾರದ ಆಸನದಡಿಯಲ್ಲಿರುವ ವ್ಯಕ್ತಿಯ ಬಾಯಿಂದ ದನಿ ಹೊರಬರುತ್ತಿದೆ. ಇದಕ್ಕೆ 'ಸೋಜಿಗದ ಸುದ್ದಿ' ಎಂದು ಶೀರ್ಷಿಕೆ ನೀಡಿರುವುದು ಸರ್ಕಾರದ ಕ್ರಮಗಳ ವ್ಯಂಗ್ಯ ಅಣಕ. ತುರ್ತುಪರಿಸ್ಥಿತಿಯ ವಿರುದ್ಧ ಪ್ರತಿಭಟನೆಗಳು ೧೯೭೫ರ ಜೂನ್ ೨೬ರಿಂದಲೇ ಕಂಡುಬರುತ್ತಿದ್ದವಾದರೂ ದೊಡ್ಡಮಟ್ಟದಲ್ಲಿ ಹೋರಾಟ ಕಂಡುಬಂದಿದ್ದು, ನವೆಂಬರ್ ೧೪ ರಿಂದ ಡಿಸೆಂಬರ್ ೧೪ರವರೆಗೆ. ಖಾಲಿ ಸಿಂಹಾಸನದ ಮೇಲೆ ಅರಸು ಸರ್ಕಾರವೆಂದಿದೆ. ಅಧಿಕಾರದ ನೆಲೆಯಲ್ಲಿ ಅತ್ಯಂತ ಪ್ರಭಾವಿಯುತ ಪ್ರತಿಭಟನೆಯಾಗಿದೆ. ಮೇಲ್ನೋಟಕ್ಕೆ ರಾಜ್ಯ ಸರ್ಕಾರ ಕುರಿತಂತಿದ್ದರೂ ಕೇಂದ್ರ ಸರ್ಕಾರವನ್ನು ಒಟ್ಟಿಗೆ ಪ್ರಶ್ನಿಸಿಸುತ್ತಾ ಪ್ರತಿಭಟಿಸಿರುವುದಾಗಿದೆ.

ಸಂವಿಧಾನಾತ್ಮಕವಾಗಿ ಕಂಡುಬಂದ ಪ್ರತಿಭಟನೆಯ ವಿಧಗಳಲ್ಲಿ ರಾಜಕೀಯೇತರ ಸಂಘಟನೆಗಳ ಪ್ರತಿಭಟನಾ ಸ್ವರೂಪ ಮೇಲಿನವುಗಳಿಗಿಂತ ಭಿನ್ನವಾಗಿದೆ. ತುರ್ತುಪರಿಸ್ಥಿತಿಯ ವಿರುದ್ಧ ಜನಜಾಗೃತಿ ಉಂಟು ಮಾಡಲು ಹಳ್ಳಿಹಳ್ಳಿಗಳಿಗೆ ತಿರುಗಿ ಬೀದಿ ನಾಟಕಗಳನ್ನು ಮಾಡುವುದನ್ನು ಕಾಣಬಹುದಾದರೂ, ಕೆಲವು ಪ್ರದೇಶಗಳಿಗಷ್ಟೇ ಸೀಮಿತವಾಗಿದ್ದವು. ಸಮಕಾಲೀನ ರಾಜಕಾರಣದ ಘಟನೆ, ವಸ್ತುವಿಷಯಗಳನ್ನು ಆಧರಿಸಿದ 'ಗರೀಬಿ ಹಟಾವೋ' ರೀತಿಯ ನಾಟಕಗಳನ್ನು ರಂಗಮಂದಿರಗಳಲ್ಲಿ ಪ್ರದರ್ಶಿಸುವುದನ್ನು ನೋಡಬಹುದು. ತುರ್ತುಪರಿಸ್ಥಿತಿ ವಿರೋಧಿ ನೆಲೆಯಲ್ಲಿ ಹಾಡು, ಕವನ, ಕಥೆ ಮೊದಲಾದ ಸಾಹಿತ್ಯ ಪ್ರಕಾರಗಳಲ್ಲಿ ಅಕ್ಷರಗಳನ್ನು ಪ್ರತಿಭಟನೆಯ ಸಾಧನಗಳಾಗಿ ಬಳಸುವ ಪ್ರಯತ್ನ ಕಂಡುಬರುವುದು. ಆಗಾಗ ಜನಜಂಗುಳಿ ಇರುವ ಪ್ರದೇಶದಲ್ಲಿ ತುರ್ತುಪರಿಸ್ಥಿತಿಯನ್ನು ಪ್ರತಿಭಟಿಸಿ ಹಾಡುಗಳನ್ನು(ರಂಗಗೀತೆಗಳ ರೀತಿ) ಹಾಡುವುದು ಮೊದಲಾದವನ್ನು ನೋಡಬಹುದು. ಈ ಪ್ರತಿಭಟನೆಗಳು ಹೆಚ್ಚಾಗಿ ನಗರ ಕೇಂದ್ರಿತವಾಗಿರುತ್ತಿದ್ದವು. ಪ್ರತಿಭಟನೆಗಳು[೧೨] ಬಹುಪಾಲು ವೈಯಕ್ತಿಕ ಅಥವಾ ಸಣ್ಣ ಗುಂಪುಗಳಲ್ಲಿ ಕಂಡುಬರುತ್ತಿದ್ದು, ಅತ್ಯಧಿಕ ಪ್ರಮಾಣದಲ್ಲಿ ಇಂತಹ ಹೋರಾಟಗಳನ್ನು ನೋಡಬಹುದಾಗಿದೆ. ಈ ಹೋರಾಟಗಳಲ್ಲಿ ತೊಡಗಿಸಿಕೊಂಡಿದ್ದವರು ಸಮಾಜದ ಪ್ರಮುಖ ಸಮೂಹ ಮಾಧ್ಯಮಗಳೊಡನೆ ಗುರುತಿಸಿಕೊಂಡಿದ್ದಂತಹ ವಿಚಾರವಾದಿಗಳು, ಹೋರಾಟಗಾರರು ಮುಂತಾದವರು. ಇಂತಹ ಪ್ರತಿಭಟನೆಗಳನ್ನು ಸಮೂಹ ಮಾಧ್ಯಮಗಳ ನೆಲೆಯಲ್ಲಿ ಮುಂದೆ ಪ್ರತ್ಯೇಕವಾಗಿ ಚರ್ಚಿಸಲಾಗುವುದು.

### ೩.೧.೧.೨. ಸಮೂಹ ಮಾಧ್ಯಮಗಳು: ಸ್ವರೂಪ ಮತ್ತು ಪ್ರಕ್ರಿಯೆಗಳು

ಸಾಮಾನ್ಯವಾಗಿ ಸೆನ್ಸಾರ್‌ಷಿಪ್‌ನಲ್ಲಿ ಎರಡು ರೀತಿಯ ಪರಿಕಲ್ಪನೆಗಳು ಪ್ರಮುಖವಾಗಿರುತ್ತವೆ. ಜನರ ನೈತಿಕತೆಯ ಮೇಲ್ವಿಚಾರಣೆ ನಡೆಸುವುದು ಹಾಗೂ ಸರ್ಕಾರ ನೇರ ಹಸ್ತಕ್ಷೇಪದ ಮೂಲಕ ನಾಗರಿಕರ ವಾಕ್ ಸ್ವಾತಂತ್ರ್ಯ ಮತ್ತು ಇತರ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ನಿಯಂತ್ರಿಸುವುದು. ನಾಗರಿಕರ ಅಭಿವ್ಯಕ್ತಿ ಸ್ವಾತಂತ್ರ್ಯ ಮತ್ತು ಮಾಧ್ಯಮಗಳ ಮೇಲಿನ ಸೆನ್ಸಾರ್‌ಷಿಪ್ ಹೇರಿಕೆಯ ನೆನಪು ತುರ್ತುಪರಿಸ್ಥಿತಿಯೊಡನೆ ಸದಾ ತಳುಕು ಹಾಕಿ ಕೊಂಡಿದೆ. ಇದರೊಡನೆ ವಾತಾವರಣದಲ್ಲಿದ್ದ ಭೀತಿ, ಪ್ರತಿಭಟಿಸುತ್ತಿದ್ದ ವಿಧಾನಗಳ ಸ್ಮರಣೆಯನ್ನು ಕಾಣಬಹುದಾಗಿದೆ. ತುರ್ತುಪರಿಸ್ಥಿತಿ ಘೋಷಣೆಯನ್ನು ವಿರೋಧಿಸಿ ಅನೇಕ ಪತ್ರಿಕೆಗಳು ಸಂಪಾದಕೀಯವನ್ನು ಖಾಲಿ ಬಿಡುವ ಮೂಲಕ ಪ್ರತಿಭಟನೆ ವ್ಯಕ್ತಪಡಿಸಿದವು. ಕವನ, ಕಥೆ ಮೊದಲಾದ ಸಾಹಿತ್ಯ ಪ್ರಾಕಾರಗಳನ್ನು ಪ್ರತಿಭಟನೆಯ ಮಾಧ್ಯಮವಾಗಿ ಬಳಸುವ, ಐತಿಹಾಸಿಕ ಚಲನಚಿತ್ರಗಳ ನಿರ್ಮಾಣ, ಬೀದಿ ನಾಟಕಗಳು ಮೊದಲಾದ ಹಲವಾರು ವಿಧಗಳ ಮೂಲಕ ಸಂವಿಧಾನಾತ್ಮಕವಾಗಿ ಅನೇಕ ಪ್ರತಿಭಟನೆಗಳನ್ನು ನೋಡಬಹುದು. ಇಂತಹ ಪ್ರತಿಭಟನೆಗಳನ್ನು ಇಲ್ಲಿ ಎರಡು ಹಂತಗಳಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ. ಸರ್ಕಾರವು ಸೆನ್ಸಾರ್‌ಷಿಪ್ ಮೂಲಕ ಪತ್ರಿಕೆ, ಸಾಹಿತ್ಯ ಮತ್ತು ದೃಶ್ಯ ಮಾಧ್ಯಮ ಮೊದಲಾದವುಗಳನ್ನು ನಿಯಂತ್ರಿಸುತ್ತಿದ್ದ ಬಗೆ, ಅದಕ್ಕೆ ಪ್ರತಿಯಾಗಿ ಮಾಧ್ಯಮಗಳಲ್ಲಿ ವ್ಯಕ್ತವಾದ ಸಂವಿಧಾನಾತ್ಮಕ ಪ್ರತಿಭಟನೆಗಳ ಪ್ರಕ್ರಿಯೆಯನ್ನು ವಿಮರ್ಶಿಸುವ ಪ್ರಯತ್ನ ಮಾಡಿದೆ. ಸಮಾಜದಲ್ಲಿ ಪ್ರತಿಭಟನೆಗಳು ರೂಪುಗೊಂಡ ಪ್ರಕ್ರಿಯೆಯನ್ನು ಅವಲೋಕಿಸಲಾಗಿದೆ.

### ೩.೧.೧.೨.೧. ಸರ್ಕಾರ ಮತ್ತು ಸೆನ್ಸಾರ್‌ಷಿಪ್

ಸರ್ಕಾರ ಎಂದರೆ ರಾಜ್ಯಾಡಳಿತ ರೂಪ, ರಾಜ್ಯದ ಆಡಳಿತ ನಡೆಸುವವರು ಎಂಬ ಅರ್ಥ ಕಾಣಬಹುದಾದರೂ ಇವೆರಡರ ನಡುವೆ ಸೂಕ್ಷ್ಮವಾದ ಅಂತರವಿದೆ. ರಾಜ್ಯಾಡಳಿತ ರೂಪ ಸಾಂಸ್ಥಿಕ ಸ್ವರೂಪ ಹೊಂದಿದ್ದು, ರಾಜ್ಯದ ಆಡಳಿತ ನಡೆಸುವವರ ಚಿಂತನೆಗಳು ಮತ್ತು ಉದ್ದೇಶಗಳಿಂದ ಪ್ರಭಾವಿತವಾಗಿರುವುದು. ರಾಜ್ಯಾಡಳಿತ ಮತ್ತು ರಾಜ್ಯದ ಆಡಳಿತ ನಡೆಸುವವರ ನಡುವಿನ ಭಿನ್ನತೆ ಕರಗಿ ಕೆಲವೊಮ್ಮೆ ಬೇರೆಬೇರೆಯಾಗಿ ಕಂಡುಬರುವುದಿಲ್ಲ. ಇಂತಹ ಲಕ್ಷಣಗಳು ಹೆಚ್ಚುತ್ತಾಹೋದಂತೆ ಪ್ರಜಾಪ್ರಭುತ್ವ ಮಾದರಿಯ ಆಡಳಿತ ಕಣ್ಮರೆಯಾಗಿ ನಿರಂಕುಶ ಪ್ರಭುತ್ವದ ಲಕ್ಷಣ ಕಂಡುಬರುವುದು. ಈ ದಿಸೆಯಲ್ಲಿ ತುರ್ತುಪರಿಸ್ಥಿತಿ ಕಾಲದ ಸರ್ಕಾರ ಮತ್ತು ಸೆನ್ಸಾರ್‌ಷಿಪ್ ನಡುವಿನ ಪರಸ್ಪರ ಸಂಬಂಧ, ಸಮಕಾಲೀನವಾಗಿ ಸೆನ್ಸಾರ್‌ಷಿಪ್ ಕುರಿತಿದ್ದ ಚಿಂತನೆಗಳನ್ನು ಪರಿಶೀಲಿಸಲು ಪ್ರಯತ್ನ ಮಾಡಲಾಗಿದೆ. ಇದಕ್ಕೆ ಪ್ರತಿಯಾಗಿ ಮಾಧ್ಯಮಗಳಲ್ಲಿ ಕಂಡುಬಂದ ಸಂವಿಧಾನಾತ್ಮಕ ಪ್ರತಿಭಟನೆಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ.

### ೩.೧.೧.೨.೧.೧. ಪತ್ರಿಕಾ ಮಾಧ್ಯಮ

ಪತ್ರಿಕಾ ಸ್ವಾತಂತ್ರ್ಯದ ಚರ್ಚೆಗಳಲ್ಲಿ ತುರ್ತುಪರಿಸ್ಥಿತಿ ಕಾಲದ ಸರ್ಕಾರ ಮತ್ತು ಸೆನ್ಸಾರ್‌ಷಿಪ್ ಕುರಿತ ವಿಚಾರಗಳು ಸಾಮಾನ್ಯವಾಗಿ ಕಂಡುಬರುವುದು. ತುರ್ತುಪರಿಸ್ಥಿತಿ ಕಾಲದ ಸೆನ್ಸಾರ್‌ಷಿಪ್ ಚರ್ಚಿಸುವ ಮೊದಲು ಭಾರತದ ಸಂವಿಧಾನದಲ್ಲಿರುವ ಪತ್ರಿಕಾ ಸ್ವಾತಂತ್ರ್ಯಕ್ಕೆ ಸಂಬಂಧಿಸಿದಂತಿರುವ ವಿಚಾರಗಳನ್ನು ಗಮನಿಸುವುದು ಅಗತ್ಯ.

> ನಮ್ಮ ಸಂವಿಧಾನದಲ್ಲಿ ಪತ್ರಿಕಾ ಸ್ವಾತಂತ್ರ್ಯವನ್ನು ದೃಢೀಕರಿಸುವ ಯಾವುದೆ ನಿರ್ದಿಷ್ಟವಾದ ಕಾಯ್ದೆಗಳಿಲ್ಲ. ಆದರೆ ಇದನ್ನು ವಿಸ್ತೃತವಾಗಿ 'ಅಭಿವ್ಯಕ್ತಿ' ಸ್ವಾತಂತ್ರ್ಯದ ಕಾಯ್ದೆ ೧೯(೧)(ಎ) ಒಳಗೆ ಸೇರಿಸಲಾಗಿದೆ. ಅಭಿವ್ಯಕ್ತಿ ಸ್ವಾತಂತ್ರ್ಯ ಎಂದರೆ ಕೇವಲ ವ್ಯಕ್ತಿಯ ವೈಯಕ್ತಿಕ ದೃಷ್ಟಿಕೋನವಷ್ಟೆ ಅಲ್ಲ. ಅದು ಇತರರ ದೃಷ್ಟಿಕೋನ. ಯಾವುದೆ ಉದ್ದೇಶವಾಗಿದ್ದರು, ಮುದ್ರಣವನ್ನು ಒಳಗೊಂಡಂತೆ. ಅಭಿವ್ಯಕ್ತಿ ಸ್ವಾತಂತ್ರ್ಯ ಮೊದಲಿನಿಂದಲು ಸಂಪೂರ್ಣ ಸ್ವತಂತ್ರವಾಗದೆ ಇರುವುದರಿಂದ ಮತ್ತು ೧೯ನೆ ವಿಧಿಯ ೧ನೆ ಉಪವಿಧಿಯೊಳಗೆ ನಿಯಂತ್ರಣಕ್ಕೊಳಪಡುತ್ತದೆ ... ಪತ್ರಿಕೋದ್ಯಮಕ್ಕೆ ಭಾರತದಲ್ಲಿ ಅಂತಹ ಯಾವುದೆ ವಿಶೇಷ ಸ್ವಾತಂತ್ರ್ಯ ಅಥವ ಸವಲತ್ತು ಇಲ್ಲ. ಸತ್ಯವೆಂದರೆ ಪತ್ರಿಕಾ ಸ್ವಾತಂತ್ರ್ಯವು ಒಬ್ಬ ಸಾಮಾನ್ಯ ನಾಗರಿಕನಿಗೆ ವಿಧಿ ೯(೧)ರಲ್ಲಿರುವಷ್ಟೆ ಆಗಿದೆ. ಹಲವು ಯೋಜನೆಗಳು ಬಂದಿವೆಯಾದರೂ, ಪತ್ರಿಕಾ ಮಾಧ್ಯಮವು ಇವುಗಳಿಂದ ರಕ್ಷಿತವಾಗಿಲ್ಲ. ಸಾಮಾನ್ಯ ರೀತಿಯ ತೆರಿಗೆಗಳು, ಕೈಗಾರಿಕೆಗಳಿಗೆ ಸಂಬಂಧಿಸಿದ ಕಾಯ್ದೆಗಳು ಮತ್ತು ನೌಕರನಿಗಿರುವ ಕಾಯ್ದೆ, ಕಾನೂನುಗಳಿವೆ. ಆದರೆ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ದೃಢೀಕರಿಸುವ ನೆಲೆಯಲ್ಲಿ ರಾಜ್ಯಕ್ಕೆ ಇದು ಔಚಿತ್ಯವಲ್ಲ(ಬಸು ೨೦೦೮: ೧೦೬-೧೦೭).

ಪತ್ರಿಕಾ ಸ್ವಾತಂತ್ರ್ಯಕ್ಕೆ ಹೆಚ್ಚಿನ ಸ್ವಾತಂತ್ರ್ಯ ನೀಡುವುದು ಅಗತ್ಯ ಎಂಬ ಅಭಿಮತವು ವ್ಯಕ್ತವಾಗಿದೆ. ತುರ್ತು ಪರಿಸ್ಥಿತಿ ಜಾರಿಗೊಳಿಸುವ ಮೊದಲು ಸೆನ್ಸಾರ್‌ಷಿಪ್ ಮೂಲಕ ಪತ್ರಿಕೋದ್ಯಮವನ್ನು ನಿಯಂತ್ರಿಸುವಂತಹ ಕಾಯ್ದೆ ಇದ್ದರೂ, ಕೆಲವು ರಾಜ್ಯಗಳಿಗಷ್ಟೇ ಸೀಮಿತವಾಗಿತ್ತು, ಇಡೀ ದೇಶವನ್ನೆ ನಿಯಂತ್ರಿಸುವ ಕಾಯ್ದೆ ಇರಲಿಲ್ಲ. ಮೊದಲ ಬಾರಿಗೆ ಇಡಿ ದೇಶಕ್ಕೆ ಅನ್ವಯಿಸುವಂತೆ 'ಪಾರ್ಲಿಮೆಂಟ್ ಪ್ರಿವೆನ್ಷನ್ ಆಫ್ ಪಬ್ಲಿಕೇಷನ್ ಆಫ್ ಆಬ್ಜೆಕ್ಷನೆಬಲ್ ಮ್ಯಾಟರ್ ಸ್ಟೇಟ್ಸ್' ಎಂಬ ಕಾಯ್ದೆಯನ್ನು ೧೯೭೬ರಲ್ಲಿ ಜಾರಿಗೊಳಿಸಲಾಯಿತು. ತುರ್ತುಪರಿಸ್ಥಿತಿ ಕಾಲದ ಸೆನ್ಸಾರ್‌ಷಿಪ್ ಕುರಿತಂತೆ ಸಾಮಾನ್ಯವಾಗಿ ಕಂಡುಬರುವ ವಿವರಗಳು ಹೀಗಿವೆ:

> ಕೇಂದ್ರವು ಸೆನ್ಸಾರ್‌ಷಿಪ್ ಆಜ್ಞೆ ಮೂಲಕ ಮುದ್ರಣ, ಪ್ರಕಾಶನ, ಸಂಪಾದಕರುಗಳಿಗೆ ತುರ್ತುಪರಿಸ್ಥಿತಿ ಪ್ರತಿಭಟನೆಗಳಿಗೆ ಸಂಬಂಧಿಸಿದಂತೆ ಸರ್ಕಾರ ತೆಗೆದುಕೊಂಡ ಕ್ರಮಗಳ ಬಗ್ಗೆ ಸುದ್ದಿ, ಗಾಳಿಸುದ್ದಿ, ಅಭಿಮತ ಅಥವಾ ಇತರ ವರದಿಗಳ ಪ್ರಕಟಣೆಗಳನ್ನು ನಿಷೇಧಿಸಿತ್ತು. ಸರ್ಕಾರದ ಸೂಚನೆಗಳು ಮತ್ತು ಸೆನ್ಸಾರ್‌ಷಿಪ್ ಆಜ್ಞೆಯ ಪ್ರಭಾವ ದೇಶದಾದ್ಯಂತವಿತ್ತು. ತುರ್ತುಪರಿಸ್ಥಿತಿಯನ್ನು ಘೋಷಿಸಿದ ನಂತರ, ೩೪ಕ್ಕಿಂತ ಹೆಚ್ಚಿನ ಪ್ರಿಂಟಿಂಗ್ ಪ್ರೆಸ್‌ಗಳನ್ನು ಮುಟ್ಟುಗೋಲು ಹಾಕಿಕೊಂಡು ಮುಚ್ಚಲಾಯಿತು. ಪ್ರಕಾಶನ ಹಾಗೂ ಭೂಗತ ಪತ್ರಿಕೆಗಳ ಪ್ರಸಾರಕ್ಕೆ

ಸಂಬಂಧಿಸಿದಂತೆ ೭೦೦೦ಕ್ಕಿಂತ ಹೆಚ್ಚಿನ ಜನರನ್ನು ಬಂಧನಕ್ಕೆ ಒಳಪಡಿಸಲಾಯಿತು. ಸರ್ಕಾರವು ಇಂಥ ಬಂಧನಗಳ ಸುದ್ದಿಗಳನ್ನು ಮುಚ್ಚಿ ಹಾಕಲು ಪ್ರಯತ್ನಿಸುತ್ತಿತ್ತು. ಅದರಲ್ಲೂ, ಅಧಿಕೃತ ಆಜ್ಞೆಗಳು ಬಹಿರಂಗವಾಗೆಲ್ಲೂ ಕಂಡುಬರುತ್ತಿರಲಿಲ್ಲ(ಸುಬ್ರಮಣಿ ೨೦೦೯: ೩೩೨).

ಇದರೊಡನೆ ಘಟನೆಗಳು, ಅಂಕಿಅಂಶಗಳ ಮೂಲಕ ತೊಂದರೆಗೊಳಪಟ್ಟ ಪತ್ರಿಕೆಗಳು, ಪತ್ರಕರ್ತರು, ಮುದ್ರಣಗಳ ಕುರಿತ ವಿವರಣೆ ಇರುತ್ತದೆ. 'ಇಂದಿರಾ ಗಾಂಧಿ ಹೋರಾಟಗಾರರನ್ನು, ಚಳವಳಿಗಳನ್ನು ರಾಜಕೀಯ ಸವಾಲಾಗಿ ಸ್ವೀಕರಿಸುವ ಬದಲು ತುರ್ತುಪರಿಸ್ಥಿತಿಯನ್ನು ಹೇರಿದರು. ವಿರೋಧ ಪಕ್ಷದ ನಾಯಕರನ್ನು ಸೆರೆಮನೆಗೆ ಹಾಕಿದರು. ಭಿನ್ನಾಭಿಪ್ರಾಯವಿರುವ ಸಮೂಹ ಮಾಧ್ಯಮಗಳ ಧ್ವನಿ ನಿರಾಕರಿಸುತ್ತ ಸೆನ್ಸಾರ್‌ಷಿಪ್ ಮೂಲಕ ನಿಯಂತ್ರಿಸಿದರು. ಭಾರತೀಯ ಪ್ರಜೆಗಳ ಮೂಲಭೂತ ಹಕ್ಕುಗಳ ಮೇಲೆ ಕಠಿಣವಾದ ನಿಯಂತ್ರಣ ಹೇರಿದರು' ಮೊದಲಾದವುಗಳು ಸರ್ಕಾರ ಹಾಗೂ ಸೆನ್ಸಾರ್‌ಷಿಪ್ ನಡುವಿನ ಸಂಬಂಧಗಳ ಕುರಿತು ಕಂಡುಬರುವ ಚರ್ಚೆಗಳಾಗಿವೆ.

ಸಮೂಹ ಮಾಧ್ಯಮಗಳಿಗೆ ನೀಡಿದ್ದ ಸೆನ್ಸಾರ್‌ಷಿಪ್ ಸೂಚನೆಗಳಲ್ಲಿ 'ಎಲ್ಲ ರೀತಿಯ ಸುದ್ದಿ, ವರದಿ, ಅಭಿಪ್ರಾಯ, ಹೇಳಿಕೆ, ಪ್ರತ್ಯಕ್ಷ ಸಾಕ್ಷ್ಯ, ಸಿನಿಮಾ, ಛಾಯಾಚಿತ್ರ, ಚಿತ್ರಕಲೆ ಮತ್ತು ವ್ಯಂಗ್ಯಚಿತ್ರಗಳೆಲ್ಲವು ಸೆನ್ಸಾರ್‌ಷಿಪ್‌ಗೆ ಒಳಪಟ್ಟಿದ್ದವು. ಪ್ರಕಟವಾಗಿರುವ ಆಕ್ಷೇಪಿತ ವಿಚಾರಗಳನ್ನು ಪುನಃ ಪ್ರಕಟಿಸುವಂತಿರಲಿಲ್ಲ. ಅನಧಿಕೃತ ಸುದ್ದಿ, ಜಾಹೀರಾತು ಅಥವಾ ಮಹಾನ್ ವ್ಯಕ್ತಿಗಳ ಜೀವನ ನಿದರ್ಶನಗಳನ್ನು ಸಂಪರ್ಕ ಸಾಧನವಾಗಿ ಪ್ರಕಟಿಸಬಾರದು. ಸೆರೆಯಲ್ಲಿರುವ ರಾಜಕೀಯ ವ್ಯಕ್ತಿ ಮತ್ತು ಸ್ಥಳಗಳ ಹೆಸರಿನ ಉಲ್ಲೇಖ ಮಾಡಬಾರದು, ಇವರಿಗೆ ಸಂಬಂಧಿಸಿದಂತೆ ಯಾವ ಸೂಚನೆಗಳನ್ನು ಒಳಗೊಂಡಿರಬಾರದು' ಮುಂತಾದ ಅಂಶಗಳು ಕಂಡುಬರುವುವು. ಸರ್ಕಾರ ನಿಯಂತ್ರಿಸುತ್ತಿದ್ದ ವಿಧಾನಗಳು, ಇವುಗಳಿಗೆ ಪತ್ರಿಕೆಗಳ ಪ್ರತಿಕ್ರಿಯೆ ಹಾಗೂ ನಡುವಿನ ಸಂಬಂಧವನ್ನು ಕುರಿತು 'ಸೆನ್ಸಾರ್‌ಷಿಪ್ ಸಂದರ್ಭದಲ್ಲಿ, ದೇಶದ ಬಹುತೇಕ ದೈನಿಕಗಳು ಪತ್ರಿಕಾ ಸ್ವಾತಂತ್ರ್ಯದ ವಿರುದ್ಧ ಹೋರಾಟವನ್ನು ಬಿಟ್ಟುಬಿಟ್ಟಿದ್ದವು. ಅವುಗಳ ಪುಟಗಳು ರಾಷ್ಟ್ರೀಯ ಘಟನೆಗಳ ಅಂಕಿಅಂಶ, ಇಂದಿರಾ ಗಾಂಧಿ ಮತ್ತು ಆಕೆಯ ಮಹತ್ವಾಕಾಂಕ್ಷಿ ಮಗನ ಹೊಗಳಿಕೆಯ ಚಿತ್ರಣ ಹಾಗೂ ಅನಾರೋಗ್ಯ ಪೀಡಿತ ಸರ್ಕಾರದ ಜಾಹೀರಾತುಗಳನ್ನು ಹಾಕುತ್ತ ಸರ್ಕಾರದ ತೊತ್ತಿನಂತಿದ್ದವು. ಆದರೆ ಇದಕ್ಕೆ ವಿರುದ್ಧವಾಗಿ ಇಂಗ್ಲಿಷ್ ಪತ್ರಿಕೆಗಳಲ್ಲಿದ್ದ ಇಬ್ಬರು ಪ್ರಧಾನ ಸಂಪಾದಕರೆಂದರೆ, ದಿ ಇಂಡಿಯನ್ ಎಕ್ಸ್‌ಪ್ರೆಸ್ ಮತ್ತು ದಿ ಸ್ಟೇಟ್ಸ್‌ಮನ್ ... ಇಂದಿರಾ ಗಾಂಧಿ ಅವರಿಗೆ ಭಾರತೀಯ ರಾಜಕಾರಣದಲ್ಲಿ ಹಿಡಿತವಿದ್ದಿದ್ದರಿಂದ ತುರ್ತುಪರಿಸ್ಥಿತಿಯ ಕಾಲದಲ್ಲಿ ಭಾರತೀಯ ಪತ್ರಿಕೆಗಳ ಮೇಲೂ ಸಾಕಷ್ಟು ಹಿಡಿತವಿತ್ತೆಂಬುದು ಸ್ಪಷ್ಟವೇ. ಕನಿಷ್ಠ ರೀತಿಯಲ್ಲೂ ದೈನಿಕಗಳು ಕರ್ತವ್ಯ ನಿರ್ವಹಿಸುವುದರಿಂದ ತಡೆಯಲು ಬಳಸುತ್ತಿದ್ದ ಅಸ್ತ್ರಗಳೆಂದರೆ, ಸರ್ಕಾರದ ಜಾಹೀರಾತುಗಳ ಹಂಚಿಕೆ ಮತ್ತು ಸಣ್ಣಸಣ್ಣ ನ್ಯೂಸ್ ಏಜೆನ್ಸಿಗಳನ್ನು ಒಂದುಗೂಡಿಸಿದ್ದರ ಮೂಲಕ, ಅಲ್ಲದೇ ದೈನಿಕಗಳ ಸಂಪಾದಕರು, ವೈಯಕ್ತಿಕ ವ್ಯಕ್ತಿಗಳು ಹಾಗೂ ಪತ್ರಕರ್ತರು ಮುಂತಾದವರಲ್ಲಿ ಭಯದ ಅಸ್ತ್ರವನ್ನು ಬಿತ್ತುವ ಮೂಲಕ' ನಿಯಂತ್ರಿಸಲ್ಪಡುತ್ತಿತ್ತು ಎಂದು ಇಂದು ಸಿಂಗ್ ಅವರು ವಿಮರ್ಶಿಸಿರುವರು. ೧೯೭೫ ರಿಂದ ೧೯೭೭ರವರೆಗೆ ಪತ್ರಿಕಾ ಸ್ವಾತಂತ್ರ, ಸೆನ್ಸಾರ್‌ಷಿಪ್ ಹಾಗೂ ಸರ್ಕಾರ ಕುರಿತ ವಿಚಾರಗಳ ಅವಲೋಕನ ಸಮಕಾಲೀನ ಚಿಂತನೆಗಳ ಮೇಲೆ ಬೆಳಕು ಚೆಲ್ಲುವುದು. ಈ ದಿಸೆಯಲ್ಲಿ "ಗೋಸ್ಟ್ ಪ್ರೆಸ್"(ಏಪ್ರಿಲ್ ೧೯೭೫); "ಪ್ರೆಸ್ ಕೌನ್ಸಿಲ್ ಟೀತ್ ಪುಲ್ಡ್ ಔಟ್?"(ಮೇ ೧೯೭೫); "ದಿ ಪ್ರೆಸ್ ನ್ಯೂ ರೆಜಿಮೆಂಟ್"(ಡಿಸೆಂಬರ್ ೧೯೭೫); "ದಿ ಪ್ರೆಸ್, ಸೆನ್ಸಾರ್‌ಷಿಪ್: ಸ್ಕೋಪ್ ಅಂಡ್ ಲಿಮಿಟೇಷನ್ಸ್"(ಫೆಬ್ರವರಿ ೧೯೭೬); "ಪ್ರೆಸ್ ಆಕ್ಟ್ ಕಮ್ ಟು ಸ್ಟೇ"(ಜೂನ್ ೧೯೭೬) ಮುಂತಾದವು ವರದಿಗಳು ಮತ್ತು ಲೇಖನಗಳ ಶೀರ್ಷಿಕೆಗಳಾಗಿದ್ದು, ದೇಶದ ಪ್ರಮುಖ ನಿಯತಕಾಲಿಕೆಗಳಲ್ಲಿ ಕಂಡುಬಂದ ವಿಚಾರಗಳಾಗಿವೆ. ಲೇಖನದ ಮುಖ್ಯ ಉದ್ದೇಶಗಳನ್ನು, ಆ ಕಾಲಘಟ್ಟದ ವಾತಾವರಣವನ್ನು ಬಿಂಬಿಸುತ್ತಿವೆ.



ಕೃಪೆ: ಸೂರ್ಯನಾಥ್ ಕಾಮತ್. ೧೯೭೬ ಆಗಸ್ಟ್ ೧೬ರ ಚುನಾವಣೆಯಲ್ಲಿ[೧೪] ಪ್ರಕಟವಾದ ಸರಕಾರಿ ಜಾಹೀರಾತು.
ಚಿತ್ರ ಸಂಖ್ಯೆ: ೩.೫.

ಕರ್ನಾಟಕ ಸರ್ಕಾರಕ್ಕೆ ಸಂಬಂಧಿಸಿದಂತೆ ಮಾಹಿತಿ ಮತ್ತು ಪ್ರಸಾರ ವಿಭಾಗದ[೧೫] ವಾರ್ಷಿಕ ವರದಿಯ ಆಖ್ಯೆಯಲ್ಲಿ ಕಂಡುಬರುವ ವಿವರಗಳು ಮೇಲಿನ ವಿಚಾರಗಳನ್ನು ಸಮರ್ಥಿಸುವಂತಿದೆ.

> ಸರ್ಕಾರವು ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳ ಪ್ರಚಾರಕಾರ್ಯದಲ್ಲಿ ತೀವ್ರವಾಗಿ ತೊಡಗಿದೆ. ವಿಶೇಷವಾಗಿ ಸಮಾಜೋ-ಆರ್ಥಿಕ ಕಾರ್ಯಕ್ರಮ ಮತ್ತು ೧೯೭೬-೧೯೭೭ರ ಸರ್ಕಾರದ ಸಾಧನೆಗಳನ್ನು ಪ್ರಚಾರ ಮಾಡುವಲ್ಲಿ ಹೆಚ್ಚಿನ ಆಸಕ್ತಿವಹಿಸಿದೆ. ವಿಭಾಗವು ಯೋಜನ ರಹಿತವಾಗಿ ೭೭.೬೨ ಲಕ್ಷ ಮತ್ತು ಯೋಜನೆಯ ಮೂಲಕ ೧೫ ಲಕ್ಷವನ್ನು ಪಡೆದಿದೆ ... ಈ ವಿಭಾಗದ ಕೆಳಗೆ ೧೨೦೦೦ ಪ್ರೆಸ್ ನೋಟರ್. ಲೇಖನ ವಿನ್ಯಾಸ ಮತ್ತು ಸಾಧನೆಯ ಕಥೆ ಮತ್ತಿತರಗಳಿಗೆ ಉಪಯೋಗಿಸಲಾಗಿದೆ. ಅವುಗಳಲ್ಲಿ ೪,೫೦೦ ಕನ್ನಡದಲ್ಲಿವೆ. ಬೇರೆ ಬೇರೆ ವಿಭಾಗಗಳಿಗೆ, ಸಾರ್ವಜನಿಕರ ದುಃಖಕ್ಕೆ ಸಂಬಂಧಿಸಿದಂತೆ ೧೫೦೦೦ ಪ್ರೆಸ್ ಕ್ಲಿಪಿಂಗ್, ಮಂತ್ರಿಗಳ ಹೇಳಿಕೆ ಹಾಗೂ ಅಗತ್ಯ ಕಾರ್ಯ ನಿರ್ವಹಿಸಲು ಬಳಸಿದೆ. ಪ್ರಸಕ್ತ ಕಾಲಿನ ಸರ್ಕಾರದ ಮುಖ್ಯ ಯೋಜನೆ, ಅಭಿವೃದ್ಧಿ ಚಟುವಟಿಕೆ ಮತ್ತು ಸಹಾಯಹಸ್ತ ಮುಂತಾದವುಗಳನ್ನು ಗಮನಿಸಲು ಪತ್ರಕರ್ತರ ಪ್ರವಾಸಕ್ಕೆ ವಿನಿಯೋಗಿಸಲಾಗಿದೆ. ಇಂತಹ ೨೫ ಪ್ರವಾಸಗಳನ್ನು ಪತ್ರಕರ್ತರಿಗಾಗಿ ನಡೆಸಿದೆ. ಉತ್ತಮ ಪತ್ರಿಕಾ ಸುದ್ದಿ ಪ್ರಸಾರ ಮಾಡಲು ಸಾಧ್ಯವಾಗಿದ್ದರಿಂದ ಸಮಾಜದ ದುರ್ಬಲವರ್ಗದ ಸ್ಥಿತಿಯ ಅಭಿವೃದ್ಧಿಗೆ ಸರ್ಕಾರವು ಅನೇಕ ಸಮಾಜ ಕಲ್ಯಾಣ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಸಾಧ್ಯವಾಯಿತು ... ಈ ಕೇಂದ್ರಗಳ ಮೂಲಕ ಸಮಯ ಸಮಯಕ್ಕೆ ಸಿನಿಮಾ ಪ್ರದರ್ಶನಗಳನ್ನು ಏರ್ಪಡಿಸಲಾಗಿದೆ. ಇವು ಹೆಚ್ಚು ವೀಕ್ಷಕರನ್ನು ಸೆಳೆದಿದೆ. ಇದರೊಂದಿಗೆ ಪ್ರತಿ ಜಿಲ್ಲೆಯಲ್ಲಿರುವ ವಿಭಾಗಗಳು, ಈ ದಿಕ್ಕಿನಲ್ಲಿ ಕಾರ್ಯೋನ್ಮುಖರಾಗಿವೆ ... ವಿಭಾಗವು ಬೇರೆ ಬೇರೆ ವಿಭಾಗಕ್ಕೆ ಸಂಬಂಧಿಸಿದ ಜಾಹೀರಾತುಗಳನ್ನು ರಾಜ್ಯ ಮತ್ತು ಹೊರ ರಾಜ್ಯದ ದೈನಿಕಗಳಲ್ಲಿ ಪ್ರಕಟಿಸುತ್ತಿದೆ. ಅನೇಕ ದೈನಿಕ, ನಿಯತಕಾಲಿಕೆ ಮತ್ತು ಕಿರುಹೊತ್ತಿಗೆಗಳು ಹಾಗೂ ವಿಶೇಷ ಕಿರುಹೊತ್ತಿಗೆಗಳಲ್ಲಿ ಪ್ರಕಟಿಸಲಾಗುತ್ತಿದೆ. ಸುಮಾರು ೪೦ ಲಕ್ಷವನ್ನು ಜಾಹೀರಾತಿಗಾಗಿ ಖರ್ಚು ಮಾಡಲಾಗಿದೆ. ಪ್ರಚಾರಕ್ಕಾಗಿ ಎಲ್ಲ ಜಿಲ್ಲೆಗಳಲ್ಲಿ ಸಂಚಾರಿ ಘಟಕ ನಿಯೋಜಿಸಲಾಗಿದೆ. ಅವುಗಳೆಂದರೆ, ಸಿನಿಮಾ ಪ್ರದರ್ಶನ, ವಾರ್ತಾ ಪ್ರಕಟಣೆ ಇತ್ಯಾದಿಗಳು. ಭಾಷಣ, ಸೆಮಿನಾರ್ ಮುಂತಾದವುಗಳನ್ನು ನಡೆಸಲಾಗುತ್ತಿದೆ ... ಹಾಡು, ನಾಟಕಗಳ ವಿಭಾಗವು ಅಸಂಖ್ಯಾತ ಸಾಂಸ್ಕೃತಿಕ ಕಾರ್ಯಕ್ರಮ ಆಯೋಜಿಸುತ್ತಿದೆ. ಉದಾಹರಣೆಗೆ, ಹರಿಕಥೆ, ಯಕ್ಷಗಾನ, ನಾಟಕ, ನೃತ್ಯ ನಾಟಕ, ಜಾನಪದ ಕಾರ್ಯಕ್ರಮ, ಸಂಗೀತ ಕಛೇರಿ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸರ್ಕಾರದ ಸಮಾಜೋ-ಆರ್ಥಿಕ ಕಾರ್ಯಗಳು ಮತ್ತು ಅವುಗಳ ಸಾಧನೆ ತಿಳಿಸಲು ಬಳಸಲಾಗುತ್ತಿದೆ(ಹೋಮ್ ಸೆಕ್ರೆಟ್ರಿಯಟ್[೧೬] ೧೯೭೮: ೪೩).

ವರದಿಯ ಈ ಸಾರದಲ್ಲಿ ಸರ್ಕಾರ ಮಾಹಿತಿಗಳ ನಿಯಂತ್ರಣಕ್ಕೆ ಸಂಬಂಧಿಸಿದಂತೆ ನೇರವಾಗಿ ಸ್ಪಷ್ಟಪಡಿಸದಿದ್ದರೂ, ಮಾಹಿತಿಗಳ ಸೃಷ್ಟಿ ಸಂಬಂಧದ ಸ್ವರೂಪವನ್ನು ಸ್ಪಷ್ಟಪಡಿಸುತ್ತಿದೆ. ಇದಕ್ಕೆ ಪೂರಕವಾಗಿ ಅರಸು ಅವರ ಕಾಲಘಟ್ಟದಲ್ಲಿ ಮಾಹಿತಿ ಮತ್ತು ಪ್ರಸಾರ ವಿಭಾಗಕ್ಕೆ ಬಳಸುತ್ತಿದ್ದ ಹಣದ ಬಳಕೆ ಹಿಂದೆಂದಿಗಿಂತ ಅಧಿಕವಾಗಿತ್ತು. ಇದು ೧೯೮೦ರವರೆಗೂ ಮುಂದುವರೆಯಿತು.

ಸರ್ಕಾರ ಮತ್ತು ಸೆನ್ಸಾರ್‌ಷಿಪ್ ಕುರಿತಂತೆ ಕರ್ನಾಟಕದ ಪ್ರಮುಖ ಪತ್ರಕರ್ತರ ವಿಚಾರಧಾರೆಗಳು ಹೀಗಿವೆ:

> ಜೂನ್ ೨೫ರ ಮಧ್ಯರಾತ್ರಿ ಕೇಂದ್ರ ಸರ್ಕಾರ ತುರ್ತುಪರಿಸ್ಥಿತಿ ಘೋಷಿಸುವ ಸಮಯಕ್ಕೆ ದೇಶದಾದ್ಯಂತ ಜೂನ್ ೨೬ರ ಪತ್ರಿಕೆಗಳು ಮುದ್ರಣಗೊಂಡಿದ್ದವು. ಆದ್ದರಿಂದ ಜೂನ್ ೨೬ರಂದು, ಪ್ರಜೆಗಳು ಮುಂಜಾನೆ ಆಕಾಶವಾಣಿಯಿಂದ ತುರ್ತುಪರಿಸ್ಥಿತಿ ಸುದ್ದಿ ತಿಳಿಯಬೇಕಾಯಿತು. ಬಹುತೇಕ ಪತ್ರಿಕೆಗಳು ಜೂನ್ ೨೭ರ ಸಂಚಿಕೆಯಲ್ಲಿ ತುರ್ತುಪರಿಸ್ಥಿತಿ ಸುದ್ದಿ, ಸೆನ್ಸಾರ್ ಆದದ್ದು, ಪ್ರಕಟಿಸಿದವು.

> ೨೭ರ ಸಂಚಿಕೆಗೆಂದು ಬರೆದ ಸಂಪಾದಕೀಯ ಪ್ರಕಟಣೆಗೆ ಸೆನ್ಸಾರ್ ಅಧಿಕಾರಿಗಳು ಅನುಮತಿ ನೀಡಲಿಲ್ಲ. ಅನೇಕ ಪತ್ರಿಕೆಗಳು ಅರ್ಥವಾಗದ ರೀತಿಯಲ್ಲಿ ಮುಸುಕಿನೊಳಗಿನ ಗುದ್ದು ಎಂಬಂತೆ ತುರ್ತುಪರಿಸ್ಥಿತಿ ಟೀಕಿಸಿ ಬರೆದವು. ದೇಶದಾದ್ಯಂತ ಎರಡೇ ಪತ್ರಿಕೆಗಳು ಸಂಪಾದಕೀಯ ಅಂಕಣವನ್ನು ಖಾಲಿ ಬಿಡುವ ಮೂಲಕ ನವೀನ ರೀತಿಯಲ್ಲಿ ಪ್ರತಿಭಟಿಸಿದವು(ರಾವ್ ೨೦೦೯: ೨೯೮).

ಮತ್ತು

> ಆಡಳಿತ ಕಾಂಗ್ರೆಸ್ ಪಕ್ಷದ ಭವಿತವ್ಯವನ್ನು ನಿರ್ಧರಿಸುವಂತಹ ಪ್ರಮುಖ ಘಟನೆ ಅದಾಗಿದ್ದರಿಂದ, ಸರ್ಕಾರದ ವಿರುದ್ಧ ಯಾವುದೆ ವರದಿಗಳು ಪ್ರಕಟವಾಗದಂತೆ ನೋಡಿಕೊಳ್ಳಲು ಸರ್ಕಾರದ ಸೆನ್ಸಾರ್‌ಷಿಪ್ ಅಧಿಕಾರಿಗಳು ಪಿ.ಸಿ.ಸಿ. ಸಭೆಯಲ್ಲೆ ಬೀಡುಬಿಟ್ಟಿದ್ದರು. ಬೆಂಗಳೂರು ಹಾಗೂ ಇತರೆಡೆಗಳ ಪತ್ರಿಕೆಗಳನ್ನು ಪ್ರತಿನಿಧಿಸುವ ಪತ್ರಕರ್ತರು, ಹೆಚ್ಚುಕಮ್ಮಿ ಸೆನ್ಸಾರ್‌ಷಿಪ್ ನಿಯಮಗಳನ್ನು ಅನುಸರಿಸಿಯೆ ಕಳುಹಿಸಿದ್ದ ಸುದ್ದಿ ಮರುದಿನ ಪತ್ರಿಕೆಗಳಲ್ಲಿ ಪ್ರಕಟವಾಯಿತು. ಎಲ್ಲ ಪತ್ರಿಕೆಗಳೂ ಅರಸರ ವಿಜಯವನ್ನು ಹೊಗಳಿಕೆಯ ಶಬ್ದಗಳಲ್ಲಿ ಬಣ್ಣಿಸಿದ್ದವು ... ನಾನು ಸತ್ಯವನ್ನು ಯಾವುದೆ ಅಡ್ಡಿಯಿಲ್ಲದೆ ಹೇಳಿಯೂ, ಯಾವುದೆ ತೊಂದರೆಗೊಳಗಾಗದೆ ಬಚಾಯಿಸಿಕೊಂಡೆನಾದರೂ, ನನ್ನ ಸಹದ್ಯೋಗಿ ಡೆಕ್ಕನ್‌ಹೆರಾಲ್ಡ್ ಪತ್ರಿಕೆಯ ಮುಖ್ಯ ವರದಿಗಾರರಾಗಿದ್ದ ಎಮ್.ಸಿ.ಪಿ.ಮೂರ್ತಿ ಅವರಿಗೆ ಅರಸರ ವಕ್ರದೃಷ್ಟಿಯಿಂದ ತಪ್ಪಿಸಿಕೊಳ್ಳಲು ಆಗಲಿಲ್ಲ. ಅರಸರ ರಾಜಕಾರಣ ಹಾಗೂ ಆಡಳಿತ ಶೈಲಿಯ ಬಗ್ಗೆ ಮೂರ್ತಿ ಅವರು ಮಾಡಿದ್ದ ಪ್ರತಿಕ್ರಿಯೆ ಅರಸುರವರನ್ನು ಕೆರಳಿಸಿತ್ತು. ಅರಸರು ಎಷ್ಟರ ಮಟ್ಟಿಗೆ ಕ್ರೋಧಗೊಂಡರೆಂದರೆ ಮೂರ್ತಿ ಅವರ ಪತ್ರಿಕಾ ಮಾನ್ಯತೆಯನ್ನೇ ರದ್ದುಗೊಳಿಸಿ, ಅವರು ಮುಖ್ಯಮಂತ್ರಿಗಳ ಪತ್ರಿಕಾಗೋಷ್ಠಿಗಳಿಗೆ ಬರದಂತೆ ಬಹಿಷ್ಕಾರ ಹಾಕಿದರು; ಅವರು ಪ್ರತಿನಿಧಿಸುತ್ತಿದ್ದ ಪತ್ರಿಕೆ ಕೂಡ ಮುಖ್ಯಮಂತ್ರಿಗಳ ಕೆಂಗಣ್ಣಿಗೆ ಗುರಿಯಾಯಿತು(ರಾಮಚಂದ್ರ ೨೦೦೦: ೧೩೫).

ಸರ್ಕಾರ ಮತ್ತು ಸೆನ್ಸಾರ್‌ಷಿಪ್ ಕುರಿತ ಕೆಲವು ಅನುಭವಗಳ ಸ್ಮರಣೆಗಳಿವು. ಇಂತಹ ಅಸಂಖ್ಯಾತ ಪ್ರತಿಭಟನೆಗಳು ಬೇರೆಬೇರೆ ಸ್ವರೂಪದಲ್ಲಿ ವ್ಯಕ್ತವಾಗುತ್ತಿದ್ದವು. ಈ ಪ್ರತಿಭಟನೆಗಳು ಪತ್ರಿಕೆಗಳು ಮತ್ತು ಪತ್ರಕರ್ತರ ಸೈದ್ಧಾಂತಿಕ ನಿಲುವಿನಿಂದ ಹೆಚ್ಚು ಪ್ರಭಾವಿತವಾಗಿರುತ್ತಿದ್ದವು. ಮೊದಲನೆಯದರಲ್ಲಿ, ರಂಗನಾಥ್‌ರಾವ್



ಪ್ರಜಾವಾಣಿ: ೧೯೭೫ ಜೂನ್ ೨೭ರ ಸಂಚಿಕೆಯ ಸಂಪಾದಕೀಯ ಪುಟ. ಇದರಲ್ಲಿ ಸಂಪಾದಕೀಯವನ್ನು ಖಾಲಿ ಬಿಡಲಾಗಿದೆ. ಸಂಪಾದಕರ 'ಛೂ ಬಾಣ' ಎಂಬ ಅಂಕಣದ ಸೆನ್ಸಾರ್ ಭಾಗವನ್ನು ಖಾಲಿ ಬಿಟ್ಟು ಪ್ರಶ್ನಾರ್ಥಕ ಚಿಹ್ನೆಗಳನ್ನು ಹಾಕಲಾಗಿದೆ. ಚಿತ್ರ ಸಂಖ್ಯೆ: ೩.೭

ಅವರು ೧೯೭೫ ಜೂನ್ ೨೭ರ ಸಂಚಿಕೆಯಲ್ಲಿ ತುರ್ತುಪರಿಸ್ಥಿತಿ ವಿರೋಧಿಸಿ ಸಂಪಾದಕೀಯವನ್ನು ಖಾಲಿ ಬಿಟ್ಟು ಪ್ರತಿಭಟಿಸಿರುವುದು ಎರಡೇ ಪತ್ರಿಕೆಗಳು(ಇಂಡಿಯನ್ ಎಕ್ಸ್‌ಪ್ರೆಸ್ ಮತ್ತು ಪ್ರಜಾವಾಣಿ) ಎಂದಿರುವುದು







ದೇಶದಾದ್ಯಂತ ಕಂಡು ಬರುತ್ತಿದ್ದ ಸರಕಾರದ ಭಿತ್ತಿ ಚಿತ್ರಗಳು. ಆಕರ: ಅಂತರ್‌ಜಾಲ. ಚಿತ್ರ ಸಂಖ್ಯೆ: ೩.೭

ಸರಿಯಲ್ಲ. ಹಲವು ಪತ್ರಿಕೆಗಳಲ್ಲಿ ಇಂಥ ಪ್ರತಿಭಟನೆಗಳನ್ನು ಕಾಣಬಹುದು. ಕರ್ನಾಟಕದ ಪ್ರಜಾವಾಣಿಯ ಸಮೂಹ ಪತ್ರಿಕೆಯಾದ ಇಂಗ್ಲಿಶ್ ದೈನಿಕ ಡೆಕ್ಕನ್ ಹೆರಾಲ್ಡ್‌ನಲ್ಲಿಯೂ ಸಂಪಾದಕೀಯವನ್ನು ಖಾಲಿ ಬಿಡಲಾಗಿದೆ. ಕೆಲವು ಸ್ಥಳೀಯ ಪತ್ರಿಕೆಗಳು ಸಂಪಾದಕೀಯವನ್ನು[೯೭] ಖಾಲಿ ಬಿಟ್ಟಿರುವುದಾಗಿ ತಿಳಿದುಬರುವುದು.

'ಪತ್ರಿಕೆಗಳಿಗೆ ಬಗ್ಗಲು ಹೇಳಿದರೆ ಮಲಗಿ ಕೊಂಡವು' ಎಂದು ಎಲ್.ಕೆ.ಅಡ್ವಾನಿ ಅವರು ತುರ್ತುಪರಿಸ್ಥಿತಿ ಕಾಲಘಟ್ಟದ ಪತ್ರಿಕೆಗಳ ಕುರಿತು ನೀಡಿರುವ ಹೇಳಿಕೆ ಆಗಿದೆ. ಇದರಲ್ಲಿ ಬಹುತೇಕ ಪತ್ರಿಕೆಗಳು ತುರ್ತುಪರಿಸ್ಥಿತಿ ವಿರುದ್ಧ ಪ್ರತಿಭಟಿಸಲಿಲ್ಲವೆಂಬ ಆಕ್ರೋಶವಿದೆ. ಇದಕ್ಕೆ ಪೂರಕವಾಗಿ ಅನೇಕ ಕಾರಣಗಳಿಂದ ಬಹುಪಾಲು ವೃತ್ತ ಪತ್ರಿಕೆಗಳು ತುರ್ತುಪರಿಸ್ಥಿತಿಯ ಶಾಸನ ಹಾಗೂ ಕೃತ್ಯಗಳಿಗೆ ನೇರ ಮತ್ತು ವಸ್ತುನಿಷ್ಠವಾಗಿ ವರದಿ ಮಾಡುತ್ತಿರಲ್ಲಿಲ್ಲ. ಪತ್ರಿಕೆಗಳ ಮಾಲೀಕರ ಲಾಭ ನಷ್ಟ ನೀತಿ, ಜೊತೆಗೆ ಪತ್ರಿಕೆಗಳನ್ನು ಮುಚ್ಚುವಂಥ ಪರಿಸ್ಥಿತಿಯನ್ನು ಸ್ವಾಗತಿಸುವ ಸ್ಥಿತಿಯಲ್ಲಿ ಮಾಲಿಕರಾಗಲಿ ಕಾರ್ಮಿಕರಾಗಲಿ ಇರಲಿಲ್ಲ ಎಂಬ ಅಭಿಮತವನ್ನು ಕಾಣಬಹುದಾಗಿದೆ. ಬಹುತೇಕ ಪತ್ರಿಕೆಗಳ ದೊಡ್ಡ ಆದಾಯ ಸರ್ಕಾರದ ಜಾಹೀರಾತುಗಳಾಗಿದ್ದವು. ಹಾಗೇ ಸರ್ಕಾರದ ಸುದ್ದಿ ಮೂಲವನ್ನೇ ಎಲ್ಲರೂ ಅವಲಂಬಿಸಬೇಕಾದ ಅನಿವಾರ್ಯತೆಯಿತ್ತು. ಇಂದಿರಾ ಗಾಂಧಿ ಅವರು ರಾಜಕಾರಣದ ಮೇಲೆ ಹಿಡಿತಹೊಂದಿದ್ದರಿಂದ ಪತ್ರಿಕೋದ್ಯಮವನ್ನು ನಿಯಂತ್ರಿಸುವುದು ಸಹಜವಾಗಿ ಕಷ್ಟವಾಗುತ್ತಿರಲಿಲ್ಲ ಮೊದಲಾದ ಚರ್ಚೆಗಳನ್ನು ಕಾಣಬಹುದು. ಇವುಗಳೊಡನೆ ಸೆನ್ಸಾರ್‌ಷಿಪ್ ಕುರಿತಂತೆ

> ಮಾಲಿಕ ವರ್ಗವೆಂದೂ ಪತ್ರಕರ್ತನನ್ನು ಟೇಕನ್ ಫಾರ್ ಗ್ರ್ಯಾಂಟೆಡ್(taken for granted) ಎಂದು ಭಾವಿಸಿ ನಡೆಸಿಕೊಳ್ಳಲಾಗುತ್ತದೆ. ಒಂದು ರೀತಿಯಲ್ಲಿ ತುರ್ತುಪರಿಸ್ಥಿತಿ ಅವಧಿಯಲ್ಲಿ ಜಾರಿಯಲ್ಲಿದ್ದ ಸೆನ್ಸಾರ್‌ಷಿಪ್ ವರದಿಗಾರರಿಗೆ ವರವಾಗಿಯೇ ಬಂದಿತ್ತು. ಏಕೆಂದರೆ ಯಾವುದೆ ಸ್ಪರ್ಧೆಗಳಲ್ಲಿ; ಯಾವುದೆ ವಿಶೇಷ ವರದಿ ಸಲ್ಲಿಸುವಂತಿರಲಿಲ್ಲ; ಮುಖ್ಯವಾಗಿ ಸುದ್ದಿ ಸಂಪಾದಕರು ನಿಮ್ಮ ಕುತ್ತಿಗೆ ಸವಾರಿ ಮಾಡಲು ಅವಕಾಶವಿರಲಿಲ್ಲ(ರಾಮಚಂದ್ರ ೨೦೦೦: ೧೪೧).

ಪತ್ರಿಕೋದ್ಯಮದೊಳಗಿನ ರಾಜಕಾರಣದ ಸ್ಥೂಲ ಪರಿಚಯವಾಗಿದೆ. ತುರ್ತುಪರಿಸ್ಥಿತಿಯ ವಿರುದ್ಧ ಹೋರಾಟ ಮಾಡಿದ ಪ್ರಮುಖ ವರ್ಗಗಳಲ್ಲಿ ಪತ್ರಿಕಾ ವಲಯವು ಒಂದು. ಸಮಕಾಲೀನ ಪತ್ರಿಕೋದ್ಯಮ ಮತ್ತು ರಾಜಕಾರಣದ ಪುನರ್ ವೀಕ್ಷಣೆ ಅನೇಕ ಹೊಸ ಆಯಾಮಗಳನ್ನು ಮುಂದಿಡುವುದು.

### ೩.೧.೧.೨.೧.೨. ಸಿನಿಮಾ ಮತ್ತು ವ್ಯಂಗ್ಯಚಿತ್ರಗಳು

ತುರ್ತುಪರಿಸ್ಥಿತಿಯಲ್ಲಿ ಸರ್ಕಾರದ ಸಿನಿಮಾರಂಗದ ಸೆನ್ಸಾರ್‌ಷಿಪ್ ನೀತಿ ಮತ್ತು ಸೆನ್ಸಾರ್‌ಷಿಪ್‌ನ್ನು ವಿರೋಧಿಸಿ ಪ್ರತಿಭಟಿಸಿದ ವ್ಯಂಗ್ಯಚಿತ್ರಗಳನ್ನು ಇಲ್ಲಿ ಚರ್ಚಿಸುವ ಉದ್ದೇಶ ಹೊಂದಿದೆ. ಸರ್ಕಾರ ಸೆನ್ಸಾರ್‌ಷಿಪ್ ಮೂಲಕ ಸಿನಿಮಾರಂಗವನ್ನು ನಿಯಂತ್ರಿಸಲು ತೆಗೆದುಕೊಂಡ ಕ್ರಮಗಳ ಪತ್ರಿಕಾ ವರದಿಯೊಂದು ಹೀಗಿದೆ:

> ದಿ ನ್ಯೂ ಬೋರ್ಡ್ ಆಫ ಫಿಲ್ಮ್ ಸೆನ್ಸಾರ್ಶಿಪ್ ನನಿಹದಲ್ಲೇ ಪರಿಚಯಿಸುವ ಸಿನಿಮಾ ಸೆನ್ಸಾರಶಿಪ್ ಲಕ್ಷಣಗಳು ತೀವ್ರವಾದ ಬದಲಾವಣೆಗೆ ಒಳಗಾಗುತ್ತವೆ ... ಸಿನಿಮಾಗಳನ್ನು ರವಾನಿಸಲು ಸೆನ್ಸಾರ್‌ಷಿಪ್ ಬೋರ್ಡಿನಿಂದ ಪ್ರತ್ಯೇಕ ಪ್ರಮಾಣಪತ್ರ ಅಗತ್ಯ. ಸಿನಿಮಾಗಳು ತಪ್ಪಾದ, ವಿಧ್ವಂಸಕವಾದ ಅಥವಾ ತಪ್ಪುದಾರಿಗೆಳೆಯುವಂತಹ ಸಾಮಾಜಿಕ, ರಾಜಕೀಯ ಸಂಸ್ಕೃತಿಗಳ ಬಿಂಬವನ್ನು ಬಿಂಬಿಸುತ್ತಿವೆ. ಇಂತಹ ಸಿನಿಮಾಗಳಿಗೆ ದೇಶದಿಂದ ಹೊರಗೆ ರವಾನಿಸಲು ಪ್ರಮಾಣಪತ್ರ ನೀಡಲಾಗುವುದಿಲ್ಲ. ... ಹೊಸ ವ್ಯವಸ್ಥೆಯ ಪ್ರಕಾರ ಸಿನಿಮಾದ ಕಡೆಯ ಆವೃತ್ತಿಯನ್ನು ಸಂಪೂರ್ಣ ಸಮಿತಿಯು ನೋಡುತ್ತದೆ(ದಿ ಫ್ರೀ ಪ್ರೆಸ್ ಜರ್ನಲ್ ೧೯೭೫ ಜುಲೈ ೨೧).

ಮತ್ತು

> ಆಂಧ್ರ ಪ್ರದೇಶದ ಸರ್ಕಾರವು ಕೇಂದ್ರ ಸಿನಿಮಾ ಸೆನ್ಸಾರ್ಶಿಪ್ ಬೋರ್ಡ್‌ಗೆ ಇಂಗ್ಲಿಶಿನ 'ರಷ್ಯನ್ಸ್ ಆರ್ ಕಮಿಂಗ್' ಸಿನಿಮಾವನ್ನು ನಿಷೇಧಿಸಲು ಮಾಹಿತಿ ಸಂಪನ್ಮೂಲ ಸಚಿವರಾದ ಪಿಡತಾಳ ರಂಗರೆಡ್ಡಿ ಶಾಸಕಾಂಗ ಸಭೆಯಲ್ಲಿ ಸಲಹೆ ನೀಡಿದ್ದಾರೆ(ದ ಟೈಮ್ಸ್ ಆಫ್ ಇಂಡಿಯಾ ೧೯೭೬ ಮಾರ್ಚ್ ೨೦).

ತುರ್ತುಪರಿಸ್ಥಿತಿ ಕಾಲದ ಸರ್ಕಾರ ಮತ್ತು ಸೆನ್ಸಾರ್‌ಷಿಪ್‌ನ್ನು ತೀವ್ರವಾಗಿ ವಿರೋಧಿಸಿ, ಸೆನ್ಸಾರ್‌ಷಿಪ್ ಸಮಸ್ಯೆಗಳಿಂದ ನರಳಿದ ಅನೇಕ ಸಿನಿಮಾಗಳನ್ನು ನೋಡಬಹುದು. ಅವುಗಳಿಗಿಂತ ಆ ಸಮಯದಲ್ಲಿ ಬಂದ ವಾಣಿಜ್ಯ ಚಲನಚಿತ್ರಗಳಲ್ಲಿ ಪ್ರತಿಭಟನಾ ಧ್ವನಿ ಸಂಖ್ಯಾವಾರು ಹೆಚ್ಚಿದೆ. ಈ ಕುರಿತು ಮುಂದಿನ ಭಾಗದಲ್ಲಿ ಚರ್ಚಿಸಲಾಗುತ್ತದೆ.

ವ್ಯಂಗ್ಯಚಿತ್ರಗಳು ಸಾಮಾನ್ಯವಾಗಿ ಪತ್ರಿಕಾ ಮಾಧ್ಯಮದ ಭಾಗವಾಗಿ ಗುರುತಿಸಲ್ಪಡುವುವು. ಆದರೆ ಅವು ದೃಶ್ಯ ಮಾಧ್ಯಮದ ಮೂಲಕ ಪ್ರಭಾವಿಸುವುದರಿಂದ ಇಲ್ಲಿ ದೃಶ್ಯ ಮಾಧ್ಯಮವಾಗಿ ಪರಿಗಣಿಸಲಾಗಿದೆ. ಸೆನ್ಸಾರ್‌ಷಿಪ್ ಕುರಿತ ವಸ್ತುವಿಷಯ ಹೊಂದಿರುವ ಕೆಲವು ವ್ಯಂಗ್ಯಚಿತ್ರಗಳನ್ನು ಈ ಕೆಳಗೆ ಚರ್ಚಿಸಲಾಗಿದೆ.




(ಚಿತ್ರ-೨)




(ಚಿತ್ರ-೨ಎ)




(ಚಿತ್ರ-೨ಬಿ)

ಇವು ಇಂಡಿಯನ್ ಎಕ್ಸ್‌ಪ್ರೆಸ್‌ನಲ್ಲಿ ಕ್ರಮವಾಗಿ 1975 ಜೂನ್ 28, 1975 ಜುಲೈ 4, 1977 ಜನವರಿ 13ರಂದು ಪ್ರಕಟವಾಗಿದೆ. ವ್ಯಂಗ್ಯ ಚಿತ್ರಕಾರ: ಅಬು ಅಬ್ರಹಾಂ. ಚಿತ್ರ ಸಂಖ್ಯೆ: ೩.೮.

ಚಿತ್ರ-೨ರಲ್ಲಿ ತುರ್ತುಪರಿಸ್ಥಿತಿ ಮತ್ತು ಸೆನ್ಸಾರ್‌ಷಿಪ್‌ನ್ನು ಬಾಯಿ ಮುಚ್ಚಿಕೊಳ್ಳುವ ಮೂಲಕ ವಾಕ್ ಸ್ವಾತಂತ್ರ್ಯವಿಲ್ಲವೆಂದು ಪ್ರತಿಭಟಿಸಲಾಗಿದೆ. ಚಿತ್ರ-೨ಎನಲ್ಲಿ ನಮಗೆ ಉತ್ತಮ ಹಾಸ್ಯ ಪ್ರಜ್ಞೆ(ಸೆನ್ಸ್ ಆಫ್ ಹ್ಯೂಮರ್) ಇದೆ ಎನ್ನುವಂತೆ ಕೈಯಲ್ಲಿ ಸ್ಮೈಲ್ ಎಂಬ ಫಲಕ ಹಿಡಿದ ವ್ಯಕ್ತಿಗಳಿದ್ದಾರೆ. ಕೆಳಗೆ ಉತ್ತಮ ಸೆನ್ಸಾರ್‌ಹ್ಯೂಮರ್ ಇದೆ ಎಂದು ಪ್ರತಿಭಟಿಸಲಾಗಿದೆ. ಸರ್ಕಾರ ಗಾಳಿಸುದ್ದಿಗಳಿಗೆ ಕಿವಿಗೊಡಬಾರದು ಎಂಬ ವರದಿಗಳ ನೆಲೆಯಲ್ಲಿ ಚಿತ್ರ-೨ಎ ಹಾಗೂ ಚಿತ್ರ-೨ಬಿ ರೂಪುಗೊಂಡಂತಿದೆ. ಅಬೂಸ್ ಪ್ರೈವೇಟ್‌ವೀವ್ ಎಂಬ ಅಂತರ್ ಜಾಲದ ಬ್ಲಾಗ್‌ವೊಂದರಿಂದ ಈ ವ್ಯಂಗ್ಯಚಿತ್ರಗಳನ್ನು ನಕಲು ಮಾಡಿದೆ. ಭಾರತದ ಸೆನ್ಸಾರ್‌ಷಿಪ್ ಮತ್ತು ರಾಜಕಾರಣ ಕುರಿತ ಗ್ರಹಿಕೆಗಳು ವಿದೇಶಿ ವ್ಯಂಗ್ಯಚಿತ್ರಗಳಲ್ಲಿ ಪಡೆದುಕೊಂಡ ಸ್ವರೂಪ ಭಿನ್ನವಾಗಿದೆ. ಇವುಗಳ ಅವಲೋಕನವು ಸಮಕಾಲೀನ ಭಾರತ ವಿದೇಶಗಳಿಗೆ ಕಂಡುಬಂದ ಬಗೆಯನ್ನು ತೆರೆದಿಡುವುದು. ಚಿತ್ರ-೩ರಲ್ಲಿ ಮುಳ್ಳಿನ ಮಂಚದ ಮಧ್ಯದಲ್ಲಿ ಪತ್ರಿಕೋದ್ಯಮವನ್ನು ತಳ್ಳಿ, ಅದರ ಮೇಲೆ ಇಂದಿರಾ ಗಾಂಧಿ ಅವರು ಕುಳಿತಿದ್ದಾರೆ. ಇದರಲ್ಲಿ ಪತ್ರಿಕೆಗಳ ಸುದ್ದಿ ಕತ್ತರಿಸುತ್ತಿರುವುದು ಪೂರ್ವ



(ಚಿತ್ರ-೩)




(ಚಿತ್ರ-೩ಎ)

ಚಿತ್ರ ಸಂಖ್ಯೆ: ೩.೯

ಸೆನ್ಸಾರ್‌ಷಿಪ್ ಜಾರಿಯನ್ನು ವಿರೋಧಿಸುತ್ತಿದೆ. ಕೆಳಗೆ ಇಂದಿರಾಳ ಪತ್ರಿಕೋದ್ಯಮ ಎಂಬ ವ್ಯಂಗ್ಯ ಪತ್ರಿಕಾ ಸ್ವಾತಂತ್ರ್ಯದ ನೆಲೆಯಲ್ಲಿ ರೂಪಿತವಾಗಿದೆ. ದಿ ಪ್ರೆಸ್ ಇನ್ ಫೆಟ್ಟರ್ಸ್(ಸಂಕೋಲೆಯಲ್ಲಿ ಪತ್ರಿಕೆಗಳು) ಶೀರ್ಷಿಕೆಯ ಚಿತ್ರ-೩ಎನಲ್ಲಿ ವ್ಯಕ್ತಿಯೋರ್ವನನ್ನು ಸಂಕೋಲೆಯಿಂದ ಸುತ್ತಲಾಗಿದ್ದು, ದೊಡ್ಡ ಗುಂಡುಕಲ್ಲನ್ನು ಹಿಡಿದು ಕೊಂಡಿರುವ ಇಂದಿರಾ ಗಾಂಧಿ ಅವರನ್ನು ಕಾಣಬಹುದು. ನಾನೇನೋ ಮರೆತಿದ್ದೆನಲ್ಲ ಎಂದು ಕೊಳ್ಳುತ್ತ ಕೈಯಲ್ಲಿದ್ದ ದಪ್ಪ ಗುಂಡನ್ನು ತೆಗೆದು ವ್ಯಕ್ತಿಯ ತಲೆಯ ಮೇಲೆ ಹಾಕಿದ್ದಾರೆ. ಸಂಕೋಲೆಯಿಂದ ಜಿಗಿದಿರುವ ವ್ಯಕ್ತಿ ತಲೆಕೆಳಗಿದ್ದಾನೆ. ಸಂಕೋಲೆಯಿಂದ ಸುತ್ತಿರುವ ವ್ಯಕ್ತಿ ಇಲ್ಲಿ ಪತ್ರಿಕೋದ್ಯಮದ ಸಂಕೇತ. ಭಾರತೀಯ

ವ್ಯಂಗ್ಯಚಿತ್ರಗಳಲ್ಲಿ ಮೌನವಾಗಿ ಯಾವುದೆ ರೀತಿಯ ಆಯುಧಗಳನ್ನು ತೋರಿಸದೆ ಮುಖಭಾವ ಹಾಗೂ ಕೆಲವು ಶಬ್ದಗಳ ಮೂಲಕ ಪ್ರತಿಭಟನೆ ಅಭಿವ್ಯಕ್ತವಾಗಿರುವುದು ಗಮನಾರ್ಹ. ವಿದೇಶಿ ವ್ಯಂಗ್ಯಚಿತ್ರಗಳಲ್ಲಿ ಮಾರಕ ಅಸ್ತ್ರಗಳ ಮೂಲಕ ಪತ್ರಿಕೋದ್ಯಮವನ್ನು ಬಿಗಿದು ಹಿಂಸಿಸುತ್ತಿರುವುದು ಕಂಡುಬರುವುದು. ವಿದೇಶಿ ವ್ಯಂಗ್ಯಚಿತ್ರಗಳು ಪತ್ರಿಕಾ ಸ್ವಾತಂತ್ರ್ಯದ ನೆಲೆಯಲ್ಲಿ ಮಾತ್ರ ಕಂಡುಬಂದರೆ ಭಾರತೀಯ ವ್ಯಂಗ್ಯಚಿತ್ರಗಳಲ್ಲಿ ಎಲ್ಲ ರೀತಿ ಅಭಿವ್ಯಕ್ತಿ ಸ್ವಾತಂತ್ರ್ಯದ ನಿಟ್ಟಿನಲ್ಲಿ ವ್ಯಕ್ತವಾಗಿದೆ.

**೩.೧.೧.೨.೨. ಸಮಾಜ ಮತ್ತು ಪ್ರತಿಭಟನೆ**

ಪ್ರತಿಭಟನೆಯು ಶೋಷಣೆ ಮತ್ತು ಸ್ವಾತಂತ್ರ್ಯದ ಸಂಕೇತ. ಯಾವುದೇ ಪ್ರತಿಭಟನೆಯು ಒತ್ತಾಯ ಪೂರ್ವಕವಾಗಿ ಉಂಟಾಗುವ ವ್ಯವಸ್ಥೆಯನ್ನು ವಿರೋಧಿಸುತ್ತಲೇ ಸ್ವಾತಂತ್ರ್ಯ ಮನೋಭಾವವನ್ನು ವ್ಯಕ್ತ ಪಡಿಸುವುದು. ತುರ್ತುಪರಿಸ್ಥಿತಿಯನ್ನು ವಿರೋಧಿಸಿ ಸಮಾಜದಲ್ಲಿ ಕಂಡುಬಂದ ಸಂವಿಧಾನಾತ್ಮಕ ಪ್ರತಿಭಟನೆಗಳ ಸ್ವರೂಪವನ್ನು ಸಮಾಜದ ಪ್ರಮುಖ ಸಮೂಹ ಮಾಧ್ಯಮಗಳಾದ ಪತ್ರಿಕೆ, ಸಾಹಿತ್ಯ ಮತ್ತು ದೃಶ್ಯ ಮಾಧ್ಯಮಗಳ ಮೂಲಕ ಚರ್ಚಿಸಲು ಪ್ರಯತ್ನ ಮಾಡಲಾಗಿದೆ. ಪ್ರತಿಭಟನೆಗಳ ಸ್ವರೂಪದಲ್ಲಿ ಸಮೂಹ ಮಾಧ್ಯಮಗಳ ನಡುವಿನ ಅಂತರ ಕೆಲವೊಮ್ಮೆ ಕಣ್ಮರೆಯಾಗುವುದರಿಂದ ಯಥಾವತ್ತಾಗಿ ಇಂಥದೇ ಮಾಧ್ಯಮವೆಂದು ಪ್ರತ್ಯೇಕಿಸುವುದು ಕಷ್ಟವಾಗಿದೆ.

**೩.೧.೧.೨.೨.೧. ಪತ್ರಿಕಾರಂಗದಲ್ಲಿ ಪ್ರತಿಭಟನೆ**

ಆಂತರಿಕ ತುರ್ತುಪರಿಸ್ಥಿತಿಗೆ ಪತ್ರಿಕಾರಂಗದಲ್ಲಿ ಕಂಡುಬಂದ ಪ್ರತಿಭಟನೆಗಳ ಸ್ವರೂಪವನ್ನು ಇಲ್ಲಿ ಪರಾಮರ್ಶಿಸಲು ಪ್ರಯತ್ನಿಸಲಾಗಿದೆ. ೧೯೭೫ ಜೂನ್ ೨೭ರ ಸಂಚಿಕೆಯಲ್ಲಿ ತುರ್ತುಪರಿಸ್ಥಿತಿ ವಿರುದ್ಧ ನೇರ ಪ್ರತಿಭಟನೆಗಳು ಅತ್ಯಧಿಕವಾಗಿ ಕಂಡುಬರುವುವು. ಈ ದಿಸೆಯಲ್ಲಿ ಇಂಡಿಯನ್ ಎಕ್ಸ್‌ಪ್ರೆಸ್‌ನ ಸಂಪಾದಕೀಯ ಖಾಲಿ ಬಿಡಲಾಗಿತ್ತು ಎಂಬ ಮಾತಿನಿಂದಲೇ ತುರ್ತುಪರಿಸ್ಥಿತಿ ಕಾಲಘಟ್ಟದ ಪತ್ರಿಕೆಗಳ ಕುರಿತ ನೆನಪುಗಳು ಗರಿಗೆದರಿಕೊಳ್ಳುವುದನ್ನು ನೋಡಬಹುದು. ಖಾಲಿಬಿಟ್ಟ ಸ್ಥಳದ ಪ್ರಭಾವ ಅತ್ಯಂತ ಪರಿಣಾಮಕಾರಿ ಆಗಿತ್ತು. 'ಪ್ರತಿಭಟನೆಯಲ್ಲಿ ಬಿಳಿ ಜಾಗ ಮತ್ತು ಬುದ್ಧಿವಂತಿಕೆಯ ವಿನ್ಯಾಸ' ಪ್ರತಿಭಟನೆಯ ತಂತ್ರವಾಗಿತ್ತು. ಈ ಸಂಬಂಧ

> ಸೆನ್ಸಾರ್ ಅಧಿಕಾರಿಗಳು ತುರ್ತುಪರಿಸ್ಥಿತಿ ಪರ ಮತ್ತು ವಿರೋಧವಾದ ನಿಯತಕಾಲಿಕೆಗಳನ್ನು ಕಾನೂನಿನ ಚೌಕಟ್ಟಿನಲ್ಲಿದೆಯೆ ಎಂದು ಪರೀಕ್ಷಿಸುತ್ತಿದ್ದರು. ತುರ್ತುಪರಿಸ್ಥಿತಿ ವಿರೋಧಿ ನಿಯತಕಾಲಿಕೆಗಳಲ್ಲಿ ಕೆಲವು ಮಹತ್ವದ ವಿಚಾರಗಳನ್ನು ಕಡೆಗಣಿಸುವಂತೆ ಮತ್ತು ಸೆನ್ಸಾರ್ ಬೋರ್ಡ್‌ನ ಅಭಿಪ್ರಾಯಗಳಿಗೆ ಸಹಕಾರಿಯಾಗುವ ವಿಚಾರಗಳನ್ನು ಸೇರಿಸಲು ಬಲವಂತ ಮಾಡಲಾಗುತ್ತಿತ್ತು. ಅದರಲ್ಲೂ, ಇಂತಹ ಬದಲಾವಣೆಗಳನ್ನು ಹೆಚ್ಚಾಗಿ ಬೇಗ್ಗೆ ಎರಡು ಘಂಟೆ ಹೊತ್ತಿಗೆ ಮಾಡಲಾಗುತ್ತಿತ್ತು. ಬೆಳಗಿನ ಪತ್ರಿಕೆಗಳಾದ 'ದಿನಮಣಿ', 'ಮುರಸೊಲಿ', ಮತ್ತು 'ವಿದ್ಯುತ್‌ಲತ' ಅಧಿಕ ತೊಂದರೆ ಅನುಭವಿಸಬೇಕಾಯಿತು. ಈ ದೈನಿಕಗಳು ನಿಜ ಹೇಳುವೆಡೆ ಖಾಲಿಬಿಟ್ಟು ಸಾಂಕೇತಿಕವಾಗಿ ಪ್ರತಿಭಟಿಸುತ್ತಿದ್ದವು. ದಿನ ಪತ್ರಿಕೆಗಳಲ್ಲಿ ಬಿಳಿ ಜಾಗವು ಸುದ್ದಿಗಿಂತ ಹೆಚ್ಚು ಮಹತ್ವವನ್ನು ಪಡೆದು ಕೊಳ್ಳುತ್ತಿತ್ತು ... ಅದೆ ಸಮಯದಲ್ಲಿ ಪತ್ರಿಕೆಗಳಲ್ಲಿ ಎರಡು ಭಿನ್ನವಾದ ಮತ್ತು ವಿರೋಧಾಭಾಸವಾದ ಸುದ್ದಿಗಳನ್ನು ಪಕ್ಕಪಕ್ಕದಲ್ಲೆ ಬರುವಂತೆ ವಿನ್ಯಾಸ ಮಾಡುತ್ತಿದ್ದರು. ಇಂತಹ ಮಂಡನೆಗಳು ಸಹ ಹೆಚ್ಚು ಪ್ರಯತ್ನವಿಲ್ಲದೆ ಸುಲಭವಾಗಿ ಓದುಗರನ್ನು ಮುಟ್ಟಲು ಸಾಧ್ಯವಾಗುತ್ತಿತ್ತು. ಆದರೆ ಸೆನ್ಸಾರ್ ಅಧಿಕಾರಿಗಳ ಕಣ್ಣಿಗೆ ಪ್ರಕಟಣೆಗೆ ಮುನ್ನ ಸಲ್ಲಿಸಿದಾಗ ಇವುಗಳ ಗೂಡತೆ ಅರಿವಾಗಲಿಲ್ಲ, ಆದರೆ ಇದನ್ನು ಅತ್ಯಂತ ಸುಲಭವಾಗಿ ಓದುಗರು ಅರ್ಥಮಾಡಿ ಕೊಳ್ಳುತಿದ್ದರು(ಸುಬ್ರಮಣಿ ೨೦೦೯: ೩೦)

ಎಂದು ವಿಶ್ಲೇಷಿಸುವರು. ಈ ತಂತ್ರದ ಬಳಕೆ ಅನೇಕ ಪತ್ರಿಕೆಗಳಲ್ಲಿ ಕಂಡುಬರುವುದು.

೧೯೭೫ರ ಜೂನ್ ೨೭ರಂದು ಇಂಡಿಯನ್ ಎಕ್ಸ್‌ಪ್ರೆಸ್ ಮತ್ತು ಡೆಕ್ಕನ್ ಹೆರಾಲ್ಡ್ ಸಂಪಾದಕೀಯ ವನ್ನು ಖಾಲಿ ಬಿಟ್ಟು ಪ್ರತಿಭಟನೆ ವ್ಯಕ್ತಪಡಿಸಿದ್ದವು. ತುರ್ತುಪರಿಸ್ಥಿತಿ ಘೋಷಣೆ ಆದ ಎರಡು ಮೂರು ದಿನಗಳವರೆಗೆ ಇಂಡಿಯನ್ ಎಕ್ಸ್‌ಪ್ರೆಸ್‌ನಲ್ಲಿ(ಬೆಂಗಳೂರು ಆವೃತ್ತಿ) ಇದು ಮುಂದುವರೆದಿರುವುದನ್ನು ಕಾಣಬಹುದು. ನಂತರ ಸಂಪಾದಕೀಯ ಖಾಲಿ ಬಿಡುವುದನ್ನು ಸೆನ್ಸಾರ್ ಮೂಲಕ ನಿಯಂತ್ರಿಸಲಾಯಿತು. ತುರ್ತುಪರಿಸ್ಥಿತಿಯ ಸೆನ್ಸಾರ್‌ಶಿಪ್ ನಿಯಮಗಳು ಎಲ್ಲೆಡೆ ಏಕರೂಪವಾಗಿರದೇ ರಾಜ್ಯದಿಂದ ರಾಜ್ಯಕ್ಕೆ,



೧೯೭೫ರ ಜೂನ್ ೨೭ರ, ಬೆಂಗಳೂರು ಆವೃತ್ತಿ. ಮುಖ ಪುಟ ಮತ್ತು ಸಂಪಾದಕೀಯ ಪುಟ. ಚಿತ್ರ ಸಂಖ್ಯೆ ೩.೧೧೦.



೧೯೭೫ರ ಜೂನ್ ೨೭ರ, ಬೆಂಗಳೂರು ಆವೃತ್ತಿ. ಮುಖ ಪುಟ ಮತ್ತು ಸಂಪಾದಕೀಯ ಪುಟ. ಚಿತ್ರ ಸಂಖ್ಯೆ ೩.೧೧೧.



೧೯೭೫ರ ಜೂನ್ ೨೬ರ ಪ್ರಕಟವಾದ ಮದ್ರಾಸ್ ಆವೃತ್ತಿ ಮತ್ತು ಹೈದ್ರಾಬಾದ್ ಆವೃತ್ತಿಗಳು. ಚಿತ್ರ ಸಂಖ್ಯೆ ೩.೧೧೨.

ಭಿನ್ನವಾಗಿದ್ದವು. ಮೇಲಿನ ಇಂಡಿಯನ್ ಎಕ್ಸ್‌ಪ್ರೆಸ್(ಮದ್ರಾಸ್) ಮತ್ತು ಇಂಡಿಯನ್ ಹೆರಾಲ್ಡ್(ಹೈದರಾಬಾದ್) ಆವೃತ್ತಿಗಳು ೨೬ರಂದೇ ಪ್ರಕಟಗೊಂಡಿವೆ. ಇಂಡಿಯನ್ ಎಕ್ಸ್‌ಪ್ರೆಸ್‌ನ ಮುಖಪುಟದಲ್ಲಿ ತುರ್ತುಪರಿಸ್ಥಿತಿ ಘೋಷಣೆ– ಜೆ.ಪಿ., ಮೋರಾರ್ಜಿ ಮತ್ತಿತರ ವಿರೋಧ ಪಕ್ಷದ ನಾಯಕರನ್ನು ಬಂಧಿಸಿರುವ ವಿಚಾರವಿದೆ. ರಾಷ್ಟ್ರಪತಿಯ ಸಣ್ಣ ಛಾಯಾಚಿತ್ರವನ್ನು 'ಎಮರ್ಜೆನ್ಸಿ' ಎಂಬ ಪದದ ಕೆಳಗೆ, 'ಪ್ರೊಕ್ಲೈಮಡ್' ಎಂಬ ಭಾಗದಲ್ಲಿ ಜೆ.ಪಿ.ಯ ದೊಡ್ಡ ಛಾಯಾಚಿತ್ರವನ್ನು ಮುದ್ರಿಸಿದೆ. ಇಂಡಿಯನ್ ಹೆರಾಲ್ಡ್ ಪತ್ರಿಕೆಯ ಮೇಲೆ 'ಸ್ಪೆಷಲ್ ಸಪ್ಲಿಮೆಂಟ್' ಎಂದು ಮುದ್ರಿತವಾಗಿದೆ. ಆಂತರಿಕ ತುರ್ತುಪರಿಸ್ಥಿತಿ ಜಾರಿಯ ವಿಚಾರ ತಿಳಿಯುವ ಹೊತ್ತಿಗೆ ಪತ್ರಿಕೆ ಮುದ್ರಣವಾಗಿದ್ದರಿಂದ ಮತ್ತೊಂದು ವಿಶೇಷ ಜೋಡಣೆಯಾಗಿ ಮುದ್ರಿಸಿರುವ ಸಾಧ್ಯತೆಯಿದೆ. ಜೊತೆಗೆ ವ್ಯಂಗ್ಯವಾಗಿ ಸಮಕಾಲೀನ ಸಂಕೀರ್ಣ ರಾಜಕಾರಣದಲ್ಲಿ ತುರ್ತುಪರಿಸ್ಥಿತಿ 'ವಿಶೇಷ ಜೋಡಣೆ' ಎಂಬ ಅರ್ಥ ಕಂಡುಬರುವುದು. ಈ ಪ್ರತಿಭಟನೆಗಳು ಸ್ವಾತಂತ್ರ್ಯ ನಂತರದಲ್ಲಿ ಭಾರತೀಯರಿಗೆ ವಿಶೇಷ

ಅನುಭವವಾಗಿತ್ತು. ತುರ್ತುಪರಿಸ್ಥಿತಿ ಕೊನೆಗೊಳ್ಳುವವರೆಗೆ ಸೆನ್ಸಾರ್ ಆದ ಸ್ಥಳದಲ್ಲಿ ಖಾಲಿಬಿಟ್ಟು ಪ್ರತಿಭಟಿಸಲು ಅವಕಾಶವಿರಲಿಲ್ಲ. ಹಾಗಾಗಿ ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಪತ್ರಿಕೆಗಳಲ್ಲಿ ಖಾಲಿ ಬಿಡುವ ಅವಕಾಶವಿದ್ದಿತೆಂದು ಸಮಕಾಲೀನ ಪರಿಸ್ಥಿತಿಯೊಂದಿಗೆ ಸಮೀಕರಿಸುವುದನ್ನು ನೋಡಬಹುದು.

ಪತ್ರಿಕೆಯಲ್ಲಿ ಸುದ್ದಿಗಳನ್ನು ವಿರೋಧಭಾಸ ಕಾಣುವಂತೆ ವಿನ್ಯಾಸ ಮಾಡುವ ತಂತ್ರವನ್ನು ಪ್ರತಿಭಟನಾ ನೆಲೆಯಲ್ಲಿ ತುರ್ತುಪರಿಸ್ಥಿತಿ ಕೊನೆಗೊಳ್ಳುವವರೆಗೂ ನೋಡಬಹುದು. ಈ ವಿನ್ಯಾಸವು ಮುದ್ರಿತಗೊಂಡ ಸುದ್ದಿಗಳು ಸೆನ್ಸಾರ್‌ಗೊಳಪಟ್ಟಿವೆ ಎಂದು ಅರಿವಾಗಲು ಓದುಗರಿಗೆ ಕಷ್ಟವಾಗುತ್ತಿರಲಿಲ್ಲ. ಉದಾಹರಣೆಗೆ, ೧೯೭೫ರ ಜೂನ್ ೨೬ ಮತ್ತು ೨೭ರ ಸಂಚಿಕೆಗಳ ಮುಖಪುಟ ಹಾಗೂ ಸಂಪಾದಕೀಯ ಪುಟಗಳನ್ನು ಕಾಣಬಹುದು. ಈ ತರಹದ ತೀವ್ರ ಪ್ರಮಾಣದ ಪ್ರತಿಭಟನೆಗಳು ಅತ್ಯಧಿಕವಾಗಿ ಕಂಡುಬರುವುದು ಈ ಸಂಚಿಕೆಗಳಲ್ಲೇ ಆಗಿದೆ. ಜೂನ್ ೨೭ರಂದು ಪ್ರಕಟವಾದ ಕನ್ನಡಪ್ರಭ ಮತ್ತು ಸಂಯುಕ್ತ ಕರ್ನಾಟಕದಲ್ಲಿ ಕಂಡುಬರುವ ಸುದ್ದಿಗಳ ವಿನ್ಯಾಸದಲ್ಲಿನ ವಿರೋಧಭಾಸಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಕನ್ನಡಪ್ರಭದಲ್ಲಿ(ಚಿತ್ರ-೪) "ಇಂದಿರಾ ಗಾಂಧಿ ಆತಂಕ ಅನಗತ್ಯ" ಎಂಬ ವರದಿ ಪಕ್ಕದಲ್ಲೇ, "ರಾಷ್ಟ್ರದಾದ್ಯಂತ ಶಾಂತ ಸ್ಥಿತಿ" ಎಂಬ ವರದಿಯಿದೆ. ಇದರ ಕೆಳಗೆ ಮುಖ್ಯಮಂತ್ರಿ ಅರಸು ಅವರು "ತುರ್ತುಪರಿಸ್ಥಿತಿ ಸಕಾಲದಲ್ಲಿ ಘೋಷಣೆ ಆಗಿದೆ" ಎಂಬ ಹೇಳಿಕೆಯನ್ನು ವರದಿ ಮಾಡಲಾಗಿದೆ. ಈ ವಿರೋಧಾಭಾಸಗಳು ವಾಸ್ತವತೆ ಪತ್ರಿಕಾ ವರದಿಗಳಿಗಿಂತ ಭಿನ್ನ ಎಂಬುದು ಓದುಗರಿಗೆ ಅರಿವಾಗುವಂತಿದೆ. ಸಂಯುಕ್ತ ಕರ್ನಾಟಕದಲ್ಲಿ(ಚಿತ್ರ-೪ಎ) "ದೇಶದಲ್ಲಿ ಗಂಡಾಂತರ ಸ್ಥಿತಿ" ಎಂಬ ದಪ್ಪ ಅಕ್ಷರದ ಕೆಳಗೆ ಇಂದಿರಾ ಗಾಂಧಿ ಅವರ ನಗುಮುಖದ ದೊಡ್ಡ ಛಾಯಾಚಿತ್ರವಿದೆ.




೧೯೭೫ ಜೂನ್ ೨೭ರ ಕನ್ನಡಪ್ರಭ ಮತ್ತು ಸಂಯುಕ್ತ ಕರ್ನಾಟಕದ ಮುಖ ಪುಟ. ಚಿತ್ರ ಸಂಖ್ಯೆ ೩.೧೩.
(ಚಿತ್ರ-೪) (ಚಿತ್ರ-೪ಎ)

ಬಲಭಾಗದಲ್ಲಿ "ರಾಷ್ಟ್ರಪತಿಗಳ ಘೋಷಣೆ ಆಂತರಿಕ ಭದ್ರತೆಗೆ ಮುಂಜಾಗ್ರತೆ" ಮತ್ತು ಎಡಭಾಗದಲ್ಲಿ "ಎಲ್ಲೆಡೆ ಶಾಂತ ವಾತಾವರಣ" ಎಂಬುದು ಗೆರೆ ಎಳೆಯಲ್ಪಟ್ಟಿದ್ದು ಸಣ್ಣಕ್ಷರದಲ್ಲಿದೆ. "೬೭೮ ಜನರ ಬಂಧನ" ಎಂಬ ದಪ್ಪ ಅಕ್ಷರದ ವರದಿಯಿದೆ. "ಶಿಷ್ಟ ನಾಗರಿಕರಿಗೆ ಯಾವ ಭೀತಿ ಇಲ್ಲ" ಎಂಬ ವರದಿಯು ಇಂದಿರಾ ಗಾಂಧಿ ಅವರ ಚಿತ್ರದ ಕೆಳಗಿದೆ. "ಮಾರಣಹೋಮ" ಎಂಬ ಶೀರ್ಷಿಕೆ ಅಡಿ ಉಗಾಂಡದಲ್ಲಿನ ನಿರಂಕುಶಾಧಿಕಾರ ಮತ್ತು ನಿರಂಕುಶಾಧಿಕಾರಿಯ ಕುರಿತು ಪತ್ರಿಕೆಯ ಸಂಪಾದಕೀಯದಲ್ಲಿ ಚರ್ಚಿಸಲಾಗಿದೆ. ಇದರಲ್ಲಿ ಜಗತ್ತಿನಾದ್ಯಂತ ಇರುವ ನಿರಂಕುಶಾಧಿಕಾರಿಗಳೆಲ್ಲರೂ ಅತ್ಯಂತ ಮೂರ್ಖರು, ಬುದ್ಧಿಗೇಡಿಗಳೆಂದು ಜರಿಯಲಾಗಿದೆ. ಅಂಕಣದ ಕಡೆಯ ಭಾಗದಲ್ಲಿ ಅನೇಕ ನಿರಂಕಶಾಧಿಕಾರಿಗಳು ಬಂದು ಹೋಗಿದ್ದಾರೆ. ಅವರೆಲ್ಲರ ಅವಸಾನದ ನಿದರ್ಶನಗಳು ಚರಿತ್ರೆಯಲ್ಲಿ ಸಾಕಷ್ಟಿವೆ ಎಂದು ಕೊನೆಗೊಳ್ಳುವುದು. ಸಂಪಾದಕೀಯದ ಅಕ್ಕಪಕ್ಕದಲ್ಲಿನ ವಿಚಾರಗಳನ್ನು ಒಟ್ಟಾಗಿಟ್ಟು ನೋಡುವ ಮೂಲಕ ಕಂಡುಬರುವ ಪ್ರತಿಭಟನೆಯ ಸ್ವರೂಪವನ್ನು ಸಮಗ್ರವಾಗಿ ಗುರುತಿಸಲು ಸಾಧ್ಯವಾಗುವುದು. ಈ ಸಂಪಾದಕೀಯದ ಮೇಲ್ಭಾಗದಲ್ಲಿರುವ ಸುಭಾಷಿತದಲ್ಲಿ, ವಿವೇಕಾನಂದ ಅವರ 'ತನಗೆ ಯೋಗ್ಯತೆ ಇಲ್ಲದ ಸ್ಥಾನದಲ್ಲಿ ಮನುಷ್ಯನು ಹೆಚ್ಚು ಕಾಲ ನಿಂತು ಸಮಾಧಾನವನ್ನು ಹೊಂದಲಾರನು' ಎಂಬ ಉಕ್ತಿಯನ್ನು ಬಳಸಲಾಗಿದೆ. ಅದರ ಪಕ್ಕದಲ್ಲಿ ತುರ್ತುಪರಿಸ್ಥಿತಿ ಜಾರಿಯ ನಂತರ ಪ್ರಧಾನಮಂತ್ರಿ ಇಂದಿರಾ ಗಾಂಧಿ ಅವರು ಬಾನುಲಿಯಲ್ಲಿ ಮಾಡಿದ ಭಾಷಣವನ್ನು 'ಜನತೆಯ ಸಹಕಾರ,

ವಿಶ್ವಾಸ ಕೋರಿಕೆ' ಎಂದು ಪ್ರಕಟಿಸಿರುವುದು ಪ್ರಬಲವಾದ ಪ್ರತಿಭಟನೆಗೆ ಉತ್ತಮ ಉದಾಹರಣೆ ಆಗಿದೆ. ಈ ಪತ್ರಿಕೆಯು ಸಮಕಾಲೀನವಾಗಿ ಸರಕಾರದ ಪರವಿದ್ದ ಪತ್ರಿಕೆ ಎಂದು ಗುರುತಿಸಲ್ಪಟ್ಟುದ್ದದ್ದು ವಿಶೇಷ ಸಂಗತಿ.

ಪತ್ರಿಕಾರಂಗದಲ್ಲಿ ಕಂಡುಬಂದ ಪರೋಕ್ಷ ಪ್ರತಿಭಟನೆಯ ಮತ್ತೊಂದು ತಂತ್ರ ಭಾಷೆಯ ಬಳಕೆ. ಸರ್ಕಾರದ ಕಾರ್ಯಕ್ರಮಗಳನ್ನು ಶ್ಲಾಘಿಸುತ್ತ ವ್ಯಂಗ್ಯವಾಗಿ ಪ್ರತಿಭಟಿಸುವುದು. "ಜನಜೀವನದಲ್ಲಿ ನುಸುಳಿದ್ದ ಕಿಲ್ಬಿಷಗಳ ನಿವಾರಣೆಗೆ ಸರ್ಕಾರದ ದಂಡ ಪ್ರಯೋಗ ಸ್ವಾಗತಾರ್ಹ"(ಪ್ರಜಾಮತ ೧೯೭೫ ಜುಲೈ ೨೭) ಲೇಖನದಲ್ಲಿ, ಈ ತಿಂಗಳಲ್ಲಿ ನಡೆದಷ್ಟು ಆಡಳಿತ ಕ್ರಮಗಳು ಕಳೆದ ಐದಾರು ವರ್ಷಗಳಲ್ಲಿ ನಡೆದಿರಲಿಲ್ಲ ಎಂಬಷ್ಟು ಚುರುಕಿನಿಂದ ಸರ್ಕಾರ ವರ್ತಿಸಿದೆ ಎನ್ನುವ ವ್ಯಂಗ್ಯವಿದೆ. "ಭಾರತ ಸಮಾಜಗರ್ಭದಲ್ಲಿ ಕ್ರಾಂತಿ-ಉತ್ಕ್ರಾಂತಿ"(ಪ್ರಜಾಮತ ೧೯೭೫ ಆಗಸ್ಟ್ ೩೧) ಸಂಪಾದಕೀಯವು ಆರಂಭದಲ್ಲಿ ಸರ್ಕಾರವನ್ನು ಶ್ಲಾಘಿಸಿದರೂ ಉಳಿದಂತೆ ಸರ್ಕಾರ, ಪ್ರಜಾಪ್ರಭುತ್ವದ ಅರ್ಥ, ಸ್ವರೂಪವನ್ನು ಚರ್ಚಿಸಿದೆ. "ರಾಜಕೀಯ ಪುಡಾರಿಗಳ ಅಂತ್ಯ: ಸರ್ಕಾರಿ ಯಂತ್ರದಲ್ಲಿ ಶಿಸ್ತಿನ ಅವತಾರಕ್ಕೆ ಪೀಠಿಕೆ"(ಪ್ರಜಾಮತ ೧೯೭೫ ಸೆಪ್ಟೆಂಬರ್ ೭) ಮತ್ತು "ಶತ ದಿನಗಳ ತುರ್ತುಸ್ಥಿತಿ: ರಾಷ್ಟ್ರದಲ್ಲಿ ಕವಿದಿದ್ದ ಸ್ವೇಚ್ಛೆಗೆ ಪೂರ್ಣವಿರಾಮ ಹಾಕಿದೆ"(ಪ್ರಜಾಮತ ೧೯೭೫ ಅಕ್ಟೋಬರ್ ೨೬) ಮುಂತಾದ ಲೇಖನಗಳು ಈ ಮೇಲಿನ ವಿಚಾರಗಳಿಗೆ ಪೂರಕವಾಗಿದೆ. ಕೆಲವೊಮ್ಮೆ ಸಂಪೂರ್ಣ ಭಿನ್ನವಾಗಿ ಪ್ರತಿಕ್ರಿಯಿಸಿರುವುದನ್ನು ನೋಡಬಹುದು. ಸುಧಾದಲ್ಲಿ ಪ್ರಕಟವಾಗುತ್ತಿದ್ದ "ವಾರದಿಂದ ವಾರಕ್ಕೆ" ಅಂಕಣದ ೧೯೭೫ರ ಆಗಸ್ಟ್ ೧೭ರ ಸಂಚಿಕೆ ಗಮನ ಸೆಳೆಯುವುದು. ಭಾರತದ ಯಾವ ವಿಚಾರವನ್ನು ಮಾತನಾಡದೆ, ಅಂತರ್ ರಾಷ್ಟ್ರೀಯ ವಲಯದಲ್ಲಿ ಕಂಡುಬರುತ್ತಿರುವ ಶಕ್ತಿ ರಾಜಕಾರಣದ ಚರ್ಚೆಯಿದೆ. ಸಾಮಾನ್ಯವಾಗಿ ಸ್ವಾತಂತ್ರ್ಯ ದಿನಾಚರಣೆ, ಗಣರಾಜ್ಯೋತ್ಸವದ ಸಂದರ್ಭದ ಸಂಚಿಕೆಗಳಲ್ಲಿ ಪ್ರಜಾಪ್ರಭುತ್ವ, ಸ್ವಾತಂತ್ರ, ದೇಶಭಕ್ತಿ ಮೊದಲಾದ ವಿಚಾರಗಳು ಇರುತ್ತವೆ. ಅವು ಯಾವುದೂ ಇಲ್ಲದೇ, ಭಾರತದ ಪ್ರಸ್ತಾವ ಕೂಡ ಆಗದಿರುವುದು ಮತ್ತೊಂದು ರೀತಿಯ ಪ್ರತಿಭಟನೆ ಆಗಿದೆ.

••• ••• •••

ಅಂತರ್ ರಾಷ್ಟ್ರೀಯ ವಲಯದಲ್ಲಿ ಆಂತರಿಕ ತುರ್ತುಪರಿಸ್ಥಿತಿಗೆ ವ್ಯಕ್ತವಾದ ಪ್ರತಿಭಟನೆಗಳು ಹಾಗೂ ಸಮಕಾಲೀನ ಜಾಗತಿಕ ವಲಯದ ರಾಜಕಾರಣವನ್ನು ಅವಲೋಕಿಸುವುದು ಅಗತ್ಯವಾಗಿದೆ. "ಇಂಡಿಯಾ ಇಸ್ ಅಕ್ಯೂಸಡ್ ಫಾರ್ ಟಾರ್ಚರಿಂಗ್ ಪ್ರಿಸನರ್ಸ್"(ದಿ ಅಬ್ಸರ್‌ವರ್ ೧೯೭೬ ಏಪ್ರಿಲ್ ೨೫); "ಇಂಡಿಯಾ: ಎ ಪ್ಯಾಸೇಜ್ ಫ್ರಂ ಡೆಮಾಕ್ರಸಿ"(ನ್ಯೂ ಸ್ಟೇಟ್ಸ್‌ಮ್ಯಾನ್ ೧೯೭೬ ಮೇ ೨೮); "ಲೈಫ್ ವಿತ್ ದಿ ಮದರ್ ಇಂಡಿಯಾ"(ದಿ ಇಕನಾಮಿಸ್ಟ್ ೧೯೭೬ ಜೂನ್ ೪); 'ದಿ ಅಮನೆಸ್ಟಿ ಇಂಟರ್‌ನ್ಯಾಷನಲ್ ರಿಪೋರ್ಟ್ ೧೯೭೫-೭೬" ಮೊದಲಾದ ವಿದೇಶಿ ಪತ್ರಿಕೆಗಳ ವರದಿಗಳನ್ನು ಇಲ್ಲಿ ಚರ್ಚಿಸಲು ಯತ್ನಿಸಲಾಗಿದೆ. ಇವುಗಳಲ್ಲಿ ಪ್ರಜಾಪ್ರಭುತ್ವದ ನೆಲೆಯಲ್ಲಿ ಭಾರತದ ರಾಜಕಾರಣದ ವರದಿಗಳು, ಭೂಗತ ಹೋರಾಟಗಾರರ ಸಂದರ್ಶನಗಳು ಮತ್ತು ಸಾಹಿತ್ಯಗಳು, ಪ್ರತಿಭಟನೆಗೆ ಸರ್ಕಾರ ಕೈಗೊಂಡ ಕ್ರಮಗಳು, ಭಾರತೀಯರು ಮತ್ತು ಅನಿವಾಸಿ ಭಾರತೀಯರ ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳು ಮುಂತಾದ ವಿಚಾರಗಳು ಪದೇ ಪದೇ ಕಂಡುಬರುವುವು. ಈ ದಿಸೆಯಲ್ಲಿ ತುರ್ತುಪರಿಸ್ಥಿತಿ ವಿರುದ್ಧದ ವರದಿಗಳನ್ನು ಅತ್ಯಧಿಕವಾಗಿ ವರದಿ ಮಾಡುತ್ತಿದ್ದ ರಾಷ್ಟ್ರಗಳೆಂದರೆ ಅಮೇರಿಕ, ಇಂಗ್ಲೆಂಡ್ ಮುಂತಾದವು. ಆಗ ರಷ್ಯಾ ಭಾರತದ ಪರವಾಗಿದ್ದು ಆಡಳಿತಕ್ಕೆ ಸಹಕಾರ ನೀಡುತ್ತಿತ್ತು. ಬಾಂಗ್ಲಾ, ಪಾಕಿಸ್ತಾನ, ಶ್ರೀಲಂಕ, ಉಗಾಂಡ ಮತ್ತಿತರ ರಾಷ್ಟ್ರಗಳಲ್ಲಿ ನಿರಂಕುಶ ಆಡಳಿತವಿದ್ದು, ಇವುಗಳು ತಟಸ್ಥವಾಗಿರುವುದನ್ನು ನೋಡಬಹುದು. ಜಾಗತಿಕ ವಲಯದಲ್ಲಿ ಶೀತಲ ಸಮರದ ಶಕ್ತಿ ರಾಜಕಾರಣದ ಪ್ರಭಾವವು ಸಮಕಾಲೀನ ಸುದ್ದಿಗಳ ಪ್ರಕಟನೆಯ ಮೇಲೆ ಮಹತ್ವದ ಪ್ರಭಾವ ಬೀರಿದೆ. ವೈಯಕ್ತಿಕ ನೆಲೆಯಲ್ಲಿ ಅನಿವಾಸಿ ಭಾರತೀಯರು ತುರ್ತುಪರಿಸ್ಥಿತಿ ಜಾರಿ ವಿರೋಧಿಸಿ ಕವನ, ಕಥೆಗಳ ರಚನೆಯ ಮೂಲಕ ಪ್ರತಿಭಟಿಸಿರುವುದನ್ನು ನೋಡಬಹುದು. ಈ ಪ್ರಕ್ರಿಯೆಯನ್ನು ಭಾರತದಲ್ಲಿಯೂ ಕಾಣಬಹುದು. ಸಾಹಿತ್ಯರಂಗದಲ್ಲಿ ಪ್ರಕಟವಾಗಿರುವ ಪ್ರತಿಭಟನೆಯ ಸ್ವರೂಪಗಳನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡುವ ಅಗತ್ಯವಿದೆ.

೩.೧.೧.೨.೨.೨. ಸಾಹಿತ್ಯರಂಗದಲ್ಲಿ ಪ್ರತಿಭಟನೆ

ಆತ್ಮೀಯರೇ,
ನಿಮ್ಮ ಕವನಗಳು ತಲುಪಿವೆ
ನಮ್ಮ ಜನಕ್ಕೆ ತಲುಪುತ್ತವೆಯೋ ಎಂಬ ಬಗ್ಗೆ
ನನಗೆ ಅನುಮಾನವಿದೆ – ಕವನವಲ್ಲ
ಕತ್ತಿಕೂಡ ತಲುಪದ ಸ್ಥಿತಿ ಈ ಜನರದ್ದು.

ನಾವು ಹೀಗೆ ಕವನಗಳಲ್ಲಿ
ಕಸರತ್ತು ಮಾಡಲು
ಎಂಥ ತಪ್ಪನ್ನೂ ಮಾಡಿರಲಿಲ್ಲ(ಲಂಕೇಶ್ ೧೯೭೭: ೨೫).

೧೯೭೬ರಲ್ಲಿ ಕಪ್ಪು ಜನರ ಕೆಂಪು ಕಾವ್ಯ ಎಂಬ ಕವನ ಸಂಕಲನಕ್ಕಾಗಿ ಬರೆದ ಹಿನ್ನುಡಿ ಆಗಿದೆ. 'ಈ ಕವನ ಸಂಕಲನ ಕೆಲವರ ಕಿವಿಯಲ್ಲಾದರೂ ಜೀವ ಬರಿಸಿದರೆ ಅಷ್ಟೇ ಸಾಕು' ಎನ್ನುವ ಆಶಯದೊಂದಿಗೆ ಕವನ ಕೊನೆಗೊಳ್ಳುವುದು. ತುರ್ತುಪರಿಸ್ಥಿತಿ ಜಾರಿ ಮತ್ತು ಸೆನ್ಸಾರ್‌ಷಿಪ್ ವಿರೋಧಿಸಿ ಸಾಹಿತ್ಯದಲ್ಲಿ ಬಂದ ಪ್ರತಿಭಟನಾ ಸ್ವರೂಪಗಳು ವೈವಿಧ್ಯಮಯವಾಗಿದೆ. ಕನ್ನಡ ಸಾಹಿತ್ಯದಲ್ಲಿ ಆತ್ಮಾವಲೋಕನ, ಅಸಹಾಯಕತೆಗಳು ಪ್ರತಿಭಟನೆಯ ರೂಪದಲ್ಲಿ ವ್ಯಕ್ತಗೊಂಡಿವೆ. ಇದಕ್ಕೆ ಮೇಲಿನ ಕವನ ಒಂದು ಉದಾಹರಣೆ ಮಾತ್ರ. ಇಲ್ಲಿ ಕನ್ನಡ ಸಾಹಿತ್ಯ ಮತ್ತು ಸಾಹಿತಿಗಳಲ್ಲಿ ಕಂಡುಬಂದ ಪ್ರತಿಭಟನೆಗಳ ಸ್ವರೂಪ, ಅದರ ಪ್ರಕ್ರಿಯೆಗಳನ್ನು ಇತರ ಭಾಷೆಯ ಸಾಹಿತ್ಯದೊಂದಿಗೆ ಸಮೀಕರಿಸಿ ಚರ್ಚಿಸಲು ಪ್ರಯತ್ನಿಸಲಾಗಿದೆ. ಜೊತೆಗೆ ಸರ್ಕಾರದ ಪರವಾಗಿ ಕಂಡುಬಂದ ಸಾಹಿತ್ಯವನ್ನು ಅವಲೋಕಿಸಲು ಪ್ರಯತ್ನಿಸಲಾಗಿದೆ.

ಆಂತರಿಕ ತುರ್ತುಪರಿಸ್ಥಿತಿಯಿಂದ ಅತಿ ಹೆಚ್ಚು ಪ್ರಭಾವಿತವಾಗಿರುವುದು ಕವನ ಪ್ರಕಾರ. ತುರ್ತುಪರಿಸ್ಥಿತಿ ಪ್ರಭಾವ ಕವನಗಳಲ್ಲಿ ರೂಪುಗೊಂಡಿರುವ ಸ್ವರೂಪ ಕುರಿತ ಈ ಕೆಳಗಿನ ವಿಮರ್ಶೆಗಳು ಹೀಗಿವೆ:

> ನಮ್ಮ ಸುತ್ತ ಆದದ್ದು ಕಾವ್ಯದಲ್ಲಿ ಕಾಣಿಸಿಕೊಳ್ಳಬೇಕೆಂದೇನೂ ಇಲ್ಲ. ತುರ್ತುಪರಿಸ್ಥಿತಿಯ ಕೆಲವು ಕವನಗಳನ್ನು ಬಿಟ್ಟರೆ ಬೇರೆ ಸಂದರ್ಭದಲ್ಲಿ ಬರೆದ ಕವನಗಳು ಅಷ್ಟು ಚೆನ್ನಾಗಿಲ್ಲ. ಕುದುರೆ ಮೋತಿ ಸ್ವಾಮಿ, ಬೆಂಡಿಗೆರೆ ಮುಂತಾದ ಶಾಕಿಂಗ್ ವಿಷಯಗಳು ಕೂಡ ಕವನಗಳನ್ನು ಉತ್ತಮಗೊಳಿಸಲಿಲ್ಲ(ಲಂಕೇಶ್ ೧೯೯೩: ೩೧).

ಮತ್ತು

> ಇಂದಿಯಾದ ಈಚಿನ ತುರ್ತುಪರಿಸ್ಥಿತಿಯನ್ನು ನಿರಾಳವಾಗಿ ಹಾಡಿ ಹೊಗಳಿ, ಕ್ರಾಂತಿಕಾರಕ ಪರ್ವ ಎನ್ನುವಂತೆ ಕೂಡಲೇ ಸಂಭ್ರಮಿಸಿದ ಕವಿಗಳ ಹಿಂಡು ನಮ್ಮಲ್ಲಿ ದೊಡ್ಡದೇ ಇದೆ(ನಾಗವಾರ ೨೦೦೮: ೬೭).

ಇಲ್ಲಿ ಲಂಕೇಶ ಅವರು ತುರ್ತುಪರಿಸ್ಥಿತಿಯ ನಂತರದ ಕಾವ್ಯದ ಮೇಲೆ ರಾಜಕೀಯ ಘಟನೆಗಳ ಪ್ರಭಾವವನ್ನು ತುರ್ತುಪರಿಸ್ಥಿತಿ ಕಾಲದೊಂದಿಗೆ ಸಮೀಕರಿಸುತ್ತಾ ವಿಮರ್ಶಿಸಿರುವುದನ್ನು ನೋಡಬಹುದು. ಎರಡನೇ ಉಲ್ಲೇಖದಲ್ಲಿ ಕಾಳೇಗೌಡ ನಾಗವಾರ ಅವರು ತುರ್ತುಪರಿಸ್ಥಿತಿಯ ಪ್ರಭಾವದಿಂದ ರಚಿತವಾದ ಸಾಹಿತ್ಯ ಮತ್ತು ಸಾಹಿತಿಗಳ ವಿಚಾರಧಾರೆಗಳನ್ನು ಚಿತ್ರಿಸಿರುವರು. ಸರ್ಕಾರದ ಪರವಾಗಿರುವ ಕಾವ್ಯ ರಚನಕಾರರ ವ್ಯಂಗ್ಯ ಅಣಕವಿದು. ತುರ್ತುಪರಿಸ್ಥಿತಿ ಕಾಲಘಟ್ಟದ ಕವನಗಳಲ್ಲಿ ಕಂಡುಬಂದ ಪ್ರತಿಭಟನೆಗಳನ್ನು ಗಮನಿಸುವ ಮೊದಲು ತುರ್ತುಪರಿಸ್ಥಿತಿ ಪರವಿರುವ ಕವನಗಳನ್ನು ಅವಲೋಕಿಸುವುದು ಅಗತ್ಯ.

ತುರ್ತುಪರಿಸ್ಥಿತಿಯ ಪರವಾದ ನೆಲೆಯಲ್ಲಿ ಹಲವಾರು ಕವನಗಳು ರಚನೆಯಾಗಿದೆ. ಉದಾಹರಣೆಯಾಗಿ, ಶಿವಕುಮಾರ ಜೋಜ ಶೆಟ್ಟರ *ಇಂದಿರಾಜಿಯ ನೆನೆವ ಬಾರಾದಲ್ಲಿರುವ(೧೯೭೭)* ಇಂದಿರಾಂಬೆ ತೂಗುತಿಹಳು, ಇಂದಿರಾಜಿಯ ನೆನೆವ ಬಾರಾ, ಪ್ರಿಯದರ್ಶಿನಿಯ ಪವಾಡ, ವೀರನಾರಿ, ಮಹಿಷಾಸುರ ಮರ್ದಿನಿ, ಮಾರ್ಗದರ್ಶಿನಿ, ಮಹಾಶಕ್ತಿ, ದಲಿತರ ತಾಯಿ, ಹಗಲುಗತ್ತಲಿಗೆ ಬಂದ ಬೆಳಕು ಮುಂತಾದ ಕವನಗಳನ್ನು ನೋಡಬಹುದು. ಇವು ಪ್ರಧಾನಿಯವರ ಕಾರ್ಯನೀತಿಗಳ ಪರ ಒಲವನ್ನು ಹೊಂದಿವೆ. ಈ ಕವನ ಸಂಕಲನದ ಆರಂಭದಲ್ಲಿ ಉಪರಾಷ್ಟ್ರಪತಿಯವರು ೧೯೭೬ ಡಿಸೆಂಬರ್ ೩೧ರಂದು ಬರೆದ ಪತ್ರ ಹೀಗಿದೆ:

> ನಿಮ್ಮ ಪತ್ರ ತಲುಪಿ ವಿಷಯ ವಿದಿತವಾಯಿತು. ಇಪ್ಪತ್ತು ಅಂಶಗಳ ಆರ್ಥಿಕ ಪುನರುಜ್ಜೀವನ ಕಾರ್ಯಕ್ರಮದ ಪ್ರಕಾಶನಕ್ಕಾಗಿ ಮೀಸಲಾದ ಮತ್ತು 'ಇಂದಿರಾಜಿಯ ನೆನೆವ ಬಾರಾ' ಎಂಬ ಶೀರ್ಷಿಕೆ ಇಪ್ಪತ್ತು ಕವನಗಳುಳ್ಳ ನಿಮ್ಮ ಮುಂಬರುವ ಪ್ರಕಟನೆಗಾಗಿ ನಿಮ್ಮನ್ನು ಅಭಿನಂದಿಸುವೆ. ಅದರಲ್ಲಿರುವ

> ವಿಚಾರ ಪ್ರಚೋದಕ ವಿಷಯ. ಓದುಗರಿಗೆ ಜ್ಞಾನ ಹಾಗೂ ಆನಂದವನ್ನು ನೀಡುವುದೆಂಬ ಭರವಸೆ ನನಗಿದೆ(ಜತ್ತಿ ೧೯೭೭: ೧).

ಇಂತಹ ರಚನೆಗಳಿಗೆ ಕೇಂದ್ರ ಸರ್ಕಾರದಿಂದ ಪ್ರೋತ್ಸಾಹ ದೊರೆಯುತ್ತಿದ್ದಂತೆ ಕಂಡುಬರುತ್ತಿದ್ದು, ದೇಶದಾದ್ಯಂತ ಇಂತಹ ರಚನೆಗಳನ್ನು ಕಾಣಬಹುದು. ಇದಕ್ಕೆ ಪೂರಕವಾಗಿ "*ಇಂದಿರಾಯಣ* ಎಂಬ ೫೯ ಕವನಗಳ ಸಂಗ್ರಹವನ್ನು ಇಂದು ಪ್ರಧಾನಮಂತ್ರಿಯವರಿಗೆ ಅರ್ಪಿಸಲಾಯಿತು"(ಟೈಮ್ಸ್ ಆಫ್ ಇಂಡಿಯ ೧೯೭೬ ನವೆಂಬರ್ ೩೦); "ಮಂಗಳವಾರ ಬೆಳಗ್ಗೆ ಮೆಟ್ರೋಪಾಲಿಟನ್ ಕೌನ್ಸಿಲ್‌ನ ಅಧ್ಯಕ್ಷರಾದ ಮೀರ್ ಮುಸ್ತಾಟ್ ಅಹಮದ್ ಅವರು ಇಂದಿರಾ ಗಾಂಧಿ ಅವರ ಕುರಿತು 'ಇಂದಿರಾ ಗಾಂಧಿ ಫಾರ್ ಪೀಪಲ್ಸ್ ಗ್ಲೋರಿ' ಎಂಬ ಕವನ ರಚಿಸಿ, ಓದಿದರು"(ಪೇಟ್ರಿಯಟ್ ೧೯೭೬ ಡಿಸೆಂಬರ್ ೧) ಮುಂತಾದ ವರದಿಗಳನ್ನು ಕಾಣಬಹುದು. ಇವು ಸಾಹಿತ್ಯಲೋಕದಲ್ಲಿ ತುರ್ತುಪರಿಸ್ಥಿತಿ ಕುರಿತಿದ್ದ ಭಿನ್ನತೆಗಳ ಮೇಲೆ ಬೆಳಕು ಹರಿಸುತ್ತಲೇ ಸಮಕಾಲೀನ ಪ್ರತಿಭಟನಾ ಸಾಹಿತ್ಯದ ಸ್ವರೂಪವನ್ನು ಅರಿಯಲು ಪೂರಕ ನೆಲೆಗಟ್ಟನ್ನು ಒದಗಿಸುವುದು.

ತುರ್ತುಪರಿಸ್ಥಿತಿಯನ್ನು ವಿರೋಧಿಸಿ ಪ್ರಕಟಗೊಂಡ ಪ್ರತಿಭಟನಾ ಸಾಹಿತ್ಯ ಸಮಾಜದಲ್ಲಿದ್ದ ಪ್ರತಿಭಟನೆಯ ಮುಖಗಳನ್ನು ತೆರೆದಿಡುವುದು. ಈ ದಿಸೆಯಲ್ಲಿ

> ತುರ್ತುಪರಿಸ್ಥಿತಿ ಹಿನ್ನೆಲೆಯಲ್ಲಿ ರಚಿತವಾದ ಕೃತಿಗಳ ಬಹುತೇಕ ವಸ್ತು ವಿಷಯಗಳೆಂದರೆ ೧೯೭೦ರ ದಶಕದ ಆರಂಭದ ಚಿತ್ರಣ, ಪ್ರಜಾಪ್ರಭುತ್ವದ ಮಹತ್ವ ಸಾರುವ ಮತ್ತು ತುರ್ತುಪರಿಸ್ಥಿತಿಯ ಬಗೆಗಿನ ಆಕ್ರೋಶ ... ಆರಂಭಿಕ ಅಥವಾ ತತ್‌ಕ್ಷಣದ ಪರಿಣಾಮ ತುರ್ತುಪರಿಸ್ಥಿತಿ ಕಾಲಘಟ್ಟದ ಆಡಳಿತಶಾಹಿ ವ್ಯವಸ್ಥೆಯನ್ನು, ಇಂದಿರಾ ಗಾಂಧಿಯನ್ನು ವಿರೋಧಿಸಿ ಬಂದ ಸಾಹಿತ್ಯ ಸಾಮಾನ್ಯವಾಗಿ ತತ್‌ಕ್ಷಣದ ಆಕ್ರೋಶ, ಅಸಹನೆಗಳನ್ನು ನೇರವಾಗಿ ಮತ್ತು ಪರೋಕ್ಷವಾಗಿ ಚಿತ್ರಿಸಲಾಗಿದೆ. ತುರ್ತುಪರಿಸ್ಥಿತಿ ಕಾಲಘಟ್ಟದ ಯಾವುದಾದರೊಂದು ಆಯಾಮದ ನಿರೂಪಣೆ ಕಂಡುಬರುತ್ತದೆ. ಸಾಮಾನ್ಯವಾಗಿ ಈ ರೀತಿಯ ಸಾಹಿತ್ಯ ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಿ ರಚಿತವಾಗಿರುತ್ತದೆ. ಹಾಗೆ ಆ ಸಂದರ್ಭದಲ್ಲಿ ಅಥವಾ ತುರ್ತುಪರಿಸ್ಥಿತಿ ಕೊನೆಗೊಂಡ ತತ್‌ಕ್ಷಣದಲ್ಲಿ ಪ್ರಕಟವಾಗಿರುತ್ತದೆ. ಇವುಗಳಲ್ಲಿ ಪ್ರಮುಖವಾಗಿ ಕಂಡುಬರುವ ಅಂಶಗಳೆಂದರೆ ಪೊಲೀಸ್ ಕ್ರೌರ್ಯ, ಜನರ ಪ್ರತಿಭಟನೆ, ಆಡಳಿತಶಾಹಿಯ ವಿರೋಧ, ಜೈಲುವಾಸ ಮೊದಲಾದವುಗಳು(ರಶ್ಮಿ ೨೦೧೨: ೧೪೮)

ಎಂದು ಸಾಮಾನ್ಯವಾಗಿ ಗುರುತಿಸಲಾಗುವುದು. ಸಾಹಿತ್ಯದ ಪ್ರತಿಭಟನಾ ನೆಲೆಗಳನ್ನು ಇಲ್ಲಿ ಎರಡು ಭಾಗಗಳಾಗಿ ವಿಂಗಡಿಸಲಾಗಿದೆ. ವೈಯಕ್ತಿಕವಾಗಿ ತುರ್ತುಪರಿಸ್ಥಿತಿಯ ವಿರುದ್ಧದ ಪ್ರತಿಭಟನೆಯನ್ನು ಅಸಮಾಧಾನ, ಅಸಹನೆ ಅಥವಾ ಸಾಹಿತ್ಯದ ಯಾವುದಾದರೊಂದು ರೂಪದಲ್ಲಿ ಅಭಿವ್ಯಕ್ತಗೊಳಿಸಿರುವುದು. ಕುವೆಂಪು, ಶಿವರಾಮ ಕಾರಾಂತ, ಗೋಪಾಲಕೃಷ್ಣ ಅಡಿಗ, ಅನಂತಮೂರ್ತಿ, ಡಿ.ವಿ.ಜಿ., ಪೂರ್ಣಚಂದ್ರ ತೇಜಸ್ವಿ, ದಿನಕರ ದೇಸಾಯಿ, ಚಂದ್ರಶೇಖರ ಪಾಟೀಲ, ವಿಶು ಕುಮಾರ್, ವಿಷ್ಣು ನಾಯಕ್, ದೇವನೂರು ಮಹಾದೇವ ಮೊದಲಾದ ಸಾಹಿತಿಗಳ ಬರಹವನ್ನು ನೋಡಬಹುದು. ವೈಯಕ್ತಿಕ ನೆಲೆಯ ಪ್ರತಿಭಟನೆಗಳನ್ನು ಒಗ್ಗೂಡಿಸಿ ಕವನ ಸಂಕಲನದ ರೂಪಗಳಲ್ಲಿ ಸಂಘಟಿತ ರೂಪದ ಪ್ರತಿಭಟನೆಯಾಗಿ ಪುನರ್ ಅಭಿವ್ಯಕ್ತಗೊಳ್ಳುವ ಮತ್ತೊಂದು ವಿಧವನ್ನು ಕಾಣಬಹುದಾಗಿದೆ. ಈ ದಿಸೆಯಲ್ಲಿ ಚಂದ್ರಶೇಖರ ಪಾಟೀಲ, ಪಿ.ಲಂಕೇಶ್, ಕಿ.ರಂ.ನಾಗರಾಜ, ವಿಜಯ ಪಾಟೀಲ, ಮಂಗ್ಳೂರು ವಿಜಯ ಮತ್ತಿತರರ ಕವನಸಂಕಲನಗಳನ್ನು ಸಂಘಟಿತ ನೆಲೆಯ ಪ್ರತಿಭಟನೆಯಾಗಿ ನೋಡಬಹುದು.

### ೩.೧.೧.೨.೨.೨.೧. ವೈಯಕ್ತಿಕ ನೆಲೆಗಟ್ಟು

> ಬಾಯ್ಗೆ ಬಟ್ಟೆ ತುರುಕಿದ್ದಾರೆ
> ಬಿಗಿದು ಕೈಯ ಕಟ್ಟಿದ್ದಾರೆ
> ಗಂಟಲೊತ್ತಿ ಹಿಸುಗಿದ್ದಾರೆ!
> ಸತ್ತೆ ಸತ್ತೆ ಅಯ್ಯೊ ಸತ್ತೆ:
> ನಾ...ನು...ಪ್ರ...ಜಾ....ಸ....ತ್ತೆ !(ಕುವೆಂಪು[೨೦] ೨೦೦೦: ೩೧೨).

ಅಭಿವ್ಯಕ್ತಿ ಸ್ವಾತಂತ್ರ್ಯ ಹರಣದ ವಿರೋಧವನ್ನು ಹಾಗೂ ಪ್ರಜಾಪ್ರಭುತ್ವವನ್ನು ಕೊನೆಗೊಳಿಸುತ್ತಿದ್ದಾರೆ ಎಂಬ ನೋವು, ಹತಾಶೆ ಈ ಮೇಲಿನ ಚುಟುಕದಲ್ಲಿ ವ್ಯಕ್ತವಾಗಿದೆ. ಸತ್ತೆ ಸತ್ತೆ ಅಯ್ಯೋ ಸತ್ತೆ ನಾನು ಪ್ರಜಾಸತ್ತೆ ಎಂಬಲ್ಲಿ ಎರಡರ್ಥವಿದೆ. ಸತ್ತೆ ಎಂಬುದು ಅಧಿಕಾರ ಮತ್ತು ಸಾವು ಎರಡನ್ನು ಪ್ರತಿನಿಧಿಸುವುದು. ಹಾಗೇ ಪ್ರಜಾ ಸತ್ತೆ ಎಂಬುದು ಪ್ರಜೆಯ ಸಾವು ಹಾಗೂ ಪ್ರಜಾತಂತ್ರದ ಸಾವು ಎಂಬ ಅರ್ಥವನ್ನು ಹೊಂದಿದೆ.

ದ್ವಂದ್ವಾರ್ಥ ಅಥವಾ ಅನೇಕಾರ್ಥ ಇರುವ ಪದಗಳ ಬಳಕೆ ಇರುವ ಕವನಗಳ ರಚನೆ ಸಮಕಾಲೀನವಾಗಿ ಪ್ರತಿಭಟನೆಯ ನೆಲೆಯಲ್ಲಿ ಕಂಡುಬರುವುದು.

ಒಂದು ಜಾಹೀರಾತು: "ಕಳೆದುಹೋಗಿದೆ ಬಾಯಿ"
ಯಾವುದೇ ವಸ್ತುವನ್ನು ಇಲ್ಲಿ ಹೀಗೆ ಅಂತ ಹೇಳುವುದು ಕಷ್ಟ
ನನ್ನ ಬಾಯೊಂದನ್ನು ಬಿಟ್ಟು
ಇಲ್ಲಿ ಸಾಯುತ್ತಿರುವ ಶಬ್ದಗಳು ನಮ್ಮ ಹಾಗೆ ಕೈಯಿಂದ ಜಾರಿ
ನಿಜವಾದ ಅರ್ಥವನ್ನು ಕೊಡದೇಹೋಗಬಹುದು
ಉದಾಹರಣೆಗೆ:
ನಾನು
ನಮ್ಮ ದೇಶ
ಪ್ರಜಾಪ್ರಭುತ್ವ ಇತ್ಯಾದಿ
...
ತವರಿಗೆ ಹೋದ ನನ್ನ ಹೆಂಡತಿಗೆ
ಲೇ, ಚೆನ್ನಾಗಿದ್ದೇನೆ ಕಣೇ, ಬಾಯಿ ಇಲ್ಲದಿದ್ದರೂ
...
ವಿಶೇಷವೆಂದರೆ
ಮೂಗಿನಲ್ಲಿ ಮಾತನಾಡಲು ಕಲಿಯುತ್ತಿದ್ದೇನೆ
ಗಾಬರಿ ಬೇಡ(ಮೊಗಸಾಲೆ[೨೧] ೨೦೦೩: ೧೨೨-೧೨೩).

ವಾಕ್ ಸ್ವಾತಂತ್ರ್ಯದ ಮೇಲಿನ ನಿರ್ಬಂಧ, ಅಭಿವ್ಯಕ್ತಿ ಸ್ವಾತಂತ್ರ್ಯದ ಹರಣವು 'ಕಳೆದುಹೋಗಿದೆ ಬಾಯಿ' ಎಂಬ ಜಾಹೀರಾತನ್ನು ನೀಡುವ ಮೂಲಕ ಪ್ರತಿಭಟಿಸುವ ವಿಭಿನ್ನ ವಿಧ ಆಗಿದೆ. ಈ ಕವನದ ಕೊನೆಗೆ ಅಧಿಕಾರದ ಮೂಲಕ ವಾಕ್ ಸ್ವಾತಂತ್ರ್ಯವನ್ನು ದಮನಗೊಳಿಸಲಾಗದು. ಅದು ಬೇರೆಬೇರೆ ಸ್ವರೂಪಗಳಲ್ಲಿ ಹೊರ ಬರುತ್ತದೆಂಬ ಸಾಂಕೇತಿಕ ಪ್ರತಿಭಟನೆ ಇದೆ. ಇತರ ಭಾಷೆಗಳಲ್ಲಿಯೂ ಇದೇ ದಾಟಿಯಲ್ಲಿ ಪ್ರತಿಭಟನಾ ಧ್ವನಿ ಕಂಡುಬರುವುದು.

ಆಕೆ ಬೆಲೆ ಸೂಚ್ಯಾಂಕವನ್ನು ದೃಢವಾಗಿ ತನ್ನ ಹತೋಟಿಗೆ ತೆಗೆದುಕೊಂಡಳು
ಆಕೆ ಕೃಷಿ ಉತ್ಪಾದನೆಯನ್ನು ನಿಗದಿಪಡಿಸಿದಳು...
ವಿದೇಶಿ ಸಹಾಯಕ ಅಂಕಿಅಂಶಗಳಲ್ಲಿ ಯಾವುದೇ ಹೊಸ ಕಡಿತವಿಲ್ಲ
ಭಿಕ್ಷುಕರನ್ನು ತೀವ್ರ ಕಾನೂನು ಕ್ರಮಗಳಿಗೆ ಗುರಿಪಡಿಸಲಾಯಿತು.
ಹತ್ತು ಹೊಸ ಸಮಿತಿಗಳನ್ನು ಮೊಟ್ಟೆಯೊಡೆಯುವಂತೆ ಮಾಡಲಾಯಿತು
ಐದು ನಿಯೋಗಗಳನ್ನು ರವಾನಿಸಲಾಯಿತು
...
೭ ಕಮಿಷನರ್‌ಗಳನ್ನು ವಜಾಗೊಳಿಸಲಾಯಿತು
೨೫ ಹೊಸ ಸಹಾಯಕ ಕೊಡುಗೆಗಳನ್ನು
೧೬೩ ಹೊಸ ಭರವಸೆಗಳನ್ನು ಮಾಡಲಾಯಿತು.
ಹೆಚ್ಚು ಉಪನ್ಯಾಸಗಳು
ಆದರೆ ಕಡಿಮೆ ವಿರೋಧಗಳು
ಆದರೂ ಹೇರಳವಾಗಿ ಅಸಮಾಧಾನಗಳು ಕಾಣತೊಡಗಿವೆ.
ಘನತೆವೆತ್ತ ಮಹಾರಾಣಿಯಾದ ವಿಜಯಾರವರ ಯಶಸ್ವೀ ಮೊದಲ ವರ್ಷ(ತೆಂಡುಲ್ಕರ್ ೨೦೧೦: ೨೩೮).

ಈ ಕವನದ ಸಾಲುಗಳು ಸಮಕಾಲೀನವಾಗಿ ಇತರ ಭಾಷೆಗಳಲ್ಲಿ ಕಂಡಬರುತ್ತಿದ್ದ ಪ್ರತಿಭಟನೆಗಳ ರೂಪವನ್ನು ತೆರೆದಿಡುವುದು. ಇದು ವಿಜಯ್ ತೆಂಡುಲ್ಕರ್ ಅವರ ದಂಬಾದ್ವೀಪಚ ಮುಖಾಬಲ(೧೯೭೫)[೨೨] ಎಂಬ ಮರಾಠಿ ನಾಟಕದ ಕೋರಸ್ ಹಾಡಿನ ಭಾಗ. ವಿಜಯ ಮಹಾರಾಣಿಯ ಯಶಸ್ವಿ ವರ್ಷದ ಸಾಧನೆಗಳ ಪಟ್ಟಿಯು. ತುರ್ತುಪರಿಸ್ಥಿತಿ ಜಾರಿಗೆ ಸರ್ಕಾರ ನೀಡುತ್ತಿದ್ದ ಕಾರಣಗಳು ಮತ್ತು ಜಾರಿಗೊಳಿಸಿದ ನಂತರದ ಕಾರ್ಯನೀತಿಗಳ ಅಣಕವಾಗಿದೆ. ವೈಯಕ್ತಿಕ ಪ್ರತಿಭಟನೆಗಾಗಿ ೧೯೭೫ರ ಸೆಪ್ಟೆಂಬರ್‌ನಲ್ಲಿ ಚಂದ್ರಶೇಖರ್ ಪಾಟೀಲರು ಬಂಧನಕ್ಕೊಳಗಾದರು. ೧೯೭೬ರ ನಂತರ ಕಂಡುಬಂದ ಪ್ರತಿಭಟನೆಗಳಲ್ಲಿ ಕೆಲವು ಸಮಾನ ಲಕ್ಷಣಗಳು ವ್ಯಕ್ತಿಯ ಸೈದ್ಧಾಂತಿಕತೆಯ ನೆಲೆಯಲ್ಲಿ ಗುರುತಿಸಬಹುದು.

ಅಂದು ಗಾಂಧಿ ಎಂಬುದೊಂದು ಚಂಡಮಾರುತ
ಇಂದು ಎಲ್ಲ ಕಡೆಗಳಲ್ಲಿ ಅದೊಂದು ತಂತ್ರ

ಅಂದಿಗೆ ಅದು ಹಿರಿಯ ಉಸಿರು
ಇಂದು ಬರಿಯದೊಂದು ಹೆಸರು(ಸಿ.ಪಿ.ಕೆ ೧೯೭೬: ೧೨೪).

ಸ್ವಾತಂತ್ರ್ಯ ಹೋರಾಟ ಮತ್ತು ಸಮಕಾಲೀನ ಸಂದರ್ಭದಲ್ಲಿ ಗಾಂಧಿ ಪದದ ಸ್ವರೂಪವನ್ನು ಸಮೀಕರಿಸಿ ರಚಿಸಿರುವುದು. ಅಂದು ಚಂಡಮಾರುತ, ಹಿರಿಯ ಉಸಿರು ಎಂಬುದು ಗಾಂಧಿಯ ವ್ಯಕ್ತಿತ್ವ, ಸಾಮರ್ಥ್ಯವನ್ನು ಹೇಳುತ್ತಾ ಇಂದಿರಾ ಗಾಂಧಿ ಬರಿ ಹೆಸರು ಎನ್ನುವ ಪ್ರತಿಭಟನಾ ಧ್ವನಿಯಿದೆ. ಸ್ವಾತಂತ್ರ್ಯ ಹೋರಾಟದೊಡನೆ ಸಮೀಕರಿಸುವುದು ಪ್ರತಿಭಟನಾ ಸಾಹಿತ್ಯಗಳ ಪ್ರಮುಖ ಲಕ್ಷಣಗಳಲ್ಲೊಂದು. ಈ ದಿಸೆಯಲ್ಲೇ ಗಾಂಧಿ ಸರ್ಕಾರಕ್ಕೆ ತಂತ್ರವಾಗಿದ್ದರೆ, ಪ್ರತಿಭಟನಾಕಾರರಿಗೆ ಮಂತ್ರವಾಗಿತ್ತು. ಗಾಂಧಿ ವ್ಯಕ್ತಿಯಿಂದ ವ್ಯಕ್ತಿತ್ವವಾಗಿ ಪ್ರತಿಭಟನಾಕಾರರ ಪ್ರತಿಭಟನೆಗೆ ಪ್ರೇರಕ ಶಕ್ತಿಯಾಗಿದ್ದರು.

ಪ್ರಜಾಪ್ರಭುತ್ವದ ಹೆಸರಿನಲ್ಲಿ
ಸಂವಿಧಾನ ತಿದ್ದಬಹುದು
ನ್ಯಾಯಾಂಗದ ಕಾಲುಮುರಿದು
ಕುರ್ಚಿಯಲ್ಲಿ ಕುಕ್ಕಬಹುದು
ಜೋಪಡಿಗಳ ಕಿತ್ತುಹಾಕಿ
ಬುಲ್ಡೋಸರ ಹೊಡೆಸಬಹುದು
...
ತಡೆಯಬಂದ ಅಶಸ್ತ್ರರನ್ನು
ಲಾಠಿಯಿಂದ ಬಡಿಯಬಹುದು

ಪ್ರಜಾಪ್ರಭುತ್ವ ಹೆಸರಿನಲ್ಲಿ
ಗುಂಡಿಟ್ಟೂ ಕೊಲ್ಲಬಹುದು(ನಾಡಿಗ[23] ೧೯೯೮).

ಪ್ರಜಾಪ್ರಭುತ್ವದ ರಕ್ಷಣೆಯ ಹೆಸರಿನಲ್ಲಿ ತುರ್ತುಪರಿಸ್ಥಿತಿಯಲ್ಲಿ ನಡೆದ ಸಂವಿಧಾನ ತಿದ್ದುಪಡಿ, ನಗರದ ಅಂದ ಹೆಚ್ಚಿಸಲು ಕೊಳಗೇರಿಗಳ ನಿರ್ಮೂಲನೆ, ಪ್ರತಿಭಟನಾಕಾರರ ಮೇಲಿನ ಲಾಠಿ ಛಾರ್ಜ್ ಮೊದಲಾದ ಬಲಪ್ರಯೋಗ ಮಾಡಿರುವುದನ್ನು ಪ್ರತಿಭಟಿಸಲಾಗಿದೆ. ಪ್ರಜಾಪ್ರಭುತ್ವದ ಹೆಸರಿನಲ್ಲಿ ನಡೆಯುತ್ತಿರುವುದು ಏನೆಂಬ ನೋವು, ಅಸಹನೆ, ಆಕ್ರೋಶಗಳ ಚಿತ್ರವಿದೆ. ಕವನಗಳಲ್ಲಿ ಪ್ರಜಾಪ್ರಭುತ್ವ, ಸ್ವಾತಂತ್ರ್ಯ ಮತ್ತಿತರ ಪದಗಳನ್ನು ಪ್ರತಿಭಟನೆಯ ರೂಪದಲ್ಲಿ ಬಳಸುವುದು ಕಂಡುಬರುವ ಮತ್ತೊಂದು ಲಕ್ಷಣ.

ಆಂಗ್ಲರಣುಬಾಂಬಿಂಗಂಜದಾ ಭಾರತ
ಇಂದಿರೆಯ ತುರ್ತಿನಾಸ್ತ್ರಕ್ಕಂಜಿನಡುಗಿತ್ತು ನೋಡಾ!
ಇದು ಹಿಂದಿನಾ ರಾಮಾಯಣದ
ಇಂದ್ರಜಿತು ಬ್ರಹ್ಮಾಸ್ತ್ರದಂತಲ್ಲ
ಇದು ಅಂದಿನಾ ಭಾರತದ
ಅರ್ಜುನನ ಸಮ್ಮೋಹನಾಸ್ತ್ರದಂತಲ್ಲ.
ಇದು ಇಂದಿನ ಪಾಶ್ಚಾತ್ಯರ ಸಿಡಿಬಾಂಬಿನಂತಲ್ಲ
ಕಣ್ಣಿದ್ದರೂ ಕಾಣದ, ಕಿವಿಯಿದ್ದರೂ ಕೇಳದ,
ಬಾಯಿದ್ದರೂ ಆಡದ ಇಂದ್ರಿಯದಿಗ್ ಬಂಧನಾಸ್ತ್ರವಯ್ಯಾ!(ದೊಡ್ಡನಗೌಡ ೨೦೧೧: ೩೮೩).

ಈ ಕವನದಲ್ಲಿ ಭಾರತವನ್ನು ತುರ್ತಿನಾಸ್ತ್ರಕ್ಕೆ ಅಂಜಿತ್ತು ಎನ್ನುತ್ತಾ ಅಸ್ತ್ರದ ಸ್ವರೂಪವನ್ನು ವಿವರಿಸಿದೆ. ಸಮಕಾಲೀನ ವಾತಾವರಣವನ್ನು ಪೌರಾಣಿಕ, ಸ್ವಾತಂತ್ರ್ಯ ಹೋರಾಟ ಮತ್ತು ಪಾಶ್ಚಿಮಾತ್ಯ ದೇಶಗಳ ಅಸ್ತ್ರಗಳನ್ನು ಮೀರಿದಂತದ್ದು ಎನ್ನುವ ಪ್ರತಿಭಟನಾ ದನಿ ಧ್ವನಿಸಿದೆ. ಪೌರಾಣಿಕ ವಿಚಾರಗಳೊಂದಿಗೆ ಸಮ ಕಾಲೀನ ಸ್ಥಿತಿಯನ್ನು ಸಮೀಕರಿಸಿ ಪ್ರತಿಭಟಿಸುವುದು ಸಾಮಾನ್ಯವಾಗಿ ಬಲಪಂಥೀಯ ವಿಚಾರಧಾರೆಗಳಿಂದ ಪ್ರಭಾವಿತರಾದವರಲ್ಲಿ ಅಧಿಕವಾಗಿ ಕಂಡುಬರುವುದು. ಪೌರಾಣಿಕ ಉಪಮೆಗಳ ಮೂಲಕ ಪ್ರತಿಭಟಿಸುತ್ತಾ ಸರ್ಕಾರದ ಕೆಂಗಣ್ಣಿನಿಂದ ಪಾರಾಗಲು ತಂತ್ರವಾಗಿಯೂ ಸಹ ಬಹುತೇಕ ಮಾಧ್ಯಮಗಳಲ್ಲಿ ಬಳಸಲಾಗಿದೆ.

ನನ್ನ ಮನೆ ಹತ್ತಿರವೇ ಪೊಲೀಸ್ ಸ್ಟೇಶನ್ನಿದೆ.
ಹೀಗಾಗಿ ಕಳ್ಳರ ಭಯವಿಲ್ಲ. ಪೊಲೀಸರದೇ ಭಯ.
...
ರಾಷ್ಟ್ರೀಯ ಹೆದ್ದಾರಿ ಅಂದ ಮೇಲೆ ಹಗಲೂರಾತ್ರಿ
ಟ್ರಕ್ಕುಗಳ ಓಡಾಟ. 'ಮಾತು ಕಡಿಮೆ, ಹೆಚ್ಚು ದುಡಿಮೆ'
'ನಾಡು ಮುನ್ನಡೆದಿದೆ' – ಇತ್ಯಾದಿ ಮಾಲು

ಉತ್ತರಧೃವದಿಂ ದಕ್ಷಿಣ ಧೃವಕೂ ಕತ್ತಲಲಿ ಸಾಗಿಸುವ
ಕ್ರಾಂತಿಯ ಸಪ್ತಳ(ಪಾಟೀಲ ೧೯೭೭: ೩೦-೩೨).

ತುರ್ತುಪರಿಸ್ಥಿತಿ ಆಡಳಿತದ ವಿರುದ್ಧ ತೀಕ್ಷ್ಣ ವಿಡಂಬನೆ ಈ ಕವನದಲ್ಲಿದೆ. ಪೊಲೀಸ್ ವ್ಯವಸ್ಥೆ ಮತ್ತು ಸಮಾಜದ ನಡುವಿನ ಸಂಬಂಧವನ್ನು ಬಿಡಿಸಿಡುವುದು. "ಮಾತು ಕಡಿಮೆ, ಹೆಚ್ಚು ದುಡಿಮೆ", "ನಾಡು ಮುನ್ನೆಡೆದಿದೆ" ಮುಂತಾದ ಫಲಕಗಳು ದೇಶದಾದ್ಯಂತ ಕಂಡುಬರುತ್ತಿದ್ದ ಕೇಂದ್ರ ಸರ್ಕಾರದ ಉದ್ಘೋಷ ಗಳಾಗಿದ್ದು, ಅವುಗಳ ವ್ಯಂಗ್ಯ ಅಣಕವಿದು. ಸರ್ಕಾರದ ಅನೇಕ ಕಾರ್ಯನೀತಿಗಳು ಪ್ರತಿಭಟನೆಯ ವಸ್ತುವಾಗಿ ಕವನಗಳಲ್ಲಿ ರೂಪಾಂತರಗೊಂಡಿರುವುದನ್ನು ನೋಡಬಹುದು. ಇದಕ್ಕೆ ಪೂರಕವಾಗಿ ಶಿವಶರಣ ಜಾವಳಿ ಅವರ *೨೦ ಮತ್ತು ೫ ಕವಿತೆ(೧೯೭೭)*[೮] ಕವನ ಸಂಕಲನ ಸಮಾಜೋ-ಆರ್ಥಿಕ ಸುಧಾರಣಾ ಕಾರ್ಯ ಕ್ರಮಗಳ ವಿಡಂಬನೆಯಾಗಿದೆ. ತುರ್ತುಪರಿಸ್ಥಿತಿ ಸಂದರ್ಭದ ಸೆನ್ಸಾರ್‌ಷಿಪ್ ಮತ್ತು ನೌಕರಶಾಹಿ ವರ್ಗದ ನಡುವಿನ ಸಂಕೀರ್ಣ ಸಂಬಂಧಗಳ ಮೇಲೆ ಬೆಳಕು ಹರಿಸುವುದು. ಜೊತೆಗೆ ಪ್ರತಿಭಟನಾಕಾರರಲ್ಲಿದ್ದ ಕೆಲವು ಪ್ರಶ್ನೆಗಳು, ವಿರೋಧಾಭಾಸಗಳನ್ನು ಮುಂದಿಡುವುದು. ರಾಮದಾಸರ *ಇದು ಭಾರತ(೧೯೭೭), ಲಿಂಗಯ್ಯ ಅವರ ಕಲಬೆರಕೆ(೧೯೭೭)* ಕವನ ಸಂಕಲನದ ೧೯೭೬ರ ಸ್ವಾತಂತ್ರ್ಯೋತ್ಸವ, ಪ್ರಾರ್ಥನೆ ಮತ್ತು ಅರವಿಂದ ನಾಡಕರ್ಣಿ ಅವರ *ನಾ ಭಾರತಿಕುಮಾರದ(೧೯೭೭)* ವಿನಂತ ಕರೆಯಲಿ ನಿನ್ನ, ತುರ್ತುಪರಿಸ್ಥಿತಿ, ತುರಿಗಜ್ಜಿ ತುರ್ತುಪರಿಸ್ಥಿತಿ ಮೊದಲಾದ ಕವನಗಳಲ್ಲಿಯೂ ಇಂತಹ ಪ್ರತಿಭಟನೆಗಳ ನೆಲೆಯನ್ನು ನೋಡಬಹುದು.

ಸಾಹಿತ್ಯದ ಇತರ ಪ್ರಕಾರಗಳಾದ ಸಣ್ಣಕಥೆ, ಪ್ರಬಂಧ, ನಾಟಕ ಮುಂತಾದವುಗಳಲ್ಲಿ ಪ್ರತಿಭಟನೆಗಳು ಕವನಗಳಲ್ಲಿ ಇರುವಷ್ಟು ಪ್ರಮಾಣದಲ್ಲಿ ಕಾಣಸಿಗುವುದಿಲ್ಲ. ಬೆಸಗರಳ್ಳಿ ರಾಮಣ್ಣ ಅವರ 'ಪ್ರಜಾಪ್ರಭುತ್ವ ಮತ್ತು ಮೂರು ಮಂಗಗಳು' ಹಾಗೂ 'ಸಂತೆಯೊಳಗೊಂದು ಮನೆಯ ಮಾಡಿ' ಸರ್ವಾಧಿಕಾರವನ್ನು ವಿಡಂಬಿಸುವ ಕಥೆಗಳು, ಇವು ತುರ್ತುಪರಿಸ್ಥಿತಿ ವಿರೋಧಿ ವಲಯದಲ್ಲಿ ಹೆಚ್ಚು ಪ್ರಸಿದ್ಧವಾಗಿದ್ದವು. ಈಶ್ವರ ಅವರ 'ಒಂದು ದಂತಕತೆ', ಸುಧಾಕರರ 'ಬಾಡ ಬುಕ್ಕದ ಮುಳ್ಳು', ಜಿ.ಎಸ್.ಸದಾಶಿವ ಅವರ 'ಮೀಸೆಯವರು', ಗಿರಡ್ಡಿ ಗೋವಿಂದರಾಜು ಅವರ 'ಮಣ್ಣು' ಮೊದಲಾದ ಸಣ್ಣಕತೆಗಳು ಪ್ರತಿಭಟನೆಯ ನೆಲೆಯಲ್ಲಿ ಪ್ರಸಿದ್ಧವಾಗಿದ್ದ ಇತರ ಸಣ್ಣಕಥೆಗಳು. ಕಡಿದಾಳ್ ಮಂಜಪ್ಪನವರ *ಕ್ರಾಂತಿಕೂಟ(೧೯೭೫)*[೧೯] ತುರ್ತುಪರಿಸ್ಥಿತಿ ವಿರೋಧಿಸಿ ಬರೆದ ಕಾದಂಬರಿ ಆಗಿದೆ. ಸಮಕಾಲೀನವಾಗಿ ಅನೇಕ ಸಾಹಿತಿಗಳನ್ನು ರಾಷ್ಟ್ರದಾದ್ಯಂತ ಪ್ರತಿಭಟನೆಯ ಹಿನ್ನೆಲೆಯಲ್ಲಿ ಬಂದಿಸಿರುವುದನ್ನು ನೋಡಬಹುದು. ಇದಕ್ಕೆ ಪೂರಕವಾಗಿ ಹಿಂದಿ ಭಾಷೆಯ ಹಿರಿಯ ಸಾಹಿತಿ ವೈದ್ಯ ಗುರುದತ್ ಅವರನ್ನು '*ಮಧು(೧೯೭೩)* ಉಪನ್ಯಾಸದ ಬಳಕೆಗಾಗಿ ೧೯೭೬ರರಲ್ಲಿ ಬಂಧಿಸಲಾಗಿತ್ತು. ಇವುಗಳಲ್ಲದೇ ಸಾಹಿತ್ಯ ರಚನಾ ಪಂಥದ ಮೇಲೂ ತುರ್ತುಪರಿಸ್ಥಿತಿಯ ಪ್ರಭಾವ ಅಪಾರವಾಗಿದೆ. ಚಂದ್ರಶೇಖರ ಪಾಟೀಲ ಅವರ ಓ ಎನ್ನ ದೇಶ ಬಾಂದವರೇ ಕವನ ಸಂಕಲನದ ಮುನ್ನುಡಿಯಲ್ಲಿ 'ಅಭಿವೃದ್ಧಿಶೀಲ ಸಮಾಜವಾದಿ ರಾಷ್ಟ್ರಗಳ ಹೋರಾಟ-ಪ್ರತಿಭಟನೆಗಳ ಗಂಡುಸಾಹಿತ್ಯ ನಮ್ಮಲ್ಲಿ ಪ್ರವೇಶ ಪಡೆಯಬೇಕು. ಅಂಥ ಸಮಯ ಈಗ ಬಂದಿದೆ' ಎಂದು ಹೇಳಿರುವುದು ಸಾಹಿತ್ಯ ವಲಯದೊಳಗೆ ಉಂಟಾಗುತ್ತಿದ್ದ ಬದಲಾವಣೆಗಳನ್ನು ತಿಳಿಸುವುದು. ಈ ದಿಸೆಯಲ್ಲಿ ಸಾಹಿತ್ಯ ಲೋಕದಲ್ಲಿನ ಚಿಂತನೆಗಳು ಮತ್ತು ಆಶಯಗಳು ಹೊಸ ಬಗೆಯ ಸಾಹಿತ್ಯ ಸೃಷ್ಟಿಯ ಅವಶ್ಯಕತೆಗೆ ಒತ್ತು ನೀಡುತ್ತಿರುವುದು, ಸಾಹಿತ್ಯಿಕ ಪಂಥಗಳ ಅಧ್ಯಯನದ ನೆಲೆಯಲ್ಲಿ ಮಹತ್ವಪೂರ್ಣವಾದುದು.

### ೩.೧.೧.೨.೨.೨.೨. ಸಂಘಟಿತ ನೆಲೆಗಟ್ಟು

ಪ್ರತಿಭಟನೆಗಳನ್ನು ದಾಖಲು ಮಾಡುವ ಹಾಗೂ ಸರ್ಕಾರಕ್ಕೆ ಸಮಾಜದಲ್ಲಿರುವ ಅಸಮಾಧಾನ, ಪ್ರತಿಭಟನಾ ಸ್ವರೂಪದ ಅರಿವುಂಟು ಮಾಡುವುದು ಸಂಘಟಿತ ಪ್ರತಿಭಟನೆಗಳ ಪ್ರಮುಖ ಉದ್ದೇಶ. ಸಮಾಜ ದ ಇತರ ವಲಯಗಳಿಗೆ ಪ್ರತಿಭಟಿಸಲು ಧೈರ್ಯ ಮತ್ತು ಪ್ರೇರಣೆಗೆ ಅವಕಾಶ ಸೃಷ್ಟಿಸುವ ಹಾಗೂ ಸಾಂಸ್ಕೃತಿಕ ಜಗತ್ತಿನ ಪ್ರತಿಭಟನೆಗಳನ್ನು ಪ್ರಕಟಿಸಲು ವೇದಿಕೆಯ ನಿರ್ಮಾಣದ ಪ್ರಯತ್ನದ ಭಾಗವಾಗಿ ಸಂಘಟಿತ ನೆಲೆಗಟ್ಟು ರೂಪುಗೊಂಡಿತು. ಈ ಪ್ರತಿಭಟನೆಗಳನ್ನು ಮುಖ್ಯವಾಗಿ ಮೂರು ಹಂತಗಳಲ್ಲಿ ಗುರುತಿಸಬಹುದು. ಮೊದಲನೆಯದು, ಕೆಲವು ಸಂಘಸಂಸ್ಥೆಗಳು ವಿಚಾರ ಸಂಕಿರಣಗಳಲ್ಲಿ ಸರ್ಕಾರದ ಕ್ರಮಗಳನ್ನು ಖಂಡಿಸುವ

ಮಸೂದೆ ಮಂಡಿಸುವುದು. ಎರಡನೆಯದು, ಪತ್ರಿಕೆಗಳಲ್ಲಿ ಪ್ರತಿಭಟನಾ ಸಾಹಿತ್ಯಗಳನ್ನು ಪ್ರಕಟಿಸುವುದು. ಮೂರನೆಯದು, ಒಟ್ಟಾಗಿ ಹಲವರ ಪ್ರತಿಭಟನಾ ಕವನವನ್ನು ಪ್ರಕಟಿಸುವ ಮೂಲಕ ಪ್ರತಿಭಟಿಸುವುದು. ಸಮಕಾಲೀನ ಸಾಹಿತ್ಯ ಮತ್ತು ಚಳವಳಿಗಳ ನಡುವಿನ ಸಂಬಂಧದ ಪ್ರಮುಖ ಕೊಂಡಿಯಾಗಿ ಮೂರನೆಯ ಹಂತ ಮುಖ್ಯವಾಗಿ ಕಾರ್ಯನಿರ್ವಹಿಸಿದೆ. ಇಲ್ಲಿ ಇವುಗಳ ಸ್ವರೂಪವನ್ನು ಚರ್ಚಿಸಲು ಪ್ರಯತ್ನ ಮಾಡಿದೆ.

ಸಾಹಿತ್ಯ ಲೋಕದ ಪ್ರತಿಭಟನೆಗಳು ಅನೇಕ ಸಂಘಟನೆಗಳ ಮೂಲಕ ಭಿನ್ನಭಿನ್ನ ಸ್ವರೂಪಗಳಲ್ಲಿ ದಾಖಲಾಗಿದೆ. ಈ ದಿಸೆಯಲ್ಲಿ ೧೯೭೫ರಲ್ಲಿ ದಲಿತ ಲೇಖಕ ಮತ್ತು ಕಲಾವಿದರ ಯುವ ಸಂಘಟನೆ ರೂಪುಗೊಂಡು ಮುಂದೆ ದಲಿತ ಸಂಘರ್ಷ ಸಮಿತಿಯೊಡನೆ ವಿಲೀನವಾಯಿತು. ಅಲ್ಲಲ್ಲಿ ಸಣ್ಣ ಸಣ್ಣ ಸಭೆಗಳು, ವಿಚಾರ ಸಂಕಿರಣಗಳಲ್ಲಿ ಸರ್ಕಾರದ ಕ್ರಮಗಳನ್ನು ವಿರೋಧಿಸಿ ಪ್ರತಿಭಟಿಸುವುದನ್ನು ಕಾಣಬಹುದು. ಕೆ.ವಿ.ಸುಬ್ಬಣ್ಣ, ಗೋಪಾಲಕೃಷ್ಣ ಅಡಿಗ ಮತ್ತು ಯು.ಆರ್.ಅನಂತಮೂರ್ತಿ ಮೊದಲಾದ ಸಾಹಿತಿಗಳು ಇಂತಹ ಗುಂಪುಗಳ ಮೂಲಕ ಪ್ರತಿಭಟನೆ ವ್ಯಕ್ತಪಡಿಸುತ್ತಿದ್ದರು. ಸಮಕಾಲೀನವಾಗಿ ರಾಜಕಾರಣದ ಸ್ಥಿತಿಗತಿಗಳ ಕುರಿತು ಲೇಖಕರ ಅಭಿಮತಗಳನ್ನು ಸಂಗ್ರಹಿಸಲು ಪ್ರಯತ್ನಿಸುತ್ತಿದ್ದರಾದರೂ ಸರಿಯಾದ ಸ್ಪಂದನೆ ದೊರೆಯಲಿಲ್ಲ ಎಂದು ಯಶವಂತ ಚಿತ್ತಾಲರು '*ಸ್ವಾತಂತ್ರ್ಯ ಮತ್ತು ಸರ್ವಾಧಿಕಾರ*'*(೧೯೭೭)* ಎಂಬ ಉಪನ್ಯಾಸದಲ್ಲಿ ದಾಖಲಿಸುವರು. ಯುವಜನ ವೇದಿಕೆ ಎಂಬ ಸಂಘಟನೆಯ ಮೂಲಕ ವಿಚಾರ ಸಂಕಿರಣ ನಡೆಸುವ, ಪ್ರತಿಭಟಿಸುವ ಮೊದಲಾದ ಪ್ರಯತ್ನಗಳು ಆಗಾಗ ಕಂಡುಬರುತ್ತಿತ್ತು. ಇವುಗಳ ಜೊತೆಗೆ ತುರ್ತುಪರಿಸ್ಥಿತಿಯನ್ನು ತೀವ್ರವಾಗಿ ವಿರೋಧಿಸುತ್ತ ಪ್ರತಿಭಟನಾಕಾರರಿಗೆ ಪ್ರೇರಣೆಯನ್ನು ನೀಡಿದ್ದು, ೧೯೭೫ರಲ್ಲಿ ಕರಾಡ್‌ನಲ್ಲಿ ನಡೆದ ೫೧ನೇ ಮರಾಠಿ ಸಾಹಿತ್ಯ ಸಮ್ಮೇಳನವಾಗಿದೆ. ಈ ಸಮ್ಮೇಳನದ ಅಧ್ಯಕ್ಷರಾದ ದುರ್ಗಾ ಭಾಗವತ್ ಅವರು ಸರ್ಕಾರದ ಯೋಜನೆಗಳ ವಿರುದ್ಧ ಬಹಿರಂಗವಾಗಿ ಟೀಕಿಸಿ, ತುರ್ತುಪರಿಸ್ಥಿತಿ ಜಾರಿಗೊಳಿಸಿದರ ವಿರುದ್ಧ ಮಂಡಿಸಿದ ಗೊತ್ತುವಳಿಯನ್ನು ಅಂಗೀಕರಿಸಿದರು. ಇದಕ್ಕಾಗಿ ಮುಂದೆ ಬಂಧನಕ್ಕೊಳಗಾದರು. ಇದು ಕನ್ನಡ ಸಾಹಿತ್ಯ ಲೋಕದಲ್ಲಿಯೂ ಸಂಚಲನವನ್ನು ಉಂಟು ಮಾಡಿತ್ತು. ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪ್ರತಿಭಟನಾ ಧ್ವನಿ ಅಲ್ಲಲ್ಲಿ ಕ್ಷೀಣವಾಗಿ ಕಂಡುಬರುತ್ತಿತ್ತಾದರೂ, ದೊಡ್ಡದಾಗಿ ವ್ಯಕ್ತವಾಗದ್ದು ಕೆಲವು ಸಾಹಿತಿಗಳಲ್ಲಿ ತೀವ್ರ ಅಸಮಾಧಾನವನ್ನು ಹುಟ್ಟುಹಾಕಿತ್ತು. ಜೊತೆಗೆ ಪತ್ರಿಕೆಗಳಲ್ಲಿ ಕವನ, ಕಥೆಗಳನ್ನು ಪ್ರಕಟಿಸುವ ಮೂಲಕ ಸಾಹಿತಿಗಳ ವೈಯುಕ್ತಿಕ ಹಾಗೂ ಪತ್ರಿಕೆಯ ಸಂಘಟಿತ ಪ್ರತಿಭಟನೆಗಳನ್ನು ಕಾಣಬಹುದು. ಪ್ರಜಾವಾಣಿ, ಕನ್ನಡಪ್ರಭ, ಆಂದೋಲನ, ಸಾಕ್ಷಿ, ಸಂಕ್ರಮಣ, ಪ್ರಪಂಚ, ಕನ್ನಡವಾಣಿ, ತುಷಾರ, ರಾಯಭಾರಿ ಮುಂತಾದ ಪತ್ರಿಕೆಗಳ[೨೧] ಪಾತ್ರ ಈ ನಿಟ್ಟಿನಲ್ಲಿ ಹಿರಿದಾಗಿದೆ. ಸಾಹಿತ್ಯಿಕ ನಿಯತಕಾಲಿಕೆಗಳ ಪಾತ್ರವು ಅಪಾರವಾಗಿದೆ. ಈ ಕುರಿತಂತೆ ಇನ್ನೂ ಹೆಚ್ಚಿನ ಅಧ್ಯಯನದ ಅವಶ್ಯಕತೆ ಇದೆ. ಇವು ಸಂಘಟಿತ ನೆಲೆಯ ಪ್ರತಿಭಟನೆಯ ಮೊದಲ ಎರಡು ಹಂತಗಳ ಸ್ಥೂಲ ಅವಲೋಕನವಾಗಿದೆ.

ಪ್ರತಿಭಟನಾ ಕವನಸಂಕಲನಗಳಲ್ಲಿ ಪ್ರತಿರೋಧಗಳನ್ನು ಎರಡು ಹಂತದಲ್ಲಿ ಗಮನಿಸಲಾಗಿದೆ. ಮೊದಲನೆಯದು, ೧೯೭೭ರ ಆರಂಭದೊಳಗೆ ಪ್ರಕಟವಾದ್ದದ್ದು ಹಾಗೂ ಎರಡನೆಯದು, ೧೯೭೭ರಲ್ಲಿ ತುರ್ತುಪರಿಸ್ಥಿತಿ ಕೊನೆಗೊಳ್ಳುವುದಕ್ಕಿಂತ ಮೊದಲು ಪ್ರಕಟಗೊಂಡ ಕವನಸಂಕಲನಗಳಾಗಿವೆ. ಈ ದಿಸೆಯಲ್ಲಿ ೧೯೭೭ರ ಆರಂಭದೊಳಗೆ ಪ್ರಕಟವಾದ ಕವನ ಸಂಕಲನಗಳಲ್ಲಿ ಪ್ರಮುಖವಾದುದು ಚಂದ್ರಶೇಖರ ಪಾಟೀಲರ *ಗಾಂಧಿ ಸ್ಮರಣೆ(೧೯೭೫)*. ಸರ್ಕಾರವು ಗಾಂಧಿ, ಠಾಗೂರ್ ಮೊದಲಾದ ಸ್ವಾತಂತ್ರ್ಯ ಹೋರಾಟಗಾರರ ಉಲ್ಲೇಖಗಳ ಬಳಕೆಯನ್ನು ಸೆನ್ಸಾರ್‌ನ ಮೂಲಕ ನಿಷೇಧಿಸಿದ್ದನ್ನು ಗಮನಿಸಬಹುದಾಗಿದೆ. ಗಾಂಧಿ ಸ್ಮರಣೆಯಲ್ಲಿ 'ಗಾಂಧಿ' ಎಂಬ ಹೆಸರು ಪ್ರತಿಭಟನೆಯ ಅಸ್ತ್ರದಂತೆ ಬಳಕೆಯಾಗಿದೆ. ವ್ಯಂಗ್ಯವಾಗಿ ಸರ್ಕಾರದ ಅಣಕ ಹಾಗೂ ಸಮಾಜದಲ್ಲಿ ಗಾಂಧಿ ಅಗತ್ಯದ ವಿವಿಧ ಆಯಾಮಗಳು ಕವನಗಳಲ್ಲಿ ಪ್ರತಿಫಲಿಸಿವೆ. ೧೯೭೭ರ ನಂತರ ತುರ್ತುಪರಿಸ್ಥಿತಿ[೨೨] ಕೊನೆಗೊಳ್ಳುವವರೆಗೆ ಪ್ರಕಟಿತವಾದ ಪ್ರಮುಖ ಕವನ ಸಂಕಲನಗಳೆಂದರೆ ಚಂದ್ರಶೇಖರ ಪಾಟೀಲರ *ಗಾಂಧಿ ಗಾಂಧಿ ಗಾಂಧಿ(ಜನವರಿ, ೧೯೭೭)*, ವಿಜಯ ಪಾಟೀಲ ಮತ್ತು ಮಂಗ್ಳೂರು ವಿಜಯ ಅವರ *ಕಪ್ಪು ಜನರ ಕೆಂಪು ಕಾವ್ಯ(ಫೆಬ್ರವರಿ, ೧೯೭೭)*, ಕಿ.ರಂ.ನಾಗರಾಜ ಅವರ *ಆಪತ್ಕಾಲೀನ ಕವಿತೆಗಳು(ಮಾರ್ಚ್, ೧೯೭೭)* ಮುಂತಾದವು.

ನನಗೆ ನಿನ್ನ ಬಗ್ಗೆ ನಾ ಹುಟ್ಟಿದ ನೆಲದ ಬಗ್ಗೆ
ಬರೆಯುವ ಹಕ್ಕಿಲ್ಲ. ಸುತ್ತಲೂ ಕಡಿವಾಣ ರನ್ನ ಲಗಾಮು.
ಬಿಕೋ ಎನ್ನುತ್ತಿರುವ ಸತ್ತ ಪತ್ರಿಕೆಗಳಲ್ಲಿ
ಸುಪ್ತ ಸ್ವಾತಂತ್ರ್ಯದ ಈ ಭೂಮಿ ಗೀತೆಯ ವ್ಯಥೆ
ಯಾವ ಸೂರ್ಟಿಡಿದು ಹಾಡಲ್ಹೇಳು ಗಾಂಧೀ ಹೇಳು(ಬಳ್ಳಾರಿ ೧೯೭೭: ೩೯-೪೦).

ಮತ್ತು

ಮಹಾತ್ಮ ಗಾಂಧಿಯ ಭೂತ ಇದ್ದಲ್ಲಿಂದ ಬಂದೀತು.
ಸ್ವರ್ಗದಿಂದ ಬಂದೀತು
ನರಕದಿಂದ ಬಂದೀತು
ನಮ್ಮಂತರಂಗದ ಅಂತರಾಳದ ಗವಿಯೊಳಗಿಂದ
ಬಂದೀತು(ಪಾಟೀಲ ೧೯೭೭: ೭೪-೭೫).

ಸ್ವಾತಂತ್ರ್ಯದ ಮೇಲಿನ ಕಡಿವಾಣವನ್ನು, ಭೂಮಿಯಲ್ಲಿನ ಸ್ವಾತಂತ್ರ್ಯದ ಸುಪ್ತ ಬಯಕೆಯನ್ನು ಯಾವ ಸ್ವರದಲ್ಲಿ ಹಾಡಲಿ ಹೇಳು ಎಂಬ ಪ್ರಶ್ನೆ ಸ್ವಾತಂತ್ರ್ಯದ ಅದಮ್ಯ ಬಯಕೆಯನ್ನು ವ್ಯಕ್ತಪಡಿಸಿರುವುದು. ಮತ್ತೊಂದೆಡೆ ಮಹಾತ್ಮ ಗಾಂಧಿಯ ಭೂತವನ್ನು ಸ್ವರ್ಗ, ನರಕ, ಕಡೆಗೆ ನಮ್ಮ ಅಂತರಾಳದ ಗವಿಗಳಿಂದ ಬಂದೀತು ಎನ್ನುವ ಮೂಲಕ ಸ್ವಾತಂತ್ರ್ಯ ಅವಿನಾಶಿ, ಅದನ್ನು ತಡೆಯಲು ಸಾಧ್ಯವಿಲ್ಲ ಎಂಬ ಭರವಸೆಯ ರೂಪ ನೋಡಬಹುದು. ಗಾಂಧಿ ಈ ವೇಳೆಗೆ ವ್ಯಕ್ತಿಯಲ್ಲ ವಸ್ತುವಾಗಿದ್ದು, ಸ್ವಾತಂತ್ರ್ಯದ ಪ್ರತೀಕವಾಗಿದ್ದರು. ಸ್ವಾತಂತ್ರ್ಯದ ಕನಸು, ಹೋರಾಟದ ಪ್ರತಿನಿಧಿಯಾಗಿ ವ್ಯಕ್ತಿಗಳ ಅಂತರಂಗದೊಳಗಿನಿಂದ ಹೊರಬರುತ್ತದೆಂಬ ಭಾವ ಹಾಗೂ ಆಶಯ ಇದೆ. ಈ ಕವನ ಸಂಕಲನದಲ್ಲಿ ಮುನ್ನುಡಿಯಾಗಲೀ, ಕವಿತೆಗಳ ವಸ್ತುವಿಷಯ ಅಥವಾ ಮುಖ್ಯವಾದ ಉದ್ದೇಶವನ್ನಾಗಲೀ ತಿಳಿಸಿಲ್ಲ. ಆದರೆ ಒಳಗಿನ ಕವನಗಳೇ ಕವಿತೆಗಳ ವಸ್ತುವಿಷಯ ಹಾಗೂ ಉದ್ದೇಶದ ಸ್ವರೂಪವನ್ನು ಚಿತ್ರಿಸುತ್ತಾ ಪ್ರತಿಭಟನೆಯನ್ನು ವ್ಯಕ್ತಪಡಿಸುವುದು. ಇಂತಹದೇ ಪ್ರತಿಭಟನೆಗಳನ್ನು *ಕಪ್ಪು ಜನರ ಕೆಂಪು ಕಾವ್ಯ(ಫೆಬ್ರವರಿ, ೧೯೭೭)* ಮತ್ತು *ಆಪತ್ಕಾಲೀನ ಕವಿತೆಗಳು(ಮಾರ್ಚ್, ೧೯೭೭)* ಕವನಸಂಕಲನದಲ್ಲಿ ನೋಡಬಹುದು. ಇದರೊಡನೆ ಸಮಕಾಲೀನವಾಗಿ ಸಾಹಿತ್ಯ ಪಂಥದಲ್ಲಿ ಉಂಟಾಗುತ್ತಿದ್ದ ಬದಲಾವಣೆಗಳಿಗೆ ಕವನಸಂಕಲನದ ಮುನ್ನುಡಿಯು ಕನ್ನಡಿ ಹಿಡಿಯುವುದು. *ಕಪ್ಪು ಜನರ ಕೆಂಪು ಕಾವ್ಯದಲ್ಲಿ(ಫೆಬ್ರವರಿ, ೧೯೭೭)* ಬದುಕು-ಬರಹ, ಸಾಹಿತ್ಯ ಮತ್ತು ಅಕ್ಷರಸ್ಥ ಶ್ರೀಸಾಮಾನ್ಯನ ನಡುವಿನ ಸಂಬಂಧದ ಸಂಕೀರ್ಣತೆ ಹಾಗೂ ಜವಾಬ್ದಾರಿಗಳನ್ನು ಚರ್ಚಿಸಲಾಗಿದೆ. ಈ ಕವನ ಸಂಕಲನದ ಕವನಗಳು ಹೊಸದೊಂದು ಸಮಾಜ ನೀತಿಗೆ ಹಾತೊರೆಯುತ್ತಿವೆ ಎಂಬ ಅಭಿಮತ ವ್ಯಕ್ತಪಡಿಸಿರುವರು. *ಆಪತ್ಕಾಲೀನ ಕವಿತೆಗಳು(ಮಾರ್ಚ್, ೧೯೭೭)* 'ನಾಗರಿಕ ಹಕ್ಕುಗಳು ಮತ್ತು ಅಭಿಪ್ರಾಯ ಸ್ವಾತಂತ್ರ್ಯಗಳ ಮೇಲೆ ಕ್ರೂರ ಹಲ್ಲೆ, ಸಮೂಹ ಮಾಧ್ಯಮಗಳನ್ನು ವಿಕೃತಗೊಳಿಸಿದ ಸಂದರ್ಭದಲ್ಲಿ ಕನ್ನಡ ಕವಿಗಳು ಮಂಡಿಸಿದ ದಾಖಲೆಗಳು ಈ ಕವನ ಸಂಕಲನದಲ್ಲಿದೆ ... ರಾಜಕೀಯ ಮತ್ತು ತೀರ ತತ್ಕಾಲೀನವನ್ನು ಶ್ರೇಷ್ಠ ಕಲೆಯನ್ನಾಗಿಸುವ ಸಮಸ್ಯೆ ಎಂದಿನಿಂದಲೂ ಇದ್ದದ್ದೇ. ತನ್ನ ಮಾಧ್ಯಮದ ಮೇಲೆ ನಿಯಂತ್ರಣ ಇರುವ ಕವಿ ಎಂಥ ಬಿಕ್ಕಟ್ಟಿನ ಸಂದರ್ಭದಲ್ಲಿಯೂ ಕ್ರಿಯಾಶೀಲ ಅಭಿವ್ಯಕ್ತಿಯನ್ನು ಸಾಧಿಸಲು ಪ್ರಯತ್ನಿಸುತ್ತಲೇ ಇರುತ್ತಾನೆ. ಶಕ್ತಿ ರಾಜಕಾರಣದ ಖಚಿತ ಸಾಮರ್ಥ್ಯಕ್ಕೂ ಕವಿಯ ಅಭಿವ್ಯಕ್ತಿಗೂ ತುಂಬ ಅಂತರವಿದೆ ... ಕವಿಯ ಮೂಲಕ ವ್ಯಕ್ತವಾಗುವ ರಾಜಕೀಯತ್ವ ಅನುಭವದಿಂದ ರೂಪುಗೊಂಡದ್ದು ಅಂಥ ಅನುಭವಗಳ ಯಶಸ್ವಿ ಸಂವಹನ ಅತ್ಯಂತ ಮುಖ್ಯವಾದದ್ದೂ ಆಗುತ್ತದೆ ... ರಾಜಕೀಯದ ಆಸಕ್ತಿಗಳು ವೈಯಕ್ತಿಕ ಥೀಮ್‌ಗಳನ್ನು ದುರ್ಬಲಗೊಳಿಸುವುದಿಲ್ಲ. ಮಿಗಿಲಾಗಿ ಅದನ್ನು ಹೆಚ್ಚು ದಟ್ಟವೂ, ಖಚಿತವನ್ನಾಗಿಯೂ ಮಾಡುತ್ತದೆಂಬ ಚಿಂತನೆಗಳಲ್ಲಿ ಕವನಸಂಕಲನ ಹೊರಬಂದಿದೆ' ಎಂದಿದೆ. ಮೊದಲ ಕವನ ಸಂಕಲನದಲ್ಲಿ ಸ್ವಾತಂತ್ರ್ಯ ಹರಣದ ವಿರೋಧ ಮತ್ತು ಸ್ವಾತಂತ್ರ್ಯ ಬೇಕೆಂಬ ತೀವ್ರತೆ ವ್ಯಕ್ತಗೊಂಡಿದ್ದು, ಪ್ರತಿಭಟನೆ ಕ್ರಿಯೆಯ ರೂಪದಲ್ಲಿದ್ದು ಯಾವುದೇ ರೀತಿಯ ನೇರವಾದ ಚರ್ಚೆ ಕಂಡುಬರುವುದಿಲ್ಲ. ಎರಡನೆಯದರಲ್ಲಿ ಬದುಕು-ಬರಹ ಹೊಸತೊಂದು ಸಮಾಜ ನೀತಿಗೆ ಹಾತೊರೆಯುತ್ತಿವೆ ಎಂಬ ಅಭಿಲಾಷೆ, ಅಭಿಮತ ಕಂಡುಬರುವುದು. ಮೂರನೆಯದರಲ್ಲಿ ಪ್ರತಿಭಟನೆಯ ಕ್ರಿಯೆ, ಅಭಿಲಾಷೆ ಮತ್ತು ಅಭಿಮತಗಳು ಸಾಹಿತ್ಯ ಪಂಥದಲ್ಲಿ ಬೆಳೆದುಬರುತ್ತಿರುವ ಹೊಸ ಚಿಂತನೆಯನ್ನು ದಾಖಲಿಸುವುದು. ರಾಜಕಾರಣ ಸಾಹಿತ್ಯದ ಸೃಜನಶೀಲತೆಯನ್ನು ಹೆಚ್ಚಿಸುತ್ತದೆ ಹಾಗೂ

ಸಮಾಜಕ್ಕೆ ಸ್ಪಂದಿಸದ ಸಾಹಿತ್ಯ ಅರ್ಥಹೀನ ಎಂಬ ವಿಚಾರಗಳು ಪ್ರತಿಭಟನಾ ಸಾಹಿತ್ಯಗಳಲ್ಲಿ ಹೆಚ್ಚು ಹೆಚ್ಚು ಮೂಡಿಬರುವುದನ್ನು ಗುರುತಿಸಬಹುದು. ಇದು ಸಮಾಜ ಮತ್ತು ರಾಜಕಾರಣಗಳಿಂದ ಪ್ರಭಾವಿತವಾದ ಹೊಸ ಸಾಹಿತ್ಯಿಕ ಪಂಥದ ಬೆಳವಣಿಗೆಯ ಪ್ರಕ್ರಿಯೆಗಳ ಮೇಲೆ ಬೆಳಕು ಹರಿಸುವುದು. ಜೊತೆಗೆ ನಾಟಕಗಳ ರಚನೆಯಲ್ಲಿ ಸಮಕಾಲೀನ ರಾಜಕಾರಣದ ಪ್ರಭಾವ ಅಪಾರವಾಗಿ ಕಂಡುಬರುವುದು. ಏಕಕಾಲದಲ್ಲೆ ಈ ಪ್ರಕಾರ ಸಾಹಿತ್ಯ ಮಾಧ್ಯಮ ಹಾಗೂ ದೃಶ್ಯ ಮಾಧ್ಯಮ ಎರಡೂ ಆಗಿದೆ. ದೃಶ್ಯ ಮಾಧ್ಯಮಗಳಲ್ಲಿ ನಾಟಕಗಳಲ್ಲಿ ವ್ಯಕ್ತವಾದ ಪ್ರತಿಭಟನಾ ಸ್ವರೂಪವನ್ನು ಚರ್ಚಿಸಲಾಗುತ್ತದೆ.

**೩.೧.೧.೨.೨.೩. ದೃಶ್ಯ ಮಾಧ್ಯಮಗಳಲ್ಲಿ ಪ್ರತಿಭಟನೆ**

ಸಮಾಜದಲ್ಲಿ ಕಂಡುಬಂದ ಪ್ರತಿಭಟನೆಗಳು ದೃಶ್ಯ ಮಾಧ್ಯಮಗಳಲ್ಲಿ ಅಭಿವ್ಯಕ್ತಿ ಪಡೆದ ಬಗೆಗಳನ್ನು ಇಲ್ಲಿ ಚರ್ಚಿಸಲಾಗಿದೆ. ದೃಶ್ಯ ಮಾಧ್ಯಮಗಳೆಂದು ರಂಗಭೂಮಿ, ಸಿನಿಮಾ ಮತ್ತು ವ್ಯಂಗ್ಯಚಿತ್ರಗಳನ್ನು ಪರಿಗಣಿಸಲಾಗಿದೆ. ರಂಗಭೂಮಿ ಮತ್ತು ಸಿನಿಮಾದ ನಡುವಿನ ಪ್ರತಿಭಟನೆಗಳಲ್ಲಿ ಸಾಕಷ್ಟು ಸಾಮ್ಯತೆಗಳಿದೆ. ಈ ಎರಡು ವಿಭಾಗಗಳಲ್ಲಿಯೂ ಒಂದೆ ರೂಪದ ಪ್ರತಿಭಟನಾ ತಂತ್ರಗಳ ಬಳಕೆ ನೋಡಬಹುದಾಗಿದೆ. ವ್ಯಂಗ್ಯ ಚಿತ್ರಗಳು ಸಮಕಾಲೀನ ಸಮಾಜ ಮತ್ತು ರಾಜಕಾರಣದಿಂದ ಪ್ರಭಾವಿತವಾಗಿದ್ದು, ಪತ್ರಿಕಾ ಮಾಧ್ಯಮಗಳಲ್ಲಿ ಅಧಿಕವಾಗಿ ಪ್ರಕಟಗೊಳ್ಳುವುವು. ಅಲ್ಲದೇ ಸರ್ಕಾರದ ಸೆನ್ಸಾರ್‌ಷಿಪ್ ನೀತಿಗಳಲ್ಲಿಯೂ ಪತ್ರಿಕಾ ಮಾಧ್ಯಮದ ಭಾಗವೆಂದು ಗುರುತಿಸಲ್ಪಟ್ಟಿವೆ. ಆ ಕಾನೂನು ಪದ್ಧತಿಗಳೇ ಇದಕ್ಕೂ ಅನ್ವಯಿಸುತ್ತಿತ್ತು. ಇದರೊಡನೆ ಸರ್ಕಾರದ ವಿರುದ್ಧದ ವ್ಯಂಗ್ಯಚಿತ್ರವನ್ನು ಪ್ರತಿಭಟನೆಗಳ ಭಾಗವಾಗಿ ನೋಡಲಾಗುತ್ತಿತ್ತು. ವ್ಯಂಗ್ಯಚಿತ್ರಗಳು ರೇಖಾಚಿತ್ರಗಳಲ್ಲಿ ಪರಿಣತಿ ಹೊಂದಿರುವ ಕಲಾವಿದನ ಸೃಷ್ಟಿಗಳಾಗಿದ್ದು, ದೃಶ್ಯ ಮಾಧ್ಯಮದ ಮೂಲಕ ತನ್ನ ಪ್ರಭಾವ ಬೀರುವುದು. ಈ ದಿಸೆಯಲ್ಲಿ ವ್ಯಂಗ್ಯಚಿತ್ರಗಳನ್ನು ದೃಶ್ಯ ಮಾಧ್ಯಮವನ್ನಾಗಿ ನೋಡಲಾಗಿದೆ. ಮೊದಲಿಗೆ ರಂಗಭೂಮಿಯಲ್ಲಿ ಕಂಡುಬಂದ ಪ್ರತಿಭಟನೆಗಳ ರೂಪವನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ.

**೩.೧.೧.೨.೨.೩.೧. ರಂಗಭೂಮಿ**

ಆಂತರಿಕ ತುರ್ತುಪರಿಸ್ಥಿತಿ ಸಂದರ್ಭದಲ್ಲಿ ರಂಗಭೂಮಿ ಪ್ರತಿರೋಧ ವ್ಯಕ್ತಪಡಿಸುವ ಪ್ರಮುಖ ವೇದಿಕೆಗಳಲ್ಲೊಂದಾಗಿತ್ತು. ರಂಗಭೂಮಿಯಲ್ಲಿ ಕಂಡುಬರುವ ಪ್ರತಿರೋಧಗಳನ್ನು ಮೂರು ಗುಂಪುಗಳಲ್ಲಿ ಗುರುತಿಸಲಾಗಿದೆ. ಅವುಗಳೆಂದರೆ, ಹವ್ಯಾಸಿ ರಂಗಭೂಮಿ, ಕಂಪನಿ ನಾಟಕ ಮತ್ತು ಬೀದಿ ನಾಟಕಗಳು. ಹವ್ಯಾಸಿ ರಂಗಭೂಮಿಯಲ್ಲಿ ರಾಜಕೀಯ ಕಥಾವಸ್ತುವಿನ ನಾಟಕಗಳಲ್ಲಿ ನಿರ್ದಿಷ್ಟವಾದ ಬದಲಾವಣೆಗಳೊಂದಿಗೆ ನಾಟಕಗಳು ಪ್ರದರ್ಶನಕ್ಕೊಳಪಟ್ಟವು. ಪ್ರಸನ್ನ ಅವರ ನಿರ್ದೇಶನದ ಹುತ್ತವ ಬಡಿದರೆ,[೨೮] ಗೆಲಿಲಿಯೊ, ಭಸ್ಮಾಲ, ತಾಯಿ, ಪತ್ರೆ ಸಂಗಪ್ಪ, ಗರೀಬಿ ಹಟಾವೋ ಮತ್ತು ಬಿ.ವಿ.ಕಾರಂತರ ನಿರ್ದೇಶನದ ಸತ್ತವರ ನೆರಳು ಮುಂತಾದವು ತುರ್ತುಪರಿಸ್ಥಿತಿ ವಿರೋಧಿ ನೆಲೆಯಲ್ಲಿ ಹೆಚ್ಚು ಪ್ರದರ್ಶಿತಗೊಳ್ಳುತ್ತಿದ್ದವು ಎಂದು ಗುರುತಿಸಲಾಗುವುದು. ಕಂಪನಿ ನಾಟಕಗಳಲ್ಲಿ ಚಾರಿತ್ರಿಕ ಕಥೆ ಆಧಾರಿತ ನಾಟಕಗಳ ಮೂಲಕ ಪ್ರತಿಭಟನಾ ಧ್ವನಿ ಕಾಣಬಹುದು. ಆದರೆ ಪ್ರಭಾವಯುತವಾಗಿ ರೂಪುಗೊಳ್ಳುವಲ್ಲಿ ಬಹುತೇಕ ವಿಫಲವಾದವು. ತುರ್ತುಪರಿಸ್ಥಿತಿ ವಿರೋಧಿ ಹಿನ್ನೆಲೆಯಲ್ಲಿ ಹೆಚ್ಚು ಜನಪ್ರಿಯತೆ ಪಡೆದುಕೊಂಡ ನಾಟಕಗಳೆಂದರೆ ಮಾಸ್ಟರ್ ಹಿರಣಯ್ಯ[೨೯] ಅವರ ಭ್ರಷ್ಟಾಚಾರ, ಲಂಚಾವತಾರ ಮುಂತಾದವು. ಇಲ್ಲಿ ರಾಜಕೀಯ ಮತ್ತು ಸಾಮಾಜಿಕ ಸಮಸ್ಯೆಗಳ ವಿಚಾರಗಳನ್ನು ಸಂಭಾಷಣೆಗೆ ಬಳಸಲಾಗುತ್ತಿತ್ತು. ಇಂದಿಗೂ ಸಹ ಈ ನಾಟಕಗಳು ನಡೆಯುತ್ತಿವೆ. ತುರ್ತುಪರಿಸ್ಥಿತಿ ಕಾಲದಲ್ಲಿ ಕಂಡುಬಂದ ಸ್ವರೂಪ ಬೇರೆಯಾಗಿದ್ದು, ಕಾಲಕಾಲಕ್ಕೆ ಇದರ ವಸ್ತುವಿಷಯ ಮತ್ತು ಸ್ವರೂಪ ರೂಪಾಂತರಗೊಳ್ಳುತ್ತಿರುತ್ತದೆ. ಮಾಸ್ಟರ್ ಹಿರಣಯ್ಯ ಅವರು ವೈಯಕ್ತಿಕ ನೆಲೆಯಲ್ಲಿ ವೇದಿಕೆಯನ್ನು ಬಳಸಿಕೊಂಡು ಪ್ರತಿಭಟನೆ ವ್ಯಕ್ತಪಡಿಸಿರುವುದಾಗಿದೆ. ಬೀದಿ ನಾಟಕಗಳು ಅತ್ಯಂತ ಪ್ರಭಾವಿ ಮಾಧ್ಯಮವಾಗಿ ಸರ್ಕಾರದ ಕಾರ್ಯನೀತಿ ಮತ್ತು ರಾಜಕಾರಣವನ್ನು ಪ್ರತಿಭಟಿಸಿದವು. ನಂತರದಲ್ಲಿ ಚಳುವಳಿಯನ್ನು ರೂಪಿಸುವಷ್ಟು ಪ್ರಬಲವಾದವು.

ಬೀದಿ ನಾಟಕಗಳು ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳಲ್ಲಿ ಹೆಚ್ಚು ಪ್ರಸಿದ್ಧಿ ಪಡೆದವು. ೧೯೭೦ರ ದಶಕದ ಆರಂಭದಲ್ಲೆ 'ಚಿತ್ರ' ಎಂಬ ಸಂಘದ ಮೂಲಕ ಬೀದಿ ನಾಟಕಗಳು ನಡೆಯುತ್ತಿದ್ದರೂ, ಹೆಚ್ಚು ಪ್ರಚಲಿತವಾಗಿರಲ್ಲಿಲ್ಲ. ತುರ್ತುಪರಿಸ್ಥಿತಿ ಜಾರಿಯನ್ನು ವಿರೋಧಿಸಿ 'ಗೆಳೆಯರ ಗುಂಪಿನ' ಎ.ಎಸ್.ಮೂರ್ತಿ ಮತ್ತು ವಿಜಯಾ ಅವರು ಬೀದಿ ನಾಟಕಗಳ ಮೂಲಕ ಪ್ರತಿಭಟನೆಗಳನ್ನು ವ್ಯಕ್ತಪಡಿಸತೊಡಗಿದ್ದರು. ಈ ದಿಕ್ಕಿನಲ್ಲಿ

> ಚಂಪ ಅವರು ಹೇಳುವ ಹಾಗೆ ನಾವೆಲ್ಲ ಬೀದಿ ನಾಟಕಗಳನ್ನು ಮಾಡುವ ಮೂಲಕ ಜನರಲ್ಲಿ ಏನಾಗ್ತಾ ಇದೆ ಎನ್ನುವ ಎಚ್ಚರವನ್ನ ಮೂಡಿಸೋಕೆ ಪ್ರಯತ್ನ ಮಾಡಿದ್ವಿ ... ಹರಿಹರಪ್ರಿಯ ಅವರು ನಮ್ಮ ಎಲ್ಲ ಬೀದಿ ನಾಟಕಗಳ ಹಿಂದೆ ಹಳ್ಳಿಹಳ್ಳಿ ಸುತ್ತಿದವ್ರು. ಈ ಬೀದಿ ನಾಟಕ ಮಾಡ್ತಾಯಿದ್ದ ಹೊತ್ತಿಗಾಗಲೆ ನಮ್ಮ ಅನೇಕ ರಾಜಕಾರಣಿಗಳನ್ನ ಜೈಲಿಗೆ ಹಾಕಲಾಗಿತ್ತು. ವೆಂಕಟರಾಮು ಅವರಿಗೆ ನಾನು ಕೆಲವು ಮಾಹಿತಿಗಳನ್ನು ಒದಗಿಸಬೇಕಾಗಿತ್ತು. ಅವರು ಭೂಗತರಾಗಿದ್ದರು. ನಮಗೆ ಅನೇಕ ಸಲ ಬೇರೆಬೇರೆ ಕಡೆಯಿಂದ ಬರ್‍ತಾಯಿದ್ದ ಮಾಹಿತಿಗಳನ್ನ ವೆಂಕಟರಾಮು ಅವರಿಗೆ ತಲುಪಿಸ್ತಾಯಿದ್ದ ಕೆಲಸ ನಮ್ಮದಾಗಿತ್ತು. ಹೀಗಾಗಿ ಬೀದಿ ನಾಟಕ ಮಾಡುವಾಗ ಸ್ವಲ್ಪ ಸಿಐಡಿಗಳ ಹಿಂಡುಹಿಂಡೇ ಇರ್‍ತಾಯಿತ್ತು(ವಿಜಯ ೨೦೧೧ ಜೂನ್ ೨೬).

ಬೀದಿ ನಾಟಕಗಳು, ನಾಟಕಕಾರರು ಮತ್ತು ಭೂಗತ ಹೋರಾಟಗಾರರ ನಡುವೆ ಇದ್ದ ಸಂಬಂಧ ಹಾಗೂ ಸರ್ಕಾರದ ಚಿಂತನೆಗಳನ್ನು ಅನಾವರಣಗೊಳಿಸುವುವು.

ಸಾಂಸ್ಕೃತಿಕ ರಂಗಗಳಲ್ಲಿ ತೊಡಗಿಕೊಂಡಿರುವವರು ಪ್ರತಿಭಟನೆ ವ್ಯಕ್ತಪಡಿಸಲು ವೇದಿಕೆಯ ಅಗತ್ಯ ಮನಗಂಡು ನಡೆದ ಪ್ರಯತ್ನಗಳ 'ಸಮುದಾಯ' ಎಂಬ ಸಾಂಸ್ಕೃತಿಕ ವೇದಿಕೆಯ ಹುಟ್ಟಿಗೆ ಕಾರಣವಾಯಿತು. ಈ ಮೂಲಕ ಎಪ್ಪತ್ತರ ದಶಕದ ಮಧ್ಯೆದಲ್ಲಿ ಕನ್ನಡ ರಂಗಭೂಮಿಯಲ್ಲಿ ಎಡ ಪಂಥೀಯ ರಾಜಕೀಯ ಗುಂಪೊಂದು ಜಾಗ್ರತವಾಯಿತು ಎಂಬ ಅಭಿಮತವಿದೆ. ಈ ಪ್ರಕ್ರಿಯೆಯನ್ನು ದೇಶದಾದ್ಯಂತ ವಿಶೇಷವಾಗಿ ಬೀದಿ ನಾಟಕಗಳ ಹಿನ್ನೆಲೆಯಲ್ಲಿ ಗುರುತಿಸಬಹುದು. ಕೊಲ್ಕತ್ತಾದ 'ದಿ ಜನ ನಾಟ್ಯ ಮಂಚ್', ಆಂಧ್ರ ಪ್ರದೇಶದ 'ಆಂಧ್ರ ಪ್ರಜಾ ನಾಟ್ಯಮಂಡಲಿ', ಕೇರಳದ 'ಕೇರಳ ಶಾಸ್ತ್ರ ಸಾಹಿತ್ಯ ಪರಿಷತ್' ಮೊದಲಾದವು ಸಮಕಾಲೀನವಾಗಿ ರೂಪುಗೊಂಡ ಅಥವಾ ಪುನಃಶ್ಚೇತನ ಪಡೆದವು. ಇವು ಎಡಪಂಥೀಯ ಸೈದ್ಧಾಂತಿಕ ಗುಂಪುಗಳೊಂದಿಗೆ ಗುರುತಿಸಿಕೊಂಡ ಥಿಯೇಟರ್‌ಗಳು. ಸಮುದಾಯವು ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಿ ಹುಟ್ಟಿದರೂ ಸಂವಿಧಾನಬದ್ಧವಾಗಿ ಅಸ್ತಿತ್ವಕ್ಕೆ ಬಂದಿದ್ದು ೧೯೭೭ರ ಅಕ್ಟೋಬರ್ ನಂತರ. ತುರ್ತುಪರಿಸ್ಥಿತಿ ನಂತರದ ರಾಜಕೀಯ ಬೆಳವಣಿಗೆಗಳಲ್ಲಿ ಮಹತ್ವದ ಪಾತ್ರ ನಿರ್ವಹಿಸಿದೆ. ಸಮುದಾಯದ ಬೆಳವಣಿಗೆಯನ್ನು ತುರ್ತುಪರಿಸ್ಥಿತಿಯ ಪ್ರಭಾವ ಪರಿಣಾಮಗಳ ನೆಲೆಯಲ್ಲಿ ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗುತ್ತದೆ.

ಬೀದಿ ನಾಟಕಗಳು ಅಲ್ಲಿಯವರೆಗೆ ಸಾಮಾಜಿಕ ಪರಿವರ್ತನೆಯ ಗುರಿಯನ್ನು ಹೊಂದಿದ್ದರೂ ಸಮುದಾಯದವರ ನಾಟಕಗಳಿಗಿಂತ ಭಿನ್ನವಾಗಿದ್ದವು. ಸಾಮಾಜಿಕ ಅವನತಿಯ ಹಿಂದಿರುವ ವ್ಯವಸ್ಥೆ, ಅದರ ಚರಿತ್ರೆಯನ್ನು ಸಮುದಾಯದ ನಾಟಕಗಳು ವಿಶ್ಲೇಷಿಸಿದರೆ, ಉಳಿದವರು ವ್ಯಕ್ತಿಯ ನೆಲೆಯಲ್ಲೆ ಇದಕ್ಕೆ ಕಾರಣವನ್ನು ಹುಡುಕುತ್ತಾರೆ ಎಂದು ಮರುಳಸಿದ್ದಪ್ಪ ಅವರು ವಿಶ್ಲೇಷಿಸುವರು. ಉದಾಹರಣೆಯಾಗಿ, ತುರ್ತುಪರಿಸ್ಥಿತಿ ಪೂರ್ವದಿಂದಲೂ ಇದ್ದ 'ಜಗದಂಬೆಯ ಬೀದಿ ನಾಟಕ' ಪ್ರಧಾನಿ ನಿರಂಕುಶಾಧಿಕಾರಿ ಯಾಗುತ್ತಿದ್ದ ವ್ಯಕ್ತಿ ನೆಲೆಯ ವ್ಯಂಗ್ಯ ವಿಡಂಬಣೆ ಆಗಿದೆ. ೧೯೭೭ರಲ್ಲಿ ಪ್ರಕಟಗೊಂಡ ಸಮುದಾಯ ಕೃತಿಯಲ್ಲಿ 'ಸಮೂಹ ಶಿಕ್ಷಣದ ಉದ್ದೇಶ ಹೊಂದಿದ ರಂಗ ಚಟುವಟಿಕೆಯ ಪರಿಚಯ' ಎಂದು ಉದ್ದೇಶವನ್ನು ವಿವರಿಸಲಾಗಿದೆ. ಅದರಲ್ಲಿ 'ಸಮಾಜದ ಬದಲಾವಣೆ ರಾಜಕೀಯ ಚಳುವಳಿಯಿಂದ ಆಗಬೇಕಾದ ಕೆಲಸ ... ಸಾಂಸ್ಕೃತಿಕ ಚಳುವಳಿಗೆ ನಿರ್ವಹಿಸಬೇಕಾಗಿರುವ ಮುಖ್ಯ ಕೆಲಸವೊಂದಿದೆ; ಜನರಿಗೆ ಅದು ಕ್ರಾಂತಿಕಾರಿ ಶಿಕ್ಷಣ ನೀಡುವುದು, ಜನರಲ್ಲಿ ವೈಜ್ಞಾನಿಕ ದೃಷ್ಟಿಕೋನ ಬೆಳೆಯುವಂತೆ ಮಾಡುವುದೆಂಬ ಹೊಸ ಧೋರಣೆ ರಂಗಭೂಮಿಯಲ್ಲಿ ಬೆಳೆದು ಬಂದಿರುವುದು. ಸಾಹಿತ್ಯದಲ್ಲಿ ಶುದ್ಧ ಸಾಹಿತ್ಯ ಮುಂತಾದವನ್ನು ವಿರೋಧಿಸುವ, ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಧಾರೆಗಳು ಸೃಜನಶೀಲತೆಯನ್ನು ಕಡಿಮೆಗೊಳಿಸದೆ ಹೆಚ್ಚಿಸುತ್ತದೆ' ಎಂಬ ಅಭಿಮತವನ್ನು ಕಾಣಬಹುದು. ರಂಗಭೂಮಿಯಲ್ಲಿಯೂ ಈ ಚಿಂತನೆ ಪ್ರಮುಖ ಪಾತ್ರ ನಿರ್ವಹಿಸಿದೆ.

### ೩.೧.೧.೨.೨.೩.೨. ಸಿನಿಮಾರಂಗ

ಸಮಾಜದ ಮನೋಭಾವ ಮತ್ತು ಸಂಸ್ಕೃತಿಯನ್ನು ಸಿನಿಮಾ ಸ್ಥೂಲವಾಗಿ ಪ್ರತಿಬಿಂಬಿಸುತ್ತದೆ. ರಾಷ್ಟ್ರೀಯ ವಲಯದ ಪ್ರಮುಖ ವಿಚಾರಗಳ ಆಶಯದ ಸ್ಥೂಲ ಆಕೃತಿಗಳು ಸಿನಿಮಾಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ. ವ್ಯಾಪಾರಿ ಎಂದು ಕರೆಸಿಕೊಳ್ಳುವ ಸಿನಿಮಾಗಳು ಸೃಷ್ಟಿಸಿರುವ ವಾತಾವರಣ ಸಾಮಾಜಿಕ ಪರಿಸರದ ಫಲಶ್ರುತಿಯೆ ಆಗಿದೆ ಎಂಬ ಬರಗೂರು ರಾಮಚಂದ್ರಪ್ಪ ಅವರ ವಿಶ್ಲೇಷಣೆಯನ್ನು ಕಾಣಬಹುದು. ಇದು ಜನಪ್ರಿಯ ಸಿನಿಮಾಗಳ ಕುರಿತಂತೆ ಸಾಮಾನ್ಯವಾಗಿ ಕಂಡುಬರುವ ನಕಾರಾತ್ಮಕ ಅಭಿಪ್ರಾಯಗಳನ್ನು ತಿರಸ್ಕರಿಸುವುದು. ೧೯೭೫ ರಿಂದ ೧೯೭೭ರ ತನಕ ಮೂರು ವರ್ಷಗಳಲ್ಲಿ ತುರ್ತುಪರಿಸ್ಥಿತಿ, ಸರ್ಕಾರ, ಆಡಳಿತಶಾಹಿ ವಿರೋಧಿಸಿ, ಅವುಗಳನ್ನು ಪ್ರಶ್ನಿಸುವ ಹಾಗೂ ಪ್ರತಿಭಟಿಸುವ ಚಿತ್ರಗಳನ್ನು ಮೂರು ಭಾಗಗಳಲ್ಲಿ ಚರ್ಚಿಸಲಾಗಿದೆ. ಇದರೊಡನೆ ಸರ್ಕಾರದಿಂದ ತೊಂದರೆಗೊಳಗಾದ, ನಿಷೇಧಿತವಾದ ಚಿತ್ರಗಳು ಮತ್ತು ಜನಪ್ರಿಯ ಚಿತ್ರಗಳಲ್ಲಿ ಸಮಕಾಲೀನವಾಗಿ ಕಂಡುಬಂದ ಪ್ರತಿಭಟನೆಗಳನ್ನು ಪರಾಮರ್ಶಿಸಲು ಪ್ರಯತ್ನ ಮಾಡಲಾಗಿದೆ.

### ೩.೧.೧.೨.೨.೩.೨.೧. ಸಿನಿಮಾ ಮತ್ತು ಸೆನ್ಸಾರ್‌ಷಿಪ್

ಅತ್ಯಂತ ಪ್ರಭಾವಿ ಸಮೂಹ ಮಾಧ್ಯಮಗಳಲ್ಲಿ ಒಂದಾದ ಸಿನಿಮಾರಂಗದ ಮೇಲೆ ಸೆನ್ಸಾರ್‌ಷಿಪ್ ಹಿಡಿತ ತೀವ್ರವಾಗಿತ್ತು. ತುರ್ತುಪರಿಸ್ಥಿತಿ ಕಾಲದಲ್ಲಿ ರಾಷ್ಟ್ರವ್ಯಾಪ್ತಿಯಾದ್ಯಂತ ಅನೇಕ ಚಿತ್ರಗಳು ಸರ್ಕಾರದಿಂದ ತೊಂದರೆಗೆ ಒಳಗಾದವು.

> ಈ ಕಾಲಘಟ್ಟದಲ್ಲಿ ಇಂದಿರಾ ಗಾಂಧಿ ಅವರ ಸರ್ಕಾರ ದೇಶದ ಅಭಿವೃದ್ಧಿ ಕಾರ್ಯಗಳಿಗೆ ಸಮಾಜವಾದಿ ಘೋಷಣೆಗಳನ್ನು ಬಳಸುತ್ತಿತ್ತು ಈ ಮೂಲಕ ಎಡಪಂಥೀಯ ಮತ್ತು ಬಲಪಂಥೀಯ ವಿರೋಧ ಪಕ್ಷಗಳ ಶಕ್ತಿಯನ್ನು ಪರಿಣಾಮಕಾರಿಯಾಗಿ ನಿಯಂತ್ರಿಸುತ್ತಿದ್ದದ್ದನ್ನು ಕಾಣಬಹುದು. ಭಾರತದ ರಾಜ್ಯಗಳನ್ನು ಸಾರ್ವಭೌಮ, ಸಮಾಜವಾದಿ, ಜಾತ್ಯಾತೀತ, ಗಣತಂತ್ರೀಯ ಪ್ರಜಾಪ್ರಭುತ್ವವಾದಿ ತತ್ವಗಳ ನೆಲೆಯಲ್ಲಿ ಬಿಂಬಿಸಲಾಗುತ್ತಿತ್ತು. ಬ್ಯಾಂಕುಗಳ ರಾಷ್ಟ್ರೀಕರಣ, ರಾಜಧನ ರದ್ದತಿ, ಕಲ್ಲಿದ್ದಲಿನ ಗಣಿಗಳ ರಾಷ್ಟ್ರೀಕರಣವನ್ನು ಕಾಣಬಹುದಾಗಿದೆ. ಈ ಅಭಿವೃದ್ಧಿ ಕಾರ್ಯಕ್ರಮಗಳ ನೆರಳಿನಲ್ಲಿ ರಾಜ್ಯಗಳಲ್ಲಿ ಅಸಹನೆ ಹಾಗೂ ಸರ್ಕಾರಗಳ ನಿರಂಕುಶತ್ವ, ರಾಜಕೀಯ, ಆರ್ಥಿಕ ಸಮಸ್ಯೆಗಳು ಹೆಚ್ಚಾಗುತ್ತಿದ್ದವು(ಭೌಮಿಕ್ ೨೦೦೮: ೧೯೮).

ನೇರವಾಗಿ ತುರ್ತುಪರಿಸ್ಥಿತಿ ಕಾಲದ ಸಿನಿಮಾ ಮತ್ತು ಸೆನ್ಸಾರ್‌ಷಿಪ್ ಕುರಿತು ಮಾತನಾಡದಿದ್ದರೂ, ೧೯೭೦ರ ದಶಕದ ರಾಜಕಾರಣ ಮತ್ತು ಸಮಾಜದ ಪ್ರಭಾವ ಸಿನಿಮಾದಲ್ಲಿ ರೂಪುತಳೆದಿರುವುದನ್ನು ವಿವರಿಸುವುದು. ಇವುಗಳ ವಿವಿಧ ಸ್ವರೂಪ ಕಲಾತ್ಮಕ ಮತ್ತು ವಾಣಿಜ್ಯ ಚಿತ್ರಗಳಲ್ಲಿ ಪ್ರಕಟಗೊಳ್ಳುತ್ತಿದ್ದು, ಸರ್ಕಾರ ನಿಯಂತ್ರಿಸಲು ಪ್ರಯತ್ನಿಸಿದ್ದದ್ದನ್ನು ಕಾಣಬಹುದು. ಸರ್ಕಾರಕ್ಕೆ ಸಮಾಜದಲ್ಲಿ ದಿನೇದಿನೇ ಹೆಚ್ಚುತ್ತಿದ್ದ ಅಸಹನೆ, ಆಕ್ರೋಶಗಳನ್ನು ತಡೆ ಹಿಡಿಯುವ ಅಗತ್ಯ ಏರ್ಪಟ್ಟಿತ್ತು. ಇದು ತುರ್ತುಪರಿಸ್ಥಿತಿ ಕಾಲದಲ್ಲಿ ಇನ್ನೂ ಹೆಚ್ಚು ತೀವ್ರವಾಗಿ ವ್ಯಕ್ತವಾಯಿತು. ಮಾಹಿತಿ ಮತ್ತು ಪ್ರಸಾರ ಖಾತೆ ಸಚಿವರು(೧೯೭೫ರ ಆಗಸ್ಟ ೧೪) ಪತ್ರಿಕಾ ವರದಿಗಾರರಿಗೆ ನೀಡಿದ ಕೆಲವು ಸೂಚನೆಗಳಲ್ಲಿ, ಸಿನಿಮಾದಲ್ಲಿ ನಿಷೇದಿಸಿರುವುದನ್ನು ಮುದ್ರಣ ಮಾಧ್ಯಮದಲ್ಲಿಯೂ ನಿಷೇಧಿಸಲಾಗಿದೆ ಎಂದಿರುವುದು ಗಮನಾರ್ಹ. ಜೊತೆಗೆ ಸಿನಿಮಾ ನಿಯತಾಕಾಲಿಕೆಗಳ ಜಾಹೀರಾತು ವಿಭಾಗದ ಮೇಲೂ ಹಿಡಿತ ವಿಸ್ತರಿಸುವ ಮುಖೇನ ಸಿನಿಮಾರಂಗದ ಸೆನ್ಸಾರ್‌ಷಿಪ್ ಕಾಯ್ದೆಗಳನ್ನು ಮತ್ತಷ್ಟು ಬಿಗಿಗೊಳಿಸಲಾಯಿತು. ಕ್ರೌರ್ಯ, ಹಿಂಸೆಗಳ ದೃಶ್ಯ ಹೆಚ್ಚಾಗಿರುವ ಸಿನಿಮಾಗಳಿಗಿಂತ ರಾಜಕೀಯ ಇಂಗಿತಗಳನ್ನು ಬಿಂಬಿಸುವ ಚಿತ್ರಗಳು ಸರ್ಕಾರವನ್ನು ಹೆಚ್ಚು ಬಾದಿಸುತ್ತಿದ್ದಂತೆ ಕಂಡುಬರುವುದು.

> ಸಿನಿಮಾ ಸೆನ್ಸಾರ್‌ಷಿಪ್: ವಾಟ್ ಇಸ್ ನವ್? ವಾಟ್ ಇಸ್ ನೆಕ್ಸ್ಟ್? ಎಂಬ ವಿಚಾರ ಸಂಕಿರಣದಲ್ಲಿ ಅಮೃತ್ ನಹತ ಅವರು ಈಗಿನ ಸೆನ್ಸಾರ್‌ಷಿಪ್ ನೀತಿಯನ್ನು ಟೀಕಿಸಿದರು. ಉತ್ತಮ ಸಿನಿಮಾಗಳನ್ನು ಬೆಳಸಲು ಪೂರಕವಾಗಿಲ್ಲ. ಬ್ರಿಟಿಷ್ ಪರಂಪರೆಯಿಂದ ಬಂದದ್ದು ... ಹೊಸ ಸರ್ಕಾರ ಬಂದ ನಂತರ ಈ ಸೆನ್ಸಾರ್‌ಷಿಪ್ ನೀತಿ ಇರುವುದಿಲ್ಲ ಎಂದು ಅಭಿಪ್ರಾಯಪಟ್ಟರು. ದಿಲೀಪ್ ಪಡ್ಗೊವನ್ಕರ್ ಅವರು ಸೆನ್ಸಾರ್‌ಷಿಪ್ ನೀತಿಯನ್ನು ಸಂಪೂರ್ಣವಾಗಿ ತೆಗೆದುಹಾಕಿದರೆ ಮಾತ್ರ, ಸಿನಿಮಾ ನಿರ್ಮಾಪಕರು ಮತ್ತು ನಿರ್ದೇಶಕರ ಮೇಲೆ ನಡೆಯುವ ಶೋಷಣೆಯನ್ನು ತಡೆಯಲು ಸಾಧ್ಯವೆಂದು ಅಭಿಮತ ವ್ಯಕ್ತಪಡಿಸಿದರು. ಕ.ವ.ಸ ಇಲಾಖೆಯ ಸೆನ್ಸಾರ್ ಬೋರ್ಡ್ ಮತ್ತು ಪೂರ್ವ ಸೆನ್ಸಾರ್‌ಷಿಪ್

> ಎರಡರಲ್ಲಿಯೂ ಪುಸ್ತಕ ಹಾಗೂ ನಾಟಕಗಳ ಕುರಿತು ಯಾವುದೆ ಸೆನ್ಸಾರ್‌ಶಿಪ್ ಇಲ್ಲವೆನ್ನುವುದನ್ನು ಎತ್ತಿ ತೋರಿಸಿದರು. ಈಗಿರುವ ಕ್ರಿಮಿನಲ್ ಪ್ರೊಸಿಜರ್‌ಗಳೆ ಸಿನಿಮಾ ಕ್ಷೇತ್ರವನ್ನು ನಿಯಂತ್ರಿಸಲು ಸಾಕೆಂದು ಅಭಿಪ್ರಾಯ ವ್ಯಕ್ತಪಡಿಸಿದರು(ಡೆಕ್ಕನ್ ಹೆರಾಲ್ಡ್ ೧೯೭೫ ಡಿಸೆಂಬರ್ ೧೧).

ಸರ್ಕಾರದ ಸೆನ್ಸಾರ್‌ಶಿಪ್ ನೀತಿಯನ್ನು ಪ್ರತಿಭಟಿಸುತ್ತ ಅಭಿವ್ಯಕ್ತಿ ಸ್ವಾತಂತ್ರ್ಯ ಹೆಚ್ಚಿರುವ ಹೊಸ ಕಾನೂನಿನ ಅಪೇಕ್ಷೆಯಿದೆ. ಸರ್ಕಾರದ ನೀತಿಯ ಪ್ರಭಾವ ರಾಜಕೀಯ ಪ್ರೇರಿತ ಸಿನಿಮಾಗಳ ಮೇಲೆ ಹೆಚ್ಚು ಪರಿಣಾಮ ಉಂಟುಮಾಡಿರುವುದು ಮೇಲಿನ ವಿಚಾರಕ್ಕೆ ಒತ್ತುನೀಡುತ್ತಿದೆ. ಕೇಂದ್ರ ಸರ್ಕಾರ ಜಾರಿಗೆ ತಂದ ಸಿನಿಮಾ ಕಾಯ್ದೆಗಳು ಕನ್ನಡ ಸಿನಿಮಾಗಳಿಗೂ ಅನ್ವಯಿಸುತ್ತಿದ್ದು, ಕನ್ನಡ ಚಿತ್ರರಂಗದಲ್ಲಿ ಹಲವು ಬದಲಾವಣೆಗಳಿಗೆ ನಾಂದಿ ಹಾಡಿತು.

## ೩.೧.೧.೨.೨.೩.೨.೨. ಸಿನಿಮಾ ಮತ್ತು ತುರ್ತುಪರಿಸ್ಥಿತಿ

ತುರ್ತುಪರಿಸ್ಥಿತಿ ಸಂದರ್ಭದಲ್ಲಿ ಸೆನ್ಸಾರ್‌ನಿಂದ ತೊಂದರೆಗೊಳಗಾದ ಕೆಲವು ಸಿನಿಮಾಗಳನ್ನು ಇಲ್ಲಿ ಅವಲೋಕಿಸಲು ಪ್ರಯತ್ನ ಮಾಡಲಾಗಿದೆ. ತುರ್ತುಪರಿಸ್ಥಿತಿ ಕಾಲದ ಅತ್ಯಂತ ವಿವಾದಾತ್ಮಕ ಹಾಗೂ ಚಿಂತಕರ ಬಹುನಿರೀಕ್ಷೆಯ ಕನ್ನಡ ಚಿತ್ರ 'ಚಂಡ ಮಾರುತ'(೧೯೭೭, ಪಟ್ಟಾಭಿರಾಮ ರೆಡ್ಡಿ). ತುರ್ತುಪರಿಸ್ಥಿತಿ ಪೂರ್ವದ ಸಾಮಾಜಿಕ ವಾತಾವರಣದ ಒಂದು ಮುಖವನ್ನು ಅನಾವರಣಗೊಳಿಸುವುದು. ಇದು ೧೯೭೩ರಲ್ಲಿ ಪ್ರಕಟವಾದ ಲಂಕೇಶರ 'ಕ್ರಾಂತಿ ಬಂತು ಕ್ರಾಂತಿ' ನಾಟಕವನ್ನು ಆಧರಿಸಿತ್ತು.

> ನಗರದ ಸಮಾಜವಾದಿ ಯುವ ಮನಸ್ಸು ಶಸ್ತ್ರಾಸ್ತ್ರ ಹೋರಾಟದ ಮೂಲಕ ಸಮಕಾಲೀನ ಸಮಸ್ಯೆಗಳಿಗೆ ಪರಿಹಾರ ಹುಡುಕ ಹೊರಡುವ ಕಥಾ ಹಂದರವನ್ನು ಹೊಂದಿದೆ. ಸಮಕಾಲೀನವಾಗಿ ಕಂಡುಬರುವ ಸಹಜ ಲಕ್ಷಣ(ಭೌಮಿಕ್ ೨೦೦೯: ೨೧೫).

ಶಸ್ತ್ರಾಸ್ತ್ರ ಹಿಂಸಾತ್ಮಕ ಕ್ರಾಂತಿಯನ್ನು ಶಾಂತಿ ಮತ್ತು ಅಹಿಂಸಾತ್ಮಕ ಮಾರ್ಗದೊಂದಿಗೆ ಸಮೀಕರಿಸಿ ಚಿತ್ರಿತವಾಗಿದೆ. ವ್ಯವಸ್ಥೆಯಲ್ಲಿನ ಅವ್ಯವಸ್ಥೆಯನ್ನು ಪ್ರತಿಭಟಿಸಲು ಯಾವ ಮಾರ್ಗ ಉತ್ತಮ ಎಂಬ ದ್ವಂದ್ವ, ಹಿಡಿದ ಹಾದಿಯ ಪರಿಣಾಮಗಳು ವ್ಯಕ್ತಿಯೋರ್ವನ ಅನುಭವಗಳ ಮೂಲಕ ಬಿಂಬಿತವಾಗಿದೆ. ಸಿನಿಮಾ ನಿರ್ದೇಶಕರಾದ ಪಟ್ಟಾಭಿರಾಮ ರೆಡ್ಡಿ ಮತ್ತು ಅವರ ಪತ್ನಿ ಸ್ನೇಹಲತಾ ರೆಡ್ಡಿ ಅವರು ಸರ್ಕಾರದಿಂದ ಅನೇಕ



ಡೆಕ್ಕನ್ ಹೆರಾಲ್ಡ್, ೧೯೭೭ರಲ್ಲಿ ಚಂಡ ಮಾರುತ ಚಿತ್ರದ ಜಾಹೀರಾತುಗಳು. ಚಿತ್ರ ಸಂಖ್ಯೆ ೩.೧೫


ಡೆಕ್ಕನ್ ಹೆರಾಲ್ಡ್: ೧೯೭೭ರಲ್ಲಿ ಸಿನಿಮಾ ಬಿಡುಗಡೆಯ ನಂತರ ಚಲನಚಿತ್ರ ಕುರಿತ ವಿಮರ್ಶೆ ಹಾಗೂ ಪಟ್ಟಾಭಿರಾಮರೆಡ್ಡಿ ಅವರ ಸಂದರ್ಶನದಲ್ಲಿ ಪ್ರಕಟವಾದ ಚಿತ್ರಗಳು. ಚಿತ್ರ ಸಂಖ್ಯೆ: ೩.೧೫

ತೊಂದರೆಗಳನ್ನು ಸಿನಿಮಾ ಬಿಡುಗಡೆ ಹಾಗೂ ವೈಯಕ್ತಿಕ ನಿಟ್ಟಿನಲ್ಲಿ ಎದುರಿಸಬೇಕಾಯಿತು. ಇವರು ಸಮಾಜವಾದಿ ಭೂಗತ ಹೋರಾಟಗಾರರೊಡನೆ ಸಂಪರ್ಕ ಹೊಂದಿದ್ದರು. ಸ್ನೇಹಲತಾ ರೆಡ್ಡಿ ಅವರನ್ನು ಮೀಸಾ ಕಾಯ್ದೆ ಅಡಿಯಲ್ಲಿ ಬಂಧಿಸಲಾಗಿತ್ತು. ಬಿಡುಗಡೆಯಾದ ಕೆಲವೇ ದಿನಗಳಲ್ಲೇ ಅನಾರೋಗ್ಯದಿಂದ ನಿಧನರಾದರು. ಇವರ ಕುಟುಂಬವರ್ಗದವರು ಜಾರ್ಜ್ ಫರ್ನಾಂಡೀಸ್ ಮೊದಲಾದ ಪ್ರಮುಖ ಭೂಗತ ಹೋರಾಟಗಾರರೊಡನೆ ಸಂಪರ್ಕ ಹೊಂದಿದ್ದರು. ಆಗಾಗ ಇವರ ಮನೆಯಲ್ಲಿ ಹೋರಾಟದ ಮಾರ್ಗ ಕುರಿತ ಚರ್ಚೆಗಳು ನಡೆಯುತ್ತಿದ್ದವು. ಅವುಗಳಲ್ಲಿ ಅಹಿಂಸಾ ವಿಧಾನಕ್ಕೆ ಹೆಚ್ಚು ಒತ್ತಡವನ್ನು ಸ್ನೇಹಲತಾ ರೆಡ್ಡಿ[೩೧] ಅವರು ಜಾರ್ಜ್ ಫರ್ನಾಂಡೀಸ್ ಅವರ ಮೇಲೆ ತರುತ್ತಿದ್ದರು. ಸಿನಿಮಾ ಸಾಹಿತ್ಯ ಆಧಾರಿತವಾಗಿದ್ದರೂ ಪ್ರತಿಭಟನೆಯ ವಿಧಾನದ ಕುರಿತಿದ್ದ ದ್ವಂದ್ವಗಳು ಹಾಗೂ ಸ್ನೇಹಲತಾ ರೆಡ್ಡಿ ಅವರ ವಿಚಾರಧಾರೆ ಸಿನಿಮಾದ ಮೇಲೆ ಪ್ರಭಾವ ಬೀರಿರುವುದನ್ನು ಗುರುತಿಸಬಹುದು.

ಭಾರತದ ವಿವಿಧ ಭಾಷೆಗಳಲ್ಲಿ ಸರ್ಕಾರದಿಂದ ತೊಂದರೆಗೊಳಗಾದ ಮತ್ತು ಪ್ರತಿಭಟಿಸಿದ ಚಿತ್ರಗಳನ್ನು ಗಮನಿಸುವ ಉದ್ದೇಶವನ್ನು ಹೊಂದಿದೆ. ಸರ್ಕಾರ ಮತ್ತು ಪ್ರತಿಭಟನೆಗಳ ಪ್ರಕ್ರಿಯೆಯನ್ನು ಭಾಷಾ ಚೌಕಟ್ಟಿನಲ್ಲಿ ಪ್ರಾದೇಶಿಕ ನೆಲೆಯಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ. ಹಿಂದಿ ಭಾಷಾ ಸಿನಿಮಾಗಳಲ್ಲಿ ತುರ್ತುಪರಿಸ್ಥಿತಿ ಕಾಲ ಮತ್ತು ನಂತರದಲ್ಲಿ ಅತ್ಯಂತ ವಿವಾದಕ್ಕೊಳಗಾದ ಚಿತ್ರ ಕಿಸ್ಸಾ ಕುರ್ಸಿ ಕಾ(೧೯೭೭, ನಹತಾ). ಸಿನಿಮಾ ೧೯೭೫ರಲ್ಲಿ ಪೂರ್ಣಗೊಂಡರು ಸೆನ್ಸಾರ್ ಸಮಸ್ಯೆಯಿಂದಾಗಿ ೧೯೭೭ರವರೆಗೆ ಬಿಡುಗಡೆಯಾಗಲು ಸಾಧ್ಯವಾಗಲಿಲ್ಲ. ಸಿನಿಮಾಗೆ ಸಂಬಂಧಿಸಿದ ಎಲ್ಲ ವಸ್ತುಗಳನ್ನು ಸರ್ಕಾರಕ್ಕೆ ಒಪ್ಪಿಸಲು ಅಮೃತ್ ನಹತಾ ಅವರನ್ನು ಒತ್ತಾಯ ಪಡಿಸಲಾಯಿತು. ಅಮೃತ್ ನಹತಾ ಅವರು ಇದನ್ನು ವಿರೋಧಿಸಿ ಸರ್ವೋಚ್ಚ ನ್ಯಾಯಾಲಯದಲ್ಲಿ ಸರ್ಕಾರದ ಕ್ರಮವನ್ನು ಪ್ರಶ್ನಿಸಿದರು. ಈ ಸಿನಿಮಾಕ್ಕೆ ಸಂಬಂಧಿಸಿದ ವಿಚಾರಗಳನ್ನು ನಾಲ್ಕನೇ ಅಧ್ಯಾಯದಲ್ಲಿ ಚರ್ಚಿಸಲಾಗುತ್ತದೆ. ಸರ್ಕಾರದಿಂದ ತೊಂದರೆಗೊಳಗಾದ ಮತ್ತೊಂದು ಸಿನಿಮಾ ಆಂಧಿ(೧೯೭೫, ಗುಲ್ಜಾರ್) ಮಹಿಳಾ ರಾಜಕಾರಣಿಯ ಆಕಾಂಕ್ಷೆ ವೈವಾಹಿಕ ಬದುಕಿನ ಮೇಲೆ ಬೀರುವ ಪ್ರಭಾವ ಪರಿಣಾಮಗಳನ್ನು ಒಳಗೊಂಡಿದೆ. ತುರ್ತುಪರಿಸ್ಥಿತಿ ಪೂರ್ವದಲ್ಲೇ ಪ್ರದರ್ಶನಗೊಳ್ಳುತ್ತಿದ್ದರೂ. ತುರ್ತುಪರಿಸ್ಥಿತಿಯಲ್ಲಿ ಸ್ವಲ್ಪ ಕಾಲ ತಡೆಹಿಡಿಯಲಾಗಿತ್ತು. ನಂತರ ಪುನಃ ಪ್ರದರ್ಶನಕ್ಕೆ ಅವಕಾಶ ನೀಡಲಾಯಿತು. ರಾಜಕೀಯ ಹಿನ್ನೆಲೆಯುಳ್ಳ ಹಾಗೂ ಸರ್ಕಾರದಿಂದ ತೊಂದರೆಗೊಳಗಾದ ಮತ್ತೊಂದು ಚಿತ್ರ ಆಂದೋಲನ್(೧೯೭೫, ಟಂಡನ್). ೧೯೪೨ರ ಭಾರತ ಬಿಟ್ಟು ತೊಲಗಿ ಚಳವಳಿ ಕಾಲದ ಗಾಢ ರಾಜಕೀಯ ವಾತಾವರಣವಿರುವ ಚಾರಿತ್ರಿಕ ಸಿನಿಮಾ. ಈ ಸಿನಿಮಾ ಕೂಡ ತುರ್ತುಪರಿಸ್ಥಿತಿ ಪೂರ್ವದಲ್ಲಿ ಪ್ರದರ್ಶನವಾಗುತ್ತಿತ್ತು. ತುರ್ತುಪರಿಸ್ಥಿತಿಯಲ್ಲಿ ಸಿನಿಮಾವನ್ನು ಹಿಂದೆಗೆದುಕೊಂಡು ಹಲವಾರು ದೃಶ್ಯಗಳನ್ನು ಕತ್ತರಿಸಲು ಆದೇಶಿಸಲಾಯಿತು. ಇದು ಚಲನಚಿತ್ರದ ಪರಿಣಾಮವನ್ನೇ ಬದಲಾಯಿಸುವಷ್ಟು ಬದಲಾವಣೆಗಳನ್ನು ಸೂಚಿಸಲಾಗಿತ್ತು. ತುರ್ತುಪರಿಸ್ಥಿತಿ ಕೊನೆಗೊಂಡ ನಂತರ ಚಿತ್ರ ಮರು ಬಿಡುಗಡೆಗೊಂಡಿತು. ಸಮಕಾಲೀನವಾಗಿ ತೆರೆಕಂಡ ಮತ್ತೊಂದು ಪ್ರಮುಖ ಚಿತ್ರ ಗರೀಬಿ ಹಟಾವೋ(೧೯೭೩, ಬುದಾ). 'ಗರೀಬಿ ಹಟಾವೋ' ೧೯೭೧ರ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದ ಪ್ರಮುಖ ಉದ್ಘೋಷವಾಗಿತ್ತು.



ಕನ್ನಡಪ್ರಭ: ೧೯೭೩ರ ನವೆಂಬರ್ ೭ರಂದು ಪ್ರಕಟವಾಗಿರುವ ಜಾಹೀರಾತು. ಚಿತ್ರ ಸಂಖ್ಯೆ ೩.೧೬.
(ಚಿತ್ರ-೫)

ಸರ್ಕಾರವನ್ನು ಟೀಕಿಸಲು, ಸರ್ಕಾರದ ವಿರುದ್ಧ ಪ್ರತಿಭಟಿಸಲು ವ್ಯಂಗ್ಯದ ರೂಪದಲ್ಲಿ ಇದನ್ನು ಬಳಸುವುದು ಸಾಮಾನ್ಯವಾಗಿತ್ತು. ಇದಕ್ಕೆ ಪೂರಕವಾಗಿ ಕನ್ನಡದಲ್ಲಿ ಪ್ರಸನ್ನ ಅವರು ನಿರ್ದೇಶಿಸಿದ 'ಗರೀಬಿ ಹಠಾವ್' ನಾಟಕವನ್ನು ಕಾಣಬಹುದು. ಈ ಸಿನಿಮಾ ಬೆಂಗಳೂರಿನ ಮೆಜೆಸ್ಟಿಕ್, ನಳಂದ, ನಂದಾ, ಆದರ್ಶ ಮತ್ತು ಲಾವಣ್ಯ ಚಲನಚಿತ್ರ ಮಂದಿರಗಳಲ್ಲಿ ನವೆಂಬರ್ ೭ರಿಂದ ಪ್ರದರ್ಶನ ನಡೆಯುವ ಮಾಹಿತಿ ಚಿತ್ರ-೫ರಲ್ಲಿರುವ ಜಾಹೀರಾತಿನಲ್ಲಿ ದೊರೆಯುವುದು. 'ದೇಶದ ಇಂದಿನ ಉಜ್ವಲ ಸಮಸ್ಯೆಯು ತೆರೆಯ ಮೇಲೆ ಬಂದಿದೆ' ಎಂಬ ಉದ್ಘೋಷವನ್ನು ನೋಡಬಹುದು. ಉಳಿದಂತೆ ಸಿನಿಮಾ ಬಗ್ಗೆ ಮಾಹಿತಿ ದೊರೆಯುವುದಿಲ್ಲ. ಇದು ಸರ್ಕಾರದ ಪರ ಅಥವಾ ವಿರೋಧಿ ನೆಲೆಯ ಚಿತ್ರವೇ ಎಂದು ತಿಳಿಯದಿದ್ದರೂ 'ಗರೀಬಿ ಹಠಾವೋ' ಎಂಬ ಘೋಷಣೆ ಪಡೆದುಕೊಂಡಿದ್ದ ಸ್ವರೂಪದ ಮೇಲೆ ಬೆಳಕು ಬೀರುವುದು. ಹಿಂದಿ ಭಾಷೆಯ ಚಲನಚಿತ್ರಗಳನ್ನು ನಿರ್ದಿಷ್ಟ ಪ್ರಾದೇಶಿಕ ನೆಲೆಯ ಪ್ರತಿಭಟನೆಯಾಗಿ ಗುರುತಿಸಲು ಸಾಧ್ಯವಿಲ್ಲ. ಆದರೆ ಸಿನಿಮಾ ರಂಗದ ಪ್ರತಿಭಟನೆಗಳಲ್ಲಿ ಮುಖ್ಯಧಾರೆಯಾಗಿ ಕಾಣಬಹುದು.

ಪ್ರತಿಭಟನೆಗಳ ಮುಖ್ಯಧಾರೆಯ ಪ್ರತಿನಿಧಿಯಾಗಿ ದೇಶ ಮತ್ತು ವಿದೇಶಗಳಿಗೆ ಸಂದೇಶ ತಲುಪಿಸಿದ ಪ್ರಮುಖ ಚಿತ್ರಗಳೆಂದರೆ ವೇವ್ಸ್ ಆಫ್ ರೆವಲ್ಯೂಷನ್(೧೯೭೫. ಪಟವರ್ಧನ್) ಮತ್ತು ಪ್ರಿಸನರ್ಸ್ ಆಫ್ ಕಾನ್ಸೈನ್ಸ್(೧೯೭೭. ಪಟವರ್ಧನ್). ಜೊತೆಗೆ ಸರ್ಕಾರಕ್ಕೆ ಕಿರಿಕಿರಿ ಉಂಟು ಮಾಡುತ್ತಿದ್ದ ಇಂಗ್ಲಿಶ್ ಚಿತ್ರ ರಷ್ಯನ್ಸ್ ಆರ್ ಕಮಿಂಗ್(೧೯೬೬. ಜೆವಿಸನ್)[೨೨] ಆಗಿದೆ. ಸರ್ಕಾರ ಮತ್ತು ಸೆನ್ಸಾರ್‌ಷಿಪ್ ಕುರಿತಂತೆ ಚರ್ಚಿಸುವಾಗ ರಷ್ಯನ್ಸ್ ಆರ್ ಕಮಿಂಗ್ ಕುರಿತು ಶಾಸಕರ ಅಭಿಪ್ರಾಯವನ್ನು ಪ್ರಸ್ತಾಪಿಸಲಾಗಿದೆ. ೧೯೬೬ರಲ್ಲಿ ತೆರೆಕಂಡ ಹಾಸ್ಯಪ್ರಧಾನ ಸಿನಿಮಾವಾದರೂ, ಇದು ಶೀತಲಯುದ್ಧ ಅತ್ಯಂತ ಉತ್ತುಂಗದಲ್ಲಿದ್ದಾಗ ತೆರೆಕಂಡಿತ್ತು. ವಾಷಿಂಗ್‌ಟನ್ ಮತ್ತು ಮಾಸ್ಕೋ ಎರಡರ ಮೇಲೂ ಇದರ ಪ್ರಭಾವ ಕಾಣಬಹುದು. ರಷ್ಯನ್ನರ ಸಬ್‌ಮರೀನ್ ಆಕಸ್ಮಿಕವಾಗಿ ಹೊಸ ಇಂಗ್ಲೆಂಡ್ ದ್ವೀಪದ ಬಂದರನ್ನು ಮುಟ್ಟಿದಾಗ ಉಂಟಾಗುವ ಗೊಂದಲ, ಸ್ಥಳೀಯರಿಗೆ ಉಂಟಾದ ತೊಂದರೆಗಳನ್ನು ಹಾಸ್ಯಪ್ರಧಾನವಾಗಿ ಚಿತ್ರೀಕರಿಸಲಾಗಿದೆ. ಅಂತರ್ ರಾಷ್ಟ್ರೀಯ ಘಟನೆ ಆಗಿದ್ದರಿಂದ ಹೆಚ್ಚಿನ ಮಹತ್ವ ಮತ್ತು ಸಮಸ್ಯೆಯಾಗಿ ಪರಿವರ್ತನೆಗೊಳ್ಳುವುದು. ಜೊತೆಗೆ ಆ ನಗರ ಅಮೆರಿಕಾದೊಂದಿಗೆ ಉತ್ತಮ ಸಂಬಂಧ ಹೊಂದಿದ್ದದ್ದು ಪೂರಕವಾಗಿ ಸಹಕರಿಸುವುದು. ರಷ್ಯನ್ ಸಬ್‌ಮರೀನ್ ಆಕಸ್ಮಿಕವಾಗಿ ಆ ಕಡೆಗೆ ಹೋದರು ಉಂಟಾಗುವ ಗೊಂದಲ, ಹಿಂಸೆಗಳನ್ನು ತಡೆಯಲು ಸಾಧ್ಯವಾಗದೆ ಮೂಕವಾಗಿ ವೀಕ್ಷಿಸ ಬೇಕಾಯಿತು. ಮೇಲ್ನೋಟಕ್ಕೆ ಹಾಸ್ಯಪ್ರಧಾನ ಚಿತ್ರವಾದರೂ ಅಂತರ್ ರಾಷ್ಟ್ರೀಯ ವಲಯದ ರಾಜಕೀಯ ವಿಡಂಬನೆಯಾಗಿದೆ. ಈ ಚಿತ್ರ ತೆಗೆದಿರುವವರು ಅಮೆರಿಕಾದವರು, ಹಾಸ್ಯಕ್ಕೆ ತುತ್ತಾದವರು ರಷ್ಯನ್ನರು. ತುರ್ತುಪರಿಸ್ಥಿತಿಯನ್ನು ವಿರೋಧಿಸುತ್ತಿದ್ದ ಬಹುತೇಕ ಭಾರತೀಯರು ತುರ್ತುಪರಿಸ್ಥಿತಿ ಜಾರಿಯ ಹಿಂದೆ ರಷ್ಯನ್ನರ ಕೈವಾಡ ಇದೆಯೆಂದು ನಂಬಿದ್ದರು. ತುರ್ತುಪರಿಸ್ಥಿತಿ ಜಾರಿಯನ್ನು ಅಮೇರಿಕ, ಇಂಗ್ಲೆಂಡ್ ಮೊದಲಾದ ರಾಷ್ಟ್ರಗಳು ವಿರೋಧಿಸಿದರೆ, ರಷ್ಯ ಬೆಂಬಲಿಸಿತ್ತು. ತುರ್ತುಪರಿಸ್ಥಿತಿ ಮುಗಿಯುವವರೆಗೂ ರಷ್ಯಾದ ಸಲಹಾ ಸಮಿತಿಯೊಂದು ಭಾರತ ಸರ್ಕಾರಕ್ಕೆ ಸಹಕಾರ ನೀಡಲು ಇಲ್ಲೆ ಇತ್ತು. ರಷ್ಯನ್ಸ್ ಆರ್ ಕಮಿಂಗ್ ಚಲನಚಿತ್ರದ ವೀಕ್ಷಣೆ ಪ್ರತಿಭಟನೆ ವ್ಯಕ್ತಪಡಿಸುವ ವಿಧವಾಗಿ ಮಾರ್ಪಟ್ಟಿತ್ತು. ರಷ್ಯನ್ನರು ಭಾರತವನ್ನು ಪ್ರಜಾಪ್ರಭುತ್ವ ರಾಷ್ಟ್ರದಿಂದ ಕಮ್ಯುನಿಸ್ಟ್ ರಾಷ್ಟ್ರವನ್ನಾಗಿಸುವರು ಎಂಬ ನಂಬಿಕೆ ಪ್ರಚಲಿತವಾಗಿತ್ತು. ಕಮ್ಯುನಿಸ್ಟ್ ರಾಷ್ಟ್ರಗಳು ಪ್ರಜಾಪ್ರಭುತ್ವ ವಿರೋಧಿ ಹಾಗೂ ನಿರಂಕುಶಾಧಿಕಾರವನ್ನು ಬೆಳೆಸುತ್ತದೆಂಬ ನಂಬಿಕೆ ಗಾಢವಾಗಿದ್ದಿತು. ಇದರೊಡನೆ ತುರ್ತುಪರಿಸ್ಥಿತಿಗೆ ಸಿಪಿಐ ಬೆಂಬಲ ನೀಡಿ, ಆಡಳಿತದಲ್ಲಿ ಭಾಗಿಯಾಗಿತ್ತು ಎಂಬುದು ಗಮನಾರ್ಹ. ವೇವ್ಸ್ ಆಫ್ ರೆವಲ್ಯೂಷನ್(೧೯೭೫. ಪಟವರ್ಧನ್) ತುರ್ತುಪರಿಸ್ಥಿತಿ ವಿರೋಧಿ ಸಾಕ್ಷ್ಯಚಿತ್ರ. ಜೆ.ಪಿ. ಚಳುವಳಿಯು ತುರ್ತುಪರಿಸ್ಥಿತಿಯಲ್ಲಿ ಕೊನೆಗೊಂಡ ಕಥಾವಸ್ತುವನ್ನು ಹೊಂದಿದೆ. ರಹಸ್ಯವಾಗಿ ಹಳೆಯ ಮತ್ತು ತಾತ್ಕಾಲಿಕ ಸಿನಿಮಾ ಸಲಕರಣೆಗಳ ಮೂಲಕ ಸಿನಿಮಾವನ್ನು ಚಿತ್ರೀಕರಿಸಲಾಯಿತು. ಭಾರತದಾದ್ಯಂತ ಈ ಚಿತ್ರವು ಗುಪ್ತವಾಗಿ ಪ್ರದರ್ಶನಗೊಳ್ಳುತ್ತಿತ್ತು. ೧೯೭೫ರ ಸೆಪ್ಟೆಂಬರ್‌ನಲ್ಲಿ ಚಿತ್ರದ ಪ್ರಿಂಟ್‌ನ್ನು ಹಲವು ಭಾಗಗಳಾಗಿ ಕತ್ತರಿಸಿ ವಿದೇಶಗಳಿಗೆ ಅಕ್ರಮವಾಗಿ ರವಾನಿಸಲಾಯಿತು. ವಿದೇಶಿ ಭಾರತೀಯ ಸಂಘಟನೆಗಳಿಗೆ ಮತ್ತು ವೈಯಕ್ತಿಕವಾಗಿ

ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳಲ್ಲಿ ತೊಡಗಿಸಿಕೊಂಡಿದ್ದ ಅನಿವಾಸಿ ಭಾರತೀಯರಿಗೆ ಪ್ರಸಾರ ಮಾಡಲಾಗುತ್ತಿತ್ತು. ಪ್ರಿಸನರ್ಸ್ ಆಫ್ ಕಾನ್ಸೈನ್ಸ್(೧೯೭೭, ಪಟವರ್ಧನ್) ಕುರಿತು ನಾಲ್ಕನೇ ಅಧ್ಯಾಯದಲ್ಲಿ ಚರ್ಚಿಸಲಾಗುತ್ತದೆ.

ಭಾರತದ ಇತರ ಭಾಷೆಗಳಲ್ಲಿ ಸರ್ಕಾರದಿಂದ ತೊಂದರೆಗೊಳಗಾದ ಕೆಲವು ಪ್ರಮುಖ ಚಿತ್ರಗಳೆಂದರೆ ತುಘಲಕ್(೧೯೭೧, ರಾಮಸ್ವಾಮಿ, ತಮಿಳು), ತೆಲುಗುನಾಡು(೧೯೭೫, ರಾವ್, ತೆಲುಗು) ಮೊದಲಾದವು. ತುಘಲಕ್(೧೯೭೧, ರಾಮಸ್ವಾಮಿ, ತಮಿಳು) ಚಿತ್ರ ತುಘಲಕ್‌ನ ರಾಜಕೀಯ ಮತ್ತು ಆರ್ಥಿಕ ನೀತಿಗಳನ್ನು ಇಂದಿರಾ ಸರ್ಕಾರದ ಅಭಿವೃದ್ಧಿ ಮಾರ್ಗಗಳೊಡನೆ ಸಮೀಕರಿಸಿತ್ತು. ತುರ್ತುಪರಿಸ್ಥಿತಿ ಜಾರಿಯಾದ ನಂತರ ಸೆನ್ಸಾರ್‌ಷಿಪ್ ಸಮಿತಿ ಚಿತ್ರದಲ್ಲಿ ಹಲವು ದೃಶ್ಯಗಳನ್ನು ಕತ್ತರಿಸಲು ನೀಡಿದ ಸಲಹೆ ನಿರಾಕರಿಸಿದ ಹಿನ್ನೆಲೆಯಲ್ಲಿ ನಿಷೇಧಿಸಲಾಗಿತ್ತು. ೧೯೭೭ರಲ್ಲಿ ಮರು ತೆರೆಕಂಡಿತು. ತೆಲುಗುನಾಡು(೧೯೭೫, ರಾವ್, ತೆಲುಗು) ರಾಜಕೀಯ ಹಿನ್ನೆಲೆಯ ಚಿತ್ರ. ಬಿ.ಆರ್.ರಾವ್ ಅವರು ಸಮಕಾಲೀನವಾಗಿ ಕಾಂಗ್ರೆಸ್ ಪಕ್ಷದಿಂದ ಸಂಸತ್ತಿನ ಸದಸ್ಯರಾಗಿದ್ದರೂ ಸಹ ಸೆನ್ಸಾರ್‌ನಿಂದಾಗಿ ಸಿನಿಮಾ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಯಿತು. ನ್ಯಾಯಾಂಗದ ಸಹಕಾರದಿಂದ ತುರ್ತುಪರಿಸ್ಥಿತಿ ನಂತರ ತೆರೆಕಾಣಲು ಸಫಲವಾಯಿತು. ರಾಜಕಾರಣ ಮತ್ತು ಚಳವಳಿಗಳೊಡನೆ ಸಂಬಂಧ ಹೊಂದಿದ್ದ ಸಮಾಜದ ಮೇಲ್ ಮಧ್ಯಮವರ್ಗದ ಸುಶಿಕ್ಷಿತರು ಇಲ್ಲಿ ಚರ್ಚಿತವಾಗಿರುವ ಚಿತ್ರಗಳೊಂದಿಗೆ ಗುರುತಿಸಿಕೊಂಡಿದ್ದರು. ಇವು ಪ್ರತಿಭಟನೆಯ ಮುಖ್ಯಧಾರೆಯ ಆಯಾಮವನ್ನು ಪ್ರತಿನಿಧಿಸುವುದು.

### ೩.೧.೧.೨.೨.೩.೨.೩. ಜನಪ್ರಿಯ ಸಿನಿಮಾ ಮತ್ತು ಪ್ರತಿಭಟನೆ

'ರಾಜಕೀಯ ಚಿತ್ರಗಳು ಅಂತಹ ಸಿನಿಮಾಗಳ ಅವಶ್ಯಕತೆ ಇದ್ದಾಗಳಷ್ಟೇ ಹೊರಹೊಮ್ಮುತ್ತವೆ' (ಜೆನೆಗಲ್ ೨೦೦೮: ೧). ರಾಜಕೀಯ ಸ್ಥಿತ್ಯಂತರಗಳು ಸಿನಿಮಾಗಳ ನಿರ್ಮಾಣದಲ್ಲಿ ಪ್ರಮುಖ ಪಾತ್ರ ನಿರ್ವಹಿಸುವುದನ್ನು ಒತ್ತಿ ಹೇಳುವುದು. ಜನಪ್ರಿಯ ಚಿತ್ರಗಳಲ್ಲಿ ತುರ್ತುಪರಿಸ್ಥಿತಿ ವಿರೋಧಿ ಹಿನ್ನೆಲೆಯಲ್ಲಿ ಕಂಡುಬಂದ ಪ್ರತಿಭಟನೆಗಳನ್ನು ೧೯೭೫ ರಿಂದ ೧೯೭೭ರವರೆಗೆ ಚರ್ಚಿಸಲಾಗಿದೆ. ಕನ್ನಡ ಭಾಷಾ ಚಿತ್ರಗಳೊಂದಿಗೆ ಸಮಕಾಲೀನ ಹಿಂದಿ ಭಾಷೆ ಚಿತ್ರಗಳನ್ನು ಸಮೀಕರಿಸಿ ಅವಲೋಕಿಸುವ ಪ್ರಯತ್ನ ಮಾಡಲಾಗಿದೆ.

> ೧೯೭೦ರ ದಶಕದಲ್ಲಿ ಜನಪ್ರಿಯ ಸಿನಿಮಾಗಳಲ್ಲಿ ಪ್ರತಿಭಟನಾ ಧಾಟಿಯ ಬಳಕೆ ಕಂಡುಬರತೊಡಗಿತ್ತು. ರಾಷ್ಟ್ರದಲ್ಲಿ ಕಾನೂನು ಮತ್ತು ಸುವ್ಯವಸ್ಥೆ ಕುಸಿತ ಪ್ರತೀಕಾರ ತೀರಿಸಿಕೊಳ್ಳುವ ಅಥವಾ ಪ್ರತಿಹಿಂಸಿಸುವ ನಾಯಕನನ್ನು ಕೇಂದ್ರೀಕರಿಸಿದ ಸಿನಿಮಾಗಳ ಸೃಷ್ಟಿಗೆ ಕಾರಣವಾಯಿತು. ಹಿಂದಿಯ ಜನಪ್ರಿಯ ಸಿನಿಮಾಗಳಲ್ಲಿ ಸಮಕಾಲೀನವಾಗಿ ಆಂಗ್ರಿ ಯಂಗ್‌ಮ್ಯಾನ್ ಆತುರದ, ದುಡುಕಿನ, ಹೆಚ್ಚು ಹಿಂಸಾತ್ಮಕವಾದ ಮತ್ತು ಹೊಡೆದಾಟಗಳ ಸ್ವಭಾವ ಹೊಂದಿರುವ ನಾಯಕನ ಸಿನಿಮಾಗಳು ಮೂಡಿಬಂದವು(ದತ್ತ ೨೦೦೮: ೩೭).

ಇದು ತುರ್ತುಪರಿಸ್ಥಿತಿ ಪೂರ್ವದಲ್ಲೇ ಜನಪ್ರಿಯ ಸಿನಿಮಾಗಳಲ್ಲಿ ಕಂಡುಬರುತ್ತಿದ್ದ ಬದಲಾವಣೆಯ ದಿಕ್ಕನ್ನು ಗುರುತಿಸುವುದು. ಹೋರಾಟ ಹಾಗೂ ಹಿಂಸಾಚಾರದ ಮೂಲಕ ವ್ಯವಸ್ಥೆಯನ್ನು ನಾಶಗೊಳಿಸಿ ಹೊಸ ವ್ಯವಸ್ಥೆಯ ಕನಸುಗಳು ರೂಪುಗೊಳ್ಳುತ್ತಿರುವುದನ್ನು ಗುರುತಿಸಬಹುದು.

೧೯೭೦ರ ದಶಕದ ಆರಂಭದಲ್ಲಿ ಕಾದಂಬರಿ ಮತ್ತು ಸಣ್ಣಕಥೆಗಳ ಪ್ರಭಾವ ಸಿನಿಮಾಗಳಲ್ಲಿ ಅಧಿಕವಾಗಿ ಕಂಡುಬರುವುದು. ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಯ ದನಿ ಇರುವ ಸಿನಿಮಾಗಳು ಬಹುತೇಕ ಸಾಹಿತ್ಯ ಆಧಾರಿತವಾಗಿರುವುದು ವಿಶೇಷವಾಗಿದೆ. ತುರ್ತುಪರಿಸ್ಥಿತಿ ಕಾಲದ ಜನಪ್ರಿಯ ಸಿನಿಮಾಗಳ ಕುರಿತ ಅಭಿಪ್ರಾಯವೊಂದು ಹೀಗಿದೆ:

> ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಿ ಬಂದ ಕನ್ನಡದ ವಾಣಿಜ್ಯ ಸಿನಿಮಾಗಳಲ್ಲಿ ಹೆಚ್ಚಿನ ಬದಲಾವಣೆಗಳು ಕಂಡುಬರುವುದಿಲ್ಲ. ತುರ್ತುಪರಿಸ್ಥಿತಿ ಮತ್ತು ಎಪ್ಪತ್ತರ ದಶಕದ ಹೋರಾಟಗಳ ಪ್ರಭಾವ ಹಾಗೂ ಪರಿಣಾಮಗಳು ತೀವ್ರ ಸ್ವರೂಪದಲ್ಲಿ ಪ್ರಕಟವಾದದ್ದು ಎಂಭತ್ತರ ದಶಕದ ಸಿನಿಮಾಗಳಲ್ಲಿ(ರಶ್ಮಿ ೨೦೧೧ ಮಾರ್ಚ್).

ತುರ್ತುಪರಿಸ್ಥಿತಿ ಕಾಲಘಟ್ಟದ ಜನಪ್ರಿಯ ಸಿನಿಮಾಗಳಲ್ಲಿ ಪ್ರತಿಭಟನೆಗಳು ವ್ಯಕ್ತಗೊಳ್ಳಲಿಲ್ಲ ಎಂಬ ಇಂತಹ ಧೋರಣೆ ಸಿನಿಮಾ, ರಂಗಭೂಮಿ ಮೊದಲಾದ ಕಲೆಗಳ ಅಧ್ಯಯನದಲ್ಲಿ ತೊಡಗಿಸಿಕೊಂಡ ಬಹುತೇಕರಲ್ಲಿ

ಕಂಡುಬರುವುದು. ಆದರೆ ತುರ್ತುಪರಿಸ್ಥಿತಿಯ ಕಾಲದ ಚಲನಚಿತ್ರಗಳಲ್ಲಿ ಮಹತ್ವದ ಬದಲಾವಣೆ, ಪ್ರತಿಭಟನಾ ಧ್ವನಿ ವಿಭಿನ್ನ ರೀತಿಯಲ್ಲಿ ಕಾಣಿಸಿಕೊಂಡಿರುವುದನ್ನು ಗುರುತಿಸಬಹುದು. ಈ ಸಿನಿಮಾಗಳನ್ನು ಬಹುತೇಕ ಪ್ರಗತಿಪರ ಚಳುವಳಿ, ಸಮಾನಾಂತರ ಚಿತ್ರ ಮತ್ತು ರಂಗಭೂಮಿಗಳಲ್ಲಿ ಗುರುತಿಸಿಕೊಂಡಿದ್ದವರು ನಿರ್ಮಿಸಿರುವರು ಅಥವಾ ನಿರ್ದೇಶಿಸಿರುವರು. ಇಂತಹ ಚಿತ್ರಗಳಲ್ಲಿ ಸಾಹಿತಿಗಳು, ನಾಟಕ ರಚನಾಕಾರರು, ನಾಟಕ ನಿರ್ದೇಶಕರು ಮೊದಲಾದವರು ಅಧಿಕ ಪ್ರಮಾಣದಲ್ಲಿ ತೊಡಗಿಕೊಂಡಿರುವರು.

೧೯೭೫ರಲ್ಲಿ ಪ್ರತಿಭಟನೆಯ ನೆಲೆಯಲ್ಲಿ ಕಂಡುಬಂದ ಪ್ರಮುಖ ಚಿತ್ರಗಳು ಚೋಮನದುಡಿ(೧೯೭೫, ಕಾರಂತ), ಮಯೂರ(೧೯೭೫, ವಿಜಯ್), ನಮ್ಮ ಊರ ದೇವರು(೧೯೭೫, ಜಯರಾಮರೆಡ್ಡಿ) ಮೊದಲಾದವು. ಚೋಮನದುಡಿ(೧೯೭೫, ಕಾರಂತ) ಶಿವರಾಮ ಕಾರಂತರ ಕಾದಂಬರಿ ಆಧಾರಿತ ಚಿತ್ರ, ವ್ಯವಸ್ಥೆಯ ವಿರುದ್ಧ ಹಕ್ಕಿಗಾಗಿ ಕಾಣುವ ಕನಸು, ಹಂಬಲ, ಅದಕ್ಕಾಗಿ ನಡೆಸುವ ಮೂಕ ಪ್ರತಿಭಟನೆ ಕಂಡುಬರುವುದು. ಮಯೂರ(೧೯೭೫, ವಿಜಯ್) ದೇವುಡು ಕಾದಂಬರಿ ಆಧರಿಸಿ ನಿರ್ಮಿತವಾದ ಚಾರಿತ್ರಿಕ[೩೩] ಸಿನಿಮಾ. ಈ ಚಿತ್ರದ ಕೆಲವು ಹಾಡಿನ ಸಾಲುಗಳಲ್ಲಿ

ನೊಂದ ಜನತೆಯ ಕಂಬನಿ ತೊಡೆಯಲು ಮಯೂರನಾಗಿ ಅವತರಿಸಿಹನು
ಒದ್ದ ವೈರಿಗಳ ನಾಶ ಮಾಡಲು ಖಡ್ಗ ಝಳಪಿಸುತ ಮಯೂರ ಬರುತಿಹನು(೧೯೭೫, ವಿಜಯ್)

ಮತ್ತು

ನಾಸಿರುವುದೇ ನಿಮಗಾಗಿ, ಸಾಡಿರುವುದು ನಮಗಾಗಿ(೧೯೭೫, ವಿಜಯ್)

ಹೋರಾಡಲು ನಾಯಕನ ಆಗಮನದ ಆಶಯ ಹಾಗೂ ಸಾಂಕೇತಿಕ ಪ್ರತಿಭಟನೆಗಳನ್ನು ಕಾಣಬಹುದು. ಸಿನಿಮಾದಲ್ಲಿ ವಿಷ್ಣುಗೋಪನನ್ನು ಜರಿಯಲು ಮಯೂರ ಭಾಷಣ ವೀರ, ಮಾತಿನ ವೀರ ಎಂಬ ಪದಗಳನ್ನೆ ಪದೇ ಪದೇ ಬಳಸಿರುವನು. ಸಿನಿಮಾದ ಕೊನೆಗೆ ಹೋರಾಟದ ಮೊದಲ ಗುರಿ ಸ್ವಾತಂತ್ರ್ಯ ರಕ್ಷಣೆ ಎನ್ನಲಾಗಿದೆ. ಹೋರಾಟ ಮಾಡುವಾಗ ಅಹಿಂಸೆಗೆ ಹೆಚ್ಚು ಒತ್ತುಕೊಡಲು ಒತ್ತಿ ಒತ್ತಿ ಹೇಳುವುದನ್ನು ಗಮನಿಸಬಹುದು. ಅಸ್ತಿತ್ವದಲ್ಲಿರುವ ಪ್ರಬಲ ರಾಜಕೀಯ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸಿ ಹೊಸ ವ್ಯವಸ್ಥೆಯನ್ನು ರೂಪಿಸುವ ಬಯಕೆ ಸಿನಿಮಾದಲ್ಲಿದೆ. ಮಯೂರ ಮುಂದೆ ಹೊಸ ರಾಜವಂಶದ ನಿರ್ಮಾಣಕ್ಕೆ ಕಾರಣವಾಗುವನು. ನಮ್ಮ ಊರ ದೇವರಲ್ಲಿ(೧೯೭೫, ಜಯರಾಮರೆಡ್ಡಿ) ಆದರ್ಶಗಳುಳ್ಳ ಯುವಕ ತನ್ನ ವಿದ್ಯಾಭ್ಯಾಸ ಮುಗಿಸಿ ಹಳ್ಳಿಗೆ ಹಿಂದಿರುಗುವನು. ಹಳ್ಳಿಯನ್ನು ಆದರ್ಶ ಮತ್ತು ಸುಖಿ ಗ್ರಾಮವನ್ನಾಗಿ ಪರಿವರ್ತಿಸಲು ಸ್ಥಳೀಯ ವ್ಯವಸ್ಥೆ ಹಾಗೂ ಅಧಿಕಾರಿಗಳ ವಿರುದ್ಧ ಹೋರಾಡಿ ಯಶಸ್ವಿ ಯಾಗುವನು. ಈ ಕಥಾಹಂದರದಲ್ಲಿ ೧೯೬೦ರ ದಶಕದಿಂದಲೂ ಕಂಡುಬರುತ್ತಿದ್ದ ಬಹು ಅಂಶಗಳು ಮುಂದುವರೆದಿದೆಯಾದರೂ ವ್ಯವಸ್ಥೆಯ ವಿರುದ್ಧದ ಪ್ರತಿಭಟನೆ ಹೆಚ್ಚು ಮುಖ್ಯವಾಗಿದೆ. ಸಮಕಾಲೀನ ಹಿಂದಿ ಚಲನಚಿತ್ರಗಳಲ್ಲಿ ಪ್ರಮುಖ ಚಿತ್ರವೆಂದರೆ ಶ್ಯಾಮ್ ಬೆನೆಗಲ್ ನಿರ್ದೇಶನದ ನಿಶಾಂತ್. ನಿಶಾಂತ್ ಎಂದರೆ ಕತ್ತಲೆಯ ಕೊನೆ, ಬೆಳಗಿನ ಮೊದಲ ಕಿರಣ. ಈ ಚಿತ್ರದ ಕಥಾವಸ್ತು ದಕ್ಷಿಣ ಭಾರತದ ರೈತ ದಂಗೆ.

ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಿ ೧೯೭೬ರ ವರ್ಷ ಹೆಚ್ಚು ಪ್ರಮುಖವಾದುದು. ರಾಜಕೀಯ ಪಕ್ಷಗಳ ಪ್ರತಿಭಟನೆಗಳು ೧೯೭೫ರಲ್ಲಿ ತೀವ್ರವಾಗಿ ಕಂಡುಬಂದು, ಬಹುತೇಕ ನಿಷ್ಕ್ರಿಯವಾಗಿರುವಂತೆ ಮೇಲ್ನೋಟಕ್ಕೆ ತೋರುತ್ತಿತ್ತು. ತುರ್ತುಪರಿಸ್ಥಿತಿ ಕೊನೆಗೊಳ್ಳುವುದೇ ಎಂಬ ಅನುಮಾನ ಪ್ರತಿಭಟನಾಕಾರರಲ್ಲಿ ಹೆಚ್ಚಾಗಿತ್ತು. ಭಯದ ವಾತಾವರಣವಿದ್ದ ಕಾಲ. ಈ ಸಮಯದಲ್ಲಿ ತೆರೆಕಂಡ ಕನ್ನಡ ಚಿತ್ರಗಳಲ್ಲಿ ಸೂತ್ರದ ಗೊಂಬೆ (೧೯೭೬, ಶಿವರಾಮ್), ಇದು ನಮ್ಮ ದೇಶ(೧೯೭೬, ದೇವರ್), ಬಹದ್ದೂರ್ ಗಂಡು(೧೯೭೬, ರಾವ್), ಪಲ್ಲವಿ(೧೯೭೬, ಲಂಕೇಶ್) ಮತ್ತಿತರ ಚಿತ್ರಗಳು ಪ್ರಮುಖವಾಗಿವೆ. ಸೂತ್ರದ ಗೊಂಬೆ(೧೯೭೬, ಶಿವರಾಮ್) ಮತ್ತು ಬಹದ್ದೂರ್ ಗಂಡು(೧೯೭೬, ರಾವ್) ರಾಜಶಾಹಿ ಹಿನ್ನೆಲೆಯ ಸಿನಿಮಾಗಳು. ಕಾಲ್ಪನಿಕ ರಾಜ್ಯದಲ್ಲಿ ರಾಜ್ಯಾಂಕಾಕ್ಷೆಯಿಂದ ನಡೆಯುವ ಸಂಚು, ಪಿತೂರಿ, ವ್ಯವಸ್ಥೆಯ ಮುಖ್ಯಸ್ಥರ ದಮನಕಾರಿ ನೀತಿ ಎರಡೂ ಸಿನಿಮಾಗಳಲ್ಲಿರುವ ಸಮಾನ ವಿಚಾರಗಳಾಗಿವೆ. ಸೂತ್ರದ ಗೊಂಬೆಯಲ್ಲಿ(೧೯೭೬, ಶಿವರಾಮ್) ದೇಶಭಕ್ತರ ಸಹಾಯ ಪಡೆದು ಯುವರಾಣಿ ರಾಜ್ಯ ರಕ್ಷಿಸಿ, ತಾನು ಸೂತ್ರದ ಗೊಂಬೆಯಲ್ಲ ಎಂದು ನಿರೂಪಿಸುವಳು. ಬಹದ್ದೂರ್ ಗಂಡಿನಲ್ಲಿ(೧೯೭೬, ರಾವ್) ಪಂಜು ಎಂಬ ತಳಸಮುದಾಯದ ಧೈರ್ಯಶಾಲಿ ಯುವಕನ

ನೇತೃತ್ವದಲ್ಲಿ ವ್ಯವಸ್ಥೆಯ ವಿರುದ್ಧ ನಡೆಯುವ ಪ್ರಬಲ ಪ್ರತಿಭಟನೆಯಿದೆ. ಈತ ನಿರಂಕುಶಾಧಿಕಾರದ ಧೋರಣೆ ಹೊಂದಿದ್ದ ಪ್ರಮುಖರನ್ನು ಸೋಲಿಸುವಲ್ಲಿ ಸಫಲನಾಗುವನು. ರಾಜಶಾಹಿ ಚಿತ್ರಗಳಲ್ಲಿ ವ್ಯಕ್ತಿ ಹೆಸರಿನ ಅಥವಾ ವಿಶೇಷಣಗಳ ಮೂಲಕ ಗುರುತಿಸುವ ಸಂಪ್ರದಾಯ ಸಾಮಾನ್ಯವಾಗಿ ಕಂಡುಬರುವುದು. ಆದರೆ ಸೂತ್ರದ ಗೊಂಬೆ(೧೯೭೬, ಶಿವರಾಮ್) ಇದಕ್ಕೆ ಅಪವಾದ. ಬಹದ್ದೂರ್ ಗಂಡು(೧೯೭೬, ರಾವ್) ವಿಶೇಷಣದ ಮೂಲಕ ಗುರುತಿಸಲ್ಪಡುವುದು. ಜೊತೆಗೆ ಹೋರಾಟ ಮಾಡಿದ ವ್ಯಕ್ತಿಯ ಹೆಸರು ಪಂಜು, ಅಂದರೆ ದೀವಟಿಗೆ. ಇಂಥ ಹೆಸರುಗಳು ರಾಜಶಾಹಿ ಚಿತ್ರದಲ್ಲಿ ಕಂಡುಬರುವುದು ಕಡಿಮೆ. ಇದು ನಮ್ಮ ದೇಶ (೧೯೭೬, ದೇವರ್) ಚಿತ್ರ ಸಾಮಾಜಿಕ ವ್ಯವಸ್ಥೆಯ ಹಿನ್ನೆಲೆಯಲ್ಲಿ ಆದರ್ಶವಾದಿ ಯುವಕನ ಪ್ರತಿಭಟನೆ. ಪಲ್ಲವಿ(೧೯೭೬, ಲಂಕೇಶ್) ಚಿತ್ರ ಕುರಿಂತೆ

> ಕತೆ, ನಾಟಕಗಳಿಗಿಂತ ಸಂವಹನದಲ್ಲಿ ಹೆಚ್ಚು ಸಾಧಿಸುವ ಸಲುವಾಗಿ ಪಿ.ಲಂಕೇಶ್ ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಆರಿಸಿಕೊಂಡ ಮಾಧ್ಯಮ ಚಲನಚಿತ್ರ. ಅವರ 'ಪಲ್ಲವಿ' ಅನೇಕ ಕತೆ, ಕಾದಂಬರಿ, ಕವನಗಳು ಮಾಡದ ಕೆಲಸವನ್ನು ಮಾಡಿತು. ರಾಜಕೀಯ, ಅಧಿಕಾರಶಾಹಿ, ನಿರುದ್ಯೋಗ ಇತ್ಯಾದಿ ಸಮಸ್ಯೆಗಳನ್ನು ಗಂಭೀರವಾಗಿ ಚರ್ಚೆಗೆತ್ತಿಕೊಂಡಿತು. ಇಲ್ಲಿ ಲಂಕೇಶರು ಸಾಮಾಜಿಕ ವಿಷಮಸ್ಥಿತಿಯನ್ನು ವಿಡಂಬಿಸುತ್ತಾರೆ. ಇಲ್ಲಿನ ವಿಡಂಬನೆ ಇಡಿಯಾಗಿ ಬದುಕನ್ನೆ ಪುನರ್ ಮೌಲ್ಯೀಕರಿಸುವತ್ತ ಸಾಗುತ್ತದೆ (ಕಾಡನಕುಪ್ಪೆ ೧೯೭೭: ೬೫).

ತುರ್ತುಪರಿಸ್ಥಿತಿ ಸಂದರ್ಭದ ಪ್ರತಿಭಟನೆಗಳು ಮತ್ತು ಪಲ್ಲವಿ ಚಿತ್ರದ ವಿಶ್ಲೇಷಣೆಯನ್ನು ಕಾಣಬಹುದು.

ತುರ್ತುಪರಿಸ್ಥಿತಿ ವಿರುದ್ಧದ ಪ್ರತಿಭಟನೆ ಬಹಿರಂಗವಾಗಿ ವ್ಯಕ್ತವಾಗುವುದು ೧೯೭೭ರಲ್ಲಿ.[೩೪] ತುರ್ತುಪರಿಸ್ಥಿತಿಯ ನಂತರವು ಹಲವು ತಿಂಗಳುಗಳ ಕಾಲ ಪ್ರತಿಭಟನೆ ವಿವಿಧ ರೂಪಗಳಲ್ಲಿ ಮುಂದುವರೆಯುವುದನ್ನು ಕಾಣಬಹುದು. ಈ ಸಮಯದಲ್ಲಿ ಕನ್ನಡದಲ್ಲಿ ಬಂದ ಕೆಲವು ಪ್ರಮುಖ ಚಿತ್ರಗಳೆಂದರೆ ವೀರ ಸಿಂಧೂರ ಲಕ್ಷ್ಮಣ(೧೯೭೭, ಕೃಷ್ಣಮೂರ್ತಿ), ಕನ್ನೇಶ್ವರ ರಾಮ(೧೯೭೭, ಸತ್ಯು),[೩೫] ಕಾಕನ ಕೋಟೆ(೧೯೭೭, ಸಿಂಹ), ದೇವರೇ ದಿಕ್ಕು(೧೯೭೭, ಕಸ್ತೂರ್), ಬಬ್ರುವಾಹನ(೧೯೭೭, ಕೃಷ್ಣಮೂರ್ತಿ) ಮೊದಲಾದವು. ವೀರಸಿಂಧೂರ ಲಕ್ಷ್ಮಣ(೧೯೭೭, ಕೃಷ್ಣಮೂರ್ತಿ), ಕನ್ನೇಶ್ವರ ರಾಮ (೧೯೭೭, ಸತ್ಯು) ಮತ್ತು ಕಾಕನ ಕೋಟೆ(೧೯೭೭, ಸಿಂಹ) ಐತಿಹಾಸಿಕ ಚಿತ್ರಗಳಾಗಿವೆ. ವೀರಸಿಂಧೂರ ಲಕ್ಷ್ಮಣ(೧೯೭೭, ಕೃಷ್ಣಮೂರ್ತಿ) ಮತ್ತು ಕನ್ನೇಶ್ವರ ರಾಮ(೧೯೭೭, ಸತ್ಯು) ಸಿನಿಮಾದ ನಾಯಕರು ಬ್ರಿಟೀಷರ ವಿರುದ್ಧ ಏಕಾಂಗಿಯಾಗಿ ಹೋರಾಟ ನಡೆಸಿದವರು. ಬ್ರಿಟೀಷರಿಂದ ಕಳ್ಳರು, ದರೋಡೆಕೋರರಾಗಿ ಗುರುತಿಸಲ್ಪಟ್ಟವರು. ವೀರಸಿಂಧೂರ ಲಕ್ಷ್ಮಣ(೧೯೭೭, ಕೃಷ್ಣಮೂರ್ತಿ) ಸಮಕಾಲೀನವಾಗಿ ಉತ್ತರ ಕರ್ನಾಟಕದಲ್ಲಿ ಪ್ರದರ್ಶಿತವಾಗುತ್ತಿದ್ದ ನಾಟಕ. ಕನ್ನೇಶ್ವರ ರಾಮ(೧೯೭೭, ಸತ್ಯು) ಶಿವಮೊಗ್ಗ ಪ್ರಾಂತ್ಯದಲ್ಲಿದ್ದ ಹೋರಾಟಗಾರನನ್ನು ಆಧರಿಸಿ ರಚಿತವಾದ ಎಸ್.ಕೆ.ನಾಡಿಗ್ ಅವರ ಕಾದಂಬರಿ ಆಧಾರಿತ ಚಿತ್ರ. ಎರಡರಲ್ಲಿಯೂ ಬ್ರಿಟಿಷರನ್ನು ವಿರೋಧಿಸಿ ಪ್ರತಿಭಟಿಸಿದ ಮತ್ತು ಪ್ರಾದೇಶಿಕವಾಗಿ ದಂತಕಥೆಗಳಾದ ವ್ಯಕ್ತಿಗಳ ಜೀವನವನ್ನು ಚಿತ್ರಿಸುವ ಕಥಾವಸ್ತುವಿದೆ. ಕಾಕನ ಕೋಟೆ(೧೯೭೭, ಸಿಂಹ) ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಅವರ ನಾಟಕ ಆಧರಿಸಿದ ಚಾರಿತ್ರಿಕ ಚಿತ್ರ. ಚಿತ್ರದಲ್ಲಿ ಕಾಡುಜನರ ಸಣ್ಣ ಪಾಳೆಯವನ್ನು ಶೋಷಿಸುತ್ತಿದ್ದ ಬಲಿಷ್ಠ ರಾಜ್ಯ ವ್ಯವಸ್ಥೆಯ ಅಧಿಕಾರಿ ವರ್ಗದ ವಿರುದ್ಧ ಹೂಡವ ಪ್ರಬಲ ಪ್ರತಿಭಟನೆ ಕಾಣಬಹುದು. ಚಿತ್ರದ ಕಡೆಯ ಹಂತದಲ್ಲಿ ಮೈಸೂರು ರಾಜನ ಆಗಮನದ ಮೂಲಕ ಸಮಸ್ಯೆಯನ್ನು ಸರಿಪಡಿಸಲಾಗುತ್ತದೆ. ರಾಜನ ಗಮನಕ್ಕೆ ಬಾರದಂತೆ ಅಧಿಕಾರಿ ವರ್ಗದಿಂದ ಉಂಟಾದ ಶೋಷಣೆ ಎಂಬಂತೆ ಚಿತ್ರಿಸಿದೆ. ಹೆಗ್ಗಡೆ ಪಟ್ಟವನ್ನು ಮಹಾರಾಜ ಶೋಷಕ ಅಧಿಕಾರಿಯಿಂದ ಪ್ರತಿಭಟನಾಕಾರರ ನಾಯಕನಾದ ಕಾಚನಿಗೆ ನೀಡುವನು. ಆ ಸಂದರ್ಭದಲ್ಲಿ 'ಈಗ ಹೆಗ್ಗಡೆ ಪಾಳ್ಯ ಇರುವ ಕಡೆ ಕೋಟೆ ಕಟ್ಟಬೇಕು ಕಾಚಾ' ಎಂದಾಗ, ಕಾಚಾ 'ಇಲ್ಲ ನಮ್ಮದೇವರು ಗೋಡೆ ಕಟ್ಟಿದ ಕೋಟೆ ಎಷ್ಟು ದಿನ ತಡೀತಾತು' ಎಂಬ ಮರುಪ್ರಶ್ನೆ ಕೋಟೆ ವ್ಯವಸ್ಥೆಯನ್ನು ಜಡವಾಗಿಸುತ್ತದೆಂಬ ಸಾಂಕೇತಿಕ ಪ್ರತಿಭಟನೆ. ಈ ಚಿತ್ರದ ಬಹುತೇಕ ಪಾತ್ರಧಾರಿಗಳು ರಂಗಭೂಮಿಯ ಕಲಾವಿದರು. ರಂಗಭೂಮಿಯ ತಂತ್ರಗಳನ್ನೆ ಅನೇಕ ಕಡೆ ಬಳಸಲಾಗಿದೆ. ವ್ಯವಸ್ಥೆಯ ವಿರುದ್ಧದ ಪ್ರತಿಭಟನೆ ಸಬಾಲ್ಟ್ರನ್ ನೆಲೆಯಲ್ಲಿ ಕಂಡುಬರುವುದು. ದೇವರೇ ದಿಕ್ಕಿನಲ್ಲಿ(೧೯೭೭, ಕಸ್ತೂರ್) ಊರ ಜಮೀನ್ದಾರ ಬಡ ಜನತೆಯನ್ನು ಶೋಷಣೆ ಮಾಡಿ ಬೊಕ್ಕಸ ತುಂಬಿಕೊಳ್ಳುವ ಕ್ರೂರಿ. ಊರಿಗೆ ಬಂದ ವಿದ್ಯಾವಂತ ಯುವಕನ

ನೇತೃತ್ವದಲ್ಲಿ ಕಂಡುಬಂದ ಪ್ರತಿಭಟನೆಯಿಂದ ತಾತ್ಕಾಲಿಕವಾಗಿ ಸಮಾಧಾನ ಸಿಗುವುದು. ಮುಂದೆ ಆ ಯುವಕ ಸಾಹುಕಾರನ ಮಗಳನ್ನು ವಿವಾಹವಾದ ತರುವಾಯ ಸಾಹುಕಾರನಿಂಗಿಂತಲೂ ದೊಡ್ಡ ಶೋಷಕನಾಗಿ ಬದಲಾಗುವವನು. ಊರಿನಲ್ಲಿ ಉದ್ಭವಿಸುವ ಹಿಂಸೆ, ಆಕಸ್ಮಿಕ ಘಟನೆಗಳು ಮತ್ತೆ ಹಳೆಯ ಆದರ್ಶವಾದಿ ವ್ಯಕ್ತಿಯಾಗಿ ಊರ ಹಿತ ಬಯಸುವವನಾಗಿ ಪರಿವರ್ತನೆಗೊಳ್ಳುವನು. ಚಂದ್ರಶೇಖರ ಕಂಬಾರ ಅವರ ಜೈ ಸಿದ್ಧನಾಯ್ಕ ನಾಟಕದ ಕಥಾ ಹಂದರದ ಬಹುಪಾಲನ್ನು ಈ ಸಿನಿಮಾ ಹೊಂದಿದೆ. ಸಿನಿಮಾದಲ್ಲಿ ಕಥೆ ಸುಖಾಂತ್ಯವೆಂಬಂತೆ ಕಂಡುಬರುವುದು. ಆದರೆ ಚಿತ್ರದ ಶೀರ್ಷಿಕೆ ದೇವರೇ ದಿಕ್ಕು(೧೯೭೭, ಕಸ್ತೂರ್) ಎಂಬುದು ಸಿನಿಮಾದ ಅಂತ್ಯ ಅಣಕಿಸುತ್ತ, ವಾಸ್ತವ ನೆಲೆಗಟ್ಟಿನಲ್ಲಿ ವಿಡಂಬಿಸಿದೆ. ಬಭ್ರುವಾಹನ(೧೯೭೭, ಕೃಷ್ಣಮೂರ್ತಿ) ಒಂದು ಪೌರಾಣಿಕ ಚಿತ್ರ, ವ್ಯವಸ್ಥೆಯಲ್ಲಿನ ಪ್ರಬಲ ರಾಜಕೀಯ ಶಕ್ತಿ ಅಧಿಕಾರ ಮತ್ತು ಆಡಳಿತ ಕ್ಷೇತ್ರವನ್ನು ಅಶ್ವಮೇಧದ ಹೆಸರಿನಲ್ಲಿ ವಿಸ್ತರಿಸಲು ಬಂದಾಗ, ಸಣ್ಣ ರಾಜ್ಯದ ಪ್ರಬಲ ಪ್ರತಿಭಟನೆಯೊಡನೆ ಮಹಾಭಾರತದ ಉಪಕಥೆಯೊಂದು ತೆರೆದುಕೊಳ್ಳುವುದು. ಮಹಾಭಾರತ ಭಾರತೀಯರಿಗೆ ಪೌರಾಣಿಕ, ಧಾರ್ಮಿಕ ದೃಷ್ಟಿಯಿಂದ ಅಷ್ಟೇ ಅಲ್ಲದೆ ರಾಜಕಾರಣದ ದೃಷ್ಟಿಯಿಂದ ನಿರಂತರವಾಗಿ ಪ್ರಭಾವಿಸಿದೆ. ಈ ಚಿತ್ರವನ್ನು ನಿರ್ದೇಶಿಸಿರುವ ಹುಣಸೂರು ಕೃಷ್ಣಮೂರ್ತಿಯವರ ಇತರ ಸಿನಿಮಾಗಳಲ್ಲಿಯೂ ಪ್ರತಿಭಟನೆ ವ್ಯಕ್ತವಾಗಿದೆ. ಸಮಕಾಲೀನವಾಗಿ ಹಿಂದಿಯಲ್ಲಿ ತೆರೆಕಂಡ ಶತರಂಜ್ ಕೆ ಕಿಲಾಡಿ(೧೯೭೭, ರೇ) ರಾಜಕೀಯ ವಿಡಂಬನೆಯಾದರೆ, ಜಲಿಯನ್ ವಾಲಾಬಾಗ್(೧೯೭೭, ಬಾಲ ರಾಜ್‌ಥಾ) ಚಾರಿತ್ರಿಕ ಚಿತ್ರ ಹಾಗೂ ಡಾಕು ಔರ್ ಮಹಾತ್ಮ(೧೯೭೭, ರವಿಕಾಂತ್‌ನಗೈಚ್) ಎಂಬ ವಿಭಿನ್ನ ರೀತಿಯ ಪ್ರತಿಭಟನಾ ಧ್ವನಿ ಹೊಂದಿರುವ ಚಿತ್ರಗಳನ್ನು ಕಾಣಬಹುದು.

ಪ್ರತಿಭಟನಾ ಧ್ವನಿ ಮುಖ್ಯವಸ್ತುವಾಗಿ ಕಂಡುಬರುವ ಚಿತ್ರಗಳು ಇತರ ಚಿತ್ರಗಳಿಗಿಂತ ಸಂಖ್ಯಾವಾರು ಕಡಿಮೆಯಿದೆ. ಕೆಲವೊಮ್ಮೆ ಚಿತ್ರದ ಮುಖ್ಯ ಕಥಾವಸ್ತು ಪ್ರತಿಭಟನಾ ಧ್ವನಿ ಆಗಿರದಿದ್ದರೂ, ಸಾಂಧರ್ಭಿಕವಾಗಿ ಸಂಕೇತಗಳ ಮೂಲಕ ಕೆಲವು ದೃಶ್ಯಗಳು, ಹಾಡುಗಳಲ್ಲಿ ಪ್ರತಿಭಟನೆ ನೋಡಬಹುದು. ಉದಾಹರಣೆಗೆ, ಪರಿವರ್ತನೆಯಲ್ಲಿ(೧೯೭೬, ಚಿಟಗೋಪಿ) 'ಎಳ ಸಿಂಗಗಳ ನಾಡಿನಂಚಿನಲಿ ಮೂಡಿದೆ ವಿಷಗಾಳಿ' ಎಂಬ ಹಾಡು ವ್ಯವಸ್ಥೆಯ ವಿರುದ್ಧ ಪ್ರತಿಭಟನೆ ಹಾಗೂ ಪ್ರತಿಭಟಿಸಲು ಇತರರನ್ನು ಪ್ರೇರೇಪಿಸುವಂತೆ ಚಿತ್ರಿಸಲಾಗಿದೆ. ಯಾರು ಹಿತವರು(೧೯೭೬, ಸತ್ಯಮೂರ್ತಿ) ಚಿತ್ರದಲ್ಲಿ ಪ್ರತಿಭಟನೆಯ ಧ್ವನಿ ಕಂಡುಬರುವುದಿಲ್ಲ. ಆದರೆ ವೈಯಕ್ತಿಕ ನೆಲೆಯಲ್ಲಿ ಹೆಣ್ಣನ್ನು ಸರಿಯಾದ ಚಿಂತನೆಯಿಲ್ಲದೆ, ಸಮಸ್ಯೆಗಳ ಆಗರ ಸೃಷ್ಟಿಸುವವಳು ಎಂಬಂತೆ ಬಿಂಬಿಸಲಾಗಿದೆ. ಸಮಕಾಲೀನವಾಗಿ ದೇಶದ ಪ್ರಧಾನಮಂತ್ರಿ ಸ್ತ್ರೀ ಆಗಿದ್ದು, ಪತ್ರಿಕೆಗಳಲ್ಲಿ, ಸಾಹಿತ್ಯಗಳಲ್ಲಿ ಇಂತಹ ನಿಲುವು ಸಾಮಾನ್ಯವಾಗಿ ಕಂಡುಬರುತ್ತಿತ್ತು. ಈ ಲಕ್ಷಣ ಬಲಪಂಥೀಯ ಸೈದ್ಧಾಂತಿಕ ಹಿನ್ನೆಲೆಯವರಲ್ಲಿ ಕಂಡುಬರುವುದು. ಪ್ರತಿಭಟನಾ ಸಾಹಿತ್ಯ ಮತ್ತು ಸರಕಾರದ ಪರವಿರುವ ಸಾಹಿತ್ಯಗಳಲ್ಲಿಯೂ ಇಂತಹ ವಿಚಾರಗಳನ್ನು ಮತ್ತೊಂದು ರೂಪದಲ್ಲಿ ಅಸ್ತ್ರಗಳನ್ನಾಗಿ ಬಳಸಿರುವುದು ಸಾಮಾನ್ಯವಾಗಿದೆ.

### ೩.೧.೧.೨.೨.೩.೩. ವ್ಯಂಗ್ಯಚಿತ್ರ ಮತ್ತು ಜಾಹೀರಾತುಗಳು

'ಪ್ರಜಾಪ್ರಭುತ್ವದಲ್ಲಿ ವ್ಯಂಗ್ಯಚಿತ್ರಕಾರನ ಕೆಲಸ ರಾಜಕೀಯ ನಾಯಕರನ್ನು ವ್ಯಂಗ್ಯಚಿತ್ರದ ಮೂಲಕ ವಿಮರ್ಶಿಸುವ, ಗೇಲಿಮಾಡುವ, ತಪ್ಪನ್ನು ಹುಡುಕುವ ತನ್ನ ಹಕ್ಕನ್ನು ಚಲಾಯಿಸುವುದಾಗಿದೆ' ಎಂದು ಭಾರತದ ಪ್ರಮುಖ ವ್ಯಂಗ್ಯಚಿತ್ರಕಾರ ಆರ್.ಕೆ.ಲಕ್ಷ್ಮಣ್ ಅವರು ಅಭಿಪ್ರಾಯ ವ್ಯಕ್ತಪಡಿಸುವರು. ರಾಜಕೀಯ ವ್ಯಂಗ್ಯಚಿತ್ರಗಳು ಪ್ರಜಾಪ್ರಭುತ್ವ ವ್ಯವಸ್ಥೆಯ ಉತ್ತಮ ವಿಮರ್ಶಕ. ಅವುಗಳ ಮೇಲೆ ಪ್ರತಿಬಂಧಗಳು ಹೆಚ್ಚಾದಷ್ಟು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ನಿರಂಕುಶ ವ್ಯವಸ್ಥೆಯ ಬೆಳವಣಿಗೆ ಹೆಚ್ಚುತ್ತದೆಂಬುದನ್ನು ಸೂಚಿಸುವುದು. ವ್ಯಂಗ್ಯಚಿತ್ರಗಳು ಸಮಕಾಲೀನ ರಾಜಕೀಯ ವಿಮರ್ಶೆಗಳಾಗಿರುವುದರ ಜೊತೆಗೆ ಐತಿಹಾಸಿಕ ಆಕರ. 'ಸ್ವಾತಂತ್ರ್ಯ ನಂತರದಿಂದ ತುರ್ತುಪರಿಸ್ಥಿತಿ ಜಾರಿವರೆಗೂ ಶಂಕರ್ ವೀಕ್ಲಿ ಎಂಬ ನಿಯತಕಾಲಿಕೆ ವ್ಯಂಗ್ಯಚಿತ್ರಗಳ ಮೂಲಕ ರಾಜಕಾರಣವನ್ನು ವಿಶ್ಲೇಷಿಸುತ್ತಿತ್ತು. ತುರ್ತುಪರಿಸ್ಥಿತಿ ಜಾರಿ ನಂತರ ಸೆನ್ಸಾರ್‌ಗೆ ಒಳಪಟ್ಟು ಕಾರ್ಯನಿರ್ವಹಿಸದೆ ಇರುವುದಕ್ಕಿಂತ ವ್ಯಂಗ್ಯಚಿತ್ರಗಳ ರಚನೆ ನಿಲ್ಲಿಸುವುದು ಉತ್ತಮವೆಂದು

ಶಂಕರ್ ವೀಕ್ಲಿ ಮುಚ್ಚಲಾಯಿತು' ಎಂದು ವ್ಯಂಗ್ಯಚಿತ್ರಕಾರ ನರೇಂದ್ರ[೩೬] ಅವರು ನೆನಪಿಸಿಕೊಳ್ಳುವರು. ಈಗಾಗಲೇ ಚರ್ಚಿಸಿರುವಂತೆ ವ್ಯಂಗ್ಯಚಿತ್ರ ಸೆನ್ಸಾರ್‌ನ ನಿಯಮಾವಳಿಯಲ್ಲಿ ನಿಯಂತ್ರಣಕ್ಕೆ ಒಳಪಟ್ಟಿತ್ತು. ಇಲ್ಲಿ ಆ ಸಂದರ್ಭದ ವ್ಯಂಗ್ಯಚಿತ್ರ ಹಾಗೂ ಜಾಹೀರಾತುಗಳನ್ನು ವಿಶ್ಲೇಷಿಸಲು ಪ್ರಯತ್ನಿಸಿದೆ.

ಈ ಕೆಳಗಿನ ಚಿತ್ರ-೬ 'ಇಂಡಿಯಾ ಎಂದರೆ ಇಂದಿರಾ' ಎಂಬ ಉದ್ಘೋಷದ ಹಿನ್ನೆಲೆಯಲ್ಲಿ ಪ್ರೇರಿತಗೊಂಡು ರಚಿತವಾದಂತಿದೆ. ವ್ಯಕ್ತಿ ರಾಜಕಾರಣ ಉತ್ತುಂಗಕ್ಕೆ ಹೋದಷ್ಟು ಪ್ರಜಾಪ್ರಭುತ್ವಕ್ಕೆ



ಆರ್.ಕೆ.ಲಕ್ಷ್ಮಣ್‌ರ ವ್ಯಂಗ್ಯಚಿತ್ರ. ಪ್ರಕಟವಾದ ದಿನಾಂಕದ ಬಗ್ಗೆ ಮಾಹಿತಿ ಇಲ್ಲ. ಚಿತ್ರ ಸಂಖ್ಯೆ ೩.೧೭.
(ಚಿತ್ರ-೬)

ಅಪಾಯ ಎಂಬ ವಿಚಾರಧಾರೆ ಕಂಡುಬರುವುದು. ಪವಿತ್ರವಾದ ಪ್ರಜಾಪ್ರಭುತ್ವದ ಅಡಿಗಲ್ಲನ್ನೆ ಸಿಂಹಾಸನವನ್ನಾಗಿಸಿಕೊಂಡು, ಪ್ರತಿಭಟನೆಗಳಿಗೆ ಪ್ರತಿಕ್ರಿಯಿಸದೆ ವ್ಯಕ್ತಿ ರಾಜಕಾರಣದಲ್ಲಿ ಸಾಗುತ್ತಿರುವಂತೆ ತೋರುವುದು. ಸಮಕಾಲೀನ ರಾಜಕಾರಣ ಮತ್ತು ಸಮಾಜದಲ್ಲಿ ಕಂಡುಬರುತ್ತಿದ್ದ ಪ್ರತಿಭಟನೆಗಳನ್ನು ಬಿಟ್ಟಾಗಿ ಚಿತ್ರಿಸಿರುವುದು. ಈ ಕಾಲಘಟ್ಟದಲ್ಲಿ ಪ್ರಜಾಪ್ರಭುತ್ವದ ಉಳಿಕೆ ಅನೇಕ ರಂಗಗಳಲ್ಲಿ ಪ್ರತಿಭಟನೆಯ ಅಸ್ತ್ರವಾಗಿ ರೂಪುಗೊಂಡಿತ್ತು.

ವಿದೇಶಿ ವ್ಯಂಗ್ಯಚಿತ್ರಗಳಲ್ಲಿ ಪ್ರಜಾಪ್ರಭುತ್ವ ಮತ್ತು ತುರ್ತುಪರಿಸ್ಥಿತಿಯು ಮೂಡಿಬಂದಿರುವ ಬಗೆಯನ್ನು ಕೆಳಗಿನ ಚಿತ್ರ-೭ ಮತ್ತು ಚಿತ್ರ-೭ಎಗಳಲ್ಲಿ ನೋಡಬಹುದು. ಚಿತ್ರ-೭ ತುರ್ತುಪರಿಸ್ಥಿತಿ ಘೋಷಣೆಯಾದ ತಕ್ಷಣವೇ ಪ್ರಕಟವಾಗಿದ್ದರೆ, ಚಿತ್ರ-೭ಎ ತಿಂಗಳ ಬಳಿಕ ಪ್ರಕಟಗೊಂಡ ವ್ಯಂಗ್ಯಚಿತ್ರ. ಎರಡರಲ್ಲಿಯೂ ಇಂದಿರಾ



ವಾಷಿಂಗ್ಟನ್ ಪೋಸ್ಟ್ ೨೭ ಜೂನ್, ಜುಲೈ ೧೯೭೫ರಂದು ಪ್ರಕಟವಾದವು. ಚಿತ್ರ ಸಂಖ್ಯೆ: ೩.೧೮.
(ಚಿತ್ರ-೭) (ಚಿತ್ರ-೭ಎ)

ಗಾಂಧಿ ಅವರ ರಾಜಕೀಯ ಕಾರ್ಯನೀತಿಗಳು ಕೇಂದ್ರ ವಸ್ತುವಿಷಯ ಆಗಿದೆ. ಚಿತ್ರ-೭ರಲ್ಲಿ ನಾಗರಿಕ ಹಕ್ಕುಗಳನ್ನು ಹೊಡೆದುಹಾಕಿ ಕನ್ನಡಿಯ ಮುಂದೆ ನಿಂತು ದೊಣ್ಣೆ ಹಿಡಿದ ಇಂದಿರಾ ಗಾಂಧಿ ಅವರು ಯಾರು ಹೆಚ್ಚು ಸುಂದರ ಎಂದು ಪ್ರಶ್ನಿಸುತ್ತಿರುವುದನ್ನು ನೋಡಬಹುದು. ಕನ್ನಡಿಯಲ್ಲಿ ಇಂದಿರಾ ಗಾಂಧಿ ಅವರ ಮುಖದ ಬದಲು ಕಪ್ಪನೆಯ ಆಕೃತಿ ಕಂಡುಬರುತ್ತಿರುವುದು ತುರ್ತುಪರಿಸ್ಥಿತಿ ಜಾರಿಯನ್ನು ಪ್ರಬಲವಾಗಿ ವಿರೋಧಿಸಿದೆ. ಚಿತ್ರ-೭ಎ ಸಂಪಾದಕೀಯ ವ್ಯಂಗ್ಯಚಿತ್ರವಾಗಿದೆ. ಗೋಡೆಯ ಮೇಲೆ ಇಂಡಿಯಾ

ಸರ್ಕಾರ ಎಂದಿರುವಲ್ಲಿ, 'ಇಂಡಿಯಾ'ದ ಮೇಲೆ ಗೆರೆ ಎಳೆಯಲಾಗಿದೆ. 'ಇಂದಿರಾ' ಎಂದು ಬರೆಯುವ ಮೂಲಕ ಇಂದಿರಾ ಸರ್ಕಾರವನ್ನಾಗಿ ಮಾಡಿರುವುದು. ಈ ಹೊತ್ತಿಗೆ ತುರ್ತುಪರಿಸ್ಥಿತಿ ಜಾರಿಯನ್ನು ಸಂವಿಧಾನಾತ್ಮಕಗೊಳಿಸಲಾಗಿತ್ತು. ಈ ವ್ಯಂಗ್ಯಚಿತ್ರಗಳು ತುರ್ತುಪರಿಸ್ಥಿತಿಯ ನಂತರ ಸುಧಾ ವಾರಪತ್ರಿಕೆಯಲ್ಲಿ ಪ್ರಕಟವಾದವುಗಳಾಗಿವೆ.

ವಿದೇಶಿ ಪತ್ರಿಕೆಗಳಲ್ಲಿ ಮುದ್ರಿತವಾಗಿರುವ ಈ ಜಾಹೀರಾತುಗಳು(ಚಿತ್ರ-೮ ಮತ್ತು ಚಿತ್ರ-೮ಎ) ತುರ್ತುಪರಿಸ್ಥಿತಿಯನ್ನು ರದ್ದುಗೊಳಿಸಲು ಒತ್ತಡವನ್ನುಂಟು ಮಾಡುವ ಉದ್ದೇಶ ಹೊಂದಿದ್ದವು. ಚಿತ್ರ-೮ ಬ್ರಿಟಿಷ್ ಪಾರ್ಲಿಮೆಂಟಿನ ೭೦ ಜನ ಸದಸ್ಯರು ಸಹಿ ಹಾಕಿ ಪ್ರಕಟವಾಗಿರುವುದು. ಇಲ್ಲಿ ಗಾಂಧಿ ತಲೆತಗ್ಗಿಸಿರುವಂತೆ, ಜೆ.ಪಿ. ಚಿಂತಿಸುತ್ತಿರುವಂತಿದೆ. ಜೆ.ಪಿ. ಅವರನ್ನು ಬಿಡುಗಡೆ ಮಾಡಲು ಒತ್ತಡ ಉಂಟು ಮಾಡುವಂತಿದೆ. ಜಾಹೀರಾತಿನಲ್ಲಿ 'ಇಂದು ಭಾರತದ ಸ್ವಾತಂತ್ರ್ಯ ದಿನಾಚರಣೆ. ಪ್ರಜಾಪ್ರಭುತ್ವದ ಬೆಳಕು ಭಾರತದಲ್ಲಿ ಆರದಿರಲಿ' ಎಂಬ ಉದ್ಘೋಷವಿದೆ. ತುರ್ತುಪರಿಸ್ಥಿತಿಯ ನಂತರ ಸುಧಾದಲ್ಲಿ ಪ್ರಕಟವಾಗುತ್ತಿದ್ದ



ಲಂಡನ್ ಟೈಮ್ಸ್ ಮತ್ತು ನ್ಯೂ ಯಾರ್ಕ್ ಟೈಮ್ಸ್ ೧೯೭೫ ಆಗಸ್ಟ್ ೧೫ ಪ್ರಕಟವಾದ ಜಾಹೀರಾತುಗಳು. ಚಿತ್ರ ಸಂಖ್ಯೆ ೩.೧೯
(ಚಿತ್ರ-೮) (ಚಿತ್ರ-೮ಎ)

'ಮಸುಕಾದ ಸ್ವಾತಂತ್ರ್ಯ' ಲೇಖನದಲ್ಲಿ ಈ ಜಾಹೀರಾತಿನ ಪ್ರಸ್ತಾಪವನ್ನು ಕಾಣಬಹುದು. ಚಿತ್ರ-೮ಎನಲ್ಲಿ ಚಿಂತಾಕ್ರಾಂತರಾಗಿರುವ ಗಾಂಧೀಜಿಯ ಚಿತ್ರವಿದೆ. ತುರ್ತುಪರಿಸ್ಥಿತಿಯನ್ನು ವಿರೋಧಿಸುವ ವಿದೇಶಿಯರು, ಅನಿವಾಸಿ ಭಾರತೀಯರ ಹೆಸರುಗಳನ್ನು ಪ್ರಕಟಿಸಲಾಗಿದೆ. ಈ ಜಾಹೀರಾತುಗಳು ವಿದೇಶಗಳಲ್ಲಿ ತುರ್ತುಪರಿಸ್ಥಿತಿಯ ವಿರುದ್ಧ ಕಂಡುಬಂದ ಪ್ರತಿಭಟನೆಯ ಸ್ವರೂಪವನ್ನು ಚಿತ್ರಿಸುವುದು.

ರಾಷ್ಟ್ರದಾದ್ಯಂತ ಪ್ರತಿಭಟನೆಗಳು ಹಲವು ಸ್ವರೂಪಗಳಲ್ಲಿ ಪ್ರಕಟಗೊಂಡಿವೆ. ಈ ವ್ಯಂಗ್ಯಚಿತ್ರದಲ್ಲಿ(ಚಿತ್ರ-೯) ಹಮ್ ಕೋ ಸನ್ಮತಿ ದೇ ಭಗವಾನ್ ಎಂದು ಭಜನೆ ಮಾಡುತ್ತಿರುವವರನ್ನು ಖದೀಮರೆಂದು ಕರೆಯಲಾಗಿದೆ. ಅದರ ಕೆಳಗೆ 'ನಾವು ಕಾರ್ಯ ಪ್ರವೃತ್ತರಾಗೋಣ' ಎಂಬ ೨೯ನೆಯ ಸ್ವಾತಂತ್ರ್ಯ ದಿನಾಚಾರಣೆಯ ಸಂಪಾದಕೀಯವಿದೆ. ನಾವಿದಕ್ಕೆ ಎಷ್ಟು ಅರ್ಹರು ಎಂಬ ಪ್ರಶ್ನೆಯ ಮೂಲಕ ಸಂಪಾದಕೀಯ ಶುರುವಾಗುವುದು. ಜನ ಸಾಮಾನ್ಯರನ್ನು ಉದ್ದೇಶಿಸಿ ಮಾಂತ್ರಿಕ ಪರಿಹಾರ, ನಾಟಕೀಯ ಫಲಿತಾಂಶಗಳನ್ನು ಅಪೇಕ್ಷಿಸಬಾರದು. ದಾರಿದ್ರ್ಯ ನಿವಾರಣೆಗೆ ಇರುವ ಐಂದ್ರಜಾಲಿಕ ಮಾರ್ಗ ಕಠಿಣ ಪರಿಶ್ರಮ. ಸ್ಪಷ್ಟ



ಪ್ರಜಾಮತ: ಆಗಸ್ಟ್ ೧೭, ೧೯೭೫ರಂದು ಪ್ರಕಟ. ವ್ಯಂಗ್ಯಚಿತ್ರಕಾರ: ಜಿ.ವೈ.ಹುಬ್ಳೀಕರ್. ಚಿತ್ರ ಸಂಖ್ಯೆ ೩.೨೦.
(ಚಿತ್ರ-೯)

ದೃಷ್ಟಿಕೋನ, ದೃಢ ಸಂಕಲ್ಪ, ಕಟ್ಟುನಿಟ್ಟಾದ ಶಿಸ್ತು ಮಾತ್ರ, ಸ್ವಾತಂತ್ರ್ಯ, ವ್ಯವಸ್ಥೆ, ಜನರ ಕರ್ತವ್ಯಗಳ ಬಗ್ಗೆ ತಮ್ಮ ವಿಚಾರಗಳನ್ನು ಹೇಳಿ ತುರ್ತುಪರಿಸ್ಥಿತಿಯು ಹೊಸ ಅವಕಾಶವನ್ನು ತೆರೆದಿದೆ ಎಂದು ಕೊನೆಗೊಳಿಸುವರು. ಓದುಗರಿಗೆ ವ್ಯಂಗ್ಯಚಿತ್ರ ಸಾರುತ್ತಿರುವ ಸಂದೇಶ ತಲುಪುವಂತಿದೆ. ಪರೋಕ್ಷ ಪ್ರತಿಭಟನೆಯ ಒಂದು ವಿಧ.

ಈ ವ್ಯಂಗ್ಯಚಿತ್ರಗಳಲ್ಲಿ ಚಿತ್ರ-೧೦ ಚಿನಕುರಳಿ ಎಂಬ ಅಂಕಣವಾಗಿದೆ. ಇದರಲ್ಲಿನ ನಾಲ್ಕು ವ್ಯಂಗ್ಯಚಿತ್ರಗಳು ರಾಜಕಾರಣ ಮತ್ತು ಸಮಾಜವನ್ನು ಬಿಂಬಿಸುವುದು. ಯಾವಾಗಲೂ ನಡೆಯುತ್ತಿದ್ದ ಚಳವಳಿಯಿಂದ ಜೀವನ ನಡಿತ್ತಿತ್ತು ಎಂದು ಹೇಳುವ ಮಾರಾಟಗಾರ, ಅದರ ಕೆಳಗೆ ಅಂಗಡಿ ಮುಂದೆ ಎಣ್ಣೆ ಮಾರುತ್ತಿರುವನನ್ನು ಕಂಡು ದಾರಿಹೋಕರು ವಸ್ತುಗಳಿಗೆ ಬೇರಿಕೆ ಮಾಡಿ ಮಾರಾಟ ಮಾಡುತ್ತಿದ್ದದ್ದನ್ನು



ಪ್ರಜಾಮತ ಮತ್ತು ಕನ್ನಡಪ್ರಭ. ೧೯೭೬ ಡಿಸೆಂಬರ್ ೭ ಮತ್ತು ೧೧. ವ್ಯಂಗ್ಯಚಿತ್ರಕಾರ: ಪಿ.ವಿ.ಹುಬ್ಳೀಕರ್ ಮತ್ತು ಅಬು ಅಬ್ರಹಾಂ. ಚಿತ್ರ ಸಂಖ್ಯೆ: ೩.೨೧
(ಚಿತ್ರ-೧೦) (ಚಿತ್ರ-೧೦ಎ)

ನೆನಪಿಸಿಕೊಳ್ಳುತ್ತಿರುವರು. ಮತ್ತೊಂದು ಬದಿಯಲ್ಲಿ ರಾಜಕೀಯದ ಬಗ್ಗೆ ಸಿನಿಮಾ ನಿರ್ಮಾಪಕರು ಕಡ್ಲೆಕಾಯಿ ವ್ಯಾಪಾರ ಮಾಡುತ್ತಿರುವ ಕುರಿತು ದಾರಿಹೋಕರು ಮಾತನಾಡುತ್ತಿರುವುದು. ರಾಜಕಾರಣವನ್ನು ಯಾವ ರೀತಿಯೂ ದಾಖಲಿಸಲು ಹಾಗೂ ಪ್ರಶ್ನಿಸಲು ಸರ್ಕಾರ ಅವಕಾಶ ಕೊಡುತ್ತಿಲ್ಲವೆಂಬ ವಿಡಂಬನೆಯಿದೆ. ಮಂತ್ರಿಗಳ ಫಲಕವಿರುವ ಕಡೆ ಜೇಡದಬಲೆ, ಕಸ ತುಂಬಿದೆ. ದಾರಿಹೋಕರು ಸದಾ ಚಳುವಳಿ ನಡೆಯುತ್ತಿದ್ದುದರಿಂದ ಮೊದಲು ಬಹಳ ಸ್ವಚ್ಛವಾಗಿತ್ತೆಂದಿರುವುದು ಬಾಹ್ಯವಲ್ಲದೆ ರಾಜಕಾರಣಕ್ಕೂ ಸಂಬಂಧಿಸಿದೆ. ಸೌಮ್ಯವಾಗಿ ರಾಜಕಾರಣ ಮತ್ತು ಸರ್ಕಾರದ ಧೋರಣೆಗೆ ಬಂದ ಪ್ರತಿಭಟನೆಯಿದು. ಎರಡನೆಯ ವ್ಯಂಗ್ಯಚಿತ್ರ(ಚಿತ್ರ-೧೦ಎ) ಮೊದಲ ಬಾರಿಗೆ ಇಂಡಿಯನ್ ಎಕ್ಸ್‌ಪ್ರೆಸ್‌ನಲ್ಲಿ ಪ್ರಕಟವಾಗಿತ್ತು. ಇದು ತುರ್ತುಪರಿಸ್ಥಿತಿ ಕಾಲದ ಅತ್ಯಂತ ಪ್ರಸಿದ್ಧ ವ್ಯಂಗ್ಯಚಿತ್ರಗಳಲ್ಲೊಂದು. ತುರ್ತುಪರಿಸ್ಥಿತಿ ಕುರಿತ ಸ್ಮರಣೆಗಳಲ್ಲಿ ಇದರ ಪ್ರಸ್ತಾಪ ಸಾಮಾನ್ಯವಾಗಿರುವುದು. ಭಾರತದ ರಾಷ್ಟ್ರಪತಿ ಬಾತ್‌ಟಬ್‌ನಲ್ಲಿ ಸ್ನಾನಕ್ಕೆ ಕುಳಿತಿದ್ದು, ಅಧಿಕಾರಿ ಒಬ್ಬರು ಅಲ್ಲೇ ಬಂದು ಸಹಿ ತೆಗೆದುಕೊಳ್ಳುತ್ತಿರುವಂತಿದೆ. ಇನ್ನೇನಾದರೂ ತುರ್ತು ಕೆಲಸವಿದ್ದಲ್ಲಿ ಕಾಯಲು ಹೇಳಿ ಎಂದಿರುವುದು ದುಂಡಾದ ಕ್ಯಾಲೌಟ್ ಒಳಗಿದೆ. ತುರ್ತುಪರಿಸ್ಥಿತಿ ಮಧ್ಯರಾತ್ರಿ ಜಾರಿಗೊಳಿಸಿ, ಸಂವಿಧಾನದ ಚೌಕಟ್ಟಿನೊಳಗೆ ಬರುವಂತೆ ಮಾಡಿರುವುದರ ಅಣಕ.

೧೯೭೬ರ ಹೊಸ ವರ್ಷದ ಸಂದರ್ಭದ ವ್ಯಂಗ್ಯಚಿತ್ರ(ಚಿತ್ರ-೧೧). ಹೊಸವರ್ಷದ ಶುಭಾಶಯ ತಿಳಿಸುತ್ತ ತುರ್ತುಪರಿಸ್ಥಿತಿ ಹೆಸರಿನ ಗಾಡಿಯಲ್ಲಿ ಹೆದರಿರುವ ವ್ಯಕ್ತಿಯನ್ನು ತಳ್ಳಿಕೊಂಡು ಹೋಗುತ್ತಿರುವ ರಾಷ್ಟ್ರಪತಿ.



(ಚಿತ್ರ-೧೧)

ಆರ್.ಕೆ.ಲಕ್ಷ್ಮಣ್: ೧೯೭೬ರ ಜನವರಿಯಲ್ಲಿ ಪ್ರಕಟಿತ. ಆಕರ: ಅಂತರ್‌ಜಾಲ. ಚಿತ್ರ ಸಂಖ್ಯೆ: ೩.೨೨.

ನಿಮ್ಮ ಕಾಲ ಮೇಲೆ ನಿಲ್ಲಲು ಇನ್ನೂ ಸಾಕಷ್ಟು ಸಮಯವಿದೆ ಎಂದು ಹೇಳುತ್ತಿದ್ದಾರೆ. ತುರ್ತುಪರಿಸ್ಥಿತಿ ಜಾರಿ ರದ್ದುಗೊಳಿಸಲಿಲ್ಲ ಎಂಬ ಪ್ರತಿಭಟನಾ ಧ್ವನಿ ಇಲ್ಲಿದೆ.

ಸಮಕಾಲೀನವಾಗಿ ಕಂಡುಬಂದ ಕೆಳಗಿನ ವಿದೇಶಿ ವ್ಯಂಗ್ಯಚಿತ್ರಗಳಲ್ಲಿ ಗಾಂಧಿ ಮತ್ತು ಜೆ.ಪಿ. ಈರ್ವರೂ ಸ್ವಾತಂತ್ರ್ಯದ ಸಂಕೇತವಾಗಿ ಮೂಡಿಬಂದಿರುವರು. ಚಿತ್ರ-೧೨ರಲ್ಲಿ ಇಬ್ಬರೂ ಸೆರೆಮನೆಯಲ್ಲಿ ಸಂಭಾಷಿಸುತ್ತಿರುವರು. ಜೆ.ಪಿ. ಅವರನ್ನು ಗಾಂಧಿ ಪ್ರತಿನಿಧಿಯಂತೆ ಕಾಣಲಾಗುತ್ತಿತ್ತು. ಜೆ.ಪಿ. ಅವರು ಸೆರೆಯಲ್ಲಿರುವುದು ವಿದೇಶಿ ವ್ಯಂಗ್ಯಚಿತ್ರಕಾರನ, ಭಾರತದ ರಾಜಕಾರಣ ಕುರಿತ ನೋಟವಾಗಿದೆ. ಗಾಂಧಿ ಅವರು 'ನಾನು ಬ್ರಿಟೀಷರ ಕಾಲದಲ್ಲಿ ಸೆರೆಯಲ್ಲಿದ್ದೆ, ನಿನ್ನನ್ನು ಭಾರತೀಯರೇ ಸೆರೆಯಲ್ಲಿಟ್ಟಿದ್ದಾರೆ' ಎಂದು ಜೆ.ಪಿ. ಅವರಿಗೆ ಹೇಳುತ್ತಿದ್ದಾರೆ. ಸಮಕಾಲೀನವಾಗಿ ಜೆ.ಪಿ.ಯನ್ನು ಸ್ವಾತಂತ್ರ್ಯ ಹೋರಾಟದ ಅಥವಾ ಸ್ವಾತಂತ್ರ್ಯದ





ದಿ ಈಸ್ಟರ್ನ್ ಇಕಾನಾಮಿಕ್ ರಿವ್ಯೂವ್ ೧೯೭೬ ಫೆಬ್ರವರಿ ೨೦ ಮತ್ತು [illegible] ಚಿತ್ರ ಸಂಖ್ಯೆ ೩.೨೩

(ಚಿತ್ರ-೧೨) (ಚಿತ್ರ-೧೨ಎ)

ಪ್ರತಿನಿಧಿಯಾಗಿ ಕಾಣಲಾಗುತ್ತಿತ್ತು. ಚಿತ್ರ-೧೨ಎ ೧೯೭೬ರ ಸೆಪ್ಟೆಂಬರ್ ೨೦ ರಿಂದ ಅಕ್ಟೋಬರ್ ೧೮ರವರೆಗೆ ನಡೆದ ಪ್ರತಿಭಟನೆಯ ಕರಪತ್ರವಾಗಿದೆ. ಫಿಲಡೆಲ್ಫಿಯಾದಿಂದ ನ್ಯೂಯಾರ್ಕ್‌ವರೆಗೆ ಭಾರತದಲ್ಲಿ ಮಾನವೀಯ ಹಕ್ಕುಗಳನ್ನು ಸ್ಥಾಪಿಸಿ, ಪ್ರಜಾಪ್ರಭುತ್ವವನ್ನು ಮರುಸ್ಥಾಪಿಸಲು ನಡೆಸಿದ ಪ್ರಚಾರ ಕಾರ್ಯವಾಗಿದೆ.

ಈ ವ್ಯಂಗ್ಯಚಿತ್ರಗಳು(ಚಿತ್ರ-೧೩ ಮತ್ತು ಚಿತ್ರ-೧೩ಎ) ರಾಜಕಾರಣದ ಪ್ರಕ್ರಿಯೆಗಳ ಪದರ ಪದರಗಳನ್ನು ಬಿಡಿಸಿಡುವುದು. ತಿಂಗಳ ಅಂತರದ ರಾಜಕಾರಣದ ಪ್ರಕ್ರಿಯೆಯ ಚಿತ್ರಣವಿದು. ಚಿತ್ರ-೧೩ ಪ್ರಜಾಪ್ರಭುತ್ವವಾದಿ ವಿರೋಧ ಪಕ್ಷ ಎಂದಿರುವ ಚೌಕಟ್ಟಿನಲ್ಲಿ ತಮಿಳುನಾಡಿನ ಮುಖ್ಯಮಂತ್ರಿ ಕರುಣಾನಿಧಿ ಅವರು ಮಾತ್ರ ಒಂದು ಮೂಲೆಯಲ್ಲಿದ್ದು, ಆ ಚೌಕಟ್ಟನ್ನು ಅವರೊಬ್ಬರೆ ಹಿಡಿದುಕೊಂಡಿರುವುದನ್ನು ಕಾಣಬಹುದು. ಉಳಿದ ಸ್ಥಳ ಖಾಲಿಯಿದೆ. ಕಲೈಗ್ನಾರ್ಸ್ ಮಹತ್ವಾಂಕಾಕ್ಷೆ ಎಂಬುದು ಚೌಕಟ್ಟಿನ ಹೊರಗಿದೆ. ರಾಜಕಾರಣ ಹಾಗೂ ವಿರೋಧ ಪಕ್ಷದ ಪಾತ್ರವನ್ನು ಚಿಂತಿಸುವಂತೆ ಪ್ರೇರೇಪಿಸುವುದು. ಚಿತ್ರ-೧೩ಎ ಪ್ರಮುಖವಾದ ರಾಜಕೀಯ ವಿಡಂಬನೆ. ದಾರಿ ಮಧ್ಯ ಹೋಗುತ್ತಿರುವ ಕಾಂಗ್ರೆಸ್ ಫಲಕದ ಅಂಬಾಸಿಡರ್ ಕಾರನ್ನು ಸಿಪಿಎಂ ಅಂಗಿತೊಟ್ಟ ವ್ಯಕ್ತಿ





ಡೆಕ್ಕನ್ ಹೆರಾಲ್ಡ್: ೧೯೭೬ ಡಿಸೆಂಬರ್ ಮತ್ತು ೧೯೭೭ ಜನವರಿಯಲ್ಲಿ ಪ್ರಕಟಿತ ಸಂಪಾದಕೀಯ ವ್ಯಂಗ್ಯ ಚಿತ್ರಗಳು. ವ್ಯಂಗ್ಯಚಿತ್ರಕಾರ: ಜಿ.ವಿ.ರಾಮಮೂರ್ತಿ. ಚಿತ್ರ ಸಂಖ್ಯೆ: ೩.೨೪.

(ಚಿತ್ರ-೧೩) (ಚಿತ್ರ-೧೩ಎ)

ಸೈಕಲ್ಲಿನಲ್ಲಿ ನಗುತ್ತ ಹಿಂಬಾಲಿಸುತ್ತಿರುವರು. ದಾರಿ ಬದಿಯಲ್ಲಿ ನಿಂತಿರುವ ಸಿಪಿಐ ಬಟ್ಟೆತೊಟ್ಟ ವ್ಯಕ್ತಿಯನ್ನು ಹಿಂದೆ ಬಂದು ಕೂರುವಂತೆ ಕರೆಯುತ್ತಿರುವಂತಿದೆ. ಸಿಪಿಐ ವ್ಯಕ್ತಿಯು ಬೇಸರ ಮತ್ತು ಆಶ್ಚರ್ಯದಿಂದ ನೋಡುತ್ತಿರುವಂತಿದೆ. ತುರ್ತುಪರಿಸ್ಥಿತಿ ಜಾರಿಯನ್ನು ಸಿಪಿಐ ಪಕ್ಷವು ಸಮರ್ಥಿಸಿಕೊಂಡು ಬೆಂಬಲಿಸಿತ್ತು. ೧೯೭೭ರ ಜನವರಿ ಹೊತ್ತಿಗೆ ಕಾಂಗ್ರೆಸ್ಸಿನಿಂದ ದೂರಾಗಿ ತುರ್ತುಪರಿಸ್ಥಿತಿಗೆ ಸಹಕಾರ ನೀಡಿದ್ದು ತಪ್ಪೆಂಬ ಧೋರಣೆ ಕಂಡುಬರತೊಡಗಿತ್ತು.

ವ್ಯಂಗ್ಯಚಿತ್ರಗಳು ಸಮಕಾಲೀನ ರಾಜಕಾರಣದ ವಿಮರ್ಶಕವಾಗಿದ್ದು ಹಾಸ್ಯದೊಡನೆ ಸಮಕಾಲೀನ ರಾಜಕಾರಣದ ಸ್ಥಿತಿಗತಿಗಳನ್ನು ತೆರೆದಿಡುವುದು. ಈ ವ್ಯಂಗ್ಯಚಿತ್ರಗಳು ಮತ್ತು ಜಾಹೀರಾತುಗಳಲ್ಲಿ ಹೆಚ್ಚು ಕಂಡುಬರುವುದು ಮಹಾತ್ಮ ಗಾಂಧಿ, ಜೆ.ಪಿ., ಇಂದಿರಾ ಗಾಂಧಿ, ರಾಷ್ಟ್ರಪತಿ ಮೊದಲಾದವರು. ರಾಜಕಾರಣವನ್ನು ವ್ಯಕ್ತಿಯ ನೆಲೆಗಟ್ಟಿನಲ್ಲಿ ಕಂಡಿರುವುದು ಹೆಚ್ಚಾಗಿರುವುದು. ಪಕ್ಷದ ಹಿನ್ನೆಲೆಯಲ್ಲಿ ಮತ್ತು ಸಾಮಾನ್ಯ ಮನುಷ್ಯನ ದೃಷ್ಟಿಯಲ್ಲಿ ಸಮಕಾಲೀನ ರಾಜಕಾರಣ ಕುರಿತ ಚರ್ಚೆ ಕಂಡುಬರುವುದು ಕಡಿಮೆ ಇದೆ. ಹಾಗೇ ವಿರೋಧ ಪಕ್ಷಗಳನ್ನು ಕರುಣಾನಿಧಿ ಅವರ ಮೂಲಕ ಗುರುತಿಸಲಾಗುತ್ತಿದೆ, ಪಕ್ಷದ ಮೂಲಕವಲ್ಲ. ಮೇಲ್ನೋಟಕ್ಕೆ ವ್ಯಕ್ತಿಗತವಾಗಿ ಕಂಡುಬಂದರೂ ಸಾಂಕೇತಿಕವಾಗಿ ಚರ್ಚಿತವಾಗುತ್ತಿರುವ ವಿಚಾರಗಳು ಭಿನ್ನವಾಗಿವೆ. ಇಂದಿರಾ ಗಾಂಧಿ ಅವರು ಆಡಳಿತ ಕಾಂಗ್ರೆಸ್ ಪಕ್ಷ ಮತ್ತು ಸರ್ವಾಧಿಕಾರದ ಸಂಕೇತವಾದರೆ, ಗಾಂಧಿ ಮತ್ತು ಜೆ.ಪಿ. ಅವರು ಸ್ವಾತಂತ್ರ್ಯ ಹಾಗೂ ಪ್ರಜಾಪ್ರಭುತ್ವದ ಸಂಕೇತವಾಗಿರುವರು. ರಾಷ್ಟ್ರಪತಿ ತುರ್ತುಪರಿಸ್ಥಿತಿಯ ಸಂಕೇತವಾಗಿದ್ದರೆ, ಕರುಣಾನಿಧಿ ಅವರು ಪ್ರಾದೇಶಿಕ ರಾಜಕಾರಣ ಮತ್ತು ಪಕ್ಷದ ಪ್ರಬಲ ಪ್ರತಿಭಟನೆಯನ್ನು ಬಿಂಬಿಸುವರು. ವ್ಯಂಗ್ಯಚಿತ್ರಗಳ ಕುರಿತು ಇನ್ನೂ ಹೆಚ್ಚಿನ ಅಧ್ಯಯನ ಸಮಕಾಲೀನ ರಾಜಕಾರಣದ ಸ್ವರೂಪ, ಪ್ರಕ್ರಿಯೆಗಳನ್ನು ಅರಿಯಲು ಸಹಾಯಕವಾಗುವುದು. ಪ್ರತಿಭಟನೆಯ ಸ್ವರೂಪದ ವಿಸ್ತಾರವನ್ನು ಗ್ರಹಿಸಲು ಭೂಗತ ಹೋರಾಟಗಳ ಪ್ರಕ್ರಿಯೆಯನ್ನು ಸೈದ್ಧಾಂತಿಕ ನೆಲೆಯಲ್ಲಿ ಚರ್ಚಿಸುವುದು ಅಗತ್ಯ.

## ಭೂಗತ ಹೋರಾಟಗಳು: ಸ್ವರೂಪ ಮತ್ತು ಪ್ರತಿಕ್ರಿಯೆಗಳು

ಭೂಗತ ಹೋರಾಟಗಳನ್ನು ಕಾನೂನು ಬಾಹಿರ ಕೃತ್ಯವೆಂದು ಅರ್ಥೈಸುವುದು ಸಾಮಾನ್ಯವಾಗಿದೆ. ಭೂಗತ ಹೋರಾಟಗಳು ಸರ್ಕಾರದ ಅಧಿಕಾರಶಾಹಿಯ ವಿರುದ್ಧ ನಡೆಯುವ ರಾಜಕೀಯ[೩೭] ಪ್ರತಿಭಟನೆ. ೧೯೭೦ರ ದಶಕದಲ್ಲಿ ಪತ್ರಿಕಾ ಸ್ವಾತಂತ್ರ್ಯ ಹಕ್ಕುಗಳ ಕುರಿತಂತೆ ಅಭಿವೃದ್ಧಿಯಾಗುತ್ತಿರುವ ಅನೇಕ ರಾಷ್ಟ್ರಗಳಲ್ಲಿ ಭೂಗತ ಹೋರಾಟ ಮತ್ತು ಪತ್ರಿಕೆಗಳ ಸಂಚಲನ ಕಂಡುಬಂದಿತು. ಕಮ್ಯುನಿಸ್ಟ್ ದೇಶಗಳಲ್ಲಿ 'ಸಮ್ಜದಾತ್ ಚಳವಳಿ'[೩೮] ಮತ್ತು ಭೂಗತ ಹೋರಾಟಗಳ ಅಸ್ತಿತ್ವ ಕಾಣಬಹುದು. ಭೂಗತ ಹೋರಾಟದ ಸ್ವರೂಪ ಸಾಮಾನ್ಯವಾಗಿ ಹಿಂಸಾತ್ಮಕ ಮತ್ತು ರಕ್ತಸಿಕ್ತವಾಗಿರುವುದು. ಆದರೆ ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಿ ಬಹುತೇಕ ಅಹಿಂಸಾತ್ಮಕವಾಗಿತ್ತು. ಇದರ ಕಾರ್ಯಚಟುವಟಿಕೆಯ ಸ್ವರೂಪದ ಆಧಾರದ ಮೇಲೆ ಎರಡು ಲಕ್ಷಣಗಳನ್ನು ಗುರುತಿಸಬಹುದು. ಸರ್ಕಾರದ ಆಡಳಿತಕ್ಕೆ ಅಡೆತಡೆಗಳ ಮೂಲಕ ಪ್ರತಿಭಟನೆಯ ಅಸ್ತಿತ್ವದ ಪ್ರದರ್ಶನ ಮತ್ತು ಬೇಡಿಕೆಯನ್ನು ಪೂರೈಸಲು ಒತ್ತಡ ಸೃಷ್ಟಿಸುವುದು. ಸರ್ಕಾರದ ವಿರುದ್ಧ ಭೂಗತ ಹೋರಾಟಗಾರರು ಆರಂಭಿಸಿರುವ ಹೋರಾಟದ ಉದ್ದೇಶ, ಸ್ವರೂಪ ಸಾರ್ವಜನಿಕರಿಗೆ ತಿಳಿಯಪಡಿಸಲು ಸಾಹಿತ್ಯ, ಪತ್ರಿಕೆಗಳ ಪ್ರಕಟಣೆ ಮತ್ತಿತರ ಕಾರ್ಯಚಟುವಟಿಕೆಗಳು ಬಹಳ ಮುಖ್ಯವಾಗಿವೆ.

ಆಂತರಿಕ ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಭೂಗತ ಪತ್ರಿಕೆಗಳು ಮತ್ತು ಸಾಹಿತ್ಯದ ಮುದ್ರಣ, ಅದರ ವಿತರಣೆ ಹೆಚ್ಚು ಮಹತ್ವ ಪಡೆದಿತ್ತು. ಭೂಗತ ಹೋರಾಟಗಳ ಸ್ವರೂಪ, ಅದರ ಪ್ರಕ್ರಿಯೆಗಳನ್ನು ಎರಡು ಭಾಗಗಳಾಗಿ ವಿಂಗಡಿಸಿ ಅಧ್ಯಯನ ಮಾಡಲಾಗಿದೆ. ಹೋರಾಟಗಾರರ ಸೈದ್ಧಾಂತಿಕ ಧೋರಣೆಯ ಚೌಕಟ್ಟಿನಲ್ಲಿ ಪ್ರತಿಭಟನೆಯ ಸ್ವರೂಪವನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ. ತುರ್ತುಪರಿಸ್ಥಿತಿಯ ವಿರುದ್ಧ ಪ್ರತಿಭಟಿಸುತ್ತಿದ್ದ ಭೂಗತ ಹೋರಾಟಗಾರರನ್ನು, ಸರ್ಕಾರ ಮತ್ತು ಸಮಾಜ ನೋಡುತ್ತಿದ್ದ ಬಗೆಗಳನ್ನು ಪರಾಮರ್ಶಿಸಲು ಪ್ರಯತ್ನಿಸಲಾಗಿದೆ.

### ೩.೨.೧. ವಿರೋಧ ಪಕ್ಷಗಳು: ಎಡಪಂಥೀಯರು, ಸಮಾಜವಾದಿಗಳು, ಬಲಪಂಥೀಯರು ಮತ್ತಿತರರು

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ವಿರೋಧ ಪಕ್ಷಗಳ ಪಾತ್ರ ನಿರ್ಣಾಯಕವಾದುದು. ಸಾರ್ವತ್ರಿಕ ಚುನಾವಣೆಗಳಲ್ಲಿ ಬಹುಮತ ಪಡೆದ ಪಕ್ಷ ಆಡಳಿತ ಪಕ್ಷವಾಗಿ ರೂಪುಗೊಂಡರೆ, ಉಳಿದವು ವಿರೋಧ ಪಕ್ಷಗಳ ಸ್ಥಾನ ಅಲಂಕರಿಸುವುವು. ಪ್ರತಿಯೊಂದು ಪಕ್ಷವು ಬೇರೆ ಬೇರೆ ವಿಚಾರಧಾರೆಗಳನ್ನು, ಮೌಲ್ಯಗಳನ್ನು ಹೊಂದಿರುವುದು. ಇವು ಪಕ್ಷಗಳ ಕಾರ್ಯಚಟುವಟಿಕೆಗಳನ್ನು ಪ್ರಭಾವಿಸುತ್ತಿದ್ದು, ನಿಯಂತ್ರಿಸುವುದನ್ನು ಕಾಣಬಹುದು. ಭಾರತವು ೧೯೪೭ರಲ್ಲಿ ಸ್ವತಂತ್ರಗೊಂಡ ನಂತರ ಸಂಸದೀಯ ಪ್ರಜಾಪ್ರಭುತ್ವ ಮಾದರಿಯ ಆಡಳಿತ ವ್ಯವಸ್ಥೆಯನ್ನು ಅಳವಡಿಸಿಕೊಂಡಿತ್ತು. ಐದು ಸಾರ್ವತ್ರಿಕ ಚುನಾವಣೆಗಳಾದರೂ ಭಾರತದಲ್ಲಿ ಯಾವುದೇ ಕಾಂಗ್ರೇಸೇತರ ಪಕ್ಷ ಬಹುಮತ ಪಡೆದು ಆಡಳಿತ ಪಕ್ಷವಾಗಲು ಸಾಧ್ಯವಾಗಿರಲಿಲ್ಲ. ಇದರಿಂದಾಗಿ ಭಾರತದಲ್ಲಿ ಪ್ರಜಾಪ್ರಭುತ್ವ ಬೇರೂರಲು ಸಾಧ್ಯವಿಲ್ಲ ಎನ್ನುವ ವರ್ಗವೊಂದನ್ನು ಸಮಕಾಲೀನವಾಗಿ ಕಾಣಬಹುದು. ಪಕ್ಷ ರಾಜಕಾರಣವೆ ಎಲ್ಲ ಸಮಸ್ಯೆಗಳಿಗೆ ಮೂಲವೆನ್ನುವ ದೃಷ್ಟಿಯಲ್ಲಿ ಜಯಪ್ರಕಾಶ್ ನಾರಾಯಣರ ಪಕ್ಷಗಳಿಲ್ಲದ ಪ್ರಜಾಪ್ರಭುತ್ವ ಪರಿಕಲ್ಪನೆಯನ್ನು ನೋಡಬಹುದು. ತುರ್ತುಪರಿಸ್ಥಿತಿಗೆ ಬಂದ ಪ್ರತಿಭಟನೆಯ ಸ್ವರೂಪ ಅರಿಯಲು ಭೂಗತ ಹೋರಾಟಗಳು ಮತ್ತು ಹೋರಾಟಗಾರರ ಕಾರ್ಯ ವಿಧಾನವನ್ನು ಗಮನಿಸುವುದು ಅಗತ್ಯ. ಲೋಕ ಸಂಘರ್ಷ ಸಮಿತಿ, ಜನತಾ ಸಂಘರ್ಷ ಸಮಿತಿ, ಯುವಕ್ ಕ್ರಾಂತಿ ದಳ್, ನೇತಾಜಿ ಯುವಜನ ಪರಿಷತ್, ಜೆ.ಪಿ. ಮುಕ್ತಿ ಮೋರ್ಚಾ, ಭಾರತೀಯ್ ಕ್ರಾಂತಿ ದಳ, ಜಮಾತ್ – ಇ– ಇಸ್ಲಾಂ, ಜಮೀತ ಉಲೇಮಾ[೨೨] ಮೊದಲಾದ ಸಂಘಟನೆಗಳು ಕಾರ್ಯ ಪ್ರವೃತ್ತವಾಗಿದ್ದವು. ಭೂಗತ ಪತ್ರಿಕೆಗಳು ಹಾಗೂ ಸಾಹಿತ್ಯದ ವಿತರಣೆ ಹೋರಾಟದ ಪ್ರಮುಖ ಕೇಂದ್ರವಾಗಿತ್ತು. ಭೂಗತ ಹೋರಾಟಗಳನ್ನು ಎರಡು ಭಾಗಗಳಿಗೆ ವಿಂಗಡಿಸಿಕೊಳ್ಳಲಾಗಿದೆ. ಇವುಗಳಲ್ಲಿ ಕಾರ್ಯಕರ್ತರ ಕಾರ್ಯ ವಿಧಾನ, ತಂತ್ರ ಮೊದಲಾದವುಗಳಲ್ಲಿರುವ ಸಾಮ್ಯತೆ ಹಾಗೂ ವ್ಯತ್ಯಾಸಗಳನ್ನು ಚರ್ಚಿಸಲಾಗಿದೆ. ಭೂಗತ ಹೋರಾಟದಲ್ಲಿ ತೊಡಗಿಕೊಂಡಿದ್ದವರ ಸೈದ್ಧಾಂತಿಕ ಹಿನ್ನೆಲೆ, ಹೋರಾಟದ ಸ್ವರೂಪ, ಅದರ ಪ್ರಕ್ರಿಯೆಗಳನ್ನು ಪರಾಮರ್ಶಿಸಲು ಪ್ರಯತ್ನಿಸಲಾಗಿದೆ.

#### ೩.೨.೧.೧. ನೇರ ಪ್ರತಿಭಟನೆಯ ಸ್ವರೂಪಗಳು ಮತ್ತು ಪ್ರಕ್ರಿಯೆಗಳು

ತುರ್ತುಪರಿಸ್ಥಿತಿಯ ಕಾಲದಲ್ಲಿ ಬಂದ ಪ್ರತಿಭಟನೆಯ ಸ್ವರೂಪಗಳಲ್ಲಿ ಭೂಗತ ಪ್ರತಿಭಟನೆಗಳು ಒಂದು ಪ್ರಮುಖ ಮಾರ್ಗವಾಗಿದೆ. ನೇರ ಪ್ರತಿಭಟನೆಗಳನ್ನು ಎರಡು ಭಾಗಗಳಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ. ಪ್ರತಿಭಟನಾಕಾರರ ಸೈದ್ಧಾಂತಿಕ ನೆಲೆಯ ಮೂಲಕ ಕಾರ್ಯ ವಿಧಾನವನ್ನು ಹಾಗೂ ಭೂಗತ ಸಾಹಿತ್ಯದ ಸ್ವರೂಪವನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ.

##### ೩.೨.೧.೧.೧. ಭೂಗತ ಹೋರಾಟಗಾರರು ಮತ್ತು ಸೈದ್ಧಾಂತಿಕ ನೆಲೆಗಳು

ಭೂಗತ ಹೋರಾಟಗಾರರ ಸೈದ್ಧಾಂತಿಕ ನೆಲೆ ಹೋರಾಟದ ಸ್ವರೂಪದ ಮೇಲೆ ಬೀರಿರುವ ಪ್ರಭಾವ ಅಪಾರ. ತುರ್ತುಪರಿಸ್ಥಿತಿ ವಿರೋಧಿ ಹೋರಾಟದಲ್ಲಿ ಸೈದ್ಧಾಂತಿಕತೆಗಳನ್ನು ಮೀರಿ ಹೋರಾಟ ಕೈಗೊಳ್ಳಬೇಕು. ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯದ ರಕ್ಷಣೆಗಾಗಿ ಸಮಾಜದ ಎಲ್ಲ ವಲಯ, ವರ್ಗದವರು ಹೋರಾಟದಲ್ಲಿ ತೊಡಗಿಕೊಳ್ಳಬೇಕು ಎಂಬ ಕರೆ ಆಗಾಗ ಕೇಳಿಬರುತ್ತಲೇ ಇತ್ತು. ಸಮಾಜವಾದಿಗಳು, ಮಧ್ಯಪಂಥೀಯರು ಮತ್ತು ಬಲಪಂಥೀಯರ ಗುಂಪು ಹಲವು ಸ್ತರಗಳಲ್ಲಿ ಒಟ್ಟಾಗಿ ಕಾರ್ಯನಿರ್ವಹಿಸಿರುವುದನ್ನು ಕಾಣಬಹುದು. ಪ್ರದೇಶದಿಂದ ಪ್ರದೇಶಕ್ಕೆ ಭೂಗತ ಹೋರಾಟ ಭಿನ್ನವಾಗಿರುತ್ತಿದ್ದು, ಆ ಪ್ರದೇಶದಲ್ಲಿ ಪ್ರಬಲವಾಗಿರುವ ಸೈದ್ಧಾಂತಿಕ ರಾಜಕೀಯ ಪಕ್ಷದ ಕಾರ್ಯಕರ್ತರೊಡನೆ ಉಳಿದ ವಲಯಗಳು ಸೇರಿಕೊಳ್ಳುತಿದ್ದವು. ಸಮಾಜವಾದಿಗಳು ಮತ್ತು ಆರ್.ಎಸ್.ಎಸ್ ಗುಂಪುಗಳು ಹಲವು ಕಡೆ ಒಟ್ಟಾಗಿ ಕೆಲಸ ಮಾಡಿರುವಂತೆ ಮೇಲ್ನೋಟಕ್ಕೆ ಕಂಡುಬರುವುದು. ಈ ಗುಂಪುಗಳೊಡನೆ ಸಂಪರ್ಕವಿತ್ತಾದರೂ ಮಾಹಿತಿ ಸಂಗ್ರಹಣೆಯಷ್ಟೇ ಮುಖ್ಯ ಉದ್ದೇಶವಾಗಿತ್ತು. ಈ ದಿಸೆಯಲ್ಲೇ ಭೂಗತ ಹೋರಾಟಗಾರರ ನಡುವೆ ಹೊಂದಾಣಿಕೆ ಸಾಮರಸ್ಯವಿರಲಿಲ್ಲ ಎಂಬ ಟೀಕೆಗಳು ಕೇಳಿಬರುವುದು.

> ನಾನು ನನ್ನ ಅನೇಕ ಸಂಪರ್ಕಗಳ ಮೂಲಕ ನಿರಂಕುಶಾಧಿಕಾರದ ವಿರೋಧಿ ಹೋರಾಟ ಕುರಿತು ವರದಿ ಮಾಡಿದ್ದೇನೆ, ದೇಶದ ಎಲ್ಲಾ ಮೂಲೆಗಳಿಂದಲೂ ಇದಕ್ಕೆ ಸೇರುತ್ತಿದ್ದಾರೆ. ನನಗೆ ತಿಳಿದಿರುವಂತೆ ಭೂಗತ ಹೋರಾಟದಲ್ಲಿ ತೊಡಗಿರುವವರ ನಡುವೆ ಸಹಕಾರ ಸಮಧಾನ ನೀಡುವಷ್ಟು ಆಗಲು ಸಾಧ್ಯವಿಲ್ಲ. ಅದಕ್ಕೆ ಮತ್ತೊಂದು ಕಾರಣ ಇನ್ನೂ ಸಹ ಬಹಳಷ್ಟು ಭೂಗತ ಹೋರಾಟಗಾರರು ಪಕ್ಷದ ಕಾರ್ಯಕರ್ತರಂತೆ ಕೆಲಸ ನಿರ್ವಹಿಸುತ್ತಿದ್ದಾರೆ. ಈ ಕಾರ್ಯಚಟುವಟಿಕೆಗಳು ಚಳವಳಿಯ ನಾಶಕ್ಕೆ ಕಾರಣವಾಗುತ್ತದೆ ಎಂದು ನಾನು ಎಲ್ಲರನ್ನೂ ಎಚ್ಚರಿಸುತ್ತಿದ್ದೇನೆ. ವ್ಯಕ್ತಿಗಳಿಗಿರುವ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳನ್ನು ಮನೆಯ ನಾಲ್ಕು ಗೋಡೆಗಳ ಒಳಗೆ ಮಾತ್ರ ಇರಗೊಡಿ(ಫರ್ನಾಂಡೀಸ್ ೧೯೭೭: ೧೩).

ಜಾರ್ಜ್ ಫರ್ನಾಂಡೀಸ್[೪೮] ಅವರು ತುರ್ತುಪರಿಸ್ಥಿತಿಯಲ್ಲಿ ಭೂಗತ ಕಾರ್ಯಕರ್ತರಿಗೆ ಬರೆದ ಪತ್ರದ ಕೆಲವು ವಿಚಾರಗಳಿವು. ಇದರಲ್ಲಿ ಪಕ್ಷದ ಕಾರ್ಯಕರ್ತರಂತೆ ಎಂದಿರುವುದು ಭೂಗತ ಹೋರಾಟಗಾರರ ಸೈದ್ಧಾಂತಿಕ ನೆಲೆ, ಅವರನ್ನು ಒಂದುಗೂಡದಂತೆ ತಡೆದಿರುವುದನ್ನು ಸೂಚಿಸುವುದು. ಇಲ್ಲಿ ಕರ್ನಾಟಕದಲ್ಲಿ ನಡೆದ ಭೂಗತ ಹೋರಾಟಗಳು ಮತ್ತು ಸೈದ್ಧಾಂತಿಕ ನೆಲೆಗಳನ್ನು ಅವಲೋಕಿಸುವ ಪ್ರಯತ್ನ ಮಾಡಲಾಗಿದೆ.

**೩.೨.೧.೧.೧.೧. ಎಡಪಂಥೀಯರು**

'ಕರ್ನಾಟಕದಲ್ಲಿ ತುರ್ತುಪರಿಸ್ಥಿತಿ ವಿರೋಧಿ ಚಳವಳಿ ಸರ್ವಾಧಿಕಾರದ ವಿರುದ್ಧ ನಡೆದ ಚಳವಳಿಯಾಗಿದ್ದು, ಬಲಪಂಥೀಯರ ಪ್ರಭಾವ ಹೆಚ್ಚಾಗಿತ್ತು. ಎಡ ಚಳವಳಿಗಳ ಲಕ್ಷಣಗಳನ್ನು ಹೊಂದಿರಲಿಲ್ಲ. ಪಕ್ಷ ಸಂಘಟನೆಯು ಬಲಯುತವಾಗಿರಲಿಲ್ಲ. ೧೯೭೭ರ ನಂತರ ಎಡಪಂಥೀಯ ಸಂಘಟನೆಯ ಚಳವಳಿಗಳು, ಕಾರ್ಯಕ್ರಮಗಳು ಪ್ರಬಲವಾದವು. ಕೇರಳದಲ್ಲಿ ಕಂಡುಬರುತ್ತಿದ್ದ ಹೋರಾಟದ ಪ್ರಭಾವ ಹೆಚ್ಚಾಗಿತ್ತು' ಎಂಬ ಅಭಿಪ್ರಾಯಗಳು ಎಡಪಂಥೀಯ ಭೂಗತ ಹೋರಾಟಗಾರರ ಹೋರಾಟದ ಸ್ವರೂಪವನ್ನು ಅನಾವರಣಗೊಳಿಸುವುದು. ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಯ ನೆಲೆಯಲ್ಲಿ ಎಸ್. ನಾಗರಾಜನ್, ಸೂರ್ಯನಾರಾಯಣ್ ರಾವ್, ಆರ್. ಎಂ. ಚಿನ್ನಪ್ಪ, ಎಸ್. ಗುಣಶೀಲನ್, ಎಸ್. ಜಗನ್ನಾಥ್, ಅಮರೇಗೌಡ, ವಿ. ಎಚ್. ಮಾಸ್ತರ್, ಯಶವಂತರಾವ್ ಘೋರ್ಪಡೆ, ಎಲ್. ಸೀತಾಪತಿ, ವಿ. ಜೆ. ಕೆ. ನಾಯರ್ ಮೊದಲಾದವರು ಸೆರೆವಾಸ ಅನುಭವಿಸಿದರು. ತುರ್ತುಪರಿಸ್ಥಿತಿ ವಿರುದ್ಧ ಭೂಗತ ಹೋರಾಟದಲ್ಲಿ ಕಂಡುಬರುವ ಪ್ರಮುಖ ಲಕ್ಷಣವೆಂದರೆ ಭೂಗತ ಸಾಹಿತ್ಯದ ಮುದ್ರಣ ಹಾಗೂ ಪ್ರಸಾರವಾಗಿದೆ. ಪ್ರತ್ಯೇಕವಾಗಿ ಕೆಲವು ಕಾರ್ಯಕರ್ತರ ಮನೆಗಳಲ್ಲಿ ಕರಪತ್ರಗಳ ಮುದ್ರಣ, ಭೂಗತ ಸಾಹಿತ್ಯದ ರಚನೆ, ಅನುವಾದ ಇನ್ನಿತರ ಕಾರ್ಯಚಟುವಟಿಕೆಗಳು ನಡೆಯುತ್ತಿದ್ದವು. ಈ ಹೋರಾಟದ ಪ್ರಕ್ರಿಯೆಯನ್ನು ಕೆಲವು ಪ್ರತಿಭಟನಾಕಾರರು ಅರೆ ಭೂಗತ ಚಟುವಟಿಕೆ ಎಂದು ಕರೆಯುವರು. ಸಮಕಾಲೀನವಾಗಿ ಸಂಘಟನೆಯ ಕಾರ್ಯಚಟುವಟಿಕೆಯಿಂದ ಅನೇಕರು ಆಕರ್ಷಿತರಾಗಿದ್ದರು. ಅನೇಕರು ಭೂಗತರಾಗಿ ಮಾಹಿತಿ ರವಾನೆ ಕಾರ್ಯಚಟುವಟಿಕೆ ಮೊದಲಾದವುಗಳಲ್ಲಿ ತೊಡಗಿಕೊಂಡಿದ್ದರು. ಕರ್ನಾಟಕದಲ್ಲಿ ತುರ್ತುಪರಿಸ್ಥಿತಿ ಕಾಲದಲ್ಲಿ ಕೆಲವು ರೀತಿಯ ದಬ್ಬಾಳಿಕೆಗಳಿದ್ದು, ತೀರಾ ಕ್ರೂರವಾಗಿರಲಿಲ್ಲ. ಹಾಗಾಗಿ ಭೂಗತರ ಸಂಖ್ಯೆ ಅತ್ಯಧಿಕವಾಗಿರಲಿಲ್ಲ. ಹೊರ ರಾಜ್ಯದ ಭೂಗತ ಹೋರಾಟಗಾರರು ರಕ್ಷಣೆಗಾಗಿ ಕರ್ನಾಟಕಕ್ಕೆ ಬಂದು ನೆಲೆಸುತ್ತಿದ್ದರು. ಕೇರಳದ ಭೂಗತ ಹೋರಾಟಗಾರರ ಪ್ರಭಾವ ಹೆಚ್ಚಾಗಿತ್ತು. 'ಭೂಗತ ಹೋರಾಟಗಾರರೊಡನೆ ಮಾತನಾಡುವುದು, ಭೇಟಿಯಾಗುವುದು ರೋಮಾಂಚನಕಾರಿ ಅನುಭವವಾಗಿದ್ದು, ಆಕರ್ಷಣೀಯ ಆಗಿತ್ತು. ಇಂತಹ ಕಾರ್ಯಚಟುವಟಿಕೆಗಳಲ್ಲಿ ತೊಡಗುವುದು ಉತ್ಸಾಹ ಹಾಗೂ ಕ್ರಾಂತಿಕಾರಕವಾಗಿ ಕಾಣುತಿತ್ತು' ಎಂದು ಯುವ ಭೂಗತ ಹೋರಾಟಗಾರರು ನೆನಪಿಸಿಕೊಳ್ಳುವರು. ಈ ಲಕ್ಷಣವನ್ನು ಬಹುತೇಕ ಎಲ್ಲ ಸೈದ್ಧಾಂತಿಕ ನೆಲೆಯ ಪ್ರತಿಭಟನಾಕಾರರಲ್ಲಿಯೂ ಕಾಣಬಹುದು.

ತುರ್ತುಪರಿಸ್ಥಿತಿ ಪೂರ್ವದಲ್ಲಿ ಇ. ಎಂ. ಎಸ್. ನಂಬೂದರಿ ಪಾಡ್(೧೯೭೫ರ ಜೂನ್ ಮೊದಲ ವಾರ) ಅವರ ರಾಷ್ಟ್ರ ರಾಜಕಾರಣದ ಸ್ಥಿತಿಗತಿಯ ಹಾಗೂ ಪ್ರಜಾಪ್ರಭುತ್ವ ವ್ಯವಸ್ಥೆ ಕುರಿತ ಭಾಷಣ ಮಾತೃಭೂಮಿ, ದೇಶಾಭಿಮಾನಿ ಮೊದಲಾದ ಮಳೆಯಾಳಂ ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ಇದನ್ನು ಇಂಗ್ಲಿಶ್‌ಗೆ ಅನುವಾದ ಮಾಡಿ ಹಂಚುವ ಕಾರ್ಯವನ್ನು ಕೈಗೊಳ್ಳಲಾಗಿತ್ತು. ಎ. ಕೆ. ಗೋಪಾಲನ್ ಮೊದಲಾದವರು

ಕರ್ನಾಟಕದ ಎಡಪಂಥೀಯ ಭೂಗತ ಹೋರಾಟಗಾರರೊಡನೆ ಸಂಪರ್ಕ ಹೊಂದಿದ್ದರು. ಕರಪತ್ರಗಳನ್ನು ಮುದ್ರಿಸಿ ಹಂಚಲು ಮಾಹಿತಿ, ಸಲಹೆ ಸೂಚನೆಗಳನ್ನು ರವಾನಿಸುತ್ತಿದ್ದರು. ಇದು ರಾಜಕೀಯ ಜಾಗೃತಿಯ ಹೋರಾಟವಾಗಿ ಮಾತ್ರ ಮೂಡಿಬರದೆ ಸಾಂಸ್ಕೃತಿಕ ಜಾಗೃತಿಯಾಗಿಯೂ ಹೋರಾಟ ಬೆಳೆದು ಬರಬೇಕೆಂಬ ಚಿಂತನೆಗಳು ಹಾಗೂ ಒಲವು ಹೆಚ್ಚಾಗಿದ್ದಿದ್ದನ್ನು ನೋಡಬಹುದು. ರಾಜ್ಯದ ಕೆಲವು ಪ್ರದೇಶಗಳಲ್ಲಿ ಮಾತ್ರ ಪಕ್ಷದ ಸಂಘಟನೆ ಪ್ರಬಲವಾಗಿದ್ದು, ಉತ್ತಮ ಸಂಪರ್ಕಜಾಲದ ಕೊರತೆಯಿದ್ದಿದ್ದರಿಂದ ಭೂಗತ ಪ್ರತಿಭಟನೆಗಳು ಸಣ್ಣ ಪ್ರಮಾಣದಲ್ಲಿ ಕಂಡುಬರುತ್ತಿದ್ದವು.

### ೩.೨.೧.೧.೧.೨. ಸಮಾಜವಾದಿಗಳು

ತುರ್ತುಪರಿಸ್ಥಿತಿ ಕಾಲದ ಭೂಗತ ಹೋರಾಟಗಳು ಬಹುತೇಕ ಅಹಿಂಸಾತ್ಮಕವಾಗಿದ್ದವು. ಹಿಂಸಾತ್ಮಕ ಹೋರಾಟಗಳಲ್ಲಿ ತೊಡಗಿಕೊಂಡಿದ್ದವರು ಸಮಾಜವಾದಿಗಳು. ಹಿಂಸಾತ್ಮಕ ಹೋರಾಟವೆಂದರೆ ಸಾರ್ವಜನಿಕ ಆಸ್ತಿಪಾಸ್ತಿಗಳನ್ನು ಡೈನಾಮೈಟ್ ಮೂಲಕ ಸ್ಫೋಟಗೊಳಿಸಿ, ಸರ್ಕಾರಕ್ಕೆ ವಿರೋಧದ ಅಸ್ತಿತ್ವವನ್ನು ಪ್ರದರ್ಶಿಸುವುದು. ಪೋಸ್ಟ್ ಬಾಕ್ಸ್, ರೈಲ್ವೆ ಹಳಿ, ಸೇತುವೆ ಮೊದಲಾದವುಗಳನ್ನು ಯಾವುದೇ ಜೀವಹಾನಿ ಯಾಗದಂತೆ ನಾಶಗೊಳಿಸುವುದಾಗಿತ್ತು. ಸಮಾಜವಾದಿಗಳಲ್ಲಿ ಎರಡು ಪಂಗಡಗಳಿದ್ದು, ಬಹುತೇಕ ಸಮಾಜವಾದಿಗಳು ಈ ಮಾರ್ಗವನ್ನು ವಿರೋಧಿಸುತ್ತಿದ್ದರು. ಜಾರ್ಜ್ ಫರ್ನಾಂಡೀಸ್ ಮತ್ತು ಅವರ ಸಂಗಡಿಗರು ಈ ಕಾರ್ಯ ಚಟುವಟಿಕೆಗಳಲ್ಲಿ ಹೆಚ್ಚಾಗಿ ತೊಡಗಿಕೊಂಡಿದ್ದರು. ಈ ನಿಟ್ಟಿನಲ್ಲಿ ಬರೋಡ ಡೈನಾಮೈಟ್ ಅತ್ಯಂತ ಪ್ರಮುಖ ತಿರುವನ್ನು ಪಡೆದ ಪ್ರಸಿದ್ಧ ಘಟನೆ. ಕರ್ನಾಟಕದಲ್ಲಿ ಬೆಂಗಳೂರು, ಗುಲ್ಬರ್ಗಾ, ಬೀದರ್ ಮೊದಲಾದ ಕಡೆಗಳಲ್ಲಿ ನಾಲ್ಕೈದು ಕೈ ಬಾಂಬುಗಳು ಸಿಡಿದವು. ಆದರೆ ಅಪಾರ ಹಾನಿಯಾಗಿಲ್ಲ ಎಂದು ಹೇಳಲಾಗುವುದು. ಈ ಮಾರ್ಗದ ಬಳಕೆ ಕುರಿತಂತೆ ಅನೇಕ ಚರ್ಚೆಗಳು ನಡೆಯುತ್ತಿದ್ದವು. ಇಂತಹ ಕೃತ್ಯಗಳಲ್ಲಿ ತೊಡಗಿಕೊಂಡಿದ್ದ ಜಾರ್ಜ್ ಫರ್ನಾಂಡೀಸ್ ಅವರು

> ಈಗಲೂ ಸಹ ನನ್ನ ಆಳವಾದ ನಂಬಿಕೆ ನಿರಂಕುಶಾಧಿಕಾರದ ವಿರುದ್ಧ ಹೋರಾಡಲು ಸತ್ಯಾಗ್ರಹ ಅತ್ಯುತ್ತಮ ಅಸ್ತ್ರ ನನ್ನ ವೈಯುಕ್ತಿಕ ನಂಬಿಕೆಗಳು ಏನೇ ಆದರೂ ಮತ್ತು ಸೈದ್ಧಾಂತಿಕ ನಂಬಿಕೆಗಳು ಸಹ, ಯಾರೇ ಆದರೂ ಸತ್ಯಾಗ್ರಹ ಮಾಡಲು ತೊಂದರೆಯಾಗುವುದಿಲ್ಲ(ಫರ್ನಾಂಡೀಸ್ ೧೯೭೭: ೧೪)

ಎಂದಿದ್ದಾರೆ. ಇವು ತುರ್ತುಪರಿಸ್ಥಿತಿ ಆರಂಭದಲ್ಲಿ ಬರೆದ ಪತ್ರವೊಂದರಲ್ಲಿನ ಸಾಲುಗಳಾಗಿವೆ. ಜನ ಸಾಮಾನ್ಯರಲ್ಲಿ ಭಯ ಹೋಗುವಂತೆ ಮಾಡಲು ಸತ್ಯಾಗ್ರಹದಂತಹ ಹೋರಾಟಗಳು ಅಗತ್ಯವಾದರೂ ಸರ್ಕಾರ ಅಷ್ಟಕ್ಕೇ ಹೆದರುವುದಿಲ್ಲ. ಸರ್ಕಾರಕ್ಕೆ ಭಯವಾಗುವ, ಆದರೆ ಪ್ರಾಣಹಾನಿ ಆಗದ ರೀತಿಯಲ್ಲಿ ಸಣ್ಣ ಸಣ್ಣ ವಿಧ್ವಂಸಕ ಕೃತ್ಯಗಳನ್ನು ನಡೆಸುವುದು ಅಗತ್ಯವೆಂದು ಮುಂದೆ ಅಭಿಪ್ರಾಯಪಡುವರು. ವಿಧ್ವಂಸಕ ಕೃತ್ಯಗಳನ್ನು ಒಪ್ಪಿಕೊಂಡವರಲ್ಲಿಯೂ, ಯಾವ ಹಂತದವರೆಗೆ ಈ ಕೃತ್ಯವನ್ನು ಮಾಡಬೇಕೆನ್ನುವ ವಿಚಾರಗಳಲ್ಲಿ ಭಿನ್ನಾಭಿಪ್ರಾಯಗಳಿದ್ದು, ಚರ್ಚೆಯ ಕೇಂದ್ರವಾಗಿರುವುದು. ಸ್ನೇಹಲತಾ ರೆಡ್ಡಿಯವರ ಮನೆಯಲ್ಲಿ ಇಂತಹ ವಿಚಾರಗಳು ಚರ್ಚಿತವಾಗುತ್ತಿದ್ದು, ಹೆಚ್ಚಿನ ಪ್ರಮಾಣದ ವಿಧ್ವಂಸಕ ಹಾಗೂ ಹಿಂಸಾತ್ಮಕ ಕೃತ್ಯಗಳನ್ನು ನಡೆಸದಂತೆ ಜಾರ್ಜ್ ಫರ್ನಾಂಡೀಸ್ ಅವರ ಮೇಲೆ ಒತ್ತಡ ತರುವ ಪ್ರಯತ್ನಗಳು ನಡೆಯುತ್ತಿದ್ದವೆಂದು ತಿಳಿದುಬರುವುದು. ಗುರಿ ಉತ್ತಮವಾಗಿದ್ದರೂ ಮಾರ್ಗದ ಬಳಕೆಯು ಪ್ರಮುಖ ಪಾತ್ರ ನಿರ್ವಹಿಸುವುದು ಎಂಬ ಅರಿವಿನ ಮೇಲೆ ಬೆಳಕು ಚೆಲ್ಲುವುದು.

ಕರ್ನಾಟಕದಲ್ಲಿ ಎಸ್. ವೆಂಕಟರಾಮ್, ಬಿ. ರಮೇಶ್, ಲಾರೆನ್ಸ್ ಫರ್ನಾಂಡೀಸ್, ಸ್ನೇಹಲತಾ ರೆಡ್ಡಿ, ಕಾಶೀನಾಥರಾವ್ ಬೇಲೂರೆ, ವ್ಹಿ. ಪಿ. ದೇವಳಗಾಂವಕಲ್, ರಾಮ ಆಪ್ಟೆ, ಜೆ. ಹೆಚ್. ಪಟೇಲ್, ಸಾಲೇರ್ ಸಿದ್ದಪ್ಪ, ಬಿ. ಆರ್. ಪಾಟೀಲ್, ಪ್ರಭು ಖಾನಾಪುರ ಮೊದಲಾದವರು ಸೆರೆವಾಸ ಅನುಭವಿಸಿದ ಪ್ರಮುಖರು. ಜಾರ್ಜ್ ಫರ್ನಾಂಡೀಸ್, ಲಾರೆನ್ಸ್ ಫರ್ನಾಂಡೀಸ್, ಎಸ್. ವೆಂಕಟರಾಮು, ವೆಂಕಟಸ್ವಾಮಿ, ಬಾಪುಹೆದ್ದೂರ್ ಶೆಟ್ಟಿ, ಮೀರಾ ಚಕ್ರವರ್ತಿ, ವೈಜನಾಥ್ ಪಾಟೀಲ್, ಕಾಶೀನಾಥ್ ಬೇಲೂರೆ, ಬಾಟಾ ಸುಬ್ರಮಣ್ಯಂ, ಸ್ನೇಹಲತಾ ರೆಡ್ಡಿ, ಪಟ್ಟಾಭಿರಾಮ ರೆಡ್ಡಿ, ನಂದನಾ ರೆಡ್ಡಿ, ಜೆ. ಹೆಚ್. ಪಟೇಲ್, ಬಿ. ಆರ್. ಪಾಟೀಲ್, ಚಂದ್ರಶೇಖರ್ ಪಾಟೀಲ್, ಎಸ್. ಕೆ. ಕಾಂತ, ಪಿ. ಮಲ್ಲೇಶ್, ಕುಸುಮಾಕರ್ ದೇಸಾಯಿ, ಈಶ್ವರಪ್ಪ

ಚಾಕೋಡಕರ್, ದಯಾನಂದ ರಾವ್ ಬಿರಾದರ್ ಮೊದಲಾದವರು ಭೂಗತ ಕಾರ್ಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದ ವರಾಗಿದ್ದಾರೆ. ಸೈದ್ಧಾಂತಿಕ ನೆಲೆಯಲ್ಲಿ ಸಮಾಜವಾದಿಗಳೊಳಗೇ ಭಿನ್ನಾಭಿಪ್ರಾಯಗಳಿದ್ದವು. ಲೋಹಿಯಾ ಅವರ ವಿಚಾರಧಾರೆ ಮತ್ತು ಅಶೋಕ್ ಮೆಹ್ತಾ ವಿಚಾರಧಾರೆಗಳಿಂದ ಪ್ರಭಾವಿತ ಎರಡು ಗುಂಪುಗಳು ಭೂಗತ ಹೋರಾಟದಲ್ಲಿ ತೊಡಗಿಕೊಂಡಿದ್ದವು. ಕಾರ್ಯಚಟುವಟಿಕೆ ವಿಧಾನ ಮತ್ತು ಚಿಂತನೆಗಳಲ್ಲಿ ಭಿನ್ನಾಭಿಪ್ರಾಯವಿದ್ದರೂ ಎರಡೂ ಗುಂಪುಗಳ ನಡುವೆ ಸಂಪರ್ಕ ಸಹಕಾರವಿತ್ತು.

ಭೂಗತ ಹೋರಾಟದಲ್ಲಿ ಮೂರು ರೀತಿಯ ಕಾರ್ಯಚಟುವಟಿಕೆ ನಡೆಯುವುದು ಮುಖ್ಯವಾಗಿ ಕಂಡುಬಂದಿತು. ಮೊದಲನೆಯದು, ಪತ್ರಿಕೆಗಳ ಮೇಲೆ ಸೆನ್ಸಾರ್‌ಷಿಪ್ ಇದ್ದಿದ್ದರಿಂದ ವಾಸ್ತವವಾಗಿ ನಡೆಯುತ್ತಿದ್ದ ವಿಚಾರಗಳ ಸುದ್ದಿಸಂಗ್ರಹ. ಅಸ್ತಿತ್ವದಲ್ಲಿದ್ದ ಇತರ ಭೂಗತ ಜಾಲಗಳ ಸಂಪರ್ಕ ಸಾಧಿಸಿ, ಇತರ ಕಡೆಗಳಲ್ಲಿ ನಡೆದ ಮಾಹಿತಿ ಸಂಗ್ರಹಿಸುವುದು. ಹಲವಾರು ಭೂಗತ ಪತ್ರಿಕೆ ಮತ್ತು ಭೂಗತ ಸಾಹಿತ್ಯಗಳು ಗುಜರಾತಿ, ಮರಾಠಿ, ತಮಿಳು, ಹಿಂದಿ, ಇಂಗ್ಲಿಶ್ ಮುಂತಾದ ಅನೇಕ ಭಾಷೆಗಳಲ್ಲಿ ದೊರೆಯುತ್ತಿದ್ದವು. ಇವುಗಳ ಅನುವಾದ ಮಾಡಲು ಸಹಕಾರ ನೀಡುವ ಜನರನ್ನು ಹುಡುಕುವುದು. ಎರಡನೆಯದು, ಪ್ರತಿಭಟನೆಯ ಪ್ರದರ್ಶನ. ಇದರಲ್ಲಿಯೂ ಎರಡು ಹಂತದ ಕಾರ್ಯಚಟುವಟಿಕೆಗಳಿದ್ದವು. ಸಂಗ್ರಹಿತವಾದ ಸುದ್ದಿ ಹರಡುವುದು, ಪತ್ರ ವ್ಯವಹಾರ, ಭೂಗತ ಪತ್ರಿಕೆಗಳ ಪ್ರಸಾರದ ಮೂಲಕ ಜನಜಾಗೃತಿ ಮಾಡುವುದು ಮತ್ತು ಹಲವಾರು ಮೂಲಗಳ ಮುಖೇನ ಬೇರೆ ಬೇರೆ ಚಳವಳಿಗಳಲ್ಲಿ ತೊಡಗಿಕೊಂಡ ಜನರಿಗೆ ತಲುಪಿಸಿ, ಸಾಧನ ಸಂಪರ್ಕವನ್ನು ಬೆಳೆಸುವುದು. ಡೈನಾಮೈಟ್‌ಗಳನ್ನು ಸಿಡಿಸುವ ಮೂಲಕ ಸರ್ಕಾರದ ಕಾರ್ಯನೀತಿ ಗಳನ್ನು ವಿರೋಧಿಸುವ ಪರ್ಯಾಯ ಶಕ್ತಿ ಇದೆ ಎನ್ನುವುದನ್ನು ಸರ್ಕಾರಕ್ಕೆ ಮನವರಿಕೆ ಮಾಡಿ ಕೊಡುವುದಾಗಿದೆ. ಮೂರನೆಯದು, ಭೂಗತರಾಗಿರುವ ವ್ಯಕ್ತಿಗಳಿಗೆ ಸುರಕ್ಷಿತವಾಗಿ ಉಳಿದುಕೊಳ್ಳುವ ಸ್ಥಳದ ಹುಡುಕಾಟ ಹಾಗೂ ಉಳಿದುಕೊಳ್ಳಲು ಅವಕಾಶ ಮಾಡಿ ಕೊಡುವುದು. ಅವರ ಮುಂದಿನ ಪ್ರಯಾಣಕ್ಕೆ ಮತ್ತೆ ಸುರಕ್ಷಿತವಾದ ಮಾರ್ಗದ ಹುಡುಕಾಟದ ಆರಂಭವಾಗಿತ್ತು. ಇವೆಲ್ಲವೂ ಸಮಾಜವಾದಿ ಸೈದ್ಧಾಂತಿಕ ನೆಲೆಯ ಭೂಗತ ಹೋರಾಟದ ಮುಖ್ಯಧಾರೆಯಲ್ಲಿ ಕಂಡುಬಂದ ವಿಚಾರಗಳಾಗಿವೆ. ಇದಕ್ಕೆ ಪೂರಕವಾಗಿ ಭೂಗತ ಹೋರಾಟದಲ್ಲಿ ಮಾಹಿತಿ ಮತ್ತು ಜ್ಞಾನದ ಪ್ರಸಾರವು ಪ್ರಮುಖ ಪಾತ್ರವಹಿಸಿದೆ ಎಂದು ಸಕ್ರಿಯ ಹೋರಾಟಗಾರರು ಅಭಿಪ್ರಾಯ ವ್ಯಕ್ತಪಡಿಸುವರು. ರಾಷ್ಟ್ರೀಯ ವಲಯದಲ್ಲಿಯೂ ಪೂರಕವಾದ ವಿಚಾರಗಳನ್ನು ಕಾಣಬಹುದಾಗಿದೆ.

> ಮಾಹಿತಿಗಳ ಸಂಗ್ರಹ ಮತ್ತು ವಿತರಿಸುವುದು ಒಂದು ಗುಂಪಿಗಿಂತ ಮತ್ತೊಂದು ಗುಂಪಿಗೆ ಭಿನ್ನವಾಗಿದ್ದವು. ಒಂದೇ ನಗರದಲ್ಲಿರುವ ಗುಂಪುಗಳ ನಡುವೆ ಕೆಲವೊಮ್ಮೆ ಸ್ವಲ್ಪ ಸಹಕಾರ ಇರುತ್ತಿತ್ತು. ಭೂಗತ ಹೋರಾಟದ ಗುಂಪುಗಳ ನಡುವೆ ಅಂತರ್ ಸಂಪರ್ಕವಿದ್ದಿದ್ದರೆ, ಪತ್ರಿಕೆಗಳ ಪ್ರಕಟಣೆ ಹೆಚ್ಚು ಸಮರ್ಥವಾಗಿರಲು ಸಾಧ್ಯವಾಗುತ್ತಿತ್ತು. ಎರಡು ಕಾರಣಗಳಿಂದ ಕಠಿಣವಾಗಿತ್ತು, ಮೊದಲನೆಯದು ಅವರಲ್ಲೇ ಇದ್ದ ಅಪನಂಬಿಕೆ ಹಾಗೂ ಅನುಮಾನದ ವಾತಾವರಣ. ತಮ್ಮ ನೆರೆಹೊರೆಯವರನ್ನು ನಂಬದೆ ಇರುವಂತಹ ಸ್ಥಿತಿಯ ನಿರ್ಮಾಣ ತುರ್ತುಪರಿಸ್ಥಿತಿಯ ಪ್ರಭಾವಗಳಲ್ಲೊಂದಾಗಿತ್ತು. ಎರಡನೆಯದು ಭೂಗತ ಹೋರಾಟದಲ್ಲಿ ತೊಡಗಿಕೊಂಡಿದ್ದವರಿಗೆ ದೊರೆಯುತ್ತಿದ್ದ ಅಪಾರವಾದ ಸಡಗರ/ಭಾವೋದ್ವೇಗಗಳನ್ನು ಬೇರೆಯವರೊಡನೆ ಹಂಚಿಕೊಳ್ಳಲು ತಯಾರಿದ್ದಂತೆ ಕಾಣಲಿಲ್ಲ(ರಾವ್ ೧೯೭೮: ೨).

ಪಕ್ಷದ ಸೈದ್ಧಾಂತಿಕತೆಯ ಜೊತೆಗೆ ಭೂಗತ ಕಾರ್ಯಕರ್ತರಲ್ಲಿದ್ದ ಭಯ ಹಾಗೂ ಪೊಲೀಸ್ ವ್ಯವಸ್ಥೆ, ಇತರರ ಜೊತೆ ಬೆರೆಯದಂತೆ, ಯಾರನ್ನು ನಂಬದಂತೆ ಮಾಡಿತ್ತು. ಇದರೊಡನೆ ಭೂಗತ ಹೋರಾಟದಲ್ಲಿ ತೊಡಗಿಕೊಂಡಿದ್ದವರಿಗೆ ದೊರೆಯುತ್ತಿದ್ದ ಅಪಾರವಾದ ಸಡಗರ ಅಥವಾ ಭಾವೋದ್ವೇಗಗಳನ್ನು ಬೇರೆಯವರ ಜೊತೆ ಹಂಚಿಕೊಳ್ಳಲು ತಯಾರಿದ್ದಂತೆ ಕಾಣಲಿಲ್ಲ. ಕರ್ನಾಟಕದಲ್ಲಿಯೂ ಇಂತಹ ವಿಚಾರಧಾರೆಯನ್ನು[೪೧] ಸಾಮಾನ್ಯವಾಗಿ ವಿಶೇಷವಾಗಿ ಯುವ ಭೂಗತ ಹೋರಾಟಗಾರರು ಹೊಂದಿದ್ದರು. 'ಸ್ವಾತಂತ್ರ್ಯ ಹೋರಾಟ ಸಂದರ್ಭದ ಭೂಗತ ಹೋರಾಟದ ಬಗ್ಗೆ ಕೇಳಿದ್ದು ಮತ್ತು ಓದಿ ತಿಳಿದಿದ್ದೆವು. ಭೂಗತ ಹೋರಾಟದ ಕುರಿತು ಅತ್ಯಂತ ರೋಮಾಂಚನಕಾರಿ ಕಲ್ಪನೆಗಳನ್ನು ಹೊಂದಿದ್ದೆವು. ಆದರೆ ಅಂತಹ ಅವಕಾಶಗಳನ್ನು ಕಳೆದು ಗೊಂಡೆವು ಎಂಬ ಭಾವನೆ ಇತ್ತು. ತುರ್ತುಪರಿಸ್ಥಿತಿ ಅಂತಹ ಅವಕಾಶ ಎನಿಸುತ್ತಿತ್ತು. ಎಲ್ಲ ರೀತಿಯ

'ರೆವಲ್ಯೂಷನ್'ಗಳನ್ನು ಓದುವ ಮೂಲಕ ಪ್ರೇರಣೆ ಪಡೆದು, ಏನು ಮಾಡಬಹುದು ಎಂಬ ತಂತ್ರಗಳನ್ನು ರೂಪಿಸುತಿದ್ದೆವು' ಎಂದು ನಂದನ ರೆಡ್ಡಿ ಅವರು ಹೇಳುವರು. ರಾಷ್ಟ್ರೀಯ ನೆಲೆಯ ವಿಚಾರಧಾರೆ ಹಾಗೂ ಸಂಗತಿಗಳು ರಾಜ್ಯದ ಭೂಗತ ಹೋರಾಟಗಳ ಮೇಲೆ ಅಪಾರವಾಗಿ ಪ್ರಭಾವಿಸಿತ್ತು.

**೩.೨.೧.೧.೩. ಬಲಪಂಥೀಯರು ಮತ್ತು ಇತರರು**

'ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಯಲ್ಲಿ ಸಾಂಖ್ಯಿಕವಾಗಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಭೂಗತ ಹೋರಾಟದಲ್ಲಿ ತೊಡಗಿಕೊಂಡಿದ್ದವರು ಆರ್.ಎಸ್.ಎಸ್ ಮತ್ತು ಸಹಚರರು. ಈ ಸಂಘಟನೆಗಳ ಜಾಲ ಉಳಿದ ಸೈದ್ಧಾಂತಿಕ ನೆಲೆಯ ಪ್ರತಿಭಟನಾಕಾರರಿಗೆ ಹೋಲಿಸಿದರೆ ಅತ್ಯಂತ ವಿಸ್ತೃತವಾಗಿತ್ತು. ಮಧ್ಯಮವರ್ಗದ ಕಾರ್ಯಕರ್ತರು, ವ್ಯಾಪಾರಿಗಳು ಮುಂತಾದವರು ಹೆಚ್ಚಿನ ಸಂಖ್ಯೆಯಲ್ಲಿದ್ದರು. ಮಧ್ಯಮವರ್ಗದಿಂದ ನಿಯಂತ್ರಿಸಲ್ಪಡುವ ಪತ್ರಿಕೆಗಳು ಹೆಚ್ಚಿನ ಸಂಖ್ಯೆಯಲ್ಲಿದ್ದವು. ಆ ಪತ್ರಿಕೆಗಳು ಮಧ್ಯಪಂಥೀಯ ಮತ್ತು ಬಲಪಂಥೀಯ ಪ್ರತಿಭಟನೆ ಹಾಗೂ ವಿಚಾರಧಾರೆಯನ್ನು ಹೆಚ್ಚು ವರದಿ ಮಾಡುತ್ತಿದ್ದವು' ಎಂಬ ಅಭಿಮತ ಇತರ ಸೈದ್ಧಾಂತಿಕ ನೆಲೆಯ ಪ್ರತಿಭಟನಾಕಾರರಲ್ಲಿ ಕಂಡುಬರುವುದು. ಇಲ್ಲಿ ಆರ್.ಎಸ್.ಎಸ್ ಮತ್ತು ಒಂದೇ ತರಹದ ವಿಚಾರಧಾರೆ ಹೊಂದಿದ್ದ ಸಹಚರ ಗುಂಪುಗಳಾದ ಜನಸಂಘ, ರಾಷ್ಟ್ರ ಸೇವಿಕಾ ಸಮಿತಿ, ವಿಶ್ವ ಹಿಂದೂ ಪರಿಷದ್ ಮೊದಲಾದ ಬಲಪಂಥೀಯರ ಭೂಗತ ಹೋರಾಟಗಳನ್ನು ಒಟ್ಟಾಗಿ ಚರ್ಚಿಸಲಾಗಿದೆ. ಸಾಂಖ್ಯಿಕವಾಗಿ ಅಧಿಕವಾಗಿದ್ದರಿಂದ ಇವರೊಡನೆ ಸಂಪರ್ಕ ಹೊಂದಿದ್ದು, ಹೋರಾಟದಲ್ಲಿ ಪೂರಕವಾಗಿ ಸಹಕರಿಸುತ್ತಿದ್ದ ಮಧ್ಯಪಂಥೀಯ ವಿಚಾರಧಾರೆಯ ಸಂಸ್ಥಾ ಕಾಂಗ್ರೆಸ್, ಸರ್ವೋದಯ ಹಾಗೂ ವೈಯಕ್ತಿಕ ನೆಲೆಯಲ್ಲಿ ಹೋರಾಟದಲ್ಲಿ ತೊಡಗಿಕೊಂಡಿದ್ದು ಸಹಕಾರ ನೀಡುತಿದ್ದ ವ್ಯಕ್ತಿಗಳು ಮೊದಲಾದವರ ಹೋರಾಟಗಳನ್ನು ಒಟ್ಟಾಗಿ ಅವಲೋಕಿಸುವ ಪ್ರಯತ್ನ ಮಾಡಲಾಗಿದೆ.

ಜೈಲಿಗೆ ಹೋಗುವುದು ಪ್ರತಿಭಟನೆಯ ಸಂಕೇತ, ಬಿಡುಗಡೆ ಆದರೆ ಮತ್ತೊಮ್ಮೆ ಜೈಲಿಗೆ ಹಾಕುವವರಿಗೆ ಚಟುವಟಿಕೆಗಳನ್ನು ಮಾಡಿ ಎಂಬ ಸಂದೇಶ, ಈ ಹೋರಾಟಗಾರರೊಳಗೆ ಸುತ್ತಾಡುತ್ತಿತ್ತು. ಆರ್.ಎಸ್.ಎಸ್ ಮತ್ತು ಸಹಚರ ಗುಂಪುಗಳು ತುರ್ತುಪರಿಸ್ಥಿತಿ ವಿರೋಧಿ ಹೋರಾಟದಲ್ಲಿ ಅತ್ಯಧಿಕ ಸಂಖ್ಯೆಯಲ್ಲಿ ಪಾಲ್ಗೊಂಡಿದ್ದು, ಭೂಗತ ಹೋರಾಟ ಜಾಲವು ವಿಶಾಲವಾದ ಹರವನ್ನು ಹೊಂದಿದ್ದನ್ನು ನೋಡಬಹುದು. ರಾಷ್ಟ್ರೀಯ ವಲಯದಲ್ಲಿ ಕಂಡುಬರುತ್ತಿದ್ದ ಕಾರ್ಯಚಟುವಟಿಕೆಗಳಿಂದ ಕರ್ನಾಟಕದ ಭೂಗತ ಹೋರಾಟವು ಪ್ರೇರಿತಗೊಂಡಿದ್ದನ್ನು ಗುರುತಿಸಬಹುದು. 'ಸತ್ಯಾಗ್ರಹ'ದಂತ ಸಂವಿಧಾನಾತ್ಮಕ ಹೋರಾಟಗಳಿಗೆ ಜನ ಸಾಮಾನ್ಯರನ್ನು ಸೆಳೆಯಲು, ಸೂಚನೆ ನೀಡಲು ಭೂಗತವಾಗಿ ಕರಪತ್ರಗಳನ್ನು ಪ್ರಸಾರ ಮಾಡುವುದನ್ನು ನೋಡಬಹುದು. 'ಸತ್ಯಾಗ್ರಹಿಗಳಿಗೆ ಸೂಚನೆ' ಎಂಬ ಕರಪತ್ರಗಳಲ್ಲಿ(ಚಿತ್ರ-೧೪) 'ಸತ್ಯಾಗ್ರಹಕ್ಕೆ ಮುಂಚೆ ಸೆರೆಮನೆ ವಾಸಕ್ಕೆ ಅಗತ್ಯವಾದ ಸಾಮಾನುಗಳನ್ನು ಸಿದ್ಧಪಡಿಸಿಕೊಳ್ಳಬೇಕು, ಬೆಲೆ ಬಾಳುವ ವಸ್ತುಗಳನ್ನು ಕೊಂಡೊಯ್ಯಬಾರದು. ನಿಶ್ಚಿತವಾಗಿರುವ ದಿನಾಂಕ, ಸ್ಥಳಗಳಲ್ಲೇ ಸತ್ಯಾಗ್ರಹ ಮಾಡಬೇಕು, ಬಂಧನ ಆಗದಿದ್ದಲ್ಲಿ ಅಥವಾ ಬೇಗ ಬಿಡುಗಡೆ ಆದಲ್ಲಿ ಮತ್ತೆ ಬಂಧನಕ್ಕೊಳಗಾಗಬೇಕು, ನ್ಯಾಯಾಧೀಶರ ಮುಂದೆ ಸತ್ಯಾಗ್ರಹ ಮಾಡಿರುವುದನ್ನು ಒಪ್ಪಿಕೊಳ್ಳಬೇಕು, ಜಾಮೀನಿನ ಮೇಲೆ ಬಿಡುಗಡೆ ಹೊಂದಲು ಪ್ರಯತ್ನಿಸ ಬಾರದು, ಪೊಲೀಸ್ ದೌರ್ಜನ್ಯವನ್ನು ನ್ಯಾಯಾಧೀಶರ ಮುಂದೆ ಹೇಳಬೇಕು' ಮುಂತಾದ ಸೂಚನೆಗಳನ್ನು ಕಾಣಬಹುದು. ಪೂರಕವಾಗಿ ಆರ್.ಎಸ್.ಎಸ್ ಮತ್ತು ಸಹಚರ ಸಂಘಟನೆಗಳ ಪ್ರತಿಭಟನಾಕಾರು ಹೆಚ್ಚಿನ ಸಂಖ್ಯೆಯಲ್ಲಿ ಸಂವಿಧಾನಾತ್ಮಕ ಹಾಗೂ ಭೂಗತ ಹೋರಾಟಗಳಲ್ಲಿ ತೊಡಗಿಕೊಂಡಿದ್ದರು. ರಾಜ್ಯದಲ್ಲಿ ಸುಮಾರು ೨೦೦ಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಮೀಸಾ ಖೈದಿಗಳನ್ನು ಮತ್ತು ಸಾವಿರಾರು ಸಂಖ್ಯೆಯಲ್ಲಿ ಭೂಗತ ಹೋರಾಟಗಾರರನ್ನು ಕಾಣಬಹುದು. ಸಂಸ್ಥಾ ಕಾಂಗ್ರೆಸ್ ಮತ್ತು ಸರ್ವೋದಯದಿಂದ ರಾಮಕೃಷ್ಣ ಹೆಗಡೆ, ವೀರೇಂದ್ರ ಪಾಟೀಲ್, ಎ. ಲಕ್ಷ್ಮಿ ಸಾಗರ್, ಎಸ್. ವೆಂಕಟರಾಮ್, ವೆಂಕೋಬರಾವ್, ಚಂದ್ರಶೇಖರ, ಮಾ. ನ. ಸತ್ಯನಾರಾಯಣ ರಾವ್, ಸತ್ಯವ್ರತ, ಗರುಡಶರ್ಮ, ಅಶ್ವತ್ಥ ನಾರಾಯಣ, ಸೀತಾಶರಣ ಶರ್ಮ

ಮೊದಲಾದವರು ಸಕ್ರಿಯರಾಗಿದ್ದರು. ಭೂಗತ ಸಾಹಿತ್ಯ ಮತ್ತು ಪತ್ರಿಕೆಗಳನ್ನು ಸಮಾಜದ ಅನೇಕ ವರ್ಗಗಳಿಗೆ ಹಂಚುವ ಮೂಲಕ ಜಾಗೃತಿ ಉಂಟುಮಾಡುವ ಉದ್ದೇಶ ಮುಖ್ಯವಾಗಿ ಕಂಡುಬರುವುದು.



ವಿದ್ಯಾರ್ಥಿಗಳು, ಶಿಕ್ಷಕರು, ವ್ಯಾಪಾರಿಗಳು, ವೈದ್ಯರು, ವಕೀಲರು ಮೊದಲಾದ ಮಧ್ಯಮ ವರ್ಗದ ಬಹುತೇಕ ಅಕ್ಷರಸ್ಥ ವರ್ಗವನ್ನು ಹೋರಾಟಕ್ಕೆ ಸೆಳೆಯುವ ಪ್ರಯತ್ನ ಕಾಣಬಹುದು. ಭೂಗತ ಸಾಹಿತ್ಯಗಳನ್ನು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಾಗಿಸುವುದು. ಪ್ರಸಾರ ಮಾಡುವುದು. ಭೂಗತರಿಗೆ ವಸತಿ ಸೌಕರ್ಯ. ಭೂಗತ ಹೋರಾಟ ಮತ್ತು ಭೂಗತರ ಕುಟುಂಬ ವರ್ಗಕ್ಕೆ ಸಹಾಯ ಮಾಡಲು ಹಣಸಂಗ್ರಹ ಮೊದಲಾದ ಕಾರ್ಯಚಟುವಟಿಕೆಗಳನ್ನು ನೋಡಬಹುದು. ಈ ಕಾರ್ಯಚಟುವಟಿಕೆಗಳ ಕುರಿತು ಮುಂದಿನ ಭಾಗಗಳಲ್ಲಿ ವಿಸ್ತೃತವಾಗಿ ಚರ್ಚಿಸಲಾಗುತ್ತದೆ. ಭೂಗತ ಹೋರಾಟಕ್ಕೆ ಪೂರಕವಾದ ವಸ್ತುವಿಷಯಗಳನ್ನು ತಂತ್ರಗಳನ್ನಾಗಿ ಬಳಸಲಾಗಿದೆ. ದೇವಸ್ಥಾನ ಮೊದಲಾದ ಧಾರ್ಮಿಕ ಪ್ರದೇಶಗಳನ್ನು ವಿಚಾರ ವಿನಿಮಯಕ್ಕೆ, ಹೋರಾಟಕ್ಕೆ ಬೇಕಾಗುವ ಹಣ ಸಂಗ್ರಹಕ್ಕೆ ಬಳಸಿರುವುದು ಕಂಡುಬರುವುದು. ಕನ್ನಡ ಮತ್ತು ಇಂಗ್ಲಿಶ್ ಎರಡು ಭಾಷೆಯಲ್ಲಿಯೂ ಕರಪತ್ರ ಮತ್ತು ಭೂಗತ ಪತ್ರಿಕೆಗಳಿವೆ. ಭೂಗತ ಸಾಹಿತ್ಯ, ಪತ್ರಿಕೆಯ ವರದಿಗಳು ರಾಷ್ಟ್ರೀಯತೆ ಹಾಗೂ ಭಾವನಾತ್ಮಕ ವಿಚಾರಗಳ ಮೂಲಕ ಉತ್ತೇಜಿಸುವಂತೆ ಪ್ರಚೋದನಕಾರಿ ಭಾಷೆಯ ಬಳಕೆಯಿದೆ. ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವ ನೈತಿಕತೆ ಹಾಗೂ ಪಾವಿತ್ರ್ಯದ ವಿಚಾರಗಳಾಗಿ ಪರಿವರ್ತನೆ ಹೊಂದಿದೆ. ಬಹುತೇಕ ಬಾರಿ ಇಡೀ ಕುಟುಂಬವರ್ಗ ಕಾರ್ಯಚಟುವಟಿಕೆಗಳಲ್ಲಿ ತೊಡಗಿಕೊಂಡಿರುವುದನ್ನು ಕಾಣಬಹುದು. ತುರ್ತುಪರಿಸ್ಥಿತಿ ಕಾಲಘಟ್ಟದ ಹೋರಾಟಗಳ ಕುರಿತಂತೆ ರಾಷ್ಟ್ರೋತ್ಥಾನ ಸಾಹಿತ್ಯ ಪ್ರಕಟಿಸಿರುವ ಘುಗಿಲು(೧೯೭೭) ಘಟನೆಗಳ ಅಂಕಿಅಂಶ, ವಿವರಣೆಗಳನ್ನೊಳಗೊಂಡಿದ್ದು, ಹೋರಾಟದ ಸ್ವರೂಪದ ಮೇಲೆ ಬೆಳಕು ಚೆಲ್ಲುವುದು.

ಜೆ.ಪಿ ಚಳವಳಿಯ ಸಂದರ್ಭದಲ್ಲೇ ಲೋಕ ಸಂಘರ್ಷ ಸಮಿತಿ ಅಡಿಯಲ್ಲಿ ಸಂಸ್ಥಾ ಕಾಂಗ್ರೆಸ್, ಸಮಾಜವಾದಿಗಳು, ಸರ್ವೋದಯದವರು ಮೊದಲಾದ ರಾಜಕೀಯ ಪಕ್ಷಗಳು ಒಟ್ಟಾಗಿ ಕಾರ್ಯ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದರು. ತುರ್ತುಪರಿಸ್ಥಿತಿ ಘೋಷಣೆಯ ನಂತರ ಸಂಸ್ಥಾ ಕಾಂಗ್ರೆಸ್, ಸರ್ವೋದಯದ ಕಾರ್ಯಕರ್ತರು ಸಾಂಖ್ಯಿಕವಾಗಿ ಹೆಚ್ಚಿದ್ದ ಆರ್.ಎಸ್.ಎಸ್ ಮತ್ತು ಸಹಚರರೊಡನೆ ಸೇರಿ ಪ್ರತಿಭಟಿಸುವುದು ಉತ್ತಮವೆಂದು ಭಾವಿಸಿದ್ದರು. ಹಲವು ಹಂತಗಳಲ್ಲಿ ಪೂರಕವಾಗಿ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಹಾಗಾಗಿ ಸ್ವತಂತ್ರವಾದ ಲಕ್ಷಣಗಳನ್ನು ಗುರುತಿಸುವುದು ಕಷ್ಟಕರವಾಗಿದೆ. ಪ್ರಗತಿಪರ ವಿಚಾರಧಾರೆಯುಳ್ಳ ಮಧ್ಯ ಪಂಥೀಯರು ವೈಯಕ್ತಿಕವಾಗಿ ಪ್ರತಿಭಟನೆಗಳಲ್ಲಿ ಪಾಲ್ಗೊಳ್ಳಲು ಬಯಸುತ್ತಿದ್ದರು. ಸಮಕಾಲೀನವಾಗಿ ವಿಸ್ತೃತ ಜಾಲ ಹೊಂದಿದ್ದು, ಸಕ್ರಿಯವಾಗಿದ್ದ ಆರ್.ಎಸ್.ಎಸ್ ಮತ್ತು ಸಹಚರರ ಜೊತೆ

ಸೇರಿಕೊಂಡರು. ಸೈದ್ಧಾಂತಿಕ ಭಿನ್ನಾಭಿಪ್ರಾಯಕ್ಕಿಂತ ಹೋರಾಟ ಮುಖ್ಯವೆನ್ನುವುದು ಈ ವರ್ಗದ ನಿಲುವಾಗಿತ್ತು. ಆರ್.ಎಸ್.ಎಸ್ ನಿಷೇದಿತ ಸಂಘಟನೆಯಾಗಿದ್ದು, ಅಸ್ತಿತ್ವದ ಪ್ರಶ್ನೆಯು ಮುಖ್ಯವಾಗಿ ಕಾರ್ಯ ನಿರ್ವಹಿಸಿದೆ. ಭೂಗತ ಹೋರಾಟಗಾರರ ಸಾಹಿತ್ಯ, ಕರಪತ್ರ ಮತ್ತು ಪತ್ರಿಕೆಗಳ ಸ್ವರೂಪದ ಅವಲೋಕನ ಹೋರಾಟದ ಅನೇಕ ಆಯಾಮಗಳನ್ನು ತೆರೆದಿಡುವುದು.

**ತುರ್ತುಪರಿಸ್ಥಿತಿ ಕಾಲದಲ್ಲಿ ಭೂಗತರಾಗಿದ್ದ ಕೆಲವು ರಾಜಕೀಯ ಪಕ್ಷಗಳು ಮತ್ತು ಸಂಘಟನೆಗಳ ಪಟ್ಟಿ. ಪಟ್ಟಿ ಸಂಖ್ಯೆ: ೧೩.**

| ಸಂಖ್ಯೆ | ಸಂಘಟನೆಗಳು | ಸೈದ್ಧಾಂತಿಕ ಹಿನ್ನೆಲೆ | ಪ್ರದೇಶ |
|---|---|---|---|
| ೧ | ರಾಷ್ಟ್ರೀಯ ಸ್ವಯಂ ಸೇವಕ ಸಂಘ(ಆರ್.ಎಸ್.ಎಸ್) | ಬಲಪಂಥೀಯ | ಭಾರತ |
| ೨ | ಜನಸಂಘ/ಭಾರತೀಯ ಜನಸಂಘ | ಬಲಪಂಥೀಯ | ಭಾರತ |
| ೩ | ಲೋಕ ಸಂಘರ್ಷ ಸಮಿತಿ(ಎಲ್.ಎಸ್.ಎಸ್) | * | ಭಾರತ |
| ೪ | ಭಾರತೀಯ ಲೋಕ ದಳ(ಬಿ.ಎಲ್.ಡಿ) | ಬಲಪಂಥೀಯ | ಭಾರತ |
| ೫ | ಕಾಂಗ್ರೆಸ್(ಒ) | ಮಧ್ಯಪಂಥೀಯ | ಭಾರತ |
| ೬ | ಸಮಾಜವಾದಿ | ಮಧ್ಯಪಂಥೀಯ | ಭಾರತ |
| ೭ | ಭಾರತೀಯ ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ ಮಾರ್ಕ್ಸ್‌ವಾದಿ(ಸಿ.ಪಿ.ಎಂ) | ಎಡಪಂಥೀಯ | ಭಾರತ |
| ೮ | ಹಿಂದೂ ಮಹಾ ಸಭಾ | ಬಲಪಂಥೀಯ | ಭಾರತ |
| ೯ | ವಿಶ್ವಹಿಂದೂ ಪರಿಷತ್ | ಬಲಪಂಥೀಯ | ಭಾರತ |
| ೧೦ | ಜನತಾ ಸಂಘರ್ಷ ಸಮಿತಿ/ಭಾರತೀಯ ಜನತಾ | ಬಲಪಂಥೀಯ | ಭಾರತ |
| ೧೧ | ಸಂಘರ್ಷ ಸಮಿತಿ (ಬಿ.ಜೆ.ಎಸ್.ಎಸ್) | | |
| ೧೨ | ಜನತಾ ಫ್ರಂಟ್ | - | - |
| ೧೩ | ನಕ್ಸಲರು | ಎಡಪಂಥೀಯ | ೧೯೭೦ರ ದಶಕದ ಆರಂಭದಲ್ಲಿದ್ದ ನಕ್ಸಲ್ ಪ್ರದೇಶಗಳಲ್ಲಿ. ಬಿಹಾರ, ಪಶ್ಚಿಮ ಬಂಗಾಳ, ಆಂಧ್ರ ಪ್ರದೇಶ ಮುತ್ತಿತರ. |
| ೧೪ | [illegible] | - | ಮಹಾರಾಷ್ಟ್ರ |
| ೧೫ | ಅಖಿಲ ಭಾರತೀಯ ವಿದ್ಯಾರ್ಥಿ ಪರಿಷತ್ | ಬಲಪಂಥೀಯ | ಭಾರತ |
| ೧೬ | [illegible] | - | ಪಂಜಾಬ್ |
| ೧೭ | [illegible] | ಬಲಪಂಥೀಯ | ಕರ್ನಾಟಕ |
| ೧೮ | ಸಿ.ಪಿ.ಐ-ಎಂ.ಎಲ್ | ಎಡಪಂಥೀಯ | ನಕ್ಸಲ್ ಹೋರಾಟಗಳು ಹೆಚ್ಚಾಗಿದ್ದ ಪ್ರದೇಶಗಳಲ್ಲಿ. |
| ೧೯ | [illegible] | - | ಭಾರತ |
| ೨೦ | [illegible] | - | - |
| ೨೧ | [illegible] | ಎಡಪಂಥೀಯ | - |
| ೨೨ | [illegible] | - | - |
| ೨೩ | ಭಾರತೀಯ ಕ್ರಾಂತಿ ದಳ | ಬಲಪಂಥೀಯ | ಭಾರತ |
| ೨೪ | [illegible] | ಬಲಪಂಥೀಯ | ಕರ್ನಾಟಕ |
| ೨೫ | [illegible] | ಎಡಪಂಥೀಯ | ಮಹಾರಾಷ್ಟ್ರ |
| ೨೬ | [illegible] ಸೋಷಲಿಸ್ಟ್ ಪಾರ್ಟಿ | ಎಡಪಂಥೀಯ | ಭಾರತ |
| ೨೭ | ಸಂಯುಕ್ತ ಸೋಷಲಿಸ್ಟ್ ಪಾರ್ಟಿ | ಎಡಪಂಥೀಯ | ಭಾರತ |
| ೨೮ | ಸ್ವತಂತ್ರ ಪಕ್ಷ | ಬಲಪಂಥೀಯ | ಭಾರತ |
| ೨೯ | [illegible] | ಬಲಪಂಥೀಯ | ಕರ್ನಾಟಕ |
| ೩೦ | [illegible] | ಬಲಪಂಥೀಯ | - |
| ೩೧ | [illegible] ಸಂಘರ್ಷ ಸಮಿತಿ | ಬಲಪಂಥೀಯ | ಬಿಹಾರ |
| ೩೨ | [illegible] | ಮಧ್ಯಪಂಥೀಯ/ಹೆಚ್ಚು ಎಡಪಂಥೀಯವಾಗಿದ್ದ [illegible] | ಆಂಧ್ರ ಪ್ರದೇಶ |
| ೩೩ | [illegible] ಮುಕ್ತಿ ಸಮಿತಿ | - | ಪಶ್ಚಿಮ ಬಂಗಾಳ |
| ೩೪ | [illegible] | ಎಡಪಂಥೀಯ | ಭಾರತ |
| ೩೫ | [illegible] | - | - |
| ೩೬ | ಡಿ.ಎಂ.ಕೆ | - | ತಮಿಳು ನಾಡು |
| ೩೭ | [illegible] | - | - |
| ೩೮ | [illegible] | - | ಭಾರತ |
| ೩೯ | [illegible] | - | - |
| ೪೦ | ಲೋಕ್ ದಳ್ | ಮಧ್ಯಪಂಥೀಯ | ಭಾರತ |
| ೪೧ | [illegible] | - | - |
| ೪೨ | [illegible] | - | ಕರ್ನಾಟಕ |
| ೪೩ | ಮುಸ್ಲಿಂ [illegible] ಸಮಿತಿ | - | - |
| ೪೪ | ಆನಂದ ಮಾರ್ಗ | ಬಲಪಂಥೀಯ | ಭಾರತ |
| ೪೫ | [illegible] ನಾಗರಿಕ ಸಮಿತಿ | - | ಪಶ್ಚಿಮ ಬಂಗಾಳ |
| ೪೬ | [illegible] ಗುಂಪುಗಳು | - | ಪಶ್ಚಿಮ ಬಂಗಾಳ |
| ೪೭ | ಸಂಗ್ರಾಮ್ | - | ಒರಿಸ್ಸಾ |
| ೪೮ | ಯುವ ಸಂಘರ್ಷ ಸಮಿತಿ | ಎಡಪಂಥೀಯ | ಬಿಹಾರ |
| ೪೯ | ಜನತಂತ್ರ ಸಮಾಜ | - | ನವದೆಹಲಿ |
| ೫೦ | ಕರ್ನಾಟಕ [illegible] ಕ್ರಾಂತಿ | ಎಡಪಂಥೀಯ | ಕರ್ನಾಟಕ |
| ೫೧ | ಮುಸ್ಲಿಂ ನೌಜವಾನ್ ಸಮಿತಿ | - | - |

ಆಕರ: ಕ್ಷೇತ್ರ ಕಾರ್ಯದಲ್ಲಿ ದೊರೆತ ಕೆಲವು ಭೂಗತ ಪತ್ರಿಕೆಗಳು, ಪ್ರಕಟಿತ ಭೂಗತ ಪತ್ರಿಕೆಗಳು ಮತ್ತು ಕೃತಿಗಳನ್ನು ಆಧರಿಸಿದೆ.

*ವಿರೋಧ ಪಕ್ಷಗಳ ಎಲ್ಲ ಪಕ್ಷಗಳು ಸೇರಿ ಕಾರ್ಯನಿರ್ವಹಿಸಲು ನಿರ್ಮಿಸಿದ ಸಮಿತಿ. ಈ ಹೆಸರಿನ ಅನೇಕ ಕೈ ಬರಹವಿರುವ ಮತ್ತು ಮುದ್ರಿತ ಪತ್ರಗಳನ್ನು ಕಾಣಬಹುದು. ಇಂತಹದೆ ಸೈದ್ಧಾಂತಿಕ ಹಿನ್ನೆಲೆ ಎಂದು ಹೇಳಲು ಸಾಧ್ಯವಿಲ್ಲ. ಕ್ರಮೇಣ ಬಲಪಂಥೀಯ ವಿಚಾರಧಾರೆಗಳನ್ನು ಹೆಚ್ಚು ಅಳವಡಿಸಿಕೊಂಡಿರುವುದನ್ನು ಗುರುತಿಸಬಹುದು.

– ಇದರ ಕುರಿತು ಮಾಹಿತಿ ತಿಳಿದಿಲ್ಲ.

### ೩.೨.೧.೧.೨. ಭೂಗತ ಸಾಹಿತ್ಯ, ಪತ್ರಿಕೆ ಮತ್ತು ಕರಪತ್ರಗಳು

ಭೂಗತ ಸಾಹಿತ್ಯ, ಪತ್ರಿಕೆ ಮತ್ತು ಕರಪತ್ರಗಳು ಪ್ರಭುತ್ವದಿಂದ ತೊಂದರೆಗೊಳಗಾದಾಗ ಅಥವಾ ನಿರಂಕುಶ ಆಡಳಿತವಿದ್ದಾಗ ಅಥವಾ ಆಡಳಿತದ ವಿಚಾರಧಾರೆಗೆ ಪರ್ಯಾಯ ವಿಚಾರಧಾರೆಗಳಿದ್ದಾಗ ಗುಪ್ತವಾಗಿ ಕಾರ್ಯನಿರ್ವಹಿಸಲು ಆರಂಭಿಸುವುದು. ಪಕ್ಷದ ಅಥವಾ ಸಂಘಟನೆಯ ಸಿದ್ಧಾಂತಗಳ ಬಗ್ಗೆ, ಕಾರ್ಯಕ್ರಮಗಳು, ತಂತ್ರಗಳ ಕುರಿತು ಸಂಘಟನೆಯ ಸದಸ್ಯರಿಗೆ ಮಾತ್ರ ತಲುಪುವ ರೀತಿಯಲ್ಲಿ ಬೇರೆ ಬೇರೆ ಮಾರ್ಗಗಳಲ್ಲಿ ಚಲಾವಣೆ ಪಡೆಯುವುದು. ಭೂಗತ ಹೋರಾಟದ ಉದ್ದೇಶವನ್ನು ಸಾರ್ವಜನಿಕ ವಲಯಗಳಲ್ಲಿ ಮತ್ತು ಸಮಾನಾಸಕ್ತರಲ್ಲಿ ಪ್ರಚಾರ ಮಾಡಲು ಅಥವಾ ಹೋರಾಟಕ್ಕೆ ಸೆಳೆಯಲು ಬಳಸಲಾಗುವುದು. ಆಂತರಿಕ ತುರ್ತುಪರಿಸ್ಥಿತಿ ಕಾಲಘಟ್ಟದ ಭೂಗತ ಹೋರಾಟಗಾರರ ಸಾಹಿತ್ಯ ಮತ್ತು ಪತ್ರಿಕೆಗಳನ್ನು ವಿಶಾಲವಾಗಿ ಎರಡು ತಳಹದಿಯಲ್ಲಿ ವಿಭಜಿಸಬಹುದಾಗಿದೆ. ಮೊದಲನೆಯದು, ಬಲ ಪಂಥೀಯ ವಿಚಾರಧಾರೆಗಳುಳ್ಳ ಆರ್.ಎಸ್.ಎಸ್, ವಿಶ್ವಹಿಂದೂ ಪರಿಷತ್ ಮೊದಲಾದ ಸಹಸಂಪರ್ಕವುಳ್ಳ ಪಕ್ಷಗಳು ಹಾಗೂ ಸಮಾನ ರೀತಿಯ ವಿಚಾರಧಾರೆಯುಳ್ಳ ಇತರ ನಿಷೇದಿತ ಪಕ್ಷ ಮತ್ತು ಸಂಘಟನೆಗಳು. ಎರಡನೆಯದು, ಎಡಪಂಥೀಯ ವಿಚಾರಧಾರೆಗಳುಳ್ಳ ಸಮಾಜವಾದಿ, ಕಮ್ಯುನಿಸ್ಟ್(ಮಾರ್ಕ್ಸಿಸ್ಟ್ ಮತ್ತು ಲೆನಿನ್ ಮಾರ್ಕ್ಸಿಸ್ಟ್) ಮತ್ತಿತರ ರಾಜಕೀಯ ಪಕ್ಷ ಮತ್ತು ಸಂಘಟನೆಗಳು. ಇದರೊಡನೆ ಪ್ರಗತಿಪರ ವಿಚಾರಧಾರೆಗಳುಳ್ಳ ಯಾವ ಪಂಥದ ವಿಚಾರಧಾರೆಗಳೊಂದಿಗೆ ಗುರುತಿಸಿಕೊಳ್ಳದ ವ್ಯಕ್ತಿಗಳು ಮತ್ತು ಕೆಲವು ಸಂಘಟನೆಗಳು ಭೂಗತರೊಡನೆ ಸಂಪರ್ಕ ಹೊಂದಿದ್ದು, ಅನೇಕ ಸ್ತರಗಳಲ್ಲಿ ಸಹಕರಿಸುತ್ತಿದ್ದವರು. ಜೊತೆಗೆ ಕೆಲವು ರಾಜಕೀಯ ಪಕ್ಷಗಳು ಏಕ ಸಮಿತಿಯ ಅಡಿಯಲ್ಲಿ ಕೆಲಸ ಮಾಡುತ್ತಿದ್ದವು. ಈ ದಿಸೆಯಲ್ಲಿ ಲೋಕ ಸಂಘರ್ಷ ಸಮಿತಿ[೪೪] ಹೆಚ್ಚು ಪ್ರಮುಖವಾದುದು. ಇವುಗಳನ್ನು ಗಮನಿಸುತ್ತಾ ಭೂಗತ ಹೋರಾಟಗಳಲ್ಲಿ ಬಳಕೆಯಾದ ಭೂಗತ ಸಾಹಿತ್ಯ, ಪತ್ರಿಕೆ ಮತ್ತು ಕರಪತ್ರಗಳ ಸ್ವರೂಪವನ್ನು ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

'ಭೂಗತ ಹೋರಾಟಗಳು ಸಣ್ಣ ಸಣ್ಣ ಗುಂಪುಗಳಿಂದ ನಡೆಯುತ್ತಿದ್ದ ಕೆಲವು ಪ್ರದೇಶಕ್ಕೆ ಸೀಮಿತವಾಗಿದ್ದವು. ಕೆಲವು ಸಂಘಟನೆಗಳು ದೇಶದಾದ್ಯಂತ ಸಂಪರ್ಕ ಹೊಂದಿದ್ದವಾದರೂ ಪ್ರಸಾರ ಮಾಡುತ್ತಿದ್ದ ಸುದ್ದಿಗಳು ಬಹುತೇಕ ಪ್ರಾದೇಶಿಕ ಸುದ್ದಿಗಳು. ದೇಶೀಯ ಮಟ್ಟದ ಸುದ್ದಿಗಳನ್ನು ಹದಿನೈದು ಇಪ್ಪತ್ತು ದಿನಗಳ ಕಾಲದ ನಂತರ ಪ್ರಸಾರ ಮಾಡುತ್ತಿದ್ದವು' ಎಂದು ಸುಬ್ರಮಣಿಯವರು ತಮಿಳುನಾಡಿನ ಭೂಗತ ಪತ್ರಿಕೆಗಳ ಸಂದರ್ಭದಲ್ಲಿ ವಿಶ್ಲೇಷಿಸುವರು. ಇಂತಹ ಲಕ್ಷಣಗಳು ಕರ್ನಾಟಕದ ಭೂಗತ ಪತ್ರಿಕೆಗಳಲ್ಲಿಯೂ ಕಂಡುಬರುವುದು. ಬಲಪಂಥೀಯ ಸಂಘಟನೆಗಳು ತರುತ್ತಿದ್ದ 'ಕರ್ನಾಟಕ ನ್ಯೂಸ್ ಲೆಟರ್ಸ್' ಈ ವಿಚಾರಗಳಿಗೆ ಬಹುತೇಕ ಹೊರತಾಗಿತ್ತು. ಉಳಿದಂತೆ ಕರ್ನಾಟಕದ ಭೂಗತ ಹೋರಾಟ, ಸತ್ಯಾಗ್ರಹ ಮತ್ತು ಬಂಧನಗಳು ಹೆಚ್ಚು ಪ್ರಕಟವಾಗುತ್ತಿದ್ದು ರಾಷ್ಟ್ರೀಯ ಸುದ್ದಿಗಳು ಸಾಕಷ್ಟು ಕಡಿಮೆ ಪ್ರಮಾಣದಲ್ಲಿ ಮುದ್ರಣಗೊಳ್ಳುತ್ತಿದ್ದವು. ಭೂಗತ ಹೋರಾಟಕ್ಕೆ ಸಂಬಂಧಿಸಿದಂತೆ ಅತ್ಯಂತ ಪ್ರಮುಖವಾದ ಎರಡು ವಿಚಾರಗಳೆಂದರೆ ಭೂಗತ ಸಾಹಿತ್ಯ ಮತ್ತು ಪತ್ರಿಕೆಯ ಸೃಷ್ಟಿ ಹಾಗೂ ಅವುಗಳ ಪ್ರಸಾರವಾಗಿತ್ತು.

> ಕರ್ನಾಟಕದಲ್ಲಿ ಭೂಗತ ಪತ್ರಿಕೆಗಳು, ಸಾಹಿತ್ಯ ನಿಯತವಾಗಿ ತಲುಪುತ್ತಿದ್ದ ಊರು, ಗ್ರಾಮಗಳು ೨,೦೮೫. ಪ್ರತಿಗಳ ಸಂಖ್ಯೆ ೫೦ ರಿಂದ ೬೦ ಸಾವಿರ. ಕೆಲವು ವಿಶೇಷ ಸಂದರ್ಭಗಳಲ್ಲಿ ಸಾಹಿತ್ಯವನ್ನು ೧೦೦೦ ಹೆಚ್ಚಿನ ಸ್ಥಾನಗಳಿಗೆ ತಲುಪಿಸಲಾಗುತ್ತಿತ್ತು. ಅದಷ್ಟು ಹೆಚ್ಚಿನ ಪ್ರಮಾಣದಲ್ಲಿ ಚುನಾಯಿತ ಪ್ರತಿನಿಧಿಗಳಿಗೆ, ಪತ್ರಿಕಾಕರ್ತರಿಗೆ, ಸಾಹಿತಿಗಳಿಗೆ, ವೈದ್ಯರು, ವಕೀಲರು, ಅಧ್ಯಾಪಕರುಗಳಿಗೆ, ಸಾಮಾಜಿಕ, ಧಾರ್ಮಿಕ ಮುಖಂಡರು, ವಿದ್ಯಾರ್ಥಿ ಶ್ರಮಿಕ ಕ್ಷೇತ್ರದಲ್ಲಿನ ಕಾರ್ಯಕರ್ತರಿಗೆ ಭೂಗತ ಸಾಹಿತ್ಯವನ್ನು ತಲುಪಿಸಲು ಪ್ರಯತ್ನ ಸಾಗಿತ್ತು ... ಕಲ್ಲಚ್ಚು ಆದ ಪತ್ರಿಕೆ, ಪುಸ್ತಕಗಳು, ಕರಪತ್ರಗಳ ವಿಧಗಳು ೫೭೭. ಪ್ರತಿಗಳ ಒಟ್ಟು ಸಂಖ್ಯೆ ೩೨ ಲಕ್ಷ(ಶೇಷಾದ್ರಿ(ಸಂ) ೧೯೭೭: ೪೭೭-೪೭೮).

ಅಂಕಿಅಂಶಗಳ ಮೂಲಕ ಭೂಗತ ಪತ್ರಿಕೆ ಮತ್ತು ಸಾಹಿತ್ಯ ತಲುಪುತ್ತಿದ್ದ ಕ್ಷೇತ್ರ, ವಿಸ್ತಾರದ ವಿವರಣೆಯಾಗಿದೆ. ಸಮಕಾಲೀನ ಭೂಗತ ಪತ್ರಿಕೆ, ಸಾಹಿತ್ಯ ಕುರಿತಂತೆ ಈ ಮೇಲ್ಕಂಡ ದಾಖಲಾತಿಯನ್ನೆ ಇತರ ಲೇಖನಗಳಲ್ಲಿಯೂ ಬಳಸಲಾಗಿದೆ. ಈ ಅಂಕಿಅಂಶಗಳು ಭೂಗತ ಹೋರಾಟವು ಸಾಕಷ್ಟು

ವಿಸ್ತೃತವಾಗಿರುವಂತೆ ಬಿಂಬಿಸುವುದು. ಆದರೆ ಸಮಾಜದಲ್ಲಿ ತಲುಪುತ್ತಿದ್ದ ವರ್ಗಗಳನ್ನು ಗಮನಿಸಿದಾಗ ಅದು ಅಕ್ಷರಸ್ಥ ವಲಯದ ಕೆಲವು ವರ್ಗಗಳು ಮಾತ್ರ.

> ಮುಸ್ಲಿಂರು, ಇತರ ಅಲ್ಪಸಂಖ್ಯಾತರು, ಹರಿಜನ ಮತ್ತು ಆದಿವಾಸಿಗಳಿಗೆ ಮಿಸಸ್. ನೆಹರು ಗಾಂಧಿಯ ನಿರಂಕುಶಾಧಿಕಾರದ ನಿಜವಾದ ಮುಖ ಅರ್ಥವಾಗುವಂತೆ ಮಾಡಿ ಮತ್ತು ಅವರನ್ನೂ ಸತ್ಯಾಗ್ರಹಕ್ಕೆ ಭಾಗವಹಿಸುವಂತೆ ಮಾಡಿ. ಮುಸ್ಲಿಂರಲ್ಲಿ ಬುಲೆಟಿನ್‌ಗಳು ಪ್ರಸಾರವಾಗಲು ಉರ್ದುವಿನಲ್ಲಿ ಮುದ್ರಿಸಿ ಅಥವಾ ಅನುವಾದ ಮಾಡಿ(ಫರ್ನಾಂಡೀಸ್ ೧೯೭೭: ೧೪).

ಸಮಾಜದ ಹಲವು ವರ್ಗಗಳು ಈ ಹೋರಾಟಗಳಿಂದ ವಿಮುಖವಾಗಿದ್ದವು ಎಂಬುದನ್ನು ಸ್ಪಷ್ಟವಾಗಿ ತಿಳಿಸುವುದು. ಇಂತಹದೆ ವಿಚಾರ 'ಡೂಸ್ ಅಂಡ್ ಡೋಂಟ್ ಡೂಸ್' ಎಂಬ ಕರಪತ್ರದ ನಾಲ್ಕನೆ ಅಂಶವಾಗಿದೆ. ಭೂಗತ ಪತ್ರಿಕೆಗಳು, ಸಾಹಿತ್ಯ ತಲುಪುತ್ತಿದ್ದ ವರ್ಗ ಬಹುತೇಕ ಮೇಲ್ ಮಧ್ಯಮವರ್ಗ ಹಾಗೂ ಸಮಾಜದಲ್ಲಿ ಸ್ಥಾನಮಾನಗಳನ್ನು ಹೊಂದಿದ್ದವರು. ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳಲ್ಲಿ ಎಲ್ಲ ವರ್ಗಗಳು ಭಾಗವಹಿಸದ ಕುರಿತು ಬೆಳಕು ಬೀರುವುದು. ಸಮಕಾಲೀನ ಭೂಗತ ಸಾಹಿತ್ಯ, ಪತ್ರಿಕೆಗಳ ಕುರಿತಂತೆ 'ಕಹಳೆ, ಜ್ಯೋತಿ, ರಣದುಂದುಭಿ, ಕೇಸರಿ, ಜಾಗೃತಿ, ತೂರ್ಯವಾಣಿ, ಪಾಂಚಜನ್ಯ, ಸಂಕ್ರಾಂತಿ, ಪರ್ಯಾಯ, ವಿದ್ಯಾರ್ಥಿವಾರ್ತಾ, ಕೇಸರಿ, ಮಂಗಳೂರುವಾರ್ತಾ, ಕೊಡಗುವಾಣಿ, ಚಿಕ್ಕಮಗಳೂರುವಾರ್ತಾ, ಮೈಸೂರುವಾರ್ತಾ, ಛಾಲೆಂಜ್, ರಶ್ಮಿ, ಸವಾಲು, ಸಾಧನಾ, ತುರ್ತುಕರೆ, ಅಜ್ಞಾನ ಪರ್ವ, ಸ್ಟ್ರಗಲ್, ಕರ್ನಾಟಕ ನ್ಯೂಸ್ ಲೆಟರ್' ಮತ್ತಿತರ ಹೆಸರನ್ನು ಹೇಳಲಾಗುವುದು. ಅತ್ಯಂತ ಹೆಚ್ಚು ಪ್ರಸಿದ್ಧವಾಗಿದ್ದ ಪತ್ರಿಕೆ ಕಹಳೆ. ಕೆಲವು ಬಾರಿ ಒಂದೆ ಹೆಸರಿನಲ್ಲಿ ಪತ್ರಿಕೆ ಮುದ್ರಣ ಅಪಾಯವೆಂಬ ಕಾರಣದಿಂದ ಬೇರೆಬೇರೆ ಹೆಸರಿನಲ್ಲಿ ಮುದ್ರಿಸಲಾಗುತ್ತಿತ್ತು. ಸಮಕಾಲೀನವಾಗಿ ದೆಹಲಿಯಲ್ಲಿ ಜಾಹ್ನವಿ, ಯುವ ಸಂಘರ್ಷ, ಪ್ರತಿರೋಧ್, ಬಿಹಾರದಲ್ಲಿ ತರುಣ್‌ಕ್ರಾಂತಿ, ಕ್ರಾಂತಿನಾದ್ ಮುಂತಾದವುಗಳನ್ನು ನೋಡಬಹುದು. ಕರ್ನಾಟಕದ ಭೂಗತ ಪತ್ರಿಕೆಗಳ ಹೆಸರನ್ನು ಗಮನಿಸಿದರೆ ಕಹಳೆ, ಜ್ಯೋತಿ, ರಣದುಂದುಭಿ, ಕೇಸರಿ, ಜಾಗೃತಿ,



ಕೃಪೆ: ಸೋಮನಾಥ್ ನಾಯಕ. ಭೂಗತ ಹೋರಾಟಗಾರ. ಚಿತ್ರ ಸಂಖ್ಯೆ: ೩.೨೬

ತೂರ್ಯವಾಣಿ, ಪಾಂಚಜನ್ಯ ಮೊದಲಾದವು ಆವೇಶ ಭರಿತವಾಗಿದ್ದು, ರಾಷ್ಟ್ರೀಯತೆಯನ್ನು ಉತ್ತೇಜಿಸುವಂತಿವೆ. ಇವುಗಳು ಬಲಪಂಥೀಯ ಸಂಘಟನೆಗಳ ಪತ್ರಿಕೆಗಳು. ಮಂಗಳೂರುವಾರ್ತಾ, ಕೊಡಗುವಾಣಿ, ಚಿಕ್ಕಮಗಳೂರುವಾರ್ತಾ, ಮೈಸೂರುವಾರ್ತಾ, ತುರ್ತುಕರೆ, ಕರ್ನಾಟಕ ನ್ಯೂಸ್‌ಲೆಟರ್ ಮೊದಲಾದವು ಪ್ರಾದೇಶಿಕ ನೆಲೆಯಲ್ಲಿ ಹೆಚ್ಚು ಕಾರ್ಯನಿರ್ವಹಿಸಿವೆ.

ಭೂಗತ ಪತ್ರಿಕೆಗಳಲ್ಲಿ "ನಿರಂತರ ಜಾಗೃಕತೆಯೆ ಸ್ವಾತಂತ್ರ್ಯದ ಬೆಲೆ"; "ಕೇಂದ್ರ ಸರ್ಕಾರದಿಂದ ವಂಚನೆ"; "ಜೆ.ಪಿ. ಸ್ಥಿತಿ ಆತಂಕಕರ"; "ಹಸಿ ಸುಳ್ಳು ಹುಸಿ ನಾಲಿಗೆ, 'ಸುದ್ದಿ ಗುದ್ದು"; "ಜನತಾ ಸಂಘರ್ಷ ಸಮಿತಿ ಉದಯ"; "ಜನತೆಯಿಂದ ಜನತೆಗಾಗಿ ಹೋರಾಟ ದಿಲ್ಲಿ ಸಿಂಹಾಸನ ಅಲುಗಾಡಲು ಪ್ರಾರಂಭಿಸಿದೆ"; "ಕರ್ನಾಟಕದ ಮುನ್ನಡೆ"(ಕಹಳೆ, ಕನ್ನಡ) ಮೊದಲಾದ ಸತ್ಯಾಗ್ರಹದ ವಿಚಾರಗಳಲ್ಲಿ ಎಲ್ಲೆಲ್ಲಿ ಎಷ್ಟೆಷ್ಟು

ಕೇಂದ್ರಗಳಲ್ಲಿ, ಎಷ್ಟು ಜನ ಪ್ರತಿಭಟನೆ ನಡೆಸಿದರು, ಬಂಧನಗಳಾದವು ಹಾಗೂ ಕೆಲವು ಸಂದರ್ಭಗಳಲ್ಲಿ ಇತರ ರಾಜ್ಯಗಳ ಮಾಹಿತಿಗಳನ್ನು ನೋಡಬಹುದು. "ಟಾರ್ಚರ್ ಆಫ್ ಸ್ಟುಡೆಂಟ್ಸ್ ಬೈ ಪೊಲೀಸ್"; "ಸತ್ಯಾಗ್ರಹ ಸ್ಪ್ರೆಡ್ಸ್"; "ಹೀರೋಯಿಕ್ ಸತ್ಯಾಗ್ರಹ ಬೈ ವುಮೆನ್ ಅಟ್ ಮಂಗಳೂರ್"; "ಟ್ರೆಮೆಂಡಸ್ ಪಬ್ಲಿಕ್ ಸಪೋರ್ಟ್" "ನೊವೆಲ್ ಟೆಕ್ನಿಕ್ ಆಫ್ ಸತ್ಯಾಗ್ರಹ"; 'ದಿ ರೈಸಿಂಗ್ ಟೈಡ್"; "ಪಾಪುಲರ್ ರೆಸ್ಪಾನ್ಸ್"; "ಪಾಪುಲರ್ ರೆಸ್ಪಾನ್ಸಸ್ ಮೌಂಟಿಂಗ್"; "ಸ್ಟುಡೆಂಟ್ಸ್ ಆನ್ ದಿ ಮಾರ್ಚ್"; "ಸೀವೆಯರ್ ಲಾಠಿ ಛಾರ್ಜ್"; "ಎಕೋಸ್ ಆಫ್ ಸತ್ಯಾಗ್ರಹ"; "ಮೀಸಾ ಅರೆಸ್ಟ್ಸ್"; "ಪಾಪುಲರ್ ರಿಸೆಂಟ್‌ಮೆಂಟ್ ಅಗೇನ್ ಪೊಲೀಸ್"(ಕರ್ನಾಟಕ ನ್ಯೂಸ್ ಲೆಟರ್ಸ್, ಇಂಗ್ಲಿಶ್) ಮೊದಲಾದ ವರದಿಗಳಲ್ಲಿ ರಾಜ್ಯದಲ್ಲಿ ನಡೆಯುತ್ತಿದ್ದ ಕಾರ್ಯಚಟುವಟಿಕೆಗಳ ಮಾಹಿತಿ ಹಾಗೂ ಆಗಾಗ ರಾಷ್ಟ್ರದ ಪ್ರಮುಖ ಘಟನೆಗಳನ್ನು ನೀಡಲಾಗಿದೆ. ಕನ್ನಡ ಪತ್ರಿಕೆಗಿಂತ ಇಂಗ್ಲಿಶ್ ಪತ್ರಿಕೆಯ ವರದಿಗಳಲ್ಲಿ ಪ್ರತಿಭಟನೆಗಳು ಅಧಿಕವಾಗುತ್ತಿರುವುದನ್ನು ಉತ್ಪ್ರೇಕ್ಷಿಸಿರುವಂತೆ ಕಂಡುಬರುವುದು. ಇದಕ್ಕೆ ಪೂರಕವಾಗಿ 'ಪಾಪುಲರ್ ರೆಸ್ಪಾನ್ಸ್', 'ಪಾಪುಲರ್ ರೆಸ್ಪಾನ್ಸಸ್ ಮೌಂಟಿಂಗ್', 'ಪಾಪುಲರ್ ರಿಸೆಂಟ್‌ಮೆಂಟ್ ಅಗೇನ್ ಪೊಲೀಸ್', 'ದಿ ರೈಸಿಂಗ್ ಟೈಡ್' ಮುಂತಾದ ವರದಿಗಳನ್ನು ಕಾಣ ಬಹುದು. ಅಲ್ಲದೆ ಮೀಸಾ, ಬಂಧನ, ಪೊಲೀಸ್, ಸರ್ಕಾರದ ದಮನಕಾರಿ ನೀತಿಗಳಿಗೆ ಒತ್ತುಕೊಟ್ಟಿರುವುದು ಹಾಗೂ ಭಾಷಾ ಬಳಕೆಯಲ್ಲಿ ಉದ್ವೇಗ, ಭಾವತೀವ್ರತೆ ಹೆಚ್ಚಿದೆ. ಬಹುತೇಕ ಸುದ್ದಿಗಳು ಪ್ರಾದೇಶಿಕವಾಗಿ ರೂಪುಗೊಳ್ಳುತ್ತಿದ್ದು ಗಾಳಿಸುದ್ದಿಗಳು ಅತಿ ಹೆಚ್ಚು ಪ್ರಾಮುಖ್ಯತೆ ಪಡೆದುಕೊಳ್ಳುತ್ತಿದ್ದವು. ಸೆನ್ಸಾರ್‌ಷಿಪ್ ಮತ್ತು ಭೂಗತ ಹೋರಾಟಗಾರರಿಗಿದ್ದ ಪ್ರಾದೇಶಿಕ ಮಿತಿಗಳು ಹೆಚ್ಚು ಪರಿಣಾಮ ಬೀರಿವೆ.

ಭೂಗತ ಕರಪತ್ರಗಳು ಮತ್ತು ಸಾಹಿತ್ಯದಲ್ಲಿ ಸಾಮಾನ್ಯವಾಗಿ ಎರಡು ರೀತಿಯ ವಿಚಾರಗಳು ಕಂಡುಬರುವುದು. ಪ್ರತಿಭಟನೆಗಳನ್ನು ಮಾಡಲು ಪ್ರಚೋದಕ ವಿಚಾರಗಳ ಕರಪತ್ರಗಳು ಹಾಗೂ ಪ್ರತಿಭಟನಾ ಸಾಹಿತ್ಯ ಮತ್ತು ಸಮಕಾಲೀನ ಸುದ್ದಿ ಸಮಾಚಾರಗಳನ್ನು ಪ್ರಕಟಿಸುತ್ತಿದ್ದ ಕರಪತ್ರಗಳು, ಪತ್ರಿಕೆಗಳು. ಕ್ಷೇತ್ರಕಾರ್ಯದಲ್ಲಿ ದೊರೆತ ಕರಪತ್ರಗಳ ಶೀರ್ಷಿಕೆಗಳು ಮತ್ತು ಪ್ರಕಟವಾಗುತ್ತಿದ್ದ ವಿಚಾರಧಾರೆಗಳು ಹೀಗಿವೆ: 'ದೇಶಪ್ರೇಮಿಗಳಿಗೆ ಕರೆ, ಬಂಡಾಯ ಹೂಡಿ, ಮನವಿ, ಭಾರತದ ಜನ ಕೋಟಿಯು ಆದೇಶ, ಇಂದಿರಾಜಿ ಮಾಡಿದ್ದೇನು?, ಎಳಿ ಹಿಡಿದೇಳಿ, ಓದಿ ಪ್ರಚುರ ಪಡಿಸಿ,"[1] ಕೋರಿಕೆ, ಸತ್ಯಾಗ್ರಹಕ್ಕೆ ಮುಂಚಿತವಾಗಿ ಸೂಚನೆ, ಪಂ.ನೆಹರೂರವರ ಆತ್ಮದ ಅಳಲಿಗೆ, ಮಹಾತ್ಮ ಗಾಂಧಿಯವರ ವಚನಗಳು, ಭಾರತದ ವೀರ ಸಂತಾನ ಇಗೋ ನಿನಗೆ ಪಂಥಾಹ್ವಾನ, ಪೀಪಲ್, ಬ್ರೇವ್!, ದಿ ಪೀಪಲ್ಸ್ ಆಫ್ ಇಂಡಿಯಾ ಡಿಮ್ಯಾಂಡ್, ವಂದೇ ಮಾತರಂ, ಗೈಡ್ ಲೈನ್ಸ್ ಟು ಸತ್ಯಾಗ್ರಹಿಸ್'. ಇದರೊಡನೆ ಆಗಾಗ ಸ್ಥಳೀಯ ಸುದ್ದಿಗಳು, ರಾಜ್ಯ ಸರ್ಕಾರದ ಆಡಳಿತ ಪಕ್ಷದೊಳಗಿನ ಆಂತರಿಕ ಕಲಹ, ರಾಷ್ಟ್ರೀಯ ಘಟನೆಗಳ ಪ್ರಸ್ತಾಪ ಮತ್ತು ವಿರೋಧ ಪಕ್ಷಗಳ ಪ್ರತಿಭಟನಾಕಾರರ ಮೇಲಿನ ದೌರ್ಜನ್ಯ ಮೊದಲಾದ ಸುದ್ದಿಗಳು ಕಂಡುಬರುವುದು.

ಪ್ರತಿಭಟನೆಯಲ್ಲಿ ಕಂಡುಬರುವ ತಂತ್ರಗಳ ಚರ್ಚೆ ಹೋರಾಟದ ಪ್ರಕ್ರಿಯೆಗಳ ಸ್ವರೂಪದ ಮೇಲೆ ಬೆಳಕು ಬೀರುವುದು. ಇದನ್ನು ಕ್ಷೇತ್ರಕಾರ್ಯದಲ್ಲಿ ಲಭ್ಯವಾದ ಭೂಗತ ಕರಪತ್ರ ಮತ್ತು ಭೂಗತ ಪತ್ರಿಕೆಗಳ ಆಧಾರದ ಮೇಲೆ ಗುರುತಿಸಲಾಗಿದೆ.

೧. ಭೂಗತ ಸಾಹಿತ್ಯಗಳಲ್ಲಿ ಸ್ವಾತಂತ್ರ್ಯ ಹೋರಾಟ ಮತ್ತು ಸಮಕಾಲೀನ ಹೋರಾಟದ ಸ್ವರೂಪ, ಸೆನ್ಸಾರ್‌ಷಿಪ್, ಆಡಳಿತಕ್ರಮ ಮುಂತಾದವುಗಳನ್ನು ಸಮೀಕರಿಸಲಾಗುವುದು. ಈ ಲಕ್ಷಣ ಎಲ್ಲ ವಿಚಾರಧಾರೆಯ ಹಿರಿಯ ರಾಜಕಾರಣಿ, ಪತ್ರಕರ್ತ, ಆಡಳಿತಶಾಹಿಯ ಪ್ರಮುಖರಲ್ಲಿ ಅಧಿಕ ಪ್ರಮಾಣದಲ್ಲಿ ಕಂಡುಬರುತ್ತವೆ. ಬಲಪಂಥೀಯ ರಾಜಕೀಯ ಪಕ್ಷ ಮತ್ತು ಸಂಘಟನೆಗಳು ಭೂಗತ ಹೋರಾಟಗಳ ಪ್ರತಿಭಟನೆಯ ತಂತ್ರವಾಗಿ ಹೆಚ್ಚು ಬಳಸಿವೆ. ಮಹಾತ್ಮ ಗಾಂಧಿ, ಸ್ವಾತಂತ್ರ್ಯ, ಪ್ರಜಾಪ್ರಭುತ್ವ ಕುರಿತ ಉಲ್ಲೇಖಗಳನ್ನು ಸಾಹಿತ್ಯದ ರೂಪದಲ್ಲಿ ಪ್ರಕಟಿಸುವುದು. ಇತರ ಸ್ವಾತಂತ್ರ್ಯ ಹೋರಾಟಗಾರರ ಸ್ವಾತಂತ್ರ್ಯ ಕುರಿತ ವ್ಯಾಖ್ಯಾನಗಳನ್ನು ಪ್ರಕಟಿಸುವುದು. ಗಾಂಧಿ ಇನ್ನಿತರ ಸ್ವಾತಂತ್ರ್ಯ ಹೋರಾಟಗಾರರ ಭಾವಚಿತ್ರಗಳ ಅಡಿಯಲ್ಲಿ ಸ್ವಾತಂತ್ರ್ಯ, ಪ್ರಜಾಪ್ರಭುತ್ವ, ಪ್ರತಿಭಟನೆಗೆ ಸಂಬಂಧಿಸಿದ ವ್ಯಾಖ್ಯಾನಗಳನ್ನು ಪ್ರಕಟಿಸಿ ಹಂಚುವುದು ಮೊದಲಾದವು. 'ದೇನ್ ಅಂಡ್ ನೌ' ಹೆಸರಿನಲ್ಲಿ ಜೆ.ಪಿ.

ಚಳವಳಿ ಸಂದರ್ಭದಿಂದ ತುರ್ತುಪರಿಸ್ಥಿತಿಯ ಎಲ್ಲ ಹಂತಗಳನ್ನು ಸ್ವಾತಂತ್ರ್ಯ ಹೋರಾಟದೊಡನೆ ಸಮೀಕರಿಸಲಾಗಿದೆ. ಅದರಲ್ಲಿಯೂ ಹೆಚ್ಚಾಗಿ ಪತ್ರಿಕಾ ಸ್ವಾತಂತ್ರ್ಯ ಮತ್ತು ಪೂರ್ವ ಸೆನ್ಸಾರ್‌ಶಿಪ್ ಕುರಿತಂತೆ ಚರ್ಚೆ ಭೂಗತ ಸಾಹಿತ್ಯ ಮತ್ತು ಭೂಗತ ಪತ್ರಿಕೆಗಳಲ್ಲಿ ಆಗಿಂದಾಗ್ಗೆ ಪ್ರಸ್ತಾಪವಾಗಿದೆ. ಈ ಕುರಿತಂತೆ "ಪತ್ರಿಕಾ ಸ್ವಾತಂತ್ರ್ಯವು ಪ್ರಜಾಪ್ರಭುತ್ವದ ಪ್ರಮುಖ ಸ್ತಂಭಗಳಲ್ಲೊಂದು"(ಕರ್ನಾಟಕ ನ್ಯೂಸ್ ಲೆಟರ್ಸ್ ೧೯೭೫ ಅಕ್ಟೋಬರ್ ೨೦)ಎಂಬ ವಿಚಾರ, ಪ್ರಜಾಪ್ರಭುತ್ವದ ಸ್ವರೂಪವನ್ನು ಪ್ರಶ್ನಿಸುತ್ತಲೆ ಪ್ರತಿಭಟನೆಯನ್ನು ಒಡ್ಡಿರುವುದು ಸಾಮಾನ್ಯವಾಗಿ ಕಂಡುಬರುವುದು.



ಕೃಪೆ: ರಾಷ್ಟ್ರೋತ್ಥಾನ ಸಾಹಿತ್ಯ ಪರಿಷತ್, ಬೆಂಗಳೂರು. ೧೯೭೫ರ ಅಕ್ಟೋಬರ್ ೨ರಂದು ಪ್ರತಿಭಟಿಸಲು ಬಳಸಿದ ಗಾಂಧಿ ಚಿತ್ರ, ಚಿತ್ರ ಸಂಖ್ಯೆ: ೩.೨೨.

೨. ಇತಿಹಾಸದಿಂದ ಆಯ್ದ ಭಾಗಗಳ ಬಳಕೆ. ಸಾಮಾನ್ಯವಾಗಿ ಪ್ರಸಿದ್ಧ ಹೋರಾಟಗಾರರು, ಆಡಳಿತಗಾರರ ಭಾಷಣಗಳನ್ನು ಒತ್ತಿ ಹೇಳುವ ಕರಪತ್ರಗಳ ಪ್ರಸಾರ ಕಾಣಬಹುದು. ಔರಂಗಜೇಬ್ ಮತ್ತು ಶಿವಾಜಿ ನಡುವಿನ ಯುದ್ಧ ಕುರಿತ ವಿಚಾರಗಳು, ಮಧ್ಯಕಾಲೀನ ಕರ್ನಾಟಕದಲ್ಲಿ ರಾಜ್ಯದ (ಸರ್ಕಾರ) ಭೂಮಿಯ ಒಡೆತನ ಕುರಿತ ಕೆಲವು ಆಯಾಮಗಳು(೧೩೩೬-೧೫೦೫) ಮುಂತಾದವು ಕಂಡುಬರುವುದು. ಸ್ವಾತಂತ್ರ್ಯ ಹೋರಾಟಗಾರರು ಹಾಗೂ ಸ್ವಾತಂತ್ರ್ಯೋತ್ತರ ಪ್ರಮುಖ ಆಡಳಿತ ಶಾಹಿಗಳ 'ಸ್ವಾತಂತ್ರ್ಯ' ಬಗೆಗಿನ ವ್ಯಾಖ್ಯಾನಗಳ ಕರಪತ್ರ ಹಂಚುವುದು ಒಂದು ತಂತ್ರವಾಗಿ ಬಳಕೆ ಆಗಿದೆ. 'ಪಂಡಿತ್ ನೆಹರೂರವರ ಆತ್ಮದ ಅಳಲಿಗೆ ಓಗೊಡಿ' ಎಂಬ ಕರಪತ್ರಗಳ ಪ್ರಸಾರ ಮೇಲಿನ ಚರ್ಚೆಗೆ ಪೂರಕವಾಗಿ ಕಂಡುಬರುವುದು. 'ಭಾರತದ ವಿಸ್ತೃತ ಇತಿಹಾಸ' ಎಂಬ ಲೇಖನದ ಪಕ್ಕದಲ್ಲಿ ನೆಹರು ಅವರ ಭಾಷಣದ ಉಲ್ಲೇಖವಿದೆ. ಇದರಲ್ಲಿ ಪ್ರತಿಪಕ್ಷಗಳ ಟೀಕೆ ಉತ್ತಮ ಕೆಲಸಕ್ಕೆ ಸಂಜೀವಿನಿಯ ಬಳಕೆ ಎಂಬ ವಿಚಾರವಿದೆ. ಅಲ್ಲಾವುದ್ದೀನ್ ಖಿಲ್ಜಿ ಭಾಷಣದ ಕೆಲವು ಸಾಲುಗಳನ್ನು ನೀಡಿ, ಮಧ್ಯದಲ್ಲಿ ಇಂದಿರಾ ಗಾಂಧಿ ಅವರ ಭಾಷಣ ಎನಿಸುತ್ತಿದೆಯಲ್ಲವೆ ಎಂದು ಭಾಷಣಕಾರರ ಹೆಸರನ್ನು ಹೇಳಲಾಗಿದೆ. ಕೆಳಗೆ ಸುಭಾಷಚಂದ್ರ ಬೋಸ್‌ರ ಸ್ವಾತಂತ್ರ್ಯದ ಅಗತ್ಯ ಮತ್ತು ಅದಕ್ಕಾಗಿ ತೆರಬೇಕಾಗುವ ಬೆಲೆ ಕುರಿತ ಭಾಷಣದ ಭಾಗವನ್ನು ಮುದ್ರಿಸಲಾಗಿದೆ. ಇವುಗಳನ್ನು ಸಮಕಾಲೀನ ರಾಜಕಾರಣದೊಂದಿಗೆ ಸಮೀಕರಿಸಿದೆ. ಮಹಾಜನ್ ಮೊಜುಂದಾರ್ ದತ್ ಅವರ 'ಭಾರತದ ವಿಸ್ತೃತ



ಕೃಪೆ: ರಾಷ್ಟ್ರೋತ್ಥಾನ ಸಾಹಿತ್ಯ ಪರಿಷತ್, ಬೆಂಗಳೂರು. ಚಿತ್ರ ಸಂಖ್ಯೆ: ೩.೨೩.

ಇತಿಹಾಸ' ಎಂಬ ಕೃತಿಯ ಭಾಗವನ್ನು ಬಳಸಲಾಗಿದೆ. ಇತಿಹಾಸದ ವಿಚಾರಗಳನ್ನು ಪ್ರತಿಭಟನೆಯ ಹಿನ್ನೆಲೆಯಲ್ಲಿ ವಿನ್ಯಾಸಗೊಳಿಸುವ ಮೂಲಕ ಭೂಗತ ಸಾಹಿತ್ಯದ ರೂಪದಲ್ಲಿ ಹಂಚಲಾಗುತ್ತಿತ್ತು.

೩. ಕವನ, ಕಥೆ ಮೊದಲಾದವು ಪರಿಸ್ಥಿತಿಗೆ ಅನುಗುಣವಾಗಿದ್ದಲ್ಲಿ ಬಳಸುವುದು. ಈ ಕವನಗಳು ಸಮಕಾಲೀನವಾಗಿ ಅಥವಾ ಮೊದಲೇ ಬರೆದಿದ್ದಾಗಿರಬಹುದು. ಏರ್ಯ ಲಕ್ಷ್ಮೀ ನಾರಾಯಣ ಆಳ್ವರ 'ಕತ್ತೆ ಸತ್ತು ಹೋಯಿತು',[೪೮] ರಸಿಕ ಪುತ್ತಿಗೆಯ 'ನ್ಯೂ ಟೈಪ್ ಪ್ರಶ್ನಪತ್ರಿಕೆ',[೪೯] ಮೋಹನರಾವ್ ಅವರ 'ಸುಗ್ಗಿ ನಡೆ ಮುಂದೆ', ಅಡಿಗರ 'ನಿನ್ನ ಗದ್ದೆಗೆ ನೀರು', ಜಯಪ್ರಕಾಶ್ ನಾರಾಯಣರ 'ಜಯಗೀತೆ' ಮುಂತಾದವನ್ನು ಭೂಗತ ಪತ್ರಿಕೆ, ಕರಪತ್ರಗಳಲ್ಲಿ ಪ್ರತಿಭಟನಾ ಸಾಹಿತ್ಯವಾಗಿ ಬಳಸಲಾಗಿದೆ. ಅತ್ಯಂತ ಹೆಚ್ಚು ಸಂಚಲನ ಉಂಟುಮಾಡಿದ ಹಾಗೂ ಈಗಲೂ ಭೂಗತ ಸಾಹಿತ್ಯ ಕುರಿತಂತೆ ಪ್ರಸ್ತಾಪವಾಗುವ ಕವನ ಹೀಗಿದೆ.

> ನನ್ನಪ್ಪನೂ ಸೇರಿ ಹೊತ್ತು ತಂದಿದ್ದ
> 'ಕತ್ತೆ' ಈಗ ಸತ್ತು ಹೋಯಿತಂತೆ
> ಹೀಗೆಂದು ಸುದ್ದಿ.
> ಇಲ್ಲದಿದ್ದರೂ. ಬದಲಾಗದ ಊರಲ್ಲಿ
> ಯಾರೂ ಸಾಯದಿರಲು ಸಾಧ್ಯವಿಲ್ಲ.
> ...
> ನಮ್ಮ ಊರಲ್ಲಿ ಅದಕ್ಕೆ 'ಅನ್ನ'ವಿರಲಿಲ್ಲ.
> ಅದಕ್ಕೆ 'ಅನ್ನ' ಒದಗಿಸಬಲ್ಲ 'ವೃಕ್ಷ'ಗಳು ಬೆಳೆದಿಲ್ಲ
> 'ಬೀಜ'ಗಳು ಸಾಕಷ್ಟಿರುವುದೇನೊ ಸುಳ್ಳಲ್ಲ.
> ಅದರ ಶೇಕಡಾ ಎಂಭತ್ತು ಹುಟ್ಟಲೇ ಇಲ್ಲ.
> ...
> ಆದರೂ,
> ಕೆಲ ಮಂದಿ ಮೌನವಾಗಿ ವಿಲಾಪಿಸುತ್ತಾ
> ಕಣ್ಣೀರು ಸುರಿಸುತ್ತಾ, ಹೃದಯದಲ್ಲಿ ಬೇಯುತ್ತಾ
> ಮತ್ತೆ ಹೊಸ ಕತ್ತೆಯ ತರಲು ಹೊರಟಿದ್ದಾರಂತೆ.
> ಶ್ಲಾಘನೀಯ. ಶ್ಲಾಘನೀಯ 'ಕತ್ತೆ'ಯ ಮೇಲೆ
> ಅವರಿಗಿರುವ ಅಪಾರ ಅಭಿಮಾನ(ಆಳ್ವ ೧೯೭೫ ಆಗಸ್ಟ್ ೩೦).

ಕತ್ತೆ ಇಲ್ಲಿ ಪ್ರಜಾಪ್ರಭುತ್ವದ ಸಂಕೇತ. ಪುನಃ ತರಲು ಹೊರಟಿರುವುದು ತುರ್ತುಪರಿಸ್ಥಿತಿಯ ವಿರುದ್ಧ ಪ್ರಜಾಪ್ರಭುತ್ವಕ್ಕಾಗಿ ನಡೆಸುತ್ತಿರುವ ಹೋರಾಟಗಾರರ ಕುರಿತಾಗಿದೆ. ಪ್ರಜಾಪ್ರಭುತ್ವ ಹೊರನಾಡಿನ ವ್ಯವಸ್ಥೆ. ಅಳವಡಿಸಿಕೊಳ್ಳುವಲ್ಲಿ ನಾವು ಸೋಲುತ್ತಿದ್ದೇವೆ. ಉಳಿಸಿಕೊಳ್ಳಲು ಬೇಕಾದ ಅರ್ಹತೆ, ಜ್ಞಾನ, ಶಕ್ತಿ ಎಲ್ಲರಲ್ಲೂ ಇರಬೇಕು. ಆಗ ಮಾತ್ರ ಪ್ರಜಾಪ್ರಭುತ್ವ ಉಳಿಯಲು ಸಾಧ್ಯ. ಅದು ನಿರಂತರ ಪ್ರಯತ್ನವಾಗಿರಬೇಕು ಎಂಬ ವಿಚಾರಗಳಿವೆ. ಈ ವಿಚಾರಗಳು ಸಮಕಾಲೀನವಾಗಿ ಸಮಾಜದ ಹಲವು ವರ್ಗಗಳಲ್ಲಿ ಕಂಡುಬರುತ್ತಿದ್ದವು.

೪. ಪ್ರಶ್ನೆಗಳನ್ನು ಕೇಳುತ್ತ ಸರ್ಕಾರದ ನಿರ್ಧಾರಗಳನ್ನು ವಿರೋಧಿಸುವುದು. 'ಇಂದಿರಾ ಗಾಂಧಿಯವರಿಗೆ ಭಾರತದ ಜನಕೋಟಿಯ ಆದೇಶ' ಎಂಬ ಕರಪತ್ರವನ್ನು ನೋಡಬಹುದು. ಈ ಲಕ್ಷಣವನ್ನು ಇಂಗ್ಲಿಶ್ ಭಾಷೆಯ ಕರಪತ್ರಗಳಲ್ಲಿಯೂ ಕಾಣಬಹುದು. 'ತುರ್ತುಪರಿಸ್ಥಿತಿಯ ಘೋಷಣೆ ದೇಶದ ರಕ್ಷಣೆಗೊ ಅಥವಾ ಅವರ ವೈಯಕ್ತಿಕ ಕಾರಣಕ್ಕೋ ?, ಜೆ.ಪಿ. ಬಂಧನ ಕುರಿತು ಹಾಗೂ ತುರ್ತುಪರಿಸ್ಥಿತಿ ಘೋಷಣೆಗೆ ಜೆ.ಪಿ. ಮತ್ತು ಜಾರ್ಜ್ ಫರ್ನಾಂಡಿಸ್‌ರನ್ನು ಪ್ರಮುಖ ಕಾರಣಕರ್ತರನ್ನಾಗಿಸುವುದು' ಮುಂತಾದ ಪ್ರಶ್ನೆಗಳು ಸಾಮಾನ್ಯವಾಗಿ ಕಂಡುಬರುತ್ತಿದ್ದವು. 'ವಿರೋಧ ಪಕ್ಷಗಳು ಹಿಂಸಾತ್ಮಕ ದಂಗೆ ಹೂಡಿದ್ದವೆ ?, ಪ್ರಜಾತಂತ್ರದ ರಕ್ಷಣೆಗಾಗಿ ತುರ್ತುಪರಿಸ್ಥಿತಿ, ತುರ್ತುಪರಿಸ್ಥಿತಿ ವಿರೋಧಿಸಿ ಬರುತ್ತಿರುವ ಪ್ರತಿಭಟನೆಗಳು ಕಾಣುತ್ತಿಲ್ಲವೆ ?, ದೇಶದ ಜನತೆ ಸ್ವೀಕರಿಸಿದೆ' ಮುಂತಾದವುಗಳಲ್ಲಿ ಸರ್ಕಾರವನ್ನು ಪ್ರಜಾತಂತ್ರದ ನೆಲೆಯಲ್ಲಿ ಪ್ರಶ್ನಿಸಲಾಗಿದೆ. ಕೆಲವು ಕರಪತ್ರಗಳ ಹಿಂಭಾಗದಲ್ಲಿ ಸ್ವಾತಂತ್ರ್ಯ ಹರಣವಾಗಿದ್ದು, ಅದನ್ನು ಪುನಃ ಪಡೆಯಲು ಕರೆ ನೋಡಬಹುದು. 'ಬೇಕಾಗಿದ್ದಾರೆ'(ಚಿತ್ರ-೧೫) ಎಂಬ ಜಾಹೀರಾತಿನಲ್ಲಿ ದೇಶದ ಸ್ವಾತಂತ್ರ್ಯಕ್ಕಾಗಿ ತಮ್ಮನ್ನು

ಅರ್ಪಿಸುವ ಯುವಜನತೆ ಎಂದಿದೆ. ಅದಕ್ಕೆ ಸಂಬಳ ಜೈಲುವಾಸ, ದೈಹಿಕ ಹಿಂಸೆಗಳು ದೊರಕುತ್ತವೆ ಎಂಬ ವಿಡಂಬನೆ ಯುವಜನತೆಯನ್ನು ಹೋರಾಟದಲ್ಲಿ ಭಾಗವಹಿಸಲು ಪ್ರಚೋದಿಸುವಂತಿದೆ. ಇಂತಹ ಜಾಹೀರಾತುಗಳನ್ನು ಪ್ರತ್ಯೇಕ ಕರಪತ್ರಗಳಾಗಿ ಕೂಡ ಹಂಚಲಾಗುತ್ತಿತ್ತು.

ಶ್ರೀಮತಿ ಇಂದಿರಾ ಗಾಂಧಿಯವರಿಗೆ
ಭಾರತದ ಜನತೆಯಿಂದ ಆದೇಶ

ಇದನ್ನು ಲೋಕ ಸಂಘರ್ಷ ಸಮಿತಿ ಪ್ರಕಟಿಸಿದೆ. ಕೃಪೆ : ರಾಷ್ಟ್ರೋತ್ಥಾನ ಸಾಹಿತ್ಯ ಪರಿಷತ್, ಬೆಂಗಳೂರು. ಚಿತ್ರ ಸಂಖ್ಯೆ: ೩.೨೯

([illegible])

೨೫. ಘೋಷಣೆಗಳ ಬಳಕೆ ಮತ್ತೊಂದು ಮುಖ್ಯ ತಂತ್ರ. 'ಹುರು ಹುಳ ಹೈ ಜಂಗ್ ಹಮಾರಾ! ಜಿಂದಾ ರಹಾ ಹೈ ಯುವಕ್ ಹಮಾರಾ!. ಪ್ಯಾರ್ ಸೆ ಬೋಲೋ ಜೋರ್ ಸೆ ಬೋಲೋ ಬಾಪು ಜೆ.ಪಿ. ಜಿಂದಾಬಾದ್. ಜೋರ್ ಸೆ ಬೋಲೋ ರೋಷ್ ಸೆ ಬೋಲೋ ತಾನಾಶಾಹಿ ಮುರ್ದಾಬಾದ್. ಗೆಳೆಯ! ಏಳು. ಒಡಿದೇಳು. ಗಾಂಧಿ ಮಾರ್ಗ ಮರೆಯದಿರಿ. ಕಾಲ ಮಿಂಚುವ ಮುನ್ನ ಸಿದ್ಧನಾಗು. ಪೌರುಷ ಪ್ರಕಟಿಸು ಆಗ ಗೆಲುವು ನಿನ್ನನ್ನು ಚುಂಬಿಸೀತು. ಆಗೋ, ಅಲ್ಲಿ! ಸೆರೆಮನೆಯ ಕಪ್ಪು ಕಂಬಿಗಳ ಹಿಂದೆ ಬಿದ್ದಿರುವ ಬಂಧುಭಗಿನಿಯರೆ!. ಮುನ್ನುಗ್ಗಿ, ನೋಡು! ನಿಶಾಂತ್-ನಿಶಾಂತ್. ವಂದೇ ಮಾತರಂ' ಮೊದಲಾದವುಗಳನ್ನು ಕಾಣಬಹುದು. ಈ ಘೋಷಣೆಗಳು ಈಗಾಗಲೇ ಚರ್ಚಿಸಿರುವಂತೆ ಉದ್ರೇಕಕಾರಿ, ಭಾವನಾತ್ಮಕ, ಪ್ರಚೋದನೆ ಉಂಟುಮಾಡುವಂತಿದೆ. ಕರಪತ್ರದ ಶೀರ್ಷಿಕೆ ಮತ್ತು ಕೆಲವು ಘೋಷಣೆಗಳು ಹಿಂದಿಯಲ್ಲಿದೆ. ಕರಪತ್ರ ಕೊನೆಯಾಗುವಾಗ ನಿಶಾಂತ್ ಎಂಬ ಪದದ ಬಳಕೆಯು ಇದನ್ನೇ ಸೂಚಿಸುವುದು. ಭಾಷಾ ಬಳಕೆಯಲ್ಲಿ ಹಿಂದಿ ಘೋಷಣೆಗಳ ಯಥಾವತ್ ಬಳಕೆ ಬಹಳ ಕಡೆ ಕಂಡುಬರುವುದು. ಬಹುತೇಕ ಘೋಷಣೆಗಳು ಹಿಂದಿಯ ಅನುವಾದಿತ ಎಂಬಂತೆ ಕನ್ನಡ ಕರಪತ್ರಗಳಲ್ಲಿ ಛಾಯೆ ಎದ್ದು ಕಾಣುವುದು. ಇಂತಹ ಕರಪತ್ರಗಳನ್ನು

ಹುರು ಹುಳ ಹೈ ಜಂಗ್ ಹಮಾರಾ ! ಜಿಂದಾ ರಹಾ ಹೈ ಯುವಕ್ ಹಮಾರಾ !

ಆಗೋ, ಅಲ್ಲಿ ! ಸೆರೆಮನೆಯ ಕಪ್ಪು ಕಂಬಿಗಳ ಹಿಂದೆ ಬಿದ್ದಿರುವ ಬಂಧುಭಗಿನಿಯರು !
ಮುನ್ನುಗ್ಗು, ನೋಡು : ನಿಶಾಂತ್ — ನಿಶಾಂತ್. ವಂದೇ ಮಾತರಂ.

ಕೃಪೆ : ರಾಷ್ಟ್ರೋತ್ಥಾನ ಸಾಹಿತ್ಯ ಪರಿಷತ್, ಬೆಂಗಳೂರು. ಚಿತ್ರ ಸಂಖ್ಯೆ : ೩.೩೦.

ಹೊರತಂದಿರುವುದು ಆರ್.ಎಸ್.ಎಸ್ ಮತ್ತು ಸಹ ಸಂಘಟನೆಗಳಾಗಿವೆ. ಈ ಸಂಘಟನೆ ಹಿಂದಿಯನ್ನು ರಾಷ್ಟ್ರ ಭಾಷೆಯನ್ನಾಗಿ ಆರಂಭದಿಂದಲೂ ಒಪ್ಪಿಕೊಂಡಿದೆ. ಕರ್ನಾಟಕದಲ್ಲಿ ಕಂಡು ಬರುವ ಭಾಷಾ ಚಳವಳಿಗಳು ೧೯೭೦ರ ದಶಕದ ಆರಂಭದ ಹೊತ್ತಿಗೆ ಕಾವು ಕಳೆದುಕೊಂಡಿದ್ದು, ಮತ್ತೆ ತೀವ್ರವಾಗಿ ಕಂಡುಬರುವುದು ೧೯೮೦ರ ದಶಕದ ಆರಂಭದಲ್ಲಿ. ತುರ್ತುಪರಿಸ್ಥಿತಿ ಕಾಲದಲ್ಲಿ ಕನ್ನಡ ಭಾಷಾ ಹೋರಾಟಗಾರರು ಹೆಚ್ಚಾಗಿ ವಿರೋಧಿಸಲಿಲ್ಲ ಎಂಬುದು ಗಮನಾರ್ಹ ಅಂಶ. ಆದರೆ ಸಾಹಿತ್ಯ ವಲಯದಲ್ಲಿ ಬೃಹತ್ ಪ್ರಮಾಣದಲ್ಲಿ ಬದಲಾವಣೆಗಳು ಕಂಡುಬಂದವು. ಜೊತೆಗೆ ೧೯೭೭ರ ನಂತರದಲ್ಲಿ ಹಿಂದಿ ಹೇರಿಕೆ ವಿರುದ್ಧ ದಕ್ಷಿಣ ಭಾರತದ ರಾಜ್ಯಗಳು ಬೃಹತ್ ಪ್ರಮಾಣದಲ್ಲಿ ಪ್ರತಿಭಟಿಸಿದ್ದನ್ನು ಗಮನಿಸಬಹುದು.

ಭೂಗತ ಹೋರಾಟಗಾರರು ಸಂಬಂಧಿಕರಿಗೆ ಬರೆದ ಪತ್ರಗಳು, ಇತರ ಹೋರಾಟಗಾರರಿಗೆ ಬರೆದ ಪತ್ರಗಳು, ವಿದೇಶದಲ್ಲಿ ಸಮಕಾಲೀನ ಭೂಗತ ಹೋರಾಟಗಳ ಸುದ್ದಿಗಳು ಮುಂತಾದವುಗಳನ್ನು ತಂತ್ರಗಳಾಗಿ ಪ್ರಚಾರಕ್ಕೆ ಬಳಸಿರುವುದು ಕಂಡುಬರುವುದು. ಇದರಲ್ಲಿನ ಕೆಲವು ತಂತ್ರಗಳು ಸ್ವಾತಂತ್ರ್ಯ ಹೋರಾಟಗಳಲ್ಲಿ ಮತ್ತು ಆ ಸಂದರ್ಭದ ಇತರ ರಾಷ್ಟ್ರಗಳಲ್ಲಿ ನಡೆಯುತ್ತಿದ್ದ ಭೂಗತ ಹೋರಾಟಗಳಲ್ಲಿ ಬಳಸುತ್ತಿದ್ದಂತವುಗಳು. ಎಡಪಂಥೀಯ ಭೂಗತ ಸಾಹಿತ್ಯಗಳು ಹೆಚ್ಚು ವಿದೇಶಿ ಭೂಗತ ಹೋರಾಟದ ಸಾಹಿತ್ಯದಿಂದ ಪ್ರೇರಣೆಯನ್ನು ಪಡೆದಿದ್ದವು. ಇಲ್ಲಿಯೂ ಪ್ರಜಾಪ್ರಭುತ್ವ, ಸ್ವಾತಂತ್ರ್ಯ, ಮೂಲಭೂತ ಹಕ್ಕುಗಳು, ಭೂಗತ ಹೋರಾಟಗಾರರ ಚಟುವಟಿಕೆಗಳಿಗೆ ಸಲಹೆಗಳು, ಸರ್ಕಾರದ ನೀತಿಗಳನ್ನು ಕುರಿತಂತಹ ವಿಚಾರಗಳು, ಚಿಂತನೆಗಳು ಕೆಲವು ಬಾರಿ ಆಕ್ರೋಶಭರಿತವಾಗಿರುತ್ತಿದ್ದವು. ಆದರೆ ಧಾರ್ಮಿಕ ಅಂಶಗಳು ಹೆಚ್ಚು ಕಂಡುಬರುವುದಿಲ್ಲ. ಭೂಗತ ಹೋರಾಟಗಾರರಿಗೆ ಸಹಕಾರ ನೀಡುವ, ಪೂರ್ಣವಾಗಿ ಹೋರಾಟದಲ್ಲಿ ತೊಡಗಿಸಿಕೊಳ್ಳದಿರುವ ವರ್ಗಗಳನ್ನು ಕಾಣಬಹುದಾಗಿದೆ. ಭೂಗತ ಹೋರಾಟದ ಮೇಲೆ ಈ ವರ್ಗದ ಪ್ರಭಾವವನ್ನು ಕಡೆಗಣಿಸುವಂತಿಲ್ಲ.

### ೩.೨.೧.೨. ಪರೋಕ್ಷ ಪ್ರತಿಭಟನೆಯ ಸ್ವರೂಪಗಳು ಮತ್ತು ಪ್ರಕ್ರಿಯೆಗಳು

ಭೂಗತ ಹೋರಾಟದ ಮತ್ತೊಂದು ಪ್ರಮುಖ ಭಾಗ ಪರೋಕ್ಷವಾಗಿ ಪ್ರತಿಭಟನೆಗಳಲ್ಲಿ ತೊಡಗಿಕೊಂಡಿದ್ದವರು. ಭೂಗತ ಹೋರಾಟಗಾರರಿಗೆ ಹಣ, ವಾಸ ತಾಣಗಳನ್ನು ಮತ್ತು ಕರಪತ್ರಗಳ ಮುದ್ರಣ, ಪ್ರತಿಗಳ ರಚನೆ ಮೊದಲಾದ ಕಾರ್ಯಗಳಲ್ಲಿ ಸಹಕಾರ ನೀಡುವ, ಆದರೆ ಭೂಗತ ಹೋರಾಟದಲ್ಲಿ ತಮ್ಮನ್ನು ತೊಡಗಿಸಿಕೊಳ್ಳದ ವರ್ಗ. ಈ ವರ್ಗದ ಪಾತ್ರದ ಸ್ವರೂಪವನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ.

ಭೂಗತ ಹೋರಾಟಗಳಲ್ಲಿ ಜನಸಾಮಾನ್ಯರ ಪಾಲ್ಗೊಳ್ಳುವಿಕೆ, ಗುರುತಿಸಿಕೊಳ್ಳುವ ಪ್ರಮಾಣ ಸಾಮಾನ್ಯವಾಗಿ ಕಡಿಮೆ ಇರುವುದು. ಭೂಗತ ಹೋರಾಟಗಳಿಗೆ ಸಮಾಜದ ಕೆಲವು ವರ್ಗಗಳ ಪರೋಕ್ಷ ಸಹಕಾರವಿದ್ದು, ಪ್ರೋತ್ಸಾಹಿಸುವುದನ್ನು ಕಾಣಬಹುದು. ಈ ದಿಸೆಯಲ್ಲಿ 'ಭೂಗತರಿಗೆ ವ್ಯವಸ್ಥಿತವಾಗಿ ಸಂಘಟನೆಯಾಗಲು ಕೆಲವು ಸಮಯ ಹಿಡಿಯಿತು. ಆದರೆ ರಾಜಕೀಯ ಸಂಘಟನೆಗಳಾದ ಜನಸಂಘ ಮತ್ತು ಆರ್‌ಎಸ್‌ಎಸ್ ಮೊದಲಾದವರು ... ಚಳವಳಿಯನ್ನು ಹೆಚ್ಚು ಜೀವಂತವಾಗಿಟ್ಟರು. ಇವರು ಸಣ್ಣ ಗುಂಪುಗಳಲ್ಲಿ ಜನರಿಗೆ ಮಾಹಿತಿಯನ್ನು, ಗಾಳಿಸುದ್ದಿಯನ್ನು ಪ್ರಸಾರ ಮಾಡುತ್ತ ಸರ್ಕಾರದ ಧೈರ್ಯಗುಂದಿಸುವುದಕ್ಕೆ ಒತ್ತುಕೊಟ್ಟರು. ದೊಡ್ಡಸಭೆಗಳು, ಮೆರವಣಿಗೆಗಳನ್ನು ಪ್ರೋತ್ಸಾಹಿಸಲಿಲ್ಲ. ಇದು ಸಮಸ್ಯೆಯನ್ನು ಹುಟ್ಟುಹಾಕುವ ಸಾಧ್ಯತೆಗಳಿದ್ದವು' ಎಂದು ದು.ಗು.ಲಕ್ಷ್ಮಣ್[೫೦] ಅವರು 'ಆ ಕಹಿ ನೆನಪುಗಳ ಮರೆಯುವುದೆಂತು !' ಲೇಖನದಲ್ಲಿ ಪ್ರತಿಭಟನೆಗಳ ಸ್ವರೂಪ ವಿವರಿಸುವರು. ಸುದ್ದಿಮಾಧ್ಯಮಗಳು ಸೆನ್ಸಾರ್‌ನಿಂದಾಗಿ ನಿಜವನ್ನು ಪ್ರಕಟಿಸಲಾಗದಿದ್ದಾಗ ಗಾಳಿಸುದ್ದಿಗಳನ್ನಾದರೂ ಪ್ರಕಟಿಸಿ, ಹಲವರಿಗೆ ತಲಪಿಸುವ ಪ್ರಯತ್ನ ಕುರಿತ ಮೆಚ್ಚುಗೆ ಸಾಮಾನ್ಯವಾಗಿ ಭೂಗತ ಪತ್ರಿಕೆಗಳಿಗೆ ದೊರಕುವುದು. ಇದಕ್ಕೆ ಪೂರಕವಾಗಿ ಸುದ್ದಿ ಮಾಧ್ಯಮಗಳಲ್ಲಿ[೫೧] ಕಾರ್ಯನಿರ್ವಹಿಸುತ್ತಿದ್ದ ಹಲವು ಪತ್ರಕರ್ತರು ಭೂಗತರೊಂದಿಗೆ ಸಂಪರ್ಕ ಹೊಂದಿದ್ದರು. ಭೂಗತ ಪತ್ರಿಕೆ ಮತ್ತು ಭೂಗತ ಸಾಹಿತ್ಯದ ಪ್ರತಿಗಳನ್ನು ತಯಾರುಮಾಡುವಲ್ಲಿ ಸಹಕರಿಸುತ್ತಿದ್ದರು. ಭೂಗತ ಹೋರಾಟದ ವಿಸ್ತೃತ ಜಾಲ ಹೊಂದಿದ್ದವರು ಬಲಪಂಥೀಯ ಸೈದ್ಧಾಂತಿಕ ಧೋರಣೆ ಉಳ್ಳವರಾಗಿದ್ದರೂ ವೈಯಕ್ತಿಕ

ಪ್ರತಿಭಟನೆಗಳಲ್ಲಿ ತೊಡಗಿಕೊಂಡಿದ್ದ ಪ್ರಗತಿಪರರು, ಮಧ್ಯಪಂಥೀಯರು, ಸಮಾಜವಾದಿಗಳು ಇನ್ನಿತರರು ಸೈದ್ಧಾಂತಿಕ ಭಿನ್ನಾಭಿಪ್ರಾಯಗಳನ್ನು ಬದಿಗಿರಿಸಿ ಈ ಸಂಘಟನೆಗಳ ಕಾರ್ಯಚಟುವಟಿಕೆಗಳಿಗೆ ಪೂರಕವಾದ ಸಹಕಾರ ನೀಡುತ್ತಿದ್ದವರು. ಸಮಾಜದ ಅನೇಕ ವಲಯಗಳು ಸಹಕರಿಸುತ್ತಿದ್ದವು ಎಂಬುದಕ್ಕೆ ಭೂಗತ ಹೋರಾಟಗಾರರ ಅನುಭವಗಳ ಕಥನವೇ ದೊಡ್ಡ ಆಕರ.

ಭೂಗತ ಹೋರಾಟಕ್ಕೆ ತುರ್ತುಪರಿಸ್ಥಿತಿಯ ಅವಧಿಯಲ್ಲಿ ಆರ್.ಎಸ್.ಎಸ್. ಖರ್ಚು ಮಾಡಿದ ಮೊತ್ತ ೮ ಲಕ್ಷ ರೂಪಾಯಿಗಳು ಎಂದು ಪುಸ್ತಕದಲ್ಲಿ ದಾಖಲಾಗಿದೆ. ಭೂಗತ ಹೋರಾಟಕ್ಕೆ ಬೇಕಾದ ಹಣದ ಸಂಗ್ರಹಣೆ ನಡೆಯುತ್ತಿದ್ದ ಪ್ರಕ್ರಿಯೆ ಪರೋಕ್ಷವಾಗಿ ಭೂಗತ ಹೋರಾಟದಲ್ಲಿ ಭಾಗಿಯಾಗಿದ್ದವರ ಮೇಲೆ ಬೆಳಕು ಹರಿಸುವುದು. ಸಹಕಾರ ನೀಡುತ್ತಿದ್ದವರನ್ನು ವಿಶಾಲವಾಗಿ ದೇಶಿಯ ಮತ್ತು ವಿದೇಶಿಯ ಮೂಲಗಳು ಎಂದು ವಿಂಗಡಿಸಬಹುದಾಗಿದೆ. ದೇಶಿಯ ಮೂಲಗಳಲ್ಲಿ ಸ್ಥಳೀಯರಿಂದಲೆ ಮತ್ತು ಇತರ ಪ್ರಾಂತ್ಯಗಳಲ್ಲಿ ಸಂಘಟನೆಯ ಮೂಲಕ ಹಣ ಸಂಗ್ರಹವಾಗುತ್ತಿತ್ತು. ಧಾರ್ಮಿಕ ಕಾರ್ಯಕ್ರಮ, ಕೆಲವು ಮಠಮಾನ್ಯಗಳು, ಸಣ್ಣಸಣ್ಣ ಊರು, ಹಳ್ಳಿಗಳಲ್ಲಿ ನೀಡುತ್ತಿದ್ದ ಕಾಣಿಕೆಗಳು, ಸತ್ಯಾಗ್ರಹಿಗಳು, ಪ್ರತಿಭಟನೆಯನ್ನು ಪ್ರೋತ್ಸಾಹಿಸುವವರು ಮೊದಲಾದ ಮೂಲಗಳ ಮೂಲಕ ಸಂಘರ್ಷ ನಿಧಿಯ ಹೆಸರಿನಲ್ಲಿ ಆರ್.ಎಸ್.ಎಸ್. ಹಣ ಸಂಗ್ರಹಿಸುತ್ತಿತ್ತು. ಸಮಾಜವಾದಿ ಭೂಗತ ಹೋರಾಟಗಾರರು ಭಾರತದಾದ್ಯಂತ ವಿವಿಧ ಮೂಲಗಳಿಂದ ಹಣ ಸಂಗ್ರಹಿಸುತ್ತಿದ್ದ ಕುರಿತು ಮಾಹಿತಿ ದೊರೆಯುವುದು. ಆದರೆ ಹೆಚ್ಚಿನ ವಿಚಾರ ತಿಳಿದುಬಂದಿಲ್ಲ.

> ಅಂತರ್ ರಾಷ್ಟ್ರೀಯ ಸಮಾಜವಾದಿಗಳ ಸಂಘಟನೆಯು 'ಶಾಶ್ವತ ಧನ'ವನ್ನು – ಮಿಸಸ್. ಇಂದಿರಾ ಗಾಂಧಿ ಸರ್ಕಾರದ ವಿರುದ್ಧ ಪ್ರತಿಗಾಮಿ ಶಕ್ತಿಗಳು ಪ್ರಸ್ತುತ ಚಟುವಟಿಕೆಗಳನ್ನು ನಡೆಸಲು ಮೀಸಲಾಗಿಟ್ಟಿದೆ(ಪೇಟ್ರಿಯಟ್, ೩೦ ನವೆಂಬರ್ ೧೯೭೫).

ಸಮಾಜವಾದಿ ಪಕ್ಷಗಳಿಗೆ ವಿದೇಶಿ ಮೂಲದಿಂದ ಬರುತ್ತಿದ್ದ ಧನ ಸಹಾಯ ಕುರಿತು ಮಾಹಿತಿ ನೀಡುವುದು. ಇದರೊಡನೆ ಎಲ್ಲರಿಗೂ ಹಣ ಸಂಗ್ರಹದಲ್ಲಿ ಪರೋಕ್ಷವಾಗಿ ಸಹಕರಿಸುತ್ತಿದ್ದ ಮುಖ್ಯವಾದ ಮತ್ತೊಂದು ಮೂಲ ಅನಿವಾಸಿ ಭಾರತೀಯರು.

ವಿದೇಶಗಳಲ್ಲಿನ ಅನಿವಾಸಿ ಭಾರತೀಯರು ಮತ್ತು ಸಂಘಟನೆಗಳು ಪ್ರಜಾಪ್ರಭುತ್ವದ ರಕ್ಷಣೆಗಾಗಿ ಭೂಗತ ಹೋರಾಟಗಾರರಿಗೆ ಪರೋಕ್ಷವಾಗಿ ಸಹಕಾರವನ್ನು ಬೇರೆಬೇರೆ ಸ್ವರೂಪಗಳಲ್ಲಿ ನೀಡುತ್ತಿದ್ದವು.

> ಫ್ರೆಂಡ್ಸ್ ಆಫ್ ಇಂಡಿಯಾ ಸೊಸೈಟಿ ಇಂಟರ್‌ನ್ಯಾಷನಲ್(ಎಫ್ಐಎಸ್ಐ) ಸಂಘಟನೆಯು ಮೂಲಕ ವಿದೇಶಗಳಲ್ಲಿ ಇರುವ ಸ್ವಯಂಸೇವಕರು ಆಂತರಿಕ ತುರ್ತುಪರಿಸ್ಥಿತಿ ಸಂದರ್ಭದಲ್ಲಿ ಮಹತ್ವದ ಪಾತ್ರ ನಿರ್ವಹಿಸಿದ್ದಾರೆ. ಎಲ್ಲ ರೀತಿಯಲ್ಲಿ ಹೊರಗಡೆಯಿಂದ ಭೂಗತ ಹೋರಾಟಗಳಿಗೆ ಸಾಧ್ಯವಾಗುವ ಸಹಕಾರ ನೀಡಿದ್ದಾರೆ. ಮುಖ್ಯವಾಗಿ ಕಾರ್ಯನಿರ್ವಹಿಸುತ್ತಿದ್ದ ಎರಡು ಗುಂಪುಗಳೆಂದರೆ, 'ಇಂಡಿಯನ್ಸ್ ಫಾರ್ ಡೆಮಾಕ್ರಸಿ'(ಯುನೈಟೆಡ್ ಸ್ಟೇಟ್ಸ್ ಆಫ್ ಅಮೇರಿಕ) ಮತ್ತು 'ಫ್ರೆಂಡ್ಸ್ ಆಫ್ ಇಂಡಿಯಾ ಸೊಸೈಟಿ'(ಯುನೈಟೆಡ್ ಕಿಂಗ್ ಡಮ್). ಈ ಸಂಘಟನೆಗಳು ಭೂಗತ ಚಳವಳಿಯಲ್ಲಿದ್ದ ನಾಯಕರನ್ನು ವಿದೇಶಗಳಲ್ಲಿ ಪ್ರವಾಸ ಮಾಡಲು, ಇಂಟೆಲಿಜೆನ್ಸ್‌ಗೆ ಮಾಹಿತಿ ಹೋಗದಂತೆ ಹಾಗೂ ಹೋರಾಟವನ್ನು ಹೆಚ್ಚಿಸಲು ಸ್ವಯಂಕಾರ್ಯ ನಿರ್ವಹಿಸುತ್ತಿದ್ದವು. ಅಮೆರಿಕಾದ 'ನ್ಯೂಸ್ ವೀಕ್'ನಲ್ಲಿದ್ದ ಡಾಕ್ ಅಂಡರ್ಸನ್ ಮತ್ತು ಡಾರ್ಜ್ ಲೈಯುಲ್ ಎಂಬ ವಿದೇಶಿ ಸುದ್ದಿಗಾರರು ಭಾರತದಲ್ಲಿ ನಿಜವಾಗಿ ಆಗುತ್ತಿದ್ದದ್ದೇನು ಎಂಬುದರ ಬಗ್ಗೆ ಸಾಕಷ್ಟು ಮಾಹಿತಿ ಕೊಡುತ್ತಿದ್ದರು. ಈ ಫೋರಮ್‌ಗಳು ಭಾರತದಲ್ಲಾಗುತ್ತಿದ್ದ ಸರ್ವಾಧಿಕಾರವನ್ನು ಪ್ರಪಂಚದ ಕಣ್ಣಿನಲ್ಲಿ ಬಹಿರಂಗಪಡಿಸಲು ಕಾರ್ಯ ನಿರ್ವಹಿಸುತ್ತಿದ್ದವು. ತುರ್ತುಪರಿಸ್ಥಿತಿ ಕೊನೆಗೊಂಡ ನಂತರ ಈ ಗುಂಪುಗಳು 'ಫ್ರೆಂಡ್ಸ್ ಆಫ್ ಇಂಡಿಯಾ ಸೊಸೈಟಿ ಇಂಟರ್ ನ್ಯಾಷನಲ್‌ನಲ್ಲಿ ವಿಲೀನಗೊಂಡವು' (www.sabrang.com/news/zahirsajad.htm ೨೦೦೨ ಅಕ್ಟೋಬರ್).

ಅನಿವಾಸಿ ಭಾರತೀಯರು ಭೂಗತ ಹೋರಾಟಗಾರರಿಗೆ ಸಹಕಾರ ನೀಡಲು ಸ್ವಯಂ ರೂಪಿಸಿಕೊಂಡಿದ್ದ ಸಂಘಟನೆಗಳ ಸ್ವರೂಪ ಹಾಗೂ ಕಾರ್ಯನೀತಿಗಳನ್ನು ವಿವರಿಸಲಾಗಿದೆ. ಇದಕ್ಕೆ ಪೂರಕವಾಗಿ '೮ ಪಾಯಿಂಟ್ ಪ್ರೋಗ್ರಾಮ್ ಫಾರ್ ಇಂಡಿಯನ್ಸ್ ಅಬ್ರಾಡ್' ಎಂಬ ಮನವಿಪತ್ರದ ಮೂಲಕ ವಿದೇಶಗಳಿಂದ ಭೂಗತ ಹೋರಾಟಗಾರರಿಗೆ ಸಹಕಾರ ಕೋರಲಾಗಿತ್ತು.

> .... ಹಲವಾರು ಅವಕಾಶಗಳು ತೆರೆದಿವೆ. ನೀವು ಈ ಚಳುವಳಿಯೊಡನೆ ನಿಮ್ಮನ್ನು ಗುರುತಿಸಿಕೊಳ್ಳುವುದಾದರೆ:
>
> ೧. ಭಾರತದಲ್ಲಿ ನಾಗರಿಕ ಹಕ್ಕುಗಳಿಗಾಗಿ ಸಮಿತಿಗಳನ್ನು ರಚಿಸಿಕೊಳ್ಳುವುದು ಮತ್ತು ನಿಮ್ಮ ಮನೆಯನ್ನು ರಾಷ್ಟ್ರ ಮಟ್ಟದಲ್ಲಿ ಇದರ ಕನ್‌ವೆನರ್ ಆಗಿ ಮಾಡುವುದು.
>
> ೨. ಕಾರಣಾಂತರಗಳಿಂದ ನೀವೇ ಇದರೊಳಗೆ ನಿಮ್ಮನ್ನು ತೊಡಗಿಸಿಕೊಳ್ಳಲು ಸಾಧ್ಯವಾಗದಿದ್ದರೆ, ಭಾಗವಹಿಸಲು ಇಂತಹ ಸಮಿತಿಗಳನ್ನು ರಚಿಸಲು ಭಾರತೀಯ ಮತ್ತು ವಿದೇಶದಲ್ಲಿರುವ ಒಳ್ಳೆಯ ವ್ಯಕ್ತಿಗಳಿಗೆ ಒಪ್ಪಿಸುವುದು.

೩. ಲೋಕ ಸಂಘರ್ಷ ಸಮಿತಿ ಸಾಹಿತ್ಯ, ಕರಪತ್ರ, ಸುದ್ದಿ ಪತ್ರಿಕೆಗಳನ್ನು ಸಂಬಂಧಿಸಿದ ವ್ಯಕ್ತಿಗಳಿಗೆ ತಲುಪಿಸಲು. ಸಹಜವಾಗಿ ಹೋರಾಟಕ್ಕೆ ಸಹಾಯನೀಡಿ. ಈ ಸಮಿತಿ ಮೂಲಕ ಹಣ/ನಿಧಿ ಸಂಗ್ರಹಿಸಲು ವ್ಯವಸ್ಥೆಗೊಳಿಸಿ.

೪. ಈ ಸಮಿತಿಯ ಮೂಲಕ ಸೆಮಿನಾರ್, ಸಭೆ, ದೂರದರ್ಶನ ಮತ್ತು ರೇಡಿಯೋ ಸಂದರ್ಶನಗಳನ್ನು ವ್ಯವಸ್ಥೆಗೊಳಿಸಿ. ಅವುಗಳ ಮೂಲಕ ಭಾರತದಲ್ಲಿರುವ ಸರ್ವಾಧಿಕಾರದ ಅಡಿಯಲ್ಲಿ ನಡೆಯುತ್ತಿರುವ ಘಟನೆಗಳನ್ನು ಎತ್ತಿತೋರಿಸಲು ಪ್ರಯತ್ನಿಸಿ.

೫. ರಾಜಕೀಯ ಖೈದಿಗಳನ್ನು ಬಿಡುಗಡೆಗೊಳಿಸಲು ಮತ್ತು ಪತ್ರಿಕಾ ಸ್ವಾತಂತ್ರ್ಯವನ್ನು ಪುನಃ ಸ್ಥಾಪಿಸಲು ಒತ್ತಡವನ್ನುಂಟು ಮಾಡುವುದು ... ಭಾರತ ಸರ್ಕಾರದಲ್ಲಿನ ಪ್ರಮುಖ ವ್ಯಕ್ತಿಗಳಿಗೆ ಟೆಲಿಗ್ರಾಮ್‌ಗಳನ್ನು ಕಳಿಸುವ ಮೂಲಕ.

೬. ವಿದೇಶದಲ್ಲಿರುವ ಭಾರತೀಯರು ಭಾರತದಲ್ಲಿರುವ ಅವರ ಮನೆಯವರು, ಸಂಬಂಧಿಗಳು ಮತ್ತು ಸ್ನೇಹಿತರಿಗೆ ಲೋಕ ಸಂಘರ್ಷ ಸಮಿತಿಗೆ ಸಹಕರಿಸಲು ಪ್ರೇರೇಪಿಸುವುದು.

೭. ಸಂಘಟನೆ, ಸೊಸೈಟಿ ಮತ್ತು ಕಾನ್ಫರೆನ್ಸ್‌ಗಳಲ್ಲಿ ರಾಷ್ಟ್ರೀಯ ನಾಯಕರನ್ನು ಬಂಧಿಸಿರುವುದನ್ನು ಖಂಡಿಸಲು. ರೇಡಿಯೋ ಹಾಗೂ ದೂರದರ್ಶನದಲ್ಲಿ ಪ್ರಚಾರ ದೊರೆಯುವಂತೆ ಮಾಡಲು ಪ್ರೇರೇಪಿಸುವುದು.

೮. ಯಾವುದೇ ಬೇರೆ ರೀತಿ ಚಟುವಟಿಕೆ ನಿಮಗೆ ಸರಿ ಎನಿಸಿದ್ದರೆ ದಯಮಾಡಿ ಎಲ್ಲ ಚಟುವಟಿಕೆಗಳಿಗೆ ಕಡತ ಇಡುವುದು. ಅಂಚೆ ಮೂಲಕ ಮತ್ತೊಂದು ಪ್ರತಿಯನ್ನು ರವಾನಿಸುವುದು(ದೇಶಮುಖ್ ೧೯೭೭: ೧೩೦).

ಪರೋಕ್ಷವಾಗಿ ಭೂಗತ ಹೋರಾಟಗಳಿಗೆ ವಿದೇಶಗಳ ಸಹಕಾರದ ಸ್ವರೂಪದ ಮೇಲೆ ಬೆಳಕು ಚೆಲ್ಲುವುದು. ನಾನಾಜಿ ದೇಶ್‌ಮುಖ್ ಎಂಬ ಆರ್.ಎಸ್.ಎಸ್.ನ ರಾಷ್ಟ್ರೀಯ ಕಾರ್ಯಕರ್ತರು. ಇದು ಅನಿವಾಸಿ ಭಾರತೀಯರ ಸಹಕಾರ ಪಡೆಯಲು ಕಳಿಸಿದ್ದ ಪತ್ರ. ಭೂಗತ ಹೋರಾಟಗಳಲ್ಲಿ ತೊಡಗಿಕೊಂಡಿದ್ದ ಭಾರತೀಯ ಸಂಘಟನೆಗಳು ಮತ್ತು ಅನಿವಾಸಿ ಭಾರತೀಯರ ನಡುವಿನ ಸಂಬಂಧಗಳ ಸ್ವರೂಪವನ್ನು ವಿವರಿಸುವುದು.

ಕರ್ನಾಟಕದಲ್ಲಿ ಕೆಲವು ಸಾಹಿತಿಗಳು ಭೂಗತರೊಡನೆ ಸಂಪರ್ಕ ಹೊಂದಿದ್ದು, ಸಹಕಾರ ನೀಡುತ್ತಿದ್ದದ್ದು ವೈಯುಕ್ತಿಕ ನೆಲೆಯ ಪರೋಕ್ಷ ಪ್ರತಿಭಟನೆಗಳನ್ನು ಸೂಚಿಸುವುದು. "ಖ್ಯಾತ ಸಾಹಿತಿ ಡಾ॥ ಕಾರಂತರಿಗೆ ದೇಶ ತ್ಯಾಗ ಮಾಡಗೊಡಬಾರದು"(ಚುನಾವಣೆ ೧೯೭೭ ಮಾರ್ಚ್ ೨೧). ಚುನಾವಣೆಯ ಪ್ರಚಾರದ ಹಿನ್ನೆಲೆಯಲ್ಲಿ ಶಿವರಾಮ ಕಾರಂತ ಅವರ ವಿಚಾರ ಪ್ರಸ್ತಾಪವಾಗಿದೆ. ಶಿವರಾಮ ಕಾರಂತರು ತುರ್ತುಪರಿಸ್ಥಿತಿ ವಿರುದ್ಧ ಭೂಗತ ಹೋರಾಟಗಾರರಿಗೆ ಮತ್ತು ಇತರ ಹೋರಾಟಗಾರರಿಗೆ ಸಹಕಾರ ನೀಡಿದ್ದರೆಂಬ ಮಾಹಿತಿ ಇದೆ. ಅನಂತಮೂರ್ತಿ ಅವರು ಪ್ರಶ್ನೆ ಮತ್ತು ಪರಿಸರ ಕೃತಿಯಲ್ಲಿ ತುರ್ತುಪರಿಸ್ಥಿತಿಯಲ್ಲಿ ಭೂಗತ ಪತ್ರಿಕೆಯೊಂದಕ್ಕೆ ಬರೆದ 'ಸ್ವಾತಂತ್ರ್ಯ ಮತ್ತು ಸಾಹಿತ್ಯ' ಎಂಬ ಪತ್ರವನ್ನು ಕಾಣಬಹುದು. ಈ ಸಾಹಿತಿಗಳು ತುರ್ತುಪರಿಸ್ಥಿತಿ ವಿರುದ್ಧ ಸಂವಿಧಾನಾತ್ಮಕವಾಗಿ ಕಂಡುಬಂದ ಹೋರಾಟಗಳಲ್ಲಿಯೂ ಗುರುತಿಸಿ ಕೊಂಡಿದ್ದವರು. ಜೊತೆಗೆ ಭೂಗತ ಹೋರಾಟಗಾರರಿಗೆ ಪರೋಕ್ಷವಾಗಿ ಸಹಕಾರ ನೀಡುತ್ತಿದ್ದರು ಎಂಬುದು ಗಮನಾರ್ಹ.

ಕರ್ನಾಟಕದಲ್ಲಿಯೂ ಮೇಲೆ ಚರ್ಚಿಸಿದಂತಹ ಮಾದರಿಯ ಕರಪತ್ರಗಳನ್ನು ಕಾಣಬಹುದು. ಇದು ಭೂಗತ ಹೋರಾಟದಲ್ಲಿ ತೊಡಗಿಸಿಕೊಳ್ಳುವವರಿಗೆ ನೀಡುವ ನಿರ್ದೇಶನದಂತಿದೆ. ಚಿತ್ರ-೧೭ರಲ್ಲಿ ಮೊದಲಿಗೆ ಹೆಸರು, ಅದರ ಪಕ್ಕ ಮೊಹಲ್ಲಾ ಎಂದಿದೆ. ನಂತರ ಕೆಳಗಡೆ ಪಟ್ಟಿಯೊಳಗೆ ಒಬ್ಬ ಕಾರ್ಯಕರ್ತನ ವ್ಯವಸ್ಥೆ: ನಿಮ್ಮಲ್ಲಿ, ಒಬ್ಬ ಕಾರ್ಯಕರ್ತನ ವ್ಯವಸ್ಥೆ – ನಿಮಗೆ ಗುರುತು ಪರಿಚಯದವರಲ್ಲಿ, ಪ್ರತಿ ತಿಂಗಳೂ ಕಾಣಿಕೆ: ನೀವು ಮತ್ತು ನಿಮ್ಮ ಗುರುತು ಪರಿಚಯದವರಿಂದ, ಕರಪತ್ರ ಹಂಚುವಿಕೆ: ನೀವು ಮತ್ತು ನಿಮ್ಮ ಗುರುತು ಪರಿಚಯದವರಿಂದ, ಸಮಯ ಕೊಡುವುದು: ನೀವು ಮತ್ತು ನಿಮ್ಮ ಗುರುತು ಪರಿಚಯದವರ ಪೈಕಿ.



ಭೂಗತ ಕರಪತ್ರ, ಕೃಪೆ : ರಾಷ್ಟ್ರೋತ್ಥಾನ ಸಾಹಿತ್ಯ ಪರಿಷತ್, ಬೆಂಗಳೂರು. ಚಿತ್ರ ಸಂಖ್ಯೆ: ೩.೩೧.

ವಸತಿ(ಎಷ್ಟು ದಿನ...., ಊಟ(ಎಷ್ಟು ದಿನ)..., ವಸತಿ ... ಇನ್ನಿತರ ವಿವರಗಳನ್ನು ಕಾಣಬಹುದು. ಆದರೆ ಇದನ್ನು ಹೊರಡಿಸುವವರು ಯಾರು, ಯಾವಾಗ ಮತ್ತಿತರ ವಿವರಗಳಿಲ್ಲ. ಬಳಸಿರುವ ಭಾಷೆಯ ಆಧಾರದ ಮೇಲೆ ಆರ್.ಎಸ್.ಎಸ್. ಮತ್ತು ಸಹಸಂಸ್ಥೆಗಳಿಗೆ ಸೇರಿರುವಂತಿದೆ. ಅನಿವಾಸಿ ಭಾರತೀಯರ ಸಹಾಯಕ್ಕಾಗಿ ಬರೆದ ಪತ್ರದಲ್ಲಿನ ಮಾಹಿತಿಗಳೊಡನೆ ಕೆಲವು ಸಾಮ್ಯತೆಗಳಿವೆ. ಭೂಗತ ಹೋರಾಟಕ್ಕೆ ಪರೋಕ್ಷ ಸಹಾಯ ಮಾಡುವವರು ಮತ್ತು ಕಾರ್ಯಕರ್ತರು ಇಬ್ಬರನ್ನೂ ಒಳಗೊಂಡಿದೆ. ಪರೋಕ್ಷವಾಗಿ ಭೂಗತ ಹೋರಾಟಗಾರರಿಗೆ ಸಹಕಾರ ನೀಡುತ್ತಿದ್ದ ಅಂಶದ ಮೇಲೆ ಬೆಳಕು ಹರಿಸುವುದು. ಈ ನಿಟ್ಟಿನಲ್ಲಿ

> ಕೆಲವರು ತಮ್ಮ ಮನೆಗಳನ್ನು ಭೂಗತರಿಗೆ ನೆಲೆಯನ್ನಾಗಿಸಿದ್ದರು. ನ್ಯೂಸ್ ಪೇಪರ್ ಪ್ರಕಾರ ಕರ್ನಾಟಕದ ೧೫೦೦ ಮನೆಗಳಲ್ಲಿ ಇದಕ್ಕೆ ವ್ಯವಸ್ಥೆಯಾಗಿತ್ತು. ೫೦೦ ಜನ ಭೂಗತರಿಗೆ ಇದು ವಾಸಕ್ಕೆ ನೆಲೆಯನ್ನು ಒದಗಿಸಿಕೊಟ್ಟಿದೆ(ಸ್ಟೇಟ್ಸ್‌ಮನ್ ೧೯೭೭ ಮೇ ೨೪)

ಎಂಬ ವರದಿಯು ಪೂರಕವಾಗಿದೆ. ಸರ್ಕಾರ ಮತ್ತು ಸಮಾಜದ ಚಿಂತನೆಯ ಕುರಿತ ಚರ್ಚೆ ಪರೋಕ್ಷ ಹೋರಾಟಗಾರರ ಕಾರ್ಯಚಟುವಟಿಕೆಗಳ ಸ್ವರೂಪದ ಮೇಲೆ ಹೆಚ್ಚಿನ ಬೆಳಕನ್ನು ಬೀರುವುದು.

### ೩.೨.೨. ಭೂಗತ ಹೋರಾಟ: ಸರ್ಕಾರ ಮತ್ತು ಸಮಾಜ

ಪ್ರಸ್ತುತ ಮಹಾಪ್ರಬಂಧದ ಈ ಅಧ್ಯಾಯದಲ್ಲಿ ಸರ್ಕಾರ ಮತ್ತು ಸಮಾಜದೊಡನೆ ಭೂಗತ ಹೋರಾಟಗಾರರು ಇರಿಸಿಕೊಂಡ ಸಂಬಂಧಗಳನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಭೂಗತ ಹೋರಾಟಗಳು ಸರ್ಕಾರದ ಮುಖ್ಯ ರಾಜಕೀಯ ವಿಚಾರಧಾರೆಗಳು ಅಥವಾ ಸಮಾಜದ ಪ್ರಮುಖ ಸಂಸ್ಕೃತಿಗೆ ಪರ್ಯಾಯವಾಗಿ ರೂಪುಗೊಳ್ಳುವ ಪ್ರತಿಭಟನೆಗಳು. ಹೋರಾಟ ರೂಪುಗೊಳ್ಳುವ ಪ್ರಕ್ರಿಯೆಯಲ್ಲಿ ಹೋರಾಟಗಾರರ ಹಿಂದಿನ ಸೈದ್ಧಾಂತಿಕ ವಿಚಾರಧಾರೆಗಳ ಪ್ರಭಾವ ಅಪಾರ. ಭೂಗತ ಹೋರಾಟಗಾರರ ಕುರಿತಂತೆ ಸರ್ಕಾರ ಮತ್ತು ಸಮಾಜದ ಪ್ರತಿಕ್ರಿಯೆಯು ಮತ್ತೊಂದು ಆಯಾಮದ ಮೇಲೆ ಬೆಳಕು ಬೀರುವುದು. ಭೂಗತ ಹೋರಾಟಗಳು ಯಾವಾಗಲು ಸರ್ಕಾರದ ವಿರೋಧಿ ಕಾರ್ಯಗಳಲ್ಲಿ ತೊಡಗಿರುವುದರಿಂದ ಸರ್ಕಾರಕ್ಕೆ ತಲೆನೋವಾಗಿ ಪರಿಣಮಿಸುತ್ತವೆ. ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ನಡೆದ ಭೂಗತ ಹೋರಾಟಗಳು ಇದಕ್ಕೆ ಹೊರತಾಗಿರಲಿಲ್ಲ. ಇವುಗಳನ್ನು ತಡೆಯುವ ಸರ್ಕಾರದ ಕ್ರಮಗಳನ್ನು ಮತ್ತು ಸರ್ಕಾರದ ದೃಷ್ಟಿಯಲ್ಲಿ ಹೋರಾಟಗಾರರನ್ನು ಗಮನಿಸುವ ಮೂಲಕ ಸಮಕಾಲೀನ ಆಡಳಿತಶಾಹಿ, ಸ್ವರೂಪಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ. ಎಲ್ಲೆಡೆ ಭೂಗತ ಹೋರಾಟಗಳ ಕುರಿತಂತೆ ಭಯ, ಕುತೂಹಲವನ್ನು ಸಮಾಜದ ಪ್ರಮುಖಧಾರೆಯಲ್ಲಿ ಕಾಣಬಹುದು. ಸಮಾಜದಲ್ಲಿ ಭೂಗತ ಹೋರಾಟಗಳು ಮತ್ತು ಹೋರಾಟಗಾರರ ಕುರಿತ ಭಿನ್ನ ವಿಚಾರಧಾರೆ, ಸಮಾಜ ಮತ್ತು ಸರ್ಕಾರದ ಆಶಯಗಳು, ವ್ಯವಸ್ಥೆಯ ಕುರಿತ ಹಲವು ಗ್ರಹಿಕೆಗಳನ್ನು ತೆರೆದಿಡುವುದು. ಭೂಗತ ಹೋರಾಟಗಾರರ ಸ್ನೇಹಿತರು, ಅವರ ಜೊತೆಗೆ ಸಂಪರ್ಕ ಹೊಂದಿರುವವರು ಮತ್ತಿತರರ ವಿಚಾರಧಾರೆ, ಹೋರಾಟ ಕುರಿತ ಅಭಿಪ್ರಾಯಗಳು ಭಿನ್ನವಾಗಿರುವುದು. ಭೂಗತ ಹೋರಾಟಗಾರರ ಕುಟುಂಬ ಮತ್ತು ಸಂಬಂಧಿಗಳ ಮನಸ್ಥಿತಿ, ಆಲೋಚನೆಗಳು ಕೂಡ ಸಹಜವಾಗಿ ಭಿನ್ನವಾಗಿರುದನ್ನು ನೋಡಬಹುದು. ಕೆಲವು ಬಾರಿ ಕಾರ್ಯಾಚರಣೆಗೆ ಪೂರಕವಾಗಿ ಹಾಗೂ ವ್ಯತಿರಿಕ್ತವಾಗಿ ವರ್ತಿಸುವುದನ್ನು ಕಾಣಬಹುದು. ತುರ್ತುಪರಿಸ್ಥಿತಿ ಜಾರಿಗೊಳಿಸಿದ ಸಂದರ್ಭದಲ್ಲಿ ಸಮಾಜದಲ್ಲಿ ಕಂಡುಬಂದ ಪ್ರತಿಕ್ರಿಯೆ, ಆ ಮೂಲಕ ಪ್ರಜಾಪ್ರಭುತ್ವ ಸ್ವರೂಪದ ಹಲವು ಮುಖಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ. ಈ ಹೋರಾಟಗಳನ್ನು ಎರಡು ಭಾಗಗಳಾಗಿ ವಿಂಗಡಿಸಲಾಗಿದೆ. ತುರ್ತುಪರಿಸ್ಥಿತಿಯಲ್ಲಿ ಸರ್ಕಾರ ಮತ್ತು ಸಮಾಜದ ಜೊತೆ ಭೂಗತ ಹೋರಾಟಗಾರರ ಸಂಬಂಧವನ್ನು, ಅವರ ಪ್ರತಿಕ್ರಿಯೆಗಳನ್ನು ಚರ್ಚಿಸಿದೆ.

### ೩.೨.೨.೧. ಭೂಗತ ಹೋರಾಟಗಾರರು ಮತ್ತು ಸರ್ಕಾರ

ಭೂಗತ ಹೋರಾಟಗಳು ಸರ್ಕಾರ ಅಥವಾ ಸಮಾಜದ ಮುಖ್ಯ ಧೋರಣೆಗಳಿಗೆ ಪ್ರತಿಧೋರಣೆ, ಗುರಿಗಳನ್ನು ಹೊಂದಿರುತ್ತವೆ. ಭೂಗತ ಹೋರಾಟಗಾರರು ಸದಾಕಾಲ ಸರ್ಕಾರದ ವಿರೋಧಿ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವುದರಿಂದ ಸರ್ಕಾರಕ್ಕೆ ಕಿರಿಕಿರಿ ಉಂಟುಮಾಡುತ್ತಿರುತ್ತವೆ. ಯಾವುದೇ ಸರ್ಕಾರವು ಭೂಗತ ಹೋರಾಟ ಮತ್ತು ಹೋರಾಟಗಾರರನ್ನು ಒಳಶತ್ರುಗಳಾಗಿ ಪರಿಭಾವಿಸುವುದು ಸಹಜ.

ಸರ್ಕಾರದ ಕ್ರಮಗಳನ್ನು ಎರಡು ಭಾಗಗಳಾಗಿ ಚರ್ಚಿಸಲಾಗಿದೆ. ಭೂಗತ ಹೋರಾಟಗಾರರ ದೃಷ್ಟಿಯಲ್ಲಿ ಸರ್ಕಾರದ ಕ್ರಮಗಳು ಮತ್ತು ಸರ್ಕಾರದ ದೃಷ್ಟಿಯಲ್ಲಿ ಭೂಗತ ಹೋರಾಟಗಾರರ ಕ್ರಮಗಳನ್ನು ವಿಮರ್ಶಿಸಲು ಪ್ರಯತ್ನಿಸಲಾಗಿದೆ.

**೩.೨.೨.೧.೧. ಭೂಗತ ಹೋರಾಟಗಾರರ ದೃಷ್ಟಿಯಲ್ಲಿ ಸರ್ಕಾರದ ಕ್ರಮಗಳು**

'ತುರ್ತುಪರಿಸ್ಥಿತಿಯ ಘೋಷಣೆಗೆ ದೇಶ ಮೂಕವಾಗಿ ಕುಳಿತಿರಲಿಲ್ಲ ಜೂನ್ ೨೬ರಿಂದಲೆ ಜನತೆಯ ಪ್ರತಿಭಟನೆಯ ಕಿಡಿ ಹಾರತೊಡಗಿತ್ತು ... ಸಂಘದ ಚಟುವಟಿಕೆಗಳ ಮೇಲೆ ಸರ್ಕಾರ ಸಂಪೂರ್ಣ ನಿಷೇಧ ಹೇರಿದ್ದರು. ಸಂಘ ಕಾರ್ಯಾಲಯಕ್ಕೆ ಬೀಗಮುದ್ರೆ ಹಾಕಿ, ಸಂಘದ ಹಿರಿಯ ನಾಯಕರನ್ನು ಬಂಧಿಸಿಟ್ಟಿದ್ದರೂ ಸಂಘ ಪರಿವಾರ ದೇಶದಲ್ಲಿ ಮತ್ತೆ ಪ್ರಜಾಸತ್ತೆಯನ್ನು ತರಲು ಯಶಸ್ವಿ ಹೋರಾಟ ನಡೆಸಿತು. ಅದಕ್ಕಾಗಿ ಅದು ರೂಪಿಸಿದ್ದೆ ಭೂಗತ ಹೋರಾಟ' ಎಂದು ಆರ್.ಎಸ್.ಎಸ್. ಭೂಗತ ಕಾರ್ಯಕರ್ತ ದು.ಗು.ಲಕ್ಷ್ಮಣ್ ಅವರು ಅಭಿಪ್ರಾಯಪಡುವರು. ಸರ್ಕಾರದ ಕ್ರಮಗಳು ಭೂಗತ ಹೋರಾಟಗಳ ಹುಟ್ಟಿಗೆ ಕಾರಣವಾಯಿತೆಂದು ನೇರವಾಗಿ ಹೇಳಿರುವುದನ್ನು ಗಮನಿಸಬಹುದು. ನಂತರದಲ್ಲಿ ಭೂಗತ ಪತ್ರಿಕೆಗಳು, ಕರಪತ್ರಗಳ ಮುದ್ರಣ ಮತ್ತು ಹಂಚಿಕೆಗಾಗಿ ಸಂಘದ ಕಾರ್ಯಾಲಯಕ್ಕೆ ಬೀಗಮುದ್ರೆ ಹಾಕಲಾಗಿತ್ತು ಎಂಬುದು ಸರ್ಕಾರದ ಧೋರಣೆ ಹಾಗೂ ಕಾರ್ಯನೀತಿಯನ್ನು ಸೂಚಿಸುವುದು. ಲಕ್ಷ್ಮಣ್ ಅವರು 'ಭೂಗತ ಪತ್ರಿಕೆಗಳ ಮೂಲಕ ಜನರಿಗೆ ದೇಶದಲ್ಲಿ ನಿಜವಾಗಿ ಏನು ನಡೆಯುತ್ತಿದೆ, ಹೋರಾಟ ಯಾವ ಹಂತದಲ್ಲಿದೆ, ಯಾರು ಜೈಲಿಗೆ ಹೋದರು, ಸರಕಾರ ಈ ಹೋರಾಟದಿಂದಾಗಿ ಹೇಗೆ ಗಾಬರಿಗೊಂಡಿದೆ ಇತ್ಯಾದಿ ಸಂಗತಿಗಳು ಮನವರಿಕೆಯಾಗುತ್ತಿತ್ತು ... ಭೂಗತ ಪತ್ರಿಕೆಗಳು ನಿಯಮಿತವಾಗಿ ಜನ ಸಾಮಾನ್ಯರಿಗಲ್ಲದೆ ಪೊಲೀಸ್ ಅಧಿಕಾರಿಗಳು, ಸರಕಾರಿ ಮುಖ್ಯಸ್ಥರಿಗೂ ತಲುಪುತ್ತಿದ್ದವು. ಆದರೆ ಅವು ಎಲ್ಲಿ ಮುದ್ರಣವಾಗಿ, ಹೇಗೆ ಯಾರ ಮೂಲಕ ವಿತರಣೆಯಾಗುತ್ತಿದೆ ಎಂಬ ರಹಸ್ಯ ಪೊಲೀಸರಿಗೆ ಗೊತ್ತಾಗುತ್ತಲೆ ಇರಲಿಲ್ಲ' ಎಂದು 'ತುರ್ತುಪರಿಸ್ಥಿತಿ ಆ ಕಹಿ ನೆನಪುಗಳ ಮರೆಯುವುದೆಂತು!' ಲೇಖನದಲ್ಲಿ ವಿವರಿಸಿರುವರು. ಈ ವಿವರಣೆಯು ಸರಕಾರ ಹಾಗೂ ಭೂಗತ ಹೋರಾಟಗಾರರ ನಡುವೆ ನಡೆಯುತ್ತಿದ್ದ ಸಂಘರ್ಷಗಳನ್ನು ತೆರೆದಿಡುವುದು. ಪೊಲೀಸ್ ವ್ಯವಸ್ಥೆ ಕುರಿತಂತೆ ಬಲಪಂಥೀಯ ಮತ್ತು ಎಡಪಂಥೀಯ ಹೋರಾಟಗಾರರ ನೆನಪುಗಳಲ್ಲಿ ಕಂಡುಬರುವ ಭಿನ್ನತೆ ಗಮನಾರ್ಹ ವಿಚಾರ. ಪೊಲಿಸ್ ವ್ಯವಸ್ಥೆ ಕುರಿತಂತೆ ಸಂದರ್ಶನಗಳಲ್ಲಿ ಎಡಪಂಥೀಯ ಸೈದ್ಧಾಂತಿಕ ಹೋರಾಟಗಾರರು ಪೊಲೀಸ್ ವ್ಯವಸ್ಥೆ ಸುಭದ್ರವಾಗಿತ್ತು, ಕಣ್ತಪ್ಪಿಸಿ ಕಾರ್ಯ ನಿರ್ವಹಣೆ ಅತ್ಯಂತ ಕಷ್ಟಕರ ವೆಂಬ ಅಭಿಮತ ವ್ಯಕ್ತಪಡಿಸಿರುವರು. ಆದರೆ ಬಲಪಂಥೀಯ ಸೈದ್ಧಾಂತಿಕ ಭೂಗತ ಹೋರಾಟಗಾರರು ಪೊಲೀಸ್ ವ್ಯವಸ್ಥೆ ದುರ್ಬಲವಾಗಿತ್ತೆಂದು ಅಭಿಪ್ರಾಯ ಪಟ್ಟಿರುವರು. ಜೊತೆಗೆ ಭೂಗತ ಹೋರಾಟದ ಜಾಲ ಎಡಪಂಥೀಯರಿಗಿಂತ ಬಲಪಂಥೀಯ ಸೈದ್ಧಾಂತಿಕ ಸಂಘಟನೆಗಳಲ್ಲಿ ಹೆಚ್ಚು ಉತ್ತಮವಾಗಿತ್ತು.

'ಶ್ರೀಮತಿ ಇಂದಿರಾ ಗಾಂಧಿಯವರಿಗೆ ಭಾರತದ ಜನಕೋಟಿಯ ಆದೇಶ' ಎಂಬ ಕರಪತ್ರದಲ್ಲಿ ಭೂಗತರಿಗೆ ನಿರ್ದೇಶನ ನೀಡಲಾಗಿದೆ. ಇಲ್ಲಿರುವ ಆರು ವಿಚಾರಗಳು ತುರ್ತುಪರಿಸ್ಥಿತಿ ಪೂರ್ವ ಮತ್ತು ಜಾರಿಗೊಂಡ ನಂತರ ಸರ್ಕಾರದ ಕಾನೂನು, ಕ್ರಮಗಳ ಕುರಿತಾದುದು. ಇವುಗಳನ್ನು ವಿರೋಧಿಸುತ್ತ ತುರ್ತುಪರಿಸ್ಥಿತಿಯನ್ನು ಹಿಂಪಡೆಯಬೇಕೆನ್ನುವ ವಿಚಾರಗಳಿವೆ. ಈ ಕರಪತ್ರ ಮುದ್ರಿಸಿರುವವರು ಯಾರೆಂಬುದು ತಿಳಿದಿಲ್ಲ. ಇದು 'ಓದಿ ಮತ್ತು ಪ್ರಚುರ ಪಡಿಸಿ' ಕರಪತ್ರಗಳ ಗುಂಪಿಗೆ ಸೇರಿದೆ. ಲೋಕ ಸಂಘರ್ಷ ಸಮಿತಿಯ ಮತ್ತೊಂದು ಕರಪತ್ರ 'ಆತ್ಮೀಯ ಪೊಲೀಸ್ ಬಂಧೂಗಳೆ'(೮-೧೧-೧೯೭೫) ಪೊಲೀಸ್ ವ್ಯವಸ್ಥೆಯ ಬಗ್ಗೆ ಮಾಹಿತಿ ನೀಡುವುದು. ಸರ್ಕಾರದ ಪ್ರಮುಖ ಭಾಗವಾಗಿದ್ದ ಪೊಲೀಸ್ ವ್ಯವಸ್ಥೆಯನ್ನು ಹೋರಾಟದಲ್ಲಿ ತೊಡಗಿಸಿಕೊಳ್ಳಲು ಕರೆ ನೀಡಿರುವುದು ಗಮನಾರ್ಹ. ಭೂಗತ ಹೋರಾಟ ಗಾರರು, ಪೊಲೀಸ್ ವ್ಯವಸ್ಥೆ ಮತ್ತು ಸರ್ಕಾರದ ನಡುವಿನ ಸಂಬಂಧಗಳ ಮೇಲೆ ಬೆಳಕು ಬೀರುವುದು. 'ಪೊಲೀಸ್ ಸೇನಾ ಭಾಯಿ ಹೈ, ನಹಿ ಉನಸೇ ಲಡಾಯಿ ಹೈ' ಎನ್ನುತ್ತ ಹೋರಾಟ ಸರ್ವಾಧಿಕಾರದ ವಿರುದ್ಧ, ಸ್ವಾತಂತ್ರ್ಯಕ್ಕಾಗಿ ಪೊಲೀಸರನ್ನು ಪ್ರತಿಭಟನೆಯಲ್ಲಿ ಭಾಗವಹಿಸಲು ಕರೆ ನೀಡಲಾಗಿದೆ. ಪೊಲೀಸರು

ಹೋರಾಟಗಾರರ ರಕ್ಷಣೆಗೆ ನಿಲ್ಲಬೇಕೆಂಬ ಆಶಯ ಮತ್ತು ಪೊಲೀಸ್ ವ್ಯವಸ್ಥೆಯ ಕ್ರಮಗಳೆರಡನ್ನು ಬಿಂಬಿಸುವುದು. ಭೂಗತ ಹೋರಾಟಕ್ಕೆ ಪೊಲೀಸರಿಂದ ಆಗುತ್ತಿರುವ ತೊಂದರೆಗಳನ್ನು ಪ್ರತಿಭಟಿಸಿ, ಹೋರಾಟ ಮಾಡುವ ಹಕ್ಕಿದೆ ಎಂಬ ಧೋರಣೆ ಮತ್ತು ಹೋರಾಟಗಾರರ ಉದ್ದೇಶವನ್ನು ಪೊಲೀಸ್ ವ್ಯವಸ್ಥೆಗೆ ಮನವರಿಕೆ ಮಾಡಿಕೊಡುವ ಪ್ರಯತ್ನದಂತಿದೆ. ರಾಜ್ಯಾಂಗಕ್ಕೆ ನಿಷ್ಠರಾಗಿರಲು ಪ್ರತಿಜ್ಞೆ ಮಾಡಿರುವುದೇ ಹೊರತು ಶಾಸಕಾಂಗಕ್ಕಲ್ಲ. ಶಾಸಕಾಂಗಕ್ಕೆ ನಿಷ್ಠರಾಗಿರಬೇಕಾಗಿಲ್ಲ ಎಂಬುದನ್ನು ಪರೋಕ್ಷವಾಗಿ ಹೇಳಲಾಗಿದೆ. ಅಂತರ್ ರಾಷ್ಟ್ರೀಯ ವಲಯದ ಪೊಲೀಸ್ ಪ್ರತಿನಿಧಿಗಳ ಸಮ್ಮೇಳನದ ನಿರ್ಣಯ ಉಲ್ಲೇಖಿಸುತ್ತ ಸರ್ಕಾರದ ಆಜ್ಞೆಗಳನ್ನು ನಿರಾಕರಿಸುವುದು ವೃತ್ತಿ ದ್ರೋಹವಲ್ಲ ಎಂದು ಪ್ರೇರೇಪಿಸಿಲಾಗಿದೆ. ಇಂದಿನ ಸರಕಾರಿ ಮುಖಂಡರ ಒಲವನ್ನು ಗಳಿಸಲೆಂದು ನೀವು ಕಾಯ್ದೆ ಮೀರಿ ಅತಿರೇಕದಿಂದ ವರ್ತಿಸುವುದು, ನಾಳೆ ನಿಮಗೆ ಕಂಟಕಪ್ರಾಯ ಆಗಬಹುದೆಂಬ ಬೆದರಿಕೆಯನ್ನು ಕಾಣಬಹುದು. ಈ ಕರಪತ್ರ ಆರ್.ಎಸ್.ಎಸ್ ಹಾಗೂ ಸಹಸಂಸ್ಥೆ ಗಳಿಗೆ ಸೇರಿದ್ದಾಗಿದೆ. ಬಲಪಂಥೀಯ ವಿಚಾರಧಾರೆ ಹೊಂದಿದ್ದ ಭೂಗತ ಹೋರಾಟಗಾರರು ಪೊಲೀಸ್ ವ್ಯವಸ್ಥೆ ದುರ್ಬಲವಾಗಿತ್ತು ಎಂದು ನೆನಪಿಸಿಕೊಳ್ಳುವುದನ್ನು ಈಗಾಗಲೇ ಚರ್ಚಿಸಲಾಗಿದೆ. ಭೂಗತ ಹೋರಾಟ ಗಾರರು ಸರ್ಕಾರಕ್ಕೆ ಕಂಡುಬರುತ್ತಿದ್ದ ಬಗೆಯನ್ನು ಅರಿಯುವುದು, ಹೋರಾಟದ ಸ್ವರೂಪದ ವಿಸ್ತಾರತೆಯನ್ನು ಅರಿಯಲು ಸಹಕಾರವಾಗುವುದು.

### ೩.೨.೨.೧.೨. ಸರ್ಕಾರದ ದೃಷ್ಟಿಯಲ್ಲಿ ಭೂಗತ ಹೋರಾಟಗಾರರು

ರಾಜಕಾರಣದಲ್ಲಿನ ಬೆಳವಣಿಗೆಗಳು ಮತ್ತು ಭೂಗತ ಹೋರಾಟಗಾರರ ಕುರಿತ ಸರ್ಕಾರದ ಧೋರಣೆ ಮತ್ತೊಂದು ಆಯಾಮವನ್ನು ಅನಾವರಣಗೊಳಿಸುವುದು. ಇಲ್ಲಿ ಸರ್ಕಾರದ ದೃಷ್ಟಿಯಲ್ಲಿ ಭೂಗತ ಹೋರಾಟಗಾರರು ಕಂಡುಬರುತ್ತಿದ್ದ ಬಗೆಯನ್ನು ಚರ್ಚಿಸಲಾಗಿದೆ. ತುರ್ತುಪರಿಸ್ಥಿತಿ ಘೋಷಣೆಯ ನಂತರ

> ಆರ್.ಎಸ್.ಎಸ್ ಮತ್ತು ಜಮಾತ-ಇ-ಇಸ್ಲಾಮ್, ಇ-ಹಿಂದ್‌ನಂಥ ಸಂಘಟನೆಗಳು ಪೂರ್ವಾಗ್ರಹವುಳ್ಳ ಬೇರೆ ಬೇರೆ ಧಾರ್ಮಿಕ ಸಂಘಟನೆಗಳು. ಅವರ ಶಸ್ತ್ರ ಮತ್ತು ಪ್ರಸ್ತುತ ದಿನಸಿತ್ಯದ ಚಟುವಟಿಕೆಗಳು ಕೋಮುವಾದ ಹೆಚ್ಚಲು ಕಾರಣ. ಪ್ರಜಾಪ್ರಭುತ್ವದಲ್ಲಿ ಇಂತಹ ಕೋಮುವಾದಿ ಕಾರ್ಯಚಟುವಟಿಕೆ ಗಳಿಗೆ ಯಾವ ಅವಕಾಶವು ಇಲ್ಲ. ಆರ್.ಎಸ್.ಎಸ್. ತೀವ್ರಗಾಮಿ ರೂಪದಲ್ಲಿ ಪ್ರತಿಭಟನೆಯನ್ನು ಒಡ್ಡುತ್ತ, ವ್ಯವಸ್ಥಿತವಾಗಿ ಸರ್ಕಾರಿ ಸೇವಕರನ್ನು ಪ್ರೇರೇಪಿಸುತ್ತಿದ್ದಾರೆ. ಆನಂದಮಾರ್ಗ ಕೊಲೆ ಮೊದಲಾದ ಮಾರ್ಗಗಳನ್ನು ಬಳಸುವ ಮೂಲಕ ಸರ್ಕಾರವನ್ನು ಬಗ್ಗಿಸಲು ಪ್ರಯತ್ನಿಸುತ್ತಿದೆ. ಇದರ ಕಾರ್ಯ ಕರ್ತರು ಸಮಾಜದಲ್ಲಿ ಅಪರಾಧ, ಪಾಪಕೃತ್ಯದ ಚಟುವಟಿಕೆ ಹೆಚ್ಚಿಸಿರುವುದನ್ನು ಮತ್ತು ಪ್ರಾದೇಶಿಕ, ಸ್ಥಳೀಯ ಭಾಷಾ ಹಿನ್ನೆಲೆಯಲ್ಲಿ ಕಾರ್ಯಚಟುವಟಿಕೆಗಳನ್ನು ನಡೆಸುತ್ತಿರುವುದನ್ನು ನೋಡಬಹುದಾಗಿದೆ. ಸಿಪಿಐ(ಎಂ.ಎಲ್) ಮೊದಲಾದವರ ಕಾರ್ಯಚಟುವಟಿಕೆಗಳು ಬೃಹತ್ ಸಂಖ್ಯೆಯಲ್ಲಿ ರಾಜಕೀಯ ಕೊಲೆಗಳು ಮತ್ತು ಹಿಂಸಾತ್ಮಕ ಘಟನೆಗಳಿಗೆ ಜವಾಬ್ದಾರವಾಗಿದೆ. ಈ ಯಾವ ಸಂಘಟನೆಗಳು ತಮ್ಮಲ್ಲೆ ಸಮಾನವಾದ ವಿಚಾರಗಳನ್ನು ಹೊಂದಿಲ್ಲ ಹಾಗೂ ರಾಜಕೀಯವಾಗಿ ಲೆಜಿಟ್‌ಮೇಜ್(legitimage) ಪ್ರಜ್ಞೆಯನ್ನು ಹೊಂದಿಲ್ಲ. ಇವೆಲ್ಲವು ಇಂತಹ ಸಂಘಟನೆಗಳನ್ನು ನಿಷೇದಿಸಲು ಕಾರಣ(ರೆಡ್ಡಿ ೧೯೭೫)

ಸರ್ಕಾರದ ಧೋರಣೆ ಹಾಗೂ ಸಮಕಾಲೀನ ರಾಜಕಾರಣದ ಸ್ವರೂಪವನ್ನು ಬಿಂಬಿಸುವುದು. ಈ ಸಂಘಟನೆ ಮತ್ತು ಪಕ್ಷಗಳು ತುರ್ತುಪರಿಸ್ಥಿತಿ ಜಾರಿಗೊಂಡ ನಂತರ ಭೂಗತ ಹೋರಾಟಗಳಲ್ಲಿ ತೊಡಗಿಕೊಂಡವು. ಭೂಗತ ಹೋರಾಟಕ್ಕೆ ಬೇಕಾದ ಹಣಕಾಸನ್ನು ಕುರಿತು

> ಈ ಪ್ರತಿಭಟನಾಕಾರರಿಗೆ ಬರುವ ಬಹುತೇಕ ಹಣವು ಬೃಹತ್ ಕೈಗಾರಿಕೋದ್ಯಮಿಗಳು, ಬಂಡವಾಳಶಾಹಿಗಳು, ವ್ಯಾಪಾರಸ್ಥರ ಮೂಲಕವೇ ಆಗಿದೆ(ಗಾಂಧಿ ೧೯೭೫ ಜುಲೈ ೩)

ಎಂಬ ಸರ್ಕಾರದ ವಿಚಾರಧಾರೆಗಳು, ಭೂಗತ ಹೋರಾಟಗಾರರೊಡನೆ ಸಂಬಂಧ ಹೊಂದಿರಬಹುದಾದ ಪರೋಕ್ಷ ಹೋರಾಟಗಾರರ ಮೇಲೆ ಬೆಳಕುಬೀರುವುದು. ವಿರೋಧ ಪಕ್ಷಗಳ ಕುರಿತಿರುವ ಸರ್ಕಾರದ ಧೋರಣೆಯ ಮೂಲಕ ಪ್ರತಿಭಟನೆ ಕಡೆಗೆ ಗಮನ ಸೆಳೆಯುವುದು.

ಸುದ್ದಿ ಮಾಧ್ಯಮಗಳಲ್ಲಿ ಪ್ರಕಟವಾಗುವ ಸರ್ಕಾರದ ಕ್ರಮಗಳ ಮಾಹಿತಿ ಪ್ರತಿಭಟನೆಯ ಸ್ವರೂಪದ ಇತರ ಆಯಾಮಗಳನ್ನು ತೆರೆದಿಡುವುದು. ತುರ್ತುಪರಿಸ್ಥಿತಿ ಜಾರಿಯ ಹಿನ್ನೆಲೆಯಲ್ಲಿ "ನಗರದಲ್ಲಿ ೧೫ ದಿನ ನಿಷೇಧಾಜ್ಞೆ"(ಕನ್ನಡಪ್ರಭ ೧೯೭೫ ಜೂನ್ ೨೮) ಎಂಬುದು ರಾಜ್ಯ ಸರ್ಕಾರದ ಕ್ರಮವನ್ನು ಸೂಚಿಸುವುದು. 'ನಗರದಲ್ಲಿ ಶಾಂತಿಭಂಗದ ಅವಕಾಶ ತಡೆಗಟ್ಟಲು ಮತ್ತು ಕಾನೂನು ಪಾಲನೆಗಾಗಿ ಪರಿಸ್ಥಿತಿಯನ್ನು

ಕಾಪಾಡುವ ಸಲುವಾಗಿ, ಇಂದು ಮಧ್ಯಾಹ್ನದಿಂದ ಹದಿನೈದು ದಿನಗಳ ಕಾಲ ನಿಷೇಧಾಜ್ಞೆ ಜಾರಿಗೆ ಕೊಡಲಾಗಿದೆ. ರಾಜಕೀಯ ಪಕ್ಷಗಳ ನಾಯಕರು ರಸ್ತೆಯಂಚಿನ ಸಭೆ ನಡೆಸುವುದು, ವಿಧಾನಸೌಧದ ಕಡೆಗೆ ಮೆರವಣಿಗೆ ಹೊರಡಿಸುವುದು, ರಾಷ್ಟ್ರಪತಿಗಳು ಹೊರಡಿಸಿರುವ ವಿಶೇಷಾಜ್ಞೆಯನ್ನು ವಿರೋಧಿಸುವ ಪ್ರತಿಭಟನಾ ಪ್ರದರ್ಶನ ನಡೆಸುವುದು ನಿಷೇಧಾಜ್ಞೆಯ ರೀತಿ ಸಾಧ್ಯವಿಲ್ಲ' ಎಂಬುದು ಮೇಲಿನ ವರದಿಯ ಸಾರವಾಗಿದೆ. ರಾಜ್ಯ ಸರ್ಕಾರ ಪ್ರತಿಭಟನೆಗಳನ್ನು ನಡೆಯದಂತೆ ತಡೆಯಲು ಮಾಡಿದ ಪ್ರಯತ್ನದ ಭಾಗವಿದು. ವಿರೋಧ ಪಕ್ಷಗಳು ಮತ್ತು ಪ್ರತಿಭಟನಾಕಾರರ ಕುರಿತಂತೆ ಸರ್ಕಾರದ ಧೋರಣೆಗಳ ಕುರಿತ ವಿವರಣೆ ಹೀಗಿದೆ.

> ಜಮಾತ್ - ಇ- ಇಸ್ಲಾಂ(ಜೆಇಐ), ರಾಷ್ಟ್ರೀಯ ಸ್ವಯಂ ಸೇವಕ ಸಂಘ, ಆನಂದ ಮಾರ್ಗ, ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ, ಮಾರ್ಕ್ಸಿಸ್ಟ್ ಲೆನಿನ್‌ಸ್ಟ್(ಸಿಪಿಐಎಂಎಲ್), ನಿಷೇಧಿತ ಸಂಘಟನೆಗಳೊಂದಿಗೆ ಸಂಬಂಧ ಹೊಂದಿದ್ದ ವ್ಯಕ್ತಿಗಳು ಮತ್ತು ಸಂಸ್ಥಾ ಕಾಂಗ್ರೆಸ್, ಭಾರತೀಯ ಜನ ಸಂಘ್, ಭಾರತೀಯ ಲೋಕ ದಳ್, ಸೋಷಿಯಲಿಸ್ಟ್ ಪಾರ್ಟಿ, ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ(ಮಾರ್ಕ್ಸಿಸ್ಟ್) ರಾಜಕೀಯ ಪಕ್ಷಗಳೊಂದಿಗೆ ಸಂಬಂಧ ಹೊಂದಿದ್ದ ನಿಷೇಧಿತ ವ್ಯಕ್ತಿಗಳ ಅಂಕಿಅಂಶಗಳು ... ಆಗಸ್ಟ್ ೨೧, ೧೯೭೫ ಬಂಧಿಸಲ್ಪಟ್ಟ ಅಡ್ವಾಂದ.ಸಿ.ಕಾಶಿ, ಸಿ.ಪಿ. ಅಣ್ಣಯ್ಯ ಸಿ.ಕೆ.ಪೂವಯ್ಯ ಮತ್ತು ಸಿ.ಪಿ.ಕುಶಾಲಪ್ಪ ಮೊದಲಾದವರನ್ನು ಭೂಗತ ಕಾರ್ಯಕರ್ತರು, ಕರಪತ್ರಗಳನ್ನು ಸೃಷ್ಟಿಸುವ ಮತ್ತು ಹಂಚುವ ಕಾರ್ಯದಲ್ಲಿ ತೊಡಗಿಕೊಂಡಿದ್ದರೆಂದು ಪೊಲೀಸ್ ಇಲಾಖೆ ವರದಿ ಮಾಡಿದೆ(ಸೇಜಿಯನ್(ಸಂ) ೨೦೧೦: ೭೦–೭೧).

ಷಾ ವಿಚಾರಣಾ ಆಯೋಗದ ಅಂತಿಮ ವರದಿಯಲ್ಲಿ ಈ ಮಾಹಿತಿಯಿದೆ. ತುರ್ತುಪರಿಸ್ಥಿತಿ ಕಾಲದಲ್ಲಿ ಕರ್ನಾಟಕದಲ್ಲಿದ್ದ ನಿಷೇಧಿತ ಪಕ್ಷ, ಸಂಘಟನೆಗಳು, ಅದರೊಂದಿಗೆ ಸಂಬಂಧ ಹೊಂದಿರುವ ಇತರ ರಾಜಕೀಯ ಪಕ್ಷಗಳು ಹಾಗೂ ಸಂಘಟನೆಗಳನ್ನು ತಿಳಿಸುತ್ತಲೇ ಪ್ರತಿಭಟನೆಯ ಸ್ವರೂಪದ ಮೇಲೆ ಬೆಳಕು ಹರಿಸುವುದು. ಇದರೊಡನೆ ಪೊಲೀಸ್ ವ್ಯವಸ್ಥೆಯ ಸ್ವರೂಪವನ್ನು, ಹೋರಾಟಗಾರರ ಕುರಿತ ಸರ್ಕಾರದ ನಿಲುವುಗಳನ್ನು ತೆರೆದಿಡುವುದು.

ಸಮಕಾಲೀನವಾಗಿ ಭೂಗತ ಹೋರಾಟಗಾರರ ಕಾರ್ಯಚಟುವಟಿಕೆಗಳ ಕುರಿತಂತೆ ಶಾಸನ ಸಭೆಯಲ್ಲಿ ಸರ್ಕಾರದ ಪ್ರತಿಕ್ರಿಯೆ ಹೀಗಿದೆ:

> ರಾಷ್ಟ್ರೋತ್ಥಾನ ಪರಿಷತ್ತು ೧೭-೩-೧೯೭೬ರ ಲೋಕ ಸಂಘರ್ಷ ಸಮಿತಿ ದಿನಾಂಕವಿರುವ ಜಯಂತಿ ಎಂಬ ಶೀರ್ಷಿಕೆಯ ಒಂಭತ್ತು ಕನ್ನಡ ಪಾಂಪ್ಲೆಟ್‌ಗಳನ್ನು ೫-೩-೧೯೭೬ರಂದು ಮುದ್ರಿಸಿದೆ. ಕಹಳೆ ಎಂಬ ಶೀರ್ಷಿಕೆಯಲ್ಲಿ ೩-೧೨-೧೯೭೫ ಮತ್ತು ೧೦-೧೨-೧೯೭೫ರಂದು ೪೦೦ ಪ್ರತಿಗಳನ್ನು ಮುದ್ರಿಸಿದೆ. ಈ ಕರಪತ್ರಗಳು ಪೂರ್ವಾಗ್ರಹ ಪೀಡಿತವಾಗಿದ್ದು, ಡಿಫೆನ್ಸ್ ಅಂಡ್ ಇಂಟರ್ನಲ್ ಸೆಕ್ಯೂರಿಟಿ ಆಫ್ ಇಂಡಿಯಾ ಕಾಯ್ದೆ ಪ್ರಕಾರ ತಪ್ಪು. ಪೊಲೀಸರು ೪೭ ಕ್ಲಾಸ್(೧, ಬಿ) ಪ್ರಕಾರ ಅದನ್ನು ಮುಟ್ಟುಗೋಲು ಹಾಕಿಕೊಂಡು ಮುದ್ರಿತವಾಗಿರುವ ಕರಪತ್ರಗಳು ಮತ್ತು ಐದು ಜನರನ್ನು ಬಂಧಿಸಿದ್ದಾರೆ. ಈ ಕೇಸ್ ಕುರಿತು ತನಿಖೆ ನಡೆಯುತ್ತಿದೆ. ಅಲ್ಲದೆ ಇದನ್ನು ಪೊಲೀಸಿನವರು ಮುಟ್ಟುಗೋಲು ಹಾಕಿಕೊಂಡಿದ್ದಲ್ಲ ... ಯಾವುದೇ ಉತ್ತಮ ಕೆಲಸ ಮಾಡಿದ್ದರೂ ಸಹ ಕಾನೂನಿನ ವಿರುದ್ಧವಾಗಿ ಅವರು ನಡೆದುಕೊಂಡಾಗ ಅವರ ಮೇಲೆ ಕ್ರಮತೆಗೆದುಕೊಳ್ಳುವುದು ಇದ್ದೇ ಇರುತ್ತದೆ(ಗೌಡ ೧೯೭೬ ಏಪ್ರಿಲ್).

ಭೂಗತ ಪತ್ರಿಕೆಗಳು, ಕರಪತ್ರಗಳನ್ನು ಮುದ್ರಿಸುತ್ತಿದ್ದ ರಾಷ್ಟ್ರೋತ್ಥಾನ ಪರಿಷತ್ತನ್ನು ಸರ್ಕಾರ ಮುಟ್ಟುಗೋಲು ಹಾಕಿಕೊಂಡ ಸಂದರ್ಭದಲ್ಲಿ ನೀಡಿದ ಪ್ರತಿಕ್ರಿಯೆ ಇದು. ವಿಧಾನಮಂಡಲದಲ್ಲಿ ಸದಸ್ಯರೊಬ್ಬರು ರಾಷ್ಟ್ರೋತ್ಥಾನ ಸಂಸ್ಥೆಯನ್ನು ಮುಟ್ಟುಗೋಲು ಹಾಕಿಕೊಂಡಿರುವುದನ್ನು ವಿರೋಧಿಸುತ್ತಾ, ಪ್ರಶ್ನಿಸಿದಾಗ ಸರ್ಕಾರ ನೀಡಿದ ಉತ್ತರವಾಗಿದೆ. ತುರ್ತುಪರಿಸ್ಥಿತಿ ಜಾರಿಯ ನಂತರದಿಂದ ೧೯೭೬ ಮಾರ್ಚ್‌ವರೆಗೆ ನಡೆದ ಭೂಗತ ಹೋರಾಟಗಳ ಸ್ವರೂಪ ಹಾಗೂ ಸರ್ಕಾರದ ಕಾರ್ಯಚಟುವಟಿಕೆಗಳ ಸ್ವರೂಪದ ಸ್ಥೂಲ ವಿವರಣೆಯಾಗಿದೆ.

ಪೊಲೀಸ್ ಇಲಾಖೆಯ ಕಾರ್ಯಚಟುವಟಿಕೆಗಳನ್ನು ಗಮನಿಸುವುದು ಅಗತ್ಯ. ರಾಯಚೂರಿನ ಪೊಲೀಸ್ ಪಡೆಯನ್ನು ಪುನರ್ ವ್ಯವಸ್ಥಿತಗೊಳಿಸುವ ಸಂಬಂಧ[೫೨] ನೀಡಿರುವ ವಿವರಣೆಯಲ್ಲಿ

> ರಾಯಚೂರ್ ಜಿಲ್ಲೆ ಪೊಲೀಸ್ ಪಡೆಯನ್ನು ಕಡೆಯ ಬಾರಿಗೆ ೧೯೫೯ರಲ್ಲಿ ಸರ್ಕಾರದ ಆಜ್ಞೆಯಂತೆ ಸುವ್ಯವಸ್ಥಿತಗೊಳಿಸಲಾಗಿತ್ತು ... ಆಗಿನಿಂದ ಇಲ್ಲಿಯವರೆಗೆ ಪೊಲೀಸ್ ವ್ಯವಸ್ಥೆಯಲ್ಲಿ ಅನೇಕ ಬದಲಾವಣೆ ಆಗಿದ್ದು, ಅನೇಕ ಪೊಲೀಸ್ ಠಾಣೆ, ಉಪಠಾಣೆ ಮತ್ತು ಹೊರ ಠಾಣೆಗಳಲ್ಲಿ ಕೆಲವು ಬದಲಾವಣೆಗಳಾಗಿವೆ ... ರಾಯಚೂರು ಜಿಲ್ಲೆ ಜನಸಂಖ್ಯೆ, ಹಳ್ಳಿಗಳಲ್ಲಿ ವೈಷಮ್ಯ ಮತ್ತು ಕೂಲಿ

> ಕಾರ್ಮಿಕರ ಸಮಸ್ಯೆಗಳು ಹೆಚ್ಚಾಗಿರುವ ನಿಟ್ಟಿನಲ್ಲಿ ಪೊಲೀಸರಿಗೆ ಇದನ್ನು ಎದುರಿಸುವುದು ಕಷ್ಟವಾಗಿದೆ. ಜಿಲ್ಲೆಯಲ್ಲಿ ಅಪರಾಧಗಳು ಹೆಚ್ಚಾಗುತ್ತಿರುವುದು ಕಂಡುಬರುತ್ತಿದೆ. ಹಲವಾರು ಸಾಮಾಜಿಕ ಮತ್ತು ಆರ್ಥಿಕ ಕಾನೂನುಗಳು ಪೊಲೀಸರ ಜವಾಬ್ದಾರಿ ಹೆಚ್ಚಿಸಿವೆ. ಈ ಎಲ್ಲ ಆಯಾಮಗಳನ್ನು ಪರಿಗಣಿಸುತ್ತ, ... ರಾಯಚೂರು ಜಿಲ್ಲೆ ಪೊಲೀಸ್ ಪಡೆಯನ್ನು ಸುವ್ಯವಸ್ಥಿತಗೊಳಿಸಲು ಕೆಲವು ಯೋಜನೆ, ಸಲಹೆಗಳನ್ನು ಈ ನಿಟ್ಟಿನಲ್ಲಿ ನೀಡಲಾಗಿದೆ(ಹೋಮ್ ಸೆಕ್ರೇಟರಿ ೧೯೭೮: ೬೫೭).

ಸಮಕಾಲೀನವಾಗಿ ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳು ನಡೆಯುತ್ತಿದ್ದವು. ೧೯೭೫ ರಿಂದ ೧೯೭೭ರ ಕಾಲಾವಧಿಯಲ್ಲಿ ಅನೇಕ ಜಿಲ್ಲೆಗಳಲ್ಲಿ ಪೊಲೀಸ್ ಪಡೆಗಳನ್ನು ಸುವ್ಯವಸ್ಥಿತಗೊಳಿಸಲಾಯಿತು. ಇದು ಪೊಲೀಸ್ ವ್ಯವಸ್ಥೆ ಮತ್ತು ಪ್ರತಿಭಟನೆಗಳ ನಡುವಿನ ಸಂಬಂಧದ ಸ್ವರೂಪವನ್ನು ಪರೋಕ್ಷವಾಗಿ ಅನಾವರಣ ಗೊಳಿಸುವುದು. ಇವೆಲ್ಲವೂ ಭೂಗತ ಹೋರಾಟಗಾರರ ಕುರಿತಂತೆ ಸಮಾಜದ ಮೇಲೆ ಬೀರಿರುವ ಪ್ರಭಾವ ಅಪಾರ. ಈ ದಿಸೆಯಲ್ಲಿ ಭೂಗತ ಹೋರಾಟಗಾರರು ಮತ್ತು ಸಮಾಜದ ನಡುವಿನ ಸಂಬಂಧ ಕುರಿತು ಅಧ್ಯಯನ ಕೈಗೊಳ್ಳುವ ಅಗತ್ಯವಿದೆ.

### ೩.೨.೨.೨. ಭೂಗತ ಹೋರಾಟಗಾರರು ಮತ್ತು ಸಮಾಜ

ಭೂಗತ ಹೋರಾಟಗಳು ಸರ್ಕಾರದ ದೃಷ್ಟಿಯಲ್ಲಿ ಅಪರಾಧವಾಗುವುದರಿಂದ ಸಮಾಜದಲ್ಲಿ ಆ ಹೋರಾಟಗಳಿಗೆ ಬರುವ ಪ್ರತಿಕ್ರಿಯೆಗಳು ಭಿನ್ನ ಭಿನ್ನ ರೀತಿಯಲ್ಲಿರುತ್ತವೆ. ಸರ್ಕಾರದ ಕ್ರಮಗಳು ಸಮಾಜದಲ್ಲಿ ಭೂಗತ ಹೋರಾಟಗಾರರ ಕುರಿತು ಭಯ ಹುಟ್ಟಲು ಹಾಗೂ ದೂರ ಸರಿಯಲು ಇರುವ ಪ್ರಮುಖ ಕಾರಣ. ಭೂಗತ ಹೋರಾಟಗಾರರ ಕುರಿತ ಕುತೂಹಲ ಮತ್ತು ಭಯ ಸಮಾಜದೊಳಗಿನ ಚಿಂತನೆಯ ಪ್ರಮುಖಧಾರೆ ಯಾಗಿ ಕಂಡುಬರುತ್ತವೆ. ಸಮಾಜದಲ್ಲಿ ಭೂಗತ ಹೋರಾಟಗಳು ಮತ್ತು ಹೋರಾಟಗಾರರ ಕುರಿತು ಕಂಡುಬರುವ ಭಿನ್ನ ವಿಚಾರಧಾರೆಗಳು ಸಮಾಜ ಹಾಗೂ ಸರ್ಕಾರದ ಆಶಯಗಳು, ವ್ಯವಸ್ಥೆ ಕುರಿತ ಹಲವು ಗ್ರಹಿಕೆಗಳ ಪ್ರತಿಬಿಂಬಗಳಾಗಿವೆ. ಭೂಗತ ಹೋರಾಟಗಳಿಗೆ ಪರೋಕ್ಷವಾಗಿ ಸಹಕಾರ ನೀಡುವ ಮತ್ತು ಅವುಗಳಲ್ಲಿ ಪಾಲ್ಗೊಳ್ಳದ ವರ್ಗಗಳು ಸಮಾಜದಲ್ಲಿ ಅಸ್ತಿತ್ವ ಹೊಂದಿರುತ್ತವೆ. ಭೂಗತ ಹೋರಾಟಗಾರರ ಕುಟುಂಬ, ಸಂಬಂಧಿಗಳು, ಸ್ನೇಹಿತರು ಸಮಾಜದ ಪ್ರಮುಖ ಅಥವಾ ನಿರ್ಲಕ್ಷಿತ ವರ್ಗಗಳಾಗಿರುತ್ತವೆ. ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಭೂಗತ ಹೋರಾಟಗಾರರ ಕುರಿತಂತೆ ಸಮಾಜದ ಪ್ರತಿಕ್ರಿಯೆಗಳು ಪ್ರಜಾಪ್ರಭುತ್ವದ ಗ್ರಹಿಕೆಗಳನ್ನು ತೆರೆದಿಡುತ್ತವೆ. ಭೂಗತ ಹೋರಾಟಗಾರರು, ಸಹವರ್ತಿಗಳು, ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸುತ್ತಿದ್ದವರು ಮತ್ತು ಸಮಾಜದ ಇತರ ವರ್ಗಗಳ ಪತ್ರಿಕ್ರಿಯೆಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ.

ಆಂತರಿಕ ತುರ್ತುಪರಿಸ್ಥಿತಿ ಸಂದರ್ಭದಲ್ಲಿ ಸಮಾಜದ ವರ್ಗಗಳು ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗೆ ಭಿನ್ನವಾಗಿ ಪ್ರತಿಕ್ರಿಯಿಸಿದೆ. ಸಾಹಿತ್ಯಲೋಕ ಮತ್ತು ಸಾಹಿತಿಗಳ ಪ್ರತಿಕ್ರಿಯೆ ಹೀಗಿದೆ:

> 'ಇದನ್ನು ಮಾತ್ರ ಓದು, ಇದನ್ನು ಮಾತ್ರ ಬರಿ, ಇದನ್ನು ಮಾತ್ರ ಯೋಚಿಸು' ಎನ್ನುವ ಕಾಲ ಬಂದಾಗ ಸಮಾಜ ಸಾಯುತ್ತದೆ. ಅಥವಾ ಭೂಗತವಾಗಿ ಮೆಲ್ಲಗೆ ಉಸಿರಾಡುತ್ತಾ ಸಮಯ ಕಾದು, ಈಗ ರಷ್ಯಾದಲ್ಲಿ ಆಗುತ್ತಿರುವಂತೆಯೆ ನಿಟ್ಜಿನ್‌ನಂಥವರ ಮುಖಾಂತರ ಬಂಡಾಯದಲ್ಲಿ ಬುಸುಗುಟ್ಟುತ್ತದೆ. ಅಥವಾ ಮಸೆನ್‌ಸ್ಟೈನ್‌ನ ಚಿತ್ರಗಳಲ್ಲಿರುವಂತೆ ಸ್ಟಾಲಿನ್ ಯುಗದ ರೂಪಕಗಳಾಗಿ ನಿಜ ಹೇಳುತ್ತವೆ ... ಜಾಯ್ಸ್ ಹೇಳಿದ: ಎಕ್ಸೈಲ್, ಸೈಲೆನ್ಸ್, ಕನ್ನಿಂಗ್ ಈ ಮೂರೂ ಲೇಖಕರು ತನ್ನ ಪ್ರಮಾಣಿಕತೆ ಕಾದುಕೊಳ್ಳಲು ಇರುವ ಸೂತ್ರಗಳು. ಸುಳ್ಳು ಹೇಳುವುದರ ಬದಲು ಮೌನ ವಾಸಿ: ಯಾಕೆಂದರೆ ಮೌನವೂ ಒಂದು ಬಗೆಯ ಸಬೋಟಾಜ್ ನಿಜವಾದ ಸಾಹಿತ್ಯದಲ್ಲಿ ಮಾತಿಗೂ ಮಿಗಿಲಾಗಿ ಮೌನವಿರುತ್ತದೆ. ನೇರವಾಗಿ ಬರೆಯಲಾಗದಿದ್ದರೆ ರೂಪಕಗಳಲ್ಲಿ ಮುಚ್ಚಿ ಹೇಳಬಲ್ಲ ಉಪಾಯ ವಾಯ್ಸ್ ಹೇಳುವ ಕನ್ನಿಂಗ್. ಸಾಹಿತಿ ಎಲ್ಲ ಕಾಲದಲ್ಲೂ ಎಲ್ಲ ಸಮಾಜಕ್ಕೂ ಅವಶ್ಯವಾದ ಗೆರಿಲ್ಲಾ, ಅಪ್ರಿಯವಾದದ್ದನ್ನು ಕಾಣಿಸಬಲ್ಲ. ಸಾಹಿತಿ ಸಾಹಿತ್ಯವೆಂದರೆ ಸಬ್‌ವೆನ್‌ಶನ್ (ಅನಂತಮೂರ್ತಿ ೨೦೦೦: ೨೭೮).

ಸಾಹಿತಿ ಮತ್ತು ಸಮಾಜದ ನಡುವಿನ ಸಂಬಂಧ ಪಡೆದುಕೊಳ್ಳಬೇಕಾದ ಸ್ವರೂಪ, ಭೂಗತ ಹೋರಾಟಗಳ ಅವಶ್ಯಕತೆಯನ್ನು ಅಂತರ್ ರಾಷ್ಟ್ರೀಯ ಘಟನೆ, ಚಿಂತನೆಗಳೊಂದಿಗೆ ಸಮೀಕರಿಸಿದೆ. ಭೂಗತ ಹೋರಾಟ ಕುರಿತಂತೆ ಸಾಹಿತಿ ಮತ್ತು ಸಾಹಿತ್ಯದ ಪಾತ್ರ ಹೇಗಿರಬೇಕೆಂದು ಬರೆದಿರುವಂತೆ ಕಂಡುಬರುವುದು. ಪ್ರತಿಭಟನೆ

ಗಳ ಪರವಿರುವ ವರ್ಗದ ಚಿಂತನೆ ಹಾಗೂ ಅಸಹಾಯಕತೆಯನ್ನು ಅಭಿವ್ಯಕ್ತಗೊಳಿಸುತ್ತಲೇ ಸಾಹಿತ್ಯದಲ್ಲಿ ಯಾವ ರೀತಿ ಪ್ರತಿರೋಧ ಪ್ರದರ್ಶಿಸಬಹುದೆಂಬ ವಿಚಾರಗಳನ್ನು ಕೇಂದ್ರೀಕರಿಸುವುದು. ಈ ಪತ್ರವನ್ನು ಗಮನಿಸಿದಾಗ ಎಡಪಂಥೀಯ ಸೈದ್ಧಾಂತಿಕ ಹಿನ್ನೆಲೆಯ ಭೂಗತ ಪತ್ರಿಕೆಗೆ ಬರೆದಂತೆ ತೋರುವುದು. ಇದಕ್ಕೆ ಪೂರಕವಾಗಿ '೧೯೭೭ರ ಏಪ್ರಿಲ್‌ನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವದಲ್ಲಿ ಸಾಹಿತ್ಯ ಪರಿಷತ್ತು ಸಾಮಾಜಿಕ ಚಳುವಳಿಗಳಿಗೆ ವೇದಿಕೆಯಾಗಬೇಕಿತ್ತು. ಆದರೆ ಸಾಹಿತ್ಯ ಪರಿಷತ್ತು ಸಹಕರಿಸಲಿಲ್ಲ' ಎಂದು ವಿರೋಧಿಸಿ ಸಂಯುಕ್ತ ಕರ್ನಾಟಕಕ್ಕೆ ಬರೆದ ಪತ್ರ ಕಾಣಬಹುದು. ಇಂತಹದೆ ನಿಲುವು, ಚಿಂತನೆಗಳನ್ನು ತುರ್ತುಪರಿಸ್ಥಿತಿ ವಿರೋಧಿಸಿ ಪ್ರತಿಭಟಸುತ್ತಿದ್ದ ಅನೇಕ ಸಾಹಿತಿಗಳಲ್ಲಿ ನೋಡಬಹುದಾಗಿದೆ.

ಭೂಗತ ಹೋರಾಟಗಾರ ಮತ್ತು ಅವರ ಕುಟುಂಬ ವರ್ಗದವರ ನಡುವಿನ ಸಂಬಂಧಗಳ ಹಿನ್ನೆಲೆಯಲ್ಲಿ ತುರ್ತುಪರಿಸ್ಥಿತಿ ಕಾಲದಲ್ಲಿ ಅತಿ ಹೆಚ್ಚು ಪ್ರಸಾರವಾದ ಪತ್ರಲೇಖನಗಳಲ್ಲೊಂದು 'ಎ ಲೆಟರ್ ಫ್ರಂ ಎ ಫಾದರ್ ಟು ಹಿಸ್ ಸನ್'. ಈ ಪತ್ರ ಬರೆದ ಗೌರ್ ಕಿಶೋರ್ ಆನಂದ ಬಜಾರ್ ಪತ್ರಿಕೆಯ ಪತ್ರಕರ್ತ. ತುರ್ತುಪರಿಸ್ಥಿತಿ ವಿರೋಧಿಸಿ ಹೋರಾಟಕ್ಕೆ ಇಳಿಯುವ ಮುನ್ನ ತನ್ನೊಳಗಿನ ಸಂಘರ್ಷಗಳನ್ನು ೧೩ ವರ್ಷದ ಮಗನಿಗೆ ಬರೆದ ಪತ್ರವಾಗಿದೆ. ಭೂಗತ ಹೋರಾಟಗಾರರ ಮಾನಸಿಕ ಸಂಘರ್ಷ, ಹೋರಾಟಕ್ಕಾಗಿ ಕುಟುಂಬದ ಸೌಖ್ಯದ ತ್ಯಾಗ ಪ್ರತಿಭಟನಾಕಾರರಿಗೆ ಪ್ರೇರಣೆ ಒದಗಿಸುತ್ತಿತ್ತು. ಇದರ ಪ್ರತಿಗಳು ಭೂಗತ ಸಂಪರ್ಕ ಜಾಲದಲ್ಲಿ ಪ್ರಸಾರ ಕಂಡವು. ಹಾಗೆ

> ರಾತ್ರೋರಾತ್ರಿ ಸುದ್ದಿಗಳು under gone a sex-change. ದಿನಕಳೆದಂತೆ, ವಾರಗಳುರುಳಿದಂತೆ ಸುದ್ದಿಪತ್ರಿಕೆಗಳು ಒಂದೆ ರೀತಿಯಲ್ಲಿ ಕಾಣತೊಡಗಿದವು. ಪಡಿಯಚ್ಚಿನಂತೆ ಮತ್ತು ನೀರಸವಾಗಿ/ ಹಳಸಿದಂತೆ ... ನಿರ್ವಾತವಾಗಿದ್ದ ಸ್ಥಳವನ್ನು ಗಾಳಿಸುದ್ದಿಗಳು ಬಹುಬೇಗನೆ ಆವರಿಸಿಕೊಳ್ಳ ತೊಡಗಿದವು. ಆದರೆ ಅದಕ್ಕೂ ಬಹುಬೇಗ ಶತ್ರುಗಳು ಕಂಡುಬಂದರು. 'ಭೂಗತ ಸುದ್ದಿಗಳ ಬುಲೆಟಿನ್' ಇದು ಪ್ರಾರ್ಥನೆಗೆ ಉತ್ತರದಂತೆ ಬಂದಿತು. ಬದಲಾವಣೆಗೆ ಭರವಸೆಯಂತೆ. ಅದು ಬಹುದೂರ ಇರಬಹುದಾದರು(ರಾವ್ ೧೯೭೭: ೧೫)

ಎಂಬ ಅಭಿಮತವಿದೆ. ಸುದ್ದಿಪತ್ರಿಕೆಯೊಂದರ ಪ್ರಕಾರ ಕರ್ನಾಟಕದ ೧೫೦೦ ಮನೆಗಳಲ್ಲಿ ಇದಕ್ಕೆ ವ್ಯವಸ್ಥೆ ಆಗಿತ್ತು. ೫೦೦ ಜನ ಭೂಗತರಿಗೆ ವಾಸಕ್ಕೆ ನೆಲೆ ಒದಗಿಸಿಕೊಟ್ಟಿದೆ ಎಂದಿದೆ. ಈ ವಿಚಾರಗಳೆಲ್ಲವು ಭೂಗತ ಹೋರಾಟಗಾರರು ಮತ್ತು ಸಮಾಜದ ನಡುವಿನ ಸಂಬಂಧಗಳ ಸ್ವರೂಪವನ್ನು ಪ್ರತಿಬಿಂಬಿಸುವುದು. ಈ ಉಲ್ಲೇಖಗಳು ಮತ್ತು ಅಂಕಿಅಂಶಗಳ ವಿವರ ಸಮಾಜದಲ್ಲಿನ ತುರ್ತುಪರಿಸ್ಥಿತಿ ವಿರೋಧಿ ಹೋರಾಟಗಳ ಪರವಾಗಿದ್ದ ಹಲವು ವರ್ಗಗಳ ಕುರಿತಾಗಿದೆ. ಭೂಗತ ಹೋರಾಟಗಾರರ ವಿರುದ್ಧವಿದ್ದ ಹಾಗೂ ತಟಸ್ಥ ಧೋರಣೆ ಹೊಂದಿದ್ದ ಸಮಾಜದ ಇತರ ವರ್ಗಗಳ ಪ್ರತಿಕ್ರಿಯೆ ಗುರುತಿಸುವುದು ಕಷ್ಟಕರ. ಸಾಮಾನ್ಯವಾಗಿ ಆರಂಭದಲ್ಲಿ ಸರ್ಕಾರದ ನಿರ್ಧಾರ ಸರಿಯೆಂಬ ಧೋರಣೆ ಹೆಚ್ಚಾಗಿತ್ತು. ಕಾಲಕ್ರಮೇಣ ಪ್ರತಿಭಟನಾಕಾರರ ವಿರುದ್ಧ ಸರ್ಕಾರ ತೆಗೆದುಕೊಳ್ಳುತ್ತಿದ್ದ ಕ್ರಮಗಳು ಹಾಗೂ ಬಂಧನಗಳು ಎಲ್ಲ ರೀತಿಯ ಪ್ರತಿಭಟನಾಕಾರರ ಮೇಲೆ ಅಭಿಮಾನವನ್ನು ಹುಟ್ಟುಹಾಕಿದ್ದವು. ತಟಸ್ಥ[೫೪] ಧೋರಣೆ ಹೊಂದಿದ್ದ ವರ್ಗಗಳಲ್ಲಿ ಸರ್ಕಾರದ ಭಯವು ಭೂಗತ ಚಟುವಟಿಕೆಗಳಲ್ಲಿ ತೊಡಗಿರುವವರಿಂದ ದೂರಸರಿಯಲು ಪ್ರಮುಖ ಕಾರಣವಾಗಿತ್ತು. ಜೊತೆಗೆ ಭೂಗತ ಹೋರಾಟಗಾರನ ಮನೆಯವರು ಮತ್ತು ಬಂಧುಗಳೊಂದಿಗೆ ಸಂಪರ್ಕ ಹೊಂದಲು ಸಮಾಜ ಭಯದಿಂದ ನಿರಾಕರಿಸಲಾಗುತ್ತಿತ್ತು. ಕೆಲವೊಮ್ಮೆ ಪರೋಕ್ಷವಾಗಿ ಯಾರೊಡನೆಯೊ ಮಾತನಾಡುತ್ತಿರುವಂತೆ ಮೆಚ್ಚುಗೆಯನ್ನು ಸೂಚಿಸುತ್ತಿದ್ದರು ಮೊದಲಾದ ಅನುಭವಗಳನ್ನು ಭೂಗತ ಹೋರಾಟಗಾರರು ಹಂಚಿಕೊಳ್ಳುವರು. ಸಮಾಜ ಮತ್ತು ಭೂಗತ ಹೋರಾಟಗಾರರ ನಡುವಿನ ಸಂಬಂಧಗಳ ಸ್ವರೂಪ ಹಾಗೂ ಭೂಗತ ಹೋರಾಟಗಾರರ ಪ್ರತಿಭಟನೆಗಳಿಗೆ, ಸಮಾಜದ ಪ್ರತಿಕ್ರಿಯೆಯು ಪ್ರಜಾಪ್ರಭುತ್ವದ ಗ್ರಹಿಕೆಯ ಸ್ವರೂಪಗಳನ್ನು ಬಿಂಬಿಸುವುದು. ಈ ದಿಕ್ಕಿನಲ್ಲಿ ಹೆಚ್ಚಿನ ಅಧ್ಯಯನದ ಅಗತ್ಯವಿದೆ. ಮಾಹಿತಿ ಸಂಗ್ರಹಣೆಗೆ

ಸಮಾಜದ ಎಲ್ಲ ವರ್ಗಗಳ ಅಭಿಪ್ರಾಯ ಸಂಗ್ರಹ ಹಾಗೂ ಅಲ್ಲಲ್ಲಿ ದಾಖಲಿತವಾಗಿರುವ ಇತರ ಮಾಹಿತಿಗಳ ಸಂಗ್ರಹಕ್ಕೆ ವಿಸ್ತೃತವಾದ ಕ್ಷೇತ್ರಕಾರ್ಯ ಅಗತ್ಯವಾಗಿದೆ.

*** *** ***

ತುರ್ತುಪರಿಸ್ಥಿತಿಯನ್ನು ವಿರೋಧಿಸಿ ದೊಡ್ಡ ಮತ್ತು ಸಣ್ಣ ಪ್ರಮಾಣದ ಪ್ರತಿಭಟನೆಗಳು ಬಹಿರಂಗವಾಗಿ ಹಾಗೂ ಪರೋಕ್ಷವಾಗಿ ಹಲವು ರೀತಿಯಲ್ಲಿ ಅಭಿವ್ಯಕ್ತವಾಗಿವೆ. ಈ ಪ್ರತಿಭಟನೆಗಳಲ್ಲಿ ಪಾಲ್ಗೊಂಡಿದ್ದ ವರ್ಗ ಹೆಚ್ಚಾಗಿ ಮೇಲ್ ಮಧ್ಯಮವರ್ಗ, ರಾಜಕಾರಣಿಗಳು ಮತ್ತು ರಾಜಕೀಯ ಸಂಘ ಸಂಸ್ಥೆಗಳೊಡನೆ ಸಂಪರ್ಕವಿದ್ದಂತಹವರಾಗಿದ್ದಾರೆ. ಸಮಾಜದ ಹಿಂದುಳಿದ ವರ್ಗಗಳು, ಅಲ್ಪ ಸಂಖ್ಯಾತರು ಮತ್ತು ದಲಿತ ಸಮುದಾಯದ ಬಹುಸಂಖ್ಯಾತರು ಇದಕ್ಕೆ ನೇರವಾಗಿ ಪ್ರತಿಕ್ರಿಯಿಸಲಿಲ್ಲ. ಶಾಸನ ಸಭೆಗಳಲ್ಲಿ ಮತ್ತು ಸಾರ್ವಜನಿಕ ವಲಯಗಳಲ್ಲಿ ಸರ್ಕಾರದ ಆಡಳಿತ ನೀತಿಯ ವಿರುದ್ಧ ನೇರ ಹಾಗೂ ಪರೋಕ್ಷ ಪ್ರತಿಭಟನೆಗಳು ಕಂಡುಬರುತ್ತವೆ. ಶಾಸನ ಸಭೆಗಳಲ್ಲಿ ತುರ್ತುಪರಿಸ್ಥಿತಿಯನ್ನು ನೇರವಾಗಿ ವಿರೋಧಿಸುವ ಮತ್ತು ಸರ್ಕಾರದ ಕಾರ್ಯನೀತಿಯ ಬೇರೆಬೇರೆ ವಿಚಾರಗಳನ್ನು ಪ್ರಶ್ನಿಸಿರುವ ಮೂಲಕ ಪರೋಕ್ಷ ಪ್ರತಿಭಟನೆಗಳನ್ನು ಕಾಣಬಹುದು. ಸಾರ್ವಜನಿಕ ಪ್ರತಿಭಟನೆಗಳಲ್ಲಿ ಗುಂಪು/ಸಮೂಹ ಪ್ರತಿಭಟನೆ ಮೆರವಣಿಗೆ, ಸತ್ಯಾಗ್ರಹ ಮೊದಲಾದ ಸ್ವರೂಪಗಳಲ್ಲಿ ಕಂಡುಬಂದರೆ, ಅನೇಕ ಬಾರಿ ವೈಯಕ್ತಿಕ ನೆಲೆಗಳಲ್ಲಿ ಅಭಿವ್ಯಕ್ತಗೊಂಡಿದೆ. ಸಮಕಾಲೀನವಾಗಿ ಸಮೂಹ ಮಾಧ್ಯಮಗಳಲ್ಲಿ ವಿವಿಧ ಸ್ವರೂಪಗಳಲ್ಲಿ ಪ್ರತಿಭಟನೆಗಳು ವ್ಯಕ್ತವಾಗಿವೆ. ಪತ್ರಿಕಾರಂಗದಲ್ಲಿ ಪರೋಕ್ಷ ಪ್ರತಿಭಟನೆಗಳು ಹೆಚ್ಚಾಗಿ ವಿರೋಧಾಭಾಸಗಳಿರುವ ವರದಿಗಳ ವಿನ್ಯಾಸ, ಸರ್ಕಾರದ ಕಾರ್ಯಕ್ರಮಗಳನ್ನು ವ್ಯಂಗ್ಯವಾಗಿ ಹೊಗಳುವುದು ಮೊದಲಾದ ರೂಪಗಳಲ್ಲಿವೆ. ಸಾಹಿತ್ಯದಲ್ಲಿ ವೈಯಕ್ತಿಕ ನೆಲೆಯ ಪ್ರತಿಭಟನೆಗಳಲ್ಲಿ ಅಸಹನೆ, ಆಕ್ರೋಶ, ಅಸಹಾಯಕತೆ ಹಲವು ಬಗೆಯಲ್ಲಿ ವ್ಯಕ್ತವಾಗಿವೆ. ಸಂಘಟಿತ ನೆಲೆಗಳಲ್ಲಿ ಪ್ರತಿಭಟನೆಗಳನ್ನು ದಾಖಲು ಮಾಡುವ, ಸಮಾಜದಲ್ಲಿನ ಅಸಮಾಧಾನ, ಪ್ರತಿಭಟನಾ ಸ್ವರೂಪದ ಅರಿವುಂಟು ಮಾಡುವ ಮನೋಭಾವ ಅಧಿಕವಾಗಿ ಕಂಡುಬರುತ್ತವೆ. ಸಮಾಜದ ಇತರ ವಲಯಗಳಿಗೆ ಪ್ರತಿಭಟಿಸಲು ಧೈರ್ಯ, ಪ್ರೇರಣೆಗೆ ಅವಕಾಶ ಸೃಷ್ಟಿ ಹಾಗೂ ಸಾಂಸ್ಕೃತಿಕ ಜಗತ್ತಿನ ಪ್ರತಿಭಟನೆಗಳನ್ನು ಪ್ರಕಟಿಸಲು ವೇದಿಕೆ ನಿರ್ಮಾಣದ ಪ್ರಯತ್ನ ವ್ಯಕ್ತಗೊಂಡಿದೆ. ಹಾಗೇ ಇದು ಕನ್ನಡ ಸಾಹಿತ್ಯದಲ್ಲಿ ನವ್ಯದಿಂದ ಬಂಡಾಯ ಪಂಥದೆಡೆಗಿನ ಪ್ರಮುಖ ಕೊಂಡಿಯಾಗಿದೆ. ದೃಶ್ಯ ಮಾಧ್ಯಮವನ್ನು ಗಮನಿಸಿದರೆ ರಂಗಭೂಮಿಯಲ್ಲಿ ಬೀದಿ ನಾಟಕಗಳು ಹೆಚ್ಚು ಪ್ರಸಿದ್ಧಿ ಪಡೆದು, ಪ್ರತಿಭಟನೆಯ ಅಸ್ತ್ರವಾಗಿ ಪರಿವರ್ತಿತವಾಗುವ ಪ್ರಕ್ರಿಯೆ ಕಂಡುಬರುವುದು. ಈ ಕಾಲಘಟ್ಟದಲ್ಲಿ ಆಡಳಿತಶಾಹಿಯ ವಿರೋಧಿ ನೆಲೆಯಲ್ಲಿ ಅವುಗಳನ್ನು ಪ್ರಶ್ನಿಸುವ ಹಾಗೂ ಪ್ರತಿಭಟಿಸುವ ಸಿನಿಮಾಗಳ ಸೃಷ್ಟಿ ಹೆಚ್ಚಾಗಿದೆ. ಐತಿಹಾಸಿಕ ಹಾಗೂ ರಾಜಶಾಹಿ ಕಥಾಹಂದರವುಳ್ಳ ಸಿನಿಮಾಗಳ ಸಂಖ್ಯೆ ಹಿಂದಿಗಿಂತ ಅಧಿಕವಾಗಿದೆ.

ಭೂಗತ ಹೋರಾಟ ಆರಂಭಿಸಿರುವ ಉದ್ದೇಶ, ಸ್ವರೂಪ ಕುರಿತು ಸಾರ್ವಜನಿಕರಿಗೆ ತಿಳಿಯ ಪಡಿಸುವುದರ ಉದ್ದೇಶವನ್ನು ಸಾಧಿಸಲು ಸಾಹಿತ್ಯ, ಪತ್ರಿಕೆಗಳ ಪ್ರಕಟಣೆ ಮೊದಲಾದ ಕಾರ್ಯಚಟುವಟಿಕೆ ಹೆಚ್ಚು ಅಸ್ತಿತ್ವದಲ್ಲಿದ್ದದ್ದನ್ನು ಗಮನಿಸಬಹುದು. ಸಮಕಾಲೀನ ಭೂಗತ ಹೋರಾಟದ ಸ್ವರೂಪದ ಪ್ರಮುಖ ಲಕ್ಷಣ ಬಹುತೇಕ ಅಹಿಂಸಾತ್ಮಕವಾಗಿರುವುದು. ಪ್ರತಿಭಟನಕಾರರ ಸೈದ್ಧಾಂತಿಕ ನಿಲುವು ಕಾರ್ಯವಿಧಾನ, ತಂತ್ರ ಮೊದಲಾದವುಗಳಲ್ಲಿ ಭಿನ್ನತೆಯನ್ನುಂಟು ಮಾಡಿವೆ. ಅಹಿಂಸಾತ್ಮಕ ಹೋರಾಟಗಳಲ್ಲಿ ಆರ್.ಎಸ್.ಎಸ್. ಮತ್ತು ಸಹಚರ ಸಂಘಟನೆಗಳು, ಕಮ್ಯುನಿಸ್ಟ್(ಮಾರ್ಕ್ಸಿಸ್ಟ್), ಸ್ವತಂತ್ರ ಪಕ್ಷ, ಕಾಂಗ್ರೆಸ್(ಒ) ಮೊದಲಾದ ರಾಜಕೀಯ ಪಕ್ಷ ಹಾಗೂ ಸಂಘಟನೆಗಳು ಕಂಡುಬರುತ್ತವೆ. ಹಿಂಸಾತ್ಮಕ ಹೋರಾಟಗಳಲ್ಲಿ ಸಮಾಜವಾದಿಗಳು (ಜಾರ್ಜ್ ಫರ್ನಾಂಡೀಸ್ ಮತ್ತು ಸಂಗಡಿಗರ ಗುಂಪು) ತೊಡಗಿಕೊಂಡಿದ್ದು ಕಾಣಬಹುದು. ಸರ್ಕಾರದ ಆಡಳಿತಕ್ಕೆ ಅಡೆತಡೆಗಳ ಮೂಲಕ ಪ್ರತಿಭಟನೆ, ಅಸ್ತಿತ್ವ ಪ್ರದರ್ಶನ, ಅವುಗಳ ಮೂಲಕ ಸರ್ಕಾರದ ಮೇಲೆ ಒತ್ತಡ ಸೃಷ್ಟಿಸುವುದು ಮುಖ್ಯ ಉದ್ದೇಶವಾಗಿತ್ತು.

ಭೂಗತ ಸಾಹಿತ್ಯ, ಕರಪತ್ರಗಳು ಮತ್ತು ಪತ್ರಿಕೆಗಳನ್ನು ಗಮನಿಸಿದರೆ ಭಾಷಾ ಬಳಕೆಯಲ್ಲಿ ಭಾವ ತೀವ್ರತೆ, ಉದ್ವೇಗ, ಧಾರ್ಮಿಕತೆಯನ್ನು ಪ್ರಚೋದನಾಕಾರಿಯಾಗಿ ಬಲಪಂಥೀಯ ಪ್ರತಿಭಟನಾಕಾರರು ಹೆಚ್ಚಾಗಿ

ಬಳಸಿದ್ದಾರೆ. ಎಡಪಂಥೀಯ ಭೂಗತ ಸಾಹಿತ್ಯ ವಿದೇಶಿ ಭೂಗತ ಹೋರಾಟ ಸಾಹಿತ್ಯದಿಂದ ಪ್ರೇರಿತವಾಗಿರುವುದನ್ನು ಗಮನಿಸಬಹುದು. ಪ್ರಜಾಪ್ರಭುತ್ವ, ಸ್ವಾತಂತ್ರ್ಯ, ಮೂಲಭೂತ ಹಕ್ಕುಗಳು, ಭೂಗತ ಹೋರಾಟಗಾರರ ಚಟುವಟಿಕೆಗಳಿಗೆ ಸಲಹೆಗಳು, ಸರ್ಕಾರದ ನೀತಿಗಳನ್ನು ಕುರಿತ ವಿಚಾರಗಳು, ಚಿಂತನೆಗಳು ಕೆಲವು ಬಾರಿ ಆಕ್ರೋಶಭರಿತವಾಗಿರುತ್ತಿದ್ದವು. ಭಾವನಾತ್ಮಕ, ಧಾರ್ಮಿಕ ಅಂಶಗಳು ಹೆಚ್ಚು ಕಂಡುಬರುವುದಿಲ್ಲ. ಸಂವಿಧಾನಾತ್ಮಕ ಹಾಗೂ ಭೂಗತ ಹೋರಾಟಗಾರರ ಪ್ರತಿಭಟನೆಯ ಸ್ವರೂಪಗಳ ಮೇಲೆ ಪ್ರತಿಭಟನಾಕಾರರ ಸೈದ್ಧಾಂತಿಕ ನಿಲುವುಗಳು ಬೀರಿರುವ ಪ್ರಭಾವ ಗಣನೀಯವಾದುದು. ಕೆಲವು ಹಂತದಲ್ಲಿ ಪ್ರತಿಭಟನಾಕಾರರ ನಡುವಿನ ಭಿನ್ನತೆಗಳು ಕರಗಿ ಒಟ್ಟಾಗಿ ಪ್ರತಿಭಟಸಿರುವರು. ಸೂಕ್ಷ್ಮವಾಗಿ ಗಮನಿಸಿದಾಗ ಈ ವಲಯದಲ್ಲಿ ಹೆಚ್ಚಾಗಿ ಕಂಡುಬರುವವರು ಮಧ್ಯಪಂಥೀಯ ಧೋರಣೆಯ ಪ್ರಗತಿಪರ ಚಿಂತಕರು. ಇವರಿಗೆ ಪ್ರತಿಭಟನೆ ಹೆಚ್ಚು ಪ್ರಮುಖವಾಗಿತ್ತು. ಬಲಪಂಥೀಯ ಪ್ರತಿಭಟನಾಕಾರರಿಗೆ ಪೂರಕವಾಗಿ ಸಹಕಾರ ನೀಡಿರುವರು.

ಸೈದ್ಧಾಂತಿಕ ಮೌಲ್ಯಗಳು, ರಾಜಕಾರಣ ಮತ್ತು ಆಡಳಿತ ವ್ಯವಸ್ಥೆಯಲ್ಲಿ ಅಳವಡಿಕೆಯಲ್ಲಿರುವ ಭಿನ್ನತೆಗಳು ನಿರ್ವಹಿಸಿರುವ ಪಾತ್ರ ಗುರುತರವಾಗಿದೆ. ಇವುಗಳೇ ಸಮಕಾಲೀನವಾಗಿ ಕಂಡುಬಂದ ರಾಜಕೀಯ ಮತ್ತು ಸಾಮಾಜಿಕ ಚಳವಳಿಗಳ ಪ್ರಕ್ರಿಯೆಯ ಕೇಂದ್ರ, ರಾಜ್ಯದಿಂದ ರಾಜ್ಯಕ್ಕೆ ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆ, ಪ್ರಭಾವ ಪರಿಣಾಮಗಳ ಬದಲಾವಣೆಯಲ್ಲಿ ಪ್ರಮುಖ ಪಾತ್ರ ನಿರ್ವಹಿಸಿರುವಂತಿದೆ. ೧೯೭೭ರ ಸಾರ್ವತ್ರಿಕ ಚುನಾವಣೆಗಳಲ್ಲಿ ದಕ್ಷಿಣ ಭಾರತದಲ್ಲಿ ವಿರೋಧ ಪಕ್ಷಗಳಿಗಿಂತ ಆಡಳಿತ ಪಕ್ಷದ ಶಾಸಕರನ್ನೆ ಆಯ್ಕೆ ಮಾಡಿರುವುದು ಗಮನಾರ್ಹ. ರಾಜಕಾರಣ ಮತ್ತು ಸಮಾಜದ ವಿಭಿನ್ನ ಪ್ರತಿಕ್ರಿಯೆಗಳು, ಪ್ರತಿಭಟನೆಯ ವಿಭಿನ್ನ ಆಶಯಗಳು, ಅಗತ್ಯಗಳೆಡೆಗೆ ಸೂಚಿಸುವುದು. ಅಸ್ತಿತ್ವದಲ್ಲಿದ್ದ ಇತರ ಹೋರಾಟಗಳ ಕೇಂದ್ರ ಆಶಯ, ಸರ್ಕಾರದ ಕಾರ್ಯನೀತಿ ಮತ್ತು ಸ್ವಾತಂತ್ರ್ಯದ ಪರಿಕಲ್ಪನೆಯ ಪಾತ್ರ ಅನನ್ಯವಾಗಿದೆ. ರಾಜ್ಯ ರಾಜಕಾರಣ, ರಾಷ್ಟ್ರ ರಾಜಕಾರಣ ಮತ್ತು ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳನ್ನು ಭಿನ್ನ ನೆಲೆಗಟ್ಟಿನಲ್ಲಿ ನೋಡುತ್ತಿರುವುದು ಮೇಲ್ನೋಟಕ್ಕೆ ಕಂಡುಬರುವುದು. ಭಾರತದ ತುರ್ತುಪರಿಸ್ಥಿತಿ ಕರ್ನಾಟಕದ ರಾಜಕೀಯ ಮತ್ತು ಸಾಮಾಜಿಕ ಜೀವನದ ಮೇಲೆ ಪ್ರಭಾವ ಪರಿಣಾಮದ ರೂಪದಲ್ಲಿ ಮಾತ್ರ ವ್ಯಕ್ತವಾಗಲಿಲ್ಲ. ಬದಲಾಗಿ ಸಾಮಾಜಿಕ ಮತ್ತು ರಾಜಕೀಯ ಚಳವಳಿಗಳಿಗೆ ಪರ್ಯಾಯಗಳನ್ನು ಸೃಷ್ಟಿಸಿತು. ಪ್ರತಿಭಟನೆಗಳನ್ನು ಅನಿವಾರ್ಯವಾಗಿಸಿದ ಮತ್ತು ಅನಿವಾರ್ಯತೆಯು ಕರ್ನಾಟಕದಲ್ಲಿ ಪರ್ಯಾಯ ರಾಜಕಾರಣ ಹಾಗೂ ಚಳವಳಿಗೆ ಅವಕಾಶ ಮಾಡಿಕೊಟ್ಟ ನೆಲೆಗಳ ಕುರಿತ ಚಿಂತನೆಯ ಅಧ್ಯಯನ ಅಗತ್ಯವಿದೆ.

**ಟಿಪ್ಪಣಿ**

೧. ಭಾರತ ಸರ್ಕಾರದ ಪಬ್ಲಿಕೇಷನ್ ಡಿವಿಷನ್ ಪ್ರಕಟಿಸಿದ ಟೈಮ್‌ಲಿ ಸ್ಟೆಪ್ಸ್ ಕಿರು ಪುಸ್ತಕದಲ್ಲಿ ಆಂತರಿಕ ತುರ್ತುಪರಿಸ್ಥಿತಿ ಹಾಗೂ ಸಮಾಜೋ-ಆರ್ಥಿಕ ವಿಚಾರಗಳ ಕುರಿತ ಅಭಿಪ್ರಾಯಗಳನ್ನು ಸಂಗ್ರಹಿಸಿ ಪ್ರಕಟಿಸಿದೆ. ತುರ್ತುಪರಿಸ್ಥಿತಿ ಕುರಿತು ಬಹುತೇಕ ರಾಜ್ಯಗಳ ಮುಖ್ಯಮಂತ್ರಿ ಪ್ರತಿಕ್ರಿಯೆಗಳನ್ನು ದಾಖಲಿಸಲಾಗಿದೆ. ಇಲ್ಲಿ ಕೆಲವು ರಾಜ್ಯಗಳ ಮುಖ್ಯಮಂತ್ರಿ ಪ್ರತಿಕ್ರಿಯೆಗಳನ್ನು ಕೆಳಗೆ ನೀಡಲಾಗಿದೆ.

- ★ ವೆಂಗಲ್ ರಾವ್(ಆಂಧ್ರ ಪ್ರದೇಶ) - ಪ್ರಧಾನ ಮಂತ್ರಿಯವರ ವಿರುದ್ಧ ವಿರೋಧಿ ಶಕ್ತಿಗಳ ಹೊಣೆಗೇಡಿತನ ರಾಷ್ಟ್ರದಲ್ಲಿ ತುರ್ತುಪರಿಸ್ಥಿತಿ ಜಾರಿಗೆ ಕಾರಣ. ಕೆಲವು ಸುದ್ದಿಪತ್ರಿಕೆಗಳು, ಅದರಲ್ಲೂ ನಿಯತಕಾಲಿಕೆಗಳು ಸರ್ಕಾರ ಮತ್ತು ಪ್ರಧಾನಮಂತ್ರಿಯವರ ವಿರುದ್ಧ ತನ್ನ ಸ್ವತಂತ್ರವನ್ನು ದುರ್ಬಲಕೆ ಮಾಡಿಕೊಂಡಿವೆ. ಉಚ್ಚ ನ್ಯಾಯಾಲಯ ಪ್ರಧಾನಿಯಾಗಿ ಮುಂದುವರಿಯಲು ಅನುಮತಿ ನೀಡಿಯೂ ಸಹ ವಿರೋಧ ಪಕ್ಷಗಳು ಪ್ರಧಾನಮಂತ್ರಿಯವರು ಅಧಿಕಾರದಲ್ಲಿ ಮುಂದುವರಿಯುವುದರ ವಿರುದ್ಧ ಚಳವಳಿ ಆರಂಭಿಸುವುದಾಗಿ ಹೆದರಿಸಿವೆ. ಸೈನ್ಯ ಮತ್ತು ಪೊಲೀಸರನ್ನು ಸರ್ಕಾರದ ಆಜ್ಞೆಗಳನ್ನು ನಿರಾಕರಿಸುವಂತೆ ಹೇಳುವಷ್ಟೂ ಮುಂದೆ ಹೋಗಿವೆ. ಯಾವುದೇ ಜವಾಬ್ದಾರಿಯುತ ಸರ್ಕಾರವು ಈ ರೀತಿಯ ಪ್ರಚಾರಗಳನ್ನು ಸಹಿಸುವುದಿಲ್ಲ.
- ★ ಜಗನ್ನಾಥ ಮಿಶ್ರ(ಬಿಹಾರ್) - ಇದು ರಾಷ್ಟ್ರದ ಆಂತರಿಕ ಭದ್ರತೆ ಮತ್ತು ಪ್ರಜಾತಂತ್ರ ವ್ಯವಸ್ಥೆಯ ಉಳಿವಿಕೆಗೆ ಆತಂಕ ಒಡ್ಡಿದ ಪ್ರತಿಗಾಮಿ ಮತ್ತು ಎಡಪಂಥೀಯ ಸಾಹಸಿ ಶಕ್ತಿಗಳೊಡನೆ ಹೋರಾಡಲು ಸಹಾಯವಾಗುತ್ತದೆ.
- ★ ದೇವರಾಜ ಅರಸು(ಕರ್ನಾಟಕ) - ಇಂತಹ ಕ್ರಮವನ್ನು ತೆಗೆದುಕೊಳ್ಳುವ ತುರ್ತು ಅಗತ್ಯವಿತ್ತು. ಪ್ರಜಾತಂತ್ರದ ರಕ್ಷಣೆಯ ಹೆಸರಿನಲ್ಲಿ ಪ್ರಜಾತಂತ್ರವನ್ನು ಅಂತ್ಯಗೊಳಿಸಲು ಹೊರಟ ರಾಷ್ಟ್ರ ರಾಜಕಾರಣದ ಯೋಜನೆಗಳನ್ನು ಮುರಿಯುವುದು.
- ★ ಅಚ್ಯುತ ಮೆನನ್(ಕೇರಳ) - ನನಗೆ ನಂಬಿಕೆ ಇದೆ, ತುರ್ತುಪರಿಸ್ಥಿತಿಗೆ ನಮ್ಮ ದೇಶದಲ್ಲಿ ಪ್ರಜಾತಂತ್ರ ವ್ಯವಸ್ಥೆಯನ್ನು ಗೌರವಿಸುವ ಮತ್ತು ಪ್ರಗತಿಪರ ಯೋಜನೆಗಳ ವಿಸ್ತರಣೆಯು ಸಫಲವಾಗಿ ಸಹಕರಿಸುತ್ತದೆ. ಕೇಂದ್ರ ಸರ್ಕಾರದ ಈ ಕ್ರಮಗಳು ಸಕಾಲಿಕವಾದುದು ಮತ್ತು ಸರಿಯಾದ ದಿಶೆಯಲ್ಲಿದೆ.
- ★ ಪಿ.ಸಿ.ಸೇಥಿ(ಮಧ್ಯಪ್ರದೇಶ) - ಮಾರ್ಕ್ಸ್‌ವಾದದ ವಿಚಾರ ಮತ್ತು ಫ್ಯಾಸಿಸಂನ ನೆರಳು ಪ್ರಜಾತಂತ್ರದ ಮೇಲೆ ಬಿದ್ದಿದೆ. ಇದು ನಮ್ಮ ರಾಷ್ಟ್ರದ ಪ್ರಶಾಂತ ವಾತಾವರಣವನ್ನು ಕೆಲವು ಸಮಯದ ಹಿಂದೆ ವಾಸ್ತವವಾಗಿ ನಿಜವಾದ ಮತ್ತು ನಿಸ್ಸಂದೇಹವಾದ ಆತಂಕವೆಂದು ಕಲ್ಪಿಸಿಕೊಳ್ಳಲಾಗಿತ್ತು ... ಈಗ ಇದರ ಬೆಳವಣಿಗೆ ಪರಿಶೀಲಿಸುವುದು ಅಗತ್ಯ, ನಮ್ಮ ಜನತೆ ಮತ್ತು ರಾಷ್ಟ್ರದ ಅಸ್ತಿತ್ವಕ್ಕೆ ಅಪಾಯಕ್ಕೀಡು ಮಾಡಿದೆ.
- ★ ಹೆಚ್.ಎನ್.ಬಹುಗುಣ(ಉತ್ತರಪ್ರದೇಶ) - ತುರ್ತುಪರಿಸ್ಥಿತಿ ಸಂವಿಧಾನದ ಪ್ರಕಾರ ಅಧಿಕಾರವನ್ನು ಕೇಂದ್ರೀಕರಿಸುವ ಯಂತ್ರವಲ್ಲ. ಆದರೆ ಇದನ್ನು ಸಾರ್ವಭೌಮತ್ವ, ಭದ್ರತೆ ಮತ್ತು ಪ್ರಜಾಪ್ರಭುತ್ವದ ರಚನೆಯ ಶಕ್ತಿ ಹೆಚ್ಚಿಸುವಿಕೆಗೆ, ಬದಲಾವಣೆಯ ಪ್ರಕ್ರಿಯೆಯನ್ನು ಸರಾಗಗೊಳಿಸಲು ಮತ್ತು ರಾಷ್ಟ್ರದ ಉತ್ತಮ ಬಿಂಬವನ್ನು ಬಿಂಬಿಸಲು ಅವಶ್ಯವಿದೆ.
- ★ ಸಿದ್ಧಾರ್ಥ ಶಂಕರ್ ರೇ(ಪಶ್ಚಿಮ ಬಂಗಾಳ) - ಈ ಪರಿಸ್ಥಿತಿಯಲ್ಲಿ, ಇದೊಂದನ್ನು ಮಾತ್ರ ಮಾಡಲು ಸಾಧ್ಯವಿದ್ದದ್ದು. ಯಾವ ಸರ್ಕಾರವು ಅದರ ಅರ್ಹತೆಯನ್ನು ಈ ರೀತಿಯಲ್ಲಿ ಕೆಲವು ವ್ಯಕ್ತಿಗಳು ರಾಷ್ಟ್ರಾದ್ಯಂತ ಹಾಳು ಮಾಡುವುದನ್ನು ನಿಶ್ಶಬ್ದ ವೀಕ್ಷಕನಾಗಿ ನೋಡುವುದಿಲ್ಲ. ಪ್ರಜಾಪ್ರಭುತ್ವದ ಹೆಸರಿನಲ್ಲಿ ಈ ವ್ಯಕ್ತಿಗಳು ಪ್ರಜಾಪ್ರಭುತ್ವದ ಉಸಿರುಗಟ್ಟಿಸುತ್ತಿದ್ದಾರೆ. ಪ್ರಧಾನಮಂತ್ರಿ ಮತ್ತು ಇತರರ ಮೇಲೆ ಅಪಾದನೆ ಮೇಲೆ ಅಪಾದನೆ ಮಾಡಲಾಗುತ್ತಿದೆ. ಇದು ಸಂಪೂರ್ಣವಾಗಿ ತಪ್ಪು ಮತ್ತು ನಿರರ್ಥಕವಾದುದು. ಇದೆಲ್ಲದರ ನಡುವೆ, ಅವರು ಯಾವುದೇ ಸರ್ಕಾರ ನಡೆಸದಂತೆ ತಮ್ಮ ಚಟುವಟಿಕೆಗಳಲ್ಲಿ ಕಾರ್ಯ ನಿರತರಾಗಿದ್ದಾರೆ ... ಹಾಗಾಗಿ, ಬಹಳ ಸರಿಯಾದ ಸಮಯದಲ್ಲಿ ಕಾರ್ಯರೂಪಕ್ಕೆ ತಂದಿದ್ದಾರೆ. ಈಗ ನಾವೆಲ್ಲರೂ ಸರಿಯಾದ ಮತ್ತು ಸಮತೋಲಿತ ಆರ್ಥಿಕ ಅಭಿವೃದ್ಧಿಯನ್ನು ರಾಷ್ಟ್ರಾದ್ಯಂತ ನೋಡುತ್ತೇವೆ.

೨. ದಿ ಹಿಂದೂ ಪತ್ರಿಕೆಯಲ್ಲಿ ಮುಖಪುಟದಲ್ಲಿ ವರದಿಯಾದ ಸುದ್ದಿಗಳು.

೩. ಸಂವಿಧಾನದಲ್ಲಿರುವ ಪ್ರಜಾಪ್ರಭುತ್ವದ ವ್ಯಾಖ್ಯಾನ.

೪. ಇಲ್ಲಿ ಆಡಳಿತ ಪಕ್ಷಗಳು ಎಂದರೆ ಆಡಳಿತ ಕಾಂಗ್ರೆಸ್ ಮತ್ತು ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ.

೫. ಈ ಕೆಳಗಿನ ಪಟ್ಟಿಯು ಸಂವಿಧಾನದ ತಿದ್ದುಪಡಿ ಸಂಖ್ಯೆಯನ್ನು, ಈ ಕುರಿತು ಸದನದಲ್ಲಿ ವಿಚಾರ ಮಂಡನೆಯಾದ ದಿನಾಂಕ, ಚರ್ಚೆಗಳ ಕಾಲಾವಧಿ ಮತ್ತು ರಾಷ್ಟ್ರಪತಿ ಒಪ್ಪಿಗೆಯೊಂದಿಗೆ ಜಾರಿಯಾದ ಸಂದರ್ಭದ ವಿವರಗಳನ್ನು ನೀಡಲಾಗಿದೆ.

೬. ಟೈಮ್‌ಲಿ ಸ್ಟೆಪ್ಸ್‌ನಲ್ಲಿ ಆಂತರಿಕ ತುರ್ತುಪರಿಸ್ಥಿತಿ ಜಾರಿಗೊಳಿಸಿದ ನಂತರ ತಂದ ಸಮಾಜೋ-ಆರ್ಥಿಕ ಕಾರ್ಯಕ್ರಮಗಳ ಕುರಿತು, ಕೆಲವು ಪಕ್ಷಗಳು, ಸಂಘಟನೆಗಳು, ರಾಜ್ಯಗಳ ಮುಖ್ಯಮಂತ್ರಿ ಅಭಿಪ್ರಾಯಗಳನ್ನು ಕೆಳಗೆ ನೀಡಲಾಗಿದೆ.

- ★ ಇದರಲ್ಲಿ ವಿರೋಧ ಪಕ್ಷಗಳಿಂದಾದ ತೊಂದರೆಗಳು ಮತ್ತು ಸರ್ಕಾರದ ಆರ್ಥಿಕ ಕಾರ್ಯಕ್ರಮಗಳನ್ನು ಮಾತ್ರ ಚರ್ಚಿಸಲಾಗಿದೆ. ಅದರಲ್ಲಿಯೂ ವಿಶೇಷವಾಗಿ ೨೦ ಅಂಶದ ಕಾರ್ಯಕ್ರಮಗಳು. ಸರ್ಕಾರದ ಕೆಲವು ನಿರ್ಧಾರಗಳನ್ನು ಮಾತ್ರ, ಇದಕ್ಕೆ ಪ್ರತಿಯಾಗಿ ಬಂದ ಪ್ರತಿಭಟನೆಗಳ ಯಾವ ಸ್ವರೂಪವನ್ನು ಕುರಿತು ಇಲ್ಲಿ ಮಾತನಾಡುವುದಿಲ್ಲ. ಆಲ್ ಇಂಡಿಯಾ ರೇಡಿಯೋದಲ್ಲಿ ೧೯೭೫ರ ಜುಲೈ ೧ರಂದು ಇಂದಿರಾ ಗಾಂಧಿ ಅವರು ಮಾಡಿದ ದಿ ನ್ಯೂ ಇಕಾನಾಮಿಕ್ ಪ್ರೊಗ್ರಾಮ್ ಭಾಷಣದ ಲಿಖಿತ ರೂಪದ ಸಾರವಿದು.
- ★ ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾದ ಕೇಂದ್ರ ಕಾರ್ಯಕಾರಿ ಸಮಿತಿಯು ಪ್ರಧಾನಿಯವರು ಘೋಷಿಸಿರುವ ಆರ್ಥಿಕ ಕಾರ್ಯ ಕ್ರಮಗಳನ್ನು ಸ್ವಾಗತಿಸಿದೆ. ಇದು ಪ್ರಭಾವಯುತವಾಗಿ ಜಾರಿ ಆಗಬೇಕೆಂಬುದಕ್ಕೆ ಹೆಚ್ಚಿನ ಒತ್ತು ನೀಡಿದೆ. ಆದರೆ ಇವರು ಭೂ ಮಾಲಿಕರ ಮತ್ತು ಅಂತರ್ ರಾಷ್ಟ್ರೀಯ ಕಂಪನಿಗಳ ಏಕಸ್ವಾಮ್ಯದ ವಿರುದ್ಧ ಇನ್ನೂ ಹೆಚ್ಚಿನ ಪ್ರಾಥಮಿಕ ಕಾರ್ಯಕ್ರಮಗಳನ್ನು ರೂಪಿಸಬೇಕಾಗಿದೆ.

* ವೆಂಗಲ್ ರಾವ್(ಆಂಧ್ರ ಪ್ರದೇಶ) – ಪ್ರಧಾನ ಮಂತ್ರಿಯವರು ಘೋಷಿಸಿರುವ ಹೊಸ ಆರ್ಥಿಕ ಕಾರ್ಯಕ್ರಮವನ್ನು ಉತ್ಸಾಹ ಮತ್ತು ತ್ವರಿತವಾಗಿ ಜಾರಿಗೆ ತರಲಾಗುವುದು. ಆರ್ಥಿಕತೆಯ ಅಭಿವೃದ್ಧಿಯ ಹಿನ್ನೆಲೆಯಲ್ಲಿ ಸರ್ಕಾರೇತರ ಖರ್ಚುವೆಚ್ಚಗಳನ್ನು ಗಮನಿಸಲಾಗುವುದು.
* ಜಗನ್ನಾಥ್ ಮಿಶ್ರ(ಬಿಹಾರ) – ಈ ಹೊಸ ಆರ್ಥಿಕ ಕಾರ್ಯಕ್ರಮಗಳು ಆರ್ಥಿಕತೆ ಮತ್ತು ಹಿಂದುಳಿದವರಲ್ಲಿ ಬದಲಾವಣೆಯನ್ನು ತರುತ್ತದೆ. ಈಗಿನ ಆರ್ಥಿಕತೆ ಕುಂಠಿತವಾಗಿರುವುದನ್ನು ಕೊನೆಗೊಳಿಸಿ, ಉದ್ಯೋಗ ಹೆಚ್ಚಳಗೊಳಿಸುತ್ತದೆ ಹಾಗೂ ಗ್ರಾಹಕರಿಗೆ ನಿರಂತರವಾಗಿ ಬೇಕಾದ ಸಾಮಾನು ಸರಂಜಾಮುಗಳು ಸಿಗುವಂತೆ ಮಾಡುತ್ತದೆ.
* ದೇವರಾಜ ಅರಸು(ಕರ್ನಾಟಕ) – ಆರ್ಥಿಕ ಕಾರ್ಯಕ್ರಮಗಳು ಅತ್ಯಂತ ಪ್ರಶಂಸನೀಯವಾಗಿದೆ ಮತ್ತು ಇದನ್ನು ಎಲ್ಲ ದೇಶಭಕ್ತಿಯುಳ್ಳ ನಾಗರಿಕರು ಸ್ವಾಗತಿಸುತ್ತಾರೆ. ಭಾರತದ ಜನರ ಆರ್ಥಿಕ ಮತ್ತು ಸಾಮಾಜಿಕ ಜೀವನವನ್ನು ಬದಲಾಯಿಸುವಲ್ಲಿ ಸಹಾಯ ಮಾಡುತ್ತವೆ ಎಂಬುದರಲ್ಲಿ ಯಾವುದೇ ಅನುಮಾನವಿಲ್ಲ.
* ಅಚ್ಯುತ ಮೆನನ್(ಕೇರಳ) – ಶ್ರೀಮತಿ ಇಂದಿರ ಗಾಂಧಿ ಅವರ ಆರ್ಥಿಕ ಕಾರ್ಯಕ್ರಮಗಳನ್ನು, ಸರಿಯಾಗಿ ಜಾರಿಗೆ ತಂದಿದ್ದೇ ಆದಲ್ಲಿ ಗಣನೀಯವಾದ ಸುಧಾರಣೆಗಳನ್ನು ಜನರ ಜೀವನದಲ್ಲಿ ತರಲು ಸಾಧ್ಯ ಎಂಬುದರಲ್ಲಿ ಅನುಮಾನವಿಲ್ಲ.
* ಪಿ.ಸಿ.ಸೇಥಿ(ಮಧ್ಯಪ್ರದೇಶ) – ರಾಜ್ಯ ಸರ್ಕಾರವು ಕಾರ್ಯಕ್ರಮವನ್ನು ಜಾರಿಗೆ ತರಲು ಹೆಚ್ಚಿನ ಸಮಯವನ್ನು ತೆಗೆದುಕೊಳ್ಳುವುದಿಲ್ಲ.
* ಶಂಕರ್‌ರಾವ್ ಚೌಹಾಣ್(ಮಹಾರಾಷ್ಟ್ರ) – ರಾಷ್ಟ್ರದ ಜನರ ಮೇಲೆ ಹೊಸ ಆರ್ಥಿಕ ಕಾರ್ಯಕ್ರಮಗಳು ಅಸಾಧಾರಣವಾದ ಪರಿಣಾಮವನ್ನು ಬೀರುತ್ತದೆ.
* ಕರುಣಾನಿಧಿ(ತಮಿಳುನಾಡು) – ಈ ಕಾರ್ಯಕ್ರಮಗಳನ್ನು ಇಲ್ಲಿಯವರೆಗೆ ಅಳವಡಿಸಿಕೊಳ್ಳದಿದ್ದ ರಾಜ್ಯಗಳಿಗೆ ಇದು ಉಪಯುಕ್ತವಾಗುತ್ತದೆ ಎಂಬುದರಲ್ಲಿ ಅನುಮಾನವಿಲ್ಲ.
* ಹೆಚ್.ಎನ್.ಬಹುಗುಣ(ಉತ್ತರಪ್ರದೇಶ) – ರಾಷ್ಟ್ರದಾದ್ಯಂತ ಈ ಆರ್ಥಿಕ ಕಾರ್ಯಕ್ರಮಗಳನ್ನು ರಾಜ್ಯದ ಜನತೆಯು ಚಟುವಟಿಕೆಯಿಂದ ಮತ್ತು ಹೃತ್ಪೂರ್ವಕವಾಗಿ ಜಾರಿಗೆ ತರಲು ಸಹಕರಿಸುವ ಮೂಲಕ ತಮ್ಮ ಹೊಸ ಜೀವನದಲ್ಲಿ ಅಳವಡಿಸಿಕೊಳ್ಳಲು ಸಾಧ್ಯ.
* ಸಿದ್ಧಾರ್ಥ ಶಂಕರ್ ರೇ(ಪಶ್ಚಿಮ ಬಂಗಾಳ) – ಈ ಆರ್ಥಿಕ ಕಾರ್ಯಕ್ರಮವನ್ನು ಈಗ ಜಾರಿಗೆ ತರಲು ಆಗದಿದ್ದಲ್ಲಿ, ಮುಂದೆಂದು ಜಾರಿಗೆ ತರಲು ಸಾಧ್ಯವಿಲ್ಲ. ಅದೃಷ್ಟವಶಾತ್, ಬೆಂಗಾಲದಲ್ಲಿ ಯುವಕರು ಮತ್ತು ವಿದ್ಯಾರ್ಥಿಗಳು ಈ ನಿಟ್ಟಿನಲ್ಲಿ ನಮ್ಮೊಡನಿದ್ದಾರೆ. ಇದರಿಂದ ಅತ್ಯಂತ ಹೆಚ್ಚು ಸ್ಫೂರ್ತಿ ಪಡೆದಿದ್ದಾರೆ.

೭. ತುರ್ತುಪರಿಸ್ಥಿತಿ ಮತ್ತು ಸಮಾಜೋ-ಆರ್ಥಿಕ ಅಂಶಗಳ ಜಾರಿ ಕುರಿತು ಟೈಮ್‌ಲಿ ಸ್ಟೆಪ್ಸ್ ಪುಸ್ತಕದಲ್ಲಿ ಪ್ರಕಟವಾಗಿರುವ ವಿದೇಶಿ ಮುಖಂಡರುಗಳು, ಪತ್ರಿಕೆಗಳ ಅಭಿಪ್ರಾಯಗಳನ್ನು ನೀಡಲಾಗಿದೆ. ಇಲ್ಲಿರುವ ಎಲ್ಲ ಅಭಿಮತಗಳು ಸರ್ಕಾರಕ್ಕೆ ಪೂರಕವಾಗಿದೆ. ಅಭಿಮತಗಳು ದಾಖಲಾಗಿರುವ ದೇಶ ಮತ್ತು ಪತ್ರಿಕೆಗಳ ಹೆಸರುಗಳು ಹೀಗಿವೆ. ಅಲ್ ಅಹ್ರಾಮ್(ಅರಬ್ ರಿಪಬ್ಲಿಕ್ ಆಫ್ ಈಜಿಪ್ಟ್), ಅಲ್ ಬಾತ್(ಸಿರಿಯ), ಅಲ್ ಥಾವರ್(ಇರಾಕ್), ಬಾಂಗ್ಲದೇಶ, ಇಂಡೋನೇಷಿಯಾ, ದೈನಿಕ್ ನೇಪಾಲ್(ನೇಪಾಲ್), ನ್ಯೂ ಸ್ಟೇಟ್ ಟೈಮ್ಸ್ (ಯುಗೋಸ್ಲೋವಿಯ) ಮತ್ತು ಬರ್ಮ ಮತ್ತಿತರಗಳಾಗಿವೆ.

೮. ೧೯೭೬ರ ರಾಜ್ಯಪಾಲರ ಭಾಷಣದಲ್ಲಿ ತುರ್ತುಪರಿಸ್ಥಿತಿ ಜಾರಿಗೆ ತಂದ ಪರಿಣಾಮಗಳನ್ನು '೧೯೭೫ರ ಜೂನ್ ಕೊನೆಯಲ್ಲಿ ರಾಷ್ಟ್ರದಲ್ಲಿ ತುರ್ತುಪರಿಸ್ಥಿತಿಯನ್ನು ಘೋಷಿಸಿದ ಪರಿಣಾಮವಾಗಿ ಜಾತಿ ಭಾವನೆ ಕೆರಳಿಸುವ ಮತ್ತು ಸಮಾಜ ವಿರೋಧಿ ವ್ಯಕ್ತಿಗಳನ್ನು ಪ್ರತಿಬಂಧಕ ಸ್ಥಾನಬದ್ಧತೆಯಲ್ಲಿಡಲಾಗಿದೆ. ದೊಡ್ಡ ಪ್ರಮಾಣದ ಕೋಮುವಾರು ಘಟನೆಗಳಾಗಲಿ ಅಥವಾ ಯಾವುದೆ ವಿದ್ಯಾರ್ಥಿ ಗಲಭೆಗಳಾಗಲಿ ಅಥವಾ ಹಿಂಸಾತ್ಮಕ ಚಟುವಟಿಕೆಗಳಾಗಲಿ ನಡೆದಿಲ್ಲ ... ರಾಷ್ಟ್ರೀಯ ಶಿಸ್ತುಪಾಲನೆ ಮತ್ತು ಆರ್ಥಿಕ ಅಭಿವೃದ್ಧಿಯ ದಿಸೆಯಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರದವರು ಕೈಕೊಂಡ ಕ್ರಮಗಳನ್ನು ಬಹುಜನರು ಸ್ವಾಗತಿಸುತ್ತಿದ್ದಾರೆ ಎಂಬುದು ವ್ಯಕ್ತವಾಗಿದೆ. ಅಂಥ ಕ್ರಮಗಳು ರಾಷ್ಟ್ರೀಯ ಮುನ್ನಡೆಗೆ ಮತ್ತು ಪ್ರಗತಿಗೆ ಅನುಕೂಲವಾಗಿದೆ ಎಂದು ಜನರು ಭಾವಿಸಿದ್ದಾರೆ. ಈ ಕ್ರಮಗಳನ್ನು ಇನ್ನೂ ಹೆಚ್ಚು ಸಮರ್ಪಣಾ ಭಾವದಿಂದ ಹಾಗೂ ದೃಢ ನಿರ್ಧಾರದಿಂದ ಜಾರಿಗೊಳಿಸಬೇಕೆಂದು ಜನ ಬಯಸುತ್ತಾರೆ. ಈ ದಿಸೆಯಲ್ಲಿ ನಮ್ಮ ಸರಕಾರವು ಎಲ್ಲ ಉತ್ಸಾಹಪೂರ್ಣ ಕಾರ್ಯಗಳನ್ನು ಮಾಡುವುದು' ಎಂದು ಸರ್ಕಾರದ ಕಾರ್ಯನೀತಿಗಳಲ್ಲಿ ಹೇಳಿರುವುದು ಗಮನಾರ್ಹ.

೯. ಇಲ್ಲಿ ಚರ್ಚಿತವಾಗಿರುವ ಉದಾಹರಣೆಗಳು ಕರ್ನಾಟಕ ಲೆಜಿಸ್ಲೇಟಿವ್ ಕೌನ್ಸಿಲ್‌ನ ೧೯೭೬ರ ಫೆಬ್ರವರಿ ೧೨ ರಿಂದ ೨೧ರವರೆಗೆ ಮತ್ತು ೧೯೭೬ರ ಮಾರ್ಚ್ ೨೫ ರಿಂದ ಏಪ್ರಿಲ್ ೧೫ರವರೆಗಿನ ಶಾಸನ ಸಭೆಯ ಅಧಿವೇಶನಗಳ ದಾಖಲಾತಿಯನ್ನು ಆಧರಿಸಿದ್ದಾಗಿದೆ. ಇಲ್ಲಿ ಕಾಯ್ದೆ ೨೮೪ರ ಪ್ರಕಾರ ಬೊಮ್ಮಾಯಿ ಮತ್ತು ಎ.ಎಸ್.ಕೃಷ್ಣ ಅಯ್ಯರ್ ಅವರು ಸರ್ಕಾರವನ್ನು ಸಂವಿಧಾನಿಕ ನೆಲೆಯಲ್ಲಿ ಪ್ರಶ್ನಿಸುವ ಮೂಲಕ ಪ್ರತಿಭಟಿಸಿರುವುದನ್ನು ಕಾಣಬಹುದು.

೧೦. ಇಲ್ಲಿ ಚರ್ಚೆಗೊಳಗಾದ ವಿಚಾರಗಳನ್ನು ಕರ್ನಾಟಕ ಲೆಜಿಸ್ಲೆಟಿವ್ ಅಸೆಂಬ್ಲಿಯ ೧೯೭೫ರ ಜುಲೈ ೨೮ ರಿಂದ ಆಗಸ್ಟ್ ೯, ೧೯೭೬ರ ಫೆಬ್ರವರಿ ೩ ರಿಂದ ೧೦, ೧೯೭೬ರ ನವೆಂಬರ್ ೮ ರಿಂದ ೧೨ ಮತ್ತು ೧೯೭೬ರ ನವೆಂಬರ್ ೧೫ ರಿಂದ ೧೯ ಡಿಬೇಟ್‌ಗಳಲ್ಲಿ ದಾಖಲಾಗಿರುವ ವಿಚಾರಗಳ ಮೇಲೆ ಆಧಾರಿತವಾಗಿದೆ.

೧೧. ಇಲ್ಲಿ ಚರ್ಚಿಸಿರುವ ಜಾರ್ಜ್ ಫರ್ನಾಂಡೀಸರ ಧೋರಣೆ ಅಮಿಯಾ ರಾವ್(ಸಂ) ಅವರ ದಿ ಪ್ರೆಸ್ ಷಿ ಕುಡ್ ನಾಟ್ ಫ್ಲಿಪ್: ಎಮರ್ಜೆನ್ಸಿ ಇನ್ ಇಂಡಿಯಾ ಅಸ್ ರಿಪೋರ್ಟೆಡ್ ಬೈ ಫಾರಿನ್ ಪ್ರೆಸ್ ಕೃತಿಯಲ್ಲಿ ಪ್ರಕಟಿತವಾಗಿದೆ. ಭೂಗತ ಹೋರಾಟಗಾರರಾಗಿದ್ದ ಜಾರ್ಜ್ ಫರ್ನಾಂಡೀಸ್ ಅವರನ್ನು ವಿದೇಶಿ ಪತ್ರಕರ್ತರೊಬ್ಬರು ಸಂದರ್ಶಿಸಿ, ಪ್ರಕಟಿಸಿದ ಸಂದರ್ಶನದ ಸಾರ (ಪುಟ ೨೧೧ ರಿಂದ ೨೧೩).

೧೨. ತುರ್ತುಪರಿಸ್ಥಿತಿ ಸಂದರ್ಭದಲ್ಲಿ ಸರ್ಕಾರ ಜಾರಿಗೊಳಿಸಿದ್ದ ಬೋನಸ್ ನಿಷೇಧಾಜ್ಞೆಯನ್ನು ವಿರೋಧಿಸಿ, ದೇಶದಾದ್ಯಂತ ಒಂದು ದಿನದ ಸಾಂಕೇತಿಕ ಮುಷ್ಕರವನ್ನು ಸಿಪಿಐ ಪಕ್ಷ ಕೈಗೊಂಡಿತ್ತು. ಆ ಸಂದರ್ಭದ ಸತ್ಯಾಗ್ರಹದ ಚಿತ್ರ, ಸಮಕಾಲೀನವಾಗಿ ಕಮ್ಯುನಿಸ್ಟ್ ಪಾರ್ಟಿ

ಆಫ್ ಇಂಡಿಯಾ ಕೂಡ ಆಡಳಿತ ಪಕ್ಷದೊಡನೆ ಆಡಳಿತದಲ್ಲಿ ಭಾಗಿಯಾಗಿದ್ದ ಪಕ್ಷ ಎಂಬುದು ಗಮನಾರ್ಹ.

೧೩. ಈ ಬಗೆಯ ಪ್ರತಿಭಟಣೆಯ ಕುರಿತು ಮಾಹಿತಿಯನ್ನು ಮೌಖಿಕ ಆಕರಗಳ ಮೂಲಕ ಸಂಗ್ರಹಿಸಿದ್ದಾಗಿದೆ. ಇಲ್ಲಿ ಡಾ.ವಿಜಯಮ್ಮ, ಚಂದ್ರಶೇಖರ ಪಾಟೀಲ ಮತ್ತು ಕೆ.ವಿ.ಅಕ್ಷರ ಅವರ ಅನುಭವಗಳನ್ನು ಬಳಸಲಾಗಿದೆ. ೨೬ ಜೂನ್ ೨೦೧೧ರಲ್ಲಿ ನಡೆದ ತುರ್ತುಪರಿಸ್ಥಿತಿ ವಿರೋಧಿ ಕೃತಿಗಳ ಬಿಡುಗಡೆ ಸಮಾರಂಭದಲ್ಲಿನ ಡಾ.ವಿಜಯಮ್ಮ ಮತ್ತು ಚಂದ್ರಶೇಖರ ಪಾಟೀಲ ಅವರ ಭಾಷಣಗಳನ್ನು ಬಳಸಿಕೊಳ್ಳಲಾಗಿದೆ. ೨೦೧೧ರ ಜನವರಿ ೧೫ರಂದು ಕೆ.ವಿ.ಅಕ್ಷರ ಅವರೊಂದಿಗಿನ ಸಂದರ್ಶನದಲ್ಲಿ ತಿಳಿದು ಬಂದಿದ್ದು.

೧೪. ಇಂತಹ ಜಾಹೀರಾತು ಅನೇಕ ಪತ್ರಿಕೆ, ನಿಯತಕಾಲಿಕೆ ಹಾಗೂ ಸರಕಾರಿ ಪುಸ್ತಕಗಳಲ್ಲಿ ಪ್ರಕಟವಾಗುತ್ತಿದ್ದದ್ದು ಕಂಡುಬರುತ್ತದೆ. ತುರ್ತುಪರಿಸ್ಥಿತಿ ಸಾಧನೆ ಕುರಿತು ಇಲ್ಲಿರುವ ಅಂಶಗಳು ಸಮಾಜೋ-ಆರ್ಥಿಕ ನೆಲೆಯ ಕಾರ್ಯಕ್ರಮಗಳಂತೆ ಕಂಡುಬರುತ್ತದೆ.

೧೫. ಮಾಹಿತಿ ಮತ್ತು ಪ್ರಸಾರ ವಿಭಾಗದ ನಿರ್ದೇಶಕರಾಗಿ ಚಿರಂಜೀವಿ ಸಿಂಗ್ ಅವರು ಕಾರ್ಯನಿರ್ವಹಿಸುತ್ತಿದ್ದರು.

೧೬. ಸಮಕಾಲೀನವಾಗಿ ಇಂದಿರಾ ಗಾಂಧಿ ಅವರ 'ಎ ಡೇ ವಿತ್ ಪ್ರೈಮ್ ಮಿನಿಸ್ಟರ್' ಮೊದಲಾದ ಸರ್ಕಾರದಿಂದ ಸೂಚಿಸಲ್ಪಟ್ಟ ಸಾಕ್ಷ್ಯಚಿತ್ರ, ಚಲನಚಿತ್ರಗಳನ್ನು ಹಳ್ಳಿಹಳ್ಳಿಗಳಲ್ಲಿ ಪ್ರದರ್ಶನ ಏರ್ಪಡಿಸಬೇಕಿತ್ತು. ಪ್ರತಿಭಟನೆಗಳು ಹೆಚ್ಚಿದ್ದ ಪ್ರದೇಶಗಳಲ್ಲಿ ಇಂತಹ ಚಿತ್ರಗಳ ಪ್ರದರ್ಶನ ಅಧಿಕಾರಿಗಳಿಗೆ ತೊಂದರೆಯುಂಟು ಮಾಡುತ್ತಿತ್ತು. ಕೆಲವೊಮ್ಮೆ ನೀರಸವಾದ ಚಿತ್ರಗಳೆಂದು ವೀಕ್ಷಕರು ನೋಡಬಯಸುತ್ತಿರಲಿಲ್ಲ ಎಂದು ಸಮಕಾಲೀನವಾಗಿ ಅಧಿಕಾರದಲ್ಲಿದ್ದ ಕೆಲವರು ಸ್ಮರಿಸುತ್ತಾರೆ. ಕ್ಷೇತ್ರಕಾರ್ಯದ ಸಂದಭದಲ್ಲಿ ದೊರೆತ ಮೌಖಿಕ ಆಕರ.

೧೭. ೧೯೭೫ ಜೂನ್ ೨೭ರಂದು ಸಂಪಾದಕೀಯವನ್ನು ಕೆಲವು ಸ್ಥಳೀಯ ಪತ್ರಿಕೆಗಳು ಖಾಲಿ ಬಿಟ್ಟು ತುರ್ತುಪರಿಸ್ಥಿತಿ ಜಾರಿಯನ್ನು ವಿರೋಧಿಸಿರುವುದು ಕಂಡುಬರುತ್ತವೆ. ಗುಲ್ಬರ್ಗಾ ಜಿಲ್ಲೆಯ 'ಸತ್ಯಕಾಮ' ಎಂಬ ಸ್ಥಳೀಯ ಪತ್ರಿಕೆಯ ಸಂಪಾದಕರು ಆ ಸಂದರ್ಭದಲ್ಲಿ ಸಂಪಾದಕೀಯವನ್ನು ಖಾಲಿಬಿಟ್ಟು ಪ್ರತಿಭಟಿಸಿದ್ದಾಗಿ, ಆದರೆ ಪತ್ರಿಕೆಯನ್ನು ರಕ್ಷಿಸ ಬೇಕೆಂದು ತಿಳಿಯಲಿಲ್ಲ ಎಂದು ಸ್ಥಳೀಯ ಪ್ರತಿಭಟನೆಗಳ ಸ್ವರೂಪ ಕುರಿತು ತಿಳಿಸುವರು. ೨೦೧೧ ಡಿಸೆಂಬರ್ ೧೦ರಂದು ಓ.ಎಂ.ಮಣ್ಣೂರರೊಡನೆ ನಡೆಸಿದ ಸಂದರ್ಶನದಲ್ಲಿ ದೊರೆತ ಮಾಹಿತಿ. ಇವರು ೧೯೭೦ರ ದಶಕದಿಂದ ಪ್ರಸ್ತುತದವರೆಗೆ ಪ್ರಗತಿಪರ ಹೋರಾಟಗಳೊಡನೆ ಗುರುತಿಸಿಕೊಂಡಿರುವ ಸ್ಥಳೀಯ ಪತ್ರಕರ್ತರು.

೧೮. ತುರ್ತುಪರಿಸ್ಥಿತಿ ಸಂದರ್ಭದಲ್ಲಿ ಸೆನ್ಸಾರ್‌ಶಿಪ್ ವಿರೋಧಿಸಿ ಬಂದ ಈ ವ್ಯಂಗ್ಯಚಿತ್ರವನ್ನು ಪ್ರಸ್ತುತ ಎನ್.ಸಿ.ಆರ್.ಟಿ ಪುಸ್ತಕದಲ್ಲಿ ಪ್ರಕಟಿಸಲು ಸೆನ್ಸಾರ್ ಮೂಲಕ ನಿರಾಕರಿಸಲಾಯಿತು.

೧೯. ದಿನಮಣಿ, ಮುರಸೊಲಿ ಮತ್ತು ವಿದ್ಯುತ್‌ಲತ ಮೊದಲಾದ ಪತ್ರಿಕೆಗಳು ತಮಿಳುನಾಡಿನಲ್ಲಿ ತುರ್ತುಪರಿಸ್ಥಿತಿಯ ವಿರುದ್ಧ ನೇರ ಪ್ರತಿಭಟಣೆಯನ್ನು ಮಾಡಿದ ಪತ್ರಿಕೆಗಳಾಗಿವೆ.

೨೦. ೧೯೭೫ರ ಜುಲೈ ೧ರಂದು ಬರೆದ ಆಪತ್ಕಾಲ ಎಂಬ ಸಣ್ಣ ಕವನ.

೨೧. ನಾ.ಮೊಗಸಾಲೆ ಅವರ ಸಮಗ್ರ ಕಾವ್ಯದಲ್ಲಿ ತುರ್ತುಪರಿಸ್ಥಿತಿಯನ್ನು ವಿರೋಧಿಸಿ ಪ್ರತಿಭಟಿಸಿದ ಕೆಲವು ಕವನಗಳನ್ನು ಕಾಣಬಹುದು. ಇಲ್ಲಿ ನೀಡಿರುವ ಜಾಹೀರಾತು ಕವನವು ಅಕ್ಟೋಬರ್ ೧೯೭೫ರಂದು ರಚಿಸಿರುವುದು. ಇದಲ್ಲದೆ 'ಮೂಗು' ಎಂಬ ಕವನವು ಜುಲೈ ೧೯೭೫ರಲ್ಲಿ ಬರೆದಿದ್ದು, ತುರ್ತುಪರಿಸ್ಥಿತಿಯನ್ನು ಘೋಷಿಸುವ ಮೂಲಕ ಸ್ವಾತಂತ್ರ್ಯ ಕಸಿದುಕೊಂಡಿರುವುದಾಗಿ ಪ್ರತಿಭಟಿಸಲಾಗಿದೆ. ಸ್ವಾತಂತ್ರ್ಯ, ಪ್ರಜಾಪ್ರಭುತ್ವ ಮತ್ತಿತರಗಳ ಬಗ್ಗೆ ಮಾತನಾಡಿದರೆ ಮೂಗಿನಲ್ಲಿ ಉರಿ ಉಂಟಾಗುತ್ತಿದ್ದು, ಯಾರದೋ ದಪ್ಪ ಬೆರಳು ಮೂಗಿನೊಳಗೆ ಹೋಗಿ ಒತ್ತುತ್ತಿದ್ದು ಉಸಿರಾಡಲು ಸಾಧ್ಯವಾಗುತ್ತಿಲ್ಲ ಎಂದು ಪ್ರತಿಕ್ರಿಯಿಸಿರುವುದನ್ನು ಕಾಣಬಹುದು. ಸಾಮಾನ್ಯವಾಗಿ ಬಹುತೇಕ ಕವಿಗಳ ಸಮಗ್ರ ಕಾವ್ಯವನ್ನು ಗಮನಿಸಿದರೆ ತುರ್ತುಪರಿಸ್ಥಿತಿಗೆ ಪ್ರತಿಕ್ರಿಯಿಸಿ ರಚಿತವಾಗಿರುವ ಕೆಲವು ಕವನಗಳು ಕಂಡುಬರುತ್ತವೆ. ಇವೆಲ್ಲವು ವೈಯಕ್ತಿಕ ನೆಲೆಗಟ್ಟಿನ ಹೋರಾಟಗಳು.

೨೨. ಈ ನಾಟಕವು 'ಎನ್‌ಕೌಂಟರ್ ಇನ್ ಉಂಬಗ್‌ಲ್ಯಾಂಡ್' ಎಂದು ಇಂಗ್ಲೀಷಿಗೆ ಅನುವಾದಗೊಂಡಿದೆ.

೨೩. ೧೯೭೭ರ ಮೇ ೫ರಂದು ರಚಿಸಿರುವುದು.

೨೪. ೧೯೭೭ರ ಮಾರ್ಚ್‌ನಲ್ಲಿ ವಿಚಾರ ಭಾರತಿ ಅಧ್ಯಯನ ವೇದಿಕೆಯಿಂದ ಪ್ರಕಟಿತವಾದ ಕವನ ಸಂಕಲನ. ಆ ಸಂದರ್ಭದಲ್ಲಿ, ಒಂದೆ ದಿನದಲ್ಲಿ ಇದರಲ್ಲಿರುವ ೨೫ ಕವಿತೆಗಳನ್ನು ಬರೆದು, ಅಂದೆ ಪುಸ್ತಕ ರೂಪದಲ್ಲಿ ಪ್ರಕಟಿಸಿ ತುರ್ತುಪರಿಸ್ಥಿತಿ ವಿರುದ್ಧ ಜಾಗೃತಿಗಾಗಿ ಹಂಚಲಾಯಿತು ಎಂಬ ವಿಚಾರವು ಗುಲ್ಬರ್ಗಾ ಕ್ಷೇತ್ರಕಾರ್ಯ ಸಂದರ್ಭದಲ್ಲಿ ತಿಳಿದುಬಂದ ಮೌಖಿಕ ವಿವರ. ಕವನ ಸಂಕಲನದ ಮಾತುವಿನಲ್ಲಿ(ಮುನ್ನುಡಿ) ಶಿವಶರಣ ಪಾವಳಿ ಅವರು ಇದಕ್ಕೆ ಪೂರಕವಾಗಿ 'ಒಂದು ದಿನವಲ್ಲ, ಕೆಲವೆ ಗಂಟೆಗಳಲ್ಲಿಯೆ ಈ ಗ್ರಂಥವನ್ನು ಮುದ್ರಿಸಿ ಕೊಟ್ಟ ನನ್ನ ಆತ್ಮೀಯ ಮಿತ್ರರೂ, ಚಂದನ ಪ್ರೆಸ್ಸಿನ ಒಡೆಯರೂ ಆದ ಶ್ರೀ ಜಿ.ಕೆ.ಹಳ್ಳಿ ಅವರಿಗೆ ಕೃತಜ್ಞತೆಗಳು' ಎಂದಿರುವುದನ್ನು ಗಮನಿಸಬಹುದು. ಇದರ ಕೆಲವು ಕವಿತೆಗಳು ಆಕಾಶವಾಣಿ ಕೇಂದ್ರದಲ್ಲಿ ಪ್ರಸಾರವಾಗಿದ್ದವು. ಈ ಕವಿತೆಗಳು ತುರ್ತುಪರಿಸ್ಥಿತಿಯನ್ನು ವಿರೋಧಿಸಿ, ೨೦+೫ ಕಾರ್ಯಕ್ರಮಗಳನ್ನು ವ್ಯಂಗ್ಯವಾಗಿ, ವಿಡಂಬನಾತ್ಮಕವಾಗಿ ರಚಿಸಿರುವಂತಹದ್ದು. ಕವನ ಸಂಕಲನವನ್ನು ಮಾಜಿ ಲೋಕಸಭಾ ಸದಸ್ಯರಾಗಿದ್ದ ಧರ್ಮರಾವ್ ಅಫಜಲ್‌ಪೂರಕರ್ ನೆನಪಿಗೆ ಎಂದು ಅರ್ಪಿಸಿರುವುದು ವಿಶೇಷವಾಗಿದೆ. ಕವನ ಸಂಕಲನದ ೨೫ ಕವಿತೆಗಳನ್ನು ಮುಖ್ಯವಾಗಿ ಎರಡು ಭಾಗಗಳಾಗಿ ವಿಂಗಡಿಸಲಾಗಿದೆ. ಪರಿಸ್ಥಿತಿಯ ೨೦ ಕವಿತೆಗಳಲ್ಲಿ 'ಪರಿಸ್ಥಿತಿಯಲ್ಲಿ, ಮುಗಿಯದ ಕನಸು, ಜಾತೀಯತರೆ, ತತ್ವ, ವ್ಯವಸ್ಥೆ, ಶಾಸಕನೋ ಸೈನಿಕನೋ, ೧೫, ೨೬ಕ್ಕೆ ಕತ್ತರಿ, ಸಮಾಜವಾದ, ಶೋಷಣೆ, ದಲಿತರ ಸವಾಲು' ಮುಖ್ಯವಾಗಿದೆ. ಪರಿಸ್ಥಿತಿಯ ೫ ಕವಿತೆಗಳಲ್ಲಿ ಪ್ರಾರ್ಥನೆ, ಮೂಕಸಾಕ್ಷಿ, ರಾಜಭಕ್ತಿ, ಮೆರವಣಿಗೆ, ಬಂಗಾರದ ಹೇಲು ಎಂಬ ಕವಿತೆಗಳನ್ನು ಕಾಣಬಹುದು. ಶಿವಶರಣ ಪಾವಳಿ ಅವರ ಸಮಗ್ರ ಕಾವ್ಯದಲ್ಲಿ ಶೈಲಜಾ ಉಡಚಣ ಅವರು 'ಪರಿಸ್ಥಿತಿಯ ೨೦.೫ ಕವಿತೆ'(೧೯೭೭) ಕುರಿತು ಸ್ವಾತಂತ್ರ್ಯದ ಹರಣ, ತುರ್ತುಪರಿಸ್ಥಿತಿ ಹೇರಿಕೆಯ ವಿರುದ್ಧ ಪ್ರಕಟಣೆಯ ಮೂಲಕ ತುರ್ತುಪರಿಸ್ಥಿತಿ ಕಾವ್ಯಲೋಕದಲ್ಲಿ ವಿಶೇಷ ದಾಖಲೆ ಸ್ಥಾಪಿಸಿದ್ದಾರೆ ಎಂದಿರುವರು. ಇದರ ಒಂದೆರಡು ಕವನಗಳನ್ನು ಕೆಲವು ಪ್ರಕಾಶಕರು 'ವಾಯ್ಸ್ ಆಫ್ ಎಮರ್ಜೆನ್ಸಿ'ಯಲ್ಲಿ ಸೇರಿಸಿ, ಇಂಗ್ಲಿಶಿಗೆ ಭಾಷಾಂತರಿಸಿ ಪ್ರಕಟವಾಗಿದೆ ಎಂಬ ಮಾಹಿತಿ ಇದೆ.

೨೫. ತುರ್ತುಪರಿಸ್ಥಿತಿ ವಿರೋಧಿಸಿ ರಚಿತವಾದ ಕಾದಂಬರಿ. ಗಾಢವಾದ ರಾಜಕೀಯ ವಸ್ತುವಿಷಯ ಹೊಂದಿದ್ದು, ಎರಡು ಸಮಾಜವಾದಿ ರಾಜಕೀಯ ಗುಂಪುಗಳ ನಡುವಿನ ಸಂಘರ್ಷ, ಸಮಾಜವಾದಿ ಸಿದ್ಧಾಂತದ ಹೆಸರಿನಲ್ಲಿ ನಡೆಯುವ ಕ್ರೌರ್ಯ, ಹಿಂಸೆ, ರಕ್ತಪಾತ ಮತ್ತು ಸಮಕಾಲೀನ ಕಾಂಗ್ರೆಸ್ ಪಕ್ಷದ ಸ್ವರೂಪವನ್ನು ಚಿತ್ರಿಸುವುದು. ಕಾದಂಬರಿಯ ಮುನ್ನುಡಿಯಲ್ಲಿ 'ಜನರಲ್ಲಿ ವೈಚಾರಿಕ ಕ್ರಾಂತಿಯಗ

ಬೇಕೆಂಬ ಉದ್ದೇಶದಿಂದ ರಚಿಸಿದ್ದಾಗಿ' ತಿಳಿಸಿರುವರು. ಇವರ ಮತ್ತೊಂದು ಕೃತಿ ನನಸಾಗದ ಕನಸುವಿನಲ್ಲಿ(೨೦೦೮) ತುರ್ತುಪರಿಸ್ಥಿತಿ ಸಂದರ್ಭದಲ್ಲಿ ರಚಿಸಿದ ಕ್ರಾಂತಿಕೂಟ(೧೯೭೫) ಕಾದಂಬರಿಯ ಕಥಾವಸ್ತು ೧೯೭೦ರದ ದಶಕದ ಆರಂಭದಲ್ಲಿನ ಬಂಗಾಳದಲ್ಲಿ ನಡೆದ ರಾಜಕೀಯ ಗುಂಪುಗಳ ರಕ್ತಸಿಕ್ತ ಹೊಡೆದಾಟದ ಪತ್ರಿಕಾ ವರದಿಗಳು ಎಂದಿರುವರು. ಕಡಿದಾಳ್ ಮಂಜಪ್ಪ ಅವರು ಆ ಸಂದರ್ಭದಲ್ಲಿ ಕಾಂಗ್ರೆಸ್ ಪಕ್ಷದಲ್ಲಿದ್ದರು ಹಾಗೂ ಜೆ.ಪಿ ಚಳವಳಿಯಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದವರು. ಆಗ ನವನಿರ್ಮಾಣ ಕ್ರಾಂತಿಯ ಅಧ್ಯಕ್ಷರಾಗಿದ್ದರು. ಈ ಸಂಘಟನೆಯಲ್ಲಿದ್ದ ಬಹುತೇಕ ಸಮಾಜವಾದಿಗಳು ತುರ್ತುಪರಿಸ್ಥಿತಿಯ ವಿರುದ್ಧ ಭಿನ್ನ ಭಿನ್ನ ಸ್ವರೂಪದಲ್ಲಿ ಪ್ರತಿಭಟಿಸಿರುವುದನ್ನು ಕಾಣಬಹುದು.

೨೬. ತುರ್ತುಪರಿಸ್ಥಿತಿಯ ನಂತರ ಪ್ರಕಟಿತವಾದ ತುರ್ತುಪರಿಸ್ಥಿತಿ ಕಾಲಘಟ್ಟದ ಸಾಹಿತ್ಯ ವಿಮರ್ಶೆಗಳು, ಸಾಹಿತ್ಯಿಕ ನಿಯತಕಾಲಿಕೆಗಳ ಲೇಖನಗಳನ್ನು ಆಧರಿಸಿ ಹೇಳಲಾಗಿದೆ.

೨೭. ೧೯೭೭ರ ಜನವರಿಯಲ್ಲಿ ಚುನಾವಣೆಯ ಘೋಷಣೆಯ ತರುವಾಯ ಸೆನ್ಸಾರ್‌ಶಿಪ್‌ನ್ನು ಸಾಕಷ್ಟು ಸಡಿಲಿಸಲಾಯಿತು. ಜನವರಿಯಿಂದಲೇ ಪತ್ರಿಕೆಗಳಲ್ಲಿ ತುರ್ತುಪರಿಸ್ಥಿತಿ ದಮನದ ವಿರುದ್ಧ, ಸರ್ಕಾರದ ವಿರುದ್ಧ ಬರವಣಿಗೆಗಳು, ಚುನಾವಣಾ ಪ್ರಚಾರಗಳು ಕಂಡುಬರುತ್ತವೆ. ಸಾಹಿತ್ಯಿಕ ವಲಯದಲ್ಲಿ ತುರ್ತುಪರಿಸ್ಥಿತಿ ವಿರೋಧಿಸಿದ ಸಾಹಿತ್ಯ, ಸಾಹಿತಿಗಳ ವಿಮರ್ಶೆ ಹೆಚ್ಚಾಗಿ ಕಂಡುಬರುವುದು.

೨೮. ಇದು ಸಂಸರ ವಿಗಡವಿಕ್ರಮರಾಯ ಆಧರಿಸಿ, ಸಮಕಾಲೀನ ಸಂದರ್ಭಕ್ಕೆ ತಕ್ಕಂತೆ ರಚಿಸಿದ ನಾಟಕ.

೨೯. ಈ ನಾಟಕಗಳ ವೈಶಿಷ್ಟ್ಯ ಎಂದರೆ ಮಾಸ್ಟರ್ ಹಿರಣ್ಣಯ್ಯನವರ ತಂದೆಯ ಕಾಲದಿಂದಲೂ ನಾಟಕಗಳನ್ನು ಆಡುತ್ತಲ್ಲಿದ್ದರು. ಸಮಕಾಲೀನ ಸಮಸ್ಯೆಗಳನ್ನು ನಾಟಕದ ಸಂಭಾಷಣೆಯಲ್ಲಿ ಬಳಸುವುದು. ಈ ಸಂಭಾಷಣೆಗಳೇ ಇದರ ಜೀವಾಳ.

೩೦. ಚಂಡ ಮಾರುತದಲ್ಲಿ ತುರ್ತುಪರಿಸ್ಥಿತಿ ಹಿನ್ನೆಲೆಯಲ್ಲಿ ತೊಂದರೆಗೊಳಗಾದವರಲ್ಲಿ ಸಮಕಾಲೀನ ರಾಜಕೀಯ ಮತ್ತು ಸಾಮಾಜಿಕ ವಲಯಗಳಲ್ಲಿ ಕಂಡುಬರುತ್ತಿದ್ದ ವಿಚಾರಗಳ ಆಯಾಮವನ್ನು ಚಿತ್ರಿಸಲಾಗಿದೆ. ಸಿನಿಮಾ ತೆರೆಕಂಡ ನಂತರದಲ್ಲಿ ನಿರೀಕ್ಷಿಸಿದ್ದ ಮಟ್ಟದಲ್ಲಿ ರೂಪುಗೊಂಡಿಲ್ಲ ಹಾಗೂ ನಿರಾಶೆ ಉಂಟುಮಾಡಿದೆ ಎಂಬ ಪತ್ರಿಕಾ ವಿಮರ್ಶೆ ಕಂಡುಬರುತ್ತದೆ. ಈ ಸಿನಿಮಾ ಕೇವಲ ರಾಜಕಾರಣವನ್ನು ಪ್ರತಿಭಟಿಸಿದ್ದಕ್ಕಷ್ಟೆ ಅಲ್ಲದೆ ತಾಂತ್ರಿಕ ಕಾರಣದಿಂದಲೂ ಚಲನಚಿತ್ರ ಅಧ್ಯಯನಕಾರರ ಗಮನಸೆಳೆದಿತ್ತು. ಪ್ರಸ್ತುತ ಈ ಸಿನಿಮಾದ ಪ್ರತಿ ಎಲ್ಲಿರುವುದೆಂದು ನಿರ್ಮಾಪಕರ ಮನೆಯವರು, ಸಿನಿಮಾದಲ್ಲಿ ತೊಡಗಿಸಿಕೊಂಡಿದ್ದವರು, ವಾರ್ತಾ ಇಲಾಖೆ ಮತ್ತು ಕನ್ನಡ ಚಲನಚಿತ್ರ ಅಕಾಡೆಮಿಯವರು ಮೊದಲಾದವರಾರಿಗೂ ಮಾಹಿತಿಯಿಲ್ಲ. ೧೯೯೩ ಅಥವಾ ೧೯೯೪ರಲ್ಲಿ ಈ ಚಿತ್ರ ಕಡೆಯ ಬಾರಿಗೆ ದೂರದರ್ಶನದಲ್ಲಿ ಪ್ರಸಾರವಾಯಿತು ಎಂಬ ಮಾಹಿತಿ ತಿಳಿದುಬರುವುದು. ಮಹಾಪ್ರಬಂಧದಲ್ಲಿ ಬಳಸಿರುವ ವಿಚಾರಗಳು ಸಮಕಾಲೀನ ಪತ್ರಿಕಾ ವಿಮರ್ಶೆಗಳು, ಚಿತ್ರ ನಿರ್ಮಾಣದಲ್ಲಿ ತೊಡಗಿಸಿಕೊಂಡಿದ್ದವರ ಅಭಿಮತ, ಸ್ಮರಣೆ ಮತ್ತು ಪುಸ್ತಕಗಳಲ್ಲಿ ಪ್ರಕಟವಾಗಿರುವ ಮಾಹಿತಿಯನ್ನು ಆಧರಿಸಿದ್ದು.

೩೧. ಸ್ನೇಹಲತಾ ರೆಡ್ಡಿ ಅವರ ಮಗಳು ನಂದನ ಪಟ್ಟಾಭಿರಾಮ ರೆಡ್ಡಿಯವರೊಡನೆ ನಡೆಸಿದ ಸಂದರ್ಶನದಲ್ಲಿ ದೊರೆತ ವಿಚಾರ. ಮೌಖಿಕ ಆಕರ. ಸಂದರ್ಶನದ ದಿನಾಂಕ ೨೦೧೧ರ ಮೇ ೧೩.

೩೨. ಇದು ನಾಥಾನಿಯಲ್ ಪೆನ್ನಲಿಯ 'ದಿ ಇಫ್ ಪಸ್ಕ್ಯಾಂಡನ್' ಕಾದಂಬರಿ ಆಧಾರಿತ.

೩೩. ಈ ಚಿತ್ರವನ್ನು ಸಾಮಾಜಿಕ ಸಿನಿಮಾ ಎಂದು ಗುರುತಿಸಲಾಗುತ್ತದೆ. ಕಾದಂಬರಿಯಲ್ಲಿಯೂ ಇದನ್ನು ಚಾರಿತ್ರಿಕ ಕಾದಂಬರಿ ಅಲ್ಲ ಎಂದು ಮುನ್ನುಡಿಯಲ್ಲಿ ಹೇಳಿದ್ದಾರೆ.

೩೪. ೧೯೭೭ರ ಮಾರ್ಚ್‌ನಲ್ಲಿ ತುರ್ತುಪರಿಸ್ಥಿತಿ ಕೊನೆಗೊಳ್ಳುತ್ತದೆ. ಇಲ್ಲಿ ೧೯೭೭ರಲ್ಲಿ ತೆರೆಕಂಡ ಎಲ್ಲ ಚಿತ್ರಗಳನ್ನು ವಿಮರ್ಶಿಸಲಾಗುತ್ತಿದೆ.

೩೫. ಇದು ಸಮಕಾಲೀನವಾಗಿ ಹಿಂದಿ ಭಾಷೆಯಲ್ಲಿಯೂ ನಿರ್ಮಾಣವಾಗಿದೆ. ಇಂತಹ ಲಕ್ಷಣಗಳು ಸಮಕಾಲೀನವಾಗಿ ಹೆಚ್ಚು ಕಂಡುಬರುವುದು. ಉದಾಹರಣೆಯಾಗಿ, ಶ್ಯಾಮ್ ಬೆನಗಲ್ ನಿರ್ದೇಶನದ ತೆಲುಗಿನ 'ಅನುಗ್ರಹಂ'. ಹಿಂದಿಯಲ್ಲಿ 'ಕೊಂಡೂರ'ವಾಗಿ ಬಿಡುಗಡೆಗೊಂಡಿದೆ.

೩೬. ಮೌಖಿಕ ಆಕರ.

೩೭. ಈ ರಾಜಕಾರಣವನ್ನು ಪರ್ಯಾಯ ಸಂಸ್ಕೃತಿಯಾಗಿ(ಕೌಂಟರ್ ಕಲ್ಚರ್) ನೋಡಲಾಗುತ್ತದೆ. ಪರ್ಯಾಯ ಸಂಸ್ಕೃತಿ ಪದವನ್ನು ಮೊದಲು ಥಿಯಡರ್ ರೋಜಾಕ್ 'ದಿ ಮೇಕಿಂಗ್ ಆಫ್ ಎ ಕೌಂಟರ್ ಕಲ್ಚರ್' ಎಂಬ ಕೃತಿಯಲ್ಲಿ ಬಳಸಿದರು. ಉತ್ತರ ಅಮೇರಿಕ ಮತ್ತು ದಕ್ಷಿಣ ಅಮೇರಿಕ, ಪಾಶ್ಚಿಮಾತ್ಯ ಯೂರೋಪ್, ಜಪಾನ್, ಆಸ್ಟ್ರೇಲಿಯ ಮತ್ತು ನ್ಯೂ ಜೀಲ್ಯಾಂಡ್ ಮೊದಲಾದ ರಾಷ್ಟ್ರಗಳಲ್ಲಿ ೧೯೬೦ ಮತ್ತು ೧೯೭೦ರ ದಶಕದ ಸಾಮಾಜಿಕ ಕ್ರಾಂತಿಯ ಸಂದರ್ಭದಲ್ಲಿ, ಸುದ್ದಿ ಮಾಧ್ಯಮಗಳು ಈ ಪದವನ್ನು ಹೆಚ್ಚಾಗಿ ಬಳಕೆ ಮಾಡಿದವು. ಸಮಾಜದಲ್ಲಿರುವ ಮುಖ್ಯ ಸಂಸ್ಕೃತಿಗಿಂತ ಬದಲಿಯಾದ, ಸಾಮಾಜಿಕ ಸಂಪ್ರದಾಯ ಅಥವಾ ಸಮಾಜದ ಪ್ರಮುಖ ಮೌಲ್ಯ ಮತ್ತು ನಡವಳಿಕೆಗಳನ್ನು ತಿರಸ್ಕರಿಸುತ್ತ, ತಮ್ಮದೇ ಆದ ಮೌಲ್ಯ ಮತ್ತು ನಡವಳಿಕೆಗಳನ್ನು ಹೊಂದಿರುವವರಾಗಿರುವರು.

೩೮. ಸೋವಿಯತ್ ಯೂನಿಯನ್ ರಾಷ್ಟ್ರಗಳಲ್ಲಿ ನಡೆಯುತ್ತಿದ್ದ ಭೂಗತ ಹೋರಾಟಗಾರರು ಪ್ರಕಟಿಸುತ್ತಿದ್ದ ಪತ್ರಿಕೆಗಳನ್ನು 'ಸಮ್‌ಜಿದಾತ್' ಹೆಸರಿನಲ್ಲಿ ಗುರುತಿಸಲಾಗುತ್ತಿತ್ತು. ಸಮ್‌ಜಿದಾತ್ ಚಳವಳಿ ಪ್ರಾರಂಭ ನಾಗರಿಕ ಹಕ್ಕುಗಳಿಗಾಗಿ ನಡೆದರೂ, ೧೯೬೪ರಲ್ಲಿ ಕ್ರುಶ್ಚೇವ್ ಅವರ ಅಧಿಕಾರ ಪತನದ ನಂತರ ರಾಜಕೀಯ ವಿಚಾರಗಳ ಜೊತೆಗೆ ಸಂಬಂಧ ಕಲ್ಪಿಸುವುದು ಶುರುವಾಯಿತು. ಸಾಮಾನ್ಯವಾಗಿ ಸಮ್‌ಜಿದಾತ್ ಪತ್ರಿಕೆಗಳಲ್ಲಿ ಸೋವಿಯತ್ ಒಕ್ಕೂಟಾದಾದ್ಯಂತ ಸೆನ್ಸಾರ್‌ಗೊಳಗಾಗಿದ್ದ ಪ್ರಕಟಣೆಗಳನ್ನು ಪುನರ್ ಮುದ್ರಿಸುವುದು, ಆ ದಾಖಲೆಗಳನ್ನು ಓದುಗರಿಂದ ಓದುಗರಿಗೆ ತಲುಪಿಸುವ ಕಾರ್ಯಗಳು ಕಂಡುಬರುವುದು. ಮಸುಕಾದ ಹಾಗೂ ಸುಕ್ಕಾದ ಪುಟಗಳನ್ನು ಹೊಂದಿರುವ ದಾಖಲೆ ಅಥವಾ ಪುಸ್ತಕದ ರೂಪದಲ್ಲಿ ನೋಡಲುಸಿಗುತ್ತಿತ್ತು. ಸಮಕಾಲೀನವಾಗಿ ನಡೆಯುತ್ತಿದ್ದ ಇತರ ಭೂಗತ ಹೋರಾಟಗಳ ಪತ್ರಿಕೆಗಳಿಗಿಂತ ವಿಚಾರಧಾರೆಯ ಮೂಲಕ ಪ್ರತ್ಯೇಕಿಸಿಕೊಂಡಿದ್ದು, ಹತ್ತು ಹನ್ನೆರಡು ರೀತಿಯ ವಿಚಾರಗಳಿರುತ್ತಿದ್ದವು. ಮುಖ್ಯವಾಗಿ ಸಾಹಿತ್ಯ, ಧಾರ್ಮಿಕ, ರಾಷ್ಟ್ರೀಯತೆ ಹಾಗೂ ರಾಜಕಾರಣಕ್ಕೆ ಸಂಬಂಧಿಸಿದ ವಿಚಾರಗಳು ಇದರ ಕೇಂದ್ರಬಿಂದುವಾಗಿದ್ದವು. ಸಾಮಾನ್ಯವಾಗಿ ಇದು ವಿದ್ವಾಂಸರು ಮೊದಲಾದವರನ್ನೇ ಹೆಚ್ಚು ಗುರಿಯನ್ನಾಗಿಸಿಕೊಂಡು ಪ್ರಕಟವಾಗುತ್ತಿದ್ದವು. ಕ್ರಮೇಣ ಸರ್ಕಾರದಿಂದ ಪ್ರಕಟಿತವಾದ ವಿಚಾರಗಳಿಗೆ ಬದಲಿಯಾಗಿ ಸಮ್‌ಜಿದಾತ್‌ಗಳನ್ನು ಓದುವೆಡೆಗೆ ಜನರು ಪರಿವರ್ತನೆಗೊಳುತ್ತ ಹೋಗಿದ್ದು ಕಂಡುಬರುವುದು.

೧೯೭೦ರ ದಶಕದ ಮಧ್ಯದ ಹೊತ್ತಿಗೆ ಸಮ್‌ಜಿದಾತ್ ಸರ್ಕಾರವನ್ನು ವಿರೋಧಿಸುವ ಕೃತಿಗಳೆಂದು ಪುನರ್ ವ್ಯಾಖ್ಯಾನ ಪಡೆದುಕೊಂಡಿತು. ಸಮ್‌ಜಿದಾತ್ ಸಾಹಿತ್ಯವನ್ನು ಸೈದ್ಧಾಂತಿಕ ನೆಲೆಯ ಆಧಾರದ ಮೇಲೆ ಮೂರು ರೀತಿಯ ಗುಂಪುಗಳಾಗಿ ವಿಂಗಡಿಸಲಾಗಿದೆ. ಮೊದಲನೆಯದು, ಸಮಾಜವಾದಿ ಸಮ್‌ಜಿದಾತ್‌ಗಳಲ್ಲಿ ಆಡಳಿತ ವ್ಯವಸ್ಥೆಯನ್ನು ಮಾರ್ಕ್ಸಿಸ್ಟ್ ಸಮಾಜವಾದೊಂದಿಗೆ ಸಮೀಕರಿಸಿದ ಚರ್ಚೆಗಳು ಹೆಚ್ಚು ಕಂಡುಬರುವುದು. ಅಸ್ತಿತ್ವದಲ್ಲಿರುವ ರಾಜಕೀಯ ವ್ಯವಸ್ಥೆಯೊಳಗೆ ಬದಲಾವಣೆ ತರುವ ಮೂಲಕ ಉತ್ತಮ ಆಡಳಿತ ವ್ಯವಸ್ಥೆ ತರಬಹುದೆಂದು ನಂಬಿದ್ದರು. ಎರಡನೆಯದು, ಪ್ರಜಾಪ್ರಭುತ್ವವಾದಿ ಸಮ್‌ಜಿದಾತ್‌ಗಳು. ಇವರನ್ನು ಕ್ರಾಂತಿಕಾರಿಗಳೆಂದು ಗುರುತಿಸಲಾಗುತ್ತಿತ್ತು. ಅಸ್ತಿತ್ವದಲ್ಲಿರುವ ರಾಜಕೀಯ ವ್ಯವಸ್ಥೆಯನ್ನು ಸಂಪೂರ್ಣವಾಗಿ ಬದಲಾಯಿಸಲು ಬಯಸುತ್ತಿದ್ದರು. ಆದರೆ ಇವರು ಕ್ರಾಂತಿಕಾರಿ ಮಾರ್ಗಗಳಿಗಿಂತ ಮಾಧ್ಯಮಿಕ ತಂತ್ರದ ಮಾರ್ಗಗಳಿಗೆ ಹೆಚ್ಚಿನ ಪ್ರೋತ್ಸಾಹ ನೀಡುತ್ತಿದ್ದರು. ಜೊತೆಗೆ ವಿಕಸನವಾಗುವ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಹೆಚ್ಚಿನ ನಂಬಿಕೆಯುಳ್ಳವರಾಗಿದ್ದರು. ಹಾಗಾಗಿ ಇತರ ಭೂಗತ ಮಾರ್ಗಗಳಿಗಿಂತ ಭಿನ್ನವಾಗಿ ಹೆಚ್ಚೆಚ್ಚು ಮುಕ್ತವಾದ ಹಾಗೂ ಸಾರ್ವಜನಿಕ ಮಾರ್ಗಗಳಿಗೆ ಪ್ರಾಶಸ್ತ್ಯ ನೀಡಿರುವುದು ಕಂಡುಬರುವುದು. ಮೂರನೆಯದು, ಸ್ಲೇವ್‌ಫೋಯಿಲ್ ಅಥವಾ ಸ್ಲಾವ್ ಫೋಯಿಲ್ ಸಮ್‌ಜಿದಾತ್‌ಗಳು. ಇವರು ಸಮಾಜವಾದಿ ಮತ್ತು ಪ್ರಜಾಪ್ರಭುತ್ವ ಎರಡರ ಸಮ್ಮಿಶ್ರಣದ ರಾಜಕೀಯ ವ್ಯವಸ್ಥೆಯಲ್ಲಿ ನಂಬಿಕೆಯುಳ್ಳವರಾಗಿದ್ದರು. ರಷ್ಯನ್‌ರ ರಾಷ್ಟ್ರೀಯ ದೃಷ್ಟಿಕೋನವನ್ನು ರಾಜಕೀಯ ಚರ್ಚೆಯನ್ನಾಗಿಸಲು ವೇದಿಕೆಯನ್ನು ಒದಗಿಸಿದರು. ಎಲ್ಲ ಸಂಸ್ಕೃತಿಯಲ್ಲಿರುವ ವೈವಿಧ್ಯತೆಯ ಮಹತ್ವವನ್ನು ಸಮರ್ಥಿಸುತ್ತಲೇ ಸ್ಲಾವಿಕ್ ಸಂಸ್ಕೃತಿಯ ವೈಶಿಷ್ಟ್ಯತೆಗೆ ಹೆಚ್ಚಿನ ಮಹತ್ವ ನೀಡಿರುವುದನ್ನು ಕಾಣಬಹುದು. ರಷ್ಯಾದ ಇತಿಹಾಸದಲ್ಲಿರುವ ನಿರಂಕುಶ ಪ್ರಭುತ್ವ ಮತ್ತು ಸಂಪ್ರದಾಯಗಳ ಪ್ರಖ್ಯಾತಿಯನ್ನು ವಿಜೃಂಭಿಸುತ್ತ, ಯು.ಎಸ್.ಎಸ್.ಆರ್ ಸಂಘಟಿತವಾಗಿರುವ ಹಿನ್ನೆಲೆಯಲ್ಲಿ ಸಾಹಿತ್ಯ ರಚನೆಗೆ ಹೆಚ್ಚು ಒತ್ತು ನೀಡುತ್ತಿದ್ದವರು. ರಷ್ಯನ್ ಅಧಿಕಾರಿಗಳ ದುರ್‌ವರ್ತನೆಯ ಹಾಗೂ ಶ್ರೇಷ್ಠತೆಯ ನಿರೂಪಣೆಗಳು ಕ್ರಮೇಣ ಸ್ಲಾವ್‌ಫೋಯಿಲ್ ಸಮ್‌ಜಿದಾತ್ ಓದುಗರನ್ನು ಇತರರಿಂದ ಹೊರಗಿನವರನ್ನಾಗಿಸಿತು.

೩೯. ಜಮೀಅತ ಉಲೇಮಾ ನಿಷೇಧಿತವಾಗಿದ್ದ ಸಂಘಟನೆಗಳಲ್ಲೊಂದು.

೪೦. ಈ ಪತ್ರವನ್ನು ಬರೆದಿರುವುದು ೧೯೭೫ರ ಆಗಸ್ಟ್ ತಿಂಗಳಿನಲ್ಲಿ.

೪೧. ಭೂಗತ ಹೋರಾಟದಲ್ಲಿ ತೊಡಗಿಕೊಂಡಿದ್ದ ಎಡಪಂಥೀಯ ಹಿನ್ನೆಲೆಯವರಿಂದ ಕ್ಷೇತ್ರಕಾರ್ಯದಲ್ಲಿ ಮೌಖಿಕವಾಗಿ ದೊರೆತ ಮಾಹಿತಿ.

೪೨. ಮಹಾರಾಷ್ಟ್ರದ 'ಯುವಕ್ ಕ್ರಾಂತಿ ದಳ್' ಕಾರ್ಮಿಕ ಸಂಘಟನೆ. ತುರ್ತುಪರಿಸ್ಥಿತಿ ಪೂರ್ವದಿಂದಲೂ ಹೋರಾಟ ನಡೆಸುತ್ತಿದ್ದರು. ಇವರನ್ನು ತುರ್ತುಪರಿಸ್ಥಿತಿ ಸಂದರ್ಭದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಜೈಲಿಗೆ ಹಾಕಲಾಯಿತು. ತುರ್ತುಪರಿಸ್ಥಿತಿ ಜಾರಿಯಾದ ಸ್ವಲ್ಪ ಕಾಲದ ತರುವಾಯ ಸಂಘಟನೆಯ ಹಲವರು ಸರ್ಕಾರದ ಪರವಾಗಿ ೨೦ ಅಂಶಗಳ ಕಾರ್ಯಕ್ರಮ ಪ್ರಚಾರ ಮಾಡಿದರು.

೪೩. ಆಂಧ್ರ ಪ್ರದೇಶದಲ್ಲಿ ೧೯೭೦ರ ದಶಕದ ಆರಂಭದಲ್ಲಿದ್ದ ಕ್ರಾಂತಿಕಾರಿ ಬರಹಗಾರರ ಸಂಘಟನೆ.

೪೪. ಇದರ ಅಡಿಯಲ್ಲಿ ಐಕ್ಯತೆ ವಿರೋಧ ಪಕ್ಷಗಳು ಒಂದಾಗಿದ್ದವು. ಜೆ.ಪಿ ಚಳುವಳಿಯ ಕಾಲದಲ್ಲಿ ಪ್ರಾರಂಭಗೊಂಡಿದ್ದು, ತುರ್ತುಪರಿಸ್ಥಿತಿ ಜಾರಿಗೊಳಿಸಿದ ನಂತರ ಭೂಗತ ಹೋರಾಟದಲ್ಲಿ ಪ್ರಮುಖ ಪಾತ್ರ ನಿರ್ವಹಿಸಿತು.

೪೫. ಭೂಗತ ಪತ್ರಿಕೆ 'ಕಹಳೆ'ಯ ಸಂಚಿಕೆಗಳು. ಮೊದಲನೆಯದು ಕೈಬರಹದಲ್ಲಿದೆ. ಎರಡನೆಯದು ಮುದ್ರಿತವಾಗಿದೆ. ಈ ಎರಡು ಪತ್ರಿಕೆಗಳಲ್ಲಿ ಕಹಳೆ ಪತ್ರಿಕೆಯ 'ಲಾಂಛನ/ಗುರುತು' ಬದಲಾಗಿರುವುದು ವಿಶೇಷವಾಗಿದೆ.

೪೬. ಆತ್ಮೀಯ ಪೊಲೀಸ್ ಬಂಧುಗಳೇ, ಶಿಕ್ಷಕ ಬಂಧುಗಳೇ, ವಿದ್ಯಾರ್ಥಿ ಬಂಧುಗಳೇ, ಸಹೋದರರೇ - ಸಹೋದರಿಯರೇ, ಉದ್ಯೋಗಪತಿಗಳೇ, ನೌಕರ-ಕಾರ್ಮಿಕರಿಗೆ, ಪ್ರಿಯ ಬಂಧು, ಪ್ರಿಯ ಸೋದರಿ, ಉದ್ಯೋಗಪತಿಗಳಿಗೆ ಇನ್ನಿತರರನ್ನು ಸಂಬೋಧಿಸಿರುವ ಕರಪತ್ರಗಳು ಕಂಡುಬರುತ್ತವೆ. ಇದೆ ದಾಟಿಯಲ್ಲಿ ಇಂಗ್ಲಿಶ್ ಭಾಷೆಯಲ್ಲಿ 'ರೀಡ್ ಅಂಡ್ ಸರ್ಕ್ಯುಲೇಟ್' ಎಂಬ ಕರಪತ್ರಗಳನ್ನು ಕಾಣಬಹುದು. ಕನ್ನಡ ಮತ್ತು ಇಂಗ್ಲಿಶ್ ಕರಪತ್ರಗಳು ಲೋಕ ಸಂಘರ್ಷ ಸಮಿತಿ, ಜನತಾ ಸಂಘರ್ಷ ಸಮಿತಿ ಮೊದಲಾದ ಹೆಸರಿನಲ್ಲಿ ಕೆಲವೊಮ್ಮೆ ಪ್ರಕಟಗೊಳ್ಳುತ್ತಿದ್ದವು. ಕೆಲವೊಮ್ಮೆ ಒಬ್ಬ ಸೋದರ, ಸೋದರಿ ಮೊದಲಾಗಿ ವ್ಯಕ್ತಿ ಹಿನ್ನೆಲೆಯಲ್ಲಿ ಪ್ರಕಟಗೊಳ್ಳುತ್ತಿದ್ದವು.

೪೭. ಭೂಗತ ಸಾಹಿತ್ಯ ಹೊಂದಿರುವ ಕರಪತ್ರ, ಕಾಲ, ಪ್ರಕಟಿಸಿದವರ ಕುರಿತ ಮಾಹಿತಿ ಕಂಡುಬರುವುದಿಲ್ಲ.

೪೮. ಭೂಗತ ಪತ್ರಿಕೆಗಳಲ್ಲಿ ಅತಿ ಹೆಚ್ಚು ಪ್ರಚಾರ ಪಡೆದ, ಸಮಕಾಲೀನವಾಗಿ ಪತ್ರಿಕೆಯಲ್ಲಿ ಪ್ರಕಟವಾದ ಕತ್ತೆ ಸತ್ತು ಹೋಯಿತು ಎಂಬ ಕವನ. ಇದು ೩೦-೮-೧೯೭೫ರಲ್ಲಿ ಉದಯವಾಣಿಯಲ್ಲಿ ಪ್ರಕಟವಾಗಿತ್ತು. ಅದನ್ನು ಭೂಗತ ಸಾಹಿತ್ಯದ ರೂಪದಲ್ಲಿ ಪ್ರತಿಭಟನೆಯ ಹಿನ್ನೆಲೆಯಲ್ಲಿ ಕರಪತ್ರಗಳನ್ನು ಮುದ್ರಿಸಿ ಹಂಚಲಾಗುತ್ತಿತ್ತು.

೪೯. ಇದು ೨೨-೧೦-೧೯೭೬ರಲ್ಲಿ ಉದಯವಾಣಿಯಲ್ಲಿ ಪ್ರಕಟವಾಗಿತ್ತು.

೫೦. ದು.ಗು.ಲಕ್ಷ್ಮಣ್ ಅವರು ತುರ್ತುಪರಿಸ್ಥಿತಿಯಲ್ಲಿ 'ಕಹಳೆ' ಎಂಬ ಭೂಗತ ಪತ್ರಿಕೆಯ ಸಂಪಾದಕರಾಗಿದ್ದರು.

೫೧. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಪತ್ರಿಕೆಯೊಡನೆ ಸಂಪರ್ಕ ಹೊಂದಿದ್ದವರೊಡನೆ ನಡೆಸಿದ ಚರ್ಚೆಗಳಲ್ಲಿ ತಿಳಿದು ಬಂದ ಮಾಹಿತಿ.

೫೨. ಕರ್ನಾಟಕ ಗೆಜೆಟ್, ಅಕ್ಟೋಬರ್ ೭, ೧೯೭೬. ಹೋಮ್ ಸೆಕ್ರೆಟರಿ ನೀಡಿರುವ 'ರಾಯಚೂರಿನ ಪೊಲೀಸ್ ಪಡೆಯನ್ನು ಪುನರ್ ವ್ಯವಸ್ಥಿತಗೊಳಿಸುವ ಸಂಬಂಧ' ಕುರಿತ ಆಜ್ಞೆ ಕುರಿತು 'ಓದು: ಸರ್ಕಾರದ ಆಜ್ಞೆ ಸಂಖ್ಯೆ ಹೆಚ್ ಡಿ ೨೧೧ ಇಹೆಚ್‌ಡಿ ೧ ಅಕ್ಟೋಬರ್ ೧೯೭೪ರ ಪ್ರಕಾರ' ಆದೇಶಿಸಲಾಗಿದೆ ಎಂಬ ವಿಚಾರ ಕಾಣಬಹುದು.

೫೩. 'ಸ್ವಾತಂತ್ರ್ಯ ಮತ್ತು ಸಾಹಿತ್ಯ' ಎಂಬ ಶೀರ್ಷಿಕೆಯ ಪತ್ರ, ತುರ್ತುಪರಿಸ್ಥಿತಿ ಕಾಲದಲ್ಲಿ ಭೂಗತ ಪತ್ರಿಕೆಯೊಂದಕ್ಕೆ ಬರೆದುದ್ದಾಗಿ ತಿಳಿಸಿದ್ದಾರೆ.

೫೪. ತುರ್ತುಪರಿಸ್ಥಿತಿಯ ವಿರುದ್ಧ ಪ್ರತಿಭಟನೆಗಳಲ್ಲಿ ತೊಡಗಿದ್ದ ಭೂಗತ ಪ್ರತಿಭಟನಾಕಾರರು, ಸಂವಿಧಾನಾತ್ಮಕ ಪ್ರತಿಭಟನಾಕಾರರ ಜೊತೆಗೆ ನಡೆಸಿದ ಸಂದರ್ಶನಗಳಲ್ಲಿ ಸಮಾಜದ ಪ್ರತಿಕ್ರಿಯೆ ಕುರಿತು ಬಂದ ಅಭಿಪ್ರಾಯಗಳ ಸಾರ. ಮೌಖಿಕ ಆಕರ. ಕ್ಷೇತ್ರಕಾರ್ಯ.

## ಅಧ್ಯಾಯ ೪
## ತುರ್ತುಪರಿಸ್ಥಿತಿಯೋತ್ತರ ಕರ್ನಾಟಕ: ರಾಜಕೀಯ ಮತ್ತು ಸಾಮಾಜಿಕ ಮಜಲುಗಳು

೪.೧. ತುರ್ತುಪರಿಸ್ಥಿತಿಯೋತ್ತರ: ರಾಜಕೀಯ ಮಜಲುಗಳು
೪.೧.೧. ಸಾರ್ವತ್ರಿಕ ಚುನಾವಣೆಗಳು: ರಾಜಕೀಯ ಪಕ್ಷಗಳ ಧೃವೀಕರಣದಲ್ಲಿ ಹೊಸ ಮಜಲು
೪.೧.೧.೧. ಜಾಹೀರಾತು: ಹೊಸ ಆಯಾಮ
೪.೧.೧.೨. ರಾಜಕೀಯ ಪಕ್ಷಗಳ ಧೃವೀಕರಣ: ಹೊಸ ಮಜಲು
೪.೧.೧.೩. ಚುನಾವಣೆ: ಮೊದಲ ಕಾಂಗ್ರೆಸೇತರ ಸರ್ಕಾರ
೪.೧.೨. ಜನತಾ ಸರ್ಕಾರ: ಆಡಳಿತ ಮತ್ತು ರಾಜಕಾರಣ
೪.೧.೨.೧. ಜನತಾ ಪಕ್ಷ ಮತ್ತು ಸಂವಿಧಾನ ತಿದ್ದುಪಡಿ
೪.೧.೨.೨. ಮೀಸಾ ಕಾಯ್ದೆ
೪.೧.೨.೩. ವಿಚಾರಣಾ ಆಯೋಗಗಳು: ಸ್ವರೂಪ ಮತ್ತು ಪ್ರಕ್ರಿಯೆ
೪.೧.೨.೪. ಚುನಾವಣೆಗಳು ಮತ್ತು ಜನತಾ ಸರ್ಕಾರ
೪.೧.೩. ಕಾಂಗ್ರೆಸ್: ರಾಜಕೀಯ ಪಲ್ಲಟಗಳ ನಡುವೆ
೪.೧.೩.೧. ಚುನಾವಣೆಯಿಂದ ವಿಭಜನೆವರೆಗೆ(೧೯೭೭-೧೯೭೮)
೪.೧.೩.೧.೧. ಕಾಂಗ್ರೆಸ್: ಆಂತರಿಕ ಬಿಕ್ಕಟ್ಟು ಮತ್ತು ಪಕ್ಷ ವಿಭಜನೆ
೪.೧.೩.೧.೨. ಕರ್ನಾಟಕ ರಾಜಕಾರಣ: ಗ್ರೋವರ್ ವರದಿ
೪.೧.೩.೨. ಚುನಾವಣೆಯಿಂದ ಚುನಾವಣೆವರೆಗೆ(೧೯೭೮-೧೯೮೦)
೪.೧.೩.೨.೧. ೧೯೭೮ರ ಚುನಾವಣೆ: ರಾಜಕಾರಣ ಮತ್ತು ಪ್ರಕ್ರಿಯೆಗಳು
೪.೧.೩.೨.೨. ಚಿಕ್ಕಮಗಳೂರು ಚುನಾವಣೆ: ರಾಜಕೀಯ ನೆಲೆಗಳು ಮತ್ತು ಪ್ರತಿಕ್ರಿಯೆಗಳು
೪.೧.೩.೨.೩. ಕರ್ನಾಟಕ ರಾಜಕಾರಣ: ಸ್ಥಿತ್ಯಂತರಗಳು ಮತ್ತು ಪಕ್ಷ ವಿಭಜನೆ
೪.೧.೩.೨.೪. ೧೯೮೦ರ ಲೋಕಸಭಾ ಚುನಾವಣೆ: ರಾಜಕೀಯ ಪಕ್ಷಗಳು ಮತ್ತು ಪ್ರಜಾಪ್ರಭುತ್ವ
೪.೧.೩.೩. ಕರ್ನಾಟಕ: ಪ್ರಾದೇಶಿಕ ರಾಜಕಾರಣ ಮತ್ತು ಹಿಂದುಳಿದ ವರ್ಗಗಳು
೪.೧.೩.೩.೧. ಎಸ್. ಬಂಗಾರಪ್ಪ
೪.೧.೩.೩.೨. ಕಾಗೋಡು ತಿಮ್ಮಪ್ಪ
೪.೧.೩.೩.೩. ಎಂ. ವೀರಪ್ಪ ಮೊಯಿಲಿ
೪.೧.೩.೩.೪. ಎನ್. ಧರ್ಮಸಿಂಗ್
೪.೧.೩.೩.೫. ಮಲ್ಲಿಕಾರ್ಜುನ ಖರ್ಗೆ
೪.೨. ತುರ್ತುಪರಿಸ್ಥಿತಿಯೋತ್ತರ: ಸಮಾಜ ಮತ್ತು ಸಮೂಹ ಮಾಧ್ಯಮಗಳು
೪.೨.೧. ಸಾಹಿತ್ಯ ಅವಲೋಕನ: ಪ್ರಭಾವ ಮತ್ತು ಪರಿಣಾಮಗಳು
೪.೨.೧.೧. ತುರ್ತುಪರಿಸ್ಥಿತಿ: ಸಾಹಿತ್ಯ ಮತ್ತು ಸಮಾಜ
೪.೨.೧.೨. ಚಳವಳಿಗಳು: ರಾಜಕಾರಣ, ಸಾಹಿತ್ಯ ಹಾಗೂ ಸಾಹಿತಿಗಳು
೪.೨.೨. ದೃಶ್ಯ ಮಾಧ್ಯಮದ ಅವಲೋಕನ: ರಂಗಭೂಮಿ, ಸಿನಿಮಾ ಮತ್ತು ವ್ಯಂಗ್ಯಚಿತ್ರಗಳು
೪.೨.೨.೧. ಸರ್ಕಾರ ಮತ್ತು ದೃಶ್ಯಮಾಧ್ಯಮ: ರಂಗಭೂಮಿ, ಸಿನಿಮಾ ಹಾಗೂ ವ್ಯಂಗ್ಯಚಿತ್ರಗಳು

೪.೨.೨.೧.೧. ಸರ್ಕಾರ ಮತ್ತು ದೃಶ್ಯಮಾಧ್ಯಮ
೪.೨.೨.೧.೧.೧. ರಂಗಭೂಮಿ
೪.೨.೨.೧.೧.೨. ಸಿನಿಮಾರಂಗ
೪.೨.೨.೧.೧.೩. ವ್ಯಂಗ್ಯಚಿತ್ರಗಳು
೪.೨.೨.೨. ಸಮಾಜ ಮತ್ತು ದೃಶ್ಯ ಮಾಧ್ಯಮ: ಪ್ರಜಾಪ್ರಭುತ್ವ, ರಾಜಕಾರಣ, ರಾಜಕಾರಣಿ, ಆಡಳಿತಶಾಹಿ, ಪೊಲೀಸ್ ವ್ಯವಸ್ಥೆ, ಬಂದ್ ಮತ್ತಿತರ ಸ್ವರೂಪಗಳಲ್ಲಿ
೪.೨.೨.೩. ಪತ್ರಿಕಾರಂಗದ ಅವಲೋಕನ: ರಾಜಕಾರಣ ಮತ್ತು ಚುನಾವಣೆಗಳು
೪.೨.೨.೩.೧. ರಾಜಕಾರಣ: ಸೆನ್ಸಾರ್‌ಶಿಪ್ ಮತ್ತು ಪತ್ರಿಕೋದ್ಯಮ
೪.೨.೨.೩.೧.೧. ಸರ್ಕಾರ, ಸೆನ್ಸಾರ್‌ಶಿಪ್ ಮತ್ತು ಪತ್ರಿಕೋದ್ಯಮ
೪.೨.೨.೩.೧.೨. ರಾಜಕಾರಣ ಮತ್ತು ಪತ್ರಿಕೋದ್ಯಮ

೧೯೭೭ರ ಮಾರ್ಚ್‌ನಲ್ಲಿ ನಡೆದ ಲೋಕಸಭಾ ಚುನಾವಣೆಯಲ್ಲಿ ಆಡಳಿತರೂಢ ಕಾಂಗ್ರೆಸ್ ಪಕ್ಷ ಸೋಲು ಕಂಡಿತು. ಮೊದಲ ಬಾರಿಗೆ ಕಾಂಗ್ರೆಸೇತರ ರಾಜಕೀಯ ಪಕ್ಷ ಬಹುಮತ ಪಡೆದು ಆಡಳಿತಕ್ಕೆ ಬಂದ ತರುವಾಯ ಜನತಾ ಸರ್ಕಾರ ಮಾರ್ಚ್ ೨೨ರಂದು ಆಂತರಿಕ ತುರ್ತುಪರಿಸ್ಥಿತಿಯನ್ನು ರದ್ದುಗೊಳಿಸಿತು. ಈ ಸಂಬಂಧ ಚುನಾವಣಾ ಫಲಿತಾಂಶಕ್ಕೆ ಸಮೂಹ ಮಾಧ್ಯಮಗಳಲ್ಲಿ ಬಂದ ಪ್ರತಿಕ್ರಿಯೆ ಮತ್ತು ವರದಿಗಳು ಹೀಗಿವೆ:

> ಜನತಾ ಪಕ್ಷಕ್ಕೆ ಬಹುಮತ ನಿರೀಕ್ಷೆ; ನಿಜವಾದ ಜೆ.ಪಿ. ಭವಿಷ್ಯ – ವಿನಾಶ ಕಾಲೇ ವಿಪರೀತ ಬುದ್ಧಿ; ರಾಜ್ಯದಲ್ಲಿ ಕಾಂಗ್ರೆಸ್ಸಿಗರ ಮುನ್ನಡೆ; ಇಂದಿರಾ ರಾಜೀನಾಮೆ: ನಾಳೆ ಜನತಾ ಪ್ರಧಾನಿ ಆಯ್ಕೆ; ಜನತಾ ತೀರ್ಪಿಗೆ ಇಂದಿರಾ ಗೌರವ: ನವಸರ್ಕಾರಕ್ಕೆ ಸಹಕಾರದ ಭರವಸೆ; ಮೂಲಭೂತ ಹಕ್ಕು ಊರ್ಜಿತ: ಆರ್.ಎಸ್.ಎಸ್ ಮತ್ತು ಇತರ ಸಂಸ್ಥೆಗಳ ನಿಷೇಧ ರದ್ದು; ಪ್ರಜಾಪ್ರಭುತ್ವ: ಅದ್ಭುತ ಸಾಧನೆ: ಸರ್ವಶಕ್ತಿ ಸಮ್ಮೇಳನಕ್ಕೆ ಜೆ.ಪಿ. ಕರೆ; ಭೀತಿ ನಿವಾರಣೆ(ಕನ್ನಡಪ್ರಭ ೧೯೭೭ ಮಾರ್ಚ್ ೨೨-೨೫).

ಈ ಚುನಾವಣೆ ನಿರಂಕುಶಾಧಿಕಾರ ಮತ್ತು ಪ್ರಜಾಪ್ರಭುತ್ವದ ನೆಲೆಯಲ್ಲಿ ಮಹತ್ವದ ತಿರುವು. ಅದರ ಬಿಂಬಗಳನ್ನು ಮೇಲಿನ ವರದಿಯಲ್ಲಿ ಕಾಣಬಹುದು. ಇದಕ್ಕೆ ಸಾಹಿತ್ಯದಲ್ಲಿ ಕಂಡುಬಂದ ಪ್ರತಿಕ್ರಿಯೆ ಚುನಾವಣೆ ಮತ್ತು ಪ್ರಜಾಪ್ರಭುತ್ವ ಕುರಿತ ಚಿಂತನೆಯ ಆಯಾಮವೊಂದನ್ನು ತೆರೆದಿಡುವುದು.

> ಹಿರೋಷಿಮಾದ ಬಾಂಬ ಆ ಸ್ಫೋಟವ
> ಹೆಬ್ಬೆಟ್ಟಿನ ಗುರುತಿನಲ್ಲಿ ಬೆಳಗಿಸಿ ಬೆನ್ನ ಹುಂಯಲ್ಲಿ
> ಚಿಮ್ಮಿ ಚಿಲುಕುಗುಟ್ಟಿದ್ದ ನೆತ್ತರ ಬಿಸಿಲಲ್ಲಿ
> ಪ್ರಕಾಶದುಸಿರ;
> ಮರಗಟ್ಟಿದ್ದ ಬೆಟ್ಟ ಬಯಲಲ್ಲಿ
> ಮುಗುಳೊಡೆದ ಚಿಗುರು ಹೂಗನಸುಗಳ
> ಹೊತ್ತು ಹಾರುವ ಹಕ್ಕಿ
> ಕಾಡು ನಾಡುಗಳಲ್ಲಿ ಅಸ್ತಿತ್ವದ ಸಾರಜನಕ
> ತುಂಬುವ ನಿರೀಕ್ಷೆಯಲ್ಲಿ ತೆರೆದದ್ದು ಕಣ್ಣ
> ...
> ಹೂತಿರುವ ಕಾಲಕೋಶವನ್ನು ಮತ್ತೆ ಮೇಲಕ್ಕೆತ್ತಿ
> ಬರೆಯುವುದು, ಬರೆಸುವುದು
> ಈ ಯುಗದ ಹೊಸ ಕಾವ್ಯ:
> 'ಅವಿನಾಶಿ ಸ್ವಾತಂತ್ರ್ಯ
> ಗೋರಿಯಿಂದಾದರೂ ಬಿಡುಗಡೆಯ ಪಡೆದು,
> ಮತ್ತೆ ಮೇಲೇಳುವುದು(ಹಕಾರಿ ೧೯೭೮: ೭೭-೮೦)

ಈ ಕವನದಲ್ಲಿ ಹೆಬ್ಬೆಟ್ಟಿನ ಗುರುತು ಚುನಾವಣೆಯ ಮೂಲಕ ಉಂಟಾದ ಸರ್ಕಾರದ ಬದಲಾವಣೆ ಹಾಗೂ ತುರ್ತುಪರಿಸ್ಥಿತಿ ರದ್ಧತಿಯನ್ನು ಸೂಚಿಸುವುದು. ಚುನಾವಣೆ, ಮತದಾನ ಹಾಗೂ ಪ್ರಜಾಪ್ರಭುತ್ವದೊಡನಿರುವ ಸಂಬಂಧ ಕುರಿತ ಸಮಾಜದ ಕೆಲವು ವಲಯಗಳಲ್ಲಿ ಕಂಡುಬಂದ ಚಿಂತನೆಗಳಿವು. ಸಮೂಹ ಮಾಧ್ಯಮ ಗಳಲ್ಲಿ ಚುನಾವಣೆ ಫಲಿತಾಂಶಗಳ ವಿಶ್ಲೇಷಣೆ, ತುರ್ತುಪರಿಸ್ಥಿತಿ ಆಡಳಿತದ ದಬ್ಬಾಳಿಕೆ ಮತ್ತು ಶೋಷಣೆಗಳ ಕುರಿತು ವರ್ಷದಾದ್ಯಂತ ಚರ್ಚೆಗಳು ಕಂಡುಬರುವುದನ್ನು ನೋಡಬಹುದು. ತುರ್ತುಪರಿಸ್ಥಿತಿಯಲ್ಲಿ ನಡೆದ ಅಧಿಕಾರದ ದುರುಪಯೋಗ ಹಾಗೂ ಸಮೂಹ ಮಾಧ್ಯಮಗಳ ದುರ್ಬಳಕೆಗಾಗಿ ಷಾ ವಿಚಾರಣಾ ಆಯೋಗ ಮೊದಲಾದ ಅನೇಕ ಸಮಿತಿಗಳನ್ನು ಜನತಾ ಸರ್ಕಾರ ನೇಮಿಸುವುದು. ಅದೇ ಸಂದರ್ಭದಲ್ಲಿ ಅನೇಕ ರಾಜ್ಯಗಳಲ್ಲಿ ವಿಧಾನಸಭಾ ಚುನಾವಣೆಗಳು ನಡೆದವು. ಈ ಚುನಾವಣೆಗಳಲ್ಲಿ ಜನತಾ ಪಕ್ಷದ ಪರವಾದ ಅಭಿಮತ ಸಮೂಹ ಮಾಧ್ಯಮಗಳಲ್ಲಿ ನೇರವಾಗಿ ಅಥವಾ ಪರೋಕ್ಷವಾಗಿ ಅನೇಕ ರೂಪಗಳಲ್ಲಿ ಮೂಡಿ

ಬಂದಿರುವುದನ್ನು ಗುರುತಿಸಬಹುದು. ತುರ್ತುಪರಿಸ್ಥಿತಿ ನಂತರದಲ್ಲಿಯೂ 'ತುರ್ತುಪರಿಸ್ಥಿತಿ' ವಿರುದ್ಧ ಮುಂದುವರೆದಿರುವ ಹೋರಾಟದ ಒಂದು ವಿಧ ಇದು. ಕರ್ನಾಟಕದ ರಾಜಕಾರಣವನ್ನು ಗಮನಿಸಿದರೆ ೧೯೭೭ರ ಲೋಕಸಭಾ ಮತ್ತು ೧೯೭೮ರ ವಿಧಾನಸಭಾ ಚುನಾವಣೆಗಳಲ್ಲಿ ಆಡಳಿತರೂಢ ಕಾಂಗ್ರೆಸ್ ಪಕ್ಷ ಅಧಿಕ ಕ್ಷೇತ್ರಗಳಲ್ಲಿ ಗೆಲುವು ಸಾಧಿಸಿತ್ತು. ಈ ಗೆಲುವು ರಾಷ್ಟ್ರೀಯ ಮತ್ತು ಪ್ರಾದೇಶಿಕ ನೆಲೆಗಳಲ್ಲಿ ದೊಡ್ಡ ಸಂಚಲನವನ್ನು ಹುಟ್ಟಿಸಿತ್ತು. ಇದರ ಪ್ರಭಾವ ಪರಿಣಾಮಗಳು ರಾಜಕಾರಣ ಮತ್ತು ಸಮಾಜದಲ್ಲಿ ಹಲವು ರೂಪಗಳಲ್ಲಿ ಪ್ರಕಟಗೊಂಡವು. ಪ್ರಜಾಪ್ರಭುತ್ವ, ಪ್ರತಿಭಟನೆ, ಚಳವಳಿ ಮತ್ತು ಚುನಾವಣೆಗಳೊಡನೆ ಸಮಾಜದ ಪರಸ್ಪರ ಸಂಬಂಧ ಹಾಗೂ ಸಮೂಹ ರಾಜಕಾರಣದ ಪುನರ್ ಚಿಂತನೆ ಮಾಡುವುದು ಅಗತ್ಯವಾಗಿದೆ.

ಆಂತರಿಕ ತುರ್ತುಪರಿಸ್ಥಿತಿಯ ಪ್ರಭಾವ ಪರಿಣಾಮಗಳು ರಾಜಕಾರಣ ಮತ್ತು ಸಮಾಜದಲ್ಲಿ ಪಡೆದು ಕೊಂಡ ಸ್ವರೂಪ, ಅದರ ಪ್ರಕ್ರಿಯೆಗಳನ್ನು, ಇತರ ರಾಜ್ಯಗಳೊಡನೆ ಸಮೀಕರಿಸಿ ಎರಡು ಹಂತಗಳಲ್ಲಿ ಚರ್ಚಿಸಲಾಗಿದೆ. ತುರ್ತುಪರಿಸ್ಥಿತಿ ನಂತರದ ರಾಜಕೀಯ ಮಜಲುಗಳನ್ನು ರಾಜಕೀಯ ಪಕ್ಷಗಳ ಧೃವೀಕರಣ, ಪ್ರಾದೇಶಿಕ ರಾಜಕಾರಣ, ಪಕ್ಷ ರಾಜಕಾರಣ ಮತ್ತು ವ್ಯಕ್ತಿ ರಾಜಕಾರಣದ ನೆಲೆಯಲ್ಲಿ ಪರಾಮರ್ಶಿಸಲು ಪ್ರಯತ್ನ ಮಾಡಿದೆ. ಈ ದಿಸೆಯಲ್ಲಿ ೧೯೭೭ ರಿಂದ ೧೯೮೦ರವರೆಗೆ ಕರ್ನಾಟಕ ಹಾಗೂ ರಾಷ್ಟ್ರ ರಾಜಕೀಯದ ವಿವಿಧ ಹಂತಗಳನ್ನು ಪುನರ್ ಅವಲೋಕಿಸಲು ಪ್ರಯತ್ನಿಸಿದೆ. ಇವುಗಳ ಛಾಯೆಯನ್ನು ರಾಜ್ಯ ರಾಜಕಾರಣದಲ್ಲಿ ಪ್ರಸ್ತುತದವರೆಗೆ ಅವಲೋಕಿಸಲು ಯತ್ನಿಸಲಾಗಿದೆ. ಎರಡನೆಯದಾಗಿ, ಸಮಾಜದಲ್ಲಿ ಕಂಡುಬಂದ ಸ್ವರೂಪ, ಅದರ ಪ್ರಕ್ರಿಯೆಗಳನ್ನು ಪ್ರಮುಖ ಸಮೂಹ ಮಾಧ್ಯಮಗಳ ಮೂಲಕ ಚರ್ಚಿಸಲಾಗಿದೆ. ಸರ್ಕಾರ, ರಾಜಕಾರಣ, ಪ್ರಜಾಪ್ರಭುತ್ವ ಮತ್ತು ಚಳವಳಿಗಳ ನಡುವಿನ ಸಂಬಂಧಗಳು ಸಾಹಿತ್ಯಲೋಕ, ದೃಶ್ಯ ಮಾಧ್ಯಮ ಮತ್ತು ಪತ್ರಿಕೋದ್ಯಮದಲ್ಲಿ ಅಭಿವ್ಯಕ್ತಗೊಂಡ ಸ್ವರೂಪವನ್ನು, ಅದರ ಪ್ರಕ್ರಿಯೆಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

## ತುರ್ತುಪರಿಸ್ಥಿತಿಯೋತ್ತರ ಕರ್ನಾಟಕ: ರಾಜಕೀಯ ಮಜಲುಗಳು

ರಾಜಕೀಯ ಮತ್ತು ಸಾಮಾಜಿಕ ಚಳವಳಿಗಳು ವ್ಯವಸ್ಥೆಯಲ್ಲಿರುವ ರಾಜಕಾರಣ ಹಾಗೂ ಪ್ರಭುತ್ವದ ರೂಪವನ್ನು ಬದಲಾಯಿಸುವ ಪ್ರಯತ್ನವನ್ನು, ಎಲ್ಲ ಕಾಲಘಟ್ಟದಲ್ಲಿಯೂ ವಿಭಿನ್ನ ಸ್ವರೂಪ, ಪ್ರಮಾಣದಲ್ಲಿ ಕಾಣಬಹುದು. ೧೯೭೭ರ ಸಾರ್ವತ್ರಿಕ ಚುನಾವಣಾ ಘೋಷಣೆಯು ತುರ್ತುಪರಿಸ್ಥಿತಿ ವಿರೋಧಿ ಹೋರಾಟದ ನೆಲೆಯಲ್ಲಿ ರಾಜಕಾರಣ, ಪ್ರಭುತ್ವ ಮತ್ತು ಸಮಾಜದಲ್ಲಿ ಕಂಡುಬಂದ ಸ್ವರೂಪಗಳ ಪ್ರಕ್ರಿಯೆ ಗಮನಾರ್ಹ. "ಪ್ರಜಾಪ್ರಭುತ್ವದ ತೇರನ್ನು ಮುನ್ನೆಡಸಲು ಜನತಾ ಪಕ್ಷದ ಜೊತೆಯಾಗಿ ಬನ್ನಿ"(ಅಡಿಗ ೧೯೭೭ ಫೆಬ್ರವರಿ ೧೮): "ಜನತಾ ಪಕ್ಷದ ಜಯಭೇರಿ, ಜನಶಾಹಿಗೆ ಮಂಗಳವಾಗಲಿ"(ಚುನಾವಣೆ ೧೯೭೭ ಮಾರ್ಚ್ ೨೮). ಈ ಮೇಲಿನ ಪತ್ರಿಕಾ ವರದಿಗಳಲ್ಲಿ ಪ್ರಜಾಪ್ರಭುತ್ವ ಮತ್ತು ಚುನಾವಣೆ ನಡುವಿನ ಸಂಬಂಧಗಳ ಅನಾವರಣ ಕಾಣಬಹುದಾಗಿದೆ. ಮೊದಲ ವರದಿಯು ಕನ್ನಡದ ಪ್ರಸಿದ್ಧ ಸಾಹಿತಿಯಾದ ಗೋಪಾಲಕೃಷ್ಣ ಅಡಿಗರ ಹೇಳಿಕೆಯಾಗಿದೆ. ಲೋಕಸಭಾ ಚುನಾವಣೆಯಲ್ಲಿ ಜನತಾ ಪಕ್ಷದ ಪರ ಪ್ರಚಾರಕಾರ್ಯದಲ್ಲಿ ನೀಡಿರುವ ಕರೆ. ಎರಡನೆಯದು, ಚುನಾವಣೆಯ ತರುವಾಯ ಜನತಾ ಪಕ್ಷ ಆಡಳಿತಕ್ಕೆ ಬಂದ ಹಿನ್ನೆಲೆಯಲ್ಲಿ ಸ್ಥಳೀಯ ಪತ್ರಿಕೆಯ ಪ್ರತಿಕ್ರಿಯೆಯಾಗಿದೆ. ೧೯೭೦ರ ದಶಕದಲ್ಲಿನ ಅನೇಕ ಚಳವಳಿ, ಹೋರಾಟಗಳು ರಾಜಕಾರಣವನ್ನು ಪ್ರಭಾವಿಸಿದ್ದು, ಹಲವು ಹಂತಗಳಲ್ಲಿ ನಿಯಂತ್ರಿಸಿದೆ. ತುರ್ತುಪರಿಸ್ಥಿತಿ ಕಾಲಘಟ್ಟ ನಾಗರಿಕ ಹಕ್ಕುಗಳಿಗಾಗಿ ನಡೆದ ಸಾಮಾಜಿಕ ಚಳವಳಿಯಾದರೂ, ರಾಜಕೀಯ ಮತ್ತು ಸಾಮಾಜಿಕ ಚಳವಳಿಗಳ ಸಂಯುಕ್ತ ಪ್ರದೇಶದಂತೆ ಕಂಡುಬರುವುದು. ರಾಜಕಾರಣದಲ್ಲಿ ತುರ್ತುಪರಿಸ್ಥಿತಿಯ ಪ್ರಭಾವ ಪರಿಣಾಮಗಳನ್ನು ಅಧ್ಯಯನದ ದೃಷ್ಟಿಯಿಂದ ನಾಲ್ಕು ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ೧೯೭೭ರ ಲೋಕಸಭಾ ಚುನಾವಣೆಯನ್ನು ರಾಷ್ಟ್ರ ಮತ್ತು ರಾಜ್ಯ ರಾಜಕಾರಣದ ನೆಲೆಯಲ್ಲಿ ಮೈಲುಗಲ್ಲಾಗಿ ಚರ್ಚಿಸುವ ಪ್ರಯತ್ನ ಮಾಡಿದೆ. ಜನತಾ ಪಕ್ಷದ ಆಡಳಿತನೀತಿಗೆ ಮಾಧ್ಯಮಗಳ ಪ್ರತಿಕ್ರಿಯೆಗಳ ರೂಪಗಳನ್ನು ಪರಾಮರ್ಶಿಸಲು ಯತ್ನಿಸಲಾಗಿದೆ. ೧೯೭೭ ರಿಂದ ೧೯೮೦ರವರೆಗಿನ ರಾಜಕೀಯ ಪಲ್ಲಟಗಳನ್ನು ಪ್ರಾದೇಶಿಕ

ರಾಜಕಾರಣದ ಬೆಳವಣಿಗೆ, ಪಕ್ಷ ಮತ್ತು ವ್ಯಕ್ತಿ ರಾಜಕಾರಣವು ಕರ್ನಾಟಕದ ರಾಜಕೀಯದಲ್ಲಿ ಪಡೆದುಕೊಂಡ ಸ್ವರೂಪವನ್ನು, ಇತರ ರಾಜ್ಯಗಳೊಡನೆ ಸಮೀಕರಿಸಿ ನೋಡಲು ಪ್ರಯತ್ನಿಸಲಾಗಿದೆ. ೧೯೮೦ ರಿಂದ ಪ್ರಸ್ತುತದವರೆಗೆ ಕರ್ನಾಟಕದ ರಾಜಕಾರಣ, ಚಳವಳಿ, ಚುನಾವಣೆಗಳಲ್ಲಿ, ಅರಸು ಅವರ ಆಡಳಿತ ನೀತಿಯ ಬೇರುಗಳ ವಿವಿಧ ಆಯಾಮವನ್ನು ಅವಲೋಕಿಸಲು ಪ್ರಯತ್ನಿಸಲಾಗಿದೆ. ಈ ದಿಸೆಯಲ್ಲಿ ಅರಸು ಅವರ ಕಾಲಘಟ್ಟದಲ್ಲಿ ಬೆಳೆದುಬಂದ ಪ್ರಮುಖ ರಾಜಕಾರಣಿಗಳಾದ ಎಸ್. ಬಂಗಾರಪ್ಪ, ಎಂ. ವೀರಪ್ಪ ಮೊಯಿಲಿ, ಎನ್. ಧರ್ಮಸಿಂಗ್, ಮಲ್ಲಿಕಾರ್ಜುನ ಖರ್ಗೆ ಮತ್ತು ಕಾಗೋಡು ತಿಮ್ಮಪ್ಪ ಮೊದಲಾದವರ ರಾಜಕಾರಣವನ್ನು ಅವಲೋಕಿಸಲಾಗಿದೆ.

### ೪.೧.೧. ಸಾರ್ವತ್ರಿಕ ಚುನಾವಣೆಗಳು: ರಾಜಕೀಯ ಪಕ್ಷಗಳ ಧೃವೀಕರಣದಲ್ಲಿ ಹೊಸ ಮಜಲು

> **ಲೋಕಸಭೆಗೆ ಮಾರ್ಚ್‌ನಲ್ಲಿ ಚುನಾವಣೆ - ಪ್ರಸ್ತುತ ಸದನ ವಿಸರ್ಜನೆಗೆ ರಾಷ್ಟ್ರಪತಿಗೆ ಪ್ರಧಾನಿ ಸಲಹೆ(ಕನ್ನಡಪ್ರಭ ೧೯೭೭: ೧).**

ಶ್ರೀಮತಿ ಇಂದಿರಾ ಗಾಂಧಿ ಅವರು ಲೋಕಸಭೆ ವಿಸರ್ಜಿಸಲು ರಾಷ್ಟ್ರಪತಿಯವರಿಗೆ ಶಿಫಾರಸ್ಸು ಮಾಡಿರುವುದರ ವರದಿ. ಇದರಲ್ಲಿ ರಾಷ್ಟ್ರವನ್ನುದ್ದೇಶಿಸಿ, ಆಕಾಶವಾಣಿಯಲ್ಲಿ ಇಂದಿರಾ ಗಾಂಧಿ ಅವರು ಮಾಡಿರುವ ಭಾಷಣದ ವಿವರಣೆ ಇದೆ. ಈ ವರದಿಯ ಪಕ್ಕದಲ್ಲಿ "ಕಾಂಗ್ರೆಸ್ ಕಾರ್ಯಸಮಿತಿ ಸ್ವಾಗತ"(ನವದೆಹಲಿ) ಎಂದಿದೆ. ಅದರ ಅಡಿಯಲ್ಲಿ "ರಾಜಕೀಯ ಪಕ್ಷಗಳ ಚಟುವಟಿಕೆಗೆ ಅವಕಾಶ"; "ಮುರಾರ್ಜಿ, ಅಡ್ವಾನಿ ಬಿಡುಗಡೆ"; "ಚುನಾವಣೆ ದಿನಾ ಇಷ್ಟರಲ್ಲೆ ನಿರ್ಧಾರ; ಮತದಾರರು ೩೨.೫ ಕೋಟಿ"; "ಹೊಸ ಬಜೆಟ್ ಅಂಗೀಕಾರದ ಹೊಣೆ ಹೊಸ ಲೋಕಸಭೆಗೆ" ಮೊದಲಾದ ವರದಿಗಳಿವೆ. ಇಂದಿರಾ ಗಾಂಧಿ ಅವರ ದಿಡೀರ್ ಚುನಾವಣಾ ಘೋಷಣೆಯು ಆಶ್ಚರ್ಯ, ಅನುಮಾನ, ಆತಂಕಗಳನ್ನು ಹುಟ್ಟುಹಾಕಿತ್ತು. ಈ ವರದಿಗಳು ರಾಜಕೀಯ ಪಕ್ಷಗಳು ಹಾಗೂ ಸಮೂಹ ಮಾಧ್ಯಮಗಳಲ್ಲಿ ಕಂಡುಬಂದ ಪ್ರತಿಕ್ರಿಯೆ, ಇದರೊಡನೆ ತುರ್ತುಪರಿಸ್ಥಿತಿ ವಿರೋಧಿ ನೆಲೆಯ ಆಶಯಗಳಾಗಿವೆ. ಪ್ರಜಾಪ್ರಭುತ್ವವನ್ನು ಪುನರ್ ಸ್ಥಾಪಿಸಲಿರುವ ಕಡೆಯ ಅವಕಾಶ ಎಂಬ ವಿಚಾರವು, ಈ ನೆಲೆಯಲ್ಲೇ ಸಮೂಹ ಮಾಧ್ಯಮಗಳಲ್ಲಿ ಪದೇ ಪದೇ ಕಂಡುಬರುವುದು.

ಪ್ರಜಾಪ್ರಭುತ್ವದಲ್ಲಿ ಸಾರ್ವತ್ರಿಕ ಚುನಾವಣೆಗಳ ಪ್ರಕ್ರಿಯೆ, ನಂತರದ ರಾಜಕಾರಣ ಹಾಗೂ ಸರ್ಕಾರದ ಆಡಳಿತ ಕ್ರಮಗಳನ್ನು ಮುಖ್ಯವಾಗಿ ಎರಡು ಹಂತಗಳಲ್ಲಿ ಗುರುತಿಸಲಾಗುವುದು. ಚುನಾವಣಾ ಘೋಷಣೆಯ ತರುವಾಯದಿಂದ ಚುನಾವಣೆ ಮುಗಿಯುವವರೆಗೆ ಮೊದಲ ಹಂತವಾದರೆ, ಚುನಾವಣೆಯ ನಂತರದಲ್ಲಿ ಬಹುಮತ ಪಡೆದ ರಾಜಕೀಯ ಪಕ್ಷ ಆಡಳಿತ ಪಕ್ಷವಾಗಿ ಸರ್ಕಾರ ನಡೆಸುವುದು ಎರಡನೆಯ ಹಂತವಾಗಿದೆ. ಈ ದಿಸೆಯಲ್ಲಿ ಜನವರಿ ೧೯ರಂದು ಚುನಾವಣಾ ಘೋಷಣೆಯ ನಂತರದಿಂದ ಮಾರ್ಚ್ ೧೯ರವರೆಗಿನ ಚುನಾವಣಾ ಪೂರ್ವಕಾಲವನ್ನು ಮೊದಲ ಹಂತವಾಗಿ ಚರ್ಚಿಸಲು ಪ್ರಯತ್ನಿಸಲಾಗಿದೆ. ಈ ಚುನಾವಣೆಯು ಹಲವು ನೆಲೆಗಳಲ್ಲಿ ಗಮನ ಸೆಳೆಯುವುದು. ಪ್ರಥಮ ಕಾಂಗ್ರೆಸೇತರ ಸರ್ಕಾರ ಮತ್ತು ಪ್ರಜಾಪ್ರಭುತ್ವದ ಪುನರ್ ಸ್ಥಾಪನೆಯ ಸಫಲತೆಯೊಂದಿಗೆ ಹಿಂದೆಂದಿಗಿಂತ ಭಿನ್ನ ರೀತಿಯ ರಾಜಕೀಯ ಪಕ್ಷಗಳ ಧೃವೀಕರಣವನ್ನು ಚುನಾವಣೆಯ ಆರಂಭ ಮತ್ತು ನಂತರದಲ್ಲಿ ನೋಡಬಹುದು. ಚುನಾವಣಾ ಫಲಿತಾಂಶಗಳು ಉತ್ತರ ಭಾರತ ಹಾಗೂ ದಕ್ಷಿಣ ಭಾರತದಲ್ಲಿ ಭಿನ್ನವಾಗಿವೆ. ಕರ್ನಾಟಕದಲ್ಲಿ ಎರಡು ಕ್ಷೇತ್ರಗಳನ್ನುಳಿದು ಉಳಿದ ಕ್ಷೇತ್ರಗಳಲ್ಲಿ ಕಾಂಗ್ರೆಸ್ ಪಕ್ಷವೇ ಆರಿಸಿಬಂದಿದ್ದು, ತುರ್ತುಪರಿಸ್ಥಿತಿ ವಿರೋಧಿ ಹೋರಾಟಗಾರರು ಮತ್ತು ಸಮೂಹ ಮಾಧ್ಯಮಗಳಿಗೆ ಅಚ್ಚರಿ ಉಂಟುಮಾಡಿತ್ತು. ಈ ಸಂಬಂಧ ರಾಜ್ಯ ರಾಜಕಾರಣ, ಚುನಾವಣಾ ಪ್ರಚಾರ ಪ್ರಕ್ರಿಯೆ, ಸಮೂಹ ಮಾಧ್ಯಮಗಳ ಸ್ವರೂಪಗಳನ್ನು ಅವಲೋಕಿಸುವ ಪ್ರಯತ್ನ ಮಾಡಲಾಗಿದೆ.

ಸಾರ್ವತ್ರಿಕ ಚುನಾವಣೆಗಳು ಅಧಿಕಾರ ಹಸ್ತಾಂತರದ ಸಮಯ. ಈ ಸಂದರ್ಭದಲ್ಲಿ 'ಸಮಾಜ, ರಾಜ್ಯ, ಪ್ರಜೆಗಳು' ಮತ್ತು 'ಸಮಾಜ, ರಾಜ್ಯ, ಸರ್ಕಾರ' ಎಂಬ ಎರಡು ಶಕ್ತಿವಲಯಗಳು ಕಂಡುಬರುತ್ತದೆ. ಈ ವಲಯಗಳು ಚುನಾವಣೆಯ ತರುವಾಯ ಸರ್ಕಾರದೊಳಗೆ ವಿಲೀನವಾದಂತೆ ಹೊರನೋಟಕ್ಕೆ ಗೋಚರಿಸುವುದು. ಈ ಪ್ರಕ್ರಿಯೆಯಲ್ಲಿ ಸಾರ್ವಜನಿಕ ಅಭಿಪ್ರಾಯ ಮತ್ತು ಸ್ವ ಹಿತಾಸಕ್ತ ವಲಯಗಳು

ನಿರ್ವಹಿಸುವ ಪಾತ್ರ ಅಪಾರ. ಚುನಾವಣಾ ಪೂರ್ವದಲ್ಲಿ ಪತ್ರಿಕೆಗಳ ವರದಿಗಳು ರೂಪುಗೊಳ್ಳುವ ಪ್ರಕ್ರಿಯೆಯನ್ನು ಗಮನಿಸುವ ಮೂಲಕ ಸಮಾಜದ ಪ್ರತಿಕ್ರಿಯೆಗಳನ್ನು ಅರಿಯಬಹುದು. 'ತುರ್ತುಪರಿಸ್ಥಿತಿಯ ದೌರ್ಜನ್ಯಗಳು, ಸರ್ವಾಧಿಕಾರ ಹೋಗಲಾಡಿಸಲಿರುವ ಕಡೆಯ ಅವಕಾಶ, ಸ್ವಾತಂತ್ರ್ಯ, ಪ್ರಜಾಪ್ರಭುತ್ವ ರಕ್ಷಣೆ, ಚುನಾವಣೆಯ ಮಹತ್ವ, ಪ್ರಜೆಗಳ ಜವಾಬ್ದಾರಿ ಹಾಗೂ ಕರ್ತವ್ಯ, ಚುನಾವಣೆಯಲ್ಲಿ ಪಾರದರ್ಶಕತೆ, ಸ್ವಾತಂತ್ರ್ಯ, ನಿರ್ಭೀತ ವಾತಾವರಣದ ನಿರೀಕ್ಷೆ' ಇನ್ನಿತರ ವಿಚಾರಗಳು ಪತ್ರಿಕೆಗಳಲ್ಲಿ ಹೆಚ್ಚಾಗಿ ಚರ್ಚೆಗೊಳಗಾಗಿವೆ. ಇದಕ್ಕೆ ಪೂರಕವಾಗಿ "ಚುನಾವಣೆ ಜನಮಾನಸ ಪ್ರತಿಬಿಂಬವಾಗಬೇಕಾದರೆ ಹವೆ ನಿರ್ಭಯವಿದ್ದಿರ ಬೇಕು"(ಚುನಾವಣೆ ೧೯೭೭ ಜನವರಿ ೩೧); "ಚುನಾವಣೆಗಳು ಮತ್ತು ಪೌರಪ್ರಜ್ಞೆ" (ಪ್ರಜಾಮತ ೧೯೭೭: ೬); "ಪ್ರಾಮಾಣಿಕರಿಗೆ ಮತ ನೀಡಿ: ಸರ್ವಾಧಿಕಾರ ತಡೆಗಟ್ಟಿ"(ಮಂಜಪ್ಪ ೧೯೭೭: ೬); "ಬರುವ ಚುನಾವಣೆಗಳು ಭವಿಷ್ಯ ನಿರ್ಧಾರಕ"(ಸುಧಾ ೧೯೭೭ ಫೆಬ್ರವರಿ ೨೦); "ಇಂಡಿಯಾಸ್ ರೂರಲ್ ವೋಟರ್ಸ್ ಟು ಕಾಲ್ ಫಾರ್ ಡೆಮಾಕ್ರಸಿ"(ದಿ ಆಸ್ಟ್ರೇಲಿಯನ್, ೧೯೭೭ ಫೆಬ್ರವರಿ ೨೨);[೧] "ರಾಷ್ಟ್ರ ಭವಿಷ್ಯ ನಿರ್ಣಯಿಸುವ ಚುನಾವಣೆ ಇದು; ಚುನಾವಣೆ ಮಹಾಭಾರತ: ಕೌರವರ್‍ಯಾರು ? ಪಾಂಡವರ್‍ಯಾರು ?; ಜನತಾ ಪಕ್ಷದ ಸಂಘಟನೆ ದೈವ ಸಂಕಲ್ಪಿತ"(ಚುನಾವಣೆ ಫೆಬ್ರವರಿ ೨೮, ೧೯೭೭)[೨] ಮೊದಲಾದ ವರದಿಗಳನ್ನು ಕಾಣಬಹುದು. ಈ ಪತ್ರಿಕಾ ವರದಿಗಳಲ್ಲಿ ನಿರಂಕುಶಾಧಿಕಾರದ ಬೆಳವಣಿಗೆಯನ್ನು ತಡೆಯಲಿರುವ ಮಾರ್ಗ ಮತ್ತು ಪ್ರಜಾಪ್ರಭುತ್ವದ ಮರುಸ್ಥಾಪನೆಗಳೆರಡೂ ಚುನಾವಣೆಯ ಮೂಲಕ ಸಾಧ್ಯವೆಂಬ ಆಶಯವಿದೆ. ತುರ್ತುಪರಿಸ್ಥಿತಿ ಘೋಷಣೆ ಹಾಗೂ ಆ ಕಾಲದ ಸರ್ಕಾರದ ಕಾರ್ಯನೀತಿಗಳಿಗೆ ಬಂದ ಪ್ರತಿಕ್ರಿಯೆಗಳ ಪ್ರಮುಖ ರೂಪಗಳಾಗಿವೆ. ಇವು ೧೯೭೭ರ ಲೋಕಸಭಾ ಚುನಾವಣೆಯಲ್ಲಿ ರಾಜಕೀಯ ಪಕ್ಷಗಳು ಬಳಸಿದ ಉದ್ಘೋಷಗಳು, ಸಮಕಾಲೀನ ರಾಜಕಾರಣದ ವಿವಿಧ ಮುಖಗಳು, ಚುನಾವಣಾ ಪ್ರಚಾರದ ಪ್ರಕ್ರಿಯೆಗಳನ್ನು ಅನಾವರಣಗೊಳಿಸುವುದು.

'ಇಂದಿರಾ ಹಟಾವೋ ದೇಶ್ ಬಚಾವೋ', 'ಪ್ರಜಾಪ್ರಭುತ್ವವನ್ನು ರಕ್ಷಿಸುವುದಕ್ಕಾಗಿ ಜನತಾ ಪಕ್ಷಕ್ಕೆ ಮತ', 'ಸಧೃಡ ಸರ್ಕಾರಕ್ಕಾಗಿ ಕಾಂಗ್ರೆಸ್ಸಿಗೆ ಮತ', 'ಸ್ಟಾಪ್ ಪ್ರೈಸ್ ರೈಸ್ ವೋಟ್ ಸಿಪಿಐ' ಮೊದಲಾದವು ೧೯೭೭ರ ಲೋಕಸಭಾ ಚುನಾವಣೆಯ ಕೆಲವು ಉದ್ಘೋಷಗಳು. ಮೊದಲನೆಯದು, ಜನತಾ ಪಕ್ಷದ ಉದ್ಘೋಷವಾಗಿದೆ. ನಿರಂಕುಶಾಧಿಕಾರದಿಂದ ರಾಷ್ಟ್ರವನ್ನು ರಕ್ಷಿಸುವ ನೆಲೆಯಲ್ಲಿ ರೂಪುಗೊಂಡಂತಿದೆ. ಇದರ ಪೂರ್ವಾರ್ಧವನ್ನು ೧೯೭೧ರ ಚುನಾವಣೆಯಲ್ಲೇ ಬಳಸಲಾಗುತ್ತಿದ್ದು, 'ದೇಶ್ ಬಚಾವೊ' ಎಂಬುದನ್ನು ಹೊಸದಾಗಿ ಸೇರಿಸಲಾಗಿದೆ. ಎರಡನೆಯದು, ಈ ಸಂದರ್ಭದಲ್ಲಿ ರಾಜಕೀಯ, ಸಮಾಜ ಮತ್ತು ಸಮೂಹ ಮಾಧ್ಯಮಗಳಲ್ಲಿ ಚರ್ಚಿತವಾಗುತ್ತಿದ್ದ ಕೇಂದ್ರ ವಿಚಾರ. ಮೂರನೆಯದು, ಕಾಂಗ್ರೆಸ್ ಪಕ್ಷದಿಂದ ಬಲಿಷ್ಠ ಸರ್ಕಾರದ ಅಗತ್ಯಕ್ಕೆ ಒತ್ತು ನೀಡುತ್ತಿರುವುದಾಗಿದೆ. ಈ ಉದ್ಘೋಷಕ್ಕೆ ಪತ್ರಿಕೆಯೊಂದರಲ್ಲಿ 'ದುರಹಂಕಾರದ ಭದ್ರತೆ ಸಾಕು'(ಚುನಾವಣೆ ೧೯೭೭ ಫೆಬ್ರವರಿ ೨೮) ಮೊದಲಾದ ವರದಿಗಳು ಪ್ರತಿಭಟನಾ ರೂಪದಲ್ಲಿ ಮೂಡಿಬಂದಿವೆ. ಜೊತೆಗೆ ಜನತಾ ಪಕ್ಷದ ಪ್ರಚಾರ ಹಾಗೂ ಪರವಾದ ವರದಿಗಳು ಪತ್ರಿಕೆಗಳಲ್ಲಿ ಹೆಚ್ಚು ಮಹತ್ವವನ್ನು ಪಡೆದಿರುವುದನ್ನು ಕಾಣಬಹುದು. ಈ ವರದಿಗಳು ಸ್ಥಳೀಯ ಪತ್ರಿಕೆಗಳಲ್ಲಿ ವೈಭವೀಕರಣದೊಂದಿಗೆ ಮುದ್ರಿತವಾಗಿದ್ದರೆ, ಪ್ರಾದೇಶಿಕ ಮತ್ತು ದೊಡ್ಡ ಪತ್ರಿಕೆಗಳಲ್ಲಿ ನೇರ ಹಾಗೂ ಪರೋಕ್ಷವಾಗಿ ಜನತಾ ಪಕ್ಷಕ್ಕೆ ಸಹಕಾರ ಕಂಡುಬರುವುದು. ಉದಾಹರಣೆಯಾಗಿ, "ಇಂದಿರಾ ಸಭೆಗಿಂತ ಎರಡು ಪಟ್ಟು ದೊಡ್ಡದಾದ ರಾಮ್ ಸಭೆ"(ವಿಶ್ವಪ್ರಭ ೧೯೭೭: ೧), "ಹ್ಯೂಜ್ ರ್‍ಯಾಲಿ ರೋರ್ಸ್ ಫಾರ್ ಗಾಂಧಿಸ್ ಡಿಫೀಟ್"(ದಿ ಆಸ್ಟ್ರೇಲಿಯನ್ ೧೯೭೭ ಫೆಬ್ರವರಿ ೮), "ಚೀರ್ಸ್ ಫಾರ್ ಗಾಂಧಿ ಬಟ್ ಚೀರ್ಸ್ ಫಾರ್ ಹರ್ ಅಪೋನೆಂಟ್ಸ್" (ದಿ ಆಸ್ಟ್ರೇಲಿಯನ್ ೧೯೭೭ ಮಾರ್ಚ್ ೩) ಮೊದಲಾದ ವರದಿಗಳನ್ನು ನೋಡಬಹುದು. ಇಂತಹ ಲೇಖನ, ವರದಿಗಳಲ್ಲಿ ಕಂಡುಬರುವ ಪ್ರಮುಖ ಲಕ್ಷಣ ಸಂಖ್ಯಾವಾರು ವಿವರಣೆ ಅಧಿಕವಾಗಿದ್ದು, ನೇರವಾಗಿ ಅಥವಾ ಪರೋಕ್ಷವಾಗಿ ಜನತಾ ಪಕ್ಷದ ಪರವಿರುವುದಾಗಿದೆ. ಇದರೊಡನೆ ಜಾಹೀರಾತುಗಳು ಚುನಾವಣಾ ತಂತ್ರಗಳಾಗಿ ಹೊಸ ಆಯಾಮದಲ್ಲಿ ಬಳಕೆಯಾಗಿವೆ. ಅದರಲ್ಲಿರುವ ವಿಚಾರಗಳಲ್ಲಿಯೂ ಮೇಲಿನ ಲಕ್ಷಣಗಳೇ ಹೆಚ್ಚಿವೆ.

## ೪.೧.೧.೧. ಜಾಹೀರಾತು: ಹೊಸ ಆಯಾಮ

೧೯೭೭ರ ಲೋಕಸಭಾ ಚುನಾವಣೆಯ ರಾಜಕೀಯ ಪಕ್ಷಗಳ ಜಾಹೀರಾತುಗಳು ಹೊಸ ರೀತಿಯಲ್ಲಿ ಪಕ್ಷ ರಾಜಕಾರಣದ ಸ್ವರೂಪವನ್ನು ಅನಾವರಣಗೊಳಿಸುವುದು. ಇಲ್ಲಿ ಚುನಾವಣಾಪೂರ್ವದ ರಾಜಕೀಯ ಪಕ್ಷಗಳ ಜಾಹೀರಾತುಗಳನ್ನು ವಿಶ್ಲೇಷಿಸಿಲು ಪ್ರಯತ್ನಿಸಿದೆ. ಈ ಕೆಳಗಿನ ಜಾಹೀರಾತುಗಳು(ಚಿತ್ರ-೧, ಚಿತ್ರ-೧ಎ, ಚಿತ್ರ-೧ಬಿ ಮತ್ತು ಚಿತ್ರ-೧ಸಿ) ಆಡಳಿತ ಕಾಂಗ್ರೆಸ್ ಪಕ್ಷದ ಪರವಾಗಿ ಪ್ರಕಟಗೊಂಡವುಗಳಾಗಿದ್ದು,[೩] ಸದೃಢ ಸರ್ಕಾರಕ್ಕೆ ಒತ್ತು ನೀಡಿವೆ. ಇವುಗಳಲ್ಲಿ "ಮಾರ್ಚ್ ವಿತ್ ಕಾಂಗ್ರೆಸ್ ಮಾರ್ಚ್ ಟುವರ್ಡ್ಸ್ ಪ್ರಾಸ್ಪರಿಟಿ", "ಯೂ ವೋಟ್ ಫಾರ್ ಯುವರ್‌ಸೆಲ್ಫ್ ವೆನ್ ಯೂ ವೋಟ್ ಫಾರ್ ಕಾಂಗ್ರೆಸ್", "ಡೈನಾಮಿಕ್ ಇಂಡಿಯಾ ದಟ್ ಇಸ್ ಅವರ್ ಏಮ್", "ಎನ್ ಅಪೀಲ್" ಎಂಬ ಉದ್ಘೋಷಗಳಿದ್ದು, ಕಾಂಗ್ರೆಸ್ ಪಕ್ಷಕ್ಕೆ ಮತ ಹಾಕಲು



ಡೆಕ್ಕನ್ ಹೆರಾಲ್ಡ್, ೧೯೭೭ರ ಫೆಬ್ರವರಿಯಿಂದ ಮಾರ್ಚ್‌ವರೆಗೆ ಪ್ರಕಟವಾದ ಜಾಹೀರಾತುಗಳು. ಚಿತ್ರ ಸಂಖ್ಯೆ ೪.೧.

(ಚಿತ್ರ-೧) (ಚಿತ್ರ-೧ಎ) (ಚಿತ್ರ-೧ಬಿ) (ಚಿತ್ರ-೧ಸಿ)

ಕೋರಲಾಗಿದೆ. ಕರ್ನಾಟಕ ಪ್ರದೇಶ್ ಕಾಂಗ್ರೆಸ್ ಕಮಿಟಿ ಹೆಸರಿನಲ್ಲಿ ಪ್ರಕಟಗೊಂಡಿದ್ದು, ಜಾಹೀರಾತಿನ ಕೆಳ ಭಾಗದಲ್ಲಿ ಹಸುಕರುವಿನ ಚಿತ್ರವಿದೆ. ಪಕ್ಷದ ಪ್ರಣಾಳಿಕೆ ಮತ್ತು ಸಾಧನೆಗಳೊಡನೆ ಸಮಕಾಲೀನ ರಾಜಕೀಯದ ಕೆಲ ವಿಚಾರಗಳಿವೆ. ಕಾಂಗ್ರೆಸ್ ಪಕ್ಷವನ್ನು ಸಮುದಾಯಗಳ ಮತ್ತು ಜನರ ಪಕ್ಷ, ಅಭಿವೃದ್ಧಿಯ ಮುಂದಾಳು, ಬಡವರ ಸೇವೆಗಾಗಿ ಮುಡುಪಾಗಿರುವಂಥ ಪಕ್ಷವೆಂದು ಎಂದು ಬಿಂಬಿಸಲಾಗಿದೆ. ಇವುಗಳಲ್ಲಿ 'ಸಮಾಜದಲ್ಲಿ ಶಾಂತಿ ಪರಿಪಾಲನೆಯ ಮೂಲಕ ಜನ ಸಾಮಾನ್ಯರಿಗೆ ನೆಮ್ಮದಿ ದೊರಕುವಂತೆ ಮಾಡುವುದು; ಪ್ರಜಾಪ್ರಭುತ್ವ ರಕ್ಷಣೆ ಮತ್ತು ಕೇಂದ್ರೀಕರಿಸಲಾಗುವುದು: ಜಾತ್ಯಾತೀತತೆಯ ಆದರ್ಶ; ಅಲ್ಪಸಂಖ್ಯಾತರ ಹಿತರಕ್ಷಣೆ; ಬಡತನ, ರೋಗ, ಅಸಮಾನತೆಯ ವಿರುದ್ಧ ಹೋರಾಟ; ಸಮೃದ್ಧ ಮತ್ತು ಸಮಾಜವಾದಿ ನೆಲೆಯ ಸಮಾಜದ ನಿರ್ಮಾಣ; ಮಾನವೀಯ ಸಂಬಂಧಗಳ ನಡುವಿನ ಅಸಮಾನತೆ ಹಾಗೂ ಶೋಷಣೆಯನ್ನು ಕೊನೆ ಗೊಳಿಸುವುದು' ಮೊದಲಾದ ಭರವಸೆಗಳಿವೆ. ಕೃಷಿಯ ಆಧುನೀಕರಣ; ಹಿಂದುಳಿದ ವರ್ಗಗಳು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ; ಕೈಗಾರೀಕರಣದಲ್ಲಿ ಖಾಸಗೀಕರಣಕ್ಕೆ ಒತ್ತು ಕೊಡಲಾಗಿದೆ. ಯೋಜನೆಗೆ ಅನುಸಾರವಾಗಿ ಖಾಸಗಿ ಕೈಗಾರೀಕರಣಕ್ಕೆ ಅವಕಾಶ; ಬೃಹತ್ ಪ್ರಮಾಣದಲ್ಲಿ ಉದ್ಯೋಗ ಹೆಚ್ಚಳಕ್ಕೆ ಪ್ರಯತ್ನ; ಆರ್ಥಿಕ ಸ್ಥಿರತೆ ಕಾಯುವುದು; ಪ್ರಾಥಮಿಕ ಶಿಕ್ಷಣ ಎಲ್ಲ ಮಕ್ಕಳಿಗೂ ದೊರೆಯುವಂತೆ ಮಾಡುವುದು; ಮಾಧ್ಯಮಿಕ ಮತ್ತು ಉನ್ನತ ಶಿಕ್ಷಣ ಮೊದಲಾದವು ಕಾಂಗ್ರೆಸ್ ಪಕ್ಷದ ಪ್ರಣಾಳಿಕೆಯ ಪ್ರಮುಖ ವಿಚಾರಗಳಾಗಿರುವುದನ್ನು ಚಿತ್ರ-೧ರಲ್ಲಿ ನೋಡಬಹುದು. ಚಿತ್ರ-೧ಎ ಮತ್ತು ಚಿತ್ರ-೧ಬಿನಲ್ಲಿ ನಾವೆಲ್ಲರು ಒಂದು ಗುರಿಯಿರುವ ಜನ, ರಾಷ್ಟ್ರದ ಅಭಿವೃದ್ಧಿ ಮತ್ತು ವ್ಯಕ್ತಿಗಳ ಜೀವನ ಉತ್ತಮ ಆಗಬಯಸುವವರು, ಇವೆಲ್ಲವು ಕಾಂಗ್ರೆಸ್ ಮತ್ತು ಅದಕ್ಕಾಗಿ ನಿಂತಿರವವರ ಆದರ್ಶಗಳು ಎಂದಿರುವುದು ಗಮನಾರ್ಹ. 'ಜನತೆ ಯನ್ನು ಕಾಂಗ್ರೆಸ್ ಪಕ್ಷದ ಭಾಗವೆಂದು ಕರೆಯುತ್ತಾ, ನೀವು ಮತಹಾಕುವಾಗ ನಿಮಗಾಗಿ ಮತಹಾಕಿ. ಕಾಂಗ್ರೆಸ್ ಎಂದರೆ ನೀವು, ಬಲಿಷ್ಠ ಭಾರತ. ಬಲಿಷ್ಠ ಭಾರತ ನಮ್ಮ ಗುರಿ' ಎನ್ನುವ ಮೂಲಕ ಕಾಂಗ್ರೆಸ್ ಪಕ್ಷ ಮತ್ತು ಜನತೆಯ ನಡುವಿನ ಭಾವನಾತ್ಮಕ ಸಂಬಂಧವನ್ನು ಉತ್ತೇಜಿಸಿದೆ. ಜನತೆಗಿಂತ ಪಕ್ಷ ದೊಡ್ಡದಾಗಿದ್ದು, ಅದರ ಭಾಗವೆಂಬ ನಿಲುವು ಕಾಣಬಹುದು. ಚಿತ್ರ-೧ಸಿನಲ್ಲಿ[೪] ಮನವಿಯಿದ್ದು, ಪ್ರೀತಿಯ ಮತದಾರರೇ ಎಂದು ಸಂಬೋಧಿಸುತ್ತ ಪ್ರಾರಂಭವಾಗಿದೆ. ವಿರೋಧ ಪಕ್ಷಗಳ ಆರೋಪಗಳನ್ನು ನಿರಾಕರಿಸುತ್ತಲೇ

ಸರ್ಕಾರದ ಕಾರ್ಯನೀತಿಗಳನ್ನು ಸಮರ್ಥಿಸಿಕೊಳ್ಳಲಾಗಿದೆ. ವಿರೋಧ ಪಕ್ಷಗಳ ಗುರಿ ಕಾಂಗ್ರೆಸ್ ಪಕ್ಷವನ್ನು ಅಧಿಕಾರದಿಂದ ಕೆಳಗಿಳಿಸುವುದು ಮುಂತಾಗಿ ಟೀಕಿಸಿರುವುದನ್ನು ಕಾಣಬಹುದು.

ಕಾಂಗ್ರೆಸ್ ಪಕ್ಷದ ಜಾಹೀರಾತುಗಳು ಪೂರ್ತಿ ಪುಟವಿದ್ದರೆ, ಜನತಾ ಪಕ್ಷದ ಜಾಹೀರಾತುಗಳು[೫] ಪೂರ್ತಿ ಪುಟವಿರದೆ ಚಿಕ್ಕದಾಗಿವೆ. ಈ ಕೆಳಗಿರುವ ಚಿತ್ರ-೨, ಚಿತ್ರ-೨ಎ, ಚಿತ್ರ-೨ಬಿ ಮತ್ತು ಚಿತ್ರ-೨ಸಿನಲ್ಲಿರುವ ಜಾಹೀರಾತುಗಳಲ್ಲಿ ಮೊದಲೆರಡು ಇಂಗ್ಲಿಶ್‌ನಲ್ಲಿವೆ. "ಜೆ.ಪೀ'ಸ್ ಫೈನಲ್ ಕಾಲ್ ಟು ವೋಟರ್ಸ್ ಲಾಸ್ಟ್ ಛಾನ್ಸ್ ಟು ಸೇವ್ ಡೆಮಾಕ್ರೆಸಿ" ಹಾಗೂ "ದಯವಿಟ್ಟು ಜನತಾ ಪಕ್ಷಕ್ಕೆ ಮತ ಹಾಕಿ"ನಲ್ಲಿರುವ(ಚಿತ್ರ-೨ಸಿ) ಜಾಹೀರಾತುಗಳನ್ನು ಕರ್ನಾಟಕ ಜನತಾ ಪ್ರದೇಶ ಸಮಿತಿ ಪ್ರಕಟಿಸಿದೆ. ಚಿತ್ರ-೨ರಲ್ಲಿ ಮತದಾರರಿಗೆ ಜೆ.ಪಿ. ಕರೆ ಎಂದಿರುವುದರ ಪಕ್ಕ ಜೆ.ಪಿ. ಅವರ ಭಾವಚಿತ್ರವಿದೆ. ತುರ್ತುಪರಿಸ್ಥಿತಿಯಲ್ಲಿ ಜಯಪ್ರಕಾಶ್ ನಾರಾಯಣ್ ಅವರು ಗಾಂಧೀಜಿ ಅವರ ಪ್ರತಿನಿಧಿ, ಸ್ವಾತಂತ್ರ್ಯದ ಸಂಕೇತವಾಗಿ ಬಿಂಬಿತವಾಗಿದ್ದರು. ಚಿತ್ರ-೨ಎನಲ್ಲಿ ಎಲ್.ಕೆ.ಅಡ್ವಾನಿ ಅವರು ಜನತಾ ಪಕ್ಷದ ಪರ ಪ್ರಚಾರಕಾರ್ಯ ಕೈಗೊಳ್ಳಲು ತುಮಕೂರು ಮತ್ತು ಮಲ್ಲೇಶ್ವರಂನಲ್ಲಿ ಸಭೆಯನ್ನು ಉದ್ದೇಶಿಸಿ ಮಾತನಾಡುವ ವಿಚಾರವಿದೆ. ಚಿತ್ರ-೨ಬಿ ಉಳಿದ ಜಾಹೀರಾತುಗಳಿಗಿಂತ ವಿಭಿನ್ನವಾಗಿದೆ. "ಪ್ರಜಾಪ್ರಭುತ್ವ ರಕ್ಷಣೆಗೆ ಜನತಾ ಪಕ್ಷದ ಚುನಾವಣಾ ನಿಧಿಗೆ" ಹಣ ಸಹಾಯವನ್ನು ಕೋರುತ್ತ ಪರೋಕ್ಷವಾಗಿ ಮತ ಹಾಕಲು ಮನವಿ ಮಾಡಿದೆ. ಇದರ ಕೆಳಗೆ "ಪ್ರಜೆಗಳಿಗೆ ಅಧಿಕಾರ ... ಪ್ರಜೆಗಳಿಂದಲೇ ನಿಧಿ" ಎಂಬ ಉದ್ಘೋಷವಿದೆ. ಚಿತ್ರ-೨ಸಿನಲ್ಲಿ ಜನತಾ ಪಕ್ಷದ ಪ್ರಣಾಳಿಕೆಯ ಸಾರವಿದ್ದು,




ಡೆಕ್ಕನ್ ಹೆರಾಲ್ಡ್, ಕನ್ನಡಪ್ರಭ ಮತ್ತು ಪ್ರಜಾವಾಣಿ: ೧೯೭೭ರ ಫೆಬ್ರವರಿಯಿಂದ ಮಾರ್ಚ್‌ವರೆಗೆ ಪ್ರಕಟವಾದ ಜಾಹೀರಾತುಗಳು. ಚಿತ್ರ ಸಂಖ್ಯೆ: ೪.೨.
(ಚಿತ್ರ-೨) (ಚಿತ್ರ-೨ಎ) (ಚಿತ್ರ-೨ಬಿ) (ಚಿತ್ರ-೨ಸಿ)

ಅದರ ಕೇಂದ್ರ ವಸ್ತು ತುರ್ತುಪರಿಸ್ಥಿತಿ ಆಡಳಿತದ ವಿರೋಧಿ ನೀತಿ. ಈ ಎರಡು ಪಕ್ಷಗಳ ಜಾಹೀರಾತುಗಳಲ್ಲಿ ಆರ್ಥಿಕ, ಸಾರ್ವಜನಿಕ ಅಭಿವೃದ್ಧಿ ನೆಲೆಗಳಲ್ಲಿ ಭಿನ್ನತೆ ಕಂಡುಬರುವುದಿಲ್ಲ. ಕಾಂಗ್ರೆಸ್ ಪಕ್ಷದ ಪ್ರಣಾಳಿಕೆಯಲ್ಲಿ ಕೈಗಾರಿಕೆಯ ಖಾಸಗೀಕರಣಕ್ಕೆ ಪ್ರೋತ್ಸಾಹ ನೀಡಲು ಸಿದ್ಧವಿರುವುದು ಗಮನ ಸೆಳೆಯುವುದು. ೧೯೭೧ರ ಚುನಾವಣೆಯ ಪ್ರಣಾಳಿಕೆಯ ಭಾಗವಾಗಿದ್ದ ಸಮಾಜವಾದಿ ನೆಲೆಗಳಲ್ಲಿ ಬ್ಯಾಂಕ್ ರಾಷ್ಟ್ರೀಕರಣ, ಭೂ ಸುಧಾರಣಾ ಕಾಯ್ದೆ ಜಾರಿ ಮೊದಲಾದವು ೧೯೭೭ರ ಲೋಕಸಭಾ ಪ್ರಣಾಳಿಕೆಯಲ್ಲಿ ಬದಲಾವಣೆ ಹೊಂದಿರುವುದನ್ನು ಗಮನಿಸಬಹುದು. ಇಲ್ಲಿ ಕರ್ನಾಟಕದಲ್ಲಿ ಕಂಡುಬಂದ ಚುನಾವಣಾ ಪ್ರಚಾರ ಮತ್ತು ರಾಜಕಾರಣದ ಪ್ರಕ್ರಿಯೆಗಳಿಗೆ ಮಾತ್ರ ಒತ್ತು ನೀಡಲಾಗಿದೆ. ಜನತಾ ಪಕ್ಷದ ಜಾಹೀರಾತುಗಳಲ್ಲಿ ವಿಚಾರದೊಂದಿಗೆ ಸಮಕಾಲೀನವಾಗಿ ಕಂಡುಬಂದ ರಾಜಕೀಯ ಪಕ್ಷಗಳ ಧ್ರುವೀಕರಣ ಗಮನಿಸುವುದು ಅಗತ್ಯ.

### ೪.೧೧.೨. ರಾಜಕೀಯ ಪಕ್ಷಗಳ ಧ್ರುವೀಕರಣ: ಹೊಸ ಮಜಲು

೧೯೭೭ರ ಲೋಕಸಭಾ ಚುನಾವಣೆಯ ನಂತರ 'ರಾಷ್ಟ್ರ' ರಾಜಕಾರಣದ ಸ್ವರೂಪದಲ್ಲಿ ಕೆಲವು ಬದಲಾವಣೆಗಳು ಕಂಡುಬರುತ್ತವೆ. ಕೇಂದ್ರ ಮತ್ತು ರಾಜ್ಯಗಳಲ್ಲಿ ಸಮ್ಮಿಶ್ರ ಸರ್ಕಾರಗಳ ಸಂಖ್ಯೆ ಅಧಿಕವಾಗುತ್ತಾ ಹೋಗಿರುವುದನ್ನು ನೋಡಬಹುದು. ಜೊತೆಗೆ ಪ್ರಾದೇಶಿಕ ರಾಜಕಾರಣ ಮತ್ತು ಪ್ರಾದೇಶಿಕ ಪಕ್ಷಗಳು ಹೆಚ್ಚು ಮಹತ್ವ ಪಡೆದುಕೊಳ್ಳತೊಡಗಿದವು. ಇದಕ್ಕೆ ಪೂರಕವಾದ ನೆಲೆಗಟ್ಟನ್ನು ೧೯೭೭ರ ಸಾರ್ವತ್ರಿಕ

ಚುನಾವಣೆಗಳು ಒದಗಿಸಿದವು. ರಾಜಕೀಯ ಪಕ್ಷಗಳ ಧೃವೀಕರಣವನ್ನು ಹಿಂದಿನ ಚುನಾವಣೆಗಳಲ್ಲಿಯೂ ಕಾಣಬಹುದಾದರೂ ಸೈದ್ಧಾಂತಿಕ ಸಾಮರಸ್ಯವಿರುವ ಅಥವಾ ಮಧ್ಯಂತರ ಮನಸ್ಥಿತಿ ಪಕ್ಷಗಳೊಂದಿಗಿರುತ್ತಿತ್ತು. ಈ ಚುನಾವಣೆಯಲ್ಲಿ ಎಡಪಂಥೀಯ ಮತ್ತು ಬಲಪಂಥೀಯ ವಿಚಾರಧಾರೆಗಳುಳ್ಳ ಪಕ್ಷಗಳು ಒಟ್ಟಾಗಿ ಒಕ್ಕೂಟದಲ್ಲಿ ಭಾಗಿಯಾಗಿರುವುದನ್ನು ಕಾಣಬಹುದು. ಚಳವಳಿ ಅಥವಾ ಪ್ರತಿಭಟನೆಗಳಿಂದ ಉಂಟಾದ ಹೊಸ ರೀತಿಯ ಸಾಮೂಹಿಕ ಚಟುವಟಿಕೆಗಳು, ಚುನಾವಣಾ ಹೊಂದಾಣಿಕೆ ಮತ್ತು ಚುನಾವಣಾ ಪ್ರಚಾರದ ಮೇಲೆ ಪ್ರಭಾವ ಬೀರುವುದು. ಕೆಲವು ವಿಪರೀತಸ್ಥಿತಿಗಳಲ್ಲಿ ಇಂತಹ ಚುನಾವಣೆಗಳಲ್ಲಿ, ಈ ಹೊಂದಾಣಿಕೆಯೆ ರಾಜಕೀಯ ಪಕ್ಷಗಳಾಗಿ ಬದಲಾಗುತ್ತವೆ ಎಂದು ಚಳವಳಿಗಳ ಕುರಿತ ವಿಶ್ಲೇಷಣೆಗಳನ್ನು ಕಾಣಬಹುದು. ೧೯೭೭ರ ಚುನಾವಣೆಯಲ್ಲಿ ಜನತಾ ಪಕ್ಷ ಹೊಸ ರೀತಿಯ ರಾಜಕೀಯ ಪಕ್ಷಗಳ ಧೃವೀಕರಣದಿಂದ ರೂಪುಗೊಂಡಿತು. ಇದರ ಪ್ರಭಾವ ಸಮ್ಮಿಶ್ರ ಸರ್ಕಾರಗಳ ಹೆಚ್ಚಳದಲ್ಲಿ ನಿರ್ವಹಿಸಿದ ಪಾತ್ರ ಹಿರಿದಾಗಿದೆ.

ರಾಜಕೀಯ ಪಕ್ಷಗಳ ಧೃವೀಕರಣ ಹಾಗೂ ಪಕ್ಷ ವಿಘಟನೆಯ ಪ್ರಕ್ರಿಯೆ ಕುರಿತು ಕೆಳಗಿನ ಚಿತ್ರಗಳು ಗಮನ ಸೆಳೆಯುವುದು. ಈ ವ್ಯಂಗ್ಯಚಿತ್ರ ಮತ್ತು ಛಾಯಾಚಿತ್ರಗಳು ರಾಜಕೀಯ ಪಕ್ಷಗಳ ಧೃವೀಕರಣ ಹಾಗೂ ಪಕ್ಷ ವಿಘಟನೆಯ ಪ್ರಕ್ರಿಯೆಯ ಪದರಗಳನ್ನು ಬಿಡಿಸಿಡುವುದು. ಚಿತ್ರ-೩ರಲ್ಲಿ ಜನತಾ ಪಕ್ಷ ರೂಪು








ಡೆಕ್ಕನ್ ಹೆರಾಲ್ಡ್ ಮತ್ತು ಕನ್ನಡಪ್ರಭದಲ್ಲಿ [illegible] ಮತ್ತು [illegible] ಪ್ರಕಟವಾಗಿರುವ ವ್ಯಂಗ್ಯಚಿತ್ರಗಳು. [illegible] ೧೯೭೭ [illegible] ಪ್ರಕಟವಾದ ಕನ್ನಡಪ್ರಭದ ಮುಖಪುಟ ವ್ಯಂಗ್ಯಚಿತ್ರಗಳು [illegible]
(ಚಿತ್ರ-೩) (ಚಿತ್ರ-೩ಎ) (ಚಿತ್ರ-೩ಬಿ)

ಗೊಂಡ ಪ್ರಕ್ರಿಯೆ ೧೯೭೭ರ ಚುನಾವಣಾ ನೆಲೆಯಲ್ಲಿ ಚಿತ್ರಿತವಾಗಿದೆ. ಮುಂದಿರುವ ವ್ಯಕ್ತಿ ತುತ್ತೂರಿ ಊದುತ್ತ ದಾಪುಗಾಲು ಹಾಕುತ್ತಿದ್ದರೆ, ಉಳಿದವರು ಆ ಕಡೆ ಈ ಕಡೆ ನೋಡುತ್ತ ಸುಮ್ಮನೆ ಅನುಸರಿಸುತ್ತಿರುವಂತಿದೆ. ಚಿತ್ರ-೩ಎ "ಕಾಂಗ್ರೆಸ್‌ನಲ್ಲಿ ಬಂಡಾಯ", "ಮಂತ್ರಿ ಪದವಿ, ಪಕ್ಷಕ್ಕೆ ಜಗಜೀವನರಾಂ ರಾಜೀನಾಮೆ" ಎಂದು ಕಾಂಗ್ರೆಸ್ ಪಕ್ಷದಿಂದ ಹೊರಬಂದಿರುವ ಕುರಿತ ವರದಿ ಇದೆ. ಇದರ ಪರಿಣಾಮಗಳ ಕುರಿತ ಚರ್ಚೆಯನ್ನು ವರದಿಯ ವಿವರಣೆಯಲ್ಲಿ ನೋಡಬಹುದು. ಹೊಸಪಕ್ಷ ರಚನೆ ಹಾಗೂ ಜನತಾ ಪಕ್ಷಕ್ಕೆ ಸಂಪೂರ್ಣ ಸಹಕಾರ ನೀಡುವ ಜಗಜೀವನ್ ರಾಮ್ ಅವರ ಹೇಳಿಕೆಯು ರಾಜಕೀಯದಲ್ಲಿ ಸಂಚಲನ ಹುಟ್ಟಿಸಿತ್ತು. ಚಿತ್ರ-೩ಬಿನಲ್ಲಿ ಜಗಜೀವನ್ ರಾಮ್ ಅವರಂತೆ ಕಾಣುವ ಮರಕುಟಿಗ ಕೂತ ಮರವನ್ನು ಟಕ್ ಟಕ್ ಎಂದು ಕೊರೆಯುತ್ತಿದೆ. ಮರ ದುರ್ಬಲವಾಗಿದ್ದು, ಹಿಂದಿನ ದಿನದ ಪತ್ರಿಕೆಯಲ್ಲಿ ಜಗಜೀವನ್ ರಾಮ್ ಅವರು ಕಾಂಗ್ರೆಸ್ ಪಕ್ಷದಿಂದ ಹೊರಬಂದು ಹೊಸಪಕ್ಷ ಕಟ್ಟುತ್ತಿರುವ ಸುದ್ದಿ ಪ್ರಕಟವಾಗಿದ್ದನ್ನು ಗಮನಿಸಬೇಕಾಗಿದೆ. ಈ ವ್ಯಂಗ್ಯಚಿತ್ರದ ಮೇಲೆ ದಪ್ಪ ಅಕ್ಷರದಲ್ಲಿ 'ಕಾರ್ಯಸಾಧ್ಯ ಸಮಾಜವಾದ ಹೊಸಪಕ್ಷದ ಗುರಿ: ರಾಮ್' ಎಂಬ ವರದಿಯಿದೆ. ವ್ಯಂಗ್ಯಚಿತ್ರದ ಕೆಳಗೆ ಜಗಜೀವನ್ ರಾಮ್ ಅವರು ಜನರ ನಡುವೆ ನಿಂತು ಹೊಸ ಪಕ್ಷದ ಮಾಹಿತಿ ನೀಡುತ್ತಿರುವ ಛಾಯಾಚಿತ್ರವಿದೆ. ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಉಂಟಾದ ಪಕ್ಷ ಹಾಗೂ ವ್ಯಕ್ತಿ ರಾಜಕಾರಣದ ಬೆಳವಣಿಗೆಯ ಪ್ರಕ್ರಿಯೆಗಳನ್ನು ಬಿಂಬಿಸಿದೆ.

ರಾಜಕೀಯ ಪಕ್ಷಗಳ ಧೃವೀಕರಣ ಕುರಿತ ಸಮಕಾಲೀನ ವಿಚಾರಧಾರೆಗಳನ್ನು ಕೆಳಗಿನ ಚಿತ್ರ-೪ ತೆರೆದಿಡುವುದು. 'ಒಕ್ಕೂಟ' ಶೀರ್ಷಿಕೆಯ ಜನತಾ ಪಕ್ಷ ಕುರಿತ ವ್ಯಂಗ್ಯಚಿತ್ರ. ಹಲವು ಸಣ್ಣ ಸಣ್ಣ ಕತ್ತಿಗಳನ್ನು ದೊಡ್ಡ ಕತ್ತಿಯೊಂದಕ್ಕೆ ವ್ಯವಸ್ಥಿತವಲ್ಲದ ರೀತಿಯಲ್ಲಿ ಹೊಲಿಯಲಾಗಿದೆ. ಜನತಾ ಪಕ್ಷ ಎಂಬ ಕೈ ದೊಡ್ಡ

ಕತ್ತಿಯನ್ನು ಹಿಡಿದಿದೆ. 'ಬರುವ ಚುನಾವಣೆಗಳಲ್ಲಿ ಯಾವುದು ವಿವೇಕ?' ಎಂಬ ಚುನಾವಣಾ ಪೂರ್ವದ ಸಂಪಾದಕೀಯ ಇದರ ಅಡಿಯಲ್ಲಿದೆ. ಒಕ್ಕೂಟ ವ್ಯವಸ್ಥಿತವಾಗಿ ಇಲ್ಲದಿರುವುದು ತೊಂದರೆ ಒಡ್ಡುವ ಸಾಧ್ಯತೆಗಳನ್ನು ಮುಂಗಂಡಂತೆ ಕಂಡುಬರುತ್ತದೆ. ಇದಕ್ಕೆ ಪೂರಕವಾಗಿ ಕಾಂಗ್ರೆಸ್ ಪಕ್ಷದ ಜಾಹೀರಾತಿನಲ್ಲಿ 'ಜನತಾ ಪಕ್ಷ ಹಳೆಯ ದೊಡ್ಡ ಒಕ್ಕೂಟಗಳಿಗೆ ಹೊಸ ಸೇರ್ಪಡೆ', 'ಪಾರ್ಲಿಮೆಂಟರಿ ಪ್ರಜಾಪ್ರಭುತ್ವಕ್ಕೆ ಅಪವಿತ್ರವಾದ ಅತಿಕ್ರಮಣಕಾರಿ ವ್ಯವಸ್ಥೆ' ಮೊದಲಾದ ಟೀಕೆ ಕಂಡುಬರುವುದು. ಪರ್ಯಾಯವಾಗಿ ಜನತಾ ಪಕ್ಷ ೧೯೭೭ರ ಚುನಾವಣೆಯನ್ನು ನಿರಂಕುಶಾಧಿಕಾರ ಮತ್ತು ಪ್ರಜಾಪ್ರಭುತ್ವದ ನಡುವಿನ ಯುದ್ಧವೆಂದು ಬಿಂಬಿಸುತ್ತಿತ್ತು. ಒಕ್ಕೂಟದೊಳಗಿನ ಏಕತೆಯು ೧೯೭೧ರ ಚುನಾವಣೆಯಂತಿಲ್ಲ. ಎಲ್ಲ ಭಿನ್ನತೆಗಳನ್ನು ತೊರೆದು ಒಂದು ಪಕ್ಷ, ಸಂಕೇತದಡಿ ಒಟ್ಟಾಗಿ ಚುನಾವಣೆ ಎದುರಿಸುತ್ತಿದ್ದೇವೆ' ಎಂಬ ರಾಮಕೃಷ್ಣ ಹೆಗಡೆ



ಬರುವ ಚುನಾವಣೆಗಳಲ್ಲಿ ಯಾವುದು ವಿವೇಕ?

ಪ್ರಜಾವಾಣಿ, ೨೬ ಮಾರ್ಚ್ ೧೯೭೭ ಚಿತ್ರ ಸಂಖ್ಯೆ: ೪.೪.

(ಚಿತ್ರ-೪)

ಅವರ ಹೇಳಿಕೆಯ ಪತ್ರಿಕಾ ವರದಿ ಕಾಂಗ್ರೆಸ್ ಟೀಕೆಗೆ ನೀಡಿದ ಉತ್ತರದಂತಿದೆ. ರಾಜಕೀಯ ಪಕ್ಷಗಳ ಧೃವೀಕರಣವು ಆರಂಭದಿಂದಲೇ ಅನೇಕರಲ್ಲಿ ಹುಟ್ಟುಹಾಕಿದ್ದ ಸಂಶಯಗಳನ್ನು ಹೊರಗೆಡುವುದನ್ನು ನೋಡಬಹುದು.

••• ••• •••

ಈ ಚುನಾವಣೆ ತೀವ್ರ ಕುತೂಹಲವನ್ನು ಹುಟ್ಟುಹಾಕಿತ್ತು. ಹಾಗಾಗಿ ಪ್ರಚಾರಸಭೆಗಳು ಜನಸಂದಣಿಯಿಂದ ತುಂಬಿರುವುದು ಸಾಮಾನ್ಯವಾಗಿತ್ತು. ರಾಷ್ಟ್ರಾದ್ಯಂತ ಜನತಾ ಪಕ್ಷದ ಪ್ರಚಾರ ಸಭೆಗಳಲ್ಲಿ ಜನಸಂದಣಿ ಹೆಚ್ಚಾಗಿರುತ್ತಿತ್ತು. ಉತ್ತರ ಭಾರತದ ಹಲವೆಡೆ ಕಾಂಗ್ರೆಸ್ ಪಕ್ಷದ ಪ್ರಚಾರ ಸಭೆಗಳು ಖಾಲಿ ಇರುತ್ತಿದ್ದವು. ಪ್ರತಿಯಾಗಿ ಜನತಾ ಪಕ್ಷದ ಸಭೆಗಳು ಕಿಕ್ಕಿರಿದು ತುಂಬಿರುತ್ತಿದ್ದವು. ಈ ವರದಿಗಳು ಉತ್ತೇಜನಕಾರಿಯಾಗಿ, ಭಾವೋದ್ವೇಗಗಳೊಡನೆ ಸಣ್ಣ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದವು. ಕರ್ನಾಟಕದಲ್ಲಿ ಜನತಾ ಪಕ್ಷದ ಅಧ್ಯಕ್ಷರಾಗಿ ವೀರೇಂದ್ರ ಪಾಟೀಲ್ ಹಾಗೂ ಉಪಾಧ್ಯಕ್ಷರಾಗಿ ರಾಮಕೃಷ್ಣ ಹೆಗಡೆ ಅವರು ಕಾರ್ಯನಿರ್ವಹಿಸುತ್ತಿದ್ದರು. ಜನತಾ ಪಕ್ಷದ ಸಭೆಗಳಲ್ಲಿ ಖ್ಯಾತ ಸಾಹಿತಿ ಶಿವರಾಮ್ ಕಾರಂತ್, ಗೋಪಾಲ ಕೃಷ್ಣ ಅಡಿಗ ಮೊದಲಾದ ಸಾಹಿತಿಗಳು, ವಕೀಲರು, ವಿದ್ಯಾರ್ಥಿಗಳು ಸ್ವಯಂ ಪ್ರೇರಣೆಯಿಂದ ಪ್ರಚಾರ ಕೈಗೊಳ್ಳುತ್ತಿದ್ದರು. ಈ ಸಭೆಗಳು ಸಾಮಾನ್ಯವಾಗಿ ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಿ ಬಂಧಿತರಾಗಿದ್ದ ವ್ಯಕ್ತಿಗಳ ಸನ್ಮಾನ ಸಮಾರಂಭಗಳು ಸಹ ಆಗಿರುತ್ತಿದ್ದವು. ಪ್ರಚಾರಸಭೆಗಳಲ್ಲಿ ಪಕ್ಷದ ದೇಣಿಗೆಗಳ ಸಂಗ್ರಹ ಆಗುತಿತ್ತು. ಸಭೆಗಳು ನಗರ ಕೇಂದ್ರಗಳಲ್ಲಿ ಮತ್ತು ತುರ್ತುಪರಿಸ್ಥಿತಿ ವಿರೋಧಿ ಹೋರಾಟ ಕಂಡುಬಂದ ಪ್ರದೇಶಗಳಲ್ಲಿ ಹೆಚ್ಚಾಗಿರುತ್ತಿದ್ದವು. ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಿ ನಡೆದ ದೌರ್ಜನ್ಯ, ಕಾಂಗ್ರೆಸ್ ಪಕ್ಷದ ಆಳ್ವಿಕೆ, ಪ್ರಜಾಪ್ರಭುತ್ವದ ಮಹತ್ವ ಹಾಗೂ ರಕ್ಷಣೆ ಕುರಿತಂತೆ ಭಾಷಣಗಳು ನಡೆಯುತ್ತಿದ್ದವು. ಕರ್ನಾಟಕದಲ್ಲಿ ಕಾಂಗ್ರೆಸ್ ಪಕ್ಷದ ಪ್ರಚಾರ ಸಭೆಗಳು ಜನಸಂದಣಿಯಿಂದ ತುಂಬಿರುತ್ತಿದ್ದವು. ಕಾಂಗ್ರೆಸ್ ಪಕ್ಷದ ಚುನಾವಣಾ ಪ್ರಚಾರಕಾರ್ಯ ಮತ್ತು ಪತ್ರಿಕೆಗಳ ವಿಚಾರಧಾರೆಗಳ ಸ್ವರೂಪದ ಮೇಲೆ ಕೆಳಗಿನ ಚಿತ್ರ-೫ ಬೆಳಕು ಚೆಲ್ಲುವುದು. ಸಂಜಯ್ ಗಾಂಧಿ ಅವರು ಕಾಂಗ್ರೆಸ್ ಪ್ರಚಾರಕ್ಕೆ ಆಗಮಿಸಿದ್ದ ಸಂದರ್ಭದ ಛಾಯಾಚಿತ್ರ. ಕಾಂಗ್ರೆಸ್ ಪಕ್ಷದ ಚುನಾವಣಾ ಪ್ರಚಾರದ ಆಯಾಮವೊಂದರ ಮೇಲೆ ಬೆಳಕು ತರುವುದು. ಪ್ರಾದೇಶಿಕ ರಾಜಕಾರಣದ ಪ್ರಮುಖ ರಾಜಕಾರಣಿಗಳು, ಆಡಳಿತ ಮುಖಂಡರು ಯುವ ರಾಷ್ಟ್ರೀಯ ಕಾಂಗ್ರೆಸ್ ಮುಖಂಡನ ಆಗಮನಕ್ಕೆ

ಕೊಡುತ್ತಿರವ ಪ್ರಾಮುಖ್ಯತೆ ಈ ಛಾಯಾಚಿತ್ರಗಳ ಕೇಂದ್ರ ವಿಚಾರ. ಮೊದಲ ಚಿತ್ರದಲ್ಲಿ ಮುಖ್ಯಮಂತ್ರಿ



೩೦ ಜನವರಿ ೧೯೭೭ರ ಪ್ರಜಾಮತದಲ್ಲಿ ಪ್ರಕಟವಾದ ಲೇಖನ ಮತ್ತು ಛಾಯಾಚಿತ್ರಗಳು. ಚಿತ್ರ ಸಂಖ್ಯೆ ೪.೫. (ಚಿತ್ರ-೫)

ಅರಸು ಅವರು ರಾಜ್ಯದ ಇತರ ಮುಖಂಡರೊಡನೆ ಸಂಜಯ್ ಗಾಂಧಿ ಅವರ ಓಂದಿರುವರು. ಆರ್.ಗುಂಡೂರಾವ್ ಅವರು ತೆರೆದಿರುವ ಕಾರಿನ ಬಾಗಿಲಿನ ಬಳಿ ನಿಂತಿರುವರು. ಸಂಜಯ್ ಗಾಂಧಿ ಅವರು ಇಳಿಯಲು ಹೊರಟಂತಿದೆ. ಎರಡನೆ ಚಿತ್ರದಲ್ಲಿ ಸಂಜಯ್ ಗಾಂಧಿ ಮತ್ತು ಮುಖ್ಯಮಂತ್ರಿ ಈರ್ವರೂ ಅಕ್ಕಪಕ್ಕ ಕುಳಿತಿದ್ದಾರೆ. ಮುಖ್ಯಮಂತ್ರಿ ಜೇರೇನನ್ನೋ ಗಮನಿಸುತ್ತಿರುವ ಸಂಜಯ್ ಗಾಂಧಿಯವರನ್ನೆ ತದೇಕ ಚಿತ್ತದಿಂದ ನೋಡುತ್ತಿರುವಂತಿದೆ. ಮೂರನೆ ಚಿತ್ರ ಇವುಗಳ ಕೆಳಗಿದ್ದು, ಕಿಕ್ಕಿರಿದು ನೆರೆದಿರುವ ಜನಸಮೂಹ ವನ್ನು ನೋಡಬಹುದು. ಜನಸಮೂಹದ ಮುಂದೆ ಬಾವುಟ ಹಾರಾಡುತ್ತಿರುವುದು. 'ಹೊಸ ವಸಾಹತುವಾದ: ಯುವಜನಕ್ಕೆ ಎಚ್ಚರಿಕೆ' ಎಂಬುದು ಈ ಲೇಖನದ ಶೀರ್ಷಿಕೆ. ಈ ಸಭೆಗೆ ಸಾವಿರಾರು ಸಂಖ್ಯೆಯಲ್ಲಿ ಇಂದಿರಾ ಗಾಂಧಿ ಅವರ ಸಭೆಗೆ ಆಗಮಿಸುವಂತೆ ಜನರ ಆಗಮನದ ಕುರಿತು ಪರೋಕ್ಷವಾಗಿ ಅಭಿಪ್ರಾಯವನ್ನು ವ್ಯಕ್ತಪಡಿಸುವುದು.

## ೪.೧.೧.೩. ಚುನಾವಣೆ: ಮೊದಲ ಕಾಂಗ್ರೇಸೇತರ ಸರ್ಕಾರ

ಚುನಾವಣಾ[೧೧] ಫಲಿತಾಂಶಗಳ ಪರಿಣಾಮವಾಗಿ ರಚಿಸಲ್ಪಡುವ ಹೊಸ ಸರ್ಕಾರ, ಅಸ್ತಿತ್ವದಲ್ಲಿರುವ ಸರ್ಕಾರ ಕುರಿತ ವಿಚಾರ, ಪ್ರಕ್ರಿಯೆಗಳು ಪಾರ್ಲಿಮೆಂಟರಿ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಹೆಚ್ಚು ಚರ್ಚೆಗೊಳ ಪಡುತ್ತವೆ. ಈ ಸಂಬಂಧ ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಜನತಾ ಪಕ್ಷದ ವಿಜಯ ಹಾಗೂ ಕಾಂಗ್ರೆಸಿನ ಸೋಲು ಸಮೂಹ ಮಾಧ್ಯಮಗಳಲ್ಲಿ ಅಭಿವ್ಯಕ್ತಗೊಂಡ ಬಗೆಯನ್ನು ಮತ್ತು ಈ ಕುರಿತ ಚರ್ಚೆಗಳನ್ನು ಅವಲೋಕಿಸಲಾಗಿದೆ. ಈ ದಿನಪತ್ರಿಕೆಗಳಲ್ಲಿ(ಚಿತ್ರ-೬ ಮತ್ತು ಚಿತ್ರ-೬ಎ) ಚುನಾವಣೆಯ ಫಲಿತಾಂಶಗಳನ್ನು ಪ್ರಕಟಿಸಿರುವ ರೂಪದಲ್ಲಿ ಭಿನ್ನತೆಗಳನ್ನು ಗುರುತಿಸಬಹುದು. ಕನ್ನಡಪ್ರಭದ(ಚಿತ್ರ-೬ಎ) ಮುಖಪುಟದಲ್ಲಿ "ಉತ್ತರ ಭಾರತ ದ ರಾಜ್ಯಗಳಲ್ಲಿ ಕಾಂಗ್ರೆಸ್ ಪಕ್ಷ ತೀವ್ರ ಪತನ."; "ವೈ. ಕಾಸು, ಸಿ.ಎಸ್.ಚವಾಣ್, ಮುರಾರ್ಜಿ ಜಯ" ಎಂಬ ವರದಿಗಳ ಕೆಳಗೆ ಆಡಳಿತ ಕಾಂಗ್ರೆಸ್‌ನಲ್ಲಿ ಸೋಲಿನ ನಿರೀಕ್ಷೆ ಇರುವ ಪ್ರಮುಖರ ಹೆಸರುಗಳಿವೆ. ಪಕ್ಕದಲ್ಲಿ ಮುರಾರ್ಜಿ ವಿಜಯದ ವರದಿಯಷ್ಟೇ ದಪ್ಪ ಅಕ್ಷರದಲ್ಲಿ ಇಂದಿರಾ ಪರಾಭವ ಎಂದಿದೆ. ಡೆಕ್ಕನ್ ಹೆರಾಲ್ಡ್‌ನ(ಚಿತ್ರ-೬) ಮುಖಪುಟದಲ್ಲಿ "ಇಂದಿರಾ ಗಾಂಧಿ ಡಿಫೀಟೆಡ್" ಎಂದು ದಪ್ಪ ಅಕ್ಷರದ ವರದಿಯನ್ನು ಕಾಣಬಹುದು. ವರದಿಯ ಮಧ್ಯಭಾಗದಲ್ಲಿ ಇಂದಿರಾ ಗಾಂಧಿ ಅವರು ನಗುತ್ತಿರುವ ದೊಡ್ಡ ಭಾವಚಿತ್ರವನ್ನು ನೀಡಲಾಗಿದೆ. ಗೆದ್ದ ವ್ಯಕ್ತಿಗಳ ಭಾವಚಿತ್ರ ಮತ್ತು ಮಾಹಿತಿಯ ಬಲಭಾಗದಲ್ಲಿ ಇಂದಿರಾ ಗಾಂಧಿ ಅವರನ್ನು ಸೋಲಿಸಿದ ರಾಜ್ ನಾರಾಯಣ್ ಅವರ ಚಿತ್ರವಿದೆ. ಎಡಬದಿಗೆ ವಾಜಪೇಯಿ ಇನ್ನಿತರ ನಾಯಕರ ಭಾವಚಿತ್ರಗಳಿದೆ. ಇಂದಿರಾ ಗಾಂಧಿ ಅವರ ಭಾವ ಚಿತ್ರದ ಅಡಿ "ಸಂಜಯ್ ಲೂಸಸ್" ಎಂದು ವರದಿ ಹಾಗೂ ಚಿತ್ರವಿದೆ. ಈ ಎರಡು ಪತ್ರಿಕೆಗಳ ವರದಿಗಳಲ್ಲಿ ಕಾಂಗ್ರೆಸ್ ಪಕ್ಷ ಮತ್ತು ಕಾಂಗ್ರೆಸ್ ಪಕ್ಷದ ವರಿಷ್ಠರ ಸೋಲು, ಗೆದ್ದ ಪಕ್ಷ ಹಾಗೂ ವ್ಯಕ್ತಿಗಳಗಿಂತ ಹೆಚ್ಚು ಮಹತ್ವ


DECCAN HERALD
INDIRA GANDHI DEFEATED
Recount and repoll demand rejected
ಕನ್ನಡಪ್ರಭ

೨೧ ಮಾರ್ಚ್ ೧೯೭೭ರ ಡೆಕ್ಕನ್ ಹೆರಾಲ್ಡ್ ಮತ್ತು ಕನ್ನಡಪ್ರಭ ಸಂಚಿಕೆಗಳು. ಚಿತ್ರ ಸಂಖ್ಯೆ೪.೬
(ಚಿತ್ರ-೬) (ಚಿತ್ರ-೬೩)

ಪಡೆದಂತಿದೆ. ಇಂಗ್ಲಿಷ್ ಪತ್ರಿಕೆಯಲ್ಲಿ ವ್ಯಕ್ತಿ ಪ್ರಾಮುಖ್ಯತೆ ಹೆಚ್ಚು ಕಂಡರೆ, ಕನ್ನಡ ಪತ್ರಿಕೆಯಲ್ಲಿ ಪಕ್ಷದ ಪ್ರಾಮುಖ್ಯತೆ ಹೆಚ್ಚಾಗಿದೆ. ಚುನಾವಣಾ ಫಲಿತಾಂಶ ಕವನದಲ್ಲಿ ವ್ಯಕ್ತಿ ನೆಲೆಯಲ್ಲಿ ರೂಪುಗೊಂಡಿರುವ ಬಗೆ ಹೀಗಿದೆ :

> ಇಂದಿರಾಜಿ ಆಗಲಿ, ಇನ್ಯಾರೆ ಆಗಲಿ
> ಸೆರೆಮನೆಗೆ ಕಳಿಸುವವರ
> ಮನೆಗೆ ಕಳಿಸುವೆವು !
> ...
> ರಾಮರಾಜ್ಯವೂ ಬೇಡ.
> ಗ್ರಾಮರಾಜ್ಯವೂ ಬೇಡ.
> ಪ್ರಜಾರಾಜ್ಯವೂ ಬೇಡ.
> ಸುಖೀರಾಜ್ಯವೂ ಬೇಡ.
> ನಮ್ಮ ರಾಜ್ಯವೇ ಬೇಕು. ಆಮೇಲೆ
> ನಮ್ಮ ಮಗನ ರಾಜ್ಯ ಬೇಕೆನ್ನುವವರ
> ಉರುಳಿಸುವೆವು (ಮರಾಠೀಕರ ೨೦೦೮: ೩೪೩).

ವಂಶ ಪಾರಂಪರ್ಯ ಆಡಳಿತ ನೀತಿಯನ್ನು ನಿರಾಕರಿಸುತ್ತ, ಪ್ರಜಾರಾಜ್ಯ ಬೇಕೆನ್ನುವ ತೀವ್ರತರ ಆಶಯ ಕಂಡುಬರುವುದು. ಸ್ವಾತಂತ್ರ್ಯ ನಂತರದಿಂದ ೧೯೭೭ರವರೆಗೂ ಕಾಂಗ್ರೆಸ್‌ನ ಏಕಪಕ್ಷೀಯ ಆಡಳಿತ ಹಾಗೂ ೧೯೬೭ರ ನಂತರ ಪ್ರಧಾನಿ ಇಂದಿರಾ ಗಾಂಧಿಯವರ ಆಡಳಿತ ನೀತಿ ಬೀರಿರುವ ಪ್ರಭಾವ ಅಪಾರವಾಗಿದೆ.

**೧೯೭೭ರ ಲೋಕಸಭಾ ಚುನಾವಣೆಯಲ್ಲಿ ರಾಷ್ಟ್ರೀಯ ಮತ್ತು ಇತರ ಪಕ್ಷಗಳ ಕಾರ್ಯನಿರ್ವಹಣೆ. ರೇಖಾನಕ್ಷೆ ಪಟ್ಟಿ: ೩.**




ಆಕರ: ಗವರ್ನ್‌ಮೆಂಟ್ ಆಫ್ ಇಂಡಿಯಾ. ೧೯೭೮. ಸ್ಟ್ಯಾಟಿಸ್ಟಿಕಲ್ ರಿಪೋರ್ಟ್ ಆನ್ ಜನರಲ್ ಇಲೆಕ್ಷನ್ಸ್, ೧೯೭೭ ಟು ದಿ ಸಿಕ್ಸ್ತ್ ಲೋಕಸಭಾ. ಇಲೆಕ್ಷನ್ ಕಮಿಷನ್ ಆಫ್ ಇಂಡಿಯಾ. ಪುಟ-೨೦೩.

ಈ ಮೇಲಿನ ರೇಖಾನಕ್ಷೆಯಲ್ಲಿ ೧೯೭೭ರ ಲೋಕಸಭಾ ಚುನಾವಣೆಯಲ್ಲಿ ರಾಷ್ಟ್ರೀಯ ಮತ್ತು ಪ್ರಾದೇಶಿಕ ಪಕ್ಷಗಳ ಫಲಿತಾಂಶಗಳನ್ನು ಸಮೀಕರಿಸಲಾಗಿದೆ. ಇತರೆ ಪಕ್ಷಗಳು ಎಂದರೆ ಅಧಿಕೃತವಾಗಿ ನೊಂದಾಯಿಸಲ್ಪಟ್ಟಿದ್ದು, ವ್ಯಾಪಕವಾಗಿ ಗುರುತಿಸಲ್ಪಟ್ಟಿರದಂತಹ ರಾಜಕೀಯ ಪಕ್ಷಗಳು. ೧೯೭೭ರ ಚುನಾವಣೆಯಲ್ಲಿ ಆಡಳಿತಕ್ಕೆ ಬಂದ ಜನತಾ ಪಕ್ಷ ಚುನಾವಣಾ ಕಮಿಷನ್‌ನಿಂದ ಗುರುತಿಸಲ್ಪಟ್ಟಿರದ ಕಾರಣ ಮೇಲಿನ ರೇಖಾನಕ್ಷೆಯಲ್ಲಿ ಅದರ ಹೆಸರಿಲ್ಲ. ಆದರೆ ಭಾರತೀಯ ಲೋಕದಳವನ್ನು(ಬಿಎಲ್‌ಡಿ) ಜನತಾಪಕ್ಷದ ಪ್ರಮುಖ ಭಾಗವಾಗಿ ಗುರುತಿಸಬಹುದು. ಈ ಚುನಾವಣೆಯಲ್ಲಿ ಪ್ರಾದೇಶಿಕ ಪಕ್ಷಗಳು, ಇತರ ಪಕ್ಷಗಳು ಮತ್ತು ಸ್ವತಂತ್ರವಾಗಿ ಸ್ಪರ್ಧಿಸಿರುವುದು ಕಡಿಮೆ ಕಂಡುಬರುವುದು. ಶೇಕಡಾವಾರು ಮತದಾನ[೧೧] ಗಮನಿಸಿದರೆ ರಾಷ್ಟ್ರೀಯ ಪಕ್ಷಗಳು ೮೪.೬೭%ರಷ್ಟು ಮತ್ತು ಪ್ರಾದೇಶಿಕ ಪಕ್ಷಗಳು ೮.೮೦%ರಷ್ಟು ಗಳಿಸಿವೆ. ಜನತಾ ಪಕ್ಷದ ಪ್ರಮುಖ ಭಾಗವಾದ ಬಿಎಲ್‌ಡಿ ೪೧.೩೨%ರಷ್ಟು ಮತ ಗಳಿಸಿ ೨೯೫ ಕ್ಷೇತ್ರಗಳಲ್ಲಿ ಗೆಲುವು ಸಾಧಿಸಿದೆ. ಕಾಂಗ್ರೆಸ್ ಪಕ್ಷ ೩೪.೫೨%ರಷ್ಟು ಮತ ಗಳಿಸಿ ೧೫೪ ಕ್ಷೇತ್ರಗಳಲ್ಲಿ ವಿಜಯ ಗಳಿಸಿದೆ. ಇತರ ಪ್ರಮುಖ ರಾಷ್ಟ್ರೀಯ ಪಕ್ಷಗಳಾದ ಸಿಪಿಐ, ಸಿಪಿಎಂ ಮತ್ತು ಸಂಸ್ಥಾ ಕಾಂಗ್ರೆಸ್ ಕ್ರಮವಾಗಿ ೨.೮೨%, ೪.೨೯%, ೧.೭೨%ರಷ್ಟು ಮತ ಗಳಿಸಿ ೭, ೨೨, ೩ ಕ್ಷೇತ್ರಗಳಲ್ಲಿ ಸ್ಥಾನಗಳಿಸಿವೆ. ಜನತಾ ಪಕ್ಷ ಕಾಂಗ್ರೆಸಿಗಿಂತ ೧೦೫ ಕ್ಷೇತ್ರಗಳಲ್ಲಿ ಅಧಿಕ ಸ್ಥಾನಗಳಿಸಿದ್ದರೂ ಶೇಕಡ ೬.೮%ರಷ್ಟು ಮಾತ್ರ ಮತದಾನದಲ್ಲಿ ಹೆಚ್ಚಳವಾಗಿರುವುದನ್ನು ಗಮನಿಸಬಹುದು. ಈ ಅಂಕಿಅಂಶಗಳು ಚುನಾವಣೆಯಲ್ಲಿ ಕಂಡುಬಂದ ರಾಜಕೀಯ ಬದಲಾವಣೆಗಳನ್ನು ಅನಾವರಣಗೊಳಿಸುವುದು.

**೧೯೭೭ರ ಲೋಕಸಭಾ ಚುನಾವಣೆಯಲ್ಲಿ ದಕ್ಷಿಣ ಭಾರತದಲ್ಲಿ ರಾಜಕೀಯ ಪಕ್ಷಗಳ ಫಲಿತಾಂಶದ ಪಟ್ಟಿ. ಪಟ್ಟಿ ಸಂಖ್ಯೆ: ೧೪.**

| ರಾಜ್ಯ | ಪಕ್ಷಗಳು | ಸ್ಪರ್ಧಿಸಿದವರು | ಗೆದ್ದವರು | ಶೇಕಡಾವಾರು ಮತದಾನ | ಒಟ್ಟು ಕ್ಷೇತ್ರಗಳು |
|---|---|---|---|---|---|
| ಆಂಧ್ರ ಪ್ರದೇಶ | ಬಿಎಲ್‌ಡಿ | ೩೭ | ೧ | ೩೨.೩೩ | ೪೨ |
| | ಸಿಪಿಐ | ೧೦ | ೦ | ೨.೬೭ | |
| | ಸಿಪಿಎಂ | ೬ | ೦ | ೪.೭೧ | |
| | ಐಎನ್‌ಸಿ | ೪೨ | ೪೧ | ೫೭.೩೬ | |
| | ಹೆಚ್‌ಎಂಎಸ್ | ೧ | ೦ | ೦.೦೦ | |
| | ಆರ್‌ಪಿಕೆ | ೧ | ೦ | ೦.೦೯ | |
| | ಆರ್‌ಆರ್‌ಪಿ | ೧ | ೦ | ೦.೦೨ | |
| | ಸ್ವತಂತ್ರ ಅಭ್ಯರ್ಥಿಗಳು | ೬೭ | ೦ | ೨.೮೧ | |
| ಕೇರಳ | ಬಿಎಲ್‌ಡಿ | ೬ | ೦ | ೭.೨೦ | ೨೦ |
| | ಸಿಪಿಐ | ೪ | ೪ | ೧೦.೩೮ | |
| | ಸಿಪಿಎಂ | ೯ | ೦ | ೨೦.೩೩ | |
| | ಐಎನ್‌ಸಿ | ೧೧ | ೧೧ | ೨೯.೧೩ | |
| | ಕೆಸಿಪಿ | ೬ | ೦ | ೫.೯೫ | |
| | ಕೆಇಸಿ | ೨ | ೨ | ೫.೫೫ | |
| | ಎಂಎಲ್‌ಓ | ೨ | ೦ | ೩.೬೦ | |
| | ಎಂಯುಎಲ್ | ೨ | ೨ | ೬.೦೩ | |
| | ಆರ್‌ಎಸ್‌ಪಿ | ೧ | ೧ | ೩.೦೮ | |
| | ಎಸ್‌ಯುಸಿ | ೧ | ೦ | ೦.೦೯ | |
| | ಸ್ವತಂತ್ರ ಅಭ್ಯರ್ಥಿಗಳು | ೨೫ | ೦ | ೮.೬೭ | |
| ತಮಿಳುನಾಡು | ಸಿಪಿಐ | ೩ | ೩ | ೪.೬೦ | ೩೯ |
| | ಸಿಪಿಎಂ | ೨ | ೦ | ೧.೫೬ | |
| | ಐಎನ್‌ಸಿ | ೧೫ | ೧೪ | ೨೨.೨೭ | |
| | ಎನ್‌ಸಿಓ | ೧೮ | ೩ | ೧೭.೬೭ | |
| | ಎಡಿಕೆ | ೨೦ | ೧೭ | ೩೦.೦೪ | |
| | ಡಿಎಂಕೆ | ೧೯ | ೨ | ೧೮.೭೧ | |
| | ಆರ್‌ಪಿಐ | ೧ | ೦ | ೦.೦೨ | |
| | ಸ್ವತಂತ್ರ ಅಭ್ಯರ್ಥಿಗಳು | ೧೧೭ | ೦ | ೫.೨೨ | |

ಆಕರ: ಗವರ್ನ್‌ಮೆಂಟ್ ಆಫ್ ಇಂಡಿಯಾ, ೧೯೭೮, ಸ್ಟ್ಯಾಟಿಸ್ಟಿಕಲ್ ರಿಪೋರ್ಟ್ ಆನ್ ಜನರಲ್ ಇಲೆಕ್ಷನ್ಸ್, ೧೯೭೭ ಟು ದಿ ಸಿಕ್ಸ್ತ್ ಲೋಕಸಭಾ, ಇಲೆಕ್ಷನ್ ಕಮಿಷನ್ ಆಫ್ ಇಂಡಿಯಾ, ಪುಟ-೨೦೩.

ಈ ಮೇಲಿನ ಪಟ್ಟಿಯಲ್ಲಿ ಚುನಾವಣೆಯಲ್ಲಿ ಜನತಾ ಪಕ್ಷ ಅಧಿಕ ಕ್ಷೇತ್ರಗಳಲ್ಲಿ ಜಯ ಸಾಧಿಸಲು ಸಫಲವಾಗಿದ್ದರೂ ದಕ್ಷಿಣ ಭಾರತದ ಮೇಲೆ ಅದರ ಪ್ರಭಾವ ಕಡಿಮೆ ಇರುವುದು ಕಂಡುಬರುವುದು. ಆಂಧ್ರ ಪ್ರದೇಶ, ಕೇರಳ ಮತ್ತು ತಮಿಳುನಾಡಿನಲ್ಲಿ ಕಾಂಗ್ರೆಸ್ ಪಕ್ಷ ೧೨೯ ಕ್ಷೇತ್ರಗಳಿಗೆ ೬೬ ಕ್ಷೇತ್ರಗಳಲ್ಲಿ ಗೆಲುವು ಸಾಧಿಸಿದ್ದು, ಅರ್ಧಕ್ಕಿಂತ ಹೆಚ್ಚು ಸ್ಥಾನಗಳಿಸಿದೆ. ಕೇರಳದಲ್ಲಿ ಸಿಪಿಐ, ಕೆಇಸಿ, ಎಂಯುಎಲ್ ಮತ್ತು

ಆರ್‌ಎಸ್‌ಪಿ ಉಳಿದ ೯ ಕ್ಷೇತ್ರಗಳಲ್ಲಿ ಮತ್ತು ತಮಿಳುನಾಡಿನಲ್ಲಿ ಸಿಪಿಐ, ಎನ್‌ಸಿಒ, ಎಡಿಕೆ, ಡಿಎಂಕೆ ೨೫ಕ್ಷೇತ್ರಗಳಲ್ಲಿ ವಿಜಯ ಗಳಿಸಿವೆ. ತಮಿಳುನಾಡಿನಲ್ಲಿ ಕಾಂಗ್ರೆಸ್‌ಗಿಂತ ಹೆಚ್ಚಿನ ಕ್ಷೇತ್ರಗಳಲ್ಲಿ ಇತರ ಪಕ್ಷಗಳು ಗೆಲುವು ಪಡೆದಿರುವುದನ್ನು ನೋಡಬಹುದು. ೧೯೭೭ರ ಲೋಕಸಭಾ ಚುನಾವಣೆಯ[೧೨] ನಂತರ ಕರ್ನಾಟಕ ಮತ್ತು ಆಂಧ್ರ ಪ್ರದೇಶಗಳು ಕಾಂಗ್ರೆಸ್ ಭದ್ರನೆಲೆಗಳೆಂದು ಗುರುತಿಸಲ್ಪಟ್ಟವು. ಈ ಎರಡು ರಾಜ್ಯಗಳ ಶೇಕಡಾವಾರು ಮತಗಳನ್ನು ಗಮನಿಸಿದರೆ ಬಿಎಲ್‌ಡಿ ಎರಡನೇ ಸ್ಥಾನದಲ್ಲಿದ್ದು, ಅತಿ ಹೆಚ್ಚು ಸ್ಪರ್ಧೆ ಒಡ್ಡಿದ ಪಕ್ಷವಾಗಿದೆ.

**೧೯೭೭ರ ಲೋಕಸಭಾ ಚುನಾವಣೆಯಲ್ಲಿ ಕರ್ನಾಟಕದಲ್ಲಿ ರಾಜಕೀಯ ಪಕ್ಷಗಳ ಕಾರ್ಯನಿರ್ವಹಣೆ. ರೇಖಾನಕ್ಷೆ ಪಟ್ಟ: ೪.**




ಆಕರ: ಗವರ್ನಮೆಂಟ್ ಆಫ್ ಇಂಡಿಯಾ. ೧೯೭೭. ಸ್ಟ್ಯಾಟಿಸ್ಟಿಕಲ್ ರಿಪೋರ್ಟ್ ಆನ್ ಜನರಲ್ ಇಲೆಕ್ಷನ್ಸ್, ೧೯೭೭ ಟು ದಿ ಸಿಕ್ಸ್ತ್ ಲೋಕಸಭಾ. ಇಲೆಕ್ಷನ್ ಕಮಿಷನ್ ಆಫ್ ಇಂಡಿಯಾ. ಪುಟ-೧೨೮.

ಈ ರೇಖಾನಕ್ಷೆಯಲ್ಲಿ ರಾಷ್ಟ್ರೀಯ ನೆಲೆಯಲ್ಲಿ ಕಂಡುಬಂದ ಚುನಾವಣಾ ಫಲಿತಾಂಶಕ್ಕಿಂತ ವಿಭಿನ್ನ ನೋಟವಿದೆ. ಬಿಎಲ್‌ಡಿ ಪಕ್ಷ ಕಾಂಗ್ರೆಸ್ಸಿಗಿಂತ ಅತ್ಯಂತ ಕಡಿಮೆ ಕ್ಷೇತ್ರಗಳಿಸಿದೆಯಾದರೂ ಕಾಂಗ್ರೆಸ್ ಮತ್ತು ಬಿಎಲ್‌ಡಿ ಪಕ್ಷಗಳು ಕ್ರಮವಾಗಿ ೫೬.೭೦% ೩೯.೯೫% ಮತ ಗಳಿಸಿವೆ. ಶೇಕಡಾವಾರು ಮತದಾನವು ಮನೋಭಾವದಲ್ಲಾಗಿರುವ ಬದಲಾವಣೆಗಳನ್ನು ಸೂಚಿಸುವುದು. ದಕ್ಷಿಣದ ರಾಜ್ಯಗಳಲ್ಲಿ ಕಾಂಗ್ರೆಸ್ ಮತ್ತು ಒಕ್ಕೂಟದಲ್ಲಿರುವ ಪಕ್ಷಗಳ ಫಲಿತಾಂಶವು ಉತ್ತಮವಾಗಿದೆ. ಸಮೂಹ ಮಾಧ್ಯಮಗಳಲ್ಲಿ ಕಂಡುಬಂದ ಅಭಿಪ್ರಾಯಗಳಿಗೆ ವಿರುದ್ಧವಾದ ಫಲಿತಾಂಶಗಳನ್ನು ಕಾಣಬಹುದಾಗಿದೆ. ಈ ದಿಸೆಯಲ್ಲಿ ಸಮೂಹ ಮಾಧ್ಯಮಗಳಲ್ಲಿ ಕಂಡುಬಂದ ಚುನಾವಣಾ ಫಲಿತಾಂಶಗಳ ಕುರಿತ ಚರ್ಚೆಗಳ ಅವಲೋಕನ ಅಗತ್ಯ.

"ಪೀಪಲ್ಸ್ ವರ್ಡಿಕ್ಟ್ ಮಸ್ಟ್ ಬಿ ರೆಸ್ಪೆಕ್ಟೆಡ್-ಮಿಸಸ್ ಗಾಂಧಿ"(ಡೆಕ್ಕನ್ ಹೆರಾಲ್ಡ್ ೧೯೭೭ ಮಾರ್ಚ್ ೨೩) ವರದಿಯಡಿ ಹೊಸ ಸರ್ಕಾರಕ್ಕೆ ಶುಭಹಾರೈಕೆಗಳು ಎಂಬ ಇಂದಿರಾ ಗಾಂಧಿ ಅವರ ಪ್ರತಿಕ್ರಿಯೆ ಪ್ರಕಟವಾಗಿದೆ. ಇದರ ಪಕ್ಕದಲ್ಲಿ ನಗರದಲ್ಲಿ 'ಮೀಸಾ ಖೈದಿಗಳ ಬಿಡುಗಡೆ' ಎಂಬ ವರದಿ ಅಡಿಯಲ್ಲಿ ಚುನಾವಣೆಯ ಫಲಿತಾಂಶಕ್ಕೆ ಬಂದ ತಕ್ಷಣದ ಪ್ರತಿಕ್ರಿಯೆ ಮತ್ತು ಪರಿಣಾಮಗಳಾಗಿವೆ. ಚುನಾವಣಾ ಫಲಿತಾಂಶಗಳ ವಿಶ್ಲೇಷಣೆಗಳ ಕುರಿತಂತೆ ಸುದ್ದಿ ಪತ್ರಿಕೆಗಳು, ವಾರಪತ್ರಿಕೆಗಳಲ್ಲಿನ ಲೇಖನಗಳು, ವರದಿಗಳ ವಿಚಾರಧಾರೆಗಳಲ್ಲಿ ಅಧಿಕ ಭಿನ್ನತೆಗಳು ಕಂಡುಬರುವುದಿಲ್ಲ. ದಕ್ಷಿಣ ಭಾರತದ ರಾಜ್ಯಗಳಲ್ಲಿ ಜನತಾ ಪಕ್ಷ ಕಡಿಮೆ ಕ್ಷೇತ್ರಗಳಲ್ಲಿ ವಿಜಯ ಗಳಿಸಿರುವ ಕುರಿತ ಚರ್ಚೆಗಳು ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನಾಕಾರರ ಚಿಂತನೆಗಳು ಮತ್ತು ಪ್ರಜಾಪ್ರಭುತ್ವದ ಗ್ರಹಿಕೆಗಳ ನೆಲೆಯಲ್ಲಿ ರೂಪುಗೊಂಡಂತಿವೆ. ಈ ಸಂಬಂಧ ಪ್ರಜಾಪ್ರಭುತ್ವೀಯ ಗುಣಗಳ ಕೊರತೆ, ಉತ್ತರ ಭಾರತದ ರಾಜ್ಯಗಳಂತೆ ತುರ್ತುಪರಿಸ್ಥಿತಿಯ ಅತಿರೇಕಗಳು ಹೆಚ್ಚು ಕಂಡು ಬರದಿರುವುದು, ಪ್ರತ್ಯೇಕವಾಗಿ ರಾಜ್ಯಗಳ ಕುರಿತ ಕೆಲ ವಿಚಾರಗಳು ಮುಂತಾದವು

ಚರ್ಚೆಗೊಳಗಾದ ಪ್ರಮುಖ ಅಂಶಗಳಾಗಿವೆ. ನಿಯತಕಾಲಿಕೆಗಳಲ್ಲಿ ಉತ್ತರ ಮತ್ತು ಈಶಾನ್ಯ ರಾಜ್ಯಗಳಲ್ಲಿ ಕಾಂಗ್ರೆಸ್ ಹಿನ್ನೆಡೆ ಕುರಿತಂತೆ

> ಈಶಾನ್ಯ ರಾಜ್ಯಗಳಾದ ಅಸ್ಸಾಂ, ಮೇಘಾಲಯ, ಅರುಣಾಚಲ ಪ್ರದೇಶ, ನಾಗಲ್ಯಾಂಡ್ ಮತ್ತು ಮಿಜೋರಾಂಗಳ ೨೦ ಕ್ಷೇತ್ರದಲ್ಲಿ ೧೨ ಸ್ಥಾನಗಳನ್ನು ಕಾಂಗ್ರೆಸ್ ಗೆದ್ದಿದೆ. ಪಕ್ಷದ ಸಂಪೂರ್ಣ ಬೇರುಗಳನ್ನು ಗಮನಿಸುವುದಾದರೆ ಹಿಂದಿ ಪ್ರದೇಶಗಳಲ್ಲಿ ಅತ್ಯಧಿಕ ಹಾನಿಗೊಳಗಾಗಿದೆ, ಉಳಿದಂತೆ ಉತ್ತಮ ಪ್ರದರ್ಶನ ಕಾಣಬಹುದು ... ಇದು ಕಾಂಗ್ರೆಸ್ಸಿಗಷ್ಟೆ ಅಲ್ಲ ಮುಂದಿನ ಸರ್ಕಾರಕ್ಕೂ ಗಂಭೀರವಾದ ಪಾಠ ... ಮಿಜೋರಾಂನ ನಾಗರಿಕ ಹಕ್ಕುಗಳನ್ನು ರಾಷ್ಟ್ರದ ಎಲ್ಲ ಕಡೆಗಳಿಗಿಂತ ಹಿಂದಿನಿಂದಲೂ ತಡೆಹಿಡಿದಿರುವುದು ... ಈ ಸೋಲು ರಾಜಕೀಯ ಒಲವುಗಳ ಕುರಿತು ಉತ್ತಮ ಎಚ್ಚರಿಕೆ. ಇವು ಎಲ್ಲ ರಾಷ್ಟ್ರೀಯ ಪಕ್ಷಗಳಿಗೆ ಸೇರಿದಂತದ್ದು(ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ ೧೯೭೭: ೫೩೦).

ಪ್ರಾದೇಶಿಕ ರಾಜಕಾರಣದ ವಿಭಿನ್ನ ಸ್ವರೂಪಗಳು ಮತ್ತು ತುರ್ತುಪರಿಸ್ಥಿತಿ ಪೂರ್ವದಿಂದಲೇ ಇದ್ದ ನಾಗರಿಕ ಹಕ್ಕಿನ ಸಮಸ್ಯೆಗಳಿಗೆ ರಾಷ್ಟ್ರೀಯ ಪಕ್ಷಗಳ ಮೌನವಿದೆ. ಈ ದಿಸೆಯಲ್ಲಿ ಕಾಂಗ್ರೆಸ್ ಪಕ್ಷದ ನಿರಾಕರಣೆ ಜನತಾ ಪಕ್ಷಕ್ಕೆ ಪಾಠ ಎಂಬ ವಿಶ್ಲೇಷಣೆಯನ್ನು ಕಾಣಬಹುದು. 'ಪಕ್ಷದ ವಿಧೇಯರು ಇಂದಿರಾ ಗಾಂಧಿ ಅವರನ್ನು ಬಹುತೇಕ ನಗಣ್ಯವಾದ ಸ್ಥಳೀಯ ವಿಚಾರ ನಿರ್ಧರಿಸಲು ನಿಷ್ಕಾರಣವಾಗಿ ಕೇಳುತ್ತಿದ್ದರು. ರಾಜಕೀಯದಿಂದ ಹೊರಗುಳಿಯಬೇಕಾಗುತ್ತದೆ ಎಂಬುದು ಇಲ್ಲಿ ಮರೆಮಾಚಿದ ಸತ್ಯ' ಎಂದು ಕವಿರಾಜ್ ಅವರು ವಿಮರ್ಶಿಸುವರು. ಜನತಾ ಪಕ್ಷದಲ್ಲಿ ಗೆದ್ದ ಹಲವು ನಾಯಕರು ಕಾಂಗ್ರೆಸ್ ಪಕ್ಷದಿಂದ ವಲಸೆ ಬಂದಿದ್ದವರು. ಪಕ್ಷ ರಾಜಕಾರಣಕ್ಕಿಂತ ವ್ಯಕ್ತಿ ನೆಲೆಯಲ್ಲಿ ಹೆಚ್ಚಿನ ಪ್ರಾಮುಖ್ಯತೆ ಕಂಡುಬರುವುದು. ಇವೆಲ್ಲವೂ ಚುನಾವಣಾ ಫಲಿತಾಂಶಗಳು ಪ್ರಾದೇಶಿಕ ರಾಜಕಾರಣದಲ್ಲಿನ ನೆಲೆಗಳು, ಜನತಾ ಸರ್ಕಾರ ರೂಪುಗೊಂಡ ನೆಲೆಗಳನ್ನು ಅನಾವರಣಗೊಳಿಸುವುದು. ಕಾಂಗ್ರೆಸ್ ಪಕ್ಷದೊಳಗಿದ್ದ ಆಂತರಿಕ ಭಿನ್ನಾಭಿಪ್ರಾಯಗಳನ್ನು ತೆರೆದಿಡುವುದು. ಇದರೊಡನೆ ಆಡಳಿತ ಪಕ್ಷ ಬದಲಾದರೆ ಆಡಳಿತ ನೀತಿ ಮತ್ತು ವ್ಯವಸ್ಥೆಯಲ್ಲಿ ಗುರುತರ ಬದಲಾವಣೆ ಸಾಧ್ಯವೆಂಬ ನಿರೀಕ್ಷೆ ಸಮೂಹ ಮಾಧ್ಯಮಗಳಲ್ಲಿ ಕಂಡುಬರುವುದನ್ನು ಗುರುತಿಸಬಹುದು. ಚುನಾವಣಾ ಸಂದರ್ಭ ಮತ್ತು ಚುನಾವಣೆಯಲ್ಲಿ ಜನತಾ ಪಕ್ಷದ ವಿಜಯವು ಸಮಾಜದಲ್ಲಿ ನಿರೀಕ್ಷೆಗಳನ್ನು ಹೆಚ್ಚಿಸಿದ್ದವು. ಚುನಾವಣಾ ತರುವಾಯ ವರ್ಷದವರೆಗೆ ಜನತಾ ಪಕ್ಷದ ಆಡಳಿತ ನೀತಿ ಕುರಿತಂತೆ ಆಶಾಭಾವ, ಮೃದು ಧೋರಣೆಗಳು ನೇರವಾಗಿ ಹಾಗೂ ಪರೋಕ್ಷವಾಗಿ ವ್ಯಕ್ತವಾಗಿರುವುದನ್ನು ಗಮನಿಸಬಹುದಾಗಿದೆ. ಈ ನಿಟ್ಟಿನಲ್ಲಿ ಜನತಾ ಪಕ್ಷದ ಆಡಳಿತ ನೀತಿ ಕುರಿತ ಮಾಧ್ಯಮಗಳ ಪ್ರತಿಕ್ರಿಯೆಯ ಅವಲೋಕನ ಸಮಕಾಲೀನ ರಾಜಕಾರಣದ ವಿವಿಧ ಆಯಾಮಗಳನ್ನು ಮುಂದಿಡುವುದು.

### ೪.೧.೨. ಜನತಾ ಸರ್ಕಾರ: ಆಡಳಿತ ಮತ್ತು ರಾಜಕಾರಣ

೧೯೭೭ರ ಲೋಕಸಭಾ ಚುನಾವಣೆ ಭಾರತದ ರಾಜಕಾರಣದಲ್ಲಿ ಮಹತ್ವದ ತಿರುವು. ನಿರಂಕುಶಾಧಿಕಾರ ವಿರೋಧಿ ಹೋರಾಟದಲ್ಲಿ ಜನತಾ ಪಕ್ಷ ಮೊದಲ ಕಾಂಗ್ರೆಸೇತರ ಸರ್ಕಾರ ರಚಿಸಲು ಸಾಧ್ಯವಾಗಿದ್ದು ಪ್ರಜಾಪ್ರಭುತ್ವದಲ್ಲಿ ಮೈಲುಗಲ್ಲು, ಸಾಧನೆ ಎಂದೆಲ್ಲ ಬಿಂಬಿಸಲ್ಪಟ್ಟಿತ್ತು. ಇದಕ್ಕೆ ಪೂರಕವಾಗಿ ಚುನಾವಣಾ ಫಲಿತಾಂಶಗಳನ್ನು ಪತ್ರಿಕೆಗಳಲ್ಲಿ "ಜನತಾ ಮೇಕ್ಸ್ ಹಿಸ್ಟರಿ – ಅಬ್ಸಲ್ಯೂಟ್ ಮೆಜಾರ್ಟಿ ಇನ್ ಲೋಕಸಭಾ"(ಡೆಕ್ಕನ್ ಹೆರಾಲ್ಡ್ ೧೯೭೭ ಮಾರ್ಚ್ ೨೨); "ಇಂದಿರಾ ರಾಜೀನಾಮೆ: ನಾಳೆ ಜನತಾ ಪ್ರಧಾನಿ ಆಯ್ಕೆ"(ಕನ್ನಡಪ್ರಭ ೧೯೭೭ ಮಾರ್ಚ್ ೨೩); "ಜನತಾ ಪಕ್ಷದ ಜಯಭೇರಿ, ಜನಶಾಹಿಗೆ ಮಂಗಳವಾಗಲಿ" (ಚುನಾವಣೆ ೧೯೭೭ ಮಾರ್ಚ್ ೨೮); "ಜನತಾ ರಾಜ್ಯ ಧರ್ಮರಾಜ್ಯವಾಗಲಿದೆ"(ಚುನಾವಣೆ ೧೯೭೭ ಏಪ್ರಿಲ್ ೧೧); "ಜನತಾ ಪಕ್ಷ ಅಖಂಡವಾಯಿತು"(ಚುನಾವಣೆ ೧೯೭೭ ಮೇ ೯) ಮುಂತಾದ ವರದಿಗಳನ್ನು ನೋಡಬಹುದು. ಇವು ಜನತಾ ಪಕ್ಷ ಸರ್ಕಾರ ರಚನೆಗೆ ಬಂದ ಪ್ರತಿಕ್ರಿಯೆಗಳಾಗಿರುವುದರ ಜೊತೆಗೆ ಆಡಳಿತ ಕುರಿತಿರುವ ನಿರೀಕ್ಷೆಗಳಾಗಿವೆ. ಸಮೂಹ ಮಾಧ್ಯಮಗಳಲ್ಲಿ ೧೯೭೮ರ ಆರಂಭದವರೆಗೆ ತುರ್ತುಪರಿಸ್ಥಿತಿಯ ಕಾಲದ ಅಧಿಕಾರ ದುರುಪಯೋಗ, ದೌರ್ಜನ್ಯಗಳ ಸುದ್ದಿಗಳು ಹಲವು ರೂಪಗಳಲ್ಲಿ ಮುದ್ರಣಗೊಳ್ಳುತ್ತಲೇ ಇತ್ತು. ಜನತಾ ಆಡಳಿತದ ಆರಂಭಿಕ ಹಂತದಲ್ಲಿ ಎಲ್ಲ ವಿಚಾರಗಳನ್ನು ಕುರಿತು ಸಕಾರಾತ್ಮಕ ಧೋರಣೆ ಮತ್ತು ಭರವಸೆಗಳು ಅಧಿಕವಾಗಿವೆ. ಇಲ್ಲಿ ಜನತಾ ಸರ್ಕಾರದ ಆಡಳಿತಾವಧಿಯನ್ನು

ಎರಡು ಹಂತಗಳಲ್ಲಿ ವಿಭಜಿಸಲಾಗಿದೆ. ಆರಂಭಿಕ ಹಂತದಲ್ಲಿ ತುರ್ತುಪರಿಸ್ಥಿತಿ ಕಾಲದ ಅಧಿಕಾರ ದುರುಪಯೋಗ, ದೌರ್ಜನ್ಯಗಳ ಕುರಿತ ವಿಚಾರಣಾ ತನಿಖೆಗಳ ನೇಮಕ, ಸಂವಿಧಾನ ತಿದ್ದುಪಡಿಗಳು, ರಾಜ್ಯಗಳಲ್ಲಿ ನಡೆದ ಚುನಾವಣೆಗಳು ಕಂಡುಬರುತ್ತವೆ. ನಂತರದ ಹಂತದಲ್ಲಿ ಜನತಾ ಪಕ್ಷದೊಳಗಿನ ಆಂತರಿಕ ಬಿಕ್ಕಟ್ಟು ಮತ್ತು ಮಾಧ್ಯಮಗಳಲ್ಲಿ ಸರ್ಕಾರದ ಕಾರ್ಯನೀತಿ ಕುರಿತು ಹತಾಶೆಯನ್ನು ಕಾಣಬಹುದು. ಜನತಾ ಸರ್ಕಾರದ ಆಡಳಿತ ಮತ್ತು ಮಾಧ್ಯಮಗಳ ಪ್ರತಿಕ್ರಿಯೆಗಳನ್ನು ಚರ್ಚಿಸಲಾಗಿದೆ.

### ೪.೧.೨.೧. ಜನತಾ ಪಕ್ಷ ಮತ್ತು ಸಂವಿಧಾನ ತಿದ್ದುಪಡಿ

೧೯೭೭ರ ಲೋಕಸಭಾ ಚುನಾವಣೆಯಲ್ಲಿ ಜನತಾ ಪಕ್ಷದ ಪ್ರಣಾಳಿಕೆ, ಜಾಹೀರಾತು ಮತ್ತು ಪ್ರಚಾರ ಭಾಷಣಗಳಲ್ಲಿ ಮುಖ್ಯವಾಗಿ ಎರಡು ವಿಚಾರಗಳನ್ನು ಕಾಣಬಹುದು. ಮೊದಲನೆಯದು ಪ್ರಜಾಪ್ರಭುತ್ವದ ರಕ್ಷಣೆ. ಎರಡನೆಯದು ತುರ್ತುಪರಿಸ್ಥಿತಿ ಕಾಲದಲ್ಲಾದ ಸಂವಿಧಾನ ತಿದ್ದುಪಡಿಗಳ ಮರುತಿದ್ದುಪಡಿ ಮತ್ತು ಆಡಳಿತ ದುರುಪಯೋಗಕ್ಕಾಗಿ ವಿಚಾರಣಾ ಆಯೋಗಗಳ ನೇಮಕಾತಿ. ಈ ತಿದ್ದುಪಡಿಗಳ ಕುರಿತಂತೆ

> ಹಿಂದಿರುಗಲಾರದಷ್ಟು ಉಚ್ಚ ವ್ಯಕ್ತಿಪೂಜೆ, ಮುಖಸ್ತುತಿಯ ದುರ್ಗಂಧ, ಹೀನ ಅನೀತಿ, ಸಾರ್ವಜನಿಕ ಜೀವನದ ಎಲ್ಲ ರಂಗಗಳಲ್ಲಿಯೂ ಸಂಪೂರ್ಣ ಭ್ರಷ್ಟಾಚಾರ ಉಂಟಾಗಬಹುದೆಂಬ ಅಂಬೇಡ್ಕರ್ ಅವರ ದೊಡ್ಡ ಭಯ ೧೯೭೦ರ ದಶಕದ ನಂತರ ಅತಿ ಭೀಕರ ಸತ್ಯವಾಯಿತು(ಸೇಜಿಯನ್ ೨೦೧೦: ೪೦).

ಸಂವಿಧಾನದ ನೈತಿಕತೆಯ ಅವನತಿಯ ದೃಷ್ಟಿಯಲ್ಲಿ ಕಂಡುಬರುತ್ತಿದ್ದ ಚರ್ಚೆಗಳಲ್ಲೊಂದು. "ಜನತಾ ೪೨ನೇ ತಿದ್ದುಪಡಿ ಕುರಿತು ಚರ್ಚಿಸಲು ಸಿದ್ಧವಿದೆ"(ಭೂಷಣ್[೧೩] ೧೯೭೭ ಆಗಸ್ಟ್ ೭); "ಲೋಕಸಭೆಯಲ್ಲಿ ೪೫ನೇ ತಿದ್ದುಪಡಿ ಮಾಡಲು ಒಪ್ಪಿಗೆ"(ಡೆಕ್ಕನ್ ಹೆರಾಲ್ಡ್ ೧೯೭೭ ಡಿಸೆಂಬರ್ ೭) ಮೊದಲಾದ ವರದಿಗಳು ಜನತಾ ಸರ್ಕಾರ ಮತ್ತು ಸಂವಿಧಾನ ತಿದ್ದುಪಡಿಯ ಆರಂಭಿಕ ಹಂತವಾಗಿವೆ. ಸರ್ಕಾರದ ಕಾರ್ಯನೀತಿ ಮತ್ತು ಸಂವಿಧಾನಿಕ ತಿದ್ದುಪಡಿಗಳ[೧೪] ಪ್ರಕ್ರಿಯೆಗಳನ್ನು ಚಿತ್ರಿಸುವುದು. ತುರ್ತುಪರಿಸ್ಥಿತಿ ಪೂರ್ವದಿಂದಲೂ ಇದ್ದ ಮೀಸಾ ಮೊದಲಾದ ಅನೇಕ ಕಾಯ್ದೆಗಳನ್ನು ರದ್ದುಗೊಳಿಸಲಾಯಿತು. ಇಂತಹ ವರದಿಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಅಂಶಗಳೆಂದರೆ ತುರ್ತುಪರಿಸ್ಥಿತಿಯ ಕಾಲಘಟ್ಟ, ಪ್ರಜಾಪ್ರಭುತ್ವದ ರಕ್ಷಣೆ ಮತ್ತು ಜನತಾ ಸರ್ಕಾರದ ಕಾರ್ಯ ನೀತಿಗಳ ವಿವರಣೆಗಳಾಗಿವೆ. ಇವು ಸರ್ಕಾರದ ಸ್ವರೂಪ ಕುರಿತಂತೆ ಕಂಡುಬರುವ ಚಿಂತನೆಗಳಾಗಿದ್ದು, ೧೯೭೮ರ ಉತ್ತರಾರ್ಧದವರೆಗೂ ಸಂವಿಧಾನಿಕ ತಿದ್ದುಪಡಿಗಳ ಕುರಿತ ಚರ್ಚೆಗಳನ್ನು ಕಾಣಬಹುದು.

### ೪.೧.೨.೨. ಮೀಸಾ ಕಾಯ್ದೆ

ಆಂತರಿಕ ಭದ್ರತಾ ದೃಷ್ಟಿಯಿಂದ ೧೯೭೧ರಲ್ಲಿ ಮೀಸಾ ಕಾಯ್ದೆಯನ್ನು ಜಾರಿಗೆ ತರಲಾಗಿತ್ತು. ಆರಂಭದಿಂದಲೂ ಅಸಮಾಧಾನ ಕಂಡುಬರುತ್ತಿತ್ತಾದರೂ ೧೯೭೫ರ ನಂತರ ಅತ್ಯಂತ ವಿವಾದಾಸ್ಪದ ಕಾಯ್ದೆಯಾಗಿ ಪರಿವರ್ತಿತವಾಗಿತ್ತು. ತುರ್ತುಪರಿಸ್ಥಿತಿಯಲ್ಲಿ ಈ ಕಾಯ್ದೆಯನ್ನು ದುರುಪಯೋಗ ಪಡಿಸಿಕೊಂಡು ಪ್ರತಿಭಟನಾಕಾರರನ್ನು, ಅನೇಕ ರಾಜಕೀಯ ಮುಖಂಡರನ್ನು ಬಂಧಿಸಲಾಗಿತ್ತು. ತುರ್ತುಪರಿಸ್ಥಿತಿ ಕಾಲದ ಅಧಿಕಾರ ದುರುಪಯೋಗ, ದುರ್ಬಳಕೆ ಕುರಿತು ನೇಮಿಸಿದ್ದ ಷಾ ವಿಚಾರಣಾ ಆಯೋಗದಲ್ಲಿ ಮೀಸಾ ಖೈದಿಗಳ ಕುರಿತು ಪ್ರತ್ಯೇಕವಾಗಿ ಚರ್ಚಿಸಲಾಗಿದೆ. ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಜನತಾ ಪಕ್ಷ ಆಡಳಿತಕ್ಕೆ ಬಂದಲ್ಲಿ ಮೀಸಾ ಕಾಯ್ದೆಯನ್ನು ರದ್ದುಗೊಳಿಸುವುದಾಗಿ ಭರವಸೆ ನೀಡಿತ್ತು. ಮೀಸಾ ಕಾಯ್ದೆಯನ್ನು ರದ್ದುಗೊಳಿಸುವ ಪ್ರಕ್ರಿಯೆ ಹಾಗೂ ರಾಜಕಾರಣದ ಆಯಾಮಗಳನ್ನು ಕೆಳಗಿನ ವ್ಯಂಗ್ಯಚಿತ್ರಗಳು ಬಿಂಬಿಸಿವೆ. ಈ ಚಿತ್ರಗಳ ನಡುವೆ ವರ್ಷದ ಅಂತರದ ರಾಜಕೀಯ ಬೆಳವಣಿಗೆಯನ್ನು ಕಾಣಬಹುದು. ಚಿತ್ರ–೭ರಲ್ಲಿ ಮೀಸಾ ರಾಕ್ಷಸನನ್ನು[೧೫] ದೊಡ್ಡ ಶೀಸೆಯಲ್ಲಿ ತುಂಬಿ ಬಿರಡೆಯಿಂದ ಮುಚ್ಚಲಾಗಿದೆ. ಕಾಯ್ದೆಯ ಬಳಕೆಯನ್ನು ನಿಷ್ಕ್ರಿಯೆಗೊಳಿಸಿರುವ ಪ್ರಕ್ರಿಯೆ ರೂಪುಗೊಂಡ ಬಗೆಯಾಗಿದೆ. ಇಲ್ಲಿ ಕಾಯ್ದೆ ಜೀವಂತಗೊಳ್ಳುವ ಅವಕಾಶಗಳು, ಅದರ ಭಯ ವ್ಯಕ್ತಗೊಂಡ ರೂಪವಿದು. ಚಿತ್ರದಲ್ಲಿ ಮೀಸಾ ರಾಕ್ಷಸ ಮತ್ತು ಸಣ್ಣ ಆಕಾರದ ಮನುಷ್ಯನ ನಡುವೆ ಸಂಭಾಷಣೆ ನಡೆಯುತ್ತಿದ್ದು ಮೀಸಾ 'ನಿನಗೆ ಸಹಾಯ ಮಾಡಲೇ' ಎಂದು

ಮನುಷ್ಯನನ್ನು ಕೇಳುತ್ತಿದ್ದರೆ, ಮನುಷ್ಯ ನಗುಮುಖದಿಂದ ಕೇಳಿಸಿಕೊಳ್ಳುತ್ತಿರುವುದನ್ನು ಕಾಣಬಹುದು. ಆತನ ಕಾಲಿನ ಪಕ್ಕದಲ್ಲಿ ಜನತಾ ಎಂದು ಬರೆದಿರುವ ಫಲಕ ಕೆಳಗೆ ಬಿದ್ದಿದೆ. ಜನತಾ ಪಕ್ಷ ಹಾಗೂ ಜನತೆಯ ಸ್ಥಿತಿಗತಿಯನ್ನು ಬಿಂಬಿಸುವುದು. ಚಿತ್ರ-೭ಎ ಮೀಸಾ ಕಾಯ್ದೆ ರದ್ದುಗೊಂಡ ನೆಲೆಯಲ್ಲಿ ರೂಪುಗೊಂಡಿದೆ.




(ಚಿತ್ರ-೭) (ಚಿತ್ರ-೭ಎ)

ಡೆಕ್ಕನ್ ಹೆರಾಲ್ಡ್ ೧೯೭೭ ಜುಲೈ ೩ ಮತ್ತು ೧೯೭೮ ಜುಲೈ ೨೧. ವ್ಯಂಗ್ಯಚಿತ್ರಕಾರ: ಜಿ.ವಿ.ರಾಮಮೂರ್ತಿ ಚಿತ್ರ ಸಂಖ್ಯೆ: ೪.೭.

ಪ್ರಧಾನಿ ಮೊರಾರ್ಜಿ ದೇಸಾಯಿ ಅವರು ಸತ್ತಿರುವ ಹುಲಿ(ಮೀಸಾ) ಮೇಲೆ ಕಾಲಿಟ್ಟು ನಿಂತಿದ್ದಾರೆ. ಉಪ ಪ್ರಧಾನಿ ಚರಣ್‌ಸಿಂಗ್ ಅವರು ಕುಛಕೋರುತ್ತ ನಾನಗಲೇ ಅದಕ್ಕೆ ಮತ್ತಿನ ಔಷಧಿ ನೀಡಿದ್ದೆ ಎಂದು ಪರೋಕ್ಷವಾಗಿ ಸಾಧನೆಯನ್ನು ಅಲ್ಲಗಳೆಯುತ್ತಿರುವುದನ್ನು ನೋಡಬಹುದು. ಕಾಯ್ದೆ ರದ್ದುಗೊಳಿಸುವ ಪ್ರಕ್ರಿಯೆಯ ಜೊತೆಗೆ ಪಕ್ಷದೊಳಗೆ ಉಂಟಾಗಿರುವ ಭಿನ್ನತೆಗಳನ್ನು ತೆರೆದಿಡುವುದು. ಈ ಹೊತ್ತಿಗಾಗಲೇ ಪಕ್ಷದೊಳಗಿನ ಭಿನ್ನತೆಗಳು ಹೊರಗಾಣತೊಡಗಿದ್ದವು.

### ೪.೧.೨.೩. ವಿಚಾರಣಾ ಆಯೋಗಗಳು: ಸ್ವರೂಪ ಮತ್ತು ಪ್ರಕ್ರಿಯೆ

ಜನತಾ ಸರ್ಕಾರ ತುರ್ತುಪರಿಸ್ಥಿತಿ ಕಾಲದ ಅಧಿಕಾರ ದುರುಪಯೋಗಕ್ಕಾಗಿ ಅನೇಕ ವಿಚಾರಣಾ ಆಯೋಗಗಳನ್ನು ನೇಮಿಸಿತು. ಕೇಂದ್ರ ಸರ್ಕಾರದ ವಿರುದ್ಧ **ಷಾ ವಿಚಾರಣಾ ಆಯೋಗ** ಕಂಡುಬಂದರೆ, ಕರ್ನಾಟಕದಲ್ಲಿ **ಗ್ರೋವರ್ ವಿಚಾರಣಾ ಆಯೋಗ**, ತಮಿಳುನಾಡಿನಲ್ಲಿ ರಾಷ್ಟ್ರಪತಿ ಆಳ್ವಿಕೆಯ ಅಧಿಕಾರ ದುರ್ಬಳಕೆಗಾಗಿ **ವಿ ಇಸ್ಮಾಯಿಲ್ ಆಯೋಗ** ಕಾಣಬಹುದು. ಆಂಧ್ರ ಪ್ರದೇಶದಲ್ಲಿ ಪೊಲೀಸ್ ದೌರ್ಜನ್ಯದ ಹಿನ್ನೆಲೆಯಲ್ಲಿ **ತಾರಕುಂಡೆ**, ಅದರ ಶಿಫಾರಸ್ಸಿನ ಮೇರೆಗೆ **ಭಾರ್ಗವ** ಹಾಗೂ ಆಡಳಿತ ದುರ್ಬಳಕೆಗಾಗಿ **ವಿಮಾದ್‌ಲಾಲ್** ನೇತೃತ್ವದ ವಿಚಾರಣಾ ಆಯೋಗಗಳ ರಚನೆ ಕಂಡುಬರುವುದು. ಪಶ್ಚಿಮ ಬಂಗಾಳದಲ್ಲಿ ತುರ್ತುಪರಿಸ್ಥಿತಿ ಪೂರ್ವದಲ್ಲಿ ಜೈಲಿನಲ್ಲಿ ಸಂಭವಿಸಿದ ಸಾವುಗಳ ಕುರಿತು **ಸರಕಾರ್ ವಿಚಾರಣಾ ಆಯೋಗ**. ಅಲ್ಲದೆ **ಮಾರುತಿ ವಿಚಾರಣಾ ಆಯೋಗ**, **ಜಗಮೋಹನ್ ರೆಡ್ಡಿ ಆಯೋಗ** ಮೊದಲಾದವುಗಳು ಜನತಾ ಸರ್ಕಾರದಿಂದ ನೇಮಿಸಲ್ಪಟ್ಟಿತ್ತು. ಈ ರಾಜ್ಯಗಳಲ್ಲಿ ಕಾಂಗ್ರೆಸ್ ಮತ್ತು ಸಿಪಿಐ ಆಡಳಿತ ಪಕ್ಷಗಳಾಗಿದ್ದದ್ದು ಗಮನಾರ್ಹ. ಇಲ್ಲಿ **ಷಾ ವಿಚಾರಣಾ ಆಯೋಗ**ವನ್ನು ಮಾತ್ರ ಚರ್ಚಿಸಲು ಪ್ರಯತ್ನಿಸಲಾಗಿದೆ.

ಜನತಾ ಪಕ್ಷವು ಅಧಿಕಾರದ ದುರುಪಯೋಗಕ್ಕಾಗಿ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಾದ ಜೆ. ಸಿ. ಷಾರವರ ಅಧ್ಯಕ್ಷತೆಯಲ್ಲಿ ವಿಚಾರಣಾ ಆಯೋಗವನ್ನು[೧೬] ೧೯೭೭ರ ಜೂನ್‌ನಲ್ಲಿ ನೇಮಿಸಿತು. ಆಯೋಗದ ಕಾರ್ಯಾಚರಣೆಯ ಸ್ವರೂಪ ಕುರಿತು ಪತ್ರಿಕೆ, ನಿಯತಕಾಲಿಕೆಗಳಲ್ಲಿ ವಿಸ್ತೃತವಾದ ಚರ್ಚೆಗಳು ನಡೆದವು. ಇವು ಸರ್ಕಾರ, ಸಮೂಹ ಮಾಧ್ಯಮಗಳು ಮತ್ತು ಜನಸಾಮಾನ್ಯರ ಚಿಂತನೆಗಳನ್ನು, ಅದಕ್ಕೆ ಸಮಾನಾಂತರವಾಗಿ ಕಂಡುಬಂದ ರಾಜಕೀಯ ಬೆಳವಣಿಗೆಗಳನ್ನು ತೆರೆದಿಡುವುದು. ಸಮೂಹ ಮಾಧ್ಯಮಗಳಲ್ಲಿ ಷಾ ವಿಚಾರಣಾ ಆಯೋಗದ ಪ್ರಕ್ರಿಯೆಗಳು ಸಂಚಲನವನ್ನುಂಟು ಮಾಡಿದ್ದವು. ತುರ್ತುಪರಿಸ್ಥಿತಿ ಕಾಲದ ಅತಿರೇಕ, ಅಧಿಕಾರ ದುರ್ಬಳಕೆ, ದೌರ್ಜನ್ಯ ಮೊದಲಾದ ವಿವಿಧ ವಿಚಾರಗಳ ಕುರಿತಂತೆ ಅನೇಕ ಕೃತಿಗಳ ಪ್ರಕಟಣೆಯು ಪೂರಕವಾಗಿ ಕಾರ್ಯನಿರ್ವಹಿಸಿತು. ಆರಂಭಿಕ ಹಂತದಲ್ಲಿ ರಾಷ್ಟ್ರದಾದ್ಯಂತ ಬಂದ ಎಲ್ಲಾ ದೂರುಗಳನ್ನು ತನಿಖೆಗೊಳಪಡಿಸುವ ನಿಟ್ಟಿನಲ್ಲಿ ಸರ್ಕಾರ ಮತ್ತು ಮಾಧ್ಯಮಗಳಲ್ಲಿ ಚರ್ಚೆಗಳು ನಡೆಯುತ್ತಿದ್ದವು. ಈ ದಿಸೆಯಲ್ಲೇ ದೂರು ಸ್ವೀಕರಿಸುವ ದಿನಾಂಕವನ್ನು

ಜುಲೈ ೨೮ ರಿಂದ ಆಗಸ್ಟ್ ೧೫ರವರೆಗೆ ವಿಸ್ತರಿಸಲಾಯಿತು. "ಷಾ ಆಯೋಗ ಪ್ರಮುಖ ವ್ಯಾಜ್ಯಗಳನ್ನಷ್ಟೇ ವಿಚಾರಣೆಗೊಳಪಡಿಸಲಾಗುವುದು"(ಡೆಕ್ಕನ್ ಹೆರಾಲ್ಡ್ ೧೯೭೭ ಆಗಸ್ಟ್ ೩೦); "ಆಯೋಗದ ಮೀಸಾ ತನಿಖೆ ಕಣ್ಣೊರೆಸುವಿಕೆ"(ಡೆಕ್ಕನ್ ಹೆರಾಲ್ಡ್ ೧೯೭೮ ಫೆಬ್ರವರಿ ೧೬); "ವೈ ನಾಟ್ ಮೋರ್ ಕೇಸಸ್ ಫಾರ್ ಷಾ ಇನ್‌ಕ್ವೈರಿ ?"(ಕೃಷ್ಣಮೂರ್ತಿ ೧೯೭೮ ಮೇ ೧೦) ಮೊದಲಾದ ವರದಿಗಳು ಆಯೋಗದ ಕಾರ್ಯನೀತಿಯಲ್ಲಿ ಉಂಟಾದ ಬದಲಾವಣೆ, ಅದಕ್ಕೆ ಬಂದ ಪ್ರತಿಕ್ರಿಯೆಗಳನ್ನು ಸೂಚಿಸುವುದು. ಕೊನೆಯ ವರದಿ ಕರ್ನಾಟಕದಲ್ಲಿ ಷಾ ವಿಚಾರಣಾ ಆಯೋಗದ ತನಿಖೆ ನಡೆಯುವ ಸಂದರ್ಭದಲ್ಲಿನ 'ಫ್ರಂ ಅವರ್ ರೀಡರ್' ಅಂಕಣದಲ್ಲಿ ವ್ಯಕ್ತವಾಗಿರುವ ಅಭಿಮತ. ಕರ್ನಾಟಕದಲ್ಲಿ ಸುಮಾರು ೧೫೦೦ಕ್ಕಿಂತ ಹೆಚ್ಚು ದೂರುಗಳು ದಾಖಲಾಗಿದ್ದವು. ಆದರೆ ಷಾ ಸಮಿತಿ ಮುಂದೆ ಕರ್ನಾಟಕ ದಿಂದ ಮಂಡಿಸಲ್ಪಟ್ಟ ಅತ್ಯಂತ ಪ್ರಖ್ಯಾತ ಸಂಗತಿ ಮತ್ತು ದೂರುಗಳೆಂದರೆ ಸ್ನೇಹಲತಾ ರೆಡ್ಡಿ ಹಾಗೂ ಲಾರೆನ್ಸ್ ಫರ್ನಾಂಡೀಸ್ ಅವರದು ಮಾತ್ರವಾಗಿದೆ. ಇವರುಗಳು ಸಮಾಜದ ಪ್ರಭಾವಿ ವಲಯ ಹಾಗೂ ಕೆನೆಪದರಕ್ಕೆ ಸೇರಿದವರು. ಇದಕ್ಕೆ ಪೂರಕವಾಗಿ ರಾಷ್ಟ್ರದ ಎಲ್ಲಾ ಭಾಗಗಳಿಂದ ಸುಮಾರು ೪೦,೦೦೦ ದೂರುಗಳು ಬಂದಿದ್ದವು. ಆದರೆ ತುರ್ತುಪರಿಸ್ಥಿತಿಯಲ್ಲಿ ಪ್ರತಿಭಟಿಸಿದ ಪ್ರಮುಖರ ದೂರುಗಳನ್ನು ಮಾತ್ರ ವಿಚಾರಣೆಗೊಳ ಪಡಿಸಲಾಯಿತು. ಇದು ಅನೇಕ ವರ್ಗಗಳಲ್ಲಿ ಅಸಮಾಧಾನಕ್ಕೆ ಕಾರಣವಾಯಿತು. ವರದಿಯ ವಸ್ತು ವಿಷಯ, ಅದರ ಸ್ವರೂಪ ತುರ್ತುಪರಿಸ್ಥಿತಿ ವಿರುದ್ಧ ರಚಿತವಾದ ಆರಂಭಿಕ ಬರವಣಿಗೆಗಳಿಗಿಂತ ಹೆಚ್ಚು ಭಿನ್ನವಾಗಿಲ್ಲ.

ಷಾ ಆಯೋಗದ ವಿಚಾರಣಾ ಪ್ರಕ್ರಿಯೆಗಳ ಆಯಾಮಗಳನ್ನು ಕೆಳಗಿನ ಚಿತ್ರಗಳು ಚಿತ್ರಿಸಿವೆ. ಚಿತ್ರ-೮ ತುರ್ತುಪರಿಸ್ಥಿತಿಯಲ್ಲಿ ತೊಂದರೆಗೊಳಗಾದವರು ದೂರು ಕೊಡಲು ಪತ್ರಿಕೆಗಳಲ್ಲಿ ಸರ್ಕಾರ ನೀಡುತ್ತಿದ್ದ ಜಾಹೀರಾತು. ಇಂತಹ ಅನೇಕ ಜಾಹೀರಾತುಗಳನ್ನು ಪತ್ರಿಕೆಗಳಲ್ಲಿ ನೋಡಬಹುದಾಗಿದೆ. ಸಮಾನಾಂತರವಾಗಿ ತುರ್ತುಪರಿಸ್ಥಿತಿ ಜಾರಿಗೊಳಿಸಿದ ಉದ್ದೇಶಗಳನ್ನು ವಿಚಾರಣೆಗೊಳಪಡಿಸುವ ಹಾಗೂ ವಿಚಾರಣಾ




ಡೆಕ್ಕನ್ ಹೆರಾಲ್ಡ್: ೧೯೭೭ ಜೂನ್, ನವೆಂಬರ್ ೨೫ ಮತ್ತು ೧೯೭೮ರ ಜನವರಿ, ೧೦ ಮೇ ಪ್ರಕಟಗೊಂಡ ಜಾಹೀರಾತುಗಳು. ವ್ಯಂಗ್ಯ ಹಾಗೂ ಛಾಯಾ ಚಿತ್ರ, ವ್ಯಂಗ್ಯಚಿತ್ರಕಾರ: ಪಿ.ವಿ.ರಾಮಮೂರ್ತಿ. ಚಿತ್ರ ಸಂಖ್ಯೆ: ೪.೮.

(ಚಿತ್ರ-೮) (ಚಿತ್ರ-೮ಎ) (ಚಿತ್ರ-೮ಬಿ) (ಚಿತ್ರ-೮ಸಿ)

ಆಯೋಗದ ಸ್ವರೂಪ ಹೇಗಿರಬೇಕು ಎನ್ನುವ ಚರ್ಚೆಗಳು ಪತ್ರಿಕೆಗಳಲ್ಲಿ. ನಿಯತಕಾಲಿಕೆಗಳಲ್ಲಿ ಚರ್ಚಿತವಾಗುತ್ತಿದ್ದವು. ಚಿತ್ರ-೮ಎ ಷಾ ವಿಚಾರಣಾ ಆಯೋಗ ಹಾಗೂ ಇಂದಿರಾ ಗಾಂಧಿ ಅವರ ಕುರಿತ ವ್ಯಂಗ್ಯಚಿತ್ರ. ಇದರಲ್ಲಿ ಕಟಕಟೆಯೊಳಗಿರುವ ಇಂದಿರಾ ಗಾಂಧಿ ಅವರು ಸಂವಿಧಾನವನ್ನು ಓದುತ್ತಿರುವರು. ಎದುರಿಗಿರುವ ನ್ಯಾಯಾಧೀಶರ ಪಕ್ಕದಲ್ಲಿ ಮೇಲ್ನೋಟಕ್ಕೆ ಅದೇ ರೀತಿ ಕಾಣುವ ಪುಸ್ತಕಗಳಿವೆ. ಏನನ್ನೋ ಓದುತ್ತಿರುವಂತಿದ್ದು, ನ್ಯಾಯಾಧೀಶರ ಬಾಯಿ ಕಾಣುವುದಿಲ್ಲ. ಕೆಳಗೆ ಉದ್ಧರಣ ಚಿಹ್ನೆಯೊಳಗೆ 'ರಾಕ್ಷಸ ಶಕ್ತಿಯಷ್ಟೆ ಉದ್ಗ್ರಂಥದ ಬರಹವನ್ನು ಅಧಿಕಾರಯುತವಾಗಿ ...' ಎಂದು ಮುಂದುವರೆದಿದ್ದು, ಮುಂದಿನ ಅಕ್ಷರಗಳು ಕಂಡುಬರುವುದಿಲ್ಲ. ಕಟಕಟೆಯ ಬಾಯಿಯ ನೇರಕ್ಕೆ ಮೇಲಿನ ಬರಹವಿದೆ. ಆ ಸಮಯದಲ್ಲಿ ವಿಚಾರಣಾ ಆಯೋಗದಲ್ಲಿ ತುರ್ತುಪರಿಸ್ಥಿತಿಯಲ್ಲಿ ನಡೆದ ಸಂವಿಧಾನ ತಿದ್ದುಪಡಿಗಳ ತನಿಖೆ ನಡೆಯುತ್ತಿತ್ತು. ಜನತಾ ಸರ್ಕಾರ ಅವುಗಳಿಗೆ ಮರು ತಿದ್ದುಪಡಿ ಮಾಡುವ ಕುರಿತು ಚರ್ಚೆ ನಡೆಯುತ್ತಿದ್ದ ಸಮಯ. ಮಾಧ್ಯಮಗಳು ರಾಜಕಾರಣವನ್ನು ಬಿಂಬಿಸುವ ರೀತಿ ಮತ್ತು ಸರಕಾಗಿ ಬಳಸುವ ರೂಪಗಳನ್ನು ಚಿತ್ರ-೮ಬಿ

ತೆರೆದಿಟ್ಟಿರುವುದು. ಇದು ಮುಂದಿನ ಸಂಚಿಕೆಯ ಪ್ರಮುಖ ವಿಚಾರಗಳೊಡನೆ 'ದಿ ಷಾ ಕಮಿಷನ್' ಎಂದು ದಪ್ಪ ಅಕ್ಷರದಲ್ಲಿ ಸಂವೇದನಾಕಾರಿ ವರದಿಗೆ ಒತ್ತುಕೊಟ್ಟಿರುವ ಜಾಹೀರಾತು. 'ವಿಚಾರಣೆಯು, ವೀಕ್ಷಕರಿಗೆ 'ದೊಡ್ಡ ಪರಿಹಾಸ್ಯವಾಗಿ' ಕಾಣುವುದು. ಆದರೆ, ನ್ಯಾಯಕ್ಕಿಂತ ರಾಜಕಾರಣಕ್ಕೆ ಸೇವೆ ಸಲ್ಲಿಸುತ್ತದೆ ?' ಎಂದಿದೆ.

ಕೃಪೆ: ಎರ ಸೇಜಿಯನ್., ಷಾ ಕಮಿಷನ್ ರಿಪೋರ್ಟ್ ಲಾಸ್ಟ್ ಅಂಡ್ ರಿಗೇನ್ಡ್. ಆಜಿ ಪಬ್ಲಿಕೇಷನ್ಸ್, ಚೆನ್ನೈ, ೨೦೧೧. ಪುಟ- ೬೦೬. ಚಿತ್ರ ಸಂಖ್ಯೆ: ೪.೯.

ಚಿತ್ರ-೮೭ ಕರ್ನಾಟಕದಲ್ಲಿ ಷಾ ಆಯೋಗ ವಿಚಾರಣಾ ಕಾಲದಲ್ಲಿ ಟೌನ್‌ಹಾಲ್ ಮುಂದೆ ಕುತೂಹಲದಿಂದ ವೀಕ್ಷಿಸುತ್ತಿರುವ ಜನಸಂದಣಿಯ ಛಾಯಾಚಿತ್ರವಾಗಿದೆ. ಸಮಿತಿಯ ವಿಚಾರಣೆ ನಡೆಯುವ ಸ್ಥಳಗಳೆಲ್ಲವೂ ಇದಕ್ಕೆ ಹೊರತಾಗಿರಲಿಲ್ಲ. ಇವೆಲ್ಲವೂ ಷಾ ವಿಚಾರಣಾ ಆಯೋಗದ ಸ್ವರೂಪದ ಅನೇಕ ಮುಖಗಳನ್ನು ತೆರೆದಿಡುತ್ತಿವೆ.

**ತುರ್ತುಪರಿಸ್ಥಿತಿಯಲ್ಲಿ ಮೀಸಾ, ಕಾಫಿಪೋಸ ಮತ್ತು ಡಿ. ಐ. ಆರ್ ಅಡಿಯಲ್ಲಿ ಸೆರೆ ಹಿಡಿದಿದ್ದವರ ಪಟ್ಟಿ ಪಟ್ಟಿ ಸಂಖ್ಯೆ: ೧೫.**

| ರಾಜ್ಯ | ಮೀಸಾ | ಕಾಫಿಪೋಸ | ಡಿ. ಐ. ಆರ್ | ನಿಷೇಧಿತ ಸಂಘಟನೆಗಳು |
|---|---|---|---|---|
| ಆಂಧ್ರ ಪ್ರದೇಶ | ೧,೧೩೫ | ೪೫ | [illegible] | [illegible] |
| ಅಸ್ಸಾಂ | ೫೩೩ | - | - | ೧೪೩ |
| ಬಿಹಾರ | ೨,೩೬೦ | ೨೫೦ | ೬,೪೭೦ | ೨೬೯ |
| ಗುಜರಾತ್ | ೧,೭೬೨ | ೩೦೭ | ೨,೪೯೩ | ೧೩೪ |
| ಹರ್ಯಾಣ | ೨೦೦ | ೨ | ೧,೦೮೯ | ೨೪ |
| ಹಿಮಾಚಲ ಪ್ರದೇಶ | ೩೪ | - | ೬೨೪ | ೮ |
| ಜಮ್ಮು ಮತ್ತು ಕಾಶ್ಮೀರ | ೪೩೩ | - | ೪೦೦ | - |
| ಕರ್ನಾಟಕ | ೪೮೭ | ೧೧೯ | ೪,೦೬೩ | ೧೬೩ |
| ಕೇರಳ | ೬೯೦ | ೯೭ | ೬,೦೩೯ | ೪೦೭ |
| ಮಧ್ಯಪ್ರದೇಶ | ೫,೬೨೦ | ೧೧ | ೨,೫೨೦ | ೨,೫೯೯ |
| ಮಹಾರಾಷ್ಟ್ರ | ೫,೪೭೩ | ೪೦೦ | ೯,೬೯೯ | ೨,೭೦೬ |
| ಮಣಿಪುರ | ೩೫೧ | ೧೬ | ೨೨೮ | ೨ |
| ಮೇಘಾಲಯ | ೩೯ | ೬ | ೨೦ | ೨೪ |
| ನಾಗಾಲ್ಯಾಂಡ್ | ೯೨ | - | ೪ | - |
| ಒರಿಸ್ಸಾ | ೪೦೮ | ೩ | ೬೩೯ | ೦೦೨ |
| ಪಂಜಾಬ್ | ೪೪೦ | ೮೩ | ೨,೪೫೨ | ೧೬ |
| ರಾಜಸ್ಥಾನ್ | ೫೪೨ | ೧೪ | ೧,೩೬೨ | ೧೧೪ |
| ಸಿಕ್ಕಿಂ | ೪ | - | - | - |
| ತಮಿಳುನಾಡು | ೧,೦೨೭ | ೨೦೫ | ೧,೭೫೪ | ೧೧೯ |
| ತ್ರಿಪುರ | ೭೭ | ೨೫ | ೯೯ | ೯ |
| ಉತ್ತರ ಪ್ರದೇಶ | ೬,೯೫೬ | ೧೨೬ | ೨೪,೭೮೧ | ೬೩೭ |
| ಪಶ್ಚಿಮ ಬಂಗಾಳ | ೪,೯೯೨ | ೫೦ | ೨,೫೪೭ | ೧೦೬ |
| ಅಂಡ್‌ಮಾನ್ ಮತ್ತು ನಿಕೋಬಾರ್ | ೪೧ | - | ೨೨ | ೨೦ |
| ಅರುಣಾಚಲ ಪ್ರದೇಶ | - | - | - | - |
| ಚಂಡೀಘರ್ | ೨೭ | ೧ | ೨೪ | ೬ |
| ದಾದರ್ ಮತ್ತು ನಾಗರ್ ಹವೇಲಿ | - | ೨ | ೩ | - |
| ದೆಹಲಿ | ೧,೦೧೨ | [illegible] | [illegible] | - |
| ಗೋವಾ ದಾಮನ್ | ೧೧೩ | ೫೦ | - | - |
| ಲಕ್ಷದ್ವೀಪ | - | - | - | - |
| ಮಿಜೋರಾಮ್ | ೭೦ | - | ೧೩೭ | - |
| ಪಾಂಡಿಚೆರಿ | ೫೪ | ೬೩ | ೬ | ೨ |

ಆಕರ: ಎರ ಸೇಜಿಯನ್., ಷಾ ಕಮಿಷನ್ ರಿಪೋರ್ಟ್ ಲಾಸ್ಟ್ ಅಂಡ್ ರಿಗೇನ್ಡ್. ಆಜಿ ಪಬ್ಲಿಕೇಷನ್ಸ್, ಚೆನ್ನೈ, ೨೦೧೧. ಪುಟ- ೬೦೬. ಮೂರನೇ ವರದಿಯಲ್ಲಿರುವ ಅಂಕಿ ಅಂಶಗಳನ್ನು ಬಳಸಿ ತಯಾರಿಸಿದ ಪಟ್ಟಿ

ಈ ಮೇಲಿನ ಪಟ್ಟಿಯಲ್ಲಿ ತುರ್ತುಪರಿಸ್ಥಿತಿ ಕಾಲದಲ್ಲಿ ಮಿಸಾ, ಕಾಫಿಪೋಸಾ, ಡಿ. ಐ. ಆರ್ ಕಾಯ್ದೆ ಅಡಿಯಲ್ಲಿ ರಾಜ್ಯಗಳಲ್ಲಿ ಬಂಧಿತರ ಮತ್ತು ನಿಷೇಧಿತ ಸಂಘಟನೆಗಳ ಸಂಖ್ಯೆಯನ್ನು ನೀಡಲಾಗಿದೆ. ಇದರಲ್ಲಿ ಮೀಸಾ ಕಾಯ್ದೆ ಅಡಿ ಅತಿ ಹೆಚ್ಚು ಜನರನ್ನು ಬಂಧಿಸಿರುವ ರಾಜ್ಯಗಳೆಂದರೆ ಉತ್ತರ ಪ್ರದೇಶ(೬೯೫೬), ಮಧ್ಯಪ್ರದೇಶ(೫೬೨೦), ಮಹಾರಾಷ್ಟ್ರ(೫೪೭೩), ಪಶ್ಚಿಮ ಬಂಗಾಳ(೪೯೯೨), ಬಿಹಾರ(೨೩೬೦), ಗುಜರಾತ್(೧೭೬೩), ಆಂಧ್ರ ಪ್ರದೇಶ(೧೧೨೫), ತಮಿಳುನಾಡು(೧೦೨೭) ಮತ್ತು ದೆಹಲಿ(೧೦೧೨) ಮೊದಲಾದವುಗಳಾಗಿವೆ. ಹಾಗೇ ಅತ್ಯಂತ ಕಡಿಮೆ ಬಂಧಿತರಾದ ರಾಜ್ಯಗಳೆಂದರೆ ಸಿಕ್ಕಿಂ(೪), ಅರುಣಾಚಲ ಪ್ರದೇಶ(೨೭), ಹಿಮಾಚಲ ಪ್ರದೇಶಗಳಾಗಿವೆ(೩೪). ಡಿಐಆರ್ ಕಾಯ್ದೆ ಅಡಿ ಅತಿ ಹೆಚ್ಚು ಬಂಧಿತರಾದ ರಾಜ್ಯಗಳೆಂದರೆ ಉತ್ತರ ಪ್ರದೇಶ(೨೪೭೮೧), ಮಹಾರಾಷ್ಟ್ರ(೯೨೯೯), ಬಿಹಾರ(೭೭೪೩), ಕೇರಳ(೭೧೩೪), ಕರ್ನಾಟಕ(೪೦೧೫) ಹಾಗೂ ಕಡಿಮೆ ಬಂಧಿತರಾಗಿರುವ ದಾದರ್ ಮತ್ತು ನಾಗರ್‌ಹವೇಲಿ(೩), ಒರಿಸ್ಸಾ(೪), ಪಾಂಡಿಚೆರಿ(೬), ಮೇಘಾಲಯ್(೨೦) ಮತ್ತಿತರ ರಾಜ್ಯಗಳಾಗಿವೆ. ಉತ್ತರ ಪ್ರದೇಶ, ಬಿಹಾರ, ಮಧ್ಯಪ್ರದೇಶ, ಮಹಾರಾಷ್ಟ್ರ, ಪಶ್ಚಿಮ ಬಂಗಾಳ ಮತ್ತು ದೆಹಲಿಗಳಲ್ಲಿ ಮೀಸಾ ಹಾಗೂ ಡಿಐಆರ್ ಅಡಿ ಹೆಚ್ಚಿನ ಬಂಧನಗಳಾಗಿರುವುದನ್ನು ನೋಡಬಹುದು. ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಉತ್ತರ ಪ್ರದೇಶ, ಬಿಹಾರ, ಮಧ್ಯಪ್ರದೇಶಗಳೇ ಜನತಾ ಪಕ್ಷ ಸರ್ಕಾರ ರಚಿಸಲು ನಿರ್ಣಾಯಕ ಪಾತ್ರ ನಿರ್ವಹಿಸಿದ ಪ್ರಮುಖ ರಾಜ್ಯಗಳಾಗಿದ್ದು, ಕಾಂಗ್ರೆಸ್ ಪಕ್ಷ ಬಹುಪಾಲು ತನ್ನ ಬೇರುಗಳನ್ನು ಕಳೆದುಕೊಂಡಿದ್ದನ್ನು ಗುರುತಿಸಬಹುದು. ತುರ್ತುಪರಿಸ್ಥಿತಿಯೋತ್ತರದಲ್ಲಿ ಕಾಂಗ್ರೆಸ್ ಪಕ್ಷದ ಭದ್ರನೆಲೆಗಳು ಎಂದು ಗುರುತಿಸಲ್ಪಟ್ಟ ಆಂಧ್ರ ಪ್ರದೇಶದಲ್ಲಿ ಮೀಸಾ ೧೧೩೫ ಇದ್ದು, ಡಿ. ಐ. ಆರ್ ೪೫೧ ಇದ್ದರೆ, ಕರ್ನಾಟಕದಲ್ಲಿ ಮೀಸಾ ೪೮೭ ಇದ್ದು, ಡಿ. ಐ. ಆರ್ ೪೦೧೫ ಇರುವುದನ್ನು ಕಾಣಬಹುದು. ಇವುಗಳ ಪ್ರಭಾವ ೧೯೭೭ರ ಲೋಕಸಭಾ ಚುನಾವಣೆ ಮತ್ತು ನಂತರದಲ್ಲಿ ೧೯೭೮ರವರೆಗೆ ನಡೆದ ವಿಧಾನಸಭಾ ಚುನಾವಣೆಗಳ ಮೇಲೆ ಅಪಾರವಾಗಿ ಪರಿಣಾಮ ಬೀರಿರುವುದು ಗೋಚರಿಸುವುದು.

### ೪.೧.೨.೪. ಚುನಾವಣೆಗಳು ಮತ್ತು ಜನತಾ ಸರ್ಕಾರ

ಜನತಾ ಸರ್ಕಾರದ ಆಡಳಿತದಲ್ಲಿ ಕಂಡುಬರುವ ಪ್ರಮುಖ ವಿಚಾರಗಳಲ್ಲಿ ಚುನಾವಣೆಗಳು ಒಂದು. ಚುನಾವಣೆಗಳು ಅಗತ್ಯವಿದ್ದ ಹಾಗೂ ಕಾಂಗ್ರೆಸ್ ಪಕ್ಷ ಆಡಳಿತವಿದ್ದ ಅನೇಕ ರಾಜ್ಯಗಳಲ್ಲಿ ವಿಧಾನಸಭೆ ವಿಸರ್ಜಿಸಿ, ವಿಧಾನಸಭಾ ಚುನಾವಣೆಗಳನ್ನು ನಡೆಸಲಾಯಿತು. ಜನತಾ ಸರ್ಕಾರ ಕುರಿತ ಅಭಿಮತದಲ್ಲಾದ ಬದಲಾವಣೆ ಚುನಾವಣಾ ಫಲಿತಾಂಶಗಳಲ್ಲಿ ಎರಡು ರೀತಿಯಲ್ಲಿ ವ್ಯಕ್ತವಾಗಿದೆ. ೧೯೭೭ರ ಜೂನ್‌ನಲ್ಲಿ ೯ ರಾಜ್ಯಗಳ[೧೯] ಚುನಾವಣೆಯಲ್ಲಿ ಏಳು ರಾಜ್ಯಗಳಲ್ಲಿ ಜನತಾ ಪಕ್ಷದ ವಿಜಯ ಸಾಧಿಸಿದ್ದು ಸಂಚಲನವನ್ನುಂಟು ಮಾಡಿತ್ತು. ಈ ರಾಜ್ಯಗಳು ಬಹುತೇಕ ಹಿಂದಿ ಭಾಷಾ ಪ್ರದೇಶಗಳಾಗಿದ್ದು, ೧೯೭೭ರ ಲೋಕಸಭಾ ಚುನಾವಣೆಗಳಲ್ಲಿ ಜನತಾ ಪಕ್ಷಕ್ಕೆ ಹೆಚ್ಚು ಕ್ಷೇತ್ರ ಲಭಿಸಿದ ಪ್ರದೇಶಗಳು. ಜೊತೆಗೆ ಪತ್ರಿಕೆಗಳಲ್ಲಿ ಜನತಾ ಪಕ್ಷದ ಪರವಾದ ಅಲೆ ನೇರ ಹಾಗೂ ಪರೋಕ್ಷವಾಗಿ ಅನೇಕ ರೂಪಗಳಲ್ಲಿ ಹೊರಹೊಮ್ಮುವುದನ್ನು ಗುರುತಿಸಬಹುದು. ಈ ದಿಸೆಯಲ್ಲಿ 'ಕಾಂಗ್ರೆಸ್ ಜಾಗಿರ್ದಾರ್ ಕೊನೆ, ಆಡಳಿತ ಸುಭದ್ರವಾಗಿರಲು ರಾಜ್ಯಗಳಲ್ಲಿಯೂ ಜನತಾ ಸರ್ಕಾರ ಅಗತ್ಯ' ಮುಂತಾದ ಆಶಯಗಳು ನಿರ್ಣಾಯಕವಾಗಿ ಕಾರ್ಯನಿರ್ವಹಿಸಿದೆ. ಸಮಾನಾಂತರವಾಗಿ ದಕ್ಷಿಣದ ರಾಜ್ಯಗಳಲ್ಲಿ ಜನತಾ ಪಕ್ಷ ಅಸ್ತಿತ್ವ ಪಡೆಯಲಾಗದ ಕುರಿತು, ಅದರ ಅಗತ್ಯದ ಬಗೆಗೆ ಚರ್ಚೆಗಳು ಪತ್ರಿಕೆ ಹಾಗೂ ನಿಯತಕಾಲಿಕೆಗಳಲ್ಲಿ ಕಂಡುಬರುವುದು. ೧೯೭೮ರ ಜನವರಿಯಲ್ಲಿ ನಡೆದ ೭ ರಾಜ್ಯಗಳ ವಿಧಾನಸಭಾ ಚುನಾವಣಾ ಫಲಿತಾಂಶ, ಜನತಾ ಸರ್ಕಾರ ಕುರಿತು ಬದಲಾದ ನಿಲುವುಗಳನ್ನು ಎತ್ತಿಹಿಡಿಯುವುದು. ೧೯೭೭ರ ಕೊನೆಯ ವೇಳೆಗಾಗಲೇ ಜನತಾ ಸರ್ಕಾರದ ಆಡಳಿತ ಕಾರ್ಯಗಳು ನಿಧಾನಗತಿಯಲ್ಲಿ ಸಾಗುತ್ತಿರುವುದು ಜನರಲ್ಲಿ ನಿರಾಸೆ ಮತ್ತು ಆಕ್ರೋಶವನ್ನು ಹೆಚ್ಚಿಸುತ್ತಿರುವ ಕುರಿತ ವರದಿ, ಲೇಖನಗಳಿವೆ.

ಜನತಾ ಸರ್ಕಾರದ ವಿವಿಧ ಆಯಾಮಗಳನ್ನು ಸಮಕಾಲೀನ ವಿಚಾರಣಾ ಆಯೋಗಗಳು, ಚುನಾವಣೆಗಳು ಮತ್ತು ಆಡಳಿತ ನೀತಿ ತೆರೆದಿಡುವುವು. ಲೋಕಸಭಾ ಚುನಾವಣೆಗಳಲ್ಲಿ ಜನತಾ ಪಕ್ಷ ಉತ್ತಮ ಫಲಿತಾಂಶ ಗಳಿಸಿರುವುದು ನಗರ ಪ್ರದೇಶಗಳಲ್ಲಾಗಿದೆ. ಇದರೊಡನೆ ತುರ್ತುಪರಿಸ್ಥಿತಿ ವಿರೋಧಿ ಹೋರಾಟಗಳು ಹೆಚ್ಚು ನಗರ ಕೇಂದ್ರವಾಗಿದ್ದವು ಎಂಬುದನ್ನು ಗಮನಿಸುವುದು ಅಗತ್ಯ. ಚುನಾವಣಾ ಸಂದರ್ಭದಲ್ಲಿ ಸ್ಥಳೀಯ ಕಾಂಗ್ರೆಸ್ ನಾಯಕರು ಜನತಾ ಪಕ್ಷ ಸೇರಿದ್ದು ಸಹ ಪೂರಕವಾಗಿ ಮಾರ್ಪಟ್ಟಿತ್ತು. ಜನತಾ ಸರ್ಕಾರದ ಆಡಳಿತ ನೀತಿ ಮತ್ತು ರಾಜಕಾರಣವು ೧೯೭೮ರಲ್ಲಿ ನಡೆದ ವಿಧಾನಸಭಾ ಚುನಾವಣೆಗಳ ಮೇಲೆ ಅಪಾರವಾದ ಪ್ರಭಾವ ಬೀರಿದೆ. 'ಕಾಂಗ್ರೆಸ್ ರಾಜಕಾರಣದ ರೀತಿಯಲ್ಲಿ ಬದಲಾಗುತ್ತಿರುವ ಕುರಿತ ಟೀಕೆ, ಆಡಳಿತ ಮಂದಗತಿಯಲ್ಲಿದ್ದು ಮಹತ್ವಾಕಾಂಕ್ಷೆ ಹೊಂದಿರುವ ಜನತೆಗೆ ನಿರಾಸೆ ಉಂಟಾಗುತ್ತಿರುವುದು, ಪಕ್ಷದೊಳಗೆ ಪ್ರಜಾಪ್ರಭುತ್ವ ವ್ಯವಸ್ಥೆಯಿಲ್ಲದಿರುವುದು' ಜನತಾ ಪಕ್ಷದ ಮೇಲೆ ಗಂಭೀರ ಪರಿಣಾಮ ಬೀರಲಿದೆ ಮುಂತಾದ ವಿಚಾರಗಳು ನಿಯತಕಾಲಿಕೆಗಳಲ್ಲಿ ಚರ್ಚಿತವಾಗುತ್ತಿದ್ದು, ಮಹತ್ತರವಾದ ಪ್ರಭಾವ ಬೀರಿದ ವಿಚಾರಗಳಾಗಿವೆ. ಜನತಾ ಸರ್ಕಾರದ ಆಡಳಿತ ಮತ್ತು ಕಾರ್ಯನೀತಿಯ ಸ್ವರೂಪ ಹಾಗೂ ಆಂತರಿಕ ಭಿನ್ನತೆಗಳನ್ನು ತೆರೆದಿಡುವುವು. ಈ ವಿಚಾರಗಳಿಗೆ ಕೆಳಗಿನ ವ್ಯಂಗ್ಯಚಿತ್ರಗಳು ಪೂರಕವಾಗಿದ್ದು, ಪಕ್ಷದೊಳಗಿನ ಆಂತರಿಕ ಬಿಕ್ಕಟ್ಟಿನ ವಿವಿಧ ಹಂತದ ಪ್ರಕ್ರಿಯೆಯ ಪದರ ಪದರಗಳನ್ನು ಬಿಚ್ಚಿಡುವುವು. ಚಿತ್ರ-೯ ವರ್ಷದ ಆಡಳಿತ ಪೂರೈಸಿದ ಸಂದರ್ಭದಲ್ಲಿ ಪ್ರಕಟವಾದ ವ್ಯಂಗ್ಯಚಿತ್ರವಾಗಿದೆ. ಇದರಲ್ಲಿ ಸಿಂಹಾಸನದ ಮೇಲೆ



ಸುಧಾ: ೧೯೭೮ ಏಪ್ರಿಲ್ ೧ ಮತ್ತು ಡೆಕ್ಕನ್ ಹೆರಾಲ್ಡ್: ೧೯೭೮ ಜುಲೈ ೧೩, ಜುಲೈ ೧೪ ಹಾಗೂ ಆಗಸ್ಟ್ ೨ ಪ್ರಕಟವಾದ ಸಂಪಾದಕೀಯ ವ್ಯಂಗ್ಯಚಿತ್ರಗಳು. ವ್ಯಂಗ್ಯಚಿತ್ರಕಾರ: ಬಿ.ವಿ.ರಾಮಮೂರ್ತಿ. ಚಿತ್ರ ಸಂಖ್ಯೆ: ೪.೧೧

(ಚಿತ್ರ-೯) (ಚಿತ್ರ-೯ಎ) (ಚಿತ್ರ-೯ಬಿ) (ಚಿತ್ರ-೯ಸಿ)

ಮೊರಾರ್ಜಿ ದೇಸಾಯಿ ಅವರು ಕುಳಿತಿದ್ದರೆ ಜಗಜೀವನ್ ರಾಂ, ಚರಣ್‌ಸಿಂಗ್, ಜಾರ್ಜ್ ಫರ್ನಾಂಡೀಸ್ ಮತ್ತಿತರರು ಅಕ್ಕಪಕ್ಕದಲ್ಲಿ ನಿಂತಿದ್ದಾರೆ. ಹಿಂಭಾಗದಲ್ಲಿ ಜನತಾ ಪಕ್ಷದ ಪತಾಕೆ ಹಾರಾಡುತ್ತಿರುವುದು ಮೇಲ್ನೋಟದಲ್ಲಿ ಪಕ್ಷದ ಒಗ್ಗಟ್ಟು ಉತ್ತಮವಾಗಿರುವಂತೆ ಚಿತ್ರಿತವಾಗಿದೆ. ಚಿತ್ರ-೯ಎ ಮತ್ತು ಚಿತ್ರ-೯ಬಿ ಪಕ್ಷದೊಳಗಿನ ಆಂತರಿಕ ಬಿಕ್ಕಟ್ಟಿನ ವಿವಿಧ ಆಯಾಮಗಳನ್ನು ತೆರೆದಿಟ್ಟಿರುವುದು. ಚಿತ್ರ-೯ಎನಲ್ಲಿ ಚರಣ್‌ಸಿಂಗ್ ಮತ್ತು ಮೊರಾರ್ಜಿ ದೇಸಾಯಿ ಅವರ ವಿಗ್ರಹಗಳು ಒಂದಕ್ಕೊಂದು ಮುಖತಿರುಗಿಸಿರುವುದನ್ನು ನೋಡಬಹುದು. ಚಿತ್ರ-೯ಬಿನಲ್ಲಿ ಪ್ರಧಾನಿ ಮೊರಾರ್ಜಿ ದೇಸಾಯಿ ಅವರು ಜನತಾ ಕುದುರೆಯ ಲಗಾಮು ಹಿಡಿದುಕೊಂಡು 'ವಿಜಯ'ವನ್ನು ಕೈಯಲ್ಲಿ ತೋರಿಸುತ್ತಿರುವರು. ಕುದುರೆಯನ್ನು ಮುಂಭಾಗದಲ್ಲಿ ಉಪ ಪ್ರಧಾನಿ ಚರಣ್ ಸಿಂಗ್ ಇನ್ನಿತರರು ನಿಯಂತ್ರಿಸುತ್ತಿದ್ದರೆ, ಹಿಂದಿನಿಂದ ಅದರ ಬಾಲವನ್ನು ವ್ಯಕ್ತಿಯೋರ್ವ ಎಳೆಯುತ್ತಿರುವಂತಿದೆ. ಎಲ್ಲರೂ ನಗು ಮುಖದಲ್ಲಿದ್ದರೂ, ಜನತಾ ಕುದುರೆ ನೆಲನೋಡುತ್ತ ಸಪ್ಪಗೆ ಮುಂದೆ ಸಾಗುತ್ತಿರುವುದು. ಜನತಾ ಪಕ್ಷದ ಆಂತರಿಕ ಸಂಘರ್ಷ ಹಾಗೂ ಪಕ್ಷದಲ್ಲಿ ಉಂಟಾದ ಒಡಂಬಡಿಕೆಗೆ ಬಂದ ಪ್ರತಿಕ್ರಿಯೆಯ ರೂಪವಿದು. ಇದರ ಶೀರ್ಷಿಕೆ 'ಆಲ್ ಇಸ್ ವೆಲ್ ದಟ್ ಎಂಡ್ಸ್ ವೆಲ್' ಎಂದಿದೆ. ಚಿತ್ರ-೯ಸಿನಲ್ಲಿ ವ್ಯಕ್ತಿಯೋರ್ವ ಬೆಲ್ಗ್ರೆಡ್ 'ನಾನ್' ಅಲೈನಡ್ ವರದಿಯನ್ನು ಓದುತ್ತಿರುವಾಗ ಎದುರಲ್ಲಿರುವ ಮೊರಾರ್ಜಿ ದೇಸಾಯಿ ಮತ್ತು ಚರಣ್‌ಸಿಂಗ್ ಅವರು ವಿರುದ್ಧ ದಿಕ್ಕುಗಳಿಗೆ ಮುಖತಿರುಗಿಸಿ ನಿರ್ಲಕ್ಷದಿಂದ

ಇರುವುದು, ಆಂತರಿಕ ಬಿಕ್ಕಟ್ಟಿನ ಮುಂದುವರಿಕೆಯನ್ನು ಸೂಚಿಸುವುದು. ಪತ್ರಿಕೆ ಮತ್ತು ನಿಯತಕಾಲಿಕೆಗಳ ವರದಿ ಹಾಗೂ ಲೇಖನಗಳಲ್ಲಿ ಇದರ ಪ್ರತಿಬಿಂಬವನ್ನು ಕಾಣಬಹುದಾಗಿದೆ.

"ಬಿಹಾರ್ – ಅನದರ್ ಮೂವ್‌ಮೆಂಟ್ ಇನ್ ದ ಮೇಕಿಂಗ್"(ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ ೧೯೭೮: ೪೮೩); "ಜನರ ವಿಶ್ವಾಸ ಕಳೆದುಕೊಂಡಿರುವ ಜನತಾದ ಪುನಶ್ಚೇತನ ಈಗ ಸಾಧ್ಯವಿದೆಯೇ?"(ಪ್ರಜಾಮತ ೧೯೭೮ ಏಪ್ರಿಲ್ ೨೧); "ಜನತಾ ಅಂತಃ ಕಲಹ"(ಪ್ರಜಾಮತ ೧೯೭೮ ಜುಲೈ ೨); "ಜನತಾದಲ್ಲಿ ಹೊಸನಾಯಕತ್ವ ಬೆಳೆಯದಿರಲು ಏನು ಅಡ್ಡಿ"(ಪ್ರಜಾಮತ ೧೯೭೮ ಆಗಸ್ಟ್ ೨); "ಜನತಾ ಪಾರ್ಟಿ ಸೆಕೆಂಡ್ ಫೇಸ್"(ಥಾಪರ್ ೧೯೭೯: ೨೨೭); "ಪಾಲಿಟಿಕ್ಸ್ ವಿತ್ ಸಚ್ ಎ ಫ್ರೆಂಡ್"(ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ ೧೯೭೯: ೧೬೩೦) ಮೊದಲಾದ ಪತ್ರಿಕಾ ವರದಿ ಹಾಗೂ ಲೇಖನಗಳಲ್ಲಿ ಜನತಾ ಸರ್ಕಾರದ ಆಡಳಿತ ನೀತಿ, ಪಕ್ಷದೊಳಗಿನ ಆಂತರಿಕ ಬಿಕ್ಕಟ್ಟಿನ ವಿವಿಧ ಹಂತಗಳಿಗೆ ಕಂಡುಬಂದ ಪ್ರತಿಕ್ರಿಯೆಯ ರೂಪಗಳಿವು. ಮೊದಲನೆಯದು, ಬಿಹಾರದ ರಾಜಕಾರಣಕ್ಕೆ ಸಂಬಂಧಿಸಿದಂತಿದ್ದರೂ ಜನತಾ ಸರ್ಕಾರದ ಬಗೆಗಿನ ಜನರ ನಿರಾಸೆ, ಆಕ್ರೋಶ ಹೊಸ ಚಳವಳಿಯನ್ನು ಹುಟ್ಟುಹಾಕುವ ಸಾಧ್ಯತೆ ಹಾಗೂ ಆಂತರಿಕ ಬಿಕ್ಕಟ್ಟನ್ನು ಚರ್ಚಿಸುವುದು. ಎರಡು, ಮೂರು ಮತ್ತು ನಾಲ್ಕನೇ ಉಲ್ಲೇಖಗಳಲ್ಲಿ ಪಕ್ಷದೊಳಗಿನ ಆಂತರಿಕ ಬಿಕ್ಕಟ್ಟಿನ ಹಂತ ಹಂತಗಳನ್ನು ವಿಶ್ಲೇಷಿಸುತ್ತಾ ಸನ್ನಿವೇಶವನ್ನು ಬಹಿರಂಗಗೊಳಿಸಲಾಗಿದೆ. ರೋಮೇಶ್ ಥಾಪರ್ ಅವರು 'ಜನತಾ ಪಾರ್ಟಿ ಸೆಕೆಂಡ್ ಫೇಸ್' ಲೇಖನದಲ್ಲಿ ಜನತಾ ಸರ್ಕಾರದಲ್ಲಿ ಪಕ್ಷ ರಾಜಕಾರಣದ ಸ್ವರೂಪವನ್ನು ಈ ರೀತಿ ವಿಮರ್ಶಿಸಿರುವರು: ಜನತಾ ಸರ್ಕಾರವಿರುವ ರಾಜ್ಯಗಳಲ್ಲಿ ಪಕ್ಷದೊಳಗೆ ಕಂಡುಬರುತ್ತಿರುವ ಬಿಕ್ಕಟ್ಟು ಜನಸಂಘದಿಂದ ಪ್ರಭಾವಿತವಾಗಿದೆ. ಆದರೆ ಅನಿರೀಕ್ಷಿತವಾದ ರೀತಿಯಲ್ಲಿ ಜನತಾ ಪಕ್ಷ ಕುರಿತ ನಕಾರಾತ್ಮಕ ನಿಲುವಿನ ಬೆಳವಣಿಗೆಗೆ ಕಾರಣವಾಗುತ್ತಿದೆ. ಇದರೊಂದಿಗೆ ಕಾಂಗ್ರೆಸ್ ಪಕ್ಷದ ಪುನಶ್ಚೇತನ ಹಾಗೂ ದಕ್ಷಿಣ ಭಾರತದಲ್ಲಿ ಜನತಾ ಪಕ್ಷ ಪ್ರಾಮುಖ್ಯತೆ ಗಳಿಸಲು ಸಾಧ್ಯವಾಗದಿರುವುದರ ಕುರಿತ ವಿಶ್ಲೇಷಣೆಯನ್ನು ಕಾಣಬಹುದು. ಇವುಗಳಲ್ಲಿ ಜನತಾ ಪಕ್ಷದೊಳಗಿನ ಆಂತರಿಕ ಬಿಕ್ಕಟ್ಟನ್ನು ಕೊನೆಗಾಣಿಸುವ ಕೊನೆಯ ಹಂತದ ಪ್ರಕ್ರಿಯೆಗಳನ್ನು, ಆಶಾಭಾವವನ್ನು ಗುರುತಿಸಬಹುದು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪ್ರಬಲವಾದ ಮತ್ತೊಂದು ರಾಜಕೀಯ ಪಕ್ಷದ ಅಗತ್ಯದ ನೆಲೆಯು ಸಮೂಹ ಮಾಧ್ಯಮಗಳಲ್ಲಿ ಜನತಾ ಪಕ್ಷದ ಪರವಾದ ನಿಲುವಿನ ಹಿಂದಿನ ಆಶಯವಾಗಿದ್ದು, ಪಡೆದುಕೊಂಡ ರೂಪಗಳ ಒಂದು ಮುಖವಾಗಿದೆ.

### ೪.೧.೩. ಕಾಂಗ್ರೆಸ್: ರಾಜಕೀಯ ಪಲ್ಲಟಗಳ ನಡುವೆ

> ಬತ್ತಲಾರದ ಗಂಗೆಂಥ ಕುತ್ತಿದು, ನೋಡು;
> ಅದೇ ಪಾತ್ರ, ದಾಟ, ವಸ್ತುಗಳ ದಾಳಿ;
> ಹೊಸ ನೀರು ಬಂದರೂ ಅದೇ ಪುರಾತನದ ಅಮಲು,
> ರಂಗಮಂದಿರ ಅದೇ, ನಾಟಕವೂ ಅದೇ(ಅಡಿಗ ೨೦೦೬: ೫೯೫).

ರಾಜಕೀಯ ಚಟುವಟಿಕೆಗಳಿಗೆ ಸ್ಪಂದಿಸುತ್ತಿದ್ದ ಹಿರಿಯ ಕವಿಯೊಬ್ಬರ ಕವನದ[೨೦] ಸಾಲುಗಳು. ೧೯೭೭ರ ಲೋಕಸಭಾ ಚುನಾವಣೆಯ ನಂತರದ ರಾಜಕಾರಣ ಕವನದಲ್ಲಿ ತಳೆದ ರೂಪವಾಗಿದೆ. ಜನತಾ ಸರ್ಕಾರದ ಆಡಳಿತ ಹಾಗೂ ಕಾಂಗ್ರೆಸ್ ಪಕ್ಷದ ಸ್ಥಿತ್ಯಂತರಗಳು ಸಮಕಾಲೀನ ರಾಜಕಾರಣದ ಎರಡು ಮಗ್ಗುಲುಗಳಾಗಿವೆ. ಇಲ್ಲಿ ಕಾಂಗ್ರೆಸ್ ಪಕ್ಷದ ಸ್ಥಿತ್ಯಂತರಗಳು ಮತ್ತು ಕರ್ನಾಟಕದ ರಾಜಕಾರಣವನ್ನು ಪಕ್ಷ, ವ್ಯಕ್ತಿ ಹಾಗೂ ಪ್ರಾದೇಶಿಕ ರಾಜಕಾರಣದ ನೆಲೆಯಲ್ಲಿ ಎರಡು ಭಾಗಗಳಲ್ಲಿ ಚರ್ಚಿಸುವ ಪ್ರಯತ್ನ ಮಾಡಲಾಗಿದೆ. ೧೯೭೭ರ ಲೋಕಸಭಾ ಚುನಾವಣೆಯಿಂದ ಕಾಂಗ್ರೆಸ್(ಐ) ರೂಪುಗೊಳ್ಳುವವರೆಗಿನ ಕಾಂಗ್ರೆಸ್ ಪಕ್ಷದ ಒಳಗಿನ ಆಂತರಿಕ ಬಿಕ್ಕಟ್ಟು, ಕರ್ನಾಟಕದ ರಾಜಕಾರಣ, ಗ್ರೋವರ್ ವರದಿ ಹಾಗೂ ಅವುಗಳ ಪರಿಣಾಮಗಳನ್ನು ಮೊದಲ ಹಂತದಲ್ಲಿ ಪರಾಮರ್ಶಿಸಲಾಗಿದೆ. ೧೯೭೮ರ ಚುನಾವಣೆಯಿಂದ ೧೯೮೦ರ ಚುನಾವಣೆಯವರೆಗಿನ ರಾಜಕಾರಣವನ್ನು ವ್ಯಕ್ತಿ ಮತ್ತು ಪ್ರಾದೇಶಿಕ ರಾಜಕಾರಣದ ನೆಲೆಗಳಲ್ಲಿ ಎರಡನೆ ಹಂತದಲ್ಲಿ ವಿಮರ್ಶಿಸಲು ಪ್ರಯತ್ನಿಸಿದೆ.

### ೪.೧.೩.೧. ಚುನಾವಣೆಯಿಂದ ವಿಭಜನೆವರೆಗೆ(೧೯೭೭ ರಿಂದ ೧೯೭೮)

೧೯೭೭ರ ಲೋಕಸಭಾ ಚುನಾವಣೆಯ ನಂತರ ಕರ್ನಾಟಕದ ರಾಜಕೀಯದಲ್ಲಿ ಅನೇಕ ಸ್ಥಿತ್ಯಂತರಗಳು ಕಂಡುಬರುತ್ತವೆ. ಆ ಸಂದರ್ಭದಲ್ಲಿ ರಾಷ್ಟ್ರದಾದ್ಯಂತ ಜನತಾ ಪಕ್ಷ ಹೆಚ್ಚಿನ ಕ್ಷೇತ್ರಗಳಲ್ಲಿ ಗೆದ್ದುಬಂದಿದ್ದು, ಮೊದಲ ಕಾಂಗ್ರೇಸೇತರ ಸರ್ಕಾರವಾಗಿ ರೂಪುಗೊಂಡಿರುವುದು. ರಾಜ್ಯದಲ್ಲಿ ಕಾಂಗ್ರೆಸ್ ಸರ್ಕಾರವಿದ್ದು, ಲೋಕಸಭಾ ಚುನಾವಣೆಯಲ್ಲಿಯೂ ಕಾಂಗ್ರೆಸ್ ಅಭ್ಯರ್ಥಿಗಳೇ ಬಹುಸಂಖ್ಯೆಯಲ್ಲಿ ಆರಿಸಿ ಬಂದದ್ದು ರಾಜಕೀಯ ಸ್ಥಿತ್ಯಂತರಗಳಿಗೆ ಪೂರಕ ನೆಲೆಯೊದಗಿಸಿದೆ. ಈ ಚುನಾವಣೆಯ ತರುವಾಯದಲ್ಲಿ ಕಾಂಗ್ರೆಸ್ ಪಕ್ಷದ ಅಧಃಪತನ ಪ್ರಾರಂಭವಾಗಿದ್ದು, ಅದರ ಪ್ರಭಾವ ರಾಜ್ಯ ರಾಜಕಾರಣದಲ್ಲಿ ಗುರುತರವಾಗಿ ಮೂಡಿಬಂದಿದೆ. ಇದರೊಡನೆ ಪ್ರಾದೇಶಿಕ ರಾಜಕಾರಣವು ಹಲವು ಹಂತಗಳಲ್ಲಿ ಕಾಂಗ್ರೆಸ್ ಪಕ್ಷದಲ್ಲಿ ಉಂಟಾಗುತ್ತಿದ್ದ ಪಲ್ಲಟಗಳನ್ನು ಪ್ರಭಾವಿಸಿದೆ. ೧೯೭೭ರ ಲೋಕಸಭಾ ಚುನಾವಣೆಯಿಂದ ಡಿಸೆಂಬರ್‌ವರೆಗೆ ಕಂಡುಬರುವ ಪ್ರಮುಖ ರಾಜಕೀಯ ವಿಚಾರಗಳು ಇದನ್ನೇ ಸ್ಪಷ್ಟಪಡಿಸುವುದು. ಈ ಸಂಬಂಧ "ಕರ್ನಾಟಕ ಮಂತ್ರಿಮಂಡಳಕ್ಕೆ ನಡುಕ"(ಚುನಾವಣಿ ೧೯೭೭ ಏಪ್ರಿಲ್ ೧೭); "ಕೇಂದ್ರದ ಶಕ್ತಿಯ ವಿರುದ್ಧ ಅರಸು ನಿಲುವಿಗೆ ದೇವೇಗೌಡ ವಿಷಾದ"(ದೇವೇಗೌಡ ೧೯೭೭ ಮೇ ೧೬); "ಮಂತ್ರಿಗಳ ಒಳಜಗಳಕ್ಕೆ ಕೊನೆ ಎಂತು"(ಚುನಾವಣಿ ೧೯೭೭ ಜುಲೈ ೪); "ಕಾಂಗ್ರೆಸ್ ಸ್ಪ್ಲಿಟ್ ಆಗೇನ್"(ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ ೧೯೭೭ ಸೆಪ್ಟೆಂಬರ್ ೧೦); "ರಾಜ್ಯ ಕಾಂಗ್ರೆಸ್ ವಿಭಜನೆ ವಿಚಾರದ ವಿರೋಧ: ಅರಸು"(ಡೆಕ್ಕನ್ ಹೆರಾಲ್ಡ್ ೧೯೭೭ ೧೪ ನವೆಂಬರ್); "ಅರಸು ಅಮಾನತ್ತು ವಿವಾದ ಸೃಷ್ಟಿ"(ಅರಸು ೧೯೭೮ ಡಿಸೆಂಬರ್ ೨೯) ಮುಂತಾದ ವರದಿ, ಲೇಖನಗಳನ್ನು ಕಾಣಬಹುದು. ಇವು ಕಾಂಗ್ರೆಸ್ ಪಕ್ಷ ಮತ್ತು ಅರಸು, ಕಾಂಗ್ರೆಸ್ ಪಕ್ಷದೊಳಗಿನ ಆಂತರಿಕ ಭಿನ್ನಮತ, ರಾಜ್ಯದ ವಿರೋಧ ಪಕ್ಷಗಳು ಸೃಷ್ಟಿಸುತ್ತಿದ್ದ ಒತ್ತಡಗಳ ವಿವಿಧ ಮಜಲುಗಳನ್ನು ಪದರ ಪದರವನ್ನಾಗಿ ಬಿಂಬಿಸುವುವು. ಲೋಕಸಭಾ ಚುನಾವಣೆಯಲ್ಲಿ ಆರಂಭಗೊಂಡ ಕಾಂಗ್ರೆಸ್ ಪಕ್ಷದೊಳಗಿನ ಆಂತರಿಕ ಭಿನ್ನಮತ ೧೯೭೮ರ ಕೊನೆಯ ವೇಳೆಗೆ ಸಂಪೂರ್ಣಗೊಂಡಂತೆ ಗೋಚರಿಸುವುದು. ೧೯೭೭ರ ಡಿಸೆಂಬರ್ ಹೊತ್ತಿಗೆ ಮೊದಲ ಹಂತದ ಬೆಳವಣಿಗೆ ಪೂರ್ಣಗೊಂಡು ಪಕ್ಷದ ಪುನರ್ ಬೆಳವಣಿಗೆಯ ಪ್ರಾರಂಭವನ್ನು ಗುರುತಿಸಬಹುದು. ಎರಡನೆಯ ಹಂತದಲ್ಲಿ ಕಾಂಗ್ರೆಸ್ ಪಕ್ಷದೊಳಗಿನ ಆಂತರಿಕ ಭಿನ್ನಮತಗಳ ನೆಲೆಗಳು, ಅವು ರಾಜ್ಯ ರಾಜಕಾರಣದಲ್ಲಿ ಪಡೆದರೂಪ ಕುತೂಹಲ ಹುಟ್ಟಿಸುವುದು. ಆದರೆ ಈ ರಾಜಕೀಯ ಪ್ರಕ್ರಿಯೆಗಳು ಸಂಪೂರ್ಣವಾಗಿ ಅರಸು ಮತ್ತು ಕಾಂಗ್ರೆಸ್ ಪಕ್ಷದ ನೆಲೆಯಲ್ಲಿ ಮಾಧ್ಯಮಗಳಲ್ಲಿ ಬಿಂಬಿತವಾಗಿರುವುದನ್ನು ವಿಶೇಷೀಕರಿಸಿ, ಸಮಕಾಲೀನ ಪ್ರಾದೇಶಿಕ ರಾಜಕಾರಣದ ಸ್ವರೂಪಗಳನ್ನು ಗಮನಿಸಲು ಪ್ರಯತ್ನಿಸಿದೆ. ಜನತಾ ಸರ್ಕಾರದಿಂದ ನೇಮಿಸಲ್ಪಟ್ಟ ಗ್ರೋವರ್ ವಿಚಾರಣಾ ಆಯೋಗವು ರಾಜ್ಯ ರಾಜಕಾರಣದಲ್ಲಿ ಸಂಚಲನ ಉಂಟುಮಾಡಿದ್ದು, ಅದರ ಪರಿಣಾಮಗಳನ್ನು ವಿಮರ್ಶಿಸಲು ಯತ್ನಿಸಿದೆ.

ಜನತಾ ಪಕ್ಷ ಆಡಳಿತಕ್ಕೆ ಬಂದ ತರುವಾಯ ಕಾಂಗ್ರೆಸ್ ಪಕ್ಷ ಆಡಳಿತವಿದ್ದ ೯ ರಾಜ್ಯಗಳಲ್ಲಿ ಶಾಸಕಾಂಗವನ್ನು ವಿಸರ್ಜಿಸಿ ಚುನಾವಣೆಗಳನ್ನು ಘೋಷಿಸಿತು. ಈ ಕಾಲದಲ್ಲಿ ಅರಸು ಅವರ ಆಡಳಿತ ನೀತಿಯ ವಿರೋಧ, ಆಡಳಿತ ಪಕ್ಷದೊಳಗಿನ ಆಂತರಿಕ ಭಿನ್ನಮತ, ಸರ್ಕಾರ ಐದು ವರ್ಷದ ಆಡಳಿತಾವಧಿ ಪೂರೈಸಿರುವ ನೆಲೆಯಲ್ಲಿ ಶಾಸಕಾಂಗವನ್ನು ವಿಸರ್ಜಿಸಿ ಚುನಾವಣೆ ನಡೆಸಬೇಕೆಂಬ ಅಭಿಲಾಷೆ ವಿರೋಧ ಪಕ್ಷಗಳಲ್ಲಿ ಹಲವು ರೂಪಗಳಲ್ಲಿ ವ್ಯಕ್ತವಾಗುತ್ತಿದ್ದವು. ಇದರೊಡನೆ ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್ ಅಭ್ಯರ್ಥಿಗಳು ರಾಜ್ಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಗೆಲುವು ಸಾಧಿಸಿದ್ದು, ರಾಜ್ಯ ಶಾಸಕಾಂಗದಲ್ಲಿ ಅದೇ ಪಕ್ಷ ಆಡಳಿತಪಕ್ಷವಾಗಿದ್ದದ್ದು ಬೀರಿರುವ ಪ್ರಭಾವ ಅಪಾರವಾಗಿರುವುದು. ಈ ನಿಟ್ಟಿನಲ್ಲಿ ಏಪ್ರಿಲ್‌ನಿಂದಲೂ ಅರಸರ ನಾಯಕತ್ವ, ಸರ್ಕಾರದ ವಿಸರ್ಜನೆ, ಚುನಾವಣೆಗಳ ಕುರಿತ ರಾಜಕೀಯ ವಾಗ್ವಾದಗಳು ವಿರೋಧ ಪಕ್ಷ ಮತ್ತು ಆಡಳಿತ ಪಕ್ಷಗಳಲ್ಲಿ ಕಂಡುಬರುತ್ತಿದ್ದವು. 'ಮಂತ್ರಿಮಂಡಲ ರಾಜೀನಾಮೆ ನೀಡಬೇಕಾಗಿಲ್ಲ, ಅಪನಂಬಿಕೆಯ ನಾಯಕತ್ವ ಕಾಂಗ್ರೆಸ್ಸಿನಿಂದ ಹೋಗಬೇಕು, ಆಂತರಿಕ ಭಿನ್ನತೆವುಳ್ಳ ಮಂತ್ರಿಗಳು ಸದ್ಯದಲ್ಲೆ ಬಿಡಲಿದ್ದಾರೆ, ರಾಜೀನಾಮೆ ಬೇಡಿಕೆ ರಾಜಕೀಯ ಅಸಂಬದ್ಧತೆ, ಆಡಳಿತ ಪಕ್ಷದ ಬಿಕ್ಕಟ್ಟು ಕಾಂಗ್ರೆಸ್

ಮುಖ್ಯಸ್ಥರ ಕೊಡುಗೆ, ಅರಸು ಮಂತ್ರಿ ಮಂಡಲದ ಸಂದಿಗ್ಧತೆಗೆ' ಮೊದಲಾದ ವರದಿಗಳು ಇದನ್ನೇ ಸಾಬೀತು ಪಡಿಸುತ್ತಿರುವುದರ ಜೊತೆಗೆ ಚರ್ಚಿತವಾಗುತ್ತಿದ್ದ ಮುಖ್ಯ ರಾಜಕೀಯ[೨೧] ವಿಚಾರಗಳ ಮೇಲೆ ಬೆಳಕು ಹರಿಸುವುದು.

### ೪.೧.೩.೧.೧. ಕಾಂಗ್ರೆಸ್: ಆಂತರಿಕ ಬಿಕ್ಕಟ್ಟು ಮತ್ತು ಪಕ್ಷ ವಿಭಜನೆ

ಕಾಂಗ್ರೆಸ್ ಪಕ್ಷದ ವಿಭಜನೆ ರಾಜ್ಯ ರಾಜಕಾರಣದಲ್ಲಿ ಪಡೆದುಕೊಂಡ ರೂಪಗಳನ್ನು ಚರ್ಚಿಸುವ ಯತ್ನ ಮಾಡಲಾಗಿದೆ. ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಪ್ರಾರಂಭಗೊಂಡ ಕಾಂಗ್ರೆಸ್ ಪಕ್ಷದೊಳಗಿನ ಆಂತರಿಕ ಬಿಕ್ಕಟ್ಟು ವರ್ಷಾಂತ್ಯದ ಹೊತ್ತಿಗೆ ಕಾಂಗ್ರೆಸ್ ವಿಭಜನೆಯಲ್ಲಿ ಕೊನೆಗೊಳ್ಳುವುದು. ಕಾಂಗ್ರೆಸ್ ಪಕ್ಷದೊಳಗಿನ ಬಿರುಕು ಸೆಪ್ಟೆಂಬರ್ ವೇಳೆಗಾಗಲೇ ರಾಜ್ಯದಲ್ಲಿ ಪ್ರಾದೇಶಿಕ ರಾಜಕಾರಣಿಗಳ ಅಸ್ತಿತ್ವ ಮತ್ತು ಪ್ರತಿಷ್ಠೆಯ ವಿಚಾರವಾಗಿ ಪರಿವರ್ತನೆ ಹೊಂದುವಲ್ಲಿ ಪ್ರಭಾವಿಸಿತ್ತು. ಈ ಕುರಿತು

> ಕಾಂಗ್ರೆಸ್ ಪಕ್ಷ ಸ್ವ ವಿನಾಶದೆಡೆಗೆ ನಡೆಯುತ್ತಿರುವಂತಿದೆ. ಜನತಾ ಪಕ್ಷದ ನಾಯಕರು ಸಹಾಯ ಮಾಡುತ್ತಿದ್ದಾರೆ ಎನ್ನುವುದರಲ್ಲಿ ಅನುಮಾನವಿಲ್ಲ. ಇದು ಕಾಂಗ್ರೆಸ್ಸಿಗೆ ನಿಜವಾಗಿಯೂ ಅನಿವಾರ್ಯ ಅಲ್ಲ. ಕಾಂಗ್ರೆಸ್ ಎದುರಿಸುತ್ತಿರುವ ಸಮಸ್ಯೆಗಳೆಂದರೆ, ಪಕ್ಷವು ಸಂಪೂರ್ಣವಾಗಿ ಹೊಸ ಕಾರಣಗಳಿಂದ ವಿಕಸಿತಗೊಂಡಿದ್ದು, ರಾಜಕೀಯ ಅಧಿಕಾರವಿಲ್ಲದಿದ್ದಾಗಿಯೂ ಅಸ್ತಿತ್ವವನ್ನು ಮುಂದುವರೆಸುತ್ತಿರುವುದು ... ಇದಕ್ಕೆ ಕರ್ನಾಟಕ ಕಾಂಗ್ರೆಸ್ಸಿನಲ್ಲಿ ನಡೆಯುತ್ತಿರುವುದು ಉತ್ತಮ ಉದಾಹರಣೆ ... ಮಾರ್ಚ್ ತಿಂಗಳಿನಲ್ಲಿ ನಡೆದ ಲೋಕಸಭಾ ಚುನಾವಣೆಯಲ್ಲಿ ಉತ್ತಮ ಫಲಿತಾಂಶ ಕಂಡುಬಂದ ರಾಜ್ಯ ಹಾಗೂ ವಿಧಾನಸಭೆಯಲ್ಲಿ ಸಂಪೂರ್ಣ ಬಹುಮತವನ್ನು ಹೊಂದಿದ್ದು, ಯಾವುದೇ ಪ್ರಬಲ ವಿರೋಧಿಗಳು ಇಲ್ಲದಿದ್ದಾಗಿಯೂ ಎಂಬುದು ವ್ಯಂಗ್ಯ ... ದೇವರಾಜ ಅರಸು ಅವರ ನಾಯಕತ್ವದ ಆಳ್ವಿಕೆ ಹಿಂದಿನ ಎಲ್ಲ ಆಳ್ವಿಕೆಗಳಿಗಿಂತ ಹೆಚ್ಚು ಭ್ರಷ್ಟ ಸರ್ಕಾರವೆಂದು ಒಪ್ಪಿಕೊಂಡರೂ ಸಹ ಶಾಂತಿಯುತವಾಗಿ ಕೆಲವು ತಿಂಗಳುಗಳ ಕಾಲ ಅದರ ಮುಂದುವರೆಸುವುದು ಉತ್ತಮವಾಗಿತ್ತು ... ಈಗ ಅರಸು ಗುಂಪಿನವರು ಕೆ.ಹೆಚ್.ಪಾಟೀಲರನ್ನು ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷರನ್ನಾಗಿ ನೋಡಲು ನಿರಾಕರಿಸಿದ್ದಾರೆ ಮತ್ತು ಕಾಂಗ್ರೆಸ್ ಸಮಿತಿಯು ಅರಸರ ವಿರುದ್ಧ ಶಿಸ್ತುಕ್ರಮ ತೆಗೆದುಕೊಳ್ಳುವುದಾಗಿ ಹೇಳಿದೆ. ಇದರಿಂದ ಕರ್ನಾಟಕ ಕಾಂಗ್ರೆಸ್ಸಿನಲ್ಲಿ ಹಿಂದಿರುಗಲಾರದ ದಂತ ಬಿರುಕು ಉಂಟಾಗುವ ಸಾಧ್ಯತೆಯಿದೆ ... ಈ ಬಿರುಕಿಗೆ ಸೈದ್ಧಾಂತಿಕ ಆಯಾಮ ನೀಡಲಾಗುತ್ತಿದ್ದು, ಅದರಲ್ಲಿಯೂ ದೇವರಾಜ ಅರಸು ಅವರ ಗುಂಪು ಪಕ್ಷದಲ್ಲಿ ಪ್ರಗತಿಪರ ಎಂದು ಗುರುತಿಸಿಕೊಳ್ಳುತ್ತಿದ್ದಾರೆ ... ಅರಸರ ಈ ವರ್ತನೆ ೧೯೬೯ರಲ್ಲಿ ಇಂದಿರಾ ಗಾಂಧಿ ಅವರು ನಡೆಸಿದ ಸಣ್ಣ ಆಯಾಮವಾಗಿ ಪ್ರತಿಫಲಿಸುತ್ತಿರುವಂತಿದೆ ... ಪಂಜಾಬ್, ಪಶ್ಚಿಮ ಬಂಗಾಳ, ಕರ್ನಾಟಕ ಮತ್ತು ಆಂಧ್ರ ಎಲ್ಲೆಡೆ ಒಂದೇ ಕಥೆ(ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ ೧೯೭೭: ೧೫೯೨-೩).

**ಗಂಭೀರ ಚರ್ಚೆಯಲ್ಲಿ ಅರಸು ಮತ್ತು ಇಂದಿರಾ ಗಾಂಧಿ ಅವರು**



ಕೃಪೆ : ವಾರ್ತಾ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು. ಚಿತ್ರ ಸಂಖ್ಯೆ : ೪.೧೧.

ರಾಜ್ಯ ರಾಜಕಾರಣ ಮತ್ತು ಕಾಂಗ್ರೆಸ್ ಪಕ್ಷ ಕುರಿತ ಸಮಕಾಲೀನ ವಿಶ್ಲೇಷಣೆ ಆಗಿದೆ. ಕಾಂಗ್ರೆಸ್ ಪಕ್ಷ ಪ್ರಬಲವಾಗಿದ್ದ ರಾಜ್ಯಗಳಲ್ಲಿ ಕಂಡುಬರುತ್ತಿದ್ದ ಆಂತರಿಕ ಭಿನ್ನಾಭಿಪ್ರಾಯಗಳಲ್ಲಿರುವ ಗುಣರೂಪಗಳನ್ನು ಸಮೀಕರಿಸಿದೆ. ಕಾಂಗ್ರೆಸ್ ಪಕ್ಷ ಆಡಳಿತದಲ್ಲಿದ್ದ ರಾಜ್ಯಗಳ ಮುಖ್ಯಮಂತ್ರಿಗಳಲ್ಲಿ ದೇವರಾಜ ಅರಸು ಅವರು ಪ್ರಧಾನ ರಾಜಕಾರಣಿಯಾಗಿದ್ದರು. ಆ ಸಂದರ್ಭದಲ್ಲಿ ಆಡಳಿತದ ಮೇಲೆ ನಿಯಂತ್ರಣ ಸಾಧಿಸುವ ಹಿನ್ನೆಲೆಯಲ್ಲಿ ಕೆ. ಹೆಚ್. ಪಾಟೀಲ ಮತ್ತು ಅರಸು ಅವರ ನಡುವೆ ಘರ್ಷಣೆಗಳು ಕಂಡುಬರುತ್ತಿದ್ದವು. ಅರಸು ಅವರ ಕಾರ್ಯತಂತ್ರವನ್ನು ೧೯೬೯ರಲ್ಲಿ ನಡೆದ ಕಾಂಗ್ರೆಸ್ ವಿಭಜನೆಯ ಸಂದರ್ಭದ ಇಂದಿರಾ ಗಾಂಧಿ ಅವರ ತಂತ್ರಗಳೊಡನೆ ಸಮೀಕರಿಸಿರುವುದು ವಿಶೇಷ ಅಂಶ. ಈ ಆಂತರಿಕ ಭಿನ್ನತೆ ಮತ್ತು ಸ್ಥಿತ್ಯಂತರಗಳು ಮುಂಬರುವ ಚುನಾವಣಾ ರಾಜಕಾರಣದಲ್ಲಿ ಪಡೆದುಕೊಳ್ಳುವ ಪಾತ್ರ ಕುರಿತು ಲೇಖನದಲ್ಲಿ ಚರ್ಚೆ ಮುಂದುವರೆಯುವುದನ್ನು ನೋಡಬಹುದು. ಇದು ರಾಜ್ಯ ರಾಜಕಾರಣ ಮತ್ತು ಕಾಂಗ್ರೆಸ್ ವಿಭಜನೆಯ ಮೂಲಸ್ವರೂಪದೆಡೆಗೆ ಸೆಳೆಯುವುದು. ಕಾಂಗ್ರೆಸ್ ಪಕ್ಷದ ಅಧ್ಯಕ್ಷ ಸ್ಥಾನದ ಆಕಾಂಕ್ಷೆ ಮತ್ತು ಇಂದಿರಾ ಗಾಂಧಿಯವರ ಜೊತೆಗೆ ಹೊಂದಾಣಿಕೆ ಮಾಡಿಕೊಳ್ಳಲು ಸಾಧ್ಯವಾಗದ ಸ್ಥಿತಿ. ರಾಷ್ಟ್ರೀಯ ವಲಯದಲ್ಲಿ ಪಡೆದುಕೊಂಡ ರೂಪದ ಬಿಂಬ ರಾಜ್ಯ ರಾಜಕಾರಣದಲ್ಲಿ ವ್ಯಕ್ತವಾದ ವಿಧಗಳಿವು. ರಾಜ್ಯದಲ್ಲಿಯೂ ಮುಂಬರುವ ವಿಧಾನಸಭಾ ಚುನಾವಣೆಯ ಮೂಲಕ ದೊರೆಯುವ ಅಧಿಕಾರ ಪ್ರಮುಖ ಪಾತ್ರನಿರ್ವಹಿಸಿದೆ.

ಆಂತರಿಕ ಬಿಕ್ಕಟ್ಟಿನ ಪ್ರಕ್ರಿಯೆಗಳನ್ನು ಕೆಳಗಿನ ವ್ಯಂಗ್ಯಚಿತ್ರಗಳು ಚಿತ್ರಿಸುವುವು. ಕಾಂಗ್ರೆಸ್ ಪಕ್ಷದೊಳಗಿನ ಭಿನ್ನಾಭಿಪ್ರಾಯದಿಂದಾಗಿ ರಾಷ್ಟ್ರೀಯ ಮತ್ತು ಪ್ರಾದೇಶಿಕ ರಾಜಕೀಯದಲ್ಲಿ ಕಂಡುಬಂದ ಬೆಳವಣಿಗೆಗಳ ವಿವಿಧ ಹಂತಗಳನ್ನು ಗುರುತಿಸಬಹುದು. ಚಿತ್ರ-೧೦ರಲ್ಲಿ ಕಾಂಗ್ರೆಸ್ ಫಲಕವಿರುವ ಕಾರಿನಲ್ಲಿರುವವರು ಇಂದಿರಾ ಗಾಂಧಿ ಅವರನ್ನು ನಿರ್ಲಕ್ಷಿಸಿ, ಮುಖ ಮುಖ ನೋಡುತ್ತ ಮುಂದೆ ಸಾಗುತ್ತಿರುವರು. ಈ ವರ್ತನೆ ದಾರಿ ಮಧ್ಯೆ ಕಾಯುತ್ತ ನಿಂತಿರುವ ಇಂದಿರಾ ಗಾಂಧಿಯವರ ಗಡಿಯಾರ ಮತ್ತು ಕಾಂಗ್ರೆಸ್ ಕಾರಿನ ಚಕ್ರಗಳಿಗೆ ವಿಚಿತ್ರವೆನಿಸಿದ್ದು ಕಾಲಚಕ್ರದ ಮಹಿಮೆ ಎಂಬಂತಿದೆ. ಆದರಡಿ ಚವಾಣ್ ಅವರು ಮಾಜಿ ಪ್ರಧಾನಿ ಇಂದಿರಾ ಗಾಂಧಿ ಅವರನ್ನು ಕಾಂಗ್ರೆಸ್‌ನಿಂದ ಹೊರಹಾಕಿದ ವರದಿಯಿದೆ. ಚಿತ್ರ-೧೦ಎ ಪ್ರಾದೇಶಿಕ ರಾಜಕಾರಣ ಕುರಿತಾದುದು. ಬೃಹದಾಕಾರದ ಅರಸರು ಬೂದುಕನ್ನಡಿಯಲ್ಲಿ ಕೆಳಗೆ ನಿಂತ ಚಿಕ್ಕ ವ್ಯಕ್ತಿಯನ್ನು ಹುಡುಕುತ್ತಾ 'ಹೈಕಮ್ಯಾಂಡಾ ... ಎಲ್ಲಿದೆ?' ಎಂದು ಪ್ರಶ್ನಿಸುತ್ತಿರುವುದು ಕಂಡುಬರುವುದು. ಈ ವ್ಯಂಗ್ಯಚಿತ್ರಗಳಲ್ಲಿ ರಾಷ್ಟ್ರೀಯ ನಾಯಕಿ ಇಂದಿರಾ ಗಾಂಧಿ ಅವರ ಚಿತ್ರ ಸಾಮಾನ್ಯವಾಗಿದ್ದು ಅರಸರ ಚಿತ್ರ




ಡೆಕ್ಕನ್ ಹೆರಾಲ್ಡ್: ೧೯೭೮ರ ಅಗಸ್ಟ ೧೦ ಮತ್ತು ಸೆಪ್ಟೆಂಬರ್ ೯ ಪ್ರಕಟವಾದ ಸಂಪಾದಕೀಯ ವಂಗಚಿತ್ರ, ವ್ಯಂಗ್ಯಚಿತ್ರಕಾರ: ಪಿ.ಬಿ.ರಾಮಮೂರ್ತಿ. ಚಿತ್ರ ಸಂಖ್ಯೆ: ೪.೧೨.

(ಚಿತ್ರ-೧೦) (ಚಿತ್ರ-೧೦ಎ)

ಬೃಹದಾಕಾರವಾಗಿರುವುದು ವಿಶೇಷ ಸಂಗತಿಯಂತಿದ್ದರೂ ರಾಜಕಾರಣದಲ್ಲಾಗಿರುವ ಬದಲಾವಣೆಯನ್ನು ಅರಿಯಲು ಸಹಕಾರಿಯಾಗಿದೆ. ಜೊತೆಗೆ ಅರಸು ಅವರು ಪ್ರಶ್ನಿಸುತ್ತಿರುವ ಹೈ ಕಮ್ಯಾಂಡ್ ಇಂದಿರಾ ಗಾಂಧಿಯವರಾಗಿರದೇ ಚವಾಣ್ ಅವರು. ಈ ಸಂದರ್ಭದಲ್ಲಿ ರಾಷ್ಟ್ರೀಯ ನಾಯಕರು ಪ್ರಾದೇಶಿಕ

ನಾಯಕರಿಗೆ ಬೆಂಬಲ ನೀಡುವಲ್ಲಿ ವಿಭಜಿತರಾಗಿದ್ದರು. ಬ್ರಹ್ಮಾನಂದ ರೆಡ್ಡಿ ಅವರು ಕೆ. ಹೆಚ್. ಪಾಟೀಲರನ್ನು ಮತ್ತು ಇಂದಿರಾ ಗಾಂಧಿ ಅವರು ಅರಸರನ್ನು ಬೆಂಬಲಿಸುತ್ತಿದ್ದರು. ಇದು ಮೊದಲ ಹಂತದ ಆಂತರಿಕ ಬಿಕ್ಕಟ್ಟನ್ನು ತೆರೆದಿಡುವುದು.

ರಾಜ್ಯದಲ್ಲಿ ಕಂಡುಬರುತ್ತಿದ್ದ ಆಡಳಿತ ಪಕ್ಷದ ಆಂತರಿಕ ಭಿನ್ನತೆಯು ರಾಷ್ಟ್ರೀಯ ವಲಯದಲ್ಲಿ ಕುತೂಹಲಕಾರಿಯಾಗಿತ್ತು. ಕೇಂದ್ರ ಸರ್ಕಾರದ ಧೋರಣೆ ಮತ್ತು ರಾಜ್ಯ ರಾಜಕಾರಣದ ಅನೇಕ ಆಯಾಮಗಳನ್ನು ಕೆಳಗಿನ ವ್ಯಂಗ್ಯಚಿತ್ರಗಳು ಬಿಂಬಿಸುವುವು. ಪ್ರಾದೇಶಿಕ ಕಾಂಗ್ರೆಸ್ ಸಮಿತಿಯ ಅಧ್ಯಕ್ಷಸ್ಥಾನ ರಾಜ್ಯದಲ್ಲಿ ಮುಂಬರುವ ಚುನಾವಣೆ ಮತ್ತು ಕಾಂಗ್ರೆಸ್ ಪಕ್ಷದ ಮೇಲೆ ನಿಯಂತ್ರಣ ಸಾಧಿಸುವ ಪ್ರಯತ್ನದ




ಡೆಕ್ಕನ್ ಹೆರಾಲ್ಡ್: ೧೯೭೭ ಸೆಪ್ಟೆಂಬರ್ ೧೧ ಮತ್ತು ೩೦ ಪ್ರಕಟವಾಗಿದ ವ್ಯಂಗ್ಯಚಿತ್ರಕಾರ ಪಿ.ವಿ.ರಾಮಮೂರ್ತಿ. ಚಿತ್ರ ಸಂಖ್ಯೆ ೪.೧೩.
(ಚಿತ್ರ-೧೧) (ಚಿತ್ರ-೧೧ಎ)

ಫಲಗಳಾಗಿವೆ. ಚಿತ್ರ-೧೧ರಲ್ಲಿ ಅರಸು ಮತ್ತು ಪಾಟೀಲರ ನಡುವೆ ನಡೆಯುತ್ತಿದ್ದ ಜಗಳ ನಾಟಕೋಪಾದಿ ಪರಿವರ್ತನೆ ಹೊಂದಿ, ಅದನ್ನು ನೋಡಲು ಜನತಾ ಪಕ್ಷದ ಮುಖ್ಯಸ್ಥರು ಇನ್ನಿತರ ಜನರು ಸೇರುತ್ತಿರುವರು. ಜನತಾ ಪಕ್ಷದ ಮುಖ್ಯಸ್ಥರು ಇಬ್ಬರನ್ನು ಪ್ರೋತ್ಸಾಹಿಸೋಣ ಎನ್ನುತ್ತ ಸಂತೋಷದಿಂದ ಒಳ ನಡೆಯುತ್ತಿರುವುದು, ಆಂತರಿಕ ಬಿಕ್ಕಟ್ಟಿನಲ್ಲಿ ಅವರ ಪಾತ್ರವಿದೆಯೇ ಎಂಬ ಪ್ರಶ್ನೆ ಮೂಡುವುದು. ಇದಾದ ತಿಂಗಳೊಳಗೆ ಪ್ರಾದೇಶಿಕ ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ಸ್ಥಾನ ನಿರ್ಧರಿತವಾಗಿ ಅರಸು ಅವರು ಅಧ್ಯಕ್ಷರಾದ ನೆಲೆಯಲ್ಲಿ ಚಿತ್ರ-೧೧ಎ ರೂಪುಗೊಂಡಿದೆ. ವ್ಯಕ್ತಿ ನೆಲೆಯ ರಾಜಕಾರಣಕ್ಕೆ ಒತ್ತು ನೀಡಿದ್ದು ಪಕ್ಷದೊಳಗಿನ ಆಂತರಿಕ ಬಿಕ್ಕಟ್ಟು ತೀವ್ರ ತಲುಪಿರುವುದನ್ನು ಸೂಚಿಸುವುದು. ಕರ್ನಾಟಕ ಪ್ರಾದೇಶಿಕ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರ ಆಯ್ಕೆಯ ನಂತರ ಪಕ್ಷದೊಳಗಿನ ಆಂತರಿಕ ಬಿಕ್ಕಟ್ಟು ಪೂರ್ಣ ಪ್ರಮಾಣದಲ್ಲಿ ವಿಭಜನೆ ಎಡೆಗೆ ಚಲಿಸುವುದು. ಈ ಬೆಳವಣಿಗೆಗಳನ್ನು ಕೆಳಗಿನ ಛಾಯಾಚಿತ್ರಗಳಲ್ಲಿ ನೋಡಬಹುದು. ಸಮಾನಾಂತರವಾಗಿ ರಾಜ್ಯದ ಜನತಾ ಶಾಸಕರಿಂದ "ಅರಸು ಮಂತ್ರಿ ಮಂಡಳ ವಿಸರ್ಜನೆಯ ಬೇಡಿಕೆ"; "ಅರಸು ಮೇಲೆ ಇಂದು ಶಿಸ್ತುಕ್ರಮ ಕೈಗೊಳ್ಳುವ ಸಾಧ್ಯತೆ"; "'ಪಾಟಿಲ್'ಸ ಗ್ರೂಪ್ ಬಿಡ್ ಟು ಫಾರ್ಮ್ ಆಲ್ಟರ್ನೇಟಿವ್ ಗವರ್ನ್‌ಮೆಂಟ್";






A KPCC delegation, led by President K. H. Patil.

New role for STC in

ಡೆಕ್ಕನ್ ಹೆರಾಲ್ಡ್: ೧೯೭೭ ಸೆಪ್ಟೆಂಬರ್ ೨೦ ಮತ್ತು ಕನ್ನಡಪ್ರಭ: ೧೯೭೮ ಜನವರಿಯಲ್ಲಿ ಪ್ರಕಟಿತ ಛಾಯಾಚಿತ್ರಗಳು. ಚಿತ್ರ ಸಂಖ್ಯೆ: ೪.೧೪.

"ಕಾಸು ಅರಸುವನ್ನು ಪಕ್ಷದಿಂದ ಅಮಾನತ್ತು ಗೊಳಿಸಿದರು" ಮೊದಲಾದ ವರದಿಗಳು ಪತ್ರಿಕೆಗಳಲ್ಲಿ ಕಂಡುಬರುತ್ತಿದ್ದವು. ರಾಜ್ಯದಲ್ಲಿ ಅಧ್ಯಕ್ಷೀಯ ಆಡಳಿತ ಬರುವ ಸಾಧ್ಯತೆ ಹಾಗೂ ಬಿರುಕಿನೆಡೆಗೆ ಕಾಂಗ್ರೆಸ್ ಪಕ್ಷದ ಪಯಣದ ಪ್ರಕ್ರಿಯೆಗಳ ಮೇಲೆ ಸ್ಥೂಲ ಬೆಳಕು ಬೀರುವುದು. ಇದು ಪ್ರಾದೇಶಿಕ ರಾಜಕಾರಣ ಮತ್ತು ವ್ಯಕ್ತಿ ರಾಜಕಾರಣವು ಪಕ್ಷದ ಆಂತರಿಕ ಭಿನ್ನತೆಗಳಿಂದ ಪಡೆದುಕೊಂಡ ಸ್ವರೂಪವಾಗಿವೆ. ತುರ್ತುಪರಿಸ್ಥಿತಿಯ ಪರಿಣಾಮಗಳು ಕಾಂಗ್ರೆಸ್ ಪಕ್ಷ ಆಡಳಿತವಿದ್ದ ರಾಜ್ಯಗಳಲ್ಲಿ ಕಂಡುಬಂದ ಪ್ರಾದೇಶಿಕ ರಾಜಕಾರಣದ ಆಯಾಮ. ಮೇಲಿನ ಛಾಯಾಚಿತ್ರಗಳು ಕೆಪಿಸಿಸಿ ಅಧ್ಯಕ್ಷ ಸ್ಥಾನಕ್ಕೆ ಚುನಾವಣೆ ನಡೆಯುವ ಮುನ್ನ ನಡೆದ ಪತ್ರಿಕಾ ಗೋಷ್ಠಿ ಹಾಗೂ ಕಾಂಗ್ರೆಸ್ ಪಕ್ಷ ವಿಭಜನೆಯ ನಂತರದಲ್ಲಿ ನಡೆದ ಕಾರ್ಯಕ್ರಮವೊಂದರ ದೃಶ್ಯಗಳು. ಈ ಪ್ರಕ್ರಿಯೆಗಳ ಮೇಲೆ ಗ್ರೋವರ್ ಮಧ್ಯಂತರ ವರದಿ ಬೀರಿದ ಪ್ರಭಾವ ಪರಿಣಾಮಕಾರಿಯಾಗಿದೆ.

### ೪.೧.೩.೧.೨. ಕರ್ನಾಟಕ ರಾಜಕಾರಣ: ಗ್ರೋವರ್ ವರದಿ

ಕರ್ನಾಟಕದಲ್ಲಿ ಅರಸು ಆಡಳಿತಾವಧಿಯಲ್ಲಾದ(೧೯೭೨-೧೯೭೭) ಭ್ರಷ್ಟಾಚಾರ, ಅಧಿಕಾರದ ದುರುಪಯೋಗ, ಸ್ವಜನ ಪಕ್ಷಪಾತ, ಅವ್ಯವಹಾರ ಮೊದಲಾದವುಗಳ ನೆಲೆಯಲ್ಲಿ ಕೇಂದ್ರ ಸರ್ಕಾರ ನೇಮಿಸಿದ್ದ ವಿಚಾರಣಾ ಆಯೋಗವೇ ಗ್ರೋವರ್ ಆಯೋಗ. ೧೯೭೭ರ ಮೇ ತಿಂಗಳಿನಲ್ಲಿ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಾದ ಎ. ಎನ್. ಗ್ರೋವರ್ ಅವರ ನೇತೃತ್ವದಲ್ಲಿ ಈ ವಿಚಾರಣಾ ಆಯೋಗವನ್ನು



ಚಿತ್ರ ಸಂಖ್ಯೆ ೪.೧೫

ನೇಮಿಸಲಾಯಿತು. ಕೇಂದ್ರ ಸರ್ಕಾರವು ಕಾಂಗ್ರೆಸ್ ಮತ್ತು ಸಿಪಿಐ ಆಡಳಿತ ಪಕ್ಷವಾಗಿದ್ದ ರಾಜ್ಯಗಳ ಸರ್ಕಾರದ ವಿರುದ್ಧ ಅಧಿಕಾರ ದುರುಪಯೋಗಕ್ಕಾಗಿ ಅನೇಕ ವಿಚಾರಣಾ ಆಯೋಗಗಳನ್ನು ನೇಮಿಸುತ್ತಿತ್ತು. ಇದರಿಂದ ಪಾರಾಗಲು ವಾರದ ಮೊದಲು ರಾಜ್ಯ ಸರ್ಕಾರ ಮೀರ್ ಇಕ್ಬಾಲ್ ಹುಸೇನ್ ಅವರ ನೇತೃತ್ವದಲ್ಲಿ ವಿಚಾರಣಾ ಆಯೋಗವೊಂದನ್ನು ಸ್ವಯಂ ನೇಮಿಸಿದ್ದು. ಇದರ ವಿರುದ್ಧ ವಿರೋಧ ಪಕ್ಷಗಳಲ್ಲಿ ಅಸಮಾಧಾನ ಹೊಗೆಯಾಡುತ್ತಿತ್ತು. ಇದು ಗ್ರೋವರ್ ಆಯೋಗದ ನೇಮಕ ರಾಜ್ಯ ರಾಜಕಾರಣದಲ್ಲಿ ಕಂಡುಬಂದ ಸ್ಥಿತ್ಯಂತರಗಳ ಮೇಲೆ ಬೀರಿದ ಅಪರಿಮಿತ ಪ್ರಭಾವವನ್ನು ತೋರಿಸುವುದು. ಆಯೋಗವು 'ಮುಖ್ಯಮಂತ್ರಿ ಅರಸರು ಕೆಂಪರಾಜ ಅರಸು ಮತ್ತು ಎಂ. ಡಿ. ನಟರಾಜ್ ಅವರಿಗಾಗಿ ಸರ್ಕಾರದ ಅಧಿಕಾರಗಳನ್ನು ದುರುಪಯೋಗ ಪಡಿಸಿಕೊಂಡು ಸ್ವಜನ ಪಕ್ಷಪಾತ ಮಾಡಿದ್ದಾರೆ. ಹನುಮಂತರೆಡ್ಡಿ, ಕೆ. ವಿ. ಆರ್. ರಾವ್ ಮೊದಲಾದ ಅಧಿಕಾರಿಗಳು ಮತ್ತು ಇತರ ವ್ಯಕ್ತಿಗಳೊಡನೆ ಪಕ್ಷಪಾತದಿಂದ ವರ್ತಿಸಿದ್ದಾರೆ. ಕೆಲವು ಮಂತ್ರಿಗಳಾದ ಎಂ. ವೈ. ಘೋರ್ಪಡೆ ಮತ್ತಿತರರು ಹಾಗೂ ಇಂಡಿಯನ್ ಬುಕ್ ಹೌಸ್ ಮೊದಲಾದ ಕಂಪನಿಗಳೊಂದಿಗೆ ಬಹಳ ಔದಾರ್ಯದಿಂದ ನಡೆದುಕೊಂಡಿದ್ದಾರೆ. ಈ ಆಡಳಿತಾವಧಿಯಲ್ಲಿ ಅಧಿಕಾರಿಗಳಲ್ಲಿ ಭ್ರಷ್ಟಾಚಾರ ಹೆಚ್ಚಾಗಿರುವುದು' ಮೊದಲಾದವುಗಳ ಕುರಿತು ವಿಚಾರಣೆ ನಡೆಸಿರುವುದು. ೧೯೭೮ರತನಕ ಮೇ ತಿಂಗಳಿನಲ್ಲಿ ಅಂತಿಮ ವರದಿಯನ್ನು ಗ್ರೋವರ್ ಆಯೋಗ ನೀಡುವುದು. ಇಲ್ಲಿ ಗ್ರೋವರ್ ವರದಿಯ ಮೇಲೆ ರಾಷ್ಟ್ರೀಯ ಮತ್ತು ಪ್ರಾದೇಶಿಕ ರಾಜಕಾರಣ ಉಂಟುಮಾಡಿರುವ ಪ್ರಭಾವವನ್ನು ಅವಲೋಕಿಸಲಾಗಿದೆ. ಗ್ರೋವರ್ ವಿಚಾರಣಾ ಆಯೋಗದ ನೇಮಕದ ನಂತರ ರಾಜ್ಯ ಶಾಸಕಾಂಗವನ್ನು ವಿಸರ್ಜಿಸಿ, ಚುನಾವಣೆ ನಡೆಸಲು




ಡೆಕ್ಕನ್ ಹೆರಾಲ್ಡ್: ೧೯೭೭ ಡಿಸೆಂಬರ್ ೯. ವ್ಯಂಗ್ಯಚಿತ್ರಕಾರ: ಪಿ.ವಿ.ರಾಮಮೂರ್ತಿ. ಚಿತ್ರ ಸಂಖ್ಯೆ: ೪.೧೬.

ವಿರೋಧ ಪಕ್ಷದವರು ಶಾಸಕಾಂಗ ಸಭೆ ಮತ್ತು ಮಾಧ್ಯಮಗಳಲ್ಲಿ ಒತ್ತಡ ತರುತ್ತಿದ್ದರು. ಇದಕ್ಕೆ ಪ್ರತಿಯಾಗಿ ಆಯೋಗದ ನೇಮಕಾತಿಯನ್ನು ರದ್ದುಗೊಳಿಸಲು ರಾಜ್ಯ ಸರ್ಕಾರವು ಸರ್ವೋಚ್ಚ ನ್ಯಾಯಾಲಯದಲ್ಲಿ ಮನವಿ ಸಲ್ಲಿಸುವುದು. ಆದರೆ ನ್ಯಾಯಾಲಯದ ತೀರ್ಪು ಮತ್ತು ಆಯೋಗದ ವರದಿಯು ರಾಜ್ಯದಲ್ಲಿ ಅರಸರ ಸ್ಥಾನವನ್ನು ಮತ್ತಷ್ಟು ದುರ್ಬಲಗೊಳಿಸಿದ್ದವು. ಈ ನೆಲೆಯಲ್ಲಿ ಮುಂಬರುವ ಚುನಾವಣೆಗಳಲ್ಲಿ ಜನತಾ ಪಕ್ಷ ಆಡಳಿತಕ್ಕೆ ಬರುವ ಸಾಧ್ಯತೆಗಳವೆ ಮೊದಲಾದ ಪತ್ರಿಕಾ ವಿಶ್ಲೇಷಣೆಗಳು ಅಧಿಕವಾಗಿ ಕಂಡುಬರುತ್ತಿದ್ದವು. ಕಾಂಗ್ರೆಸ್ ಪಕ್ಷದ ಆಂತರಿಕ ಬಿಕ್ಕಟ್ಟು ಹೆಚ್ಚಾದಾಗ ಗ್ರೋವರ್ ವಿಚಾರಣಾ ಆಯೋಗದ ತನಿಖೆಯು ಸದನ ಹಾಗೂ ಪತ್ರಿಕೆಗಳಲ್ಲಿ ತೀವ್ರವಾಗಿ ಚರ್ಚೆಗೆ ಒಳಗಾಗುವುದು ವಿಶೇಷ ಸಂಗತಿಯಾಗಿ ಗಮನ ಸೆಳೆಯುವುದು. ೧೯೭೭ರ ಅಕ್ಟೋಬರ್ ಹೊತ್ತಿಗೆ ಗ್ರೋವರ್ ವರದಿಯು ಮೊದಲ ಮಧ್ಯಂತರ ವರದಿ ನೀಡುವ ಸೂಚನೆಗಳು ಕಂಡುಬರುತ್ತಿದ್ದರೂ ೧೯೭೮ರ ವಿಧಾನಸಭಾ ಚುನಾವಣೆಯ ವೇಳೆಗೆ ಮಧ್ಯಂತರ ವರದಿ ಹೊರಬಂದಿರುವುದನ್ನು ಅವಗಣಿಸುವಂತಿಲ್ಲ. ರಾಜ್ಯ ಸರ್ಕಾರ ಸಲ್ಲಿಸಿದ್ದ ಗ್ರೋವರ್ ಆಯೋಗ ರದ್ದುಗೊಳಿಸುವ ದಾವೆಯನ್ನು ಸರ್ವೋಚ್ಚ ನ್ಯಾಯಾಲಯ ತಿರಸ್ಕರಿಸಿತ್ತು. ೧೯೭೭ರ ಅಕ್ಟೋಬರ್‌ನಿಂದ ೧೯೭೮ರ ಜನವರಿಯವರೆಗೆ ಗ್ರೋವರ್ ಆಯೋಗದ ವಿಚಾರಣೆ ಮತ್ತು ಹಿಂದಿನ ಚುನಾವಣಾ ಫಲಿತಾಂಶಗಳ ಹಿನ್ನೆಲೆಯಲ್ಲಿ ಅರಸರು ಸೋಲಬಹುದು ಎಂದು ಮಾಧ್ಯಮಗಳಲ್ಲಿ ಪದೇ ಪದೇ ಬಿಂಬಿತವಾಗುತ್ತಿದ್ದವು. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ನಡುವಿನ ಪರಸ್ಪರ ಸಂಬಂಧಗಳ ಸ್ವರೂಪದ ನೆಲೆಗಳನ್ನು ಗುರುತಿಸಬಹುದು.

### ೪.೧.೩.೨. ಚುನಾವಣೆಯಿಂದ ಚುನಾವಣೆಗೆ(೧೯೭೮ ರಿಂದ ೧೯೮೦)

ಕರ್ನಾಟಕದಲ್ಲಿ ೧೯೭೮ ರಿಂದ ೧೯೮೦ರವರೆಗೆ ಮೂರು ಪ್ರಮುಖ ಚುನಾವಣೆಗಳು ನಡೆದವು. ಅವು ೧೯೭೮ರ ವಿಧಾನಸಭೆ, ಚಿಕ್ಕಮಗಳೂರಿನ ಮಧ್ಯಂತರ ಲೋಕಸಭಾ ಚುನಾವಣೆ, ೧೯೮೦ರಲ್ಲಿ ಲೋಕಸಭಾ ಚುನಾವಣೆಗಳಾಗಿವೆ. ಈ ಚುನಾವಣೆಗಳ ನಡುವೆ ಉಂಟಾದ ರಾಜಕೀಯ ಬೆಳವಣಿಗೆಯ ವಿವಿಧ ಹಂತಗಳನ್ನು ಪರಾಮರ್ಶಿಸಲು ಪ್ರಯತ್ನಿಸಲಾಗಿದೆ. ಪ್ರಾದೇಶಿಕ ರಾಜಕಾರಣದಲ್ಲಿ ೧೯೭೮ರ ವಿಧಾನಸಭಾ ಚುನಾವಣೆಯಿಂದ ಚಿಕ್ಕಮಗಳೂರು ಮಧ್ಯಂತರ ಚುನಾವಣೆಯವರೆಗಿನ ರಾಜಕಾರಣವನ್ನು ವ್ಯಕ್ತಿ ನೆಲೆಯಲ್ಲಿ ವಿಮರ್ಶಿಸಲು ಯತ್ನಿಸಲಾಗಿದೆ. ಚಿಕ್ಕಮಗಳೂರು ಚುನಾವಣೆ ನಂತರದಿಂದ ೧೯೮೦ರ ಲೋಕಸಭಾ ಚುನಾವಣೆಯವರೆಗೆ ಪ್ರಾದೇಶಿಕ ರಾಜಕಾರಣ, ಕಾಂಗ್ರೆಸ್ ವಿಭಜನೆ, ವ್ಯಕ್ತಿ ರಾಜಕಾರಣ ಮತ್ತು ರಾಜಕೀಯ ಪಕ್ಷಗಳ ಧ್ರುವೀಕರಣವನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ.

### ೪.೧.೩.೨.೧. ೧೯೭೮ರ ಚುನಾವಣೆ: ರಾಜಕಾರಣ ಮತ್ತು ಪ್ರಕ್ರಿಯೆಗಳು

"ಅರಸು ಸರ್ಕಾರ ಪತನ: ರಾಷ್ಟ್ರಪತಿ ಆಡಳಿತ"(ಕನ್ನಡಪ್ರಭ ೧೯೭೮ ಜನವರಿ ೧); "ಕಾಂಗ್ರೆಸ್ ಸ್ಪ್ಲಿಟ್ ಅಗೇನ್"(ಡೆಕ್ಕನ್ ಹೆರಾಲ್ಡ್ ೧೯೭೮ ಜನವರಿ ೦೩); "ದೇವರಾಜ್ ಅರಸ್ ಇಸ್ ಪ್ರೆಸಿಡೆಂಟ್ ಆಫ್ ಕೆಪಿಸಿಸಿ(ಐ)"(ಡೆಕ್ಕನ್ ಹೆರಾಲ್ಡ್ ೧೯೭೮ ಜನವರಿ ೧೩); "ಗ್ರೋವರ್ ಫೈಂಡ್ಸ್ ಅರಸ್ ಗಿಲ್ಟಿ ಆನ್ ಫೋರ್ ಕೌಂಟ್ಸ್"(ಡೆಕ್ಕನ್ ಹೆರಾಲ್ಡ್ ೧೯೭೮ ಜನವರಿ ೧೮) ಮೊದಲಾದ ಪತ್ರಿಕಾ ವರದಿಗಳಿಗೆ ಪೂರಕವಾಗಿ ಕೆಳಗಿನ ಚುಟುಕವಿದೆ.

ಅರಸನೂ ಬಿದ್ದ
ನಮ್ಮ ಕರ್ನಾಟಕದ ಅರಸನೂ ಬಿದ್ದ
ಅರಸು ಬಿದ್ದಂತೆಯೇ ಪಾಟೀಲ ಗದ್ದ
ಯಾರ್‍ಯಾರು ಎಲ್ಲೆಲ್ಲಿ ಬೀಳುವರು ಹೇಳು?(ದೇಸಾಯಿ ೧೯೭೮ ಜನವರಿ ೨೩).

ಇಲ್ಲಿ ಕೆ. ಹೆಚ್. ಪಾಟಿಲ್ ಮತ್ತು ಅರಸು ಅವರ ನಡುವೆ ನಡೆಯುತ್ತಿದ್ದ ಸ್ಪರ್ಧೆಯನ್ನು ಕಾಣಬಹುದು. ಇವು ಕಾಂಗ್ರೆಸ್ ವಿಭಜನೆ, ಗ್ರೋವರ್ ಆಯೋಗದ ಮಧ್ಯಂತರ ವರದಿ, ಚುನಾವಣೆ ನೆಲೆಯ ರಾಜಕಾರಣ ಮತ್ತು ಸಮೂಹ ಮಾಧ್ಯಮಗಳ ಪ್ರತಿಕ್ರಿಯೆಗಳನ್ನು ದಾಖಲಿಸುವುದು. ೧೯೭೭ರ ಲೋಕಸಭೆಯಲ್ಲಿ ರಾಜ್ಯ ಪ್ರಬಲ ಕಾಂಗ್ರೆಸ್ ವಲಯವಾಗಿ ಗುರುತಿಸಿಕೊಂಡಿದ್ದು, ಪ್ರಾದೇಶಿಕ ರಾಜಕಾರಣದಲ್ಲಿ ಪ್ರಭಾವಿ ರಾಜಕಾರಣಿಯಾಗಿ ಅರಸು ಅವರು ಕಂಡುಬರುವರು. ಹಾಗಾಗಿ ಮೇಲಿನ ಉಲ್ಲೇಖಗಳಲ್ಲಿ ರಾಜ್ಯ ರಾಜಕಾರಣದ ವಿಚಾರಗಳೆಲ್ಲವೂ ವ್ಯಕ್ತಿ ನೆಲೆಯಲ್ಲಿ ಪ್ರಕಟವಾಗಿದೆ. ಅರಸನೂ ಬಿದ್ದ ಚುಟುಕ ಪ್ರಾದೇಶಿಕ ರಾಜಕಾರಣದ ನೋಟವೊಂದನ್ನು ಸೆರೆಹಿಡಿಯುತ್ತದೆ. ಕರ್ನಾಟಕದಲ್ಲಿ ೧೯೭೮ರ ವಿಧಾನಸಭಾ ಚುನಾವಣೆಯಲ್ಲಿ ಕಾಂಗ್ರೆಸ್(ಐ) ಹಾಗೂ ಅರಸ ಅವರು ಮನಃ ಅಧಿಕಾರಕ್ಕೆ ಬರುವುದನ್ನು ಸಮೂಹ ಮಾಧ್ಯಮಗಳು ಅನುಮಾನಸ್ಪದವಾಗಿ ನೋಡುತ್ತಿದ್ದವು. ಈ ಸಂದರ್ಭ ದಲ್ಲೇ ಇನ್ನಿತರ ಐದು ರಾಜ್ಯಗಳ ವಿಧಾನಸಭೆಗೆ ಚುನಾವಣೆಗಳು ಸಹ ನಡೆಯುತ್ತಿದ್ದವು. ಈ ಚುನಾವಣಾ ಫಲಿತಾಂಶ ಜನತಾ ಸರ್ಕಾರಕ್ಕೆ ಪೂರಕವಾಗಿರುವ ಸಾಧ್ಯತೆಯ ಚರ್ಚೆ ಅಧಿಕವಾಗಿತ್ತು. ಪ್ರಮುಖ ನಿಯತಕಾಲಿಕೆಗಳಲ್ಲಿ 'ದಕ್ಷಿಣದಲ್ಲಿ ನಡೆಯುವ ಮತದಾನವು ರಾಜಕೀಯ ಧೃವೀಕರಣದ ಮೇಲೆ ಪ್ರಭಾವ ಬೀರಲಿದೆ. ಕಾಂಗ್ರೆಸ್ ವಿಜಯ ಜನತಾ ಸಮ್ಮಿಶ್ರ ಪಕ್ಷಕ್ಕೆ ಪರ್ಯಾಯವಾಗಿ ರೂಪುಗೊಳ್ಳುವ ಸಾಧ್ಯತೆಯಿದೆ. ಕಾಂಗ್ರೆಸ್ ಪರಾಜಯ ಕಾಂಗ್ರೆಸ್ ಪಕ್ಷದವರಲ್ಲಿ ಜನತಾ ಪಕ್ಷದೆಡೆಗೆ ಬೃಹತ್ ಸಂಚಲನ ತರಲಿದೆ' ಎಂಬ ವಿಶ್ಲೇಷಣೆಯು ಸಂಭವಿಸಬಹುದಾದ ರಾಜಕೀಯ ಪ್ರಕ್ರಿಯೆಗಳ ಕುರಿತ ಸಮಕಾಲೀನ ಚಿಂತನೆಗಳೆಡೆಗೆ ಬೆಳಕು ಬೀರುವುದು. ಕಾಂಗ್ರೆಸ್ ಅಥವಾ ಜನತಾ ಪಕ್ಷ ಆಡಳಿತ ಪಕ್ಷವಾಗಿ ರೂಪುಗೊಳ್ಳುವ ಮೂಲಕ ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯದ ರಕ್ಷಣೆಯ ನೆಲೆಯಲ್ಲಿ ಹಾಗೂ ರಾಷ್ಟ್ರಮಟ್ಟದಲ್ಲಿ ಉಂಟಾಗಬಹುದಾದ ಸಾಧ್ಯತೆಗಳ ಪೂರ್ವ ಲೆಕ್ಕಾಚಾರವಿದು. ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಜನತಾ ಪಕ್ಷ ಅಧಿಕ ಸ್ಥಾನ ಗಳಿಸಿದರೂ ದಕ್ಷಿಣದ ರಾಜ್ಯಗಳಲ್ಲಿ ಕಾಂಗ್ರೆಸ್ ಪರ ಅಲೆಯಿತ್ತು. ನಂತರದ ಕೆಲವೇ ತಿಂಗಳುಗಳಲ್ಲಿ ನಡೆದ ೯ ರಾಜ್ಯಗಳ ವಿಧಾನಸಭಾ ಚುನಾವಣೆಗಳಲ್ಲಿ ೭ ರಾಜ್ಯಗಳಲ್ಲಿ ಜನತಾ ಪಕ್ಷ ಅಧಿಕಾರಕ್ಕೆ ಬಂದಿತ್ತು. ಜನತಾ ಅಲೆ ಹಾಗೂ ಕಾಂಗ್ರೆಸ್ ಪಕ್ಷದ ದುಸ್ಥಿತಿ ಮುಂಬರುವ ದಕ್ಷಿಣದ ರಾಜ್ಯಗಳ ಮೇಲೆ ಪ್ರಭಾವ ಬೀರುವ ಸಾಧ್ಯತೆಗಳಿದ್ದು, ಕುತೂಹಲ ಸೃಷ್ಟಿಸಿತ್ತು.

ಗ್ರೋವರ್ ಆಯೋಗದ ಮಧ್ಯಂತರ ವರದಿ ಮತ್ತು ಎಸ್.ನಿಜಲಿಂಗಪ್ಪ ಅವರು ಜನತಾ ಪಕ್ಷದಿಂದ ಯಾವುದೇ ಮುನ್ಸೂಚನೆಗಳಿಲ್ಲದೇ ಹೊರಬಂದದ್ದು ೧೯೭೮ರ ವಿಧಾನಸಭಾ ಚುನಾವಣೆ ಯಲ್ಲಿ ಸಂಚಲನ ಉಂಟುಮಾಡಿದ ವಿಚಾರಗಳಾಗಿವೆ. ಎಸ್. ನಿಜಲಿಂಗಪ್ಪ ಅವರು ರಾಜ್ಯ ಮತ್ತು ರಾಷ್ಟ್ರೀಯ ವಲಯದಲ್ಲಿ ಪ್ರಭಾವಿ ನಾಯಕರಾಗಿದ್ದರು. ೧೯೬೯ರಲ್ಲಿ ಕಾಂಗ್ರೆಸ್ ವಿಭಜನೆಯಲ್ಲಿ ಎಸ್. ನಿಜಲಿಂಗಪ್ಪನವರ ಪಾತ್ರ ಅಪಾರವಾಗಿತ್ತು. ನಂತರ ರೂಪುಗೊಂಡ ಸಂಸ್ಥಾ ಕಾಂಗ್ರೆಸ್ ರಾಜ್ಯದಲ್ಲಿ ಅತ್ಯಂತ ಪ್ರಬಲವಾಗಿತ್ತು. ಆದರೆ ೧೯೭೧ರ ಲೋಕಸಭಾ ಮತ್ತು ೧೯೭೨ರ ವಿಧಾನಸಭಾ ಚುನಾವಣೆ

ಗಳಲ್ಲಿ ಚುನಾವಣಾ ಲೆಕ್ಕಾಚಾರಕ್ಕೆ ವಿರುದ್ಧವಾಗಿ ಆಡಳಿತ ಕಾಂಗ್ರೆಸ್ ಪಕ್ಷ ಗೆಲುವು ಸಾಧಿಸಿತ್ತು. ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಜನತಾ ಪಕ್ಷ ಅಧಿಕಾರಕ್ಕೆ ಬರುವವರೆಗೆ ರಾಜ್ಯದ ಪ್ರಮುಖ ವಿರೋಧ ಪಕ್ಷವಾಗಿ ಸಂಸ್ಥಾ ಕಾಂಗ್ರೆಸ್ ಕಾರ್ಯನಿರ್ವಹಿಸಿರುವುದನ್ನು ನೋಡಬಹುದು. ರಾಜ್ಯದಲ್ಲಿ ನಡೆದ ತುರ್ತುಪರಿಸ್ಥಿತಿ ವಿರೋಧಿ ಹೋರಾಟಗಳಲ್ಲಿ ಸಂಸ್ಥಾ ಕಾಂಗ್ರೆಸ್ ಸಹ ಪ್ರಮುಖ ಪಾತ್ರವಹಿಸಿದ್ದು, ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಜನತಾ ಪಕ್ಷದಲ್ಲಿ ವಿಲೀನಗೊಂಡಿತು. ರಾಜ್ಯ ರಾಜಕಾರಣದಲ್ಲಿ ಪ್ರಭಾವಿಯಾಗಿದ್ದ ಎಸ್. ನಿಜಲಿಂಗಪ್ಪ ಅವರು ದಿಢೀರಾಗಿ ಜನತಾ ಪಕ್ಷ ತೊರೆದಿರುವುದು ಮುಂದಿನ ಚುನಾವಣೆಯಲ್ಲಿ ಜನತಾ ಪಕ್ಷಕ್ಕೆ ನಷ್ಟವನ್ನು ಉಂಟುಮಾಡುವ ಸಾಧ್ಯತೆಯನ್ನು ಹೆಚ್ಚಿಸಿದ್ದಲ್ಲದೇ ರಾಜಕಾರಣದಲ್ಲಿ ಸಂಚಲನವನ್ನು ಉಂಟುಮಾಡಿತ್ತು. ಕೆಳಗಿನ ಚಿತ್ರ-೧೨ರಲ್ಲಿ ಎಸ್. ನಿಜಲಿಂಗಪ್ಪ ಅವರು



ಡೆಕ್ಕನ್ ಹೆರಾಲ್ಡ್: ೧೯೭೮ ಫೆಬ್ರವರಿ ೩. ವ್ಯಂಗ್ಯಚಿತ್ರಕಾರ: ಪಿ.ವಿ.ರಾಮಮೂರ್ತಿ. ಚಿತ್ರ ಸಂಖ್ಯೆ: ೪.೧೭
(ಚಿತ್ರ-೧೨)

ಜನತಾ ಪಕ್ಷ ಬಿಟ್ಟುಹೋಗಿದಕ್ಕೆ ಮಾಧ್ಯಮಗಳಲ್ಲಿ ಕಂಡುಬಂದ ಪ್ರತಿಕ್ರಿಯೆಯ ರೂಪ. ಸಿದ್ಧಾರ್ಥ ಮಧ್ಯ ರಾತ್ರಿ ಮನೆ ಬಿಟ್ಟ ಹಾಗೆ ಜನತಾ ಪಕ್ಷ ತೊರೆದಂತಿದೆ. ಎಸ್.ನಿಜಲಿಂಗಪ್ಪ ಅವರ ತಲೆಯ ಮೇಲೆ ಸಿದ್ಧಾರ್ಥ ಎಂದಿರುವುದು. ಮಂಚದ ಮೇಲೆ ನೆಮ್ಮದಿಯಿಂದ, ಯಾವುದರ ಪರಿವೆಯೂ ಇಲ್ಲದೆ ತಾಯಿ, ಮಗು ಮಲಗಿರುವುದನ್ನು ಕಾಣಬಹುದು. ಮಗುವಿಗೆ ಮೂಗು ಬಾಯಿ ಸಹ ಸರಿಯಾಗಿ ರೂಪುಗೊಂಡಿಲ್ಲದಿರುವುದು ಪಕ್ಷ ಶೈಶವಾಸ್ಥೆಯಲ್ಲಿದೆ ಎಂಬುದರೊಂದಿಗೆ, ಪರೋಕ್ಷವಾಗಿ ಚುನಾವಣೆಯಲ್ಲಿ ಜನತಾ ಪಕ್ಷದ ಮೇಲೆ ಬೀರಬಹುದಾದ ಪ್ರಭಾವವನ್ನು ತಿಳಿಸುವುದು. ಸಮಕಾಲೀನವಾಗಿ ವಾರಪತ್ರಿಕೆಯೊಂದರ ಅಂಕಣವೊಂದು ಚುನಾವಣೆ ಮತ್ತು ಜನಸಾಮಾನ್ಯರ ನಡುವಿನ ಸಂಬಂಧ ಕುರಿತಿದ್ದು, ಚುನಾವಣೆಯಲ್ಲಿರುವ ಪ್ರಮುಖ ರಾಜಕಾರಣಿಗಳ ಚಿತ್ರವಿದೆ. ಅದರ ಮುಂದೆ ಸಾಮಾನ್ಯ ಪ್ರಜೆಯ ಸಣ್ಣ ಚಿತ್ರವಿದ್ದು 'ಆರು ಹಿತವರು ಮುಂದೆ?' ಎಂದು ಕೊನೆಗೊಳ್ಳುವುದು. ಇದು ೧೯೭೭ರ ಲೋಕಸಭಾ ಚುನಾವಣೆಯ ಸಂದರ್ಭದಲ್ಲಿ ಪ್ರಜಾಪ್ರಭುತ್ವದ ನೆಲೆಯಲ್ಲಿ ಚುನಾವಣೆ ಕುರಿತು ಮೂಡಿದ್ದ ಆಸಕ್ತಿಯು ಸಮಾಜದ ಕೆಲವು ವಲಯಗಳಲ್ಲಿ ಕಡಿಮೆಗೊಂಡಿರುವುದನ್ನು ಸೂಚಿಸುವುದು. 'ಯೂವರ್ ದಿ ವೋಟರ್ ಅಂಡ್ ಯೂ ಅಲೋನ್ ಜಡ್ಜ್'. 'ಕರ್ನಾಟಕದ ವಿಧಿಬರಹ ನಿರ್ಧರಿಸಲು ೭೨ ಗಂಟೆಗಳು ಮಾತ್ರ', 'ಜನತಾ ಬಡವರ ಪರ' ಮತ್ತಿತರ ರಾಜಕೀಯ ಪಕ್ಷಗಳ ಉದ್ಘೋಷಗಳು ಸಮಾಜದಲ್ಲಿ ಚುನಾವಣೆ ಮತ್ತು ಪ್ರಜಾಪ್ರಭುತ್ವದ ನೆಲೆಯಲ್ಲಾಗಿರುವ ಬದಲಾವಣೆಗಳಿಗೆ ಪೂರಕವಾದ ಪ್ರಕ್ರಿಯೆಗಳನ್ನು ಕಟ್ಟಿಕೊಡುವುವು. ರಾಜಕೀಯ ಪಕ್ಷಗಳ ಪ್ರಣಾಳಿಕೆಯಲ್ಲಿ ಮೇಲಿನ ಪ್ರಕ್ರಿಯೆಗಳು ಇನ್ನೂ ವಿಸ್ತೃತವಾಗಿ

ಹೊರಕಾಣುವುವು. ಉದಾಹರಣೆಯಾಗಿ, ಕಾಂಗ್ರೆಸ್(ಐ) ಭಾವನಾತ್ಮಕ ವಿಚಾರಗಳಿಗೆ ಹೆಚ್ಚು ಒತ್ತು ಕೊಡುತ್ತಿದ್ದರೆ, ಜನತಾ ಪಕ್ಷ ತುರ್ತುಪರಿಸ್ಥಿತಿ ಕಾಲದ ಆಡಳಿತ ಮರುಕಳಿಸದಿರಲು, ಪ್ರಜಾಪ್ರಭುತ್ವ ರಕ್ಷಣೆ ಮುಂತಾದ ವಿಚಾರಗಳಿಗೆ ಒತ್ತುಕೊಡುವುದು ಇನ್ನೂ ಮುಂದುವರೆದಿರುವುದು ಕಂಡುಬರುವುದು.

'ರಾಜ್ಯಕ್ಕೆ ಮತ್ತೆ ಇಂದಿರಾ ಕಾಂಗ್ರೆಸ್ ಸರ್ಕಾರ', 'ವಿಜಯದ ಶಿಲ್ಪಿ ಅರಸು ಮತ್ತೆ ಮುಖ್ಯಮಂತ್ರಿ', 'ಅರಸುಗಳದಿದು ವೀರ!' ಮೊದಲಾದ ಚುನಾವಣಾ ವರದಿಗಳಲ್ಲಿ ಫಲಿತಾಂಶವು ಅರಸರ ನಾಯಕತ್ವ, ರಾಜಕಾರಣ, ಪಕ್ಷ ಸಂಘಟನೆಯ ನೆಲೆಗಳು ಬಿಂಬಿತವಾಗಿವೆ. 'ಅರಸ್ ರೈಡ್ಸ್ ಅಗೇನ್', 'ದ ನೋನ್ ಅಂಡ್ ನಾಟ್ ಸೊ ವೆಲ್‌ನೋನ್ ದೇವರಾಜ್ ಅರಸ್', 'ಚುನಾವಣಾ ಫಲಿತಾಂಶಗಳ ಸಿಂಹಾವಲೋಕನ' ಮೊದಲಾದ ಲೇಖನಗಳಲ್ಲಿ ೧೯೭೮ರ ವಿಧಾನಸಭಾ ಚುನಾವಣೆಯ ತರುವಾಯ ಅರಸು ಅವರು ಮುತ್ಸದ್ದಿ ರಾಜಕಾರಣಿಯಾಗಿ ಕಂಡುಬರುವುದನ್ನು ನೋಡಬಹುದು. ಪ್ರಬಲ ಪ್ರಾದೇಶಿಕ ರಾಜಕಾರಣಿಯಿಂದ ರಾಷ್ಟ್ರೀಯ ನೆಲೆಯ ರಾಜಕಾರಣಿಯಾಗಿ


ಕನ್ನಡಪ್ರಭ

ರಾಜ್ಯಕ್ಕೆ ಮತ್ತೆ ಇಂದಿರಾಕಾಂಗ್ರೆಸ್ ಸರ್ಕಾರ

ಕನ್ನಡಪ್ರಭ

ವಿಜಯದ ಶಿಲ್ಪಿ ಅರಸು ಮತ್ತೆ ಮುಖ್ಯಮಂತ್ರಿ

ಕನ್ನಡಪ್ರಭ: ೧೯೭೮ ಫೆಬ್ರವರಿ ೨೭ ಮತ್ತು ೨೮ರ ಮುಖಪುಟ ಚಿತ್ರ ಸಂಖ್ಯೆ ೪.೧೫

ಮೇಲ್ಮುಖ ಬೆಳವಣಿಗೆಯ ಆರಂಭ ಕಂಡುಬರುವುದು. ಕಾಂಗ್ರೆಸ್ ಪಕ್ಷಗಳ ಆಂತರಿಕ ಭಿನ್ನತೆ ಮತ್ತು ಒಡೆದು ಹೋಗಿದ್ದ ಕಾಂಗ್ರೆಸ್ ಪಕ್ಷಗಳ ಒಗ್ಗೂಡಿಸುವ ಮೂಲಕ ಜನತಾ ಪಕ್ಷಕ್ಕೆ ಪರ್ಯಾಯವಾಗಿ ಪ್ರಬಲ ಪಕ್ಷ ರೂಪಿಸುವ ಪ್ರಯತ್ನದಲ್ಲಿ ಅರಸು ಅವರು ನಿರತರಾಗುವುದನ್ನು ನೋಡಬಹುದು. ಈ ನಿಟ್ಟಿನಲ್ಲಿ "ಕಾಂಗ್ರೆಸ್ ಪಾರ್ಟಿ, ಫೈಟಿಂಗ್ ಫಾರ್ ಯುನಿಟಿ"(ಇಕಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ ೧೯೭೮: ಜೂನ್ ೧೦); "ಕಾಂಗ್ರೆಸ್ಸಿಗರಿಂದ ಮಹಾರಾಷ್ಟ್ರ ಬಿಕ್ಕಟ್ಟು: ಅರಸ್"(ಅರಸ್ ೧೯೭೮ ಜುಲೈ ೧೮); "ಆಲ್ ಲೈಕ್ ಮೈಡೆಂಡ್ ಕಾಂಗ್ರೆಸ್‌ಮೆನ್ ಮಸ್ಟ್ ಯುನೈಟ್: ಅರಸ್"(ಡೆಕ್ಕನ್ ಹೆರಾಲ್ಡ್ ೧೯೭೮ ಜುಲೈ ೨೩); "ಅರಸ್ ಅನ್‌ಹ್ಯಾಪಿ ಓವರ್ ಕನ್‌ಫ್ರಂಟೇಷನ್ ಟ್ಯಾಗ್ ಟು ಫಿಸ್ಕಾಲ್ ಡಿಮ್ಯಾಂಡ್"(ಡೆಕ್ಕನ್ ಹೆರಾಲ್ಡ್ ೧೯೭೮ ಜುಲೈ ೨೩): "ಫೇಲ್ಯೂರ್ ಅರಸ್ ಟು ಸೇವ್ ಮಹಾರಾಷ್ಟ್ರ ಕೋಯಲೇಷನ್"(ಮೂರ್ತಿ ೧೯೭೮ ಜುಲೈ ೨೯); "ಅರಸ್ ಛಾಲೆಂಜಸ್ ಸೆಂಟರ್ ಟು ಹೋಲ್ಡ್ ಮಿಡ್ ಪೋಲ್"(ಡೆಕ್ಕನ್ ಹೆರಾಲ್ಡ್ ೧೯೭೮ ಆಗಸ್ಟ್ ೧೦); "ಅರಸ್ ಅನ್‌ಹ್ಯಾಪಿ ಓವರ್ ಮದ್ರಾಸ್ ಮೀಟ್ ಔಟ್‌ಕಮ್"(ಡೆಕ್ಕನ್ ಹೆರಾಲ್ಡ್ ೧೯೭೮ ಆಗಸ್ಟ್ ೨೮) ಮೊದಲಾದ ಪತ್ರಿಕಾ ವರದಿಗಳು ಮತ್ತು ಲೇಖನಗಳನ್ನು ಕಾಣಬಹುದು. ಅಂತರ್ ರಾಜ್ಯ, ಕೇಂದ್ರ ಮತ್ತು ರಾಜ್ಯಗಳ ಸಂಬಂಧ, ಕಾಂಗ್ರೆಸ್ ಪಕ್ಷದ ಪುನರ್ ಸಂಘಟನೆ ಮತ್ತಿತರ ಕಾರ್ಯಚಟುವಟಿಕೆ ಕುರಿತು ಅರಸು ಅವರು ರಾಷ್ಟ್ರಮಟ್ಟದ ಹೇಳಿಕೆ ಕೊಡುತ್ತಿರುವುದು ಗಮನ ಸೆಳೆಯುವುದು. ಇದು ರಾಷ್ಟ್ರೀಯ ನಾಯಕರಾಗಿ ಬೆಳವಣಿಗೆ ಹೊಂದುತ್ತಿರುವ ಮೊದಲ ಹಂತದ

ಲಕ್ಷಣಗಳಾಗಿ ಕಂಡುಬರುವುದು. ಕೇಂದ್ರ ಸರ್ಕಾರಕ್ಕೆ ಪ್ರಾದೇಶಿಕ ರಾಜಕಾರಣಿಯೊಬ್ಬರು ಮಧ್ಯಂತರ ಚುನಾವಣೆ ನಡೆಸಲು ಆಹ್ವಾನ ನೀಡುತ್ತಿರುವುದು ಹಾಗೂ ಮಹಾರಾಷ್ಟ್ರದಲ್ಲಿದ್ದ ಕಾಂಗ್ರೆಸ್ ಪಕ್ಷಗಳ ಸಮ್ಮಿಶ್ರ ಸರ್ಕಾರದ ಪತನಕ್ಕೆ ಅರಸು ಅವರನ್ನು ಹೊಣೆ ಮಾಡುತ್ತಿರುವುದು ರಾಷ್ಟ್ರೀಯ ನೆಲೆಯಲ್ಲಿ ಅರಸು ಅವರ ರಾಜಕಾರಣ ಬೀರಿದ ಪ್ರಭಾವ ತಿಳಿದು ಬರುವುದು. ಇವೆಲ್ಲವೂ ಚಿಕ್ಕಮಗಳೂರು ಮಧ್ಯಂತರ ಚುನಾವಣೆವರೆಗಿನ ಅರಸು ಅವರ ವ್ಯಕ್ತಿ ರಾಜಕಾರಣದ ಮೇಲ್ಮುಖ ಬೆಳವಣಿಗೆಯ ವಿವಿಧ ರೂಪಗಳಾಗಿವೆ.

**ಕರ್ನಾಟಕ ರಾಜ್ಯಪಾಲರಾಗಿದ್ದ ಗೋವಿಂದ ನಾರಾಯಣ್, ಪ್ರಧಾನಿ ಮೊರಾರ್ಜಿ ದೇಸಾಯಿ ಅವರೊಂದಿಗೆ ಅರಸು ಅವರು**



ಕೃಪೆ: ಡೆಕ್ಕನ್ ಹೆರಾಲ್ಡ್, ಎಂ.ಜಿ.ರೋಡ್, ಬೆಂಗಳೂರು. [illegible] ಮಾರ್ಚ್ [illegible] ತೆಗೆದ ಛಾಯಾಚಿತ್ರ, ಚಿತ್ರ ಸಂಖ್ಯೆ ೪.೧೯.

**ಅಪರೂಪದ ಛಾಯಾಚಿತ್ರದಲ್ಲಿ ಜಯಪ್ರಕಾಶ್ ನಾರಾಯಣರೊಂದಿಗೆ ಅರಸು ಅವರು**



ಕೃಪೆ: ವಾರ್ತಾ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು. ಚಿತ್ರ ಸಂಖ್ಯೆ ೪.೨೦.

೧೯೭೮ ಕರ್ನಾಟಕ ವಿಧಾನಸಭಾ ಚುನಾವಣೆ ಫಲಿತಾಂಶ ಪಟ್ಟಿ.. ಪಟ್ಟಿ ಸಂಖ್ಯೆ: ೧೬.

| [illegible] | ಪಕ್ಷ | ಸ್ಪರ್ಧಿಸಿದವರು | ಗೆದ್ದವರು | ಶೇಕಡಾವಾರು ಮತದಾನ | ಒಟ್ಟು ಕ್ಷೇತ್ರಗಳು |
|---|---|---|---|---|---|
| ೧೯೭೮ | ಸಿಪಿಐ | ೬ | ೩ | ೧.೧೯ | ೨೨೪ |
| | ಸಿಪಿಎಂ | ೧೦ | ೦ | ೦.೫೦ | |
| | ಐಎನ್‌ಸಿ | ೨೧೨ | ೨ | ೭.೯೯ | |
| | ಐಎನ್‌ಸಿ(ಐ) | ೨೧೪ | ೧೪೯ | ೪೪.೨೫ | |
| | ಜೆಎನ್‌ಪಿ | ೨೨೨ | ೫೯ | ೩೭.೯೫ | |
| | ಎಡಿಎಂಕೆ | ೭ | ೦ | ೦.೧೮ | |
| | ಡಿಎಂಕೆ | ೩ | ೦ | ೦.೧೩ | |
| | ಎಂಯುಎಲ್ | ೧ | ೦ | ೦.೦೦ | |
| | ಆರ್‌ಪಿಐ | ೩ | ೧ | ೦.೧೪ | |
| | ಆರ್‌ಪಿಕೆ | ೭ | ೦ | ೦.೧೩ | |
| | ಸ್ವತಂತ್ರ ಅಭ್ಯರ್ಥಿಗಳು | ೪೮೦ | ೧೦ | ೭.೫೧ | |

ಆಕರ: ಕರ್ನಾಟಕ ಚುನಾವಣಾ ಆಯೋಗ, ಬೆಂಗಳೂರು.

ಈ ಮೇಲಿನ ಪಟ್ಟಿಯು ೧೯೭೮ರ ವಿಧಾನಸಭಾ ಚುನಾವಣೆಯ ಫಲಿತಾಂಶದ ಕಿರುನೋಟವನ್ನು, ಅದರ ಪರಿಣಾಮ ಪಡೆದ ರೂಪವನ್ನು ಕಟ್ಟಿಕೊಡುವುದು. ಕಾಂಗ್ರೆಸ್(ಐ) ೧೪೯ ಕ್ಷೇತ್ರಗಳಲ್ಲಿ ವಿಜಯ ಗಳಿಸಿ, ಬಹುಮತ ಪಡೆದಿರುವುದನ್ನು ನೋಡಬಹುದು. ಜನತಾ ಪಕ್ಷ ಪ್ರಬಲ ವಿರೋಧಿ ಪಕ್ಷವಾಗಿ ರೂಪುಗೊಂಡಿದ್ದು, ೫೯ ಕ್ಷೇತ್ರಗಳಲ್ಲಿ ಜಯ ಸಾಧಿಸಿದೆ. ಉಳಿದಂತೆ ಸಿಪಿಐ ೩ ಕ್ಷೇತ್ರಗಳಲ್ಲಿ ಆರಿಸಿಬಂದಿದ್ದರೆ, ಸ್ವತಂತ್ರ ಅಭ್ಯರ್ಥಿಗಳು ೧೦ ಕ್ಷೇತ್ರಗಳಲ್ಲಿ ಆಯ್ಕೆಯಾಗಿರುವರು. ಜನತಾ ಪಕ್ಷ ಶೇಕಡಾ ೩೭.೭೫ರಷ್ಟು ಮತ ಗಳಿಸಿ, ಕಾಂಗ್ರೆಸ್ ಪಕ್ಷಕ್ಕೆ ಪ್ರಬಲ ಸ್ಪರ್ಧೆ ಒಡ್ಡಿರುವುದು ಶೇಕಡಾವಾರು ಮತದಾನದ ಅಂಕಿ ಅಂಶಗಳನ್ನು ನೋಡದಿದ್ದರೆ ತಿಳಿದು ಬರುವುದಿಲ್ಲ. ಸ್ವತಂತ್ರ ಅಭ್ಯರ್ಥಿಗಳಿಗೆ ಶೇ.೭.೫೧ರಷ್ಟು ಮತ ದೊರೆತಿರುವುದು ಕಾಂಗ್ರೆಸ್ ಮತ್ತು ಜನತಾ ಪಕ್ಷದ ರಾಜಕೀಯಕ್ಕೆ ಪರ್ಯಾಯ ಹುಡುಕುವ ಮಾರ್ಗವಾಗಿರಬಹುದಾದ ಸಾಧ್ಯತೆ ಮೇಲ್ನೋಟಕ್ಕೆ ತಿಳಿಯದೆ ಹೋಗುವುದು. ಕಾಂಗ್ರೆಸ್ ಪಕ್ಷ ಅಧಿಕ ಕ್ಷೇತ್ರಗಳಲ್ಲಿ ಜಯಗಳಿಸಿದಿದ್ದರೂ ಶೇಕಡಾವಾರು ಮತದಾನ ಜನತಾ ಪಕ್ಷಕ್ಕಿಂತ ಶೇ.೭ರಷ್ಟು ಮಾತ್ರ ಪಡೆಯಲು ಸಾಧ್ಯವಾಗಿರುವುದನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿದೆ. ಇದು ರಾಜ್ಯದಲ್ಲಿ ಕಾಂಗ್ರೇಸೇತರ ರಾಜಕೀಯ ಪಕ್ಷ ಆಡಳಿತ ಪಕ್ಷವಾಗುವ ಮೊದಲ ಹಂತದ ಬೆಳವಣಿಗೆಯಂತೆ ಕಂಡುಬರುವುದು. ದೇವರಾಜ ಅರಸು ಅವರು ಈ ಚುನಾವಣೆಯ ನಂತರ ಪ್ರಾದೇಶಿಕ ವಲಯದ ಪ್ರಭಾವಿ ರಾಜಕಾರಣಿಯಿಂದ ರಾಷ್ಟ್ರೀಯ ವಲಯದ ನಾಯಕನಾಗುವ ಬೆಳವಣಿಗೆಯನ್ನು ಕಾಣಬಹುದು. ೧೯೭೮ರ ಚುನಾವಣೆ ರಾಜ್ಯ ರಾಜಕಾರಣ ಮತ್ತು ಅರಸು ಅವರ ವೈಯಕ್ತಿಕ ರಾಜಕೀಯದ ಪ್ರಮುಖ ತಿರುವುಗಳಲ್ಲೊಂದಾಗಿತ್ತು. ಮುಂದಿನ ಪ್ರಮುಖ ತಿರುವು ಚಿಕ್ಕಮಗಳೂರು ಚುನಾವಣೆಯ ನಂತರ ಪ್ರಕಟಗೊಳ್ಳುವುದನ್ನು ನೋಡಬಹುದು.

### ೪.೧.೩.೨.೨. ಚಿಕ್ಕಮಗಳೂರು ಚುನಾವಣೆ: ರಾಜಕೀಯ ನೆಲೆಗಳು ಮತ್ತು ಪ್ರತಿಕ್ರಿಯೆಗಳು

ಚಿಕ್ಕಮಗಳೂರಿನ ಮಧ್ಯಂತರ ಚುನಾವಣೆಯು ಇಂದಿರಾ ಗಾಂಧಿ ಅವರು ರಾಜಕಾರಣದ ಮುಖ್ಯಧಾರೆಗೆ ಮರಳಲು ಪ್ರಮುಖ ನೆಲೆಗಟ್ಟನ್ನು ಒದಗಿಸುವ ಮೂಲಕ ರಾಷ್ಟ್ರದಾದ್ಯಂತ ಸಂಚಲನವನ್ನುಂಟು ಮಾಡಿತ್ತು. "ಇಂದಿರಾ ಟು ಸ್ಟ್ಯಾಂಡ್ ಫ್ರಂ ಚಿಕ್ಕಮಗಳೂರು"(ಡೆಕ್ಕನ್ ಹೆರಾಲ್ಡ್ ೧೯೭೮ ಸೆಪ್ಟೆಂಬರ್ ೨೬): "ಸಿಪಿಐ ನಾಟ್ ಸಪೋರ್ಟಿಂಗ್ ಇಂದಿರಾ ಆರ್ ಜನತಾ"(ಡೆಕ್ಕನ್ ಹೆರಾಲ್ಡ್ ೧೯೭೮ ಆಕ್ಟೋಬರ್ ೧೦): "ಹ್ಯಾಂಡ್ಸ್ ಡೌನ್ ವಿಕ್ಟರಿ ಫಾರ್ ಇಂದಿರಾ: ಅರಸ್"(ಅರಸ್ ೧೯೭೮ ಅಕ್ಟೋಬರ್ ೧೨); "ಅರಸುಗೆ ಇಂದಿರಾ ಗೆದ್ದರೂ ಕಷ್ಟ - ಸೋತರೂ ಕಷ್ಟ"(ಬೊಮ್ಮಾಯಿ ೧೯೭೮ ಅಕ್ಟೋಬರ್ ೧೫); "ಎಲ್ಲರ ದೃಷ್ಟಿ ಚಿಕ್ಕಮಗಳೂರು ಕಡೆ"(ಪ್ರಜಾಮತ ೧೯೭೮ ನವೆಂಬರ್ ೫); "ಚಿಕ್ಕಮಗಳೂರು: ಪಕ್ಕಾ ಜಗಳೂರು!"(ಸುಧಾ ೧೯೭೮ ನವೆಂಬರ್ ೫); "ಇಂದೇ ಮತದಾನ: ಜನತಾ ಜಯದ ಲಕ್ಷಣ ಉಜ್ವಲ"(ಕನ್ನಡಪ್ರಭ ೧೯೭೮ ನವೆಂಬರ್ ೫); "ಜಡಿ ಮಳೆಯಲ್ಲೂ ಶೇ.೭೦ ಮತದಾನ"(ಕನ್ನಡಪ್ರಭ ೧೯೭೮ ನವೆಂಬರ್ ೬) ಮೊದಲಾದ ಪತ್ರಿಕಾ ವರದಿಗಳು ಇಂದಿರಾ ಗಾಂಧಿ ಅವರು ಚುನಾವಣೆಯಲ್ಲಿ ಸ್ಪರ್ಧಿಸಲು ಘೋಷಿಸಿದ ತರುವಾಯದಿಂದ ಚುನಾವಣೆಯವರೆಗಿನ ಪ್ರಕ್ರಿಯೆಗಳು ಮತ್ತು ಮಾಧ್ಯಮಗಳ ಪ್ರತಿಕ್ರಿಯೆಗಳ ಸ್ಥೂಲ ಅವಲೋಕನವನ್ನು ಮುಂದಿಡುವುದು. ಸಮಕಾಲೀನವಾಗಿ ಕನ್ನಡಪ್ರಭ ಜನತಾ ಪಕ್ಷದ ಮುಖವಾಣಿಯಂತೆ[೨೩]

ಕಾರ್ಯನಿರ್ವಹಿಸಿರುವುದನ್ನು ನೋಡಬಹುದು. ಬಹುತೇಕ ಕಡೆ ಇಂದಿರಾ ಗಾಂಧಿ ಮತ್ತು ಜನತಾ ಪಕ್ಷದ ನಡುವಿನ ಚುನಾವಣಾ ಸಂಘರ್ಷವಾಗಿ ಬಿಂಬಿತವಾಗಿದೆ. ಆದರೆ ಜನತಾ ಪಕ್ಷದ ಅಭ್ಯರ್ಥಿಯಾದ ವೀರೇಂದ್ರ ಪಾಟೀಲರು ವ್ಯಕ್ತಿ ನೆಲೆಯಲ್ಲಿ ಬಿಂಬಿತವಾಗಿಲ್ಲ. ಈ ಚುನಾವಣೆ ರಾಜಕೀಯ ಪಕ್ಷಗಳ ಧೃವೀಕರಣದಲ್ಲಿ ಮತ್ತೊಂದು ಹೆಜ್ಜೆಯಾಗಿ, ರಾಜಕೀಯ ಪಕ್ಷಗಳ ಪ್ರಾಮುಖ್ಯತೆ ಮತ್ತು ಕಾರ್ಯನೀತಿಗೆ ಇನ್ನೂ ಹೆಚ್ಚಿನ ಖಚಿತತೆಯನ್ನು ನೀಡಿತು. ಜನತಾ ಪಕ್ಷ, ಡಿ. ಎಂ. ಕೆ ಮತ್ತು ಸಿಪಿಐ(ಎಂ) ಮತ್ತಿತರ ರಾಜಕೀಯ ಪಕ್ಷಗಳು ಜನತಾ ಪಕ್ಷದ ಅಭ್ಯರ್ಥಿಯ ಪರವಾಗಿದ್ದರೆ, ಎ. ಐ. ಡಿ. ಎಂ. ಕೆ ಕಾಂಗ್ರೆಸ್ಸನ್ನು ಬೆಂಬಲಿಸಿತು. ಮೇಲ್ನೋಟದಲ್ಲಿ ೧೯೭೭ರ ಲೋಕಸಭಾ ಚುನಾವಣೆಯ ರಾಜಕೀಯ ಧೃವೀಕರಣಕ್ಕಿಂತ ಹೆಚ್ಚು ಭಿನ್ನವಾಗಿ ಕಾಣುವುದಿಲ್ಲ ವಾದರೂ ರಾಷ್ಟ್ರೀಯ ರಾಜಕಾರಣ ಮತ್ತು ಪ್ರಾದೇಶಿಕ ರಾಜಕಾರಣದ ನೆಲೆಯಲ್ಲಿ ಅತ್ಯಂತ ಪ್ರಮುಖ ತಿರುವು ನೀಡಿತು.

ಚಿಕ್ಕಮಗಳೂರು ಮಧ್ಯಂತರ ಚುನಾವಣಾ ಪ್ರಕ್ರಿಯೆಗಳ ಸ್ವರೂಪವನ್ನು ಕೆಳಗಿನ ಛಾಯಾಚಿತ್ರಗಳು, ಜಾಹೀರಾತುಗಳು ಹಾಗೂ ವ್ಯಂಗ್ಯಚಿತ್ರಗಳ ಅವಲೋಕನದ ಮೂಲಕ ವಿಶ್ಲೇಷಿಸಲು ಪ್ರಯತ್ನಿಸಿದೆ. ಇವುಗಳಲ್ಲಿ ಇಂದಿರಾ ಗಾಂಧಿ ಅವರ ವಿರುದ್ಧ ಹಾಗೂ ಜನತಾ ಪಕ್ಷದ ಪರ ಪ್ರಚಾರ ಕೈಗೊಂಡಿರುವುದನ್ನು ಕಾಣಬಹುದು. ಇವರಲ್ಲಿ ಅನೇಕರು ತುರ್ತುಪರಿಸ್ಥಿತಿಯನ್ನು ವಿರೋಧಿಸಿ ಪ್ರತಿಭಟಿಸಿದವರಾಗಿದ್ದರು. ಚಿತ್ರ-೧೪ರಲ್ಲಿ ಜಾರ್ಜ್ ಫರ್ನಾಂಡೀಸ್ ಅವರು 'ಡಿಫೀಟ್ ಇಂದಿರಾ' ಫಲಕವನ್ನು ಹಾಕಿಕೊಂಡು ಪ್ರಚಾರ ಕೈ ಗೊಂಡಿರುವುದನ್ನು ಕಾಣಬಹುದು. ಈ ಚುನಾವಣೆಯಲ್ಲಿ ಜಾರ್ಜ್ ಫರ್ನಾಂಡೀಸ್ ಅವರು ಜನತಾ ಪಕ್ಷದ ಕಾರ್ಯನಿರ್ವಾಹಕರಾಗಿರುವರು. ಚಿತ್ರ-೧೪ಎನಲ್ಲಿ ನಂದನ ರೆಡ್ಡಿ ಅವರು ತಮ್ಮ ತಾಯಿ ಸ್ನೇಹಲತಾ ರೆಡ್ಡಿ ಅವರ ಸಾವಿನ ಹಿನ್ನೆಲೆಯಲ್ಲಿ ಇಂದಿರಾ ಗಾಂಧಿ ಅವರು ಚಿಕ್ಕಮಗಳೂರು ಚುನಾವಣೆಯಲ್ಲಿ ಸ್ಪರ್ಧಿಸುತ್ತಿರು



ಡೆಕ್ಕನ್ ಹೆರಾಲ್ಡ್: ೧೯೭೮ ಅಕ್ಟೋಬರ್ ೨೨ ಮತ್ತು [illegible] ೧೯೭೮ ನವೆಂಬರ್ ೨ ಮತ್ತು ನವೆಂಬರ್ ೬ರಂದು ಪ್ರಕಟವಾದ ಛಾಯಾಚಿತ್ರಗಳು. ಚಿತ್ರ ಸಂಖ್ಯೆ: ೪.೨೧.
(ಚಿತ್ರ-೧೪) (ಚಿತ್ರ-೧೪ಎ) (ಚಿತ್ರ-೧೪ಬಿ)

ವುದನ್ನು ವಿರೋಧಿಸುತ್ತ ಪ್ರತಿಭಟಿಸುತ್ತಿರುವುದಾಗಿದೆ. ಚಿತ್ರ-೧೪ಬಿನಲ್ಲಿ ನಂದನಾ ರೆಡ್ಡಿ, ಸಾಹಿತಿ ಯು.ಆರ್.ಅನಂತಮೂರ್ತಿ ಮೊದಲಾದವರನ್ನು ನೋಡಬಹುದು. ಇವರುಗಳು ಅನೇಕ ಪ್ರಗತಿಪರ ಚಳವಳಿ ಗಳೊಡನೆ ಗುರುತಿಸಿಕೊಂಡಿದ್ದವರು. ತುರ್ತುಪರಿಸ್ಥಿತಿ ಜಾರಿಗೊಳಿಸಿದ ಇಂದಿರಾ ಗಾಂಧಿ ಅವರು ಮಧ್ಯಂತರ ಚುನಾವಣೆಯ ಮೂಲಕ ಲೋಕಸಭೆ ಪ್ರವೇಶಿಸಲು ಯತ್ನಿಸುತ್ತಿರುವುದನ್ನು ವಿರೋಧಿಸಿ ಪ್ರಚಾರ ಕೈಗೊಂಡಿದ್ದರು. ಈ ಚಿತ್ರಗಳು ಸಮಾಜದ ಹಲವು ವಲಯಗಳ ಪ್ರತಿಕ್ರಿಯೆಗಳನ್ನು ಬಿಂಬಿಸುವುವು.

ಚಿಕ್ಕಮಗಳೂರು ಚುನಾವಣೆ ಇಂದಿರಾ ಗಾಂಧಿ ಮತ್ತು ಜನತಾ ಪಕ್ಷದ ನಡುವಿನ ನೇರ ಸಂಘರ್ಷವಾಗಿ ರೂಪಾಂತರಗೊಂಡಿತ್ತು. ಈ ಸಂದರ್ಭದಲ್ಲಿ ಪ್ರಕಟಗೊಂಡ ಕೆಲವು ಜಾಹೀರಾತುಗಳು ಇದನ್ನು ಸ್ಪಷ್ಟಪಡಿಸುವುದು. ಚಿತ್ರ-೧೫ರಲ್ಲಿ ಸಧೃಡ ರೈತ ನೇಗಿಲನ್ನು ಹೊತ್ತು ಹೆಜ್ಜೆ ಹಾಕುತ್ತಿದ್ದು 'ಜನತಾ ಪಕ್ಷಕ್ಕೆ ನಿಮ್ಮ ಮತ ಭವಿಷ್ಯಕ್ಕೆ ಹಿತ' ಎಂದಿದೆ. ಚಿತ್ರ-೧೫ಎನಲ್ಲಿ 'ವೋಟ್ ಜನತಾ, ವೋಟ್ ವೀರೇಂದ್ರ' ಎಂದಿರುವುದರ ಕೆಳಗೆ 'ನೇಷನ್ಸ್ ಕಾಲ್ ಟು ಚಿಕಮಗಳೂರು' ಎಂಬ ಉದ್ಘೋಷವನ್ನು ನೋಡಬಹುದು. ಚಿತ್ರ-೧೫ಬಿನಲ್ಲಿ 'ಅಂತ್ಯೋದಯ ವೈ ? ಎ ವೋಟ್ ಫಾರ್ ಜನತಾ ಇಸ್ ಎ ವೋಟ್ ಫಾರ್ ಯುವರ್ ಫ್ಯೂಚರ್' ಮೊದಾಲಾದ ಉದ್ಘೋಷಗಳಿವೆ. ಚಿತ್ರ-೧೫ಸಿನಲ್ಲಿ 'ಭಾರತಮಾತೆಗೆ ಚಿಕ್ಕಮಗಳೂರು ಮತದಾರರ




ಡೆಕ್ಕನ್ ಹೆರಾಲ್ಡ್ ಮತ್ತು ಕನ್ನಡಪ್ರಭದಲ್ಲಿ ಅಕ್ಟೋಬರ್ ಹಾಗೂ ನವೆಂಬರ್‌ನಲ್ಲಿ ಚುನಾವಣಾ ಹಿನ್ನೆಲೆ ಜನತಾ ಪಕ್ಷದ ಪರವಾದ ಜಾಹೀರಾತುಗಳು. ಚಿತ್ರ ಸಂಖ್ಯೆ: ೪.೨೨

(ಚಿತ್ರ-೧೫) (ಚಿತ್ರ-೧೫ಎ) (ಚಿತ್ರ-೧೫ಬಿ) (ಚಿತ್ರ-೧೫ಸಿ)

ಆಶ್ವಾಸನೆ' ಎಂದಿದೆ. ಇವುಗಳಲ್ಲಿ ಜನತಾ ಪಕ್ಷದ ಯುದ್ಧ ಬಡತನದ ವಿರುದ್ಧ, ಸರ್ವಾಧಿಕಾರದ ವಿರುದ್ಧ ಮುಂತಾದ ವಿವರಣೆಗಳಿವೆ. ಕೆಲವೆಡೆ ಭಾವನಾತ್ಮಕವಾಗಿ ಪ್ರಚೋದಿಸುವ ಪ್ರಯತ್ನಗಳು ಕಂಡುಬರುವುವು. ಜನತಾ ಸರ್ಕಾರ ಚುನಾವಣೆಯನ್ನು ಬಿಂಬಿಸುತ್ತಿದ್ದ ಬಗೆ ಮತ್ತು ಚುನಾವಣಾ ರಾಜಕಾರಣದ ಆಯಾಮಗಳ ಪ್ರತಿಬಿಂಬಗಳಿವು. ಚುನಾವಣೆಯ ಮುನ್ನಾ ದಿನಗಳಲ್ಲಿ ಪ್ರಕಟವಾದ ವ್ಯಂಗ್ಯಚಿತ್ರದಲ್ಲಿ ಚುನಾವಣಾ ಪ್ರಕ್ರಿಯೆಯನ್ನು ಕ್ರಿಕೆಟ್ ಆಟದೊಡನೆ ಸಮೀಕರಿಸಿದೆ. ಚಿತ್ರ-೧೬ರಲ್ಲಿ ಅರಸು ಅವರು ವಿಕೆಟ್ ಕೀಪರ್




ಡೆಕ್ಕನ್ ಹೆರಾಲ್ಡ್: ೧೯೭೮ ನವೆಂಬರ್ ೩. ೧೯೭೮. ವ್ಯಂಗ್ಯಚಿತ್ರಕಾರ: ಜಿ.ಎ.ರಾಮಮೂರ್ತಿ. ಚಿತ್ರಸಂಖ್ಯೆ: ೪.೨೩.

(ಚಿತ್ರ-೧೬)

ಮತ್ತು ಇಂದಿರಾ ಗಾಂಧಿ ಅವರು ಬೌಲರ್ ಆಗಿದ್ದಾರೆ. ಜಾರ್ಜ್ ಫರ್ನಾಂಡೀಸ್ ಮತ್ತು ವೀರೇಂದ್ರ ಪಾಟೀಲ್ ಅವರುಗಳು ಬ್ಯಾಟ್ಸ್‌ಮನ್‌ಗಳಾಗಿರುವರು. ವಿಕೆಟ್ ಕೀಪರ್ ಆಟದುದ್ದಕ್ಕೂ(ಬೌಲಿಂಗ್ ನಡೆಯುವಾಗ) ನಿರ್ವಹಿಸುವ ಪಾತ್ರ ನಿರ್ಣಾಯಕವಾದುದು. ಚಿಕ್ಕಮಗಳೂರು ಟೆಸ್ಟ್ ಎಂಬ ವ್ಯಂಗ್ಯಚಿತ್ರದಲ್ಲಿ ಅರಸು ರಾಜಕಾರಣವನ್ನು ಮಾಧ್ಯಮಗಳು ಬಿಂಬಿಸುತ್ತಿದ್ದ ಬಗೆಯನ್ನು ಗುರುತಿಸಬಹುದು. ಸುದ್ದಿ ಪತ್ರಿಕೆಗಳಲ್ಲಿನ ವರದಿಗಳಲ್ಲಿ ಇಂದಿರಾ ಗಾಂಧಿ ಅವರಿಗಿಂತ ದೇವರಾಜ ಅರಸು ಅವರಿಗೆ ಹೆಚ್ಚು ಪ್ರಾಧಾನ್ಯತೆ ಕೊಡುತ್ತಿರುವುದು ಕಂಡುಬರುವುದು.

ಇಂದಿರಾ ಗಾಂಧಿ ಅವರನ್ನು ಚುನಾವಣೆಯಲ್ಲಿ ಸ್ಪರ್ಧಿಸುವುದನ್ನು ವಿರೋಧಿಸಿ ಅನೇಕ ಪ್ರತಿಭಟನೆಗಳು ಕಂಡುಬಂದವು. ಕೆಳಗಿನ ಛಾಯಾಚಿತ್ರವು ಇಂತಹ ಪ್ರತಿಭಟನೆಯೊಂದು ಪಡೆದುಕೊಂಡ ರಾಜಕೀಯ ಸ್ವರೂಪದ ಮೇಲೆ ಬೆಳಕು ಬೀರುವುದು. ಗಾಯತ್ರಿ ಶವದ ಛಾಯಾಚಿತ್ರದ ಸುತ್ತ ಚೌಕವಿದ್ದು, ಇದರ ಮೇಲ್ಭಾಗದಲ್ಲಿ ಹುತಾತ್ಮಳಾದ ಕುಮಾರಿ ಗಾಯತ್ರಿ ಎಂಬ ಶೀರ್ಷಿಕೆ ಇದೆ. ಕೆಳಗೆ ವೀರೇಂದ್ರ ಪಾಟೀಲರ ವಿಜಯವೊಂದೇ ನಾವು ಕುಮಾರಿ ಗಾಯತ್ರಿಗೆ ಸಲ್ಲಿಸಬಹುದಾದ ಶ್ರದ್ಧಾಂಜಲಿ ಎಂದು ಮುಖಪುಟದಲ್ಲಿ



ಕನ್ನಡಪ್ರಭ: ೧೯೭೮ ನವೆಂಬರ್‌ನಲ್ಲಿ ಪ್ರಕಟವಾದ ಛಾಯಾಚಿತ್ರ. ಚಿತ್ರಸಂಖ್ಯೆ: [illegible]

ಮುದ್ರಣವಾಗಿದೆ. ಚುನಾವಣಾ ಮುನ್ನಾ ದಿನಗಳಲ್ಲಿ ಈ ಸಾವು ಬೃಹತ್ ಸಂಚಲನವನ್ನುಂಟು ಮಾಡಿತ್ತು. ಈ ನಿಟ್ಟಿನಲ್ಲಿ ಸಂಕ್ರಮಣದಲ್ಲಿ 'ಡಿಯರ್ ಮಿಸ್ ಗಾಯತ್ರಿ' ಎಂಬ ಕವನವನ್ನು ನೋಡಬಹುದು.

ನಿನ್ನ ಅಸ್ತಿತ್ವದ ಅರಿವೆ ಇಲ್ಲದಿದ್ದ ನಮಗೆ
ರಾಜ್ಯೋತ್ಸವದ ಕಣ್ಣ ಕಾಣಿಕೆ ನೀನು
ಚುನಾವಣೆಯ ಕಾವಿನಲ್ಲಿ ದಿಢೀರನೆ ತಯಾರಾದ
ಮಸಾಲೆ ದೋಸೆ ನೀನು.
...
ಹೋಗಲಿ ಸತ್ತ ಮೇಲಾದರೂ ಸುಸೂತ್ರ ಬೂದಿ ಮಾಡಲು
ಬಿಟ್ಟಿದ್ದೇವೆಯೋ?
...
ನೋಡು ನಿನ್ನ ಹೆಣವನ್ನು ಹೇಗೆ ದುಡಿಸಿಕೊಳ್ಳುತ್ತಿದ್ದೇವೆ
ಅದು ನಮ್ಮದೇ ಮೂಕ ಮೆರವಣಿಗೆ
ಎಂಬುದೇ ನಮ್ಮ ವ್ಯಥೆ.
...
ಅದು ಅಲ್ಲದೆ ಕಾವೇರದಂತೆ ನಾವೀಗ ನಿನ್ನ ಮರೆಯುತ್ತಿದ್ದೇವೆ
ಖಂಡಿತ ಮರೆಯಲಿದ್ದೇವೆ(ಕೋಳವಾಡ ೧೯೭೮ ನವೆಂಬರ್)

ಚುನಾವಣಾ ರಾಜಕಾರಣದ ವ್ಯಂಗ್ಯವಿದ್ದು ನಂತರದಲ್ಲಿ ಬರೆದಿರುವಂತೆ ಕಂಡುಬರುವುದು. ಚುನಾವಣಾ ಸಂಧರ್ಭದ ಪ್ರಭಾವ ಹಾಗೂ ಪ್ರಕ್ರಿಯೆಗಳ ಸ್ವರೂಪಗಳಾಗಿವೆ.

ಚಿಕ್ಕಮಗಳೂರು ಚುನಾವಣೆಯ ಫಲಿತಾಂಶ ರಾಷ್ಟ್ರ ಮತ್ತು ರಾಜ್ಯ ರಾಜಕಾರಣದಲ್ಲಿ ಮಹತ್ವದ ತಿರುವನ್ನು ನೀಡಿತು. ಪತ್ರಿಕಾ ವರದಿ ಮತ್ತು ವ್ಯಂಗ್ಯಚಿತ್ರಗಳ ಮೂಲಕ ಚುನಾವಣಾ ಸ್ವರೂಪ ಹಾಗೂ ಬಿಂಬಿತವಾದ ಪ್ರತಿಕ್ರಿಯೆಗಳನ್ನು ಅವಲೋಕಿಸಲು ಪ್ರಯತ್ನಿಸಲಾಗಿದೆ. ಚಿತ್ರ-೧೭ ಚುನಾವಣಾ ಫಲಿತಾಂಶವು ಸಾಮಾನ್ಯವಾಗಿ ಕಂಡುಬರುವುದು. ಚಿತ್ರ-೧೭ಎನಲ್ಲಿ ಚುನಾವಣಾ ಫಲಿತಾಂಶ ಪ್ರಕಟವಾದ ಮೂರು ವಾರಗಳ ರಾಜಕೀಯ ಬೆಳವಣಿಗೆಯ ಸ್ವರೂಪ ಕಾಣಬಹುದು. ಈ ವ್ಯಂಗ್ಯಚಿತ್ರದ ಪಕ್ಕದಲ್ಲಿ 'ಚಿಕ್ಕಮಗಳೂರಿನ



DECCAN HERALD

INDIRA RACING TO VICTORY

Akali support to Janata Govt to continue

U.A.E. agrees to supply more crude for India

**ಡೆಕ್ಕನ್ ಹೆರಾಲ್ಡ್:** ೧೯೭೮ ನವೆಂಬರ್ ೭ ಮತ್ತು **ಸುಧಾ** ನವೆಂಬರ್ ೨೮ ಪ್ರಕಟವಾದ ಮುಖಪುಟ ಹಾಗೂ ವ್ಯಂಗ್ಯಚಿತ್ರ, **ವ್ಯಂಗ್ಯಚಿತ್ರಕಾರ:** ಬಿ.ವಿ.ರಾಮಮೂರ್ತಿ. ಚಿತ್ರ ಸಂಖ್ಯೆ: [illegible]
(ಚಿತ್ರ-೧೭) (ಚಿತ್ರ-೧೭ಎ)

ಪಾಠ' ಎಂದು ರಾಜಕಾರಣದಲ್ಲಿ ನಡೆಯಬಹುದಾದ ಸಂಗತಿಗಳ ಸಂಪಾದಕೀಯವಿದೆ. ಜನತಾ ಪಕ್ಷ ಆಂತರಿಕ ಕಚ್ಚಾಟ ಬದಿಗಿಟ್ಟರೆ ಮಾತ್ರ ಮುಂದಿನ ಚುನಾವಣೆಯಲ್ಲಿ ಕಾಂಗ್ರೆಸ್(ಐ) ಬೆಳವಣಿಗೆ ತಡೆಯಲು ಸಾಧ್ಯ ಎಂಬ ನಿಲುವು ಕಂಡುಬರುವುದು. ವ್ಯಂಗ್ಯಚಿತ್ರದಲ್ಲಿ ಇಂದಿರಾ ಗಾಂಧಿ ಅವರು ವಿಜಯದ ಸಂಕೇತವನ್ನು ಅಭಿಮಾನಿಗಳಿಗೆ ತೋರಿಸುತ್ತಿರುವರು. ಅವರ ಕೈಯನ್ನು ಮೇಲೆಕ್ಕೆ ಎತ್ತಿ ಹಿಡಿದಿರುವುದು ಹಿಂದೆ ನಿಂತಿರುವ ದೇವರಾಜ ಅರಸು ಅವರು. ಇಂದಿರಾ ಗಾಂಧಿ ಅವರ ರಾಜಕೀಯ ಪುನರಾಗಮನದ ರೂವಾರಿಯಾಗಿ ಅರಸು ಅವರನ್ನು ಬಿಂಬಿಸಿಲಾಗಿದೆ. ಸಂಪಾದಕೀಯದಲ್ಲಿ ರಾಜಕೀಯ ಪಕ್ಷಗಳ ಚರ್ಚೆಯಿದ್ದರೆ ವ್ಯಂಗ್ಯಚಿತ್ರದಲ್ಲಿ ವ್ಯಕ್ತಿ ನೆಲೆಯ ರಾಜಕಾರಣದ ಚರ್ಚೆ ಇದೆ. ಅದರಲ್ಲಿಯೂ ಪ್ರಾದೇಶಿಕ ರಾಜಕಾರಣಿಯು ರಾಷ್ಟ್ರೀಯ ನೆಲೆಯ ರಾಜಕಾರಣಿಯ ಪುನರುತ್ಥಾನಕ್ಕೆ ಕಾರಣಕರ್ತರಾಗಿರುವುದನ್ನು ಚರ್ಚಿಸಲಾಗಿದೆ. ಚುನಾವಣಾ ಫಲಿತಾಂಶದ ನೆಲೆಯಲ್ಲಿ ಸಾಮಾನ್ಯವಾಗಿ ಚರ್ಚಿತವಾದ ವಿಚಾರಗಳೆಂದರೆ 'ಇಂದಿರಾ ಗೆಲವು-ಸಮರ್ಥ ನಾಯಕತ್ವಕ್ಕೆ ಜನರ ಬೇಡಿಕೆಯೇ ?', 'ಇಂದಿರಾ ಯಶಸ್ಸಿನ ಪರಿಣಾಮಗಳು', 'ಶ್ರೀ ದೇವರಾಜ ಅರಸು ಮುತ್ಸದ್ದಿತನ' ಮೊದಲಾದವುಗಳಾಗಿವೆ. ಕಾಂಗ್ರೆಸ್ ಪಕ್ಷದ ಪುನಶ್ಚೇತನ, ರಾಷ್ಟ್ರ ರಾಜಕಾರಣ ಹಾಗೂ ವ್ಯಕ್ತಿ ನೆಲೆಯಲ್ಲಿ ದೇವರಾಜ ಅರಸು ಅವರ ರಾಜಕಾರಣದ ಮುತ್ಸದ್ದಿತನ ಮೊದಲಾದ ವಿಚಾರಗಳು ಪದೇಪದೇ ಚರ್ಚೆಗೆ ಒಳಗಾಗುತ್ತಿದ್ದವು. 'ಚಿಕ್ಕಮಗಳೂರು ಚುನಾವಣೆಯ ಫಲಿತಾಂಶದ ಕೆಲವು ರಾಜಕೀಯ ಬೆಳವಣಿಗೆ ಮುಂಬರುವ ವರ್ಷಗಳಲ್ಲಿ ಕಂಡುಬರುವ ರಾಜಕೀಯ ನೇತಾರರು ಮತ್ತು ಚಳವಳಿಗಳ ಕಡೆ ಕೈ ತೋರಿಸುತ್ತಿದೆ. ಮುಖ್ಯವಾಗಿ ಚುನಾವಣಾ ಪ್ರಚಾರದ ಶೈಲಿ ರಾಷ್ಟ್ರದಾದ್ಯಂತದಿಂದ ಪ್ರಚಾರಕರು, ಯುವಕರ ಆಗಮನ ಆರೋಗ್ಯಕರ ರೀತಿಯಲ್ಲಿ ಪರ್ಯಾಯವಾಗಿ ರೂಪುಗೊಂಡಿಲ್ಲ ಎಂಬುದನ್ನು ಪ್ರತಿಬಿಂಬಿಸುತ್ತಿದೆ. ಕೇಂದ್ರ ಸರ್ಕಾರದ ಗೊಂದಲಗಳು ಮುಂದಿನ ಚುನಾವಣೆಗಳ ಮೇಲೆ ಬೀರುವ ಪರಿಣಾಮಗಳನ್ನು ಸೂಚಿಸುತ್ತಿವೆ. ಎಲ್ಲ ರಾಜಕೀಯ ಪಕ್ಷಗಳು ಪ್ರಜಾಪ್ರಭುತ್ವದ ಕಾರ್ಯವಿಧಾನವನ್ನು ವಿಸ್ತರಿಸಿಕೊಳ್ಳಬೇಕು. ಸರ್ವಾಧಿಕಾರದ ಮೇಲೆ ಪ್ರಜಾಪ್ರಭುತ್ವದ ಉಡುಪನ್ನು ಹಾಕಿರುವಂತೆ ಗೋಚರಿಸುತ್ತಿದೆ. ವಾಸ್ತವ ಫಲಿತಾಂಶಕ್ಕಿಂತ ಉಪಚುನಾವಣೆ ಪ್ರಜಾಪ್ರಭುತ್ವದಲ್ಲಿ ಮೈಲುಗಲ್ಲಾಗಬೇಕು. ಆದರೆ ರಾಷ್ಟ್ರೀಯ ಮತ್ತು ಪ್ರಾದೇಶಿಕ ರಾಜಕಾರಣದಿಂದಾಗಿ ಆಳುವ ಪಕ್ಷದ ನಿಲುವಾಗಿ ಬದಲಾಗುತ್ತಿರುವುದು ವಿಪರ್ಯಾಸ' ಎಂಬ ವಿಶ್ಲೇಷಣೆಯನ್ನು ನಿಯತಕಾಲಿಕೆಗಳಲ್ಲಿ ಕಾಣಬಹುದು.

### ೪.೧.೩.೨.೩. ಕರ್ನಾಟಕ ರಾಜಕಾರಣ: ಸ್ಥಿತ್ಯಂತರಗಳು ಮತ್ತು ಪಕ್ಷ ವಿಭಜನೆ

ಚಿಕ್ಕಮಗಳೂರು ಚುನಾವಣೆಯ ನಂತರ ರಾಷ್ಟ್ರ ರಾಜಕಾರಣ ಮತ್ತು ಕರ್ನಾಟಕದ ಪ್ರಾದೇಶಿಕ ರಾಜಕಾರಣದಲ್ಲಿ ತೀವ್ರತರ ಸ್ಥಿತ್ಯಂತರಗಳು ಕಂಡುಬಂದವು. ಈಗಾಗಲೇ ಚರ್ಚಿಸಿರುವಂತೆ ಜನತಾ ಪಕ್ಷದೊಳಗಿನ ಆಂತರಿಕ ಭಿನ್ನತೆಗಳು ಸರ್ಕಾರದ ಪತನದೆಡೆಗೆ ಮುಖ ಮಾಡಿದವು. ಅದೇ ಸಂದರ್ಭದಲ್ಲಿ ಕಾಂಗ್ರೆಸ್(ಐ) ಪಕ್ಷದೊಳಗೆ ಬಿರುಸಾದ ರಾಜಕಾರಣ ಹಾಗೂ ನಾಯಕತ್ವದ ಪ್ರಶ್ನೆಗಳು ಪ್ರಾಮುಖ್ಯತೆ ಪಡೆದುಕೊಂಡವು. ಇವು ಪ್ರಾದೇಶಿಕ ರಾಜಕಾರಣದಲ್ಲಿನ ಪಕ್ಷ ರಾಜಕಾರಣ ಮತ್ತು ವ್ಯಕ್ತಿ ರಾಜಕಾರಣದ ನೆಲೆಗಳಲ್ಲಿ ಕಂಡುಬಂದ ತಕ್ಷಣದ ಪರಿಣಾಮಗಳು. 'ಕಾಂಗ್ರೆಸ್ ಕ್ರಿಯಾ ಸಮಿತಿ'ಯು ಚಿಕ್ಕಮಗಳೂರು ಚುನಾವಣಾ ಫಲಿತಾಂಶ ಕುರಿತಂತೆ ನೀಡಿದ ವರದಿ ಅನೇಕ ರಾಜಕೀಯ ಬದಲಾವಣೆಗಳನ್ನು ಹುಟ್ಟುಹಾಕಿತ್ತು. 'ಆಡ್ ಮ್ಯಾನ್ ಇನ್ ಇಂದಿರಾ ಕಾಂಗ್ರೆಸ್ ?' ಮತ್ತಿತರ ಪತ್ರಿಕಾ ಲೇಖನಗಳಲ್ಲಿ ಅರಸು ಅವರನ್ನು ರಾಜಕೀಯ ಮುತ್ಸದ್ದಿಯಾಗಿ ಬಿಂಬಿಸತೊಡಗಿದರೆ, ಈ ಹಂತದಿಂದ ಸ್ಥಳೀಯ ಮತ್ತು ರಾಷ್ಟ್ರೀಯ ನೆಲೆಯಲ್ಲಿ ಕೆಲವು ನಾಯಕರು ಅರಸು ಅವರ ನಾಯಕತ್ವದ ಬಗ್ಗೆ ಭಿನ್ನ ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸ ತೊಡಗಿದರು. ಇಂದಿರಾ ಕಾಂಗ್ರೆಸ್‌ನಲ್ಲಿರುವ ಏಕೈಕ ಸ್ವತಂತ್ರ ವ್ಯಕ್ತಿತ್ವದ ಪ್ರಾದೇಶಿಕ ನೆಲೆಯ ರಾಷ್ಟ್ರೀಯ ನಾಯಕನಾಗಿ, ಕಾಂಗ್ರೆಸ್ ಪಕ್ಷದೊಳಗಿರುವ ಹಾಗೂ ಆ ಸಂದರ್ಭದ ರಾಜಕಾರಣದಲ್ಲಿರುವ ಸಮರ್ಥ ನಾಯಕ ಮೊದಲಾದ ನೆಲೆಗಳಲ್ಲಿ ಚರ್ಚೆಗಳು ಅಧಿಕವಾಗಿ ಬರಲಾರಂಭಿಸಿದವು. ಚುನಾವಣಾ ಹಿನ್ನೆಲೆಯಲ್ಲಿ ಉಂಟಾಗಿದ್ದ ಭಿನ್ನಾಭಿಪ್ರಾಯ ಅರಸು ಅವರ ವಿರುದ್ಧ ಆರೋಪದ ಬೆಳವಣಿಗೆಯ ರೂಪದಲ್ಲಿ ಹೊರಹೊಮ್ಮಿತು.

ಚಿಕ್ಕಮಗಳೂರು ಚುನಾವಣೆಯ ತರುವಾಯ ಮಾಧ್ಯಮಗಳು ದೇವರಾಜ ಅರಸು ಅವರನ್ನು ರಾಷ್ಟ್ರೀಯ ನಾಯಕನನ್ನಾಗಿ ಬಿಂಬಿಸಲು ಆರಂಭಿಸಿದ್ದು ಜಾಹೀರಾತು ಮತ್ತು ವ್ಯಂಗ್ಯಚಿತ್ರಗಳಲ್ಲಿ ಪಡೆದುಕೊಂಡ ರೂಪವನ್ನು ಅವಲೋಕಿಸಲು ಪ್ರಯತ್ನಿಸಲಾಗಿದೆ. ಚಿತ್ರ-೧೮೧ರಲ್ಲಿ 'ಇಂಡಿಯನ್ ರೋಡ್ಸ್ ಕಾಂಗ್ರೆಸ್ ತರ್ಟಿನ್ಯೆಂತ್ ಎನ್ಯುಯೆಲ್ ಸೆಷನ್'ಗೆ ಸಂಬಂಧಿಸಿದಂತೆ ರಾಜ್ಯದ ಪ್ರಮುಖ ರಾಜಕಾರಣಿ ಮತ್ತು ಆಡಳಿತಾಧಿಕಾರಿಗಳ ಸಂದೇಶಗಳಿವೆ. ಮೊದಲ ಸಾಲಿನಲ್ಲಿ ಗೋವಿಂದ್ ನರೇನ್(ರಾಜ್ಯಪಾಲ), ದೇವರಾಜ ಅರಸು(ಮುಖ್ಯಮಂತ್ರಿ), ಚಂದ್ರರಾಮ್, ಎಸ್. ಬಂಗಾರಪ್ಪ ಅವರ ಸಂದೇಶಗಳನ್ನು, ಅದರ ಕೆಳಗಿನ ಸಾಲಿನಲ್ಲಿ ಎಸ್. ಎಂ. ಯಾಹ್ಯ, ಆರ್. ಗುಂಡೂರಾವ್, ಶ್ರೀಕಂಠಯ್ಯ ಅವರ ಭಾವಚಿತ್ರ ಮತ್ತು ಸಂದೇಶ ಗಳನ್ನು ಅರ್ಧಪುಟದಲ್ಲಿ ನೀಡಲಾಗಿದೆ. ಆದರೆ ಎಲ್ಲಿಯೂ ಇಂದಿರಾ ಗಾಂಧಿ ಅವರ ಭಾವಚಿತ್ರವಾಗಲಿ, ಸಂದೇಶವಾಗಲಿ ಕಂಡುಬರುವುದಿಲ್ಲ. ಜೊತೆಗೆ ಮುಂದಿನ ಮುಖ್ಯಮಂತ್ರಿಯಾದ ಆರ್. ಗುಂಡೂರಾವ್



ಡೆಕ್ಕನ್ ಹೆರಾಲ್ಡ್ ೧೯೭೮ ಜನವರಿ ೨೯ ಮತ್ತು ಮಾರ್ಚ್ ೧೬ ಪ್ರಕಟಿತ ಜಾಹೀರಾತು ಹಾಗೂ ವ್ಯಂಗ್ಯಚಿತ್ರ. ವ್ಯಂಗ್ಯಚಿತ್ರಕಾರ: ಬಿ.ವಿ.ರಾಮಮೂರ್ತಿ. ಚಿತ್ರ ಸಂಖ್ಯೆ: ೪.೨೬.

(ಚಿತ್ರ-೧೮೧) (ಚಿತ್ರ-೧೮೨)

ಅವರ ಭಾವಚಿತ್ರ ಎರಡನೆ ಸಾಲಿನಲ್ಲಿದೆ. ಯುವ ನಾಯಕ ಎಸ್. ಬಂಗಾರಪ್ಪ ಅವರ ಭಾವಚಿತ್ರ ಮೊದಲ ಸಾಲಿನಲ್ಲಿರುವುದು ರಾಜಕೀಯದೊಳಗಿನ ಬದಲಾವಣೆಗಳನ್ನು ತೆರೆದಿಡುವುದು. ಇದರೊಡನೆ ಚಿತ್ರ-೧೮೨ನಲ್ಲಿ '... ಡೆಡ್ ಹಾರ್ಸ್' ಎಂಬ ವ್ಯಂಗ್ಯಚಿತ್ರವಲ್ಲಿ ಸತ್ತು ಬಿದ್ದಿರುವ ಕುದುರೆ ಗಾಡಿಯನ್ನು ಅರಸು ಅವರು ಮುನ್ನೆಡಸಲು ಪ್ರಯತ್ನಿಸುತ್ತಿರುವರು. ಸತ್ತು ಬಿದ್ದಿರುವ ಕುದುರೆಯ ಪಕ್ಕ 'ಕಾಂಗ್ರೆಸ್ ಯೂನಿಟಿ' ಎಂದಿದ್ದು, ಗಾಡಿಯ ಒಳಗೆ ಇಂದಿರಾ ಗಾಂಧಿ ಅವರು ಮೌನವಾಗಿ ನೋಡುತ್ತಿರುವರು. ಪ್ರಾದೇಶಿಕ ರಾಜಕಾರಣದಲ್ಲಿ ಇಂದಿರಾ ಗಾಂಧಿ ಅವರನ್ನು ನಾಯಕರಾಗಿ ಸರ್ಕಾರ ಮತ್ತು ಪಕ್ಷದ ಕಾರ್ಯಕ್ರಮದಲ್ಲಿ ಬಿಂಬಿಸುವುದು ಕಡಿಮೆಯಾಗುತ್ತಾ ಹೋಗಿದೆ.

"ಐ ಯಾಮ್(ಅಮ್) ನಾಟ್ ಡಿಸರ್ಬಿಂಗ್ ಇಂದಿರಾ: ಅರಸ್ ರೀಇಟರೇಟ್ ಲಾಯಲ್ಟಿ"(ಡೆಕ್ಕನ್ ಹೆರಾಲ್ಡ್ ೧೯೭೯ ಏಪ್ರಿಲ್ ೧೪); "ಅರಸು ಆಳ್ವಿಕೆ ಕುರಿತು ಪುಸ್ತಕ ಬಿಡುಗಡೆ"(ಡೆಕ್ಕನ್ ಹೆರಾಲ್ಡ್ ೧೯೭೯ ಏಪ್ರಿಲ್ ೧೯); "ಅರಸ್, ಇಂದಿರಾ ಕ್ಲ್ಯಾಶ್ ಅಟ್ ಎಐಸಿಸಿ(ಐ) ಮೀಟ್ ಓವರ್ ಸಂಜಯ್ ಇಷ್ಯೂ"(ಡೆಕ್ಕನ್ ಹೆರಾಲ್ಡ್ ೧೯೭೯ ಏಪ್ರಿಲ್ ೨೨); "ಇಂದಿರಾ ಕಾಂಗ್ರೆಸ್‌ನಲ್ಲಿ ಒಡಕು?"(ಪ್ರಜಾಮತ ೧೯೭೯ ಮೇ ೧೩); "ಅರಸ್ – ಇಂದಿರಾ ರಿಫ್ಟ್ ಕಮ್ಸ್ ಅಹೆಡ್"(ಡೆಕ್ಕನ್ ಹೆರಾಲ್ಡ್ ೧೯೭೯ ಮೇ ೧೬) ಮೊದಲಾದ ಪತ್ರಿಕಾ ವರದಿಗಳು ಇಂದಿರಾ ಗಾಂಧಿ ಮತ್ತು ಅರಸು ಅವರ ನಡುವಿನ ಭಿನ್ನಾಭಿಪ್ರಾಯದೊಡನೆ ಪ್ರಾದೇಶಿಕ ರಾಜಕಾರಣದ ಪ್ರಕ್ರಿಯೆಗಳನ್ನು ಬಿಚ್ಚಿಡುವುವು. ಇಂದಿರಾ ಗಾಂಧಿ ಅವರಿಗೆ ನಿಷ್ಠಾವಂತ ಎಂದು ಒತ್ತಿ ಹೇಳಬೇಕಾದ ಸ್ಥಿತಿಯನ್ನು ನೋಡಬಹುದು. ಇದಾದ ಕೆಲವೇ ದಿನಗಳಲ್ಲಿ ಬಿಡುಗಡೆಯಾದ ಕೃತಿಯಲ್ಲಿ ಅರಸು ಆಡಳಿತವನ್ನು ವಿಮರ್ಶಿಸುತ್ತ, ನಾಯಕತ್ವವನ್ನು ಶ್ಲಾಘಿಸುತ್ತಿರುವುದು ಕಂಡುಬರುವುದು. ವ್ಯಕ್ತಿ ನೆಲೆಯ ರಾಜಕಾರಣದಲ್ಲಿ ಕೃತಿ ಹಲವು ಬೆಳವಣಿಗೆಗಳನ್ನು ದಾಖಲಿಸುವುದು. ಇಂದಿರಾ ಗಾಂಧಿ ಮತ್ತು ಅರಸು ಅವರ ನಡುವಿನ ಭಿನ್ನತೆಗೆ ಸಂಜಯ್ ಗಾಂಧಿ ಪ್ರಮುಖ ವಿಷಯವಾಗಿ ಮಾರ್ಪಟ್ಟಿದ್ದರು. ಸಮಕಾಲೀನವಾಗಿ ಇಂದಿರಾ ಕಾಂಗ್ರೆಸ್‌ನಲ್ಲಿ ಒಡಕು ಸಂಭವನೀಯವೇ? ಎಂಬರ್ಥದ ವರದಿಗಳು ಕಂಡುಬರುವುವು.

ತಿಂಗಳೊಳಗೆ ರಾಜಕಾರಣದಲ್ಲುಂಟಾದ ಪ್ರಕ್ರಿಯೆಗಳ ಮೇಲೆ ಸ್ಥೂಲವಾಗಿ ಬೆಳಕು ಬೀರುವುದು. ಇದಕ್ಕೆ ಪೂರಕವಾಗಿ ಕೆಳಗಿನ ವ್ಯಂಗ್ಯಚಿತ್ರಗಳಲ್ಲಿ ರಾಜಕಾರಣದ ವಿಮರ್ಶೆ, ವಿಡಂಬನೆಗಳು ವ್ಯಕ್ತವಾಗಿವೆ. ಮೊದಲ ಮೂರು(ಚಿತ್ರ–೧೯, ಚಿತ್ರ–೧೯ಎ ಮತ್ತು ಚಿತ್ರ–೧೯ಬಿ) ವ್ಯಂಗ್ಯಚಿತ್ರಗಳಲ್ಲಿ ಇಂದಿರಾ ಗಾಂಧಿ ಮತ್ತು ಅರಸು ಈರ್ವರು ಇದ್ದಾರೆ. ಚಿತ್ರ–೧೯ಸಿನಲ್ಲಿ ಇಂದಿರಾ ಗಾಂಧಿ ಮಾತ್ರ ಇದ್ದು, ಕರ್ನಾಟಕ ಎಂಬ ಕುದುರೆಯ




ಡೆಕ್ಕನ್ ಹೆರಾಲ್ಡ್: ೧೯೭೮ ಏಪ್ರಿಲ್ ೧೫, ಏಪ್ರಿಲ್ ೨೭, ಮೇ ೧೩ ಮತ್ತು ೨೦ರ ವ್ಯಂಗ್ಯಚಿತ್ರಗಳು. ವ್ಯಂಗ್ಯಚಿತ್ರಕಾರ: ಬಿ.ವಿ.ರಾಮಮೂರ್ತಿ. ಚಿತ್ರ ಸಂಖ್ಯೆ: ೯.೨೨.
(ಚಿತ್ರ–೧೯) (ಚಿತ್ರ–೧೯ಎ) (ಚಿತ್ರ–೧೯ಬಿ) (ಚಿತ್ರ–೧೯ಸಿ)

ಲಗಾಮು ಕೈಜಾರಿ ಹೋಗಿದೆ. ಚಿತ್ರ–೧೯ಬಿನಲ್ಲಿ ಕಾಂಗ್ರೆಸ್ ಪಕ್ಷದ ಮೇಲಿನ ನಿಯಂತ್ರಣದ ಘರ್ಷಣೆಯನ್ನು ರೂಪವನ್ನು ಚಿತ್ರಿಸುವುದು. ನಂತರದ ವ್ಯಂಗ್ಯಚಿತ್ರ(ಚಿತ್ರ–೧೯ಸಿ) ಪ್ರಾದೇಶಿಕ ರಾಜಕಾರಣದೊಳಗಿನ ಸ್ಥಿತ್ಯಂತರಗಳನ್ನು ಮುಂದಿಡುತ್ತಿದ್ದು ವ್ಯಕ್ತಿ, ಪಕ್ಷ ಮತ್ತು ಪ್ರಾದೇಶಿಕ ರಾಜಕಾರಣದ ವಿವಿಧ ಆಯಾಮಗಳು ಬಿಂಬಿತವಾಗಿವೆ. ಚಿತ್ರ–೧೯ರಲ್ಲಿ ವ್ಯಕ್ತಿ ರಾಜಕಾರಣದ ಬೆಳವಣಿಗೆಯ ಹಂತಗಳನ್ನು ನೋಡಬಹುದು. ಚಿತ್ರ–೧೯ಎ ಮತ್ತು ಚಿತ್ರ–೧೯ಬಿನಲ್ಲಿ ಅರಸು ಮತ್ತು ಇಂದಿರ ಗಾಂಧಿಯವರ ನಡುವೆ ಸಮಾನತೆ ಕಂಡುಬಂದಿದೆ. ಚಿತ್ರ–೧೯ಸಿನಲ್ಲಿ ಕಾಂಗ್ರೆಸ್ ಪಕ್ಷದ ನೆಲೆಯಲ್ಲಿ ಪ್ರಾದೇಶಿಕ ರಾಜಕಾರಣವಾಗಿ ಪರಿವರ್ತನೆಗೊಂಡಿದ್ದು ಕರ್ನಾಟಕ ಎಂಬ ಕುದುರೆ ಮಾತ್ರ ಇದೆ.

ಇಂದಿರಾ ಗಾಂಧಿ ಮತ್ತು ದೇವರಾಜ ಅರಸು ಅವರ ನಡುವಿನ ಬಿಕ್ಕಟ್ಟಿನ ಎರಡನೆಯ ಹಂತವನ್ನು ಕೆಳಗಿನ ವ್ಯಂಗ್ಯಚಿತ್ರಗಳಲ್ಲಿ ಗುರುತಿಸಬಹುದು. ಕಾಂಗ್ರೆಸ್(ಐ) ಒಳಗಿನ ಬಿರುಕು ಅಧಿಕೃತವಾಗಿ ಕಂಡುಬರುವ




ಸುಧಾ: ೧೯೭೮ ಮೇ ೧೩, ಡೆಕ್ಕನ್ ಹೆರಾಲ್ಡ್: ೧೯೭೮ ಜೂನ್ ೮ ಮತ್ತು ೯ ಪ್ರಕಟಿತ ವ್ಯಂಗ್ಯಚಿತ್ರಗಳು. ವ್ಯಂಗ್ಯಚಿತ್ರಕಾರ: ಬಿ.ವಿ.ರಾಮಮೂರ್ತಿ. ಚಿತ್ರ ಸಂಖ್ಯೆ: ೯.೨೫.
(ಚಿತ್ರ–೨೦) (ಚಿತ್ರ–೨೦ಎ) (ಚಿತ್ರ–೨೦ಬಿ)

ಪೂರ್ವ ಮತ್ತು ಸಮಕಾಲೀನ ರಾಜಕಾರಣದ ಪ್ರಕ್ರಿಯೆಗಳ ಚಿತ್ರಣವಿದು. ಮೊದಲೆರಡು(ಚಿತ್ರ–೨೦ ಮತ್ತು ಚಿತ್ರ–೨೦ಎ) ವ್ಯಂಗ್ಯಚಿತ್ರಗಳಲ್ಲಿ ಇಂದಿರಾ ಗಾಂಧಿ ಮತ್ತು ದೇವರಾಜ ಅರಸು ಅವರ ನಡುವೆ ಸಂಜಯ್ ಗಾಂಧಿಯಿದ್ದು, ಇಬ್ಬರ ನಡುವಿನ ಘರ್ಷಣೆಗೆ ಕಾರಣವಾಗಿರುವಂತಿದೆ. ಚಿತ್ರ–೨೦ಬಿನಲ್ಲಿ ಅರಸು ಮತ್ತು ಇಂದಿರಾ ಗಾಂಧಿ ಅವರು ಮಾತ್ರ ಕಂಡುಬಂದು ವೈಯಕ್ತಿಕ ನಿಲುವುಗಳು, ಸ್ಥಾನಮಾನದ ಪ್ರಶ್ನೆಯಾಗಿ ಬದಲಾದಂತೆ ತೋರುವುದು. ಈ ಹೊತ್ತಿಗೆ ಬಿಕ್ಕಟ್ಟು ಅಧಿಕೃತವಾಗಿ ಪ್ರಕಟವಾಗಿತ್ತು. ಪ್ರಾದೇಶಿಕ ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ಸ್ಥಾನ ತ್ಯಜಿಸಲು ಹೈ ಕಮ್ಯಾಂಡ್ ಆಜ್ಞೆ ಹಾಗೂ ಜಗ್ಗದ ಅರಸು ವರ್ತನೆ ಕಡೆಯ

ವ್ಯಂಗ್ಯಚಿತ್ರದ ಮೇಲೆ ಪ್ರಭಾವ ಬೀರಿದೆ. ಭಿನ್ನಾಭಿಪ್ರಾಯಗಳು ವೈಯಕ್ತಿಕ ನೆಲೆಯಲ್ಲಿದ್ದು ಸಂಜಯ್ ಗಾಂಧಿ ಮತ್ತಿತರ ಕಾರಣಗಳು ಮಸುಕಾಗಿವೆ. ಪಕ್ಷದ ಮೇಲಿನ ನಿಯಂತ್ರಣ ಸಾಧಿಸಲು ನೇರ ಸಂಘರ್ಷಪಿದೆ. ೧೯೬೯ರಿಂದ ಕಾಂಗ್ರೆಸ್ ವಿಭಜನೆಗಳಲ್ಲಿ ಹೊರಹೋಗಿದ್ದ ಸಮಸ್ತ ಕಾಂಗ್ರೆಸ್ ಪಕ್ಷಗಳು ಒಟ್ಟಾಗಿ, ಪರ್ಯಾಯ ರಾಜಕೀಯ ಪಕ್ಷ ರೂಪಿಸುವ ಪ್ರಯತ್ನ ೧೯೭೮ರ ವಿಧಾನಸಭಾ ಚುನಾವಣೆಯ ತರುವಾಯ ಅರಸು ಅವರ ನೇತೃತ್ವದಲ್ಲಿ ಜರುಗತೊಡಗಿತ್ತು. ಈ ವಿಭಜನೆಗಳ ಮೇಲೆ ಇಂದಿರಾ ಗಾಂಧಿ ಅವರ ನಾಯಕತ್ವದ ವಿರೋಧಿ ನೆಲೆಯು ನಿರ್ಣಾಯಕವಾಗಿ ಕಾರ್ಯನಿರ್ವಹಿಸಿದೆ. ಕಾಂಗ್ರೆಸ್ ಪಕ್ಷವನ್ನು ಸದೃಡಗೊಳಿಸಲು ಈ ವಲಯದೊಡನೆ ಅರಸು ಅವರು ಸಂಪರ್ಕದಲ್ಲಿದ್ದರು. ಇದೇ ರಾಷ್ಟ್ರೀಯ ರಾಜಕಾರಣದಲ್ಲಿ ಅರಸು ಅವರ ಬೆಳವಣಿಗೆಗೆ ವೇದಿಕೆಯನ್ನು ಒದಗಿಸಿಕೊಟ್ಟಿತ್ತು. ರಾಷ್ಟ್ರದಾದ್ಯಂತ ಅರಸು ಅವರ ಈ ಕ್ರಿಯೆಗೆ ಪೂರಕ ಪ್ರತಿಕ್ರಿಯೆಗಳು ಹರಿದುಬರುವುವು. ಪಶ್ಚಿಮ ಬಂಗಾಳದ ಕಾಂಗ್ರೆಸ್(ಐ), ಮಹಾರಾಷ್ಟ್ರ, ಬಿಹಾರ, ತಮಿಳುನಾಡು, ಆಂಧ್ರ ಪ್ರದೇಶಗಳ ಅತೃಪ್ತ ನಾಯಕರು, ರಾಷ್ಟ್ರೀಯ ನಾಯಕರಾದ ಬರೂಹ ಮತ್ತು ಜನತಾ ಸರ್ಕಾರದ ನಾಯಕರ ಬೆಂಬಲ ದೊರಕುವುವು. ಆದರೆ ಪ್ರಾದೇಶಿಕ ನೆಲೆಯಲ್ಲಿ ಅರಸು ಅವರ ನಾಯಕತ್ವದ ವಿರೋಧಿ ಬೆಳವಣಿಗೆಗಳು ತೀವ್ರತೆಯನ್ನು ಪಡೆಯತೊಡಗಿದವು. ಅಲ್ಲದೆ ಪ್ರಾದೇಶಿಕ ರಾಜಕಾರಣದಲ್ಲಿ ಜನತಾ ಪಕ್ಷದ ಪ್ರತಿಕ್ರಿಯೆಯೂ ಬೇರೆಯದಾಗಿತ್ತು. ರಾಷ್ಟ್ರೀಯ ವಲಯದಲ್ಲಿ ಅರಸು ಅವರ ರಾಜಕಾರಣವನ್ನು ಗಮನಿಸುತ್ತಿದ್ದ ರಾಜಕೀಯ ವಲಯಗಳನ್ನು, ಅದರಲ್ಲಿಯೂ ವಿಶೇಷವಾಗಿ ಕಾಂಗ್ರೆಸ್ ಪಕ್ಷದೊಳಗಿನ ಸಾಂಪ್ರದಾಯಿಕ ನಾಯಕತ್ವವನ್ನು ವಿರೋಧಿಸುತ್ತಿದ್ದ ಬಣಗಳನ್ನು ಮಾತ್ರವೇ ಸಂಪರ್ಕಿಸಲು ಸಾಧ್ಯವಾದದ್ದಾಗಿದೆ.

ಸಮಕಾಲೀನವಾಗಿ ರಾಜ್ಯ ರಾಜಕಾರಣದಲ್ಲಿ ಕೆಪಿಸಿಸಿ(ಐ) ಪ್ರಾದೇಶಿಕ ಸಮಿತಿಯನ್ನು ಜೂನ್ ೧೫ರಂದು ವಿಸರ್ಜಿಸಿ ಬಂಗಾರಪ್ಪ ಅವರನ್ನು ಅಧ್ಯಕ್ಷರನ್ನಾಗಿ ಆರಿಸುವ ಮೂಲಕ ದೇವರಾಜ ಅರಸು ಅವರನ್ನು ಕಾಂಗ್ರೆಸ್ ಪಕ್ಷದೊಳಗೆ ಕಡೆಗಣಿಸಲಾಯಿತು. ಇದು ಪ್ರಾದೇಶಿಕ ನೆಲೆಯಲ್ಲಿ ಪಕ್ಷ ವಿಭಜನೆಗೆ ತಕ್ಷಣದ ಕಾರಣವಾಗಿ ಪರಿಣಮಿಸಿತು. ರಾಜ್ಯದಲ್ಲಿ ವ್ಯಕ್ತಿ ರಾಜಕಾರಣ ಮತ್ತು ಪ್ರಾದೇಶಿಕ ರಾಜಕಾರಣ ಎರಡು ಭಿನ್ನ ಹಿತಾಸಕ್ತಿಯ ವಲಯಗಳಾಗಿ ಕಂಡುಬಂದಿತು. ಪ್ರಾದೇಶಿಕ ನೆಲೆಯಲ್ಲಿ ಪಕ್ಷ ಸಧೃಡ ಪಡಿಸುವ ಕಾರ್ಯ ಮತ್ತು ಕರ್ನಾಟಕ ಸರ್ಕಾರದ ಮೇಲಿನ ಅಧಿಕಾರ ಕಾಂಗ್ರೆಸ್‌ಗೆ(ಐ) ಸೇರಿರುವ ಹಿನ್ನೆಲೆಯಲ್ಲಿ ಅರಸರಿಗೆ ರಾಜೀನಾಮೆ ನೀಡಲು, ಶಾಸಕಾಂಗ ವಿಸರ್ಜಿಸಲು ಸಲಹೆ, ಒತ್ತಡ ವಿರೋಧ ಪಕ್ಷಗಳಿಂದ ಕೇಳಿಬರುವುದು. ಜೊತೆಗೆ ಅರಸು ಅವರ ನಾಯಕತ್ವ ಮುತ್ಸದ್ದಿತನ, ಕಾರ್ಯನೀತಿಯನ್ನು ಬೆಂಬಲಿಸುತ್ತ ಪ್ರಾದೇಶಿಕ ಪಕ್ಷ ಕಟ್ಟುವ ಸಲಹೆಗಳನ್ನು ಪತ್ರಿಕೆಗಳಲ್ಲಿ ಕಾಣಬಹುದು. 'ರಾಷ್ಟ್ರೀಯ ಮತ್ತು ಪ್ರಾದೇಶಿಕ ರಾಜಕಾರಣಗಳೆರಡನ್ನು ಗಮನಿಸಿದರೆ ಸಮಕಾಲೀನವಾಗಿ ಕಂಡುಬಂದ ವ್ಯಕ್ತಿ ರಾಜಕಾರಣ ವೈಯಕ್ತಿಕ ವಿಚಾರಗಳಿಂದ ಕೂಡಿದ್ದು, ಅರಸು ಅವರನ್ನು ಸಂಪೂರ್ಣವಾಗಿ ವಿನಾಶಗೊಳಿಸುವುದು ಮುಖ್ಯ ಉದ್ದೇಶ. ವೈಯಕ್ತಿಕ ರಾಜಕಾರಣದಲ್ಲಿ ಇಬ್ಬರೂ ಮತ್ತೊಬ್ಬರನ್ನು ಸಹಿಸದೆ ದೂರ ಹೋಗಲು ಪೂರ್ತಿಯಾಗಿ ಸಿದ್ಧರಾಗಿದ್ದಾರೆ. ರಾಷ್ಟ್ರೀಯ ನೆಲೆಯಲ್ಲಿ ಪ್ರಾದೇಶಿಕ ರಾಜಕಾರಣ ಹಿಡಿತ ಸಾಧಿಸುತ್ತಿರುವುದು, ಜನತಾ ಪಕ್ಷದೊಂದಿಗೆ ಹೊಂದಾಣಿಕೆ ಮಾಡಿಕೊಂಡರೆ ಎಂಬ ಭಯ ಅಭಿವ್ಯಕ್ತಗೊಂಡ ರೂಪವಿದು. ಈ ಯುದ್ಧ ಜನತಾ ಸರ್ಕಾರದ ವಿರುದ್ಧವೇ ಹೊರತು ಸಂಜಯ್ ಗಾಂಧಿ ಅವರ ನಾಯಕತ್ವವನ್ನು ಪ್ರಶ್ನಿಸಿದ ಅರಸು ಅವರ ವಿರುದ್ಧವಲ್ಲ. ಅರಸರ ಕಾಂಗ್ರೆಸ್ ಪಕ್ಷಗಳನ್ನು ಸಂಘಟಿಸಿ ಪರ್ಯಾಯ ರಾಜಕೀಯ ಸಂಘಟನೆ ಮಾಡುವ ಪ್ರಯತ್ನ ಇಂದಿರಾ ಕಾಂಗ್ರೆಸ್ ಶಕ್ತಿಯನ್ನು ಮುರಿಯಲು ಸಾಧ್ಯವಿದೆ' ಎಂಬ ಚರ್ಚೆಗಳನ್ನು ನಿಯತಕಾಲಿಕೆಗಳಲ್ಲಿ ಕಾಣಬಹುದು.

[illegible] ರಂದು ಪ್ರಕಟವಾದ ಛಾಯಾಚಿತ್ರ. ಆರ್. ಗುಂಡೂರಾವ್, ಇಂದಿರಾ ಗಾಂಧಿ ಮತ್ತು ದೇವರಾಜ ಅರಸು [illegible] ಸಂದರ್ಭ. ಚಿತ್ರ ಸಂಖ್ಯೆ: ೪.೨೯.

ಪ್ರಾದೇಶಿಕ ನೆಲೆಯಲ್ಲಿ ಅರಸು ಅವರು ಎದುರಿಸುತ್ತಿದ್ದ ಸಮಸ್ಯೆ ಹಲವಾರು ವರ್ಷಗಳಿಂದ ಕಾಂಗ್ರೆಸ್ ಪಕ್ಷದೊಳಗೆ ಬಂದ ಪ್ರತಿಭಟನೆ ಅಥವಾ ವಿರೋಧಗಳಿಗೆ ಮತ್ತೊಂದು ಉದಾಹರಣೆ. ಸ್ಥಳೀಯ ಸರ್ಕಾರದ ಫಲವನ್ನು ರಾಷ್ಟ್ರೀಯ ನೆಲೆಯಲ್ಲಿ ವ್ಯಕ್ತಿ ರಾಜಕಾರಣದಲ್ಲಿ ಇಂದಿರಾ ಗಾಂಧಿ ಅವರಿಗೆ ಅರ್ಪಿಸಿದ್ದರು. ಅರಸರು ಹೆಸರಿನಲ್ಲಿ ಇದರ ಮರುವ್ಯಾಖ್ಯಾನ ಬೃಹತ್ ಪ್ರಮಾಣದಲ್ಲಿ ಆರಂಭವಾಗಿತ್ತು. ಪರ್ಯಾಯ ರಾಜಕೀಯ

ಕನ್ನಡಪ್ರಭ: ೧೯೭೮ ಸೆಪ್ಟೆಂಬರ್‌ನಲ್ಲಿ ಪ್ರಕಟವಾದ ಕರ್ನಾಟಕ ಸರ್ಕಾರದ ಜಾಹೀರಾತು.[೨೬] ಚಿತ್ರ ಸಂಖ್ಯೆ:೪.೩೦.

ಸಂಘಟನೆಯನ್ನು ಅರಸು ಅವರು ಕರ್ನಾಟಕದ ಹೊರಗೆ ಮಾಡುತ್ತಿದ್ದರು. ರಾಜ್ಯದ ಪ್ರಾದೇಶಿಕ ರಾಜಕಾರಣ ಮತ್ತು ಸ್ಥಳೀಯ ರಾಜಕಾರಣದೊಡಗಿನ ಸಂಬಂಧಗಳು ಸಂಪರ್ಕ ಕಡಿತಗೊಂಡಿದ್ದು, ಆರಂಭದಲ್ಲೇ ತಿಳಿಯದೆ ಹೋಗಿ ನಿಧಾನವಾಗಿ ಅರಿವಿಗೆ ಬಂದಂತೆ ತೋರುವುದು. ಪ್ರಜಾಪ್ರಭುತ್ವದ ನೆಲೆಯಲ್ಲಿ ವ್ಯಕ್ತಿ ಮತ್ತು ಪಕ್ಷ ರಾಜಕಾರಣ ಪಡೆದ ಸ್ವರೂಪದ ಪ್ರಕ್ರಿಯೆಗಳಾಗಿವೆ. ರಾಷ್ಟ್ರೀಯ ನೆಲೆಯಲ್ಲಿ ಜನತಾ ಸರ್ಕಾರ ಅರಸರನ್ನು ಬೆಂಬಲಿಸುತ್ತಿರುವಂತೆ ಇದೆಯಾದರೂ, ಪ್ರಾದೇಶಿಕವಾಗಿ ಜನತಾ ಪಕ್ಷದ ಮೌನ ಪ್ರಾದೇಶಿಕ ರಾಜಕಾರಣದ ಮತ್ತೊಂದು ಮಗ್ಗುಲನ್ನು ತೆರೆದಿಡುವುದು. ಪ್ರಾದೇಶಿಕ ರಾಜಕಾರಣ ಪಕ್ಷ, ವ್ಯಕ್ತಿಗಳನ್ನು ಮೀರಿ ಕಾರ್ಯನಿರ್ವಹಿಸುವುದನ್ನು ಗುರುತಿಸಬಹುದು. ಇಲ್ಲಿ ಸಮೂಹ ರಾಜಕಾರಣದ ಪಾತ್ರ ಅಪಾರವಾಗಿದೆ.

### ೪.೧.೩.೨.೪. ೧೯೮೦ರ ಲೋಕಸಭಾ ಚುನಾವಣೆ: ರಾಜಕೀಯ ಪಕ್ಷಗಳು ಮತ್ತು ಪ್ರಜಾಪ್ರಭುತ್ವ

"ಕರಣ್ ಬ್ಯಾಕ್ಸ್ ಅರಸ್ ಫಾರ್ ಎ ಥರ್ಡ್ ಫೋರ್ಸ್"(ಕರಣ್‌ಸಿಂಗ್ ೧೯೭೯ ಜುಲೈ ೪); "ಬೆಟರ್ ಛಾನ್ಸಸ್ ನವ್ ಫಾರ್ ಕಾಂಗ್ರೆಸ್ ಯುನಿಟಿ: ಅರಸ್"(ಅರಸ್ ೧೯೭೯ ಜುಲೈ- ೩೧); "ಅರಸ್ ಗವರ್ನ್‌ಮೆಂಟ್ ಮೆಜಾರಿಟಿ ರೆಡ್ಯೂಸಡ್ ಟು ೧೦: ಮೋರ್ ಜಾಯಿನ್ ಕಾಂಗ್(ಐ)"(ಡೆಕ್ಕನ್ ಹೆರಾಲ್ಡ್ ೧೯೭೯ ಆಗಸ್ಟ್ ೨೫); "ಜನತಾ ಪಕ್ಷದ ಜತೆಗೆ ಕರ್ನಾಟಕ ಕಾಂಗ್ರೆಸ್ ಮೈತ್ರಿ ಇಲ್ಲ: ಅರಸು"(ಅರಸು ೧೯೭೯ ಸೆಪ್ಟೆಂಬರ್ ೯); "ಕಾಂಗ್-ಜನತಾ(ಎಸ್) ಅಲೈಯನ್ಸ್ - ಸಿಡಬ್ಲ್ಯೂಸಿ ಡಿಸೈಡ್ಸ್ ಆನ್ ಕಾಮನ್ ಸಿಂಬಲ್ ಅಂಡ್ ಮ್ಯಾನಿಫೆಸ್ಟೋ"(ಡೆಕ್ಕನ್ ಹೆರಾಲ್ಡ್ ೧೯೭೯ ಸೆಪ್ಟೆಂಬರ್ ೧೨); "ಅರಸ್ ಇಲೆಕ್ಟೆಡ್ ಕಾಂಗ್ ಪ್ರೆಸಿಡೆಂಟ್"(ಡೆಕ್ಕನ್ ಹೆರಾಲ್ಡ್ ೧೯೭೯ ಸೆಪ್ಟೆಂಬರ್ ೧೩); "ಅರಸ್ ಡಿಫೆಂಡ್ಸ್ ಅಲೈಯನ್ಸ್"(ಅರಸ್ ೧೯೭೯ ಸೆಪ್ಟೆಂಬರ್ ೧೪); "ಕಾಂಗ 'ಸೋಲ್' ವಿತ್ ಅಸ್: ಅರಸ್"(ಅರಸ್ ೧೯೭೯ ಸೆಪ್ಟೆಂಬರ್ ೧೮) ಮೊದಲಾದ ಪತ್ರಿಕಾ ವರದಿಗಳ ಅವಲೋಕನವು ಕಾಂಗ್ರೆಸ್ ವಿಭಜನೆಯ ರಾಜಕಾರಣದ ಹಲವು ಮುಖಗಳನ್ನು ಮುಖಾಮುಖಿಯನ್ನಾಗಿಸುವುವು. ಕಾಂಗ್ರೆಸ್(ಐ) ವಿಭಜನೆಯು ರಾಜಕೀಯ ಪಕ್ಷಗಳ ಧ್ರುವೀಕರಣಕ್ಕೆ ಮತ್ತೊಮ್ಮೆ ಪೂರಕ ನೆಲೆಯನ್ನು ಒದಗಿಸಿತು. ಸಮಾನಾಂತರವಾಗಿ ಪ್ರಾದೇಶಿಕ ಪಕ್ಷದ(ಕರ್ನಾಟಕ) ಸಂರಚನೆಯು ರೂಪುಗೊಳ್ಳತೊಡಗಿತ್ತು. ಏಕಕಾಲದ ಪ್ರಕ್ರಿಯೆಗಳಾಗಿ ರಾಜ್ಯ ರಾಜಕಾರಣ ಮತ್ತು ರಾಷ್ಟ್ರ ರಾಜಕಾರಣದಲ್ಲಿ ಕಾಣಬರುವ ದೃಶ್ಯಗಳಾಗಿವೆ. ರಾಜ್ಯದಲ್ಲಿ ಕಾಂಗ್ರೆಸ್‌ನಿಂದ(ಐ) ಹೊರಬಂದು ಕರ್ನಾಟಕ ಕಾಂಗ್ರೆಸ್ ಪಕ್ಷ ಸ್ಥಾಪನೆಯ ಮೂಲಕ ಅರಸು ಅವರು ಆಡಳಿತ ನಡೆಸುವುದನ್ನು ನೋಡಬಹುದು. ಜೊತೆಗೇ ರಾಷ್ಟ್ರೀಯ ನೆಲೆಯಲ್ಲಿ ಮೂರನೇ ಪರ್ಯಾಯ ಪಕ್ಷ ರೂಪಿಸುವ ಪ್ರಕ್ರಿಯೆಗಳು ಆರಂಭಗೊಂಡವು. ಮಧ್ಯಂತರ ಲೋಕಸಭಾ ಚುನಾವಣಾ ಘೋಷಣೆಯು ರಾಜಕೀಯ ಪಕ್ಷಗಳ ಧ್ರುವೀಕರಣದಲ್ಲಿ ತೀವ್ರವಾಗಿ ಬದಲಾಗುತ್ತ ಪ್ರಕಟಗೊಳ್ಳುವುವು. ಆರಂಭದಲ್ಲಿ ಕಾಂಗ್ರೆಸ್ ಪಕ್ಷಗಳನ್ನು ಒಗ್ಗೂಡಿಸುವ ಮೂಲಕ ಕಾಂಗ್ರೆಸ್(ಐ)



ಕನ್ನಡಪ್ರಭ: ೧೯೭೯ ಸೆಪ್ಟೆಂಬರ್ ೧೦ ಮತ್ತು ಪ್ರಜಾವಾಣಿ: ಸೆಪ್ಟೆಂಬರ್ ೩೦ ರಾಜಕೀಯ ಪಕ್ಷಗಳ ಸಂರಚನೆ ಹಾಗೂ ಧ್ರುವೀಕರಣದ ಹಿನ್ನೆಲೆ ಪ್ರಕಟವಾದ ಛಾಯಾಚಿತ್ರಗಳು. ಚಿತ್ರ ಸಂಖ್ಯೆ ೪.೩೧

ಮತ್ತು ಜನತಾ ಪಕ್ಷಕ್ಕೆ ಮೂರನೇ ಪರ್ಯಾಯ ರಾಜಕೀಯ ಪಕ್ಷ ಬೆಳೆಸುವ ಚಿಂತನೆ, ಪ್ರಯತ್ನಗಳು ಅಧಿಕಾರ ಸಾಂಸ್ಥೀಕರಣದ ರೂಪತಳೆಯುವುದು ಕಂಡುಬರುವುದು. ಪ್ರಜಾಪ್ರಭುತ್ವದಲ್ಲಿ ರಾಜಕೀಯ ಪಕ್ಷಗಳ ಪಾತ್ರ ಕುರಿತಂತೆ ಸಮಕಾಲೀನವಾಗಿ ಅರಸು ಅವರ ಹೇಳಿಕೆಗಳು ಇದನ್ನೆ ಖಚಿತಪಡಿಸುವುದು. ಅದೇ ಸಂದರ್ಭದಲ್ಲಿ ಪ್ರಾದೇಶಿಕ ರಾಜಕಾರಣದಲ್ಲಿ ನೆಲೆ ಕಳೆದುಕೊಳ್ಳುತ್ತಿರುವ ಲಕ್ಷಣಗಳನ್ನು ಕರ್ನಾಟಕ ಕಾಂಗ್ರೆಸ್ಸಿನಿಂದ ಶಾಸಕರು ಕಾಂಗ್ರೆಸ್(ಐ)ಗೆ ವಲಸೆ ಹೋಗುವ ಪ್ರಕ್ರಿಯೆಯು ದೊಡ್ಡರೂಪದಲ್ಲಿ ಕಾಣಬಹುದು. ಇದೇ ಸಂದರ್ಭದಲ್ಲಿ ಮಧ್ಯಂತರ ಚುನಾವಣಾ ಘೋಷಣೆಯಿಂದ ರಾಜಕೀಯ ಪಕ್ಷಗಳ ಧ್ರುವೀಕರಣವು ಅಧಿಕಾರದ ಸಾಂಸ್ಥೀಕರಣದ ನೆಲೆಯಲ್ಲಿ ಸಂಕೀರ್ಣ ರೂಪ ಪಡೆಯುವುದನ್ನು ನೋಡಬಹುದು. ಈ ಹಿನ್ನೆಲೆಯಲ್ಲಿ ಕಾಂಗ್ರೆಸ್(ಯು)[೨೭] ಜನತಾ ಪಕ್ಷ ಮತ್ತು ಕಾಂಗ್ರೆಸ್(ಐ)ಗೆ ಪರ್ಯಾಯ ರಾಜಕೀಯ ಪಕ್ಷವಾಗುವುದೆಂಬ ನಿರೀಕ್ಷೆ ಹುಸಿಯಾಗುವುದು. ಬದಲಾಗಿ ಜನತಾ ಪಕ್ಷದೊಡನೆ ಹೊಂದಾಣಿಕೆ ಮಾಡಿಕೊಳ್ಳುವ ಹಾಗೂ ಅದನ್ನು ಸಮರ್ಥಿಸಿಕೊಳ್ಳುವ ಕ್ರಿಯೆ ಆರಂಭಗೊಳ್ಳುವುದನ್ನು ನೋಡಬಹುದು. ನಿಜವಾದ ಕಾಂಗ್ರೆಸ್ ಪಕ್ಷ 'ಕಾಂಗ್ರೆಸ್(ಯು)' ಎಂದು ಒತ್ತು ಕೊಡುತ್ತಿರುವುದು ಈ ದಿಸೆಯಲ್ಲೇ ಎಂಬುದನ್ನು ಗಮನಿಸಬೇಕಾಗಿದೆ. ಇದು

ಜನಸಮೂಹದ ಮೇಲೆ ಕಾಂಗ್ರೆಸ್ ಪಕ್ಷಕ್ಕಿದ್ದ ನಿಯಂತ್ರಣ, ಅದರ ಫಲಗಳನ್ನು ವಿಭಜನೆಯ ಕಾರಣಕ್ಕೆ ತೊರೆಯಲು ಕಂಡುಬರುವ ನಿರಾಕರಣೆ. ೧೯೬೯ ರಿಂದ ೧೯೭೯ರವರೆಗೆ ಕಾಂಗ್ರೆಸ್ ಪಕ್ಷ ವಿಭಜನೆಯಿಂದ ಉಂಟಾದ ಪಕ್ಷಗಳೆಲ್ಲವೂ ನಿಜವಾದ ಕಾಂಗ್ರೆಸ್ ಪಕ್ಷ ತಮ್ಮದೆಂದು, ಪಕ್ಷದ ಮೇಲಿನ ವಾರಸುದಾರಿಕೆಗಾಗಿ ನಡೆದಿರುವ ವಿವಾದಗಳನ್ನು ನೋಡಬಹುದು.

**ವೈ.ಬಿ.ಚವ್ಹಾಣ್, ಸ್ವರ್ಣಸಿಂಗ್, ಹಿತೇಂದ್ರ ದೇಸಾಯಿ ಅವರೊಂದಿಗೆ ಅರಸು ಅವರು**



ಕೃಪೆ: ಡೆಕ್ಕನ್ ಹೆರಾಲ್ಡ್, ಎಂ.ಜಿ.ರೋಡ್, ಬೆಂಗಳೂರು. ಚಿತ್ರ ಸಂಖ್ಯೆ: ೪.೩.೨.

"ತತ್ವ ತರ್ಕಗಳಿಗೆ ದೂರವಾದ ಪಕ್ಷಗಳ ಹೊಂದಾಣಿಕೆ"(ಪ್ರಜಾಮತ ೧೯೭೯ ನವೆಂಬರ್ ೧೧); "ಮತ್ತೆ ಐವರು ಅರಸು ಮಂತ್ರಿಮಂಡಲ ಸೇರಿದರು"(ಡೆಕ್ಕನ್ ಹೆರಾಲ್ಡ್ ೧೯೭೯ ನವೆಂಬರ್ ೧೪); "ಅರಸು ಮಂತ್ರಿಮಂಡಲ ವಿಸ್ತರಣೆ"(ಡೆಕ್ಕನ್ ಹೆರಾಲ್ಡ್ ೧೯೭೯ ನವೆಂಬರ್ ೧೫); "ಇಂದಿರಾ ಗಾಂಧಿ ನೀಡಲಿರುವ ಸುಭದ್ರ ಸರ್ಕಾರ –ಇದರ ಅರ್ಥವೇನು ?"(ಪ್ರಜಾಮತ ೧೯೭೯ ನವೆಂಬರ್ ೨೧); "ಡೋಂಟ್ ಗೊ ಬೈ ನೇಮ್ಸ್, ಅರಸ್ ಟೆಲ್ಸ್ ವೋಟರ್ಸ್"(ಅರಸ್: ೧೯೭೯ ಡಿಸೆಂಬರ್ ೪); "ಕಾಂಗ್ರೆಸ್ – ಯು ನಾಟ್ ಟು ಬ್ಯಾಕ್ ಜನತಾ, ಕಾಂಗ್(ಐ) ಇನ್ ಯು.ಪಿ"(ಡೆಕ್ಕನ್ ಹೆರಾಲ್ಡ್: ೧೯೭೯ ಡಿಸೆಂಬರ್ ೧೯) ಮೊದಲಾದ ವರದಿಗಳಲ್ಲಿ ೧೯೮೦ರ ಲೋಕಸಭಾ ಚುನಾವಣಾ ಪೂರ್ವದ ಪ್ರಚಾರಕಾರ್ಯ, ಅದಕ್ಕೆ ಪ್ರಾದೇಶಿಕ ಮತ್ತು ರಾಷ್ಟ್ರ ರಾಜಕೀಯದಲ್ಲಿ ಕಂಡುಬಂದ ಪ್ರತಿಕ್ರಿಯೆಗಳನ್ನು ಅನಾವರಣಗೊಳಿಸುವುವು. ಈ ಕೆಳಗಿನ ವ್ಯಂಗ್ಯಚಿತ್ರ



ಡೆಕ್ಕನ್ ಹೆರಾಲ್ಡ್: ೧೯೭೯ ನವೆಂಬರ್ ೧೮ ಮತ್ತು ಕನ್ನಡಪ್ರಭ: ೧೯೭೯ ನವೆಂಬರ್ ೨೫ ಪ್ರಕಟಿತ ವ್ಯಂಗ್ಯಚಿತ್ರ, ವ್ಯಂಗ್ಯಚಿತ್ರಕಾರ: ಬಿ.ವಿ.ರಾಮಮೂರ್ತಿ. ಚಿತ್ರ ಸಂಖ್ಯೆ: ೪.೩.೩.

(ಚಿತ್ರ–೨೧) (ಚಿತ್ರ–೨೧ಎ)

ಗಳು ಮತ್ತು ಜಾಹೀರಾತುಗಳು ರಾಜಕಾರಣದ ಪ್ರಕ್ರಿಯೆಗಳ ಸ್ವರೂಪವನ್ನು ತೆರೆದಿಡುವುವು. ಚಿತ್ರ-೨೧ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್(ಐ) ಜೊತೆಗಿನ ರಾಜಕೀಯ ಪಕ್ಷಗಳ ಹೊಂದಾಣಿಕೆಗಳಿಗೆ ಸಮೂಹ ಮಾಧ್ಯಮದ ಪ್ರತಿಕ್ರಿಯೆಯ ಚಿತ್ರಣವಿದು. ೧೯೭೭ರ ಲೋಕಸಭಾ ಚುನಾವಣಾ ಘೋಷಣೆಯ ಸಂದರ್ಭ ದಲ್ಲಿ ಕಾಂಗ್ರೆಸ್ಸಿನಿಂದ ಜಗಜೀವನ್ ರಾಂ, ಬಹುಗುಣ ಮತ್ತಿತರ ನಾಯಕರು ಹೊರಬಂದು 'ಕಾಂಗ್ರೆಸ್ ಫಾರ್ ಡೆಮಾಕ್ರೆಸಿ'ಯನ್ನು ನಿರ್ಮಿಸಿದ್ದರು. ಚುನಾವಣೆಯ ನಂತರ ಈ ಪಕ್ಷ ಜನತಾ ಪಕ್ಷದಲ್ಲಿ ವಿಲೀನವಾಗಿತ್ತು. ವ್ಯಂಗ್ಯಚಿತ್ರದಲ್ಲಿ ೧೯೮೦ರ ಲೋಕಸಭಾ ಚುನಾವಣೆಯ ಹೊತ್ತಿಗೆ ತುರ್ತುಪರಿಸ್ಥಿತಿಯ ಕೆಸರಿನ ಮೇಲೆ ಕಾಂಗ್ರೆಸ್ ಫಾರ್ ಡೆಮಾಕ್ರೆಸಿ ಎಂಬ ಬಟ್ಟೆ ಹಾಸಿ, ಇಂದಿರಾ ಗಾಂಧಿ ಅವರನ್ನು ಸಾಮ್ರಾಜ್ಞಿ ಮಾಡುವ ಪ್ರಯತ್ನವಿದೆ. ಚಿತ್ರ-೨೧ಎನಲ್ಲಿ ಹಿಂದಿನದನ್ನೆಲ್ಲ ಮರೆತು ಜಿಡ್ಡೋಣ ಎಂದು ಬಹುಗುಣ ಅವರು ಇಂದಿರಾ ಗಾಂಧಿಯವರೊಡನೆ ಮಾತುಕಥೆ ನಡೆಸುತ್ತಿದ್ದರೆ, ಹಿಂದೆ ಸಂಜಯ್ ಗಾಂಧಿ ಅವರು ಬಾಂಬ್ ಇಟ್ಟು ಸಿಡಿಸಲು ಹೋಗುತ್ತಿರುವ ಚಿತ್ರಣವಿದೆ. ಚುನಾವಣಾ ಪ್ರಚಾರ, ಸ್ಪರ್ಧೆಯನ್ನು ರಾಜಕೀಯ ಪಕ್ಷಗಳು ಹಾಗೂ ನೇತಾರರು ಆಟದಂತೆ ಪರಿವರ್ತಿಸಿರುವುದನ್ನು ಕೆಳಗಿನ ವ್ಯಂಗ್ಯಚಿತ್ರಗಳು ಮತ್ತು ಜಾಹೀರಾತುಗಳು ಪ್ರತಿ ಬಿಂಬಿಸುತ್ತಿವೆ. ಚಿತ್ರ-೨೨ರಲ್ಲಿ ಕಾಂಗ್ರೆಸ್ ಪಕ್ಷಗಳ ವೋಟ್ ಫಾರ್ ಕಾಂಗ್ರೆಸ್(ಯು) ಮತ್ತು ವೋಟ್ ಫಾರ್




ಡೆಕ್ಕನ್ ಹೆರಾಲ್ಡ್, [illegible] ಡಿಸೆಂಬರ್ [illegible] ಮತ್ತು [illegible] ಪ್ರಕಟಿತವಾದ ವ್ಯಂಗ್ಯಚಿತ್ರ ಮತ್ತು ಜಾಹೀರಾತು. ವ್ಯಂಗ್ಯಚಿತ್ರಕಾರ: ಬಿ.ವಿ.ರಾಮಮೂರ್ತಿ. ಚಿತ್ರ ಸಂಖ್ಯೆ ೪.೩೪.

(ಚಿತ್ರ-೨೨) (ಚಿತ್ರ-೨೨ಎ) (ಚಿತ್ರ-೨೨ಬಿ)

ಕಾಂಗ್ರೆಸ್(ಐ) ಎಂಬ ಚುನಾವಣಾ ಪ್ರಚಾರದ ಆಣಕವಿದು. ಪಕ್ಷದೊಳಗಿನ ವ್ಯಕ್ತಿ ನೆಲೆಗಳನ್ನು 'ಯು' ಮತ್ತು 'ಐ' ಎಂಬ ಸರ್ವನಾಮದ ಮೂಲಕ ಪ್ರಥಮ ಹಾಗೂ ದ್ವಿತೀಯ ಪುರುಷದ ಚೌಕಟ್ಟಿನಲ್ಲಿ ರಾಜಕಾರಣದ ವಿಮರ್ಶೆ, ವಿಡಂಬನೆಯಾಗಿದೆ. ಚಿತ್ರ-೨೨ಎನಲ್ಲಿ ಚುನಾವಣೆಯು ಪ್ರಜಾಪ್ರಭುತ್ವದ ಆಡಳಿತಕ್ಕೆ ಮೂಲ ಪ್ರಕ್ರಿಯೆ ನಡೆಯುವ ವಾತಾವರಣವಾಗಿ ರೂಪುಗೊಳ್ಳದೆ ಆಟದಂತಾದ ವಸ್ತುಸ್ಥಿತಿಯನ್ನು ನಿರ್ಮಿಸಿ ರುವುದಾಗಿದೆ. ಪ್ರಮುಖ ನಾಯಕರು ಚುನಾವಣಾ ಆಟಕ್ಕೆ ಸಿದ್ಧರಾಗಿರುವುದರ ಆಣಕವಿದು. ಚಿತ್ರ-೨೨ಬಿ ಚುನಾವಣಾ ರಾಜಕಾರಣದ ಉಪಧಾರೆಯಲ್ಲಿ ಕಂಡುಬಂದ ಜಾಹೀರಾತು. ಚುನಾವಣೆಗಿಂತ ಕೆಲವು ದಿನಗಳ ಮೊದಲು ಹಿರಿಯ ರಾಜಕಾರಣಿಯೊಬ್ಬರು ಕ್ಷೇತ್ರದ ಜನರಿಗೆ ಮಾಡಿರುವ ಮನವಿ ಆಗಿದೆ. ಜಿ. ಎಲ್. ಗೌಡರಿಗೆ ಮತಹಾಕಬೇಕೆಂಬುದು ಜಾಹೀರಾತಿನ ಸಾರರೂಪವಾಗಿದೆ. ಯಾವ ಪಕ್ಷದ ಪರವು ಪ್ರಚಾರ ಕೈಗೊಳ್ಳದೇ ಚಿತ್ರದುರ್ಗ ಕ್ಷೇತ್ರವನ್ನಷ್ಟೇ ಗಮನಿಸಿ ವ್ಯಕ್ತಿ ನೆಲೆಯಲ್ಲಿ ರೂಪತಳೆದ ಜಾಹೀರಾತು. ಅನಾರೋಗ್ಯದ ಕಾರಣ ಪ್ರಚಾರಕ್ಕೆ ಬರಲಾಗದೇ ಪತ್ರಿಕೆಯ ಮೂಲಕ ಮನವಿ ಮಾಡುತ್ತಿರುವುದಾಗಿ ಹಿರಿಯ ನಾಯಕರಾದ ಎಸ್. ನಿಜಲಿಂಗಪ್ಪ ಅವರು ವಿನಂತಿಸಿ ಕೊಳ್ಳುತ್ತಿರುವುದನ್ನು ನೋಡಬಹುದು.

೧೯೭೭ರ ಲೋಕಸಭಾ ಚುನಾವಣೆಯಲ್ಲಿ ಮತದಾನದ ಮೂಲಕ ರಾಜಕೀಯ ವ್ಯವಸ್ಥೆಯನ್ನು ಬದಲಾಯಿಸಬಹುದು ಎಂಬ ಸಕಾರಾತ್ಮಕ ಆಲೋಚನೆಗಳು ಕಂಡುಬರುತ್ತಿದ್ದವು. ಪ್ರಜಾಪ್ರಭುತ್ವದ ಅಡಿಗಲ್ಲು

ಚುನಾವಣೆ ಎಂದು ಮತದಾನದ ಪರ ಒಲವನ್ನು ಹೆಚ್ಚಿಸಿತ್ತು. ೧೯೮೦ರ ಲೋಕಸಭಾ ಚುನಾವಣೆಯ ವೇಳೆಗಾಗಲೇ ಇಂತಹ ಆಲೋಚನೆಗಳು ಕಣ್ಮರೆಯಾಗಿ ಸಮಾಜದ ಕೆಲವು ವಲಯಗಳಲ್ಲಿ ನಕಾರಾತ್ಮಕ ನಿಲುವುಗಳು ತಳೆದರೂಪವೊಂದರ ಮೇಲೆ ಕೆಳಗಿನ ಛಾಯಾಚಿತ್ರ ಬೆಳಕು ಬೀರುವುದು. ಕನಕಪುರದ ಕೆಲವು



Some voters seem to be averse to voting in the coming elections as is evidenced by the banner put up by residents of a certain street in Kanakapura. The banner (in translation) reads: "A request to the candidates. There are no voters in this street."

ಡೆಕ್ಕನ್ ಹೆರಾಲ್ಡ್: ೧೯೭೯ ಡಿಸೆಂಬರ್ ೨೮. ಚಿತ್ರ ಸಂಖ್ಯೆ: ೪.೩೫.

ಓಣಿಗಳಲ್ಲಿ 'ಉಮೇದುವಾರರಲ್ಲಿ ವಿನಂತಿ. ಈ ಬೀದಿಯಲ್ಲಿ ಓಟರುಗಳು ಇಲ್ಲ' ಎಂದಿರುವ ಬ್ಯಾನರ್‌ಗಳಿವು. ತುರ್ತುಪರಿಸ್ಥಿತಿಯೋತ್ತರದ ರಾಜಕಾರಣ ಮತ್ತು ಮಧ್ಯಂತರ ಚುನಾವಣೆಯನ್ನು ಘೋಷಿಸಬೇಕಾದ ರಾಜಕೀಯ ಅನಿವಾರ್ಯತೆ ಮತದಾರರಲ್ಲಿ ಹುಟ್ಟುಹಾಕಿದ್ದ ಭ್ರಮನಿರಸನಕ್ಕೆ ಹಿಡಿದ ಕನ್ನಡಿ ಇದಾಗಿದೆ. ಇದರಿಂದಾಗಿ ಮತದಾನದ ಪ್ರಮಾಣ ಶೇ. ೫೫ಕ್ಕೆ ಇಳಿದಿರುವುದನ್ನು ನೋಡಬಹುದು.




ಕನ್ನಡಪ್ರಭ: ೧೯೮೦ ಜನವರಿ ೭ ಮತ್ತು ೮ ರಂದು ಪ್ರಕಟವಾದ ಪತ್ರಿಕೆಯ ಮುಖಪುಟ. ಚಿತ್ರಸಂಖ್ಯೆ ೪.೩೬.

೧೯೮೦ರ ಲೋಕಸಭಾ ಚುನಾವಣೆಯಲ್ಲಿ ಇಂದಿರಾ ಗಾಂಧಿ ಅವರ ನೇತೃತ್ವದ ಕಾಂಗ್ರೆಸ್ ಪಕ್ಷ ಬಹುಮತ ಪಡೆಯಲು ಯಶಸ್ವಿಯಾಯಿತು. ೧೯೭೭ ರಿಂದ ೧೯೮೦ರವರೆಗೆ ಕಂಡುಬಂದ ಸರ್ಕಾರದ ಅಸ್ಥಿರತೆ, ಸದೃಢ ಸರ್ಕಾರವನ್ನು ಬಯಸಿದಂತಿತ್ತು. ಈ ಚುನಾವಣೆಯ ನಂತರ ರಾಜಕೀಯ ಪಕ್ಷಗಳೊಳಗೆ ಮತ್ತೊಮ್ಮೆ ಬೃಹತ್ ಪ್ರಮಾಣದ ಸಂಚಲನ ಕಂಡುಬಂದಿತು. ಕಾಂಗ್ರೆಸ್(ಯು) ಕರ್ನಾಟಕದಲ್ಲಿ ಒಂದು ಕ್ಷೇತ್ರದಲ್ಲಿ ಗೆಲುವು ಸಾಧಿಸಲು ಸಾಧ್ಯವಾಗದಿದ್ದರೂ, ರಾಷ್ಟ್ರದಾದ್ಯಂತ ೧೩(ಶೇ.೫.೨೮ ಮತದಾನ) ಕ್ಷೇತ್ರಗಳಲ್ಲಿ ವಿಜಯ ಗಳಿಸಿತ್ತು. ಬಿಹಾರದಲ್ಲಿ ೧೬ ಅಭ್ಯರ್ಥಿಗಳಲ್ಲಿ ನಾಲ್ವರು ಜಯ ಗಳಿಸಿದ್ದರು. ಆಂಧ್ರಪ್ರದೇಶ, ಗೋವಾ, ದಾಮನ್ ಮತ್ತು ದಿಯು, ಜಮ್ಮು ಮತ್ತು ಕಾಶ್ಮೀರ, ಮಹಾರಾಷ್ಟ್ರ, ರಾಜಸ್ಥಾನದಲ್ಲಿ ತಲಾ ಒಂದೊಂದು

ಕ್ಷೇತ್ರದಲ್ಲಿ ಕಾಂಗ್ರೆಸ್(ಯು) ಗೆಲುವು ಕಂಡಿತ್ತು. ಕೇರಳದಲ್ಲಿ ೩ ಕ್ಷೇತ್ರಗಳಲ್ಲಿ ಆರಿಸಿಬಂದಿತ್ತು. ಜನತಾ ಪಕ್ಷ ಮತ್ತು ಜನತಾ ಪಕ್ಷ(ಎಸ್) ಕ್ರಮವಾಗಿ ೩೧, ೪೧ ಕ್ಷೇತ್ರಗಳಲ್ಲಿ ವಿಜಯ ಗಳಿಸಿತ್ತು. ಪ್ರಬಲ ರಾಜಕೀಯ

**ಬಾಬು ಜಗಜೀವನ್ ರಾಮ್ ಅವರೊಂದಿಗೆ ದೇವರಾಜ ಅರಸು ಅವರು**



ಕೃಪೆ: ವಾರ್ತಾ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು. ಚಿತ್ರ ಸಂಖ್ಯೆ ೯.೭.೭.

ಪಕ್ಷಗಳಾಗಿ ಗುರುತಿಸಲ್ಪಟ್ಟ ಕಾಂಗ್ರೆಸ್(ಯು) ಮತ್ತು ಜನತಾ ಪಕ್ಷಗಳು ಹೊಂದಿದ್ದ ಚುನಾವಣಾ ಹೊಂದಾಣಿಕೆಗಳು ತಮ್ಮ ನೆಲೆಯನ್ನು ಕಳೆದುಕೊಳ್ಳತೊಡಗಿತ್ತು. ಪರಿಣಾಮವಾಗಿ ರಾಜಕೀಯ ಪಕ್ಷಗಳ ಧೃವೀಕರಣ ಮತ್ತು ರಾಜಕಾರಣಿಗಳ ಪಕ್ಷಾಂತರ ಹೊಸ ರೂಪದಲ್ಲಿ, ತೀವ್ರವಾಗಿ ೧೯೮೧ರ ಕೊನೆಯವರೆಗೆ ಕಂಡುಬಂದಿತು. ಬಾಬು ಜಗಜೀವನ್ ರಾಮ್ ಅವರು ಚುನಾವಣೆಯ ನಂತರ ಜನತಾ ಪಕ್ಷ ತೊರೆದು ಕಾಂಗ್ರೆಸ್(ಯು) ಸೇರುವರು. ಆರಂಭದಿಂದಲೇ ಇದ್ದ ಸಣ್ಣ ಪುಟ್ಟ ಭಿನ್ನಾಭಿಪ್ರಾಯಗಳು ೧೯೮೧ರ ಹೊತ್ತಿಗೆ ದೇವರಾಜ ಅರಸು ಅವರು ಕಾಂಗ್ರೆಸ್(ಯು) ತೊರೆಯಲು ಪೂರಕವಾಯಿತು. ಬಾಬು ಜಗಜೀವನ್ ರಾಮ್ ಅವರು ಸಹ ಪಕ್ಷದಿಂದ ಹೊರಬಂದು ತಮ್ಮದೇ ಆದ ಹೊಸ ಕಾಂಗ್ರೆಸ್ ಪಕ್ಷ ನಿರ್ಮಿಸುತ್ತಾರಾದರೂ, ದೀರ್ಘಕಾಲ ಉಳಿಯುವುದಿಲ್ಲ. ೧೯೮೬ರಲ್ಲಿ ಪಕ್ಷ ತನ್ನ ಅಸ್ತಿತ್ವ ಕಳೆದುಕೊಳ್ಳುವುದು.

ಚುನಾವಣಾ ಪೂರ್ವದಲ್ಲಿ ಹಲವಾರು ಕಾರಣಗಳಿಂದ ಕುತೂಹಲ ಉಂಟುಮಾಡಿದ್ದ ಹಾಗೂ ಭರವಸೆಯನ್ನು ಹುಟ್ಟುಹಾಕಿದ್ದ ಕಾಂಗ್ರೆಸ್(ಯು) ಪಕ್ಷ ಅನೇಕ ರೂಪಾಂತರಗಳಿಗೆ ಸಾಕ್ಷಿಯಾಯಿತು. ಈ ಸಂದರ್ಭದಲ್ಲಿದ್ದ ಕಾಂಗ್ರೆಸ್(ಯು) ಒಳಗಿದ್ದ ಇನ್ನಿತರ ಪ್ರಮುಖ ನಾಯಕರುಗಳಾದ ಯಶವಂತ್ ರಾವ್ ಚವ್ಹಾಣ್, ದೇವ್ ಪ್ರಿಯರಂಜನ್ ದಾಸ್ ಮುನ್ಷಿ ಮತ್ತು ಕೆ. ಪಿ. ಉನ್ನಿಕೃಷ್ಣನ್ ಅವರುಗಳ ನಡುವಿನ ಭಿನ್ನಾಭಿಪ್ರಾಯ ಪಕ್ಷವನ್ನು ಶಿಥಿಲಗೊಳಿಸತೊಡಗಿತ್ತು. ೧೯೮೧ರ ಕೊನೆಯ ವೇಳೆಗೆ ದೇವರಾಜ್ ಅರಸ್ ಅವರು ಕಾಂಗ್ರೆಸ್(ಯು) ತೊರೆದು ರಾಷ್ಟ್ರ ರಾಜಕಾರಣಕ್ಕೆ ವಿದಾಯ ಹಾಡುವರು. ಮುಂದೆ ಕ್ರಾಂತಿ ರಂಗ ಎಂಬ ಪ್ರಾದೇಶಿಕ ಪಕ್ಷ ಬೆಳೆಸುವ ಕಾರ್ಯದಲ್ಲಿ ತೊಡಗಿಕೊಳ್ಳುವರು. ಯಶವಂತ್ ರಾವ್ ಚವ್ಹಾಣ್, ಬ್ರಹ್ಮಾನಂದ ರೆಡ್ಡಿ, ಚಿದಂಬರಂ ಸುಬ್ರಮಣ್ಯಂ ಅವರುಗಳು ಕಾಂಗ್ರೆಸ್(ಐ) ಸೇರಿದರೆ, ಕೇರಳದ ಎ. ಕೆ. ಅಂಟೋಣಿ ಅವರು ಕಾಂಗ್ರೆಸ್ಸಿನಿಂದ(ಯು) ಬೇರ್ಪಟ್ಟು ಕಾಂಗ್ರೆಸ್(ಎ) ನಿರ್ಮಿಸುವರು. ಶರದ್ ಪವಾರ್ ಅವರು ೧೯೮೧ರ ಅಕ್ಟೋಬರ್‌ನಲ್ಲಿ ಕಾಂಗ್ರೆಸ್(ಯು) ಪಕ್ಷದ ಅಧ್ಯಕ್ಷರಾದ ತರುವಾಯ

ಇಂಡಿಯನ್ ಕಾಂಗ್ರೆಸ್(ಸೋಷಿಯಲಿಸ್ಟ್) ಆಗಿ ಪಕ್ಷದ ಹೆಸರು ಬದಲಾಗುವುದು. ಮುಂದೆ ೧೯೯೧ರವರೆಗೆ ರಾಷ್ಟ್ರೀಯ ಪಕ್ಷವಾಗಿದ್ದು, ೧೯೯೬ರ ಲೋಕಸಭಾ ಚುನಾವಣೆ ವೇಳೆಗೆ ಪ್ರಾದೇಶಿಕ ಪಕ್ಷವಾಗಿ ಗುರುತಿಸಲ್ಪಡುವುದು. ಈ ಎಲ್ಲ ಬೆಳವಣಿಗೆಗಳು ೧೯೮೦ರ ಲೋಕಸಭಾ ಚುನಾವಣೆಯ ನಂತರದಲ್ಲಿ ರಾಜಕಾರಣ ಮತ್ತು ಸಾಮಾಜಿಕ ವಲಯದಲ್ಲಿ ಮುಂದುವರೆದ ಬಿಕ್ಕಟ್ಟನ್ನು ಸೂಚಿಸುವುದು.

**ಕಾಂಗ್ರೆಸ್(ಯು) ಪಕ್ಷದ ಕಾರ್ಯಕಾರಿ ಸಭೆಯ ಛಾಯಾಚಿತ್ರದಲ್ಲಿ ಅಂಬಿಕಾ ಸೋನಿ, ಶರದ್ ಪವಾರ್, ದೇವರಾಜ ಅರಸು, ತುಳಸೀದಾಸ್ ದಾಸಪ್ಪ ಮತ್ತು ಸುರೇಶ್ ಕಲ್ಮಾಡಿ ಮತ್ತಿತರರು**




**೧೯೮೦ರ ಲೋಕಸಭಾ ಚುನಾವಣೆಯ ಅಂಕಿಅಂಶಗಳು ಪಟ್ಟಿ(ಭಾರತ). ಪಟ್ಟಿ ಸಂಖ್ಯೆ: ೧೭.**

| ವರ್ಷ | ಪಕ್ಷಗಳು | ಸ್ಪರ್ಧಿಸಿದವರು | ಗೆದ್ದವರು | ಶೇಕಡಾವಾರು ಮತದಾನ | ಒಟ್ಟು ಮತಕ್ಷೇತ್ರಗಳು |
|---|---|---|---|---|---|
| ೧೯೮೦ | ಸಿಪಿಐ | ೪೭ | ೧೦ | ೨.೪೯ | ೫೨೯ |
| | ಸಿಪಿಎಂ | ೬೪ | ೩೭ | ೬.೨೪ | |
| | ಐಎನ್‌ಸಿ(ಐ) | ೪೯೨ | ೩೫೩ | ೪೨.೬೯ | |
| | ಐಎನ್‌ಸಿ(ಯು) | ೨೧೨ | ೧೩ | ೫.೩೧ | |
| | ಜೆಎನ್‌ಪಿ | ೪೩೩ | ೩೧ | ೧೮.೯೭ | |
| | ಜೆಎನ್‌ಪಿ(ಎಸ್) | ೨೯೩ | ೪೧ | ೯.೩೯ | |
| | ಪ್ರಾದೇಶಿಕ ಪಕ್ಷಗಳು | ೧೦೬ | ೩೪ | ೭೬೯ | |
| | ಗುರುತಿಸಲ್ಪಟ್ಟ ಪಕ್ಷಗಳು | ೧೩೬ | ೧ | ೦.೮೧ | |
| | ಸ್ವತಂತ್ರ ಅಭ್ಯರ್ಥಿಗಳು | ೨೮೨೬ | ೯ | ೬.೪೩ | |

ಆಕರ: ಭಾರತ ಚುನಾವಣಾ ಆಯೋಗದ ವರದಿ. ೧೯೮೦ರ ಲೋಕಸಭಾ ಚುನಾವಣಾ ಆಯೋಗದ ಅಂಕಿಅಂಶಗಳನ್ನು ಆಧರಿಸಿ.

ಈ ಮೇಲಿನ ಪಟ್ಟಿಯು ೧೯೮೦ರ ಲೋಕಸಭಾ ಚುನಾವಣೆಯಲ್ಲಿ ರಾಜಕೀಯ ಪಕ್ಷಗಳ ಸರಾಸರಿ ಅಂಕಿಅಂಶಗಳನ್ನು ನೀಡುವುದು. ಕಾಂಗ್ರೆಸ್(ಐ) ೩೫೩ ಕ್ಷೇತ್ರಗಳಲ್ಲಿ ಗೆಲವು ಸಾಧಿಸಿದ್ದರೆ, ಜನತಾ ಪಕ್ಷ ಮತ್ತು ಕಾಂಗ್ರೆಸ್(ಯು) ಕ್ರಮವಾಗಿ ೩೧ ಹಾಗೂ ೧೩ ಕ್ಷೇತ್ರಗಳಲ್ಲಿ ವಿಜಯ ಗಳಿಸಿದೆ. ಪ್ರಬಲ ಸಧೃಡವಾದ ಆಡಳಿತ ಪಕ್ಷದ ಅಗತ್ಯ ಕಾಂಗ್ರೆಸ್(ಐ) ಸಂಪೂರ್ಣ ಬಹುಮತ ಗಳಿಸಲು ಪೂರಕವಾದಂತಿದೆ. ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಆಡಳಿತ ಪಕ್ಷವಾಗಿ ಹೊರಹೊಮ್ಮಿದ್ದ ಜನತಾ ಪಕ್ಷ ವಿಭಜಿತಗೊಂಡಿದ್ದು, ಪ್ರಬಲ ವಿರೋಧ

ಪಕ್ಷವಾಗಿ ರೂಪುಗೊಳ್ಳಲು ಸಹ ಸಾಧ್ಯವಾಗದಂತೆ ಮಾಡಿರುವುದನ್ನು ನೋಡಬಹುದು. ಜನತಾ ಪಕ್ಷ ಮತ್ತು ಜನತಾ ಪಕ್ಷ(ಎಸ್) ಎರಡೂ ಕ್ರಮವಾಗಿ ೩೧ ಹಾಗೂ ೪೧ ಕ್ಷೇತ್ರಗಳಲ್ಲಿ ಗೆಲುವು ಸಾಧಿಸಿದ್ದು, ಒಟ್ಟು ೭೨ ಕ್ಷೇತ್ರಗಳಾಗುತ್ತವೆ. ಇಲ್ಲಿ ಜನತಾ ಪಕ್ಷದ ಆಂತರಿಕ ಬಿಕ್ಕಟ್ಟಿನ ಪರಿಣಾಮವನ್ನು ಕಾಣಬಹುದಾಗಿದೆ. ಚುನಾವಣಾ ಪೂರ್ವದಲ್ಲಿ ಬಹುನಿರೀಕ್ಷೆಯನ್ನು ಹುಟ್ಟಿಸಿದ್ದ ಕಾಂಗ್ರೆಸ್(ಯು) ಕಡಿಮೆ ಕ್ಷೇತ್ರಗಳಲ್ಲಿ ಗೆಲುವು ಸಾಧಿಸಿದ್ದರೂ ಶೇಕಡಾ ೫.೨೮ರಷ್ಟು ಮತವನ್ನು ಪಡೆಯಲು ಯಶಸ್ವಿಯಾಗಿದೆ.

**೧೯೮೦ ಲೋಕಸಭಾ ಚುನಾವಣೆಯಲ್ಲಿ ಭಾಗವಹಿಸಿದ ಪಕ್ಷಗಳ ಶೇಕಡಾವಾರು ಫಲಿತಾಂಶ(ಕರ್ನಾಟಕ). ರೇಖಾನಕ್ಷೆ ಪಟ್ಟಿ: ೫.**




ಆಕರ: ಭಾರತದ ಚುನಾವಣಾ ಆಯೋಗ, ಭಾರತ. ೧೯೮೦ರ ಲೋಕಸಭಾ ಚುನಾವಣಾ ಆಯೋಗದ ಅಂಕಿಅಂಶಗಳನ್ನು ಆಧರಿಸಿ.

ಈ ಮೇಲಿನ ರೇಖಾನಕ್ಷೆಯು ೧೯೮೦ರ ಲೋಕಸಭಾ ಚುನಾವಣೆಯಲ್ಲಿ ಕರ್ನಾಟಕದ ರಾಜಕೀಯ ಪಕ್ಷಗಳ ಶೇಕಡಾವಾರು ಅಂಕಿಅಂಶಗಳ ಪಟ್ಟಿಯಾಗಿದೆ. ಕರ್ನಾಟಕದಲ್ಲಿ ೨೮ ಕ್ಷೇತ್ರಗಳಲ್ಲಿ ೨೭ ಕ್ಷೇತ್ರಗಳನ್ನು ಕಾಂಗ್ರೆಸ್(ಐ) ಹಾಗೂ ಉಳಿದೊಂದು ಕ್ಷೇತ್ರದಲ್ಲಿ ಜನತಾ ಪಕ್ಷ ವಿಜಯ ಗಳಿಸಿರುವುದನ್ನು ನೋಡಬಹುದು. ದೇವರಾಜ ಅರಸು ಅವರು ಮುಖ್ಯಮಂತ್ರಿ ಗಳಾಗಿದ್ದರೂ ಸಹ ಕಾಂಗ್ರೆಸ್(ಯು) ಒಂದು ಕ್ಷೇತ್ರದಲ್ಲಿಯೂ ಗೆಲುವು ಸಾಧಿಸಲು ಸಾಧ್ಯವಾಗಲಿಲ್ಲ ಎಂಬುದು ಅರಸು ಅವರ ಛಾಪನ್ನು ಪ್ರಶ್ನಿಸುವುದು. ಆದರೆ ಶೇಕಡಾವಾರು ಮತದಾನ ಗಮನಿಸಿದರೆ ಕಾಂಗ್ರೆಸ್(ಐ), ಜನತಾ ಪಕ್ಷ ಹಾಗೂ ಕಾಂಗ್ರೆಸ್(ಯು) ಕ್ರಮವಾಗಿ ೫೬.೨೫, ೨೨.೯೩ ಮತ್ತು ೧೬.೬೯ರಷ್ಟನ್ನು ಗಳಿಸಿವೆ. ಕಾಂಗ್ರೆಸ್(ಯು) ರಾಜ್ಯದಲ್ಲಿ ಅತ್ಯಧಿಕ ಮತಗಳಿಸಿದ ಮೂರನೇ ರಾಜಕೀಯ ಪಕ್ಷವಾಗಿ ಹೊರಹೊಮ್ಮಿದರೂ ಯಾವುದೇ ಕ್ಷೇತ್ರದಲ್ಲಿ ಆಯ್ಕೆಯಾಗದೆ ವಿಫಲಗೊಂಡಿರುವುದು ಅನೇಕ ಪ್ರಶ್ನೆಗಳನ್ನು ಹುಟ್ಟಿಸುವುದು. ಈ ದಿಸೆಯಲ್ಲಿ ಕರ್ನಾಟಕದಲ್ಲಿ ೧೯೭೧ ರಿಂದ ೧೯೮೦ರವರೆಗಿನ ಮೂರು ಲೋಕಸಭಾ ಚುನಾವಣೆಗಳ ಅಂಕಿಅಂಶಗಳನ್ನು ಸಮೀಕರಿಸಿ ನೋಡುವುದು ಅನೇಕ ಒಳ ಆಯಾಮಗಳನ್ನು ಮುಂದಿಡುವ ಸಾಧ್ಯತೆ ಇದೆ.

ರಾಜ್ಯದಲ್ಲಿ ೧೯೭೧ ರಿಂದ ೧೯೮೦ರ ವರೆಗೆ ಕಾಂಗ್ರೆಸ್ ಮತ್ತು ವಿರೋಧ ಪಕ್ಷಗಳು ಗಳಿಸಿದ ಶೇಕಡಾವಾರು ಮತದಾನ.
ರೇಖಾನಕ್ಷೆ ಪಟ್ಟಿ: ೬.




ಆಕರ: ಭಾರತದ ಚುನಾವಣಾ ಆಯೋಗ, ಭಾರತ. ೧೯೮೦ರ ಲೋಕಸಭಾ ಚುನಾವಣಾ ಆಯೋಗದ ಅಂಕಿಅಂಶಗಳನ್ನು ಆಧರಿಸಿ.

ಈ ಮೇಲಿನ ರೇಖಾನಕ್ಷೆಯಲ್ಲಿ ಶೇಕಡಾವಾರು ಮತದಾನದಲ್ಲಿ ಕಾಂಗ್ರೆಸ್ ಮತ್ತು ವಿರೋಧ ಪಕ್ಷಗಳ ನಡುವೆಯಿದ್ದ ಅಂತರ ೧೯೭೭ ಮತ್ತು ೧೯೮೦ರ ಲೋಕಸಭಾ ಚುನಾವಣೆಗಳಲ್ಲಿ ಕಡಿಮೆ ಆಗಿರುವುದು ಕಂಡುಬರುವುದು. ಇದು ಕಾಂಗ್ರೆಸ್ ಪಕ್ಷ ರಾಜ್ಯ ರಾಜಕಾರಣದಲ್ಲಿ ಹೊಂದಿದ್ದ ಹಿಡಿತ ಸಡಿಲಗೊಳ್ಳುತ್ತಿರುವುದನ್ನು ಸೂಚಿಸುವುದು. ೧೯೭೧ ರಿಂದ ೧೯೭೭ರ ಲೋಕಸಭಾ ವೇಳೆಗೆ ಬಾರಿ ಪ್ರಮಾಣದಲ್ಲಿ ಬದಲಾವಣೆಯನ್ನು ನೋಡಬಹುದು. ಇದು ತುರ್ತುಪರಿಸ್ಥಿತಿಯ ಪ್ರಭಾವದ ಒಂದು ಮುಖವಾಗಿದ್ದು, ಮೇಲುನೋಟದಲ್ಲಿ ರಾಜ್ಯ ರಾಜಕಾರಣದಲ್ಲಿ ಬೃಹತ್ ಪ್ರಮಾಣದ ಬದಲಾವಣೆಗಳಾಗದೇ ಕಾಂಗ್ರೆಸ್ ಪಕ್ಷದ ಭದ್ರ ನೆಲೆಯಾಗಿ ಮುಂದುವರೆದಂತೆ ತೋರುವುದು. ೧೯೭೭ರ ಲೋಕಸಭಾ ಚುನಾವಣೆಯಿಂದ ೧೯೮೦ರ ಲೋಕಸಭಾ ಚುನಾವಣೆಯವರೆಗೆ ವಿರೋಧ ಪಕ್ಷಗಳು ಗಳಿಸಿರುವ ಮತದ ಪ್ರಮಾಣ ಶೇಕಡಾ ೦.೪ರಷ್ಟು ಮಾತ್ರ ಇಳಿತಗೊಂಡಿರುವುದು ಮೇಲಿನ ವಿಚಾರವನ್ನೇ ಸಾಬೀತು ಪಡಿಸುವುದು. ಇವೆಲ್ಲವೂ ೧೯೭೦ರ ದಶಕದ ಕರ್ನಾಟಕ ರಾಜಕಾರಣದಲ್ಲಿ ರಾಜಕೀಯ ಪಕ್ಷಗಳ ಪ್ರಭಾವವನ್ನು ಸೂಚಿಸುತ್ತಾ ಪ್ರಜಾಪ್ರಭುತ್ವದ ವೈರುಧ್ಯಗಳನ್ನು ಅನಾವರಣಗೊಳಿಸುವುದು.

೧೯೮೦ರ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್(ಐ) ಪರ ಒಲವು ಸ್ಥಿರ ಸರ್ಕಾರಕ್ಕಾಗಿ ರೂಪುಗೊಂಡಂತಿದೆ. ಜನತಾ ಸರ್ಕಾರದಲ್ಲಿನ ಆಂತರಿಕ ಬಿಕ್ಕಟ್ಟು ಮತ್ತು ಮಧ್ಯಂತರ ಚುನಾವಣಾ ಘೋಷಣೆಯಿಂದಾಗಿ ಆಡಳಿತ ಪಕ್ಷದ ಬದಲಾವಣೆ ಆಡಳಿತ ವಿಧಾನದ ಬದಲಾವಣೆಯಲ್ಲ ಎಂಬ ಅರಿವು ಕಾರ್ಯನಿರ್ವಹಿಸಿರುವ ಕುರಿತ ಚರ್ಚೆಗಳು ಕಂಡುಬರುವುವು. ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಏರುಮುಖ ಕಂಡಿದ್ದ ಶೇಕಡಾವಾರು ಮತದಾನ ೧೯೮೦ರಲ್ಲಿ ಇಳಿತ ಕಂಡಿದೆ. ಈ ನಿಟ್ಟಿನಲ್ಲಿ ತುರ್ತುಪರಿಸ್ಥಿತಿಯ ವಿರುದ್ಧ ಪ್ರತಿಭಟನೆಯಲ್ಲಿ ಗುರುತಿಸಿಕೊಂಡಿದ್ದ ಮಧ್ಯಮವರ್ಗದ ಪಾತ್ರ ಅಪಾರ. ಈ ವರ್ಗ ೧೯೭೭ರ ಚುನಾವಣೆಯ ನಂತರದ ರಾಜಕೀಯ ಬೆಳವಣಿಗೆಗಳಿಂದ ಹೆಚ್ಚು ನಿರಾಶೆಗೊಂಡು ಮತದಾನ ಮಾಡದ ಕಾರಣ ತೀವ್ರವಾದ ಕುಸಿತ ಉಂಟಾಗಿದೆ. ಪ್ರಾದೇಶಿಕ ಪಕ್ಷಗಳು, ಗುರುತಿಸಿದ ಮತ್ತು ಗುರುತಿಸಲ್ಪಡದ ಪಕ್ಷಗಳ ಗೆಲುವು ಗಮನಾರ್ಹವಾಗಿ ಕುಸಿತಗೊಂಡಿದೆ. ಶೇಕಡಾವಾರು ಮತದಾನದಲ್ಲಿ ಹೆಚ್ಚು ವ್ಯತ್ಯಾಸಗಳು ಕಂಡುಬರುವುದಿಲ್ಲ. ಕರ್ನಾಟಕದ ಚುನಾವಣಾ ಫಲಿತಾಂಶಗಳಲ್ಲಿ ಕಂಡುಬರುವ ಪ್ರಮುಖ

ಅಂಶ ನಿರೀಕ್ಷಿಸಿರದ ಅರಸು ಅವರ ಸೋಲು. ೧೯೭೮ರ ಕಾಂಗ್ರೆಸ್ ವಿಭಜನೆ ಹಾಗೂ ಹೊಸ ಪಕ್ಷದ ಸ್ಥಾಪನೆಯಿಂದ ಹಿಂದಿನ ಚುನಾವಣೆಗಳಲ್ಲಿ ಪ್ರಮುಖ ಕಾರ್ಯನಿರ್ವಹಿಸುತ್ತಿದ್ದ ಪಕ್ಷದ ಕೆಳಹಂತದ ಕಾರ್ಯಕರ್ತರನ್ನು ಕಳೆದುಕೊಂಡಿದ್ದರು. ಗ್ರಾಮೀಣ ಪ್ರದೇಶದವರಿಗೆ ಅರಸು ಮತ್ತು ಇಂದಿರಾ ಗಾಂಧಿ ಈರ್ವರೂ ಬೇರೆ ಬೇರೆ ಪಕ್ಷ ಎಂಬುದು ತಿಳಿದಿರಲಿಲ್ಲ. ಜೊತೆಗೆ ಸ್ಥಳೀಯ ಸರ್ಕಾರದ ಸಾಧನೆಗಳನ್ನು ಇಂದಿರಾ ಗಾಂಧಿಯವರ ಹೆಸರಿನಲ್ಲಿ ಮಾಡಿದ್ದರಿಂದ ಅರಸು ಅವರ ಸಾಧನೆ ಎಂಬಂಥ ಭಾವವು ಹೆಚ್ಚಾಗಿ ಕಂಡುಬರುತ್ತಿರಲಿಲ್ಲ. ಚುನಾವಣೆಯ ನಂತರದಲ್ಲಿ ಸೋಲಿನ ಹೊಣೆಹೊತ್ತು ಕರ್ನಾಟಕ ಶಾಸಕಾಂಗಸಭೆಗೆ ರಾಜೀನಾಮೆ ನೀಡಿದರು ಮೊದಲಾದ ಚರ್ಚೆಗಳು ಕಂಡುಬರುವುವು. ನಂತರದಲ್ಲಿ ಆರ್. ಗುಂಡೂರಾವ್ ಅವರು ಕರ್ನಾಟಕದ ಮುಖ್ಯಮಂತ್ರಿಯಾಗುತ್ತಾರೆ.

**ರಾಜಕೀಯ ಸೂರ್ಯಾಸ್ತಮಾನದೆಡೆಯತ್ತ**



೧೯೭೭ ರಿಂದ ೧೯೮೦ರವರೆಗೆ ರಾಷ್ಟ್ರೀಯ ನೆಲೆಯಲ್ಲಿ ಅರಸು ಅವರು ನಾಯಕನಾಗಿ ಬೆಳವಣಿಗೆ ಹೊಂದಿರುವಂತೆ ಕಂಡುಬರುವುದು. ನಂತರದ ಆಡಳಿತ, ರಾಜಕೀಯ ಪಕ್ಷಗಳ ಧೃವೀಕರಣ, ತುರ್ತುಪರಿಸ್ಥಿತಿಯ ತಕ್ಷಣದ ಪರಿಣಾಮಗಳು ಕೇಂದ್ರ ಮತ್ತು ಪ್ರಾದೇಶಿಕ ರಾಜಕಾರಣವನ್ನು ಪೂರಕವಾಗಿ ಪ್ರಭಾವಿಸಿದೆ. ಅರಸು ಅವರು ೧೯೮೦ರ ಲೋಕಸಭಾ ಚುನಾವಣೆವರೆಗೆ ರಾಷ್ಟ್ರೀಯ ನೆಲೆಯಲ್ಲಿ ಪ್ರಧಾನ ನಾಯಕನಾಗಿ ಕಂಡುಬರುವ ಬೆಳವಣಿಗೆಯೊಂದಿಗೆ ಪ್ರಾದೇಶಿಕ ನೆಲೆಯಿಂದ ಸಂಪರ್ಕ ದೂರಗೊಳ್ಳುತ್ತ ಹೋದಂತೆ ಕಂಡುಬರುವುದು. ಕರ್ನಾಟಕದಲ್ಲಿ ೧೯೮೦ರ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್(ಯು) ಯಾವುದೇ ಕ್ಷೇತ್ರಗಳನ್ನು ಗೆಲ್ಲವುದಿಲ್ಲ. ಶೇಕಡಾವಾರು ಮತದಾನ ಗಮನಿಸಿದಾಗ ೧೬.೭೯ ಇದೆ. ಕಾಂಗ್ರೆಸ್ ಪಕ್ಷದ ಶೇಕಡಾವಾರು ಮತದಾನದಲ್ಲಿ ಹೆಚ್ಚು ವ್ಯತ್ಯಾಸಗಳು ಕಂಡುಬರುವುದಿಲ್ಲ. ಅರಸು ಅವರ ವ್ಯಕ್ತಿ ರಾಜಕಾರಣದ ಹಿನ್ನೆಲೆಯಲ್ಲಿ ಸಮಾಜದ ಕೆಲವು ವರ್ಗ ಮತ್ತು ವಲಯಗಳು ಪೂರಕವಾಗಿ ಪ್ರತಿಕ್ರಿಯಿಸಿದೆ.

ಈ ವರ್ಗ ತುರ್ತುಪರಿಸ್ಥಿತಿಯ ವಿರುದ್ಧ ಪ್ರತಿಭಟನೆ ನಡೆಸಿದ್ದವರು ಎಂಬುದು ಗಮನಾರ್ಹ. ೧೯೭೭ರ ಲೋಕಸಭಾ ಚುನಾವಣೆಯಲ್ಲಿ ತುರ್ತುಪರಿಸ್ಥಿತಿ ಜಾರಿ ವಿರುದ್ಧ ಪರ್ಯಾಯ ಪಕ್ಷವಾಗಿ ರೂಪುಗೊಂಡಿದ್ದ ಜನತಾ ಪಕ್ಷಕ್ಕೆ[೨೮] ಮತ ನೀಡಿದ್ದವರು. ಬೇರೆ ಮೂಲಗಳಿಂದ ಶೇ.೬ರಷ್ಟು[೨೯] ಮತ ದೊರೆತಿದೆ. ವ್ಯಕ್ತಿ ರಾಜಕಾರಣದ ವರ್ಚಸ್ಸು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಿದೆ. ಕರ್ನಾಟಕದಲ್ಲಿ ಅರಸು ಅವರ ಆಡಳಿತ ಕಾಲದ ಪರಿಣಾಮಗಳು, ದೀರ್ಘಕಾಲದ ರಾಜಕಾರಣದಲ್ಲಿ ಹಿಂದುಳಿದವರ್ಗಗಳ ಚಳವಳಿ, ರಾಜಕೀಯ ಹಾಗೂ ವ್ಯಕ್ತಿ ರಾಜಕಾರಣದ ನೆಲೆಗಳಲ್ಲಿ ವಿಕಸಿತಗೊಂಡ ಸ್ವರೂಪಗಳ ಅವಲೋಕನ ಅಗತ್ಯ.

### ೪.೧.೩.೩. ಕರ್ನಾಟಕ: ಪ್ರಾದೇಶಿಕ ರಾಜಕಾರಣ ಮತ್ತು ಹಿಂದುಳಿದ ವರ್ಗಗಳು

ಮೇಲ್ನೋಟಕ್ಕೆ ಅರಸು ಅವರ ಅಂತ್ಯ ಕುರಿತು ವಾಸ್ತವಿಕವಾಗಿ ಅವರು ರೂಪಿಸಿದ ಸಾಮಾಜಿಕ ಬದ್ಧತೆಗಳ ಸ್ವರೂಪಗಳು ಮುಂದಿನ ದಶಕಗಳಲ್ಲಿ ಆಕಾಶದೆತ್ತರಕ್ಕೆ ಬೆಳೆದಿರುವುದನ್ನು ನಾವು ಗಮನಿಸಬಹುದು. ಅವರ ಒಂದು ಕಾಲದ ಶಿಷ್ಯರು ಮುಂದಿನ ದಶಕಗಳಲ್ಲಿ ಕರ್ನಾಟಕದ ಭವಿಷ್ಯವನ್ನು ರೂಪಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಿದರು. ಈಗಾಗಲೇ ಚರ್ಚಿಸಿರುವಂತೆ ೧೯೭೮ರ ವಿಧಾನಸಭಾ ಚುನಾವಣೆಯಲ್ಲಿ ಅತಿ ಹೆಚ್ಚು ಪ್ರಮಾಣದಲ್ಲಿ ಹಿಂದುಳಿದ ಜಾತಿ ಮತ್ತು ವರ್ಗಗಳಿಂದ ಸದಸ್ಯರು ಆಯ್ಕೆಯಾಗಿದ್ದರು. ೧೯೭೮ರ ವಿಧಾನಸಭಾ ಚುನಾವಣೆಯಲ್ಲಿಯೂ ಇದು ಮುಂದುವರೆಯಿತು. ೧೯೮೩ರಲ್ಲಿ ಮೊದಲ ಬಾರಿಗೆ ಕಾಂಗ್ರೆಸೇತರ ಸರ್ಕಾರ ರಚನೆ ಕರ್ನಾಟಕದಲ್ಲಿ ಕಂಡುಬರುವುದು. ದೇವರಾಜ ಅರಸು ಅವರು ಸ್ಥಾಪಿಸಿದ್ದ ಕ್ರಾಂತಿ ರಂಗ ಜನತಾ ಪಕ್ಷ ಆಡಳಿತಕ್ಕೆ ಬರಲು ಪ್ರಮುಖ ಕಾರಣವಾಯಿತು. ಬಿಜೆಪಿ ಪಕ್ಷವು ಎ. ಕೆ. ಸುಬ್ಬಯ್ಯರವರ ನೇತೃತ್ವದಲ್ಲಿ ೧೮ ಸ್ಥಾನ ಗಳಿಸಿದ್ದು ಜನತಾ ಪಕ್ಷಕ್ಕೆ ಬೆಂಬಲ ನೀಡಿತು. ಕಾಂಗ್ರೆಸ್ ಕಡಿಮೆ ಸ್ಥಾನ ಗಳಿಸಿದರು ಶೇಕಡಾವಾರು ಮತ ಗಳಿಕೆಯಲ್ಲಿ ಶೇ.೪೦.೪೨ರಷ್ಟು ಪಡೆದು ಮೊದಲ ಸ್ಥಾನ ಪಡೆಯಿತು. ಜನತಾ ಪಕ್ಷ ಅತಿ ಹೆಚ್ಚು ಸ್ಥಾನ ಗಳಿಸಿದರು ಶೇ.೩೩.೦೭ರಷ್ಟು ಮತ ಪಡೆಯಿತು. ಬಿಜೆಪಿ ಶೇ.೭.೯೩ರಷ್ಟು ಮತ ಗಳಿಸಿ ಮೂರನೇ ಸ್ಥಾನ ಪಡೆಯಿತು. ಕಾಂಗ್ರೆಸ್ ಪಕ್ಷದ ಸೋಲಿಗೆ ದೇವರಾಜ ಅರಸು ಅವರ ಮಾದರಿಯಲ್ಲಿ ಹಿಂದುಳಿದ ಜಾತಿ, ವರ್ಗಗಳ ಪ್ರತಿನಿಧಿಗಳಿಗೆ ಪ್ರಾತಿನಿಧ್ಯ ನೀಡದಿದ್ದದ್ದು ಕಾರಣ ಎಂದು ಅನೇಕ ವಿದ್ವಾಂಸರು, ರಾಜಕಾರಣಿಗಳು ಚರ್ಚಿಸುವರು. ಈ ಸಂಪ್ರದಾಯ ಮುಂದಿನ ಚುನಾವಣೆಗಳಲ್ಲಿ ತೀವ್ರತೆಯನ್ನು ಕಳೆದುಕೊಂಡರೂ ಸೃಷ್ಟಿಸಿದ್ದ ಪರಿಣಾಮಗಳು ವಿವಿಧ ಸ್ವರೂಪಗಳಲ್ಲಿ ಕಾಣಿಸಿಕೊಳ್ಳತೊಡಗಿದವು. ಅರಸು ಅವರ ಆಡಳಿತದ ಅವಧಿಯಲ್ಲಿ ಮುಖ್ಯಧಾರೆಯಲ್ಲಿ ಸಕ್ರಿಯ ರಾಜಕಾರಣಕ್ಕೆ ಬಂದ ಎಂ. ವೀರಪ್ಪ ಮೊಯಿಲಿ, ಎನ್. ಧರ್ಮಸಿಂಗ್, ಮಲ್ಲಿಕಾರ್ಜುನ ಖರ್ಗೆ ಹಾಗೂ ಸಮಾಜವಾದಿ ಪಕ್ಷದಿಂದ ಕಾಂಗ್ರೆಸಿನಲ್ಲಿ ಪ್ರಮುಖ ಸ್ಥಾನಗಳಿಸಿದ ಎಸ್. ಬಂಗಾರಪ್ಪ, ಕಾಗೋಡು ತಿಮ್ಮಪ್ಪ ಅವರ ರಾಜಕಾರಣದ ಸ್ವರೂಪಗಳನ್ನು ಅವಲೋಕಿಸಲಾಗಿದೆ.

### ೪.೧.೩.೩.೧. ಎಸ್. ಬಂಗಾರಪ್ಪ

"ಅರಸು ಮಂತ್ರಿಮಂಡಲದ ವಿಸ್ತರಣೆ"(ಡೆಕ್ಕನ್ ಹೆರಾಲ್ಡ್ ೧೯೭೮ ಮಾರ್ಚ್ ೯); "ಕರ್ನಾಟಕ ಕ್ರಾಂತಿರಂಗದ ಒಡಕು ಮುಚ್ಚಿತು"(ಕನ್ನಡಪ್ರಭ ೧೯೮೨ ಅಕ್ಟೋಬರ್ ೧); "ಹೊಸ ನಾಯಕ"(ಪ್ರಜಾವಾಣಿ ೧೯೮೩ ಮಾರ್ಚ್ ೧೯); "ಜನತಾ ಆಳ್ವಿಕೆಯಲ್ಲಿ ಭೂ ಸುಧಾರಣೆ ಹಿನ್ನೆಡೆ"(ಬಂಗಾರಪ್ಪ ೧೯೮೪ ನವೆಂಬರ್ ೩) ಮೊದಲಾದ ವರದಿಗಳು ಬಂಗಾರಪ್ಪ ಅವರ ಆರಂಭಿಕ ರಾಜಕಾರಣದ ಸ್ವರೂಪ ಮತ್ತು ಚಿಂತನೆಗಳ ಮೇಲೆ ಬೆಳಕು ಚೆಲ್ಲುವುವು. ಇವರ ರಾಜಕಾರಣದಲ್ಲಿ ಅನೇಕ ತಿರುವುಗಳು, ಚಿಂತನೆಗಳು ಹಲವು ಬಾರಿ ದ್ವಂದ್ವ ಹುಟ್ಟಿಸುವುವು. ಸಮಾಜವಾದಿ ಚಿಂತನೆ, ಸಿದ್ಧಾಂತದ ನೆಲೆಯಲ್ಲಿ ಸಮಾಜವಾದಿ ಪಕ್ಷದಿಂದ ಶಾಸಕರಾಗುವ ಮೂಲಕ ರಾಜಕೀಯ ವೃತ್ತಿ ಜೀವನದ ಆರಂಭವನ್ನು ನೋಡಬಹುದು. ಆದರೆ ತರುವಾಯದಲ್ಲಿ ವ್ಯತಿರಿಕ್ತ ಸಿದ್ಧಾಂತದ ಪಕ್ಷಗಳ[೩೦] ಸೇರ್ಪಡೆ ಪ್ರಾದೇಶಿಕ ರಾಜಕಾರಣದಲ್ಲಿ ಸಂಚಲನವನ್ನು ಉಂಟುಮಾಡಿತು. ಬಗರ್ ಹುಕುಂ ಭೂಮಿ, ಗೇಣಿ ಭೂಮಿಗಳನ್ನು ಭೂ ರಹಿತರಿಗೆ ದೊರಕಿಸಲು, ಹಿಂದುಳಿದ ಜಾತಿಗಳ ಅಭಿವೃದ್ಧಿ ಹಿನ್ನೆಲೆಯಲ್ಲಿ ಅನೇಕ ಹೋರಾಟಗಳನ್ನು, ಚಳವಳಿಗಳನ್ನು ರಾಜಕೀಯ

ವೃತ್ತಿ ಜೀವನದ ಆರಂಭಿಕ ಹಂತದಲ್ಲಿ ಕಾಣಬಹುದು. ದೇವರಾಜ ಅರಸು ಅವರ ಆಡಳಿತ ಕಾಲಘಟ್ಟದ ಸಾಮಾಜಿಕ ನ್ಯಾಯ ಕಾರ್ಯನೀತಿಯ ಭೂ ಸುಧಾರಣಾ ಕಾಯ್ದೆ ಮತ್ತು ಇಪ್ಪತ್ತು ಅಂಶಗಳಿಂದ ಪ್ರಭಾವಿತರಾಗಿದ್ದರು. ಆ ಸಂದರ್ಭದಲ್ಲಿ ಸಮಾಜವಾದಿ ರಾಜಕೀಯ ಪಕ್ಷ ದುರ್ಬಲವಾಗಿದ್ದು ಪುನಶ್ಚೇತನ ಕಷ್ಟಕರವಾಗಿತ್ತು. ಆಡಳಿತ ಪಕ್ಷವಾಗದ ಹೊರತು ಸಮಾಜವಾದಿ ಚಿಂತನೆಗಳಿಗೆ ಅಭಿವ್ಯಕ್ತ ಸ್ವರೂಪ ನೀಡಲು ಸಾಧ್ಯವಿಲ್ಲ. ಜೊತೆಗೆ ಕರ್ನಾಟಕದಲ್ಲಿದ್ದ ಕಾಂಗ್ರೆಸ್ ಪಕ್ಷದ ಕಾರ್ಯನೀತಿಗಳಾದ ಸಾಮಾಜಿಕ ನ್ಯಾಯ, ಭೂ ಸುಧಾರಣೆ ಮತ್ತು ಹಿಂದುಳಿದ ವರ್ಗಗಳ ಪರವಾದ ನಿಲುವುಗಳಿಂದಾಗಿ ಕಾಂಗ್ರೆಸ್ ಸೇರುವ ನಿರ್ಧಾರ ಕೈಗೊಂಡರೆಂಬ ಅಭಿಪ್ರಾಯ ಹಾಗೂ ಸಮಕಾಲೀನ ರಾಜಕಾರಣ ಕುರಿತ ಚರ್ಚೆಗಳನ್ನು ಕಾಣಬಹುದು. ೧೯೭೯ರಲ್ಲಿ ಅರಸು ಮತ್ತು ಇಂದಿರಾ ಗಾಂಧಿ ಈರ್ವರ ನಡುವಿನ ಬಿಕ್ಕಟ್ಟಿನ ಸಂದರ್ಭದಲ್ಲಿ ಅರಸು ವಿರೋಧಿ ನಿಲುವಿಗೆ ಸಾಮಾನ್ಯವಾಗಿ ಮೌನ ಅಥವಾ ಆಡಳಿತ ಪಕ್ಷದ ಮೂಲಕ ಕಾರ್ಯನೀತಿಗಳನ್ನು ಅನುಷ್ಠಾನಗೊಳಿಸಲು ಸಾಧ್ಯ ಎಂಬ ಪ್ರತಿಕ್ರಿಯೆಗಳು ಕಂಡುಬರುವುವು. ಆದರೆ ಅತಿಶೀಘ್ರದಲ್ಲಿ ಕಾಂಗ್ರೆಸ್ ಬಿಟ್ಟು ಹೊರಬಂದು ಅರಸು ಅವರು ನಿರ್ಮಿಸುತ್ತಿದ್ದ ಕ್ರಾಂತಿರಂಗ ಪಕ್ಷಕ್ಕೆ ಬೆಂಬಲ ನೀಡುವರು. ಅರಸು ಅವರ ನಂತರದಲ್ಲಿ ಕ್ರಾಂತಿರಂಗದ ನೇತೃತ್ವ ವಹಿಸಿ ೧೯೮೩ರಲ್ಲಿ ಮೊದಲ ಕಾಂಗ್ರೆಸೇತರ ಸರ್ಕಾರ ಬರಲು ಪ್ರಮುಖ ಕಾರಣಕರ್ತರಾಗುವರು. ಆದರೆ ಕೆಲವೆ ತಿಂಗಳಲ್ಲಿ ಜನತಾ ಪಕ್ಷ ಬಿಟ್ಟು ವಿರೋಧ ಪಕ್ಷದ ನಾಯಕರಾಗುತ್ತಾರೆ. ಜನತಾ ಸರ್ಕಾರದಿಂದ ಹೊರಬಂದು ವಿರೋಧ ಪಕ್ಷದ ನಾಯಕನಾಗಿದ್ದು ಧೈರ್ಯ ತುಂಬಿದ ಹೊಸ ನಾಯಕನಾಗಿ ಹಾಗೂ ಮೊದಲ ಕಾಂಗ್ರೆಸೇತರ ಸರ್ಕಾರದ ಸೃಷ್ಟಿಯಲ್ಲಿ ಕಾರ್ಯನಿರ್ವಹಿಸಿದ ಪ್ರಮುಖ ವ್ಯಕ್ತಿಯಾಗಿದ್ದು, ಆಡಳಿತ ಪಕ್ಷದಿಂದ ಹೊರಬಂದದ್ದು ಧೀರೋದಾತ್ತ ನಾಯಕನಾಗಿಯೂ ಕಂಡುಬಂದರು ಎಂದು ಅಭಿಮಾನಿಗಳು ಅಭಿಪ್ರಾಯ ವ್ಯಕ್ತಪಡಿಸುವರು. ಜೊತೆಗೆ ತುರ್ತುಪರಿಸ್ಥಿತಿಯಲ್ಲಿ ಪ್ರತಿಭಟಿಸಿದ್ದ, ಏಕಪಕ್ಷೀಯ ಆಡಳಿತ ವಿರೋಧಿಸುತ್ತಿದ್ದ ಸಮಾಜದ ಕೆಲವು ವಲಯಗಳಲ್ಲಿ ಅರಸು ಅವರ ನಂತರದ ಭರವಸೆಯ ರಾಜಕಾರಣಿಯಾಗಿ ಬಂಗಾರಪ್ಪ ಅವರು ಕಂಡುಬಂದರು. ಆದರೆ ಒಳನೋಟದಲ್ಲಿ ೧೯೮೧ರಲ್ಲಿ ಕಾಂಗ್ರೆಸ್ ತೊರೆಯಲು ಮತ್ತು ೧೯೮೪ರಲ್ಲಿ ಜನತಾ ಪಕ್ಷದಿಂದ ಹೊರಬರಲು ಮುಖ್ಯಮಂತ್ರಿ ಪದವಿ ಪ್ರಮುಖ ವಸ್ತುವಿಷಯವಾಗಿತ್ತು. ೧೯೭೯ರಲ್ಲಿ ಕೆಪಿಸಿಸಿ(ಐ) ಅಧ್ಯಕ್ಷರಾಗಿ ಎಸ್. ಬಂಗಾರಪ್ಪ ಅವರು ಆಯ್ಕೆ ಆಗಿದ್ದರೂ, ೧೯೮೦ರಲ್ಲಿ ಆರ್. ಗುಂಡೂರಾವ್ ಅವರು ಮುಖ್ಯಮಂತ್ರಿ ಸ್ಥಾನ ಪಡೆದಿದ್ದು ಆಂತರಿಕ ಭಿನ್ನಾಭಿಪ್ರಾಯವನ್ನು ಹುಟ್ಟುಹಾಕಿತ್ತು. ೧೯೮೩ರ ಮೊದಲ ಕಾಂಗ್ರೆಸೇತರ ಆಡಳಿತ ಪಕ್ಷದಲ್ಲಿ ಕರ್ನಾಟಕ ರಾಜಕಾರಣದಲ್ಲಿ ಇರದ ರಾಮಕೃಷ್ಣ ಹೆಗಡೆ ಅವರು ಅನಿರೀಕ್ಷಿತವಾಗಿ ಮುಖ್ಯಮಂತ್ರಿಯಾದದ್ದು ಅಸಮಾಧಾನವನ್ನು ಸೃಷ್ಟಿಸಿತ್ತು.

ಸಾಮಾಜಿಕ ನ್ಯಾಯದ ರಾಜಕಾರಣದ ಮುಖ್ಯಧಾರೆಯಲ್ಲಿ ಬೆಳೆದುಬಂದ ಹಿಂದುಳಿದ ವರ್ಗಗಳ ಮೊದಲ ಮುಖ್ಯಮಂತ್ರಿಯಾಗಿ ಬಂಗಾರಪ್ಪ ಅವರು ರೂಪುಗೊಂಡರು. ಎರಡು ವರ್ಷಗಳ ಆಡಳಿತದ ಅವಧಿಯಲ್ಲಿ ಅಕ್ಷಯ(ಸಾಕ್ಷರತೆಗಾಗಿ), ಆಶ್ರಯ(ಬಡವರಿಗೆ ಉಚಿತ ನಿವೇಶನ ಹಾಗೂ ಮನೆ ಕಟ್ಟಲು





ಡೆಕ್ಕನ್ ಹೆರಾಲ್ಡ್: ೧೯೭೮ ಮಾರ್ಚ್ ೯ ಮತ್ತು ೧೯೮೨ ಆಗಸ್ಟ್ ೨೧ ರಂದು ಪ್ರಕಟಿತ[೩೦] ಛಾಯಾಚಿತ್ರಗಳು. ಚಿತ್ರ ಸಂಖ್ಯೆ: ೪.೪೦.

ಸಹಾಯ), ಶುಶ್ರೂಷ(ಬಡವರ ಉಚಿತ ಆರೋಗ್ಯ ತಪಾಸಣೆ), ಆರಾಧನ(ಮಠ ಮಂದಿರಗಳ ನಿರ್ಮಾಣ), ಅನೇಕ ಏತ ನೀರಾವರಿ, ಬುಡಕಟ್ಟು ಮೂಲಭೂತ ಸೌಕರ್ಯ, ಕೆಳಜಾತಿ ಸಮುದಾಯ ಭವನಗಳ ನಿರ್ಮಾಣ, ಕನ್ನಡ ವಿಶ್ವವಿದ್ಯಾಲಯದ ಸ್ಥಾಪನೆಯ ಚಿಂತನೆಗಳು, ವಿಶ್ವ, ಹನಿತೆನೆ, ಕೆರೆಕಲ್ಯಾಣ, ಅನಿಲ ಯೋಜನೆ, ಕೃಷಿ ಮೊದಲಾದವು ಭೂಮಿಪರ ಚಿಂತನೆಗಳಿಂದ ಸಕಾರಾತ್ಮಕವಾಗಿ ಪ್ರಭಾವಿತಗೊಂಡಿವೆ ಎಂಬ ಚರ್ಚೆಗಳಿವೆ. ಇವರ ಕಾರ್ಯನೀತಿಗಳು ಸಂಪೂರ್ಣವಾಗಿ ಸಮಾಜವಾದಿ ಸಿದ್ಧಾಂತಗಳಿಂದ ರೂಪುಗೊಳ್ಳದಿದ್ದರೂ ಪ್ರೇರಿತವಾಗಿದ್ದವು. ಕನ್ನಡ ಭಾಷೆ, ಸಂಸ್ಕೃತಿ ಪರ ಕಾಳಜಿ ಹೊಂದಿದ್ದರು. ಕನ್ನಡ ವಿಶ್ವವಿದ್ಯಾಲಯ ರೂಪುಗೊಳ್ಳುವಲ್ಲಿ ಪ್ರಮುಖ ಪಾತ್ರ ನಿರ್ವಹಿಸಿದವರಾಗಿದ್ದಾರೆ. ಆಡಳಿತ ಕಾಲದಲ್ಲಿ ಹೈ ಕಮಾಂಡಿನ ಆಜ್ಞೆಯನ್ನು ಪ್ರಶ್ನಿಸುವ ನಾಯಕ. ಅದರಿಂದ ಉಂಟಾಗಬಹುದಾದ ಪರಿಣಾಮಗಳನ್ನು ಎದುರಿಸುವುದು ಪ್ರಾದೇಶಿಕ ರಾಜಕಾರಣದ ರಾಜಕಾರಣಿಗಳಲ್ಲಿ ವಿಭಿನ್ನವನ್ನಾಗಿಸಿದೆ ಎಂಬುದು ಪರವಾಗಿ ಕಂಡುಬರುವ ಅಭಿಪ್ರಾಯ. ಅದಕ್ಕೆ ವಿರೋಧಿ ನೆಲೆಯಲ್ಲಿ

> ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಕೇವಲ ಇಬ್ಬರು ವಿಧ್ವಂಸಕ ಮುಖ್ಯಮಂತ್ರಿಗಳು ಮಾತ್ರ ಅಧಿಕಾರಕ್ಕೆ ಬಂದಿದ್ದಾರೆ. ಆರ್. ಗುಂಡೂರಾವ್(೧೯೮೦-೧೯೮೩) ಮತ್ತು ಎಸ್. ಬಂಗಾರಪ್ಪ(೧೯೯೦-೧೯೯೨) ... ಬಂಗಾರಪ್ಪ ಅಶಿಸ್ತಿನಿಂದ ಕೂಡಿದ ಆಡಳಿತಾಧಿಕಾರಿಗಳನ್ನು ಪ್ರಮುಖ ಹುದ್ದೆಗಳಲ್ಲಿ ಕೂರಿಸಿದರು ಮತ್ತು ಉತ್ತಮ ಆಡಳಿತಗಾರರನ್ನು ಅಮುಖ್ಯ ಸ್ಥಳಗಳಿಗೆ ಹಾಕಿದರು ... ಬಂಗಾರಪ್ಪ ಒಬ್ಬರೇ ಸುಮಾರು ೧೫೦ ವರ್ಷಗಳಲ್ಲಿ ಕನ್ನಡಿಗ ಮತ್ತು ತಮಿಳರ ನಡುವೆ ಅಭಿಮಾನದ ಸಂಘರ್ಷಗಳನ್ನು ಪ್ರೋತ್ಸಾಹಿಸಿದ ರಾಜ್ಯ ಮಟ್ಟದ ನಾಯಕ ... ಇಬ್ಬರೂ ವಿಧ್ವಂಸಕ ಮುಖ್ಯಮಂತ್ರಿಗಳು ಇತರ ರಾಜ್ಯಗಳಿಗೆ ಹೋಲಿಸಿದರೆ ಅತ್ಯಂತ ಸಣ್ಣ ಪ್ರಮಾಣದವರು(ಮ್ಯಾನರ್ ೨೦೦೬: ೧೪)

ಎಂಬುದು ಮುಖ್ಯಮಂತ್ರಿ ಆಡಳಿತಾವಧಿ ಕುರಿತ ನಕಾರಾತ್ಮಕ ವಿಚಾರಧಾರೆಯಾಗಿದೆ. ಕಾವೇರಿ ಗಲಭೆಯ ಪರಿಣಾಮಗಳಾಗಿ ಮೇಲಿನ ಅಭಿಪ್ರಾಯಗಳು ಭಿನ್ನ ನೆಲೆಗಟ್ಟಿನಲ್ಲಿ ರೂಪುಗೊಂಡಿವೆ.

ವ್ಯಕ್ತಿ ನೆಲೆಯಲ್ಲಿ ಬಂಗಾರಪ್ಪ ಅವರ ರಾಜಕಾರಣ ಮತ್ತು ಚಿಂತನೆ, ಸಿದ್ಧಾಂತಗಳನ್ನು ಗಮನಿಸುತ್ತ ಹೆಚ್ಚು ಚರ್ಚಿತವಾಗುವ ವಿಚಾರ ಪಕ್ಷಾಂತರಗಳು ಮತ್ತು ಪಕ್ಷಗಳ ಸೃಷ್ಟಿ. ಬಂಗಾರಪ್ಪ ಅವರ ನಾಯಕತ್ವ ಹಾಗೂ ಸೈದ್ಧಾಂತಿಕ ರಾಜಕಾರಣ ಅತ್ಯಂತ ಸಂಕೀರ್ಣವಾಗಿ ಅಭಿವ್ಯಕ್ತಗೊಳ್ಳುವುದು ಈ ನೆಲೆಯಲ್ಲೇ. ಸದಾ ಹೊಂದಾಣಿಕೆಯಿಲ್ಲದೆ, ಅಧಿಕಾರದ ಪ್ರಮುಖ ಸ್ಥಾನಗಳಿಗಾಗಿ, ಪಕ್ಷಗಳ ಬದಲಾವಣೆ ಮತ್ತು ಆಡಳಿತವು ತತ್ವ ರಹಿತವಾದ ವಿಚಾರಗಳಿಂದ ಮೂಡಿಬಂದಿದೆ ಮತ್ತಿತರ ಅಭಿಮತಗಳೂ ಕಂಡುಬರುವುವು. ಪಕ್ಷಾಂತರದ ನೆಲೆಯಲ್ಲಿ ಅಧಿಕಾರ ಪಡೆಯಲು ಪಕ್ಷಾಂತರ ಮಾಡಿದರೆ, ಅಧಿಕಾರ ತೊರೆಯಲು ಪಕ್ಷಾಂತರ ಮಾಡುವರು ಎಂದು ೧೯೮೧, ೧೯೮೪ ಮುಂತಾದ ಸಂದರ್ಭಗಳ ಕುರಿತಂತೆ ಕಂಡುಬರುವ ವಿಚಾರಧಾರೆಯಾಗಿದೆ. ಆದರೆ ಈ ಪಕ್ಷಾಂತರಗಳು ಸ್ಥಳೀಯವಾಗಿ ಚುನಾವಣೆಯಲ್ಲಿ ಗೆಲ್ಲಲು ಅಡ್ಡಿಮಾಡದಿರುವುದು ಕ್ಷೇತ್ರದ ಜನಪ್ರಿಯತೆಯನ್ನು ಸೂಚಿಸುವುದು. ಈ ಪಕ್ಷಾಂತರಗಳ ನಡುವೆಯೂ ಪ್ರಾದೇಶಿಕ ರಾಜಕಾರಣದಿಂದ ರಾಷ್ಟ್ರೀಯ ನೆಲೆಯಲ್ಲಿ ರಾಜಕಾರಣಿಯಾಗಿ ಬೆಳೆಯಲು ಸಾಧ್ಯವಾಗಿರುವುದು ಗಮನಾರ್ಹ.

### ೪.೧.೩.೩.೨. ಕಾಗೋಡು ತಿಮ್ಮಪ್ಪ

ಭೂ ಹೋರಾಟಗಳು ಮತ್ತು ಜಾರಿಯ ಅನುಷ್ಠಾನದ ನೆಲೆಯಲ್ಲಿ ಕಾಗೋಡು ತಿಮ್ಮಪ್ಪ ಅವರು ಪ್ರಮುಖ ರಾಜಕಾರಣಿಯಾಗಿ ಗುರುತಿಸಲ್ಪಡುವರು. ಕಾಗೋಡು ಸತ್ಯಾಗ್ರಹದ ಮೂಲಕ ಸಮಾಜವಾದಿ ಸಿದ್ಧಾಂತದಿಂದ ಪ್ರೇರಿತಗೊಂಡು ಸಮಾಜವಾದಿ ಚಳವಳಿ, ಪಕ್ಷ ಸಂಘಟನೆ ಕಾರ್ಯ, ಭೂ ಸುಧಾರಣೆ ಮತ್ತು ಗೇಣಿದಾರರ ಪರ ಸಕ್ರಿಯ ಹೋರಾಟಗಳೊಂದಿಗೆ ಸದಾ ಚರ್ಚೆಗೊಳಪಡುವ ರಾಜಕಾರಣಿ. ೧೯೭೨ರಲ್ಲಿ ಸಮಾಜವಾದಿ ಪಕ್ಷದ ಮೂಲಕ ಶಾಸನ ಸಭೆ ಪ್ರವೇಶಿಸಿದ ಇವರು ವಿರೋಧ ಪಕ್ಷದ ಸದಸ್ಯರಾಗಿದ್ದರು. ಅರಸು ಅವರು ಹಿಂದುಳಿದ ಜಾತಿಗಳ, ವರ್ಗಗಳ ವಿಚಾರವಂತ ಯುವಕರನ್ನು ಕಾಂಗ್ರೆಸ್ ಮೂಲಕ ರಾಜಕೀಯ ಮುಖ್ಯಧಾರೆಗೆ ಕರೆತಂದರು. ಜೊತೆಗೆ ವಿರೋಧ ಪಕ್ಷದಲ್ಲಿದ್ದ ಭೂ ಸುಧಾರಣೆ ಮುಂತಾದ ವಿಚಾರಗಳ ಬಗೆಗೆ ಪ್ರಗತಿಪರ ನಿಲುವುಗಳನ್ನು ಹೊಂದಿದ್ದವರನ್ನು ಕಾಂಗ್ರೆಸ್ ಪಕ್ಷದೊಳಗೆ ಸೆಳೆದುಕೊಂಡರು. ಈ ಸಂದರ್ಭದಲ್ಲಿ ಸಮಾಜವಾದಿ ರಾಜಕಾರಣಿಗಳಾದ ಕಾಗೋಡು ತಿಮ್ಮಪ್ಪ, ಎಸ್. ಬಂಗಾರಪ್ಪ,

ಕೋಣಂದೂರು ಲಿಂಗಪ್ಪ ಅರಸು ಅವರ ಕಾಲದ ಕಾಂಗ್ರೆಸ್ ಪಕ್ಷದ ಕಾರ್ಯಕ್ರಮಗಳಿಂದ ಪ್ರಭಾವಿತರಾಗಿ ಕಾಂಗ್ರೆಸ್ ಪಕ್ಷ ಸೇರಿದರು. ಈ ವಿಚಾರಗಳೇ ಕಾಂಗ್ರೆಸ್ ಪಕ್ಷ ಸೇರ್ಪಡೆಗೆ ಕಾರಣವಾಯಿತು ಎಂಬುದು ಸಾಮಾನ್ಯವಾಗಿ ಕಂಡುಬರುವ ಪ್ರಮುಖ ಅಭಿಮತವಾಗಿದೆ. ಸಾಮಾಜಿಕ ನ್ಯಾಯದ ಪರಿಕಲ್ಪನೆ ಹಾಗೂ ಅದಕ್ಕಾಗಿ ಆಡಳಿತ ಪಕ್ಷದೊಂದಿಗೆ ಗುರುತಿಸಿಕೊಳ್ಳುವ ಅಗತ್ಯದೊಂದಿಗೆ ಹೊಂದಾಣಿಕೆ ಮಾಡಿಕೊಂಡರು ಎಂಬುದು ಮೇಲಿನ ಅಭಿಮತಕ್ಕೆ ಪೂರಕವಾಗಿದೆ. ತುರ್ತುಪರಿಸ್ಥಿತಿ ನಂತರದ ರಾಜಕೀಯ ಬೆಳವಣಿಗೆಯಲ್ಲಿ ೧೯೭೭ರ ವಿಧಾನಸಭಾ ಚುನಾವಣೆಯ ಹೊತ್ತಿಗೆ ಜನತಾ ಪಕ್ಷ ಸೇರಿದರಾದರೂ ೧೯೮೦ರ ಆರಂಭದ ಹೊತ್ತಿಗೆ ಕಾಂಗ್ರೆಸ್‌ಗೆ ಪುನಃ ಮರಳಿದರು. ಅರಸು ಅವರ ಆಡಳಿತಾವಧಿಯಲ್ಲಿ ಕಾಗೋಡು ತಿಮ್ಮಪ್ಪನವರ ಕಾಂಗ್ರೆಸ್ ಸೇರ್ಪಡೆ ಅಧಿಕಾರಕ್ಕಾಗಿ ನಡೆಯಿತು. ಕಾಂಗ್ರೆಸ್ ಸೇರ್ಪಡೆಯಿಂದಾಗಿ ಸಂಪೂರ್ಣವಾಗಿ ಸಮಾಜವಾದಿ 'ಪಕ್ಷ' ರಾಜಕಾರಣ ಕೊನೆಗೊಂಡಿತು. ಶಿವಮೊಗ್ಗ ಸುತ್ತಮುತ್ತಲಿನ ಸಮಾಜವಾದಿ ಚಟುವಟಿಕೆಗಳ ಮೇಲೆ ವ್ಯತಿರಿಕ್ತ ಪ್ರಭಾವ ಬೀರಿತೆಂಬ ಅಭಿಪ್ರಾಯಗಳನ್ನು ಕಾಣಬಹುದು. ಆ ಸಂದರ್ಭದಲ್ಲಿ ಸಮಾಜವಾದಿ ಪಕ್ಷದಿಂದ ವಿಧಾನಸಭೆಗೆ ಆರಿಸಲ್ಪಟ್ಟ ಸದಸ್ಯರ ಸಂಖ್ಯೆ ಮೂರು. ಹಿಂದಿನ ವಿಧಾನಸಭಾ ಚುನಾವಣೆಗೆ ಹೋಲಿಸಿದರೆ ಇದು ಅತಿ ಕಡಿಮೆ ಇತ್ತು. ಗೋಪಾಲಗೌಡರ ನಿಧನ, ೧೯೭೪ರ ನಂತರ ಕಾಂಗ್ರೆಸ್ ಪ್ರಣಾಳಿಕೆಯಲ್ಲಾದ ಬದಲಾವಣೆಗಳು ಸಮಾಜವಾದಿ ಸೈದ್ಧಾಂತಿಕ ರಾಜಕಾರಣಿಗಳನ್ನು ಸಕ್ರಿಯ ರಾಜಕಾರಣದಲ್ಲಿ ಅಭದ್ರ ಸ್ಥಿತಿಗೆ ತಳ್ಳಿತ್ತು.

ಕಾಂಗ್ರೆಸ್ ಪ್ರವೇಶಕ್ಕೆ ಭೂ ಸುಧಾರಣಾ ಕಾಯ್ದೆಯ ಜಾರಿಗೊಳಿಸುವ ಪ್ರಕ್ರಿಯೆ ಪ್ರಮುಖವಾಗಿ ಕಾರ್ಯನಿರ್ವಹಿಸಿದೆ. ಶಿವಮೊಗ್ಗ ಪ್ರದೇಶದ ಭೂ ನ್ಯಾಯ ಮಂಡಳಿಗಳಲ್ಲಿ ಪ್ರಮುಖರಾಗಿ ಭೂ ರಹಿತರಿಗೆ, ಗೇಣಿದಾರರಿಗೆ ಭೂಮಿ ಕೊಡಿಸಲು ಸಾಧ್ಯವಾಯಿತು ಎಂಬ ಅಭಿಮತವಿದೆ. ಭೂ ಸುಧಾರಣಾ ಕಾಯ್ದೆ ಶಿವಮೊಗ್ಗದಲ್ಲಿ ಅತಿ ಹೆಚ್ಚು ಉತ್ತಮವಾಗಿ ಜಾರಿಗೊಳ್ಳಲು ಸಾಧ್ಯವಾಯಿತು. ಇದಕ್ಕೆ ಸ್ಥಳೀಯ ಸಮಾಜವಾದಿ ರಾಜಕಾರಣಿಗಳ ಕಾಂಗ್ರೆಸ್ ಪ್ರವೇಶ ಪ್ರಮುಖ ಕಾರಣ ಎಂಬ ಅಭಿಮತ ಅನೇಕ ಸಮಾಜವಾದಿಗಳು ಮತ್ತು ರಾಜಕಾರಣಿಗಳಲ್ಲಿ ಅಧಿಕವಾಗಿರುವುದು. ತುರ್ತುಪರಿಸ್ಥಿತಿ ಜಾರಿಯ ಹಿನ್ನೆಲೆಯಲ್ಲಿ ೧೯೭೭ರ ನಂತರ ಹೊರಬಂದು ಜನತಾ ಪಕ್ಷ ಸೇರುವರು. ಪಕ್ಷದ ಕಾರ್ಯನೀತಿಗಳಿಂದ ಅಸಮಾಧಾನ ಹೊಂದಿ ೧೯೮೦ರ ವೇಳೆಗೆ ಪುನಃ ಕಾಂಗ್ರೆಸ್ ಸೇರುವರು. ತದನಂತರ ೧೯೮೦ರಲ್ಲಿ ಕಾಗೋಡು ತಿಮ್ಮಪ್ಪ ಅವರು ಸಚಿವರಾಗುವರು. ತರುವಾಯ ಕಾಂಗ್ರೆಸ್ ಪಕ್ಷದ ಮೂಲಕ ಅನೇಕ ಬಾರಿ ಶಾಸಕರಾಗಿ ವಿವಿಧ ಪದವಿಗಳಲ್ಲಿ ಕಾರ್ಯನಿರ್ವಹಿಸಿರುವರು. ಪ್ರಸ್ತುತ ವಿಧಾನಸಭೆಯ ಸಭಾಪತಿಯಾಗಿದ್ದಾರೆ.

*** *** ***

'ಕರ್ನಾಟಕದ ಸಾಮಾಜಿಕ ಚಳವಳಿಗಳು ಮತ್ತು ರಾಜಕೀಯ ಪಕ್ಷಗಳೊಳಗಿನ ವಲಯಗಳನ್ನು ವಿಶ್ಲೇಷಿಸುವುದಾದರೆ, ಸಮಾಜವಾದಿ ಸಿದ್ಧಾಂತದ ಪ್ರಭಾವ ಚುನಾವಣಾ ರಾಜಕಾರಣದಲ್ಲಿ ಅತ್ಯಂತ ಗಟ್ಟಿಯಾಗಿಲ್ಲ. ದೇವರಾಜ್ ಅರಸರ ಕೆಲವು ಕಾರ್ಯನೀತಿಗಳಾದ ಭೂ ಸುಧಾರಣೆ ಮತ್ತು ಹಿಂದುಳಿದ ವರ್ಗಗಳ ಪರ ಕಾಯ್ದೆಗಳು ೧೯೭೦ರ ದಶಕದಲ್ಲಿ ಲೋಹಿಯಾ ಅವರ ಆಲೋಚನೆಗಳಿಂದ ತೆಗೆದುಕೊಂಡ ಸಾಲದಂತಿವೆ ... ಲೋಹಿಯಾ ಅವರ ರಾಜಕೀಯ ಮತ್ತು ಸೌಂದರ್ಯ ತತ್ವಗಳು, ವಿಭಿನ್ನ ವ್ಯಾಖ್ಯಾನಗಳು ಕರ್ನಾಟಕ ರಾಜ್ಯದ ರಾಜಕೀಯ ಪಕ್ಷ, ಸಾಮಾಜಿಕ ಚಳವಳಿಗಳು ಮತ್ತು ಸಾಹಿತ್ಯಿಕ ಚಳವಳಿಗಳ ವಲಯಗಳ ನಡುವಿನ ಸಂಬಂಧವನ್ನು ತೆರೆದಿಡುತ್ತವೆ' ಎಂದು ಚಂದನ್ ಗೌಡ ಅವರು 'ಮೆನಿ ಲೋಹಿಯಾಸ್ ? ಅಪ್ರಾಪ್ರಿಯೇಷನ್ಸ್ ಆಫ್ ಲೋಹಿಯಾ ಇನ್ ಕರ್ನಾಟಕ' ಎಂಬ ಲೇಖನದಲ್ಲಿ ವಿಶ್ಲೇಷಿಸುವರು. ಸಮಾಜವಾದಿ ಪಕ್ಷದ ರಾಜಕಾರಣ ಹಾಗೂ ೧೯೭೦ರ ದಶಕದಲ್ಲಿ ಪ್ರಮುಖ ಯುವ ಸಮಾಜವಾದಿ ರಾಜಕಾರಣಿಗಳು ಕಾಂಗ್ರೆಸ್ ಪಕ್ಷಕ್ಕೆ ಸೇರಿದ ಒಳನೋಟವನ್ನು ನೀಡುವುವು. ಕಾಗೋಡು ತಿಮ್ಮಪ್ಪ ಮತ್ತು ಬಂಗಾರಪ್ಪ ಇಬ್ಬರೂ ಶಿವಮೊಗ್ಗ ಪ್ರದೇಶದ ಸಮಾಜವಾದಿ ಪಕ್ಷದ ಮೂಲಕ ರಾಜಕಾರಣದಲ್ಲಿ ತೊಡಗಿಸಿ ಕೊಂಡಿದ್ದವರು. ಅರಸು ಅವರ ಸಾಮಾಜಿಕ ನ್ಯಾಯದ ನೆಲೆಯ ಕಾರ್ಯಕ್ರಮಗಳು ಹಿಂದುಳಿದ ವರ್ಗದ ಪ್ರತಿಭಾವಂತ ಯುವಕರನ್ನು ಕಾಂಗ್ರೆಸ್‌ಗೆ ಕರೆತಂದಿತು. ಈ ಕಾರ್ಯನೀತಿಗಳು ಸಮಾಜವಾದಿ

ಸಿದ್ಧಾಂತಗಳಿಂದ ಪ್ರಭಾವಿತವಾಗಿದ್ದವು. ಸಮಾಜವಾದಿ ಪಕ್ಷದ ರಾಜಕಾರಣಿಗಳು ಕಾಂಗ್ರೆಸ್ ಪಕ್ಷಕ್ಕೆ ಸೇರಲು ಪೂರಕವಾಗಿ ಕಾರ್ಯನಿರ್ವಹಿಸಿದವು ಎಂಬ ವಿಶ್ಲೇಷಣೆಗಳನ್ನು ಕಾಣಬಹುದು. ಬಂಗಾರಪ್ಪ ಮತ್ತು ಕಾಗೋಡು ತಿಮ್ಮಪ್ಪ ಅವರ ಕಾಂಗ್ರೆಸ್ ಪಕ್ಷದ ಸೇರ್ಪಡೆಗೆ ಮೇಲಿನ ಹಲವು ವಿಚಾರಗಳು ಪೂರಕವಾಗಿ ಕಾರ್ಯನಿರ್ವಹಿಸಿವೆ. ಶಿವಮೊಗ್ಗದ ಸಾಗರ, ಸೊರಬ, ಹೊಸನಗರ ಪ್ರದೇಶಗಳಲ್ಲಿ ದೀವರು ಜಾತಿಯ ಜನರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಇಬ್ಬರೂ ಅದೇ ಜಾತಿಯ ಭರವಸೆಯ ಪ್ರಮುಖ ಯುವ ನಾಯಕರು, ಹೋರಾಟಗಾರರು, ಸುಶಿಕ್ಷಿತರು. ಇದರೊಡನೆ ಹಿಂದುಳಿದ ಜಾತಿಗಳ ಪ್ರತಿನಿಧಿಗಳು, ಭೂ ಸುಧಾರಣೆ ಅನುಷ್ಠಾನದಲ್ಲಿ ಕಾಳಜಿ ಇರುವವರು ಮತ್ತಿತರ ವಿಚಾರಗಳು ಪ್ರಮುಖ ಪಾತ್ರವಹಿಸಿವೆ. ಈ ಪ್ರದೇಶದಲ್ಲಿ ಸಮಾಜವಾದಿ ಪಕ್ಷ ಬೆಳೆಯುವ ಮೊದಲು ಕಾಂಗ್ರೆಸ್ ಪಕ್ಷದ ನಾಯಕರುಗಳು ವೀರಶೈವ ಹಾಗೂ ಬ್ರಾಹ್ಮಣ ಸಮುದಾಯಗಳಿಂದ ಬಂದಿದ್ದವರು. ಈ ಸಮುದಾಯಗಳು ಹೆಚ್ಚು ಪ್ರಭಾವಿಯಾಗಿದ್ದು ಭೂ ಮಾಲಿಕ ವರ್ಗವಾಗಿದ್ದವು. ಸಮಾಜವಾದಿ ಪಕ್ಷದ ಬೆಳವಣಿಗೆಯಿಂದ ಕಾಂಗ್ರೆಸ್ ಪಕ್ಷ ಸ್ಥಾನ ಕಳೆದುಕೊಂಡಿತ್ತು. ಅರಸರ ಈ ಕ್ರಮ ಮತ್ತೆ ಕಾಂಗ್ರೆಸ್ ಸ್ಥಾನ ಪಡೆಯಲು ನೆರವಾಯಿತು. ಅಲ್ಲಿಯವರೆಗೆ ರಾಜಾಕಾರಣದಲ್ಲಿದ್ದ ಪ್ರಮುಖ ಪ್ರಬಲ ಜಾತಿಗಳ ಬದಲು ಹಿಂದುಳಿದ ಜಾತಿಗಳೆಡೆಗೆ ಅಧಿಕಾರ ವರ್ಗಾವಣೆಯಾಯಿತು. ಆಡಳಿತ ಕಾಂಗ್ರೆಸ್ ಪಕ್ಷ ಸಶಕ್ತವಾಗಲು ಸಹಕಾರವಾಯಿತು ಎಂಬ ಚಿಂತನೆಯನ್ನು ಗಮನಿಸಬಹುದು.

ಕಾಗೋಡು ತಿಮ್ಮಪ್ಪ ಮತ್ತು ಬಂಗಾರಪ್ಪರವರು ಕಾಂಗ್ರೆಸ್ ಸೇರ್ಪಡೆ ನಂತರ ಬೇರೆ ಪಕ್ಷಗಳಿಗೆ ಹೋಗಿ ಮತ್ತೆ ಕಾಂಗ್ರೆಸ್ಸಿಗೆ ಹಿಂದಿರುಗುವುದನ್ನು ಕಾಣಬಹುದು. ನಂತರದ ರಾಜಕಾರಣದಲ್ಲಿ ಸಮಾಜವಾದಿ ಸೈದ್ಧಾಂತಿಕತೆಯ ಪ್ರಭಾವ ಕಡಿಮೆ ಕಂಡುಬರುವುದು. ೧೯೭೮ರಲ್ಲೇ ಬಂಗಾರಪ್ಪ ಅವರು ಅರಸು ಸಚಿವ ಸಂಪುಟದಲ್ಲಿ ಸ್ಥಾನ ಪಡೆದರು. ನಂತರ ಕ್ಯಾಬಿನೆಟ್ ದರ್ಜೆ ಮಂತ್ರಿಯಾಗುವರು. ಆಗ ಕಾಗೋಡು ತಿಮ್ಮಪ್ಪ ಅವರು ಕಾಂಗ್ರೆಸ್ ಪಕ್ಷವನ್ನು ತೊರೆದು ಜನತಾ ಪಕ್ಷದಲ್ಲಿದ್ದರು. '೧೯೭೯ರಲ್ಲಿ ಕಾಂಗ್ರೆಸ್ ಪಕ್ಷಕ್ಕೆ ಹಿಂದಿರುಗಲು ಪ್ರಮುಖ ಕಾರಣ ಸಹ ಅನಿವಾರ್ಯ. ಇಂದಿರಾ ಗಾಂಧಿ ಅವರ ದೃಷ್ಟಿಕೋನದಲ್ಲಿ ಸಮಾಜದ ಎಲ್ಲ ವರ್ಗದವರು ಒಂದು ವೇದಿಕೆ ಮೇಲೆ ಬರುವಂತಾದ ಸಿದ್ಧಾಂತ ಮತ್ತು ಕಾರ್ಯಾಚರಣೆ ಮಾತ್ರ ಕಾಂಗ್ರೆಸ್ ಸೇರಲು ಕಾರಣ' ಎಂಬ ಕಾಗೋಡು ತಿಮ್ಮಪ್ಪನವರ ಅಭಿಪ್ರಾಯ ಗಮನಾರ್ಹ. ಸಮಾಜವಾದಿ ಪಕ್ಷ ಸಂಪೂರ್ಣವಾಗಿ ಕರ್ನಾಟಕದ ರಾಜಕಾರಣದಲ್ಲಿ ಅಸ್ತಿತ್ವ ಕಳೆದುಕೊಳ್ಳಲು ಕಾಗೋಡು ತಿಮ್ಮಪ್ಪನವರ ಕಾಂಗ್ರೆಸ್ ಪಕ್ಷ ಸೇರ್ಪಡೆ ಪ್ರಮುಖ ಕಾರಣ ಎಂಬ ಟೀಕೆ ಕಂಡುಬರುವುದು. ಸಮಕಾಲೀನವಾಗಿ ಪ್ರಮುಖ ಸಮಾಜವಾದಿ ರಾಜಕಾರಣಿಯಾದ ಬಂಗಾರಪ್ಪ ಅವರ ಕುರಿತು, ಇದು ಕೇಳಿ ಬಾರದಿರುವುದು ಗಮನ ಸೆಳೆಯುವುದು. ಮುಂದಿನ ರಾಜಕಾರಣದಲ್ಲಿ ವೈಯಕ್ತಿಕ ನೆಲೆಗಳಲ್ಲಿ ಈರ್ವರ ನಡುವೆ ಭಿನ್ನಾಭಿಪ್ರಾಯ, ಸ್ಪರ್ಧೆ ಗೋಚರವಾಗುವುದು.

**೪.೧.೩.೩.೩. ಎಂ. ವೀರಪ್ಪ ಮೊಯಿಲಿ**

೧೯೭೨ರ ರಾಜ್ಯ ವಿಧಾನಸಭಾ ಚುನಾವಣೆಯ ಮೂಲಕ ರಾಜಕೀಯ ಮುಖ್ಯಧಾರೆಗೆ ಬಂದ ಹಿಂದುಳಿದ ಜಾತಿ, ವರ್ಗಗಳ ಪ್ರತಿಭಾವಂತ ಯುವಕರಲ್ಲಿ ವೀರಪ್ಪ ಮೊಯಿಲಿ ಒಬ್ಬರು. ಜಿಲ್ಲಾ ಹಿಂದುಳಿದ ವರ್ಗಗಳ ಪ್ರಧಾನ ಕಾರ್ಯದರ್ಶಿ ಮತ್ತು ಕಿಸಾನ್ ಸಭಾ ಸ್ಥಾಪನೆಯ ಮೂಲಕ ಗೇಣಿದಾರರ ಹಕ್ಕಿನ ಸಂರಕ್ಷಣೆ ಹೋರಾಟಗಳಲ್ಲಿ ತೊಡಗಿಸಿಕೊಂಡಿದ್ದವರು. ಜತೆಗೆ ಸ್ಥಳೀಯ ಕಾಂಗ್ರೆಸ್‌ನ ಪ್ರಮುಖ ಕಾರ್ಯಕರ್ತರಾಗಿದ್ದು ೧೯೬೯ರಲ್ಲಿ ತಾಲೂಕು ಮಟ್ಟದ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದರು. ರಾಜ್ಯ ಕಾಂಗ್ರೆಸ್ ಪಕ್ಷದ ಮುಖ್ಯ ಧೋರಣೆ ಸಾಮಾಜಿಕ ನ್ಯಾಯದ ಪರಿಕಲ್ಪನೆಯ ನೆಲೆಯಲ್ಲಿ ಭೂ ಸುಧಾರಣೆ, ಹಿಂದುಳಿದ ವರ್ಗಗಳ ರಾಜಕೀಯ ಸಂಘಟನೆ ಮತ್ತು ಅಭಿವೃದ್ಧಿ ಕಾರ್ಯಕ್ರಮಗಳನ್ನು ಮಾಡುವುದಾಗಿತ್ತು. ಈ ನಿಟ್ಟಿನಲ್ಲಿ ಸಕ್ರಿಯವಾಗಿ ಹೋರಾಟದಲ್ಲಿ ತೊಡಗಿಕೊಂಡಿದ್ದ ಮೊಯಿಲಿ ಅವರು ರಾಜಕಾರಣದ ಮುಖ್ಯಧಾರೆಯಲ್ಲಿ ರಾಜ್ಯ ಮತ್ತು ರಾಷ್ಟ್ರ ರಾಜಕಾರಣಿಯಾಗಿ ಗುರುತಿಸಿಕೊಂಡಿದ್ದನ್ನು ಕಾಣಬಹುದು.

ಅರಸುರವರ ಪ್ರಮುಖ ಭರವಸೆಯ ನಾಯಕರಾಗಿದ್ದು, ೧೯೭೪ ರಿಂದ ೧೯೭೭ರವರೆಗೆ ಸಣ್ಣ ಕೈಗಾರಿಕಾ ಸಚಿವರಾಗಿದ್ದರು. ೧೯೭೮ರಲ್ಲಿ ಶಾಸಕರಾಗಿ ಆಯ್ಕೆಯಾದ ನಂತರ ಚಿಕ್ಕಮಗಳೂರು ಚುನಾವಣೆಯಲ್ಲಿ ಇಂದಿರಾ ಗಾಂಧಿ ಅವರ ನೇರಸಂಪರ್ಕ ಪಡೆದುಕೊಂಡರು. ಈ ಹಂತದಿಂದ ಅರಸುವಿನಿಂದ ದೂರ ಸರಿಯುವಿಕೆ ಕಂಡುಬರುವುದು. ಚಿಕ್ಕಮಗಳೂರು ಚುನಾವಣೆಯ ನಂತರ ಇಂದಿರಾ ಗಾಂಧಿ ಮತ್ತು ದೇವರಾಜ ಅರಸರ ನಡುವಿನ ಸಂಬಂಧ ಹದಗೆಡಲು ಆರಂಭಿಸಿ, ಕೆಲವು ತಿಂಗಳುಗಳಲ್ಲಿ ಬಹಿರಂಗವಾಗಿ ಪ್ರಕಟಗೊಂಡಿತು. ಈ ಸಂದರ್ಭದಲ್ಲಿ ಮೊಯಿಲಿ ಅವರು ಇಂದಿರಾ ಗಾಂಧಿ ಅವರ ಪರ ನಿಲ್ಲುವರು. ಕೆಪಿಸಿಸಿ(ಐ) ಅಧ್ಯಕ್ಷರಾಗಲು ಸೂಚಿಸಿದಾಗ ಉದ್ದೇಶ ಪೂರ್ವಕವಾಗಿ ಬಂಗಾರಪ್ಪ ಅವರನ್ನು ಸೂಚಿಸಿದರು. ಇದು ಅರಸು ಮತ್ತು ಸಚಿವ ಸಂಪುಟದವರಿಗೆ ಆಘಾತ ಉಂಟುಮಾಡುವುದು[೩೩] ಎನ್ನುವ ಕಾರಣ ಕೇಳಿಬರುವುದು. ೧೯೭೮ರ ಚುನಾವಣೆಯ ನಂತರ ವೀರಪ್ಪ ಮೊಯಿಲಿ ಅವರು ಅರಸರ ಸಚಿವ ಸಂಪುಟದಲ್ಲಿರಲಿಲ್ಲ. ಬಂಗಾರಪ್ಪನವರು ಹೆಚ್ಚಿನ ಪ್ರಾಮುಖ್ಯತೆ ಪಡೆದಿದ್ದ ಯುವನಾಯಕರಾಗಿದ್ದರು. ಇವು ಸಮಕಾಲೀನವಾಗಿ ಪೂರಕವಾಗಿ ಕಾರ್ಯನಿರ್ವಹಿಸಿರುವ ಸಾಧ್ಯತೆಯಿದೆ. ಪ್ರಸ್ತುತ ಸಂದರ್ಭದಲ್ಲಿಯೂ ಮೊಯಿಲಿಯವರು ಅರಸರ ಆಡಳಿತ ಕಾಲಾವಧಿಯ ಕುರಿತಂತೆ ಉತ್ತಮ ಆಡಳಿತ ನಿರ್ವಾಹಕ ಎಂದು ಒಪ್ಪುತ್ತಾರೆ. ಆದರೆ ಈ ಕಾರ್ಯಕ್ರಮಗಳು ಇಂದಿರಾ ಗಾಂಧಿ ಅವರಿಂದ ಪ್ರೇರಿತವಾಗಿದ್ದು, ಅರಸು ಅವರ ಮುಖೇನ ಅನುಷ್ಠಾನಗೊಂಡಿತ್ತು ಎಂಬ ಅಭಿಪ್ರಾಯ ಕಂಡುಬರುವುದು.

ಮೊಯಿಲಿಯವರು ೧೯೮೦ರಲ್ಲಿ ಆರ್ಥಿಕ ಖಾತೆ ಸಚಿವರಾಗಿದ್ದು, ನಂತರ ೧೯೮೩-೧೯೮೯ರವರೆಗೆ ಕೆಪಿಸಿಸಿ(ಐ) ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿರುವರು. ೧೯೮೩ರಲ್ಲಿ ಮೊದಲ ಬಾರಿ ಕಾಂಗ್ರೆಸೇತರ ಸರ್ಕಾರ ಆಡಳಿತಕ್ಕೆ ಬಂದ ನಂತರ ಪ್ರಾದೇಶಿಕ ಕಾಂಗ್ರೆಸ್ ಸಮಿತಿಯೊಳಗೆ ಅನೇಕ ಸ್ಥಿತ್ಯಂತರಗಳುಂಟಾಯಿತು. ಆ ಸಂದರ್ಭದಲ್ಲಿ ೬ ಬಾರಿ ಅಧ್ಯಕ್ಷರ ಬದಲಾವಣೆಯಾಯಿತು ಎಂಬುದು ಪಕ್ಷದೊಳಗಿನ ಅಸ್ಥಿರತೆ ಮತ್ತು ಆಂತರಿಕ ಭಿನ್ನಾಭಿಪ್ರಾಯಗಳನ್ನು ತೆರೆದಿಡುವುದು. ೧೯೮೯ರಲ್ಲಿ ಪಕ್ಷ ಸದೃಢಗೊಂಡು ರಾಜ್ಯದಲ್ಲಿ ಬಹುಮತ ಪಡೆಯಲು ಪ್ರಮುಖ ಕಾರಣಕರ್ತರು ಮೊಯಿಲಿ ಅವರಾಗಿದ್ದಾರೆ ಎಂದು ಗುರುತಿಸಲಾಗುವುದು. ೧೯೮೯ರಲ್ಲಿ ಕಾಂಗ್ರೆಸ್ ಪಕ್ಷ ಬಹುಮತದೊಂದಿಗೆ ಆಡಳಿತಕ್ಕೆ ಬಂದರೂ ಆಂತರಿಕವಾಗಿದ್ದ ಭಿನ್ನತೆಗಳು ಮುಂದುವರೆಯಿತು. ೧೯೯೦ರ ನಂತರ ಮುಖ್ಯಮಂತ್ರಿ ಪದವಿಗಾಗಿ ಮೊಯಿಲಿ ಮತ್ತು ಬಂಗಾರಪ್ಪರವರ ನಡುವೆ ಸ್ಪರ್ಧೆ ಕಂಡುಬರುವುದು. ಕೆಲವು ವರ್ಷಗಳ ಅಂತರದಲ್ಲಿ ಅರಸು ಅವರ ಆಡಳಿತದಲ್ಲಿ ಕಾಂಗ್ರೆಸ್ ಪಕ್ಷದಿಂದ ಶಾಸಕರಾಗಿ ಬಂದ ಈರ್ವರು ಪ್ರಮುಖ ಭರವಸೆಯ ನಾಯಕರಾಗಿದ್ದರು. ಹೈಕಮಾಂಡ್ ಮೊಯಿಲಿ ಅವರ ಪರವಿದ್ದರೂ, ಪ್ರಾದೇಶಿಕ ರಾಜಕಾರಣದಲ್ಲಿ ಬಂಗಾರಪ್ಪನವರ ಪರ ಅಲೆ ಕಂಡುಬಂದಿತು. ಮೊಯಿಲಿ ಅವರು ಆರಂಭದಿಂದಲೂ ಪಕ್ಷ ನಿಷ್ಠರಾಗಿದ್ದು, ಎಲ್ಲ ಹಂತದಲ್ಲಿಯೂ ಪಕ್ಷದ ಜೊತೆಗಿದ್ದ ವ್ಯಕ್ತಿ. ಬಂಗಾರಪ್ಪ ಅವರು ಅನೇಕ ಬಾರಿ ಕಾಂಗ್ರೆಸ್ ತೊರೆದು ಮತ್ತೆ ಕಾಂಗ್ರೆಸ್ ಸೇರಿದ್ದವರು. ಸಮಕಾಲೀನ ರಾಜಕೀಯ ಬೆಳವಣಿಗೆಯಿಂದಾಗಿ ಪಕ್ಷ ನಿಷ್ಠೆ ಹೊಂದಿದ್ದ ಮೊಯಿಲಿ ಅವರು ಮುಖ್ಯಮಂತ್ರಿ ಆಗಲು ಸಾಧ್ಯವಾಗುವುದಿಲ್ಲ. ಆದರೆ ಸ್ವಲ್ಪ ಕಾಲದಲ್ಲಿಯೇ ರಾಜಕೀಯ ಬೆಳವಣಿಗೆಗಳಿಂದ ೧೯೯೨ರಲ್ಲಿ ಬಂಗಾರಪ್ಪ ಅವರು ಮುಖ್ಯಮಂತ್ರಿ ಸ್ಥಾನಕ್ಕೆ ರಾಜೀನಾಮೆ ಕೊಡಬೇಕಾಗಿ ಬಂದಿತು. ೧೯೯೨ರಲ್ಲಿ ಎಂ. ವೀರಪ್ಪ ಮೊಯಿಲಿ ಅವರು ಮುಖ್ಯಮಂತ್ರಿ ಆದರು. ಈ ಸಂದರ್ಭದಲ್ಲಿ ಮುಖ್ಯಮಂತ್ರಿ ಪದವಿಗಾಗಿ ಪ್ರಾದೇಶಿಕ ರಾಜಕಾರಣದಲ್ಲಿ ಶಕ್ತಿಪ್ರದರ್ಶನ ಸಭೆಗಳನ್ನು ನೋಡಬಹುದು.

ವೀರಪ್ಪ ಮೊಯಿಲಿ ಅವರು ಮುಖ್ಯಮಂತ್ರಿಯಾದ ಸಂದರ್ಭವನ್ನು ಸಾಕ್ಷರತಾ ಆಂದೋಲನದ 'ಸ್ವರ್ಣಯುಗ' ಎಂದು ಬಿಂಬಿಸಲಾಗಿದ್ದು, ಸಾಕ್ಷಾರತಾ ಆಂದೋಲನಕ್ಕೆ ಗರಿಷ್ಠ ಪ್ರಾಧಾನ್ಯತೆ ನೀಡಲಾಯಿತು. ಕರ್ನಾಟಕದ ಶಿಕ್ಷಣ ಪದ್ಧತಿಯಲ್ಲಿ ಕ್ರಾಂತಿಕಾರಿ ಬದಲಾವಣೆಗಳನ್ನು ಮಾಡಿದ, ಹಲವಾರು ಪ್ರಗತಿಪರ ಕಾರ್ಯಕ್ರಮಗಳ ಮೂಲಕ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಸಂಸ್ಥೆಗಳ ನಿರ್ಮಾಣಕ್ಕೆ ಕಾರಣರು. ನ್ಯೂ ಕಾಮನ್ ಎಂಟ್ರೆನ್ಸ್ ಟೆಸ್ಟ್(ಸಿಇಟಿ) ಪದ್ಧತಿಯ ಆರಂಭಕ್ಕೆ ಕಾರಣಕರ್ತರು. ತಾಂತ್ರಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ನಿಯೋಜಿಸಿದ್ದು, ಯೋಗ್ಯತೆ, ಪಾರದರ್ಶಕತೆ ಮೂಲಕ ಕಾರ್ಯ ನಿರ್ವಹಿಸುವುದು. ಬೃಹತ್ ಪ್ರಮಾಣದಲ್ಲಿ

ವೃತ್ತಿಪರ ಶಿಕ್ಷಣ ಪಡೆಯಲು ಮತ್ತು ಶಿಕ್ಷಣ ಸಂಸ್ಥೆಗಳ ನಿರ್ಮಾಣಕ್ಕೆ ಅವಕಾಶ ತೆರೆಯಿತು. ಈ ಕಾರ್ಯಕ್ರಮ ಸಾಮಾಜಿಕ ನ್ಯಾಯದ ಹಿನ್ನೆಲೆಯಲ್ಲಿ ತಂದ ಸುಧಾರಣೆ ಎಂಬ ಅಭಿಮತವಿದೆ. ರಾಜಕೀಯ ವೃತ್ತಿಜೀವನ ವನ್ನು ಗಮನಿಸಿದಾಗ ರಾಜೀವ್ ಗಾಂಧಿ ವೈದ್ಯಕೀಯ ವಿಶ್ವವಿದ್ಯಾಲಯ, ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ, ಕರ್ನಾಟಕ ಮುಕ್ತ ವಿಶ್ವವಿದ್ಯಾಲಯ, ಮಂಗಳೂರು ವಿಶ್ವವಿದ್ಯಾಲಯ, ಗುಲ್ಬರ್ಗ ವಿಶ್ವವಿದ್ಯಾಲಯ ಮತ್ತು ಕನ್ನಡ ವಿಶ್ವವಿದ್ಯಾಲಯಗಳ ಅಭಿವೃದ್ಧಿಗೆ ಪ್ರಮುಖವಾಗಿ ಕಾರಣರಾದರು.

ಮೊಯಿಲಿ ಅವರು ಮುಖ್ಯಮಂತ್ರಿಗಳಾದ ನಂತರ ಮಂತ್ರಿಮಂಡಲದಲ್ಲಿ ರಾಜಶೇಖರ್ ಮೂರ್ತಿ, ಭೀಮಣ್ಣ ಖಂಡ್ರೆ, ಚೌಡಾರೆಡ್ಡಿ, ಎನ್. ಧರ್ಮ್‌ಸಿಂಗ್, ಎಂ. ವೈ. ಘೋರ್ಪಡೆ, ಗೋಪಿನಾಥ್ ಆರ್. ಸಾಂಡ್ರಾ, ಹುಚ್ಚಮಾಸ್ತಿಗೌಡ, ಹಾರ್‍ನಹಳ್ಳಿ ರಾಮಸ್ವಾಮಿ, ಮಲ್ಲಿಕಾರ್ಜುನ ಖರ್ಗೆ, ಮನೋರಮಾ ಮಾಧ್ವರಾಜ್, ಕೆ. ಎಚ್. ರಂಗನಾಥ್, ಎಸ್. ಎಂ. ಯಾಹ್ಯಾ, ಬ್ಲೇಸಿಯಜ್ ಡಿಸೋಜಾ, ಎಸ್. ಎಂ. ಕೃಷ್ಣ ಮತ್ತಿತರರನ್ನು ಕಾಣಬಹುದು. ಇವರಲ್ಲಿನ ಬಹುತೇಕರು ಅರಸು ಅವರ ಕಾಲದ ಮಂತ್ರಿಮಂಡಲದಲ್ಲಿದ್ದವರು. ಕೆಲವರು ಅರಸು ಅವರ ಮೂಲಕ ರಾಜಕೀಯ ವೃತ್ತಿ ಜೀವನ ಅಥವಾ ರಾಜಕೀಯದ ಮುಖ್ಯಧಾರೆಯಲ್ಲಿ ಕಂಡುಬಂದವರು. ಹಿಂದುಳಿದ ವರ್ಗದ ಅಭಿವೃದ್ಧಿ ನೆಲೆಯಲ್ಲಿ ೧೯೯೪ರಲ್ಲಿ ಚಿನ್ನಪ್ಪರೆಡ್ಡಿ ವರದಿಯ ಆಧಾರದ ಮೇಲೆ ಮೀಸಲಾತಿಯಲ್ಲಿ ಕೆಲವು ಬದಲಾವಣೆಗಳನ್ನು ತರಲಾಯಿತು. ಮುಸ್ಲಿಂರಿಗೆ ಪ್ರತ್ಯೇಕ ಮೀಸಲಾತಿ, ಮಹಿಳೆಯರಿಗೆ ಸ್ಥಿರಾಸ್ತಿಯಲ್ಲಿ ಹಕ್ಕು, ಭೂ ಸುಧಾರಣಾ ಕಾಯ್ದೆಯೊಳಗೆ ಮಹಿಳೆಯರಿಗೆ ಶೇ.೫೦ರಷ್ಟನ್ನು ಮಹಿಳಾ ಬೇಸಾಯಗಾರರಿಗೆ ನೀಡಿರುವುದು ಮೊದಲಾದವುಗಳು ಪ್ರಮುಖವಾಗಿವೆ. ಅರಸು ಅವರ ಕಾಲದಲ್ಲಿ ಕಂಡುಬಂದ ಕಾರ್ಯಕ್ರಮಗಳ ಪುನರ್ ಜಾರಿಯ ಪ್ರಯತ್ನದಂತೆ ಕಂಡುಬಂದಿತು ಎಂಬ ಅಭಿಮತವಿದೆ. ೧೯೯೪ರಲ್ಲಿ ಅನಿರೀಕ್ಷಿತ ರಾಜಕೀಯ ಬೆಳವಣಿಗೆಯಲ್ಲಿ ಮುಖ್ಯಮಂತ್ರಿ ಪದವಿಯಿಂದ ಕೆಳಗಿಳಿಯಬೇಕಾಯಿತು. ನಂತರ ಪ್ರಾದೇಶಿಕ ರಾಜಕಾರಣದಿಂದ ರಾಷ್ಟ್ರೀಯ ರಾಜಕಾರಣದಲ್ಲಿ ಕಂಡುಬರುವವರು. ಇವರಿಗೆ ೨೦೦೧ರಲ್ಲಿ ದೇವರಾಜ ಅರಸು ಪ್ರಶಸ್ತಿ ದೊರೆತಿದೆ. ಎರಡನೇ ಆಡಳಿತ ಸುಧಾರಣಾ ಸಮಿತಿ ಅಧ್ಯಕ್ಷ ಮುಂತಾದ ಪ್ರಮುಖ ಹುದ್ದೆಗಳಲ್ಲಿ ಕಾರ್ಯನಿರ್ವಹಿಸಿರುವುದು ಕಂಡುಬರುವುದು. ಪ್ರಸ್ತುತ ಲೋಕಸಭೆಯ ಸದಸ್ಯರಾಗಿರುವರು.

### ೪.೧.೩.೩.೪. ಎನ್. ಧರ್ಮಸಿಂಗ್

ಧರ್ಮಸಿಂಗ್ ಅವರು ಉತ್ತರ ಕರ್ನಾಟಕ ಪ್ರದೇಶದ ಪ್ರಮುಖ ರಾಜಕಾರಣಿಗಳಲ್ಲಿ ಒಬ್ಬರು. ಹಿಂದುಳಿದ ಜೇವರ್ಗಿ ಕ್ಷೇತ್ರದಿಂದ ವಿಧಾನಸಭೆಗೆ ಸ್ಪರ್ಧಿಸುವ ಮೂಲಕ ನಿರಂತರವಾಗಿ ಎಂಟು ಬಾರಿ ಗೆದ್ದಿರುವರು. ಶಾಂತಚಿತ್ತ ರಾಜಕಾರಣಿ ಎಂದು ಹೆಸರಾಗಿದ್ದು, ರಾಜಕಾರಣದಲ್ಲಿ ಅಜಾತ ಶತ್ರುವೆಂದು ಕರೆಯಲಾಗುವುದು. ಸುಮಾರು ಎರಡು ದಶಕಗಳ ಆಡಳಿತದ ಅನುಭವ ಇರುವ ಧರ್ಮಸಿಂಗ್ ಅವರು ಪ್ರಮುಖ ರಾಜಕೀಯ ಮುತ್ಸದ್ದಿ. ಅನೇಕ ಮುಖ್ಯಮಂತ್ರಿಗಳ ಅಡಿಯಲ್ಲಿ ಮಂತ್ರಿಯಾಗಿ ಕಾರ್ಯ ನಿರ್ವಹಿಸಿದ್ದಾರೆ. ದೇವರಾಜ್ ಅರಸು, ಆರ್. ಗುಂಡೂರಾವ್, ಎಸ್. ಬಂಗಾರಪ್ಪ, ಎಂ. ವೀರಪ್ಪ ಮೊಯಿಲಿ ಮತ್ತು ಎಸ್. ಎಂ. ಕೃಷ್ಣ ಮೊದಲಾದವರ ಅಡಿಯಲ್ಲಿ ವಿವಿಧ ಇಲಾಖೆಗಳಲ್ಲಿ ಸಚಿವರಾಗಿದ್ದರು. ಗೃಹ, ಸಮಾಜ ಕಲ್ಯಾಣ, ನಗರ ಅಭಿವೃದ್ಧಿ ಮತ್ತು ಕಂದಾಯ ಮುಂತಾದ ಖಾತೆಗಳಲ್ಲಿ ಕಾರ್ಯನಿರ್ವಹಿಸಿರುವರು. ಇದರೊಡನೆ ೧೯೯೦ರಲ್ಲಿ ಕೆಪಿಸಿಸಿ ಅಧ್ಯಕ್ಷರಾಗಿದ್ದರು. ೧೯೯೯ರಲ್ಲಿ ಮುಖ್ಯಮಂತ್ರಿ ಪದವಿಯ ಸ್ಪರ್ಧೆಯನ್ನು ಹಿರಿಯ ನಾಯಕರಾದ ಎಸ್. ಎಂ. ಕೃಷ್ಣ ವಿರುದ್ಧ ಸೋತರು. ಮುಂದೆ ಅವರ ಸಂಪುಟದಲ್ಲಿ ಸಾರ್ವಜನಿಕ ಕಾರ್ಯಗಳ ವಿಭಾಗದಲ್ಲಿ ಸೇವೆ ಸಲ್ಲಿಸಿದ್ದನ್ನು ನೋಡಬಹುದು. ೨೦೦೪ರಲ್ಲಿ ನಡೆದ ಚುನಾವಣೆಯಲ್ಲಿ ಬಹುಮತವಿರದ ಕಾರಣ ಕಾಂಗ್ರೆಸ್ ಮತ್ತು ಜನತಾ(ಎಸ್) ಪಕ್ಷದ ಸಮ್ಮಿಶ್ರ ಸರ್ಕಾರ ಅಸ್ತಿತ್ವ ಪಡೆಯಿತು. ಈ ಸಂದರ್ಭದಲ್ಲಿ ಮುಖ್ಯಮಂತ್ರಿಯಾಗಿ ೨೦ ತಿಂಗಳುಗಳ ಕಾಲ ಆಡಳಿತ ನಡೆಸಿದರು. ಹೊಂದಾಣಿಕೆ ಮತ್ತು ಸ್ನೇಹಮಯ ಸ್ವಭಾವದಿಂದಾಗಿ ಸರ್ವಾನುಮತದಿಂದ ಮುಖ್ಯಮಂತ್ರಿಯಾಗಿ ಆಯ್ಕೆಯಾದರು

ಎಂಬುದು ಧರ್ಮಸಿಂಗ್ ಅವರ ರಾಜಕೀಯ ವೃತ್ತಿಜೀವನ ಕುರಿತಂತೆ ಸಾಮಾನ್ಯವಾಗಿ ಕಂಡುಬರುವ ಅಭಿಮತ ಹಾಗೂ ವಿವರಗಳಾಗಿವೆ.

> ಅಂದು ದೇವರಾಜ್ ಅರಸ್ ಇಂದು ಧರ್ಮಸಿಂಗ್ ಎಂಬ ಘೋಷಣೆಗಳನ್ನು ಈಗ ಎಲ್ಲೆಲ್ಲಿಯೂ ಬರೆಯಲಾಗಿದೆ ... ಧರ್ಮಸಿಂಗ್‌ರ ರಾಜಕೀಯ ಜೀವನ ಪ್ರಾರಂಭವಾದದ್ದೆ ದೇವರಾಜ ಅರಸು ಗರಡಿಯಲ್ಲಿ. ಅವರು ಹಿಂದುಳಿದ ವರ್ಗಗಳಿಗೆ ಮಾಡಿದ ಉಪಕಾರಗಳು, ಸಹಾಯ ಸಹಕಾರವನ್ನು ಇಂದು ಧರ್ಮಸಿಂಗ್ ಮುಂದುವರೆಸಿದ್ದಾರೆ. ಹಿಂದುಳಿದ ವರ್ಗದ ನೇತಾರರಾಗಿ, ಬಡಜನತೆಯ ಕಲ್ಯಾಣಕ್ಕೆ ನೂರಾರು ಯೋಜನೆಗಳನ್ನು ಹಾಕಿಕೊಂಡಿದ್ದಾರೆ(ಪಾಟೀಲ ೨೦೦೫: vi).

ಧರ್ಮಸಿಂಗ್ ಅವರ ರಾಜಕೀಯ ವೃತ್ತಿಜೀವನದ ಕಾರ್ಯನೀತಿಯನ್ನು ದೇವರಾಜ ಅರಸು ಅವರ ಜೊತೆಗೆ ಸಮೀಕರಿಸುತ್ತಿರುವುದು ಪ್ರಮುಖವಾಗಿದೆ. ಧರ್ಮಸಿಂಗ್ ಅವರು ಸ್ಥಳೀಯ ಕಾಂಗ್ರೆಸ್ ಕಾರ್ಯಕರ್ತರಾಗಿದ್ದು, ಭೂ ದಾನ ಚಳವಳಿ ಮುಂತಾದ ಪ್ರಗತಿಪರ ವಿಚಾರಗಳೊಂದಿಗೆ ಗುರುತಿಸಿಕೊಂಡಿದ್ದವರು. ೧೯೭೩ ರಿಂದ ೧೯೭೫ರವರೆಗೆ ಎಲ್. ಜಿ. ಹಾವನೂರ್‌ರ ನೇತೃತ್ವದ ಹಿಂದುಳಿದ ವರ್ಗಗಳ ಆಯೋಗದ ಸದಸ್ಯರಾಗಿ ಕಾರ್ಯನಿರ್ವಹಿಸಿರುವರು. ಧರ್ಮಸಿಂಗ್ ಅವರಿಗೆ ಆತ್ಮೀಯರಾಗಿದ್ದವರೆಂದು ಆರ್. ಗುಂಡೂರಾವ್, ಎಸ್. ಬಂಗಾರಪ್ಪ, ಎಂ. ವೀರಪ್ಪ ಮೊಯಿಲಿ, ಮಲ್ಲಿಕಾರ್ಜುನ ಖರ್ಗೆ ಅವರು ಗುರುತಿಸಲ್ಪಡುತ್ತಾರೆ. ಅರಸು ಅವರ ಆಡಳಿತ ನೀತಿ ಮೆಚ್ಚುಗೆ ಪಡೆದಿದ್ದರೂ, ವ್ಯಕ್ತಿ ಮತ್ತು ಪಕ್ಷ ರಾಜಕಾರಣದ ಪ್ರಶ್ನೆ ಬಂದಾಗ ಕಾಂಗ್ರೆಸ್ ಪಕ್ಷ ಮುಖ್ಯವಾಗುವುದನ್ನು ನೋಡಬಹುದು. ಈ ದಿಕ್ಕಿನಲ್ಲಿ ಅರಸು ಮತ್ತು ಧರ್ಮಸಿಂಗ್ ಅವರ ಸಂಬಂಧ ಕುರಿತ ವಿಚಾರಧಾರೆಗಳನ್ನು ಮರು ಚಿಂತನೆಗೊಳಪಡಿಸುವ ಅಗತ್ಯವಿದೆ. ಭೀಮಾ ನದಿ ನೀರು ಸರಬರಾಜು, 'ಮಿಕ್' ಸಿಮೆಂಟ್ ಫ್ಯಾಕ್ಟರಿ ಆರಂಭ, ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ಉಚ್ಚ ನ್ಯಾಯಾಲಯದ ಸಂಚಾರಿ ಪೀಠ ಮತ್ತು ೧೯೮೧ರಲ್ಲಿ ಪ್ರಾದೇಶಿಕ ಅಸಮಾನತೆ ನಿವಾರಣಾ ಸಮಿತಿ ಅಸ್ತಿತ್ವಕ್ಕೆ ತರುವ ಮೂಲಕ ಹೈದ್ರಾಬಾದ್ ಕರ್ನಾಟಕದ ಉನ್ನತಿಗೆ ಶ್ರಮಿಸಿದ್ದಾರೆ. ೨೦೦೪ರಲ್ಲಿ ಮುಖ್ಯಮಂತ್ರಿಯಾದ ಧರ್ಮಸಿಂಗ್ ಅವರು ಪಕ್ಷಗಳೊಳಗಿನ ಆಂತರಿಕ ಭಿನ್ನಮತವು ಪದವಿಯಿಂದ ಇಳಿಯಲು ಪ್ರಮುಖ ಕಾರಣವಾಗಿ ಪರಿಣಮಿಸಿತು. ೨೦೦೮ ರಿಂದ ೨೦೧೪ರ ಅವಧಿಯಲ್ಲಿ ಲೋಕಸಭಾ ಸದಸ್ಯರಾಗಿದ್ದರು. ಹಣಕಾಸು ಸಮಿತಿ ಮುಂತಾದವುಗಳಲ್ಲಿ ಸದಸ್ಯರಾಗಿ ಕಾರ್ಯನಿರ್ವಹಿಸುತ್ತಿದ್ದರು.

### ೪.೧.೩.೩.೫. ಮಲ್ಲಿಕಾರ್ಜುನ ಖರ್ಗೆ

> ಅರಸರಂತ ಧೀಮಂತ ನಾಯಕರ ಮಾರ್ಗದರ್ಶನದಲ್ಲಿ ಪರಿಪಕ್ವವಾದ ರಾಜಕಾರಣಿಯಾಗಿ ರೂಪುಗೊಂಡರು ... ಶ್ರೀ ಖರ್ಗೆಯವರಲ್ಲಿ ಹುದುಗಿದ್ದ ಪ್ರತಿಭೆಯನ್ನು ಗುರುತಿಸಿ, ಪ್ರೋತ್ಸಾಹಿಸಿದವರು, ಅನೇಕ ಹಿಂದುಳಿದ ವರ್ಗದ ರಾಜಕಾರಣಿಗಳನ್ನು ಮುಂಚೂಣಿಯಲ್ಲಿ ನಿಲ್ಲಿಸಿದ ಕೀರ್ತಿಗೆ ಪಾತ್ರರಾದವರು ಶ್ರೀ ದೇವರಾಜ್ ಅರಸರವರು. ಶ್ರೀ ದೇವರಾಜ್ ಅರಸ್, ಶ್ರೀ ಖರ್ಗೆಯಲ್ಲಿ ಇಟ್ಟ ನಂಬಿಕೆಯನ್ನು ಹುಸಿಗೊಳಿಸಲಿಲ್ಲ(ಮೂರ್ತಿ ೨೦೦೫: ೭೯–೮೦).

ಮಲ್ಲಿಕಾರ್ಜುನ ಖರ್ಗೆ ಅವರ ರಾಜಕೀಯ ಜೀವನದ ಆರಂಭ ಮತ್ತು ರಾಜಕಾರಣ ಕುರಿತ ಅಭಿಮತವಾಗಿದೆ. ದೇವರಾಜ ಅರಸರಿಂದ ಪರಿಪಕ್ವವಾಗಿ ರೂಪುಗೊಂಡಿದ್ದಾರೆ ಎನ್ನುವ ಮೂಲಕ ಅರಸರ ರಾಜಕಾರಣದ ಕೀರ್ತಿಯ ವಾರಸುದಾರಿಕೆ ಹಾಗೂ ಪ್ರಸ್ತುತ ರಾಜಕಾರಣದಲ್ಲಿನ ಖರ್ಗೆ ಅವರ ರಾಜಕೀಯ ಕಾರ್ಯನೀತಿಗಳೊಂದಿಗೆ ಸಂಬಂಧ ಕಲ್ಪಿಸುತ್ತಿರುವುದನ್ನು ನೋಡಬಹುದು. ೧೯೬೯ರಲ್ಲಿ ರಾಜಕೀಯ ಮುಖ್ಯಧಾರೆಗೆ ಬರುವ ಮೊದಲು ಸಂಯುಕ್ತ ಮಜ್ದೂರ್ ಸಂಘದ ಮೂಲಕ ಕಾರ್ಮಿಕರ ಹಕ್ಕುಗಳ ಹೋರಾಟದಲ್ಲಿ ಸಕ್ರಿಯರಾಗಿದ್ದರು. ಎಂಎಸ್‌ಕೆ ಮಿಲ್ಲಿನ ಕಾರ್ಮಿಕ ಸಂಘದ ಕಾನೂನು ಸಲಹೆಗಾರರಾಗಿ ನೇಮಕವಾಗಿದ್ದರು. ಕಾರ್ಮಿಕ ಸಮಸ್ಯೆಗಳ ಪರ ಹೋರಾಟದಲ್ಲಿ ಮುಂದಾಳತ್ವ ವಹಿಸುತ್ತಿದ್ದರು. ಕಾರ್ಮಿಕ ನಾಯಕ ಎಂದು ಕೆಲವು ವಲಯಗಳಿಂದ ಗುರುತಿಸಲ್ಪಟ್ಟಿದ್ದರು. ರಿಪಬ್ಲಿಕನ್ ಪಾರ್ಟಿ ಮೂಲಕ ಯುವ ಮೋರ್ಚಾ ಸಂಘಟನೆಯೊಡನೆ ಸಂಪರ್ಕ ಹೊಂದಿದ್ದರು. ದಲಿತ ಚಳವಳಿ ಮತ್ತಿತರಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದರು. ಬುದ್ಧ ಮತ್ತು ಅಂಬೇಡ್ಕರ್ ಅವರ ಚಿಂತನೆಗಳಿಂದ ಪ್ರಭಾವಿತರಾಗಿದ್ದು, ಆರ್‌ಪಿಐ ಪಕ್ಷದ ಸದಸ್ಯರಾಗಿದ್ದರು.

೧೯೭೨ರಲ್ಲಿ ಮೊದಲ ಬಾರಿಗೆ ಕಾಂಗ್ರೆಸ್ ಅಭ್ಯರ್ಥಿಯಾಗಿ ಗುರುಮಿಟಕಲ್‌ನಿಂದ ಆಯ್ಕೆಯಾದರು. ಸಮಕಾಲೀನವಾಗಿ ಉತ್ತರ ಕರ್ನಾಟಕದಲ್ಲಿ ಜೇವರ್ಗಿಯಿಂದ ಧರ್ಮಸಿಂಗ್, ಚಿಂಚೋಳಿಯಿಂದ ದೇವಿಂದ್ರಪ್ಪ ಘಾಳೆಪ್ಪ, ಕಮಲಾಪೂರದಿಂದ ಸುಭಾಷ್ ಪಾಟೀಲ್ ಅವರು ಆಡಳಿತ ಕಾಂಗ್ರೆಸ್ ಪಕ್ಷದಿಂದ ಸ್ಪರ್ಧಿಸಿದ ಯುವ ರಾಜಕಾರಣಿಗಳು. ಈ ನಾಲ್ವರು ಚುನಾವಣೆಯಲ್ಲಿ ಗೆದ್ದು ರಾಜಕೀಯ ಮುಖ್ಯಧಾರೆಯಲ್ಲಿ ಪ್ರವೇಶ ಪಡೆದರು. ತರುವಾಯ ಧರ್ಮಸಿಂಗ್ ಮತ್ತು ಖರ್ಗೆ ಅತ್ಯಂತ ಪ್ರಮುಖ ರಾಜಕಾರಣಿಗಳಾಗಿ ಹೊರಹೊಮ್ಮಿದರು. ಆರಂಭದಲ್ಲಿ ಖರ್ಗೆ ಅವರು ಇಂದಿರಾ ಬ್ರಿಗೇಡ್ ಗುಂಪಿನೊಂದಿಗೆ ಗುರುತಿಸಿ ಕೊಂಡಿದ್ದರು. ನಂತರ ಆಕ್ಟ್ರಾಯ್ ತೆರಿಗೆ ಮತ್ತು ಪುರಸಭೆ ಆರ್ಥಿಕ ಸಂವರ್ಧನೆ ಸಮಿತಿಗೆ ನೇಮಕ ಗೊಂಡರು. ಶಿಕ್ಷಣ, ಪಂಚಾಯತ್ ರಾಜ್ ಮತ್ತು ಗ್ರಾಮೀಣ ಅಭಿವೃದ್ಧಿ ಶಾಖೆ, ಕಂದಾಯ, ಕಾಂಗ್ರೆಸ್ ಪಕ್ಷದ ಉಪಕಾರ್ಯ, ವಿರೋಧ ಪಕ್ಷದ ಉಪನಾಯಕ, ಸಾರಿಗೆ ಮತ್ತು ನೀರಾವರಿ ಸಂಪನ್ಮೂಲ, ಸಹಕಾರಿ ಖಾತೆ, ಕೈಗಾರಿಕ ಮೊದಲಾದ ಖಾತೆಗಳಲ್ಲಿ ಸಚಿವರಾಗಿ, ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷ, ಗೃಹ ಸಚಿವ ಮೊದಲಾದ ವಿವಿಧ ಪದವಿಗಳಲ್ಲಿ ಕಾರ್ಯನಿರ್ವಹಿಸಿದ್ದಾರೆ. ೧೯೯೦ರಲ್ಲಿ ಕಂದಾಯ ಮಂತ್ರಿ ಯಾಗಿದ್ದ ಸಂದರ್ಭದಲ್ಲಿ ಗ್ರಾಮೀಣ ಅಭಿವೃದ್ಧಿ, ಪಂಚಾಯತ್ ರಾಜ್ ಯೋಜನೆಗಳಲ್ಲಿ ಗುರುತರ ಬದಲಾವಣೆಗಳಾದವು. ಭೂ ಸುಧಾರಣಾ ಪ್ರಕ್ರಿಯೆ ಪುನಃ ಆರಂಭಿಸುವ ಪ್ರಯತ್ನಗಳು ಕಂಡುಬಂದವು. ೧೯೯೪ರ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ತೀವ್ರವಾದ ಸೋಲನ್ನು ಅನುಭವಿಸ ಬೇಕಾಯಿತು. ೧೯೯೬ ರಿಂದ ೧೯೯೯ರವರೆಗೆ ವಿರೋಧ ಪಕ್ಷದ ನಾಯಕರಾಗಿದ್ದ ಖರ್ಗೆ ಅವರು ರಾಜ್ಯದಲ್ಲಿ ಕಾಂಗ್ರೆಸ್ ಪಕ್ಷದ ಪುನಶ್ಚೇತನಕ್ಕೆ ಪ್ರಮುಖ ಕಾರಣಕರ್ತರಾದರು. ೨೦೦೮ರಲ್ಲಿ ನಡೆದ ಚುನಾವಣೆಯಲ್ಲಿ ಲೋಕಸಭಾ ಸದಸ್ಯರಾಗಿದ್ದು, ರೈಲ್ವೆ ಮಂತ್ರಿಯಾಗಿ ಕಾರ್ಯನಿರ್ವಹಿಸಿರುವರು. ೨೦೧೩ರ ಕರ್ನಾಟಕ ರಾಜ್ಯ ಚುನಾವಣೆ ಯಲ್ಲಿ ಕಾಂಗ್ರೆಸ್ ಬಹುಮತ ಪಡೆದ ನಂತರ ಮುಖ್ಯಮಂತ್ರಿ ಪದವಿಗೆ ಸಿದ್ಧರಾಮಯ್ಯ ಅವರ ಜೊತೆ ಪ್ರಬಲ ಸ್ಪರ್ಧಿ ಆಗಿದ್ದರಾದರೂ ಹೈ ಕಮಾಂಡ್ ನಿರ್ಧಾರದಂತೆ ಹಿಂದೆ ಸರಿದರು. ಪ್ರಸ್ತುತ ಲೋಕಸಭೆಯ ಸದಸ್ಯರಾಗಿದ್ದು, ಲೋಕಸಭೆಯಲ್ಲಿ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿರುವರು.

ಧರ್ಮಸಿಂಗ್ ಮತ್ತು ಮಲ್ಲಿಕಾರ್ಜುನ ಖರ್ಗೆ ಇಬ್ಬರೂ ಹೈದರಾಬಾದ್ ಕರ್ನಾಟಕದ ಪ್ರಗತಿಪರ ಚಿಂತಕರಾಗಿ ಗುರುತಿಸಿಕೊಳ್ಳುವ ಮೂಲಕ ಸಕ್ರಿಯ ರಾಜಕಾರಣದಲ್ಲಿ ತೊಡಗಿಕೊಂಡವರು. ಇಬ್ಬರ ಸಾಮಾಜಿಕ, ಆರ್ಥಿಕ ಬದುಕು ಮತ್ತು ಚಿಂತನೆಯ ನೆಲೆಗಳು ಭಿನ್ನವಾಗಿ ರೂಪುಗೊಂಡವು. ಖರ್ಗೆ ಅವರು ಅಂಬೇಡ್ಕರ್ ಚಿಂತನೆಗಳಿಂದ ಪ್ರಭಾವಿತರಾಗಿದ್ದರು. ರಿಪಬ್ಲಿಕನ್ ಪಾರ್ಟಿ ಆಫ್ ಇಂಡಿಯಾ ಪಕ್ಷ ಮತ್ತು ಕಾರ್ಮಿಕರ ಹೋರಾಟಗಳ ಮೂಲಕ ಗುರುತಿಸಲ್ಪಟ್ಟವರು. ಧರ್ಮಸಿಂಗ್ ಅವರು ಭೂ ದಾನ ಚಳವಳಿ ಮತ್ತಿತರ ಪ್ರಗತಿಪರ ಹೋರಾಟ ಹಾಗೂ ಕಾರ್ಪೋರೇಷನ್ ರಾಜಕಾರಣದ ಮೂಲಕ ಬೆಳಕಿಗೆ ಬಂದಿರುವವರು. ರಾಜಕೀಯ ವೃತ್ತಿ ಜೀವನದ ಆರಂಭದಿಂದಲೂ ಹೈದ್ರಾಬಾದ್ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಇಬ್ಬರಲ್ಲಿಯೂ ಭಿನ್ನಾಭಿಪ್ರಾಯಗಳ ಇರುವಿಕೆ ಕಾಣುವುದಿಲ್ಲ. ಈ ನಿಟ್ಟಿನಲ್ಲಿ ಅಪರೂಪದ ಜೋಡಿ ರಾಜಕಾರಣಿಗಳಾಗಿ ಗುರುತಿಸಲ್ಪಡುವರು.

ಇಲ್ಲಿ ಅವಲೋಕಿಸಿದ ಐವರೂ ರಾಜಕಾರಣಿಗಳನ್ನು ಗಮನಿಸಿದಾಗ ಅರಸು ಅವರ ಆಡಳಿತ ಕಾಲದಲ್ಲಿ ಹಿಂದುಳಿದ ಮತ್ತು ದಲಿತ ವರ್ಗಗಳ ಸುಶಿಕ್ಷಿತ ಹಾಗೂ ಪ್ರಗತಿಪರ ಆಲೋಚನೆಗಳುಳ್ಳ ಪ್ರತಿನಿಧಿಗಳು. ಮೂವರು ಕಾಂಗ್ರೆಸ್ ಪಕ್ಷದ ಮೂಲಕ ರಾಜಕಾರಣದ ಮುಖ್ಯಧಾರೆ ಪ್ರವೇಶಿಸಿದರೆ, ಇಬ್ಬರು ಸಮಾಜವಾದಿ ಪಕ್ಷದ ಮೂಲಕ ಪ್ರವೇಶಿಸುವರು. ಈ ಮೂವರು ಪ್ರಸ್ತುತ ಕಾಂಗ್ರೆಸ್ ಪಕ್ಷದೊಳಗೆ ಪ್ರಭಾವಿ ಹಾಗೂ ಪಕ್ಷ ನಿಷ್ಠ ರಾಜಕಾರಣಿಗಳಾಗಿ ಗುರುತಿಸಲ್ಪಡುವರು. ಬಂಗಾರಪ್ಪ ಮತ್ತು ಕಾಗೋಡು ತಿಮ್ಮಪ್ಪ ಪ್ರಭಾವಿ ರಾಜಕಾರಣಿಗಳಾದರೂ ಪಕ್ಷ ತೊರೆದು ಪುನಃ ಸೇರಿರುವುದನ್ನು ನೋಡಬಹುದು. ಇವರಲ್ಲಿ ಮೂವರು ಮುಖ್ಯಮಂತ್ರಿಗಳಾಗಿದ್ದರೆ. ಆದರೂ ಯಾರು ಐದು ವರ್ಷಗಳ ಪೂರ್ಣಾವಧಿ ಆಡಳಿತ ನಿರ್ವಹಿಸಿಲ್ಲ. ಕಾಂಗ್ರೆಸ್ ಪಕ್ಷದೊಳಗೆ ಬಿಕ್ಕಟ್ಟು ಮೊದಲಾದ ಸಂದರ್ಭದಲ್ಲಿ ಮುಖ್ಯಮಂತ್ರಿಗಳಾಗಿ ಸುಮಾರು ಎರಡು ವರ್ಷಗಳಷ್ಟು ಕಾಲ ಆಡಳಿತ ನಡೆಸಿದ್ದಾರೆ. ಆಡಳಿತ ಪಕ್ಷದಲ್ಲಿ ಕಂಡುಬಂದ ಬಿಕ್ಕಟ್ಟಿನ ಕಾರಣಕ್ಕೆ ಪದವಿ

ಬಿಡಬೇಕಾಗಿ ಬಂದಿರುವುದು ವಿಶೇಷ ಸಂಗತಿ. ಸಾಮಾನ್ಯವಾಗಿ ಇಲ್ಲಿನ ಬಹುಪಾಲು ರಾಜಕಾರಣಿಗಳನ್ನು ದೇವರಾಜ ಅರಸು ಅವರ ಜೊತೆ ಅಭಿಮಾನಿಗಳು ಸಮೀಕರಿಸುವರು. ಆದರೆ ದೇವರಾಜ ಅರಸು ಮತ್ತು ಇಂದಿರಾ ಗಾಂಧಿ ಅವರ ನಡುವೆ ಬಿಕ್ಕಟ್ಟು ಕಂಡುಬಂದು ಬೇರ್ಪಟ್ಟಾಗ, ಕಾಂಗ್ರೆಸ್ ಪಕ್ಷದ ಪರವಾಗಿ ಉಳಿದವರಾಗಿದ್ದಾರೆ. ಸಮಕಾಲೀನ ವಿಚಾರಗಳ ಕುರಿತ ಅವಲೋಕನದಲ್ಲಿ ದೇವರಾಜ ಅರಸು ಅವರ ಆಡಳಿತ, ಕಾರ್ಯನೀತಿಗಳನ್ನು ಮೆಚ್ಚಿಕೊಳ್ಳುತ್ತಲೇ ಕಾಂಗ್ರೆಸ್ ಪಕ್ಷ ರಾಜಕಾರಣದ ಫಲ ಎಂಬಂತಹ ನಿಲುವುಗಳು ಬಹುಪಾಲು ಕಂಡುಬರುವುವು. ಇವರಲ್ಲಿ ರಾಜಕೀಯ ವೃತ್ತಿ ಜೀವನದಲ್ಲಿ ಎರಡು ಹಂತಗಳನ್ನು ಗುರುತಿಸಬಹುದು. ಪ್ರಾದೇಶಿಕ ರಾಜಕಾರಣದಲ್ಲಿ ಪ್ರಮುಖ ರಾಜಕಾರಣಿಯಾಗಿ ರಾಜ್ಯ ಕಾಂಗ್ರೆಸ್ ಪಕ್ಷದೊಳಗೆ ಮುಖ್ಯ ಪಾತ್ರ ನಿರ್ವಹಿಸಿರುವುದು ಮೊದಲನೇ ಹಂತ. ಎರಡನೇ ಹಂತವಾಗಿ ಕಾಗೋಡು ತಿಮ್ಮಪ್ಪ ಅವರನ್ನು ಹೊರತು ಪಡಿಸಿದಂತೆ ಉಳಿದವರು ಲೋಕಸಭಾ ಸದಸ್ಯರಾಗಿ ಅನೇಕ ಪದವಿಗಳಲ್ಲಿ ಕಾರ್ಯನಿರ್ವಹಿಸಿರುವರು.

ಕರ್ನಾಟಕದ ಮುಖ್ಯಮಂತ್ರಿಗಳಾಗಿ ರೂಪುಗೊಂಡ ಈ ಮೂವರ ಆಡಳಿತ ಕಾಲದಲ್ಲಿ ದೇವರಾಜ ಅರಸು ಅವರ ಕಾಲದಂತೆ ಹಿಂದುಳಿದ ಜಾತಿ, ವರ್ಗಗಳಿಗೆ ವಿಸ್ತೃತವಾದ ಅವಕಾಶ ದೊರೆಯಲಿಲ್ಲ ಎಂಬ ಟೀಕೆ ಕೇಳಿಬರುವುದು. ರಾಜಕಾರಣದೊಳಗೆ ವಿಶಾಲ ಪ್ರಮಾಣದಲ್ಲಿ ಹಿಂದುಳಿದ ವರ್ಗಗಳನ್ನು ಪರ್ಯಾಯ ರಾಜಕೀಯ ಶಕ್ತಿಯಾಗಿ ಬೆಳೆಸಲು ಸಾಧ್ಯವಾಗದಿದ್ದರೂ, ಆಡಳಿತದ ಹಲವು ಸ್ತರಗಳಲ್ಲಿ ಸ್ಥಾನ ಪಡೆಯಲು ಶಸಕ್ತಗೊಳ್ಳಲು ಪೂರಕವಾಗಿ ಸಹಕರಿಸಿದೆ. ಅರಸು ಅವರ ಆಡಳಿತಾವಧಿಯ ಪರಿಣಾಮಗಳು ದೀರ್ಘಕಾಲದಲ್ಲಿ ಕಾಂಗ್ರೆಸ್ ಪಕ್ಷ ಮತ್ತು ಆಡಳಿತದಲ್ಲಿ ರೂಪುಗೊಂಡ ಸ್ವರೂಪದ ಸ್ಥೂಲ ಅವಲೋಕನವಾಗಿದೆ. ಇತರ ಪಕ್ಷಗಳಲ್ಲಿಯೂ ಇದರ ಪರಿಣಾಮಗಳನ್ನು ಕಾಣಬಹುದು. ಈ ದಿಸೆಯಲ್ಲಿ ಅಹಿಂದ ಚಳವಳಿ ರೂಪುಗೊಂಡಿತಾದರೂ ಗಟ್ಟಿಯಾಗಿ ನೆಲೆಯೂರಲು ಸಾಧ್ಯವಾಗಲಿಲ್ಲ. ಈ ಕುರಿತು ಇನ್ನೂ ಹೆಚ್ಚಿನ ಅಧ್ಯಯನದ ಅವಶ್ಯಕತೆ ಇದೆ.

## ತುರ್ತುಪರಿಸ್ಥಿತಿಯೋತ್ತರ: ಸಮಾಜ ಮತ್ತು ಸಮೂಹ ಮಾಧ್ಯಮಗಳು

ಸಾಮಾಜಿಕ ಮತ್ತು ರಾಜಕೀಯ ಆಂದೋಲನಗಳಲ್ಲಿ ಸಮಾಜ ಹಾಗೂ ರಾಜಕಾರಣದ ಪರಸ್ಪರ ಸಂಬಂಧ, ಸಂವಾದಗಳು ಸಮೂಹ ಮಾಧ್ಯಮಗಳಲ್ಲಿ ಅಭಿವ್ಯಕ್ತಗೊಳ್ಳುತ್ತವೆ. ಇವುಗಳ ನಡುವಿನ ಸಂಬಂಧ, ಸಂವಾದಗಳ ಸ್ವರೂಪವು ಚಳವಳಿಗಳ ಸ್ವರೂಪವನ್ನು ಅರಿಯುವಲ್ಲಿ ನಿರ್ವಹಿಸುವ ಪಾತ್ರ ಮಹತ್ವಪೂರ್ಣವಾದುದು. ರಾಜಕೀಯ ಮತ್ತು ಸಾಮಾಜಿಕ ಚಳವಳಿಗಳನ್ನು ಅರಿಯಲು ಸಮೂಹ ಮಾಧ್ಯಮಗಳ ಜೊತೆಗಿನ ರಾಜಕೀಯ ಸಂಪರ್ಕಗಳು, ಘಟನೆಗಳನ್ನು ವಿಶ್ಲೇಷಿಸುವುದು ಸಾಮಾನ್ಯವಾಗಿದೆ. ಆಂತರಿಕ ತುರ್ತುಪರಿಸ್ಥಿತಿಯು ರಾಜಕೀಯವಾಗಿ ತೀವ್ರ ಸಂಚಲನ ಉಂಟುಮಾಡಿದ ಕಾಲಘಟ್ಟ. ಇದರ ಪ್ರಭಾವ ಪರಿಣಾಮಗಳು ತುರ್ತುಪರಿಸ್ಥಿತಿಯ ನಂತರದ ರಾಜಕಾರಣ ಮತ್ತು ಸಮಾಜದಲ್ಲಿ ಅಭಿವ್ಯಕ್ತಗೊಂಡ ಸ್ವರೂಪ ಗಮನಿಸುವುದು ಅಗತ್ಯ.

> ಕಲೆ ಮತ್ತು ರಾಜಕಾರಣದ ನಡುವೆ ಯಾವುದೇ ಸಂಬಂಧಗಳಿಲ್ಲ ಎಂಬ ನಮ್ಮ ಕಲ್ಪನೆಯನ್ನು ಸರಳವಾದ ಈ ಪ್ರಶ್ನೆಯ ಮೂಲಕ ಪ್ರಶ್ನಿಸುವುದು ಅಗತ್ಯ. ಯಾವುದಾದರೂ ಕಲಾವಿದ ತನ್ನ ಸಮಾಜದ ರಾಜಕೀಯ ಸನ್ನಿವೇಶಗಳಿಗೆ ಉದಾಸೀನನಾಗಿದ್ದು, ತಿಳಿಯದವನಂತೆ ಇರಲು ಸಾಧ್ಯವೇ. ಈ ರಾಜಕೀಯ ಪರಿಣಾಮಗಳಿಂದ ಅದರಿಂದ ಸಂಪೂರ್ಣವಾಗಿ ತಪ್ಪಿಸಿಕೊಳ್ಳಲು ಸಾಧ್ಯವೇ? ತನ್ನ ಸಮಾಜದಲ್ಲಿನ ರಾಜಕೀಯ ಶಕ್ತಿಗಳನ್ನು ಉಪೇಕ್ಷಿಸುವ ಮೂಲಕ ಅವುಗಳ ಅನಗತ್ಯ ಪ್ರಭಾವದಿಂದ ರಕ್ಷಿಸಿಕೊಳ್ಳಲು ಸಾಧ್ಯವೇ?(ಕಪೂರ್ ೧೯೭೭: ೪೫೦).

ರಾಜಕೀಯ ಮತ್ತು ಕಲೆಗಿರುವ ನೇರ ಸಂಬಂಧವನ್ನು ವಿವರಿಸುತ್ತಾ ಕಲಾವಿದರು ರಾಜಕೀಯ ವಿಚಾರಗಳಿಗೆ ಅನ್ಯರಂತೆ ಇರುವುದನ್ನು ವಿರೋಧಿಸಿರುವುದು ಕಂಡುಬರುವುದು. ತುರ್ತುಪರಿಸ್ಥಿತಿಯ ನಂತರದಲ್ಲಿ ಇಂತಹ ಬದಲಾವಣೆಗಳನ್ನು ದೇಶದಾದ್ಯಂತ ಸಾಹಿತ್ಯ ರಚನೆಯಲ್ಲಿ ಕಾಣಬಹುದು. ಕರ್ನಾಟಕದಲ್ಲಿ ಈ ರೀತಿಯ ಆಲೋಚನೆಗಳನ್ನು ಬಂಡಾಯ ಸಾಹಿತ್ಯ, ದಲಿತ ಸಾಹಿತ್ಯ ಮೊದಲಾದ ಸಾಹಿತ್ಯ ಪಂಥಗಳಲ್ಲಿ ನೋಡಬಹುದು. ಇದರೊಡನೆ ಇತರ ಸಮೂಹ ಮಾಧ್ಯಮಗಳಲ್ಲಿಯೂ ಗುರುತರ ಬದಲಾವಣೆಗಳಾಗಿವೆ.

ಪ್ರಜಾಪ್ರಭುತ್ವ, ಸರ್ಕಾರ, ಸ್ವಾತಂತ್ರ್ಯ, ಕ್ರಾಂತಿ ಹಾಗೂ ರಾಜಕಾರಣದ ವಿವಿಧ ಸ್ವರೂಪಗಳು ನಾಗರಿಕ ಸಮಾಜದಲ್ಲಿ ಉಂಟುಮಾಡುವ ಪ್ರಭಾವ ಪರಿಣಾಮಕಾರಿಯಾಗಿವೆ. ಇವೇ ಸಮಕಾಲೀನ ವ್ಯವಸ್ಥೆಯನ್ನು ಬದಲಾಯಿಸುವ ಶಕ್ತಿ ಮತ್ತು ವಿಚಾರಗಳು. ಆಂತರಿಕ ತುರ್ತುಪರಿಸ್ಥಿತಿ ಸಂದರ್ಭದಲ್ಲಿ ಸರ್ಕಾರದ ವಿರುದ್ಧ ಕಂಡುಬಂದ ಪ್ರತಿಭಟನೆಗಳ ಮೂಲ ಉದ್ದೇಶ ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯದ ರಕ್ಷಣೆ. ತುರ್ತುಪರಿಸ್ಥಿತಿ ಕೊನೆಗೊಂಡ ನಂತರ ಸಮಾಜ ಮತ್ತು ಸಂಸ್ಕೃತಿಯ ಮೇಲೆ ಉಂಟುಮಾಡಿರುವ ಪರಿಣಾಮಗಳನ್ನು ಸಮೂಹ ಮಾಧ್ಯಮಗಳ ಮೂಲಕ ಚರ್ಚಿಸಲು ಪ್ರಯತ್ನಿಸಲಾಗಿದೆ. ೧೯೭೭ ರಿಂದ ೧೯೮೫ರವರೆಗಿನ ಕಾಲಾವಧಿಯಲ್ಲಿ ಸಮೂಹ ಮಾಧ್ಯಮಗಳಲ್ಲಿ ಕಂಡುಬರುವ ಪರಿವರ್ತನೆಗಳನ್ನು ತಕ್ಷಣದ ಪ್ರತಿಕ್ರಿಯೆ ಮತ್ತು ದೀರ್ಘಾವಧಿ ಪ್ರತಿಕ್ರಿಯೆಗಳಾಗಿ ವಿಂಗಡಿಸಿ ಅಧ್ಯಯನ ಮಾಡಲಾಗಿದೆ. ತುರ್ತುಪರಿಸ್ಥಿತಿಯೋತ್ತರ ಸಮಾಜ ಮತ್ತು ಸಮೂಹ ಮಾಧ್ಯಮಗಳನ್ನು ಮೂರು ಭಾಗಗಳಾಗಿ ವಿಭಜಿಸಲಾಗಿದೆ. ತುರ್ತುಪರಿಸ್ಥಿತಿ ಕಾಲಘಟ್ಟದ ಸಾಹಿತ್ಯ ಕುರಿತು ತುರ್ತುಪರಿಸ್ಥಿತಿ ನಂತರದಲ್ಲಿ ನಡೆದ ವಿಮರ್ಶೆಗಳು, ಸಮಕಾಲೀನ ಸಾಹಿತ್ಯ ಮತ್ತು ಸಮಾಜದ ಸ್ವರೂಪಗಳನ್ನು ಚರ್ಚಿಸಲಾಗಿದೆ. ಸಮಕಾಲೀನವಾಗಿ ರೂಪುಗೊಂಡ ಚಳವಳಿಗಳ ಮೇಲೆ ತುರ್ತುಪರಿಸ್ಥಿತಿಯ ಪ್ರಭಾವವನ್ನು, ಸಾಹಿತಿಗಳ ಪ್ರತಿಕ್ರಿಯೆಗಳನ್ನು ಇತರ ಭಾಷೆಗಳೊಡನೆ ಸಮೀಕರಿಸಿ ಪರಾಮರ್ಶಿಸಲಾಗಿದೆ. ದೃಶ್ಯ ಮಾಧ್ಯಮಗಳಲ್ಲಿ ಮುಖ್ಯವಾಗಿ ಸಿನಿಮಾ, ರಂಗಭೂಮಿ ಹಾಗೂ ಪತ್ರಿಕೆಗಳಲ್ಲಿ ಬರುವ ರಾಜಕೀಯ ವ್ಯಂಗ್ಯಚಿತ್ರಗಳನ್ನು ಎರಡು ಭಾಗಗಳಲ್ಲಿ ಅಧ್ಯಯನ ಮಾಡಲಾಗಿದೆ. ಸರ್ಕಾರ, ಸೆನ್ಸಾರ್‌ಷಿಪ್ ಹಾಗೂ ಸಮಕಾಲೀನ ರಾಜಕಾರಣದ ನೆಲೆಯಲ್ಲಿ ಚರ್ಚಿಸಲಾಗಿದೆ. ಸಮಾಜದಲ್ಲಿ ಪ್ರಜಾ ಪ್ರಭುತ್ವ, ರಾಜಕಾರಣ, ರಾಜಕಾರಣಿ, ಅಧಿಕಾರಶಾಹಿ, ಪೊಲೀಸ್ ವ್ಯವಸ್ಥೆ, ಬಂದ್ ಮತ್ತಿತ್ತರ ವಿಚಾರಗಳು ಪಡೆದುಕೊಂಡ ಸ್ವರೂಪವು, ದೃಶ್ಯ ಮಾಧ್ಯಮಗಳಲ್ಲಿ ಪಡೆದುಕೊಂಡ ನೆಲೆಗಳನ್ನು ಇತರ ಭಾಷೆಗಳ ಸಿನಿಮಾಗಳೊಡನೆ ಸಮೀಕರಿಸಿ ವಿಮರ್ಶಿಸಲಾಗಿದೆ. ಪತ್ರಿಕಾರಂಗದಲ್ಲಿ ರಾಜಕಾರಣ, ಸೆನ್ಸಾರ್‌ಷಿಪ್ ಮತ್ತು ಪತ್ರಿಕೋದ್ಯಮ ಕುರಿತು ಚರ್ಚಿಸಲಾಗಿದೆ.

### ೪.೨.೧. ಸಾಹಿತ್ಯ ಅವಲೋಕನ: ಪ್ರಭಾವ ಮತ್ತು ಪರಿಣಾಮಗಳು

ಸಾಹಿತ್ಯದ ಸೃಷ್ಟಿಯಲ್ಲಿ ಸಾಹಿತಿಯ ಪದ ಸಂಯೋಜನೆ ಅತ್ಯಂತ ಪ್ರಮುಖ ಲಕ್ಷಣಗಳಲ್ಲೊಂದು. ಸಾಹಿತ್ಯವು ಆಯಾ ಸಂದರ್ಭದ ರಾಜಕಾರಣ, ಆರ್ಥಿಕತೆ ಮತ್ತು ಸಾಮಾಜಿಕ ವಿಚಾರಗಳಿಂದ ಪ್ರಭಾವಿತವಾ ಗಿರುವುದು. ರಾಜಕೀಯ ಮತ್ತು ಸಾಮಾಜಿಕ ಚಳವಳಿಗಳು ಅಥವಾ ಸಂಕೀರ್ಣತೆಗಳು ಕಂಡುಬಂದ ಕಾಲದಲ್ಲಿ ಸಾಹಿತ್ಯ ಸಮಕಾಲೀನ ಚರಿತ್ರೆಯ ಭಾಗವಾಗಿ ಬದಲಾಗುವುದು. ಸಾಹಿತ್ಯದ ಆಶಯ ಮತ್ತು ಒಳ ದನಿಯು ವ್ಯಕ್ತಿಯಿಂದ ವ್ಯಕ್ತಿಗೆ ವ್ಯಕ್ತಪಡಿಸುವ ವಿಧಾನ, ಅದು ಕಂಡುಬಂದ ರೂಪ ಭಿನ್ನವಾಗಿರುವುದು ಸಾಮಾನ್ಯವಾಗಿದೆ. ಅಧಿಕಾರ ಮತ್ತು ಪ್ರಜಾಪ್ರಭುತ್ವದ ನೆಲೆಯಲ್ಲಿ ರಾಜಕಾರಣ ಹಾಗೂ ಸಾಹಿತ್ಯದ ಅಧ್ಯಯನ ತುರ್ತುಪರಿಸ್ಥಿತಿ ಕಾಲದ ಪ್ರಜಾಪ್ರಭುತ್ವದ ಗ್ರಹಿಕೆಯ ವಿವಿಧ ಆಯಾಮಗಳನ್ನು ಅನಾವರಣಗೊಳಿಸುವ ಸಾಧ್ಯತೆ ಇದೆ.

> ಗಾಂಧಿ ಮ್ಯಾಲ ಒಂದ ಹಾಡ ಬರಿ.
> ಅಂತ ಚಂಪಾರ ಪತ್ರ,
> ಯಾವ ಗಾಂಧಿ ?
> (ಈ ಮೂವರೊಳಗೆ)
> ಮತ್ತೊಮ್ಮೆ ಪತ್ರ ಓದಿದೆ
> ಮಹಾತ್ಮ ಗಾಂಧಿ !(ಪಾಟೀಲ ೧೯೭೭: ೫).

ಕವಿಗೆ ಯಾವ ಗಾಂಧಿ ಎಂಬ ದ್ವಂದ್ವವಿರುವುದು ಮೇಲ್ನೋಟಕ್ಕೆ ಕಾಣುವುದು. ಇಂದಿರಾ ಗಾಂಧಿ ಹಾಗೂ ಸಂಜಯ್ ಗಾಂಧಿ ಅವರ ಬಗೆಗಿದ್ದ ಬೇಸರ, ಅಸಹನೆ, ಕೋಪ ಹಾಗೂ ಅಸಹಾಯಕತೆ ಅಭಿವ್ಯಕ್ತಗೊಂಡ ಒಂದು ರೂಪವಿದು.

ಆಂತರಿಕ ತುರ್ತುಪರಿಸ್ಥಿತಿ ಕಾಲಘಟ್ಟದ ಸಾಹಿತ್ಯ ವಿಮರ್ಶೆಗಳು ಮತ್ತು ನಂತರದಲ್ಲಿ ಕಂಡುಬಂದ ಬದಲಾವಣೆ, ಸಾಹಿತ್ಯ ಚಳವಳಿಗಳನ್ನು ಚರ್ಚಿಸಲಾಗಿದೆ. ಇಲ್ಲಿ ಅಧ್ಯಯನವನ್ನು ಎರಡು ಭಾಗಗಳಾಗಿ ವಿಂಗಡಿಸಲಾಗಿದೆ. ತುರ್ತುಪರಿಸ್ಥಿತಿ ಕಾಲಘಟ್ಟ ಮತ್ತು ನಂತರದ(೧೯೮೦ರವರೆಗೆ) ಸಾಹಿತ್ಯ ವಿಮರ್ಶೆಗಳ

ಮೂಲಕ ಸಾಹಿತ್ಯ ವಲಯದಲ್ಲಿ ಕಂಡುಬಂದ ಬದಲಾವಣೆಗಳನ್ನು ಚರ್ಚಿಸಲಾಗಿದೆ. ತುರ್ತುಪರಿಸ್ಥಿತಿಯ ಪರಿಣಾಮವು ಸಾಹಿತ್ಯ ಚಳವಳಿ, ಸಾಹಿತ್ಯ ಮತ್ತು ಸಾಹಿತಿಗಳ ಮೇಲೆ ಬೀರಿದ ಸ್ವರೂಪವನ್ನು ವಿಮರ್ಶಿಸಲಾಗಿದೆ. ಇತರ ಭಾಷೆಯ ಸಾಹಿತ್ಯದೊಡನೆ ಸಮೀಕರಿಸಿ ಪರಿಶೀಲಿಸಲು ಪ್ರಯತ್ನಿಸಲಾಗಿದೆ. ರಾಜಕಾರಣ ಮತ್ತು ಸಾಹಿತ್ಯದ ನಡುವಿನ ಸಂಬಂಧ ಪಡೆದು ಕೊಳ್ಳುವ ಸ್ವರೂಪ ಸಮಕಾಲೀನ ಆಲೋಚನಾ ಲಹರಿ ಹಾಗೂ ವಿಚಾರಧಾರೆಗಳ ನಡುವಿನ ಸಂವಾದವನ್ನು ಅನಾವರಣಗೊಳಿಸುವುದು.

**೪.೨.೧.೧. ತುರ್ತುಪರಿಸ್ಥಿತಿ: ಸಾಹಿತ್ಯ ಮತ್ತು ಸಮಾಜ**

ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯದ ರಾಜಕಾರಣವು ಸಾಹಿತ್ಯ ಹಾಗೂ ಸಮಾಜದಲ್ಲಿ ಭಿನ್ನ ಭಿನ್ನ ನೆಲೆಗಳಲ್ಲಿ ರೂಪುಗೊಳ್ಳುವುದು. ರಾಜಕಾರಣ ಮತ್ತು ಸಾಹಿತ್ಯದ ಸಂಬಂಧವು ಸಮಾಜದ ಆಶಯ, ಗುರಿ, ಒತ್ತಡ, ತೊಂದರೆಗಳನ್ನು ತೆರೆದಿಡುವುದು. ಸಾಹಿತ್ಯದಲ್ಲಿ ರಾಜಕಾರಣದ ಮಾಲಿಕತ್ವ ಮತ್ತು ದಬ್ಬಾಳಿಕೆಯ ವಿಸ್ತೃತ ಸ್ವರೂಪಗಳ ಪದರ ಪದರಗಳನ್ನು ಕಾಣಬಹುದು. ರಾಜಕೀಯ ಬಿಕ್ಕಟ್ಟುಗಳು, ಕ್ರಾಂತಿ, ಹೋರಾಟಗಳು ಸಾಹಿತ್ಯ ಮತ್ತು ಸಮಾಜದಲ್ಲಿ ತೀವ್ರವಾದ ಸಂಚಲನ ತರುವ ಮೂಲಕ ಹೊಸ ಪಂಥಗಳ ಬೆಳವಣಿಗೆಗೆ ಪೂರಕವಾಗುವುವು. ತುರ್ತುಪರಿಸ್ಥಿತಿ ಕಾಲಘಟ್ಟ ಮತ್ತು ನಂತರದಲ್ಲಿ(೧೯೮೦ರವರೆಗೆ) ಕಂಡುಬರುವ ಸಾಹಿತ್ಯದ ವಿಮರ್ಶೆಗಳ ಮೂಲಕ ಸಾಹಿತ್ಯ ವಲಯದಲ್ಲಿ ಕಂಡುಬಂದ ಬದಲಾವಣೆಗಳನ್ನು ಚರ್ಚಿಸಲಾಗಿದೆ. ಇವು ಸಮಾಜದ ಹಲವು ವಲಯಗಳಲ್ಲಿ ಕಂಡುಬರುತ್ತಿದ್ದ ಪ್ರತಿಕ್ರಿಯೆಗಳು.

ತುರ್ತುಪರಿಸ್ಥಿತಿ ಕಾಲದ ಸಾಹಿತ್ಯವು ಸಮಕಾಲೀನ ರಾಜಕಾರಣ, ಅಧಿಕಾರ ಮತ್ತು ಪ್ರತಿಕ್ರಿಯೆಗಳ ವಿವರಗಳಾಗಿರುವುವು. ಕ್ರಾಂತಿಯ ಪರಿಕಲ್ಪನೆ ಹಲವು ಆಯಾಮಗಳಲ್ಲಿ ಮೇಲಿಂದ ಮೇಲೆ ಕಂಡುಬರುವುದು. ಒಂದೆಡೆ 'ಕ್ರಾಂತಿ' ಬಯಕೆಯ ರೂಪದಲ್ಲಿದ್ದರೆ, ಮತ್ತೊಂದೆಡೆ ನಿರಾಸೆಯ ನೆಲೆಯಲ್ಲಿ ಸಾಧ್ಯವಿಲ್ಲದ್ದು ಎಂಬ ಮನೋಭಾವವಿದೆ. ಸಾಹಿತ್ಯದ ಪ್ರಮುಖಧಾರೆಗೆ ಪರ್ಯಾಯ ಸಾಹಿತ್ಯದ ಅಗತ್ಯ ಕುರಿತ ಚಿಂತನೆಗಳು ರೂಪ ಪಡೆದುಕೊಳ್ಳುವುದನ್ನು ನೋಡಬಹುದು. ಈ ದಿಸೆಯಲ್ಲಿ ಕವನಗಳಲ್ಲಿ ರಾಜಕಾರಣ, ಸ್ವಾತಂತ್ರ್ಯ, ಪ್ರಜಾಪ್ರಭುತ್ವ, ಅಧಿಕಾರ, ನಿರಂಕುಶವಾದ, ಗುಲಾಮಗಿರಿ, ಗಾಂಧಿ, ಕಗ್ಗತ್ತಲು, ಬೆಳಕು ಮೊದಲಾದವು ಪ್ರಮುಖ ವಸ್ತು ವಿಷಯಗಳಾಗಿರುವುದು ಗಮನಾರ್ಹ. 'ಕರಾಳಸ್ಥಿತಿಯನ್ನು ರಾಜಕಾರಣಿಗಳು ಅಷ್ಟೇಕೆ ಶ್ರೀಮತಿ ಇಂದಿರಾ ಗಾಂಧಿಯವರು ಸಾಹಿತಿಗಳ ಮೇಲೆ ಹೇರಿದ್ದಾರೋ, ಆ ವಿರುದ್ಧ ಹಾರಾಡಿ ಕೂಗಾಡಿದ ಆಟ ಹೂಡಿರುವ ಈ ಯೂನಿವರ್ಸಿಟಿ ಜನರೋ? ಹೆಸರಿಗಷ್ಟೇ ಸ್ವಾತಂತ್ರ್ಯ ಎಂಬುದು ಇರುವುದಾಗಿದೆ ... ಸಾಹಿತಿ, ಪತ್ರಿಕೆ ಸಂಪಾದಕರು, ಪತ್ರಕರ್ತರು ... ಯಾರಾದರು ಹೆದರುವುದನ್ನು ಬಿಡಿ ... ಗಟ್ಟಿಯಾಗಿ ಮಾತಾಡಿ, ಗಟ್ಟಿಯಾಗಿ ಬರೆಯಿರಿ, ಗಟ್ಟಿಯಾಗಿ ಬದುಕಿ' ಎಂದು ಹರಿಹರ ಪ್ರಿಯ[೩೪] ಅವರು ತುರ್ತುಪರಿಸ್ಥಿತಿ ಕಾಲಘಟ್ಟದ ಸಾಹಿತ್ಯ ಮತ್ತು ಸಾಹಿತ್ಯಿಕ ವಲಯಗಳ ಕುರಿತು ವ್ಯಕ್ತಪಡಿಸಿರುವ ಅಭಿಮತ ಸಮಾಜದ ಕೆಲವು ವಲಯಗಳ ಚಿಂತನೆಗಳನ್ನು ತೆರೆದಿಡುವುದು.

"ಬರಹಗಾರರು ಬುದ್ಧಿಜೀವಿಗಳ ಬಗ್ಗೆ ಎಚ್ಚರ ಅತ್ಯಗತ್ಯ"(ವೀಕ್ಷಕ ೧೯೭೭ ಜನವರಿ ೭), "ರಾಜಕಾರಣಿಗಳಿಗಿಂತ ಬರಹಗಾರರು, ಪತ್ರಿಕೆಗಳವರು ಅಪಾಯದ ವ್ಯಕ್ತಿಗಳು"(ವೀಕ್ಷಕ ೧೯೭೭ ಏಪ್ರಿಲ್ ೧೮) ಎಂಬ ಪ್ರತಿಕ್ರಿಯೆಗಳು ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಿ ಸಾಹಿತ್ಯಿಕ ವಲಯ ಮತ್ತು ಪತ್ರಿಕಾ ವಲಯ ಗಳಲ್ಲಿ ಕಂಡುಬಂದ ಮೌನ ಕುರಿತಂತೆ ಪ್ರಕಟವಾದ ಅಭಿಮತ. ಇಂತಹ ಪ್ರತಿಕ್ರಿಯೆಗಳು ರಾಷ್ಟ್ರದಾದ್ಯಂತ ಕಂಡುಬರುವುವು. ಈ ರೀತಿಯ ಪ್ರತಿಕ್ರಿಯೆಗಳು ತುರ್ತುಪರಿಸ್ಥಿತಿ ಕಾಲಘಟ್ಟದ ಪ್ರತಿಭಟನೆಗಳಲ್ಲಿ ಗುರುತಿಸಿ ಕೊಂಡಿದ್ದವರಲ್ಲಿ ಹೆಚ್ಚು ತೀವ್ರವಾಗಿ ಪ್ರಕಟಗೊಳ್ಳುವುವು.

> ಈಗ ಮೈ ಚಳಿ ಬಿಟ್ಟು ಬರೆಯುಹುದಾದ ಪರಿಸ್ಥಿತಿ ಉಂಟಾಗಿದೆ. ಆದರೆ ಏನು ಬರೆಯ ಬೇಕೆಂದರೂ ಆ ಕರಾಳ ದಿನಗಳ ನೆನಪು. ಹಾಗೆ ಬರೆಯಬೇಕು ಎಂದವರಿಗೆ 'ಸ್ಫೂರ್ತಿ' ಬೇಕಾದಷ್ಟು ಇತ್ತು. ಗೋಡೆಯ ಮೇಲೆಲ್ಲಾ ಮಾತು ಕಡಿಮೆ ಹೆಚ್ಚು ದುಡಿಮೆ ಸಂದೇಶ. ಆಕಾಶದ ತುಂಬೆಲ್ಲ ನವ ವಸಂತನ, ನವ ಮೇನಕೆಯ ಸಂಚಾರ. ಇಪ್ಪತ್ತಂಶದ ಪವಾಡದ ಬಗ್ಗೆ ಬರೆದವರ ದನಿಯೆಲ್ಲ ಬಾನುಲಿಯಾಗಿ ಹರಡುವ ಅವಕಾಶ. ಕೇಳಿದಷ್ಟು ಹಣ, ಪ್ರಚಾರ, ಖ್ಯಾತಿ ಮತ್ತಿನ್ನೇನು ಬೇಕು? ... ನಮ್ಮ ಅನೇಕ ಸಾಹಿತಿಗಳು ... ಖ್ಯಾತರಾದ ಕವಿಗಳು, ಪತ್ರಿಕೋದ್ಯಮಿಗಳು, ತುರ್ತುಪರಿಸ್ಥಿತಿಯಲ್ಲಿ

ತಮ್ಮ ಆತ್ಮವನ್ನು ಖರೀದಿ ಕೊಟ್ಟರು ... ಇಂಥ ಎಷ್ಟೋ ಹೆಸರೋ ಏನೋ! ಇಪ್ಪಂತ್ತಂಶದ ಕವಿಗಾಳಿಗಾಗಿ ತಮ್ಮ ನಿಜವಾದ ಹೆಸರನ್ನು ಸ್ವರೂಪಾಂತರಿಸಿಕೊಂಡರು ... ತುರ್ತುಪರಿಸ್ಥಿತಿಯಲ್ಲಿ ಸಾಹಿತ್ಯ ಪರಿಷತ್ತು ಏನೂ ಮಾಡಲಿಲ್ಲ. ಮಾಡಲು ಗಂಡಸರೇ ಗೂಡಿಸಿಗೊಂಡು ನಾರಾಯಣರ ಪರಿಷತ್ತು ಎನೂ ಮಾಡಬೇಕು? ಅಂತೂ ಏಪ್ರಿಲ್ ೭೭ರ ವಜ್ರ ಮಹೋತ್ಸವದ ಹೊತ್ತಿಗೆ ಸಾಹಿತ್ಯ ಪರಿಷತ್ತಿನ ವಿರುದ್ಧ 'ದಂಗೆ' ಎದ್ದಿತು ... ಸಮಕಾಲೀನ ವಿಚಾರ ವೇದಿಕೆಯ ತರುಣ ಬರಹಗಾರರು, ಕಲಾವಿದರು ಸಮ್ಮೇಳನದ ಮೊದಲ ದಿನ ಧರಣಿ ಸತ್ಯಾಗ್ರಹ ಮಾಡಿದರು ... ಇಂತಹ ಕ್ರಿಯಾರೂಪದ ಧರಣಿಗಳಿಗೆ ಅಡಿಗ ಮತ್ತು ಕಂಪನಿಯವರು ತಯಾರಿರಲಿಲ್ಲ ... ಈ ಹಿಂದೆ ಸಾಹಿತ್ಯ ಪರಿಷತ್ತಿನ ಭವ್ಯ ವೇದಿಕೆಯ ಮೇಲಿಂದಲೆ ಶಾಲಾರ್ಪಣೆ-ಮಾಲಾರ್ಪಣೆ, ಧನಾರ್ಪಣೆಗಳನ್ನು ಸ್ವೀಕರಿಸಿದ ಅಡಿಗರ ಈ ಹೊಸ ಮಾದರಿಯ ಪ್ರತಿಭಟನೆ ಅವರ ಕಾವ್ಯದಷ್ಟೇ ಸಂಕೀರ್ಣವೂ ಅರ್ಥಪೂರ್ಣವೂ ರಹಸ್ಯ ಮಯವೂ ಆಗಿತ್ತು. ಕವಿವಾಣಿ ಹೇಳುವಂತೆ 'ಕನ್ನಡವೂ ಭಾರತವೂ ಜನವೆಲ್ಲ ಒಂದೇ ಅಲ್ಲವೇ? ಕನ್ನಡಮ್ಮನ ತಾಯಿ ಇಂಡಿಯಾ ಮಾತೆ ... ಇಂಡಿಯಾದ ಪರಿಸ್ಥಿತಿಯೂ ಹೀಗೆ ಇತ್ತು ... ಇಂಥ ತುರ್ತುಪರಿಸ್ಥಿತಿಯಲ್ಲಿ ತುರ್ತು ಆಗಿ ಜನಿಸಿದ ಕೂಸು 'ಪ್ರಗತಿಪರ ಪಂಥ' ... ಮಾಜಿ ಪ್ರಗತಿಶೀಲರು, ಕಾಂಗ್ರೆಸ್ ಚೇಲಾಗಳಾಗಿದ್ದ ಕಮ್ಯುನಿಸ್ಟರು, ಕೆಲವು ಹುಸಿ ಬಿಸಿ ಹೊಸ ಬರಹಗಾರರು. ಅವರಿಗೆಲ್ಲಾ ಪ್ರಗತಿ ಪಂಥ ಜನತಾ ಕಾಲನಿಯಾಯಿತು. ಸರಕಾರದ ಸಮಾಚಾರ ಸಂಸ್ಥೆಗಳ ಕೃಪಾ ಛತ್ರದಲ್ಲಿ ಅದರ ಸಭೆ ಸಮಾರಂಭಗಳಾದವು ... ತುರ್ತುಪರಿಸ್ಥಿತಿ ಈಗ ಇಲ್ಲ. ಮತ್ತೆ ನಾಗರಿಕ ಹಕ್ಕುಗಳು ಮರಳಿ ಬಂದಿವೆ(ಪಾಟೀಲ ೧೯೭೭: ೯–೧೩).

ಮತ್ತು

ಸಾಮಾಜಿಕ ಅಸಮಾನತೆ ಬಗ್ಗೆ, ರಾಜಕೀಯದ ಹೊಲಸಿನ ಬಗ್ಗೆ ಮಾತನಾಡುತ್ತಿದ್ದ ನಮ್ಮ ನವ್ಯ ಬರಹಗಾರರು ತುರ್ತುಪರಿಸ್ಥಿತಿ ಘೋಷಣೆಯಾದ ಕೂಡಲೇ ಏಕದಮ್ ಬಾಯಿ ಹೊಲಿದು ಕೊಂಡಿದ್ದು; ಸಾಹಿತ್ಯ ಮತ್ತು ಸಂವಹನ, ಬರಹಗಾರರ ಜವಾಬ್ದಾರಿ ಇತ್ಯಾದಿಗಳೆಲ್ಲ ಬಿಟ್ಟು ಶುದ್ಧ ಸಾಹಿತ್ಯದ ಬಗ್ಗೆ ಮಾತನಾಡಲು ಪ್ರಾರಂಭಿಸಿದ್ದು ... ಅಡಿಗರು ಸಮಾಜ, ರಾಜಕೀಯ ಇತ್ಯಾದಿ ಬಹಿರಂಗ ವ್ಯಾಪಾರಗಳಿಗೆ ತಮ್ಮ ಇಂದ್ರಿಯಗಳನ್ನು ಮುಚ್ಚಿಕೊಂಡು ಅಂತರಂಗದ ಆರಾಧನೆಯಲ್ಲಿ ತೊಡಗಿದ್ದು ... ಸಮಾಜವಾದ, ದಲಿತವರ್ಗೋದ್ಧಾರ, ಜಾತಿ ವಿನಾಶ, ಶುದ್ಧ ರಾಜಕೀಯ ವ್ಯವಸ್ಥೆಯ ನಿರ್ಮಾಣ ಇತ್ಯಾದಿಯ ಬಗ್ಗೆ ಮಾತನಾಡುತ್ತಿದ್ದ ... ತುರ್ತುಪರಿಸ್ಥಿತಿ ಮಾತನಾಡದಂತೆ ಮೋಡಿ ಮಾಡಿತೆ? ... ನಿಜವಾದ ಸಾಮಾಜಿಕ ಕಳಕಳಿ, ಸ್ವಾರ್ಥರಹಿತವಾದ ಮನೋಧರ್ಮ ಇದ್ದುದೇ ಆಗಿದ್ದಲ್ಲಿ ಮೀಸಾ ಇತ್ಯಾದಿಗಳಿಗೆ ಹೆದರುತ್ತಿರಲಿಲ್ಲ ... ಆಗುತ್ತಿದ್ದ ಸಾಮಾಜಿಕ ಹಾಗೂ ರಾಜಕೀಯ ಅನ್ಯಾಯಗಳನ್ನು ಪ್ರತಿಭಟಿಸದೆ ಇವರು ಸುಮ್ಮನೆ ಅಡಗಿದ್ದ ಕೂಡಲೇ ಎಲ್ಲರಿಗೂ ತಿಳಿಯಿತು ... ತುರ್ತುಪರಿಸ್ಥಿತಿ ಸಡಿಲವಾಗಿ ಚುನಾವಣೆ ಘೋಷಿತವಾದ ನಂತರ ಮತ್ತೆ ಬಾಯಿತೆರೆದರು. ರಾಜಕೀಯದ ಬಗ್ಗೆ ಮಾತನಾಡಿದರು ... ಸಂಕ್ರಮಣದಲ್ಲಿ ಪ್ರಕಟಗೊಂಡ ಕವನಗಳನ್ನು 'ಪಾರ್ಥೆನೀಯಂ' ಕಾವ್ಯ ಎಂದು ಕರೆದರು. ಇವರಿಗೆ ಹೊಸ ಜನಾಂಗದ ಆಸೆ ಆಕಾಂಕ್ಷೆಗಳು, ಗೊತ್ತುಗುರಿಗಳು ಅರ್ಥವಾಗದೆ ಹೋಗಿವೆ ... ಸಾಮಾಜಿಕ ದುರಂತವೆಂದರೆ ತುರ್ತುಪರಿಸ್ಥಿತಿಗೆ ಪ್ರತಿಭಟನೆ ಸಾಹಿತ್ಯದಲ್ಲಿ ಬಂದದ್ದು ಸಮಾಜದ ಕೆಳವರ್ಗದಿಂದಲೇ. ಎಂದಿನಂತೆ ಪುರೋಹಿತಶಾಹಿ ವರ್ಗ ಸುಮ್ಮನೆ ಇತ್ತು. ಇಲ್ಲಿ ವ್ಯಕ್ತವಾಗುವ ತತ್ವ: ಯಾವುದೇ ರಾಜಕೀಯ ವ್ಯವಸ್ಥೆ ಬಂದರೂ ಅದರಿಂದ ಪೆಟ್ಟು ಸಮಾಜದ ಮೇಲುವರ್ಗಕ್ಕೆ ಆಗುವುದಿಲ್ಲ. ಕೆಳವರ್ಗದವರಿಗೇನೆ ತಟ್ಟುವುದು ಎಂಬುದು. ಆದ್ದರಿಂದ ಇಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಏನಾದರೂ ಬದಲಾಗಬೇಕಾದರೆ ಕೆಳ ವರ್ಗದ ಒಗ್ಗೂಡುವಿಕೆಯಿಂದ ಮಾತ್ರ ಸಾಧ್ಯ ... ಜನತೆಯನ್ನು ಪ್ರಚೋದಿಸುವ ಶಕ್ತಿ ಅವರ ಲೇಖನಿಗಿದೆ ... ಸಮಾಜದಲ್ಲಿ ನಡೆಯುತ್ತಿರುವ ಹೋರಾಟಗಳಿಗೆ ಅವನು ಕಣ್ಣು ಮುಚ್ಚಿ ಕೂರಲು ಸಾಧ್ಯವಿಲ್ಲ. ಹಾಗೆ ಕುಳಿತರೆ ಸಾಹಿತಿಯಾಗಲಾರ. ಯಾವುದೇ ಒಂದು ಸಾಮಾಜಿಕ ಸಂದರ್ಭದ ವಿಷಮಸ್ಥಿತಿಯಲ್ಲಿ ನಿಜವಾದ ಲೇಖಕ ಯಾರು ತಿಳಿಯುತ್ತದೆ ... ಇಂದು ಸಮಾಜದಲ್ಲಿ ಮಹತ್ತರ ಬದಲಾವಣೆ ಆಗಿವೆ. ತುರ್ತುಪರಿಸ್ಥಿತಿ ಕೇವಲ ರಾಜಕೀಯ ಕ್ರಾಂತಿಗೆ, ಪರಿವರ್ತನೆಗೆ ಮಾತ್ರ ಸಾಧಕವಾಗಲಿಲ್ಲ. ಅದು ರಾಜಕೀಯ ವ್ಯಕ್ತಿಗಳ, ಸಮಾಜ ಸುಧಾರಕರ, ವಿಚಾರವಾದಿ ಸಾಹಿತಿಗಳ ನಿಜವಾದ ಬಣ್ಣ ಬಯಲು ಮಾಡಿದೆ(ಕಾಡನಕುಪ್ಪೆ ೧೯೭೭: ೬೭–೭೨).

ಹಾಗೂ

ತುರ್ತುಪರಿಸ್ಥಿತಿ ಕರಾಳತೆಯನ್ನು ಪ್ರತಿಭಟಿಸಿ ನಮ್ಮ ಸಾಹಿತಿಗಳು ದಂತಗೋಪುರಗಳಿಂದ ಹೊರ ಬಂದು ತಂತಮ್ಮ ವ್ಯಾಪ್ತಿ ಹಾಗೂ ಮಿತಿಗಳಲ್ಲಿ ಕ್ರಿಯಾಶೀಲತೆ ತೋರಿದ್ದು ಒಂದು ಸ್ವಾಗತಾರ್ಹ ಬೆಳವಣಿಗೆ ... ಸ್ವಾತಂತ್ರ್ಯಪ್ರಿಯತೆ ಪರಮಾವಧಿ ಮುಟ್ಟಿತೆನ್ನುವಷ್ಟರ ಮಟ್ಟಿಗೆ ಸಾಹಿತಿಗಳೂ ಪತ್ರಿಕೆಗಳಲ್ಲಿ, ಪತ್ರಿಕೆಗಳ ಹೊರಗೆ ಕಾಣಿಸಿಕೊಂಡಿದ್ದಾರೆ. ಕಾಣಿಸಿಕೊಳ್ಳುತ್ತಿದ್ದಾರೆ ... ತುರ್ತುಪರಿಸ್ಥಿತಿಯನ್ನು ವಿರೋಧಿಸಿ ವಿಜೃಂಭಿಸುವುದು ಮಾತ್ರವೇ ಸ್ವಾತಂತ್ರ್ಯಪ್ರಿಯತೆ ಎಂಬರ್ಥ ಕೊಡುವಂಥ ಭಾಷಣಗಳು ನಡೆದಿದೆ(ರಾಮಚಂದ್ರಪ್ಪ ೧೯೭೭: ೭೩).

ತುರ್ತುಪರಿಸ್ಥಿತಿ ಕಾಲಘಟ್ಟದ ಸಾಹಿತ್ಯಿಕ ವಲಯದಲ್ಲಿ ಕಂಡುಬಂದ ಪ್ರತಿಕ್ರಿಯೆಗಳ ವಿರುದ್ಧ ಆಕ್ರೋಶದ ಜೊತೆಗೆ ವ್ಯಂಗ್ಯವಿದೆ. ಶಿವರಾಮ್ ಕಾಡನಕುಪ್ಪೆ ಅವರ ವಿಮರ್ಶೆ ವೈಯಕ್ತಿಕ ನೆಲೆಯ ಟೀಕೆ ಆರಂಭವಾಗಿ

ಅಸ್ತಿತ್ವದಲ್ಲಿದ್ದ ಪಂಥ ಮತ್ತು ಹೊಸ ಪಂಥದ ವಿಮರ್ಶೆಯಾಗಿ ರೂಪಾಂತರಗೊಳ್ಳುವುದು. ಬರಗೂರು ರಾಮಚಂದ್ರಪ್ಪ ಅವರ ವಿಮರ್ಶೆಯು ಸಮಕಾಲೀನವಾಗಿ ಸಾಹಿತ್ಯ, ಸ್ವಾತಂತ್ರ್ಯ ಕುರಿತ ವಿಮರ್ಶೆಗಳು, ಟೀಕೆಗಳ ಕುರಿತು ಚರ್ಚಿಸುವುದು. ನೇರವಾಗಿ ಕೆನೆಪದರದೊಳಗಿರುವವರಲ್ಲಿ ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳಲ್ಲಿ ಭಾಗವಹಿಸದಿರುವವರ ಕುರಿತ ಚರ್ಚೆಗಳಿವು.

*ಗಾಂಧಿ ಸ್ಮರಣೆ(೧೯೭೬), ಗಾಂಧಿ ಗಾಂಧಿ ಗಾಂಧಿ(೧೯೭೭), ಜೂನ್ ೭೫ ಮಾರ್ಚ್ ೭೭ (೨೦೧೧), ೨೫ ದಿನಗಳು ೨೬ ರಾತ್ರಿ(೨೦೧೧)* ಹಾಗೂ ಇತರ ಪ್ರತಿಭಟನಾ ಸಾಹಿತ್ಯ ಮೊದಲಾದವುಗಳ ಸ್ವರೂಪ ಕುರಿತು ಸಮಕಾಲೀನವಾಗಿ ಅನೇಕ ಚರ್ಚೆ, ವಿಮರ್ಶೆಗಳನ್ನು ಕಾಣಬಹುದು. ಈ ಸಾಹಿತ್ಯಗಳಲ್ಲಿ ಕಂಡುಬಂದ ವಸ್ತು ತುರ್ತುಪರಿಸ್ಥಿತಿ ಕಾಲಘಟ್ಟದ ಆಡಳಿತಶಾಹಿ ವ್ಯವಸ್ಥೆ ಮತ್ತು ವ್ಯಕ್ತಿ ನೆಲೆಯಲ್ಲಿ ಇಂದಿರಾಗಾಂಧಿ ಅವರ ವಿರುದ್ಧ ವಿರೋಧ ವ್ಯಕ್ತಪಡಿಸಿರುವುದಾಗಿದೆ. ಇವುಗಳಲ್ಲಿ ತಕ್ಷಣದ ಆಕ್ರೋಶ, ಅಸಹನೆ ನೇರವಾಗಿ ಮತ್ತು ಪರೋಕ್ಷವಾಗಿ ಚಿತ್ರಿತವಾಗಿದೆ. ಈ ಸಂದರ್ಭದಲ್ಲಿ ಕಂಡುಬರುವ ಮತ್ತೊಂದು ಬಗೆ ಎಂದರೆ ಹೊಸ ಸಾಹಿತ್ಯ ಪಂಥದ ಆರಂಭ, ಅದರ ರೂಪರೇಷೆಗಳ ಚರ್ಚೆ. ಚಂದ್ರಶೇಖರ ಪಾಟೀಲರ ಸಂಪಾದಕೀಯದ *ಜೂನ್ ೭೫ ಮಾರ್ಚ್ ೭೭(೧೯೭೭)* ಕವನ ಸಂಕಲನ ಕುರಿತ ವಿಮರ್ಶೆಗಳಲ್ಲಿ 'ಈ ಕೃತಿಗಳನ್ನು ಗುಣ, ಲಕ್ಷಣಗಳ ನಿಲುಮೆಯಿಂದ ಅಳೆಯುವುದು ಹೇಗೆ ಸಾಧ್ಯ? ಯಾವುದನ್ನು ಈ ಕವಿಗಳು ಮಾಡಲು ಹೊರಟೇ ಇಲ್ಲವೋ ಅವರು ಅದನ್ನು ಮಾಡಿಲ್ಲವೆಂದು ಟೀಕಿಸುವುದು ನಗೆಪಾಟಲು ಮಾತ್ರವಲ್ಲ, ಅನ್ಯಾಯವೂ ಆದೀತು ... ಕವನ ಒಳ್ಳೆಯದಾಗಲು ಅಲ್ಲಲ್ಲಿ ಕೆಲವೊಂದು ಸಾಲು ಚೆನ್ನಾಗಿದ್ದರೆ ಸಾಲದು ... ಮುಖ್ಯವಾಗಿ ಮಾರ್ಮಿಕತೆ, ಗುಂಫನ, ಭಾವ ಭಾಷೆಗಳ ಲಯಬದ್ಧ ಏಕತೆ ಆದಷ್ಟು ಸಾತತ್ಯದಿಂದ ಕವನದುದ್ದಕ್ಕೂ ಕಂಡುಬರಬೇಕು' ಎಂಬ ಗೌರೀಶ್ ಕಾಯ್ಕಿಣಿ ಅವರ ವಿಮರ್ಶೆಯನ್ನು ಕಾಣಬಹುದು. ಇದು ಬಂಡಾಯ ಸಾಹಿತ್ಯ, ದಲಿತ ಸಾಹಿತ್ಯಗಳ ಕುರಿತು ಬರುತ್ತಿದ್ದ ಟೀಕೆ, ವಿಮರ್ಶೆಗಳ ಸಂಕ್ಷಿಪ್ತ ರೂಪದಂತಿದೆ. ಚಂದ್ರಶೇಖರ್ ಪಾಟೀಲರ ೨೫ ದಿನ ೨೬ ರಾತ್ರಿ ಕುರಿತು

> ಸಾಹಿತ್ಯವೊಂದನ್ನು ಅರ್ಥ ಮಾಡಿಕೊಳ್ಳಬೇಕಾದರೆ, ಆ ಕೃತಿ ನಿರ್ಮಾಣವಾದಾಗ ಆ ಸಾಹಿತಿಯ ಮನೋರಂಗದಲ್ಲಿ ಆಗಿ ಹೋಗಿರಬಹುದಾದ ಹಾಕಾಟಗಳನ್ನು ನಾವು ಗುರುತಿಸಬೇಕಾಗುತ್ತದೆ ... ತುರ್ತುಪರಿಸ್ಥಿತಿಯ ಬಿಸಿಯನ್ನು ತಟ್ಟಿಸಬೇಕು. ತಮ್ಮ ಪುಸ್ತಕ ಭುಗಿಲಾಗಬೇಕು ಎನ್ನುವುದು ಇಲ್ಲಿನ ಆಶಯವಲ್ಲ. ಇಲ್ಲಿ ಅನುಭವಗಳು ಎಷ್ಟು ಅರ್ಥಪೂರ್ಣವಾಗಿ ಬರವಣಿಗೆಯಲ್ಲಿ ಮೂಡಿಬಂದಿದೆ ಎನ್ನುವುದು ಮುಖ್ಯ. ಇಲ್ಲದ್ದನ್ನು ಎತ್ತಿ ಇರುವುದನ್ನು ಮರೆಸುವುದು ಕೆಟ್ಟ ವಿಮರ್ಶೆಯಲ್ಲಿ ಮಾತ್ರ ಸಾಧ್ಯ. ಸ್ನೇಹಲತಾ ರೆಡ್ಡಿಯವರ ಪ್ರಸಂಗವನ್ನ ವಿಮರ್ಶಕರು ಇಲ್ಲಿ ವಿನಾಕಾರಣ ಎಳೆದು ತರುವುದು ಅಷ್ಟು ಸಮಂಜಸವಲ್ಲ ... ಒಂದು ವಿಶಿಷ್ಟ ಪರಿಸ್ಥಿತಿಗೆ ಹಲವು ವ್ಯಕ್ತಿಗಳು ಪ್ರತಿಕ್ರಿಯಿಸಿರುವ ರೀತಿ ಭಿನ್ನವಾದದ್ದು ... ಅದು ಎಷ್ಟೆಷ್ಟು ಸಾಮಾಜಿಕವಾಗುವುದು ಸಾಧ್ಯವೋ ಅಷ್ಟೇ ವೈಯಕ್ತಿಕವೂ ಆಗುವ ಸಾಧ್ಯತೆಗಳಿದ್ದೇ ಇರುತ್ತವೆ(ಚಂದ್ರಶೇಖರ ೧೯೮೦: ೪೬೬).

ಈ ವಿಮರ್ಶೆ ನೇರವಾಗಿ ಕೃತಿ ಕುರಿತಿರದೇ ಗೌರೀಶ್ ಕಾಯ್ಕಿಣಿ ಅವರ ವಿಮರ್ಶೆಗೆ ಬಂದ ಪ್ರತಿಕ್ರಿಯೆ ಆಗಿದೆ. ತುರ್ತುಪರಿಸ್ಥಿತಿ ಕಾಲದ ಸಾಹಿತ್ಯ ಮತ್ತು ಸಾಹಿತಿಗಳ ಕುರಿತು ಬರುತ್ತಿರುವ ವಿಮರ್ಶೆಗಳಲ್ಲಿ ಎರಡು ಹಂತಗಳನ್ನು ನೋಡಬಹುದಾಗಿದೆ. ತುರ್ತುಪರಿಸ್ಥಿತಿ ವಿರೋಧಿ ಹೋರಾಟಗಳಲ್ಲಿ ನೇರವಾಗಿ ಭಾಗವಹಿಸಿದವರು ಮತ್ತು ಭಾಗವಹಿಸದವರು ಎಂಬ ಎರಡು ಪ್ರಮುಖ ವಲಯಗಳನ್ನು ಕಾಣಬಹುದು. ಹೊಸ ಸಂಪ್ರದಾಯದ ಕುರಿತು ಚರ್ಚಿಸುತ್ತಿರುವ ಸಾಹಿತಿಗಳು ಹಾಗೂ ನವ್ಯ ಸಂಪ್ರದಾಯ ಮತ್ತಿತರಗಳಲ್ಲಿ ಗುರುತಿಸಿಕೊಂಡ ಖ್ಯಾತ ಸಾಹಿತಿಗಳು. ಕೆಲವೆಡೆ ಇದು ವೈಯಕ್ತಿಕವಾಗಿ, ಮತ್ತೆ ಕೆಲವೆಡೆ ವಸ್ತುವಿಷಯವಾಗಿ ಚರ್ಚಿತವಾಗಿದೆ. ತುರ್ತುಪರಿಸ್ಥಿತಿ ವಿರೋಧಿ ಹೋರಾಟಗಳಲ್ಲಿ ಭಾಗವಹಿಸಿದವರಲ್ಲಿಯೂ ಅನೇಕ ವಲಯಗಳನ್ನು ಕಾಣಬಹುದು. ಬಹಿರಂಗವಾಗಿ ತೀವ್ರ ರೀತಿಯಲ್ಲಿ ಪ್ರತಿಭಟಿಸಿದವರು ಮತ್ತು ಸೌಮ್ಯವಾಗಿ ಪ್ರತಿಭಟಿಸಿದವರು ಮುಖ್ಯವಾಗಿ ಕಂಡುಬರುವವರು. ಈ ವಲಯಗಳ ನಡುವೆಯೂ ಸಾಹಿತ್ಯದ ಸ್ವರೂಪದ ನೆಲೆಯಲ್ಲಿ ಟೀಕೆಗಳು, ಚಿಂತನೆಗಳಲ್ಲಿ ಭಿನ್ನತೆ ಕಂಡುಬರುವುವು. ಈ ದಿಸೆಯಲ್ಲೇ ಇದು ಭುಗಿಲಲ್ಲ(ಆರ್.ಎಸ್.ಎಸ್ ತುರ್ತುಪರಿಸ್ಥಿತಿ ಕುರಿತು ತಂದ ಕೃತಿ), ಸ್ನೇಹಲತಾ ರೆಡ್ಡಿಯವರ ಸೆರೆಮನೆ ದಿನಚರಿಯ ಪ್ರಸ್ತಾಪಗಳನ್ನು ಕಾಣಬಹುದು.

ರಾಷ್ಟ್ರವಾಳುವ ಮಂದಿ ನಾವೆ ಆರಿಸಿದವರು
ನಾಡ ಬೆಳೆಸುವರೆಂದು ನಂಬಿದ್ದೆ ತಪ್ಪು;
ಬಡತನವನಳಿಸುಳಿಸುವರಂತೆ, ಇವರು ಅಳಿಸುತ್ತಾರೆ ಬಡವರನ್ನು,
ನಮಗೆ ಕತ್ತಲೆಯಲ್ಲಿ ದೀಪಕ್ಕೆ ಗತಿಯಿಲ್ಲ, ಇವರಿಗೂ ಬಲ್ಬುಗಳ ಹಗಲುಗಳು(ನಾಡಿಗ ೧೯೯೮).

ಇಂತಹದೆ ವ್ಯಂಗ್ಯ, ಆಕ್ರೋಶವನ್ನು ಜಿ.ಎಸ್.ಶಿವರುದ್ರಪ್ಪನವರ 'ಕಾಡಿನ ಕಗ್ಗತ್ತಲಲ್ಲಿ' ಕವನ ಸಂಕಲನದ ಇನ್ನೆಂದು ಬೆಳಗು ನಿಮಗೆ ?, ಸ್ವಗತ, ಶಿವಲಿಂಗಯ್ಯನವರ ಕ್ರಾಂತಿ(೧೯೭೮), ಜೋಗನಹಳ್ಳಿಯವರ ೧೯೭೭-೧೯೭೯(೧೯೭೯) ಮುಂತಾದ ಕವನಗಳಲ್ಲಿ ಕಾಣಬಹುದು. ೧೯೭೭ರ ನಂತರ ಪ್ರಕಟಗೊಂಡ ಕೆಲ ಸಾಹಿತ್ಯದಲ್ಲಿ ತುರ್ತುಪರಿಸ್ಥಿತಿ ಮತ್ತು ನಂತರದ ರಾಜಕೀಯ ಬೆಳವಣಿಗೆಗಳನ್ನು ಗುರುತಿಸಬಹುದು. ಉದಾಹರಣೆಗೆ, ಬಾಮುಗೌಡ ಪಾಟೀಲರ *ಕೊಲ್ಲಲೇ ಸಾಯಲೇದಲ್ಲಿನ(೧೯೭೯)* ಮುಖವಾಡಗಳು, ಮಂತ್ರಿ ನಾಯಿ, ಭರವಸೆ ನೀಡುವ ಭಂಡ ನಾಯಕರಿಗೆ, ಮಹಾನ್ ದೇಶಭಕ್ತರುಗಳು ಮೊದಲಾದವುಗಳನ್ನು ನೋಡಬಹುದು. ಈ ಕವನಗಳಲ್ಲಿ ಆಕ್ರೋಶ, ಹತಾಶೆ ಮುಖ್ಯ ವಸ್ತುವಾಗಿದೆ. ಕವನಗಳಷ್ಟೇ ಅಲ್ಲದೇ ನಾಟಕ, ಕಾದಂಬರಿಗಳಲ್ಲಿಯೂ ಇದು ವಿಸ್ತರಿಸಿರುವುದು. ಚಂದ್ರಶೇಖರ ಪಾಟೀಲ ಅವರ *ವಂದಿಮಾಗಧ(೧೯೮೦)* ರಾಜಕೀಯ ವಿಡಂಬನೆ. ಇದರಲ್ಲಿ ರಾಜಕೀಯ ಜೀವನದ ಅವಿಭಾಜ್ಯ ಅಂಗವೇ ಆಗಿರುವ ಸ್ವಾರ್ಥ ಸಾಧಕ ಹೊಗಳುಭಟ್ಟರ ಅಣಕವಿದೆ. ಇದರ ಸಂದರ್ಭ ಕರ್ನಾಟಕದಲ್ಲಿ ನಡೆದ ರಾಜಕೀಯ ಘಟನೆಗಳು. ೧೯೭೭ರ ನಂತರದ ಅರಸು ಅವರ ಆಡಳಿತ ಮತ್ತು ಸುತ್ತಲಿನ ಹೊಗಳುಭಟ್ಟರನ್ನೇ ವಸ್ತುವಾಗಿಸಿಕೊಂಡ ನಾಟಕ. ಇದರೊಡನೆ ಟಿ.ಎನ್.ಸೀತಾರಾಮ್‌ರವರ *ಆಸ್ಫೋಟ(೧೯೮೦)*, ಪ್ರಸನ್ನ ಅವರ *ದಂಗೆಯ ಮುಂಚಿನ ದಿನಗಳು(೧೯೮೧)* ಪೂರಕವಾಗಿದೆ. ಆಸ್ಫೋಟ ಕಾರ್ಮಿಕ ಸಮಸ್ಯೆ ಮತ್ತು ವಾಸ್ತವ ರಾಜಕಾರಣವನ್ನು, ದಂಗೆಯ ಮುಂಚಿನ ದಿನಗಳು ೧೯೮೭ರ ಸಿಪಾಯಿ ದಂಗೆಯನ್ನು ಸಮಕಾಲೀನ ದೃಷ್ಟಿಕೋನದಲ್ಲಿ ನೋಡಲಾದ ರಾಜಕೀಯ ಪ್ರಹಸನಗಳು. ಅಬ್ಬಾಸ್‌ರ *ಟ್ವೆಂಟಿಯತ್ ಮಾರ್ಚ್ ನೈನ್‌ಟೀನ್ ಸೆವೆಂಟಿಸೆವೆನ್ ಎ ಡೆ ಲೈಕ್ ಎನಿ ಅದರ್(೧೯೭೮, ಇಂಗ್ಲಿಶ್)* ೧೯೭೭ರ ಲೋಕಸಭಾ ಚುನಾವಣೆ ಆಧಾರಿತ ಕಾದಂಬರಿ ಆಗಿದೆ. ಸಂಜೀವ್ ತಾರೆಯವರ *ದಿ ಫ್ಲಾಪ್(೨೦೦೮, ಇಂಗ್ಲಿಶ್)* ರಾಜಕೀಯ ಸ್ಥಿತ್ಯಂತರ, ವಿಷಮತೆಯ ಕಾಲದಲ್ಲಿ ನಾಗಾಪುರದಲ್ಲಿ ನಡೆದ ಘಟನೆಗಳನ್ನು ಜೆ.ಪಿ. ಚಳವಳಿಯಿಂದ ಮೊದಲುಗೊಂಡು ತುರ್ತುಪರಿಸ್ಥಿತಿ ನಂತರದವರೆಗೆ ಕಟ್ಟಿಕೊಡುವುವು. ಸಲ್ಮಾನ್ ರುಷ್ದೀಯ *ಮಿಡ್‌ನೈಟ್ಸ್ ಚಿಲ್ಡ್ರನ್(೧೯೮೧, ಇಂಗ್ಲಿಶ್)*[೨೫] ಭಾರತದ ವಿಭಜನೆಯೊಂದಿಗೆ ಆರಂಭಗೊಂಡು ಸ್ವತಂತ್ರ ಭಾರತದಲ್ಲಿ ತುರ್ತುಪರಿಸ್ಥಿತಿ ಮತ್ತು ನಂತರದವರೆಗೆ ಉಂಟಾದ ರಾಜಕೀಯ ಸ್ಥಿತ್ಯಂತರಗಳಲ್ಲಿ ಜನ ಸಾಮಾನ್ಯರ ಜೀವನದ ಏರುಪೇರು ಕುರಿತಾದುದು. ಈ ನಿಟ್ಟಿನಲ್ಲಿ ಮತ್ತೊಂದು ಪ್ರಮುಖ ಕಾದಂಬರಿ ಮಿಸ್ತ್ರಿಯವರ *ಎ ಫೈನ್ ಬ್ಯಾಲೆನ್ಸ್(೧೯೯೫, ಇಂಗ್ಲಿಶ್)*. ಸಾಮಾನ್ಯ ಜನರ ವಾಸ್ತವತೆಗೆ ಒತ್ತು ಕೊಡುವುದು. ಕರ್ತಾ ಬಿ ಅರ್ಜೂರವರ ರಹಿ *ಮಾಸೂಮ್ ರಝಾ (೨೦೦೨, ಹಿಂದಿ)* ತುರ್ತುಪರಿಸ್ಥಿತಿ ಕಾಲಘಟ್ಟದ ಉತ್ತಮ ಕಾದಂಬರಿಗಳಲ್ಲೊಂದು. ಇವೆಲ್ಲವೂ ತುರ್ತುಪರಿಸ್ಥಿತಿ ಕಾಲದ ಸಾಹಿತ್ಯ ಮತ್ತು ಸಮಾಜ ಹಾಗೂ ನಂತರದ ಪ್ರತಿಕ್ರಿಯೆಗಳನ್ನು ಕಟ್ಟಿಕೊಡುವುವು. ಅದರ ಪ್ರಭಾವ ಪರಿಣಾಮಗಳು ಸಾಹಿತ್ಯ ಪಂಥಗಳಲ್ಲಿ ಉಂಟಾದ ಬದಲಾವಣೆಗಳು ಹಾಗೂ ಸಾಹಿತ್ಯಿಕ ಚಳವಳಿಗಳಾಗಿ ಬೆಳೆಯತೊಡಗಿರುವುದು ಮತ್ತೊಂದು ಮುಖವಾಗಿದೆ.

### ೪.೨.೧.೨. ಚಳವಳಿಗಳು: ರಾಜಕಾರಣ, ಸಾಹಿತ್ಯ ಹಾಗೂ ಸಾಹಿತಿಗಳು

> ಸಾಹಿತಿಯ ಸಾಮಾಜಿಕ ಪ್ರಜ್ಞೆ ಕೇವಲ ಅಂದಿನ ಸಮಾಜಕ್ಕೆ ಮೀಸಲೇನು ಅಲ್ಲ ... ಲೇಖಕ ಸತತವಾಗಿ ಸಮಾಜದ ವಿಮರ್ಶಕನಾಗಬೇಕು. ಮುಂದಿನ ಸಮಾಜಕ್ಕೆ ಹಿತವಾಗುವ ದೃಷ್ಟಿ ಹೊಂದಿರಬೇಕು ... ಒಂದಲ್ಲ ಒಂದು ರಾಜಕೀಯ-ಸಾಮಾಜಿಕ ಧೋರಣೆಗೆ ಸಾಹಿತಿ ಬದ್ಧನಾಗುವುದು ಸೂಕ್ತವೇ ಆಗಬಹುದಾದರೂ, ಅದು ಪ್ರಚಲಿತವಿರುವ ಯಾವುದೋ ಧೋರಣೆಯ ಬಿಂಬವಲ್ಲ(ಶಿವರುದ್ರಪ್ಪ ೧೯೭೭: ೪೨-೪೩).

೧೯೭೦ರ ದಶಕದಲ್ಲಿ ಸಮಾಜದ ಹಲವು ವಲಯಗಳಲ್ಲಿ ಸಾಹಿತ್ಯ, ಸಮಾಜ ಮತ್ತು ರಾಜಕಾರಣದ ನಡುವಿನ ಪರಸ್ಪರ ಸಂಬಂಧಗಳ ಕುರಿತು ಹೊಸ ನೋಟವನ್ನು ಬೆಳೆಸಿಕೊಳ್ಳುವ ಅವಶ್ಯಕತೆಯ ಚಿಂತನೆಗಳಿವು. ಈ ಕಾಲದಲ್ಲಿ ಸಾಹಿತ್ಯ ಒಂದು ಕಲೆ, ಶುದ್ಧ ಸಾಹಿತ್ಯ ರಚನೆ ಸಾಹಿತಿಯ ಕೆಲಸವಾಗಬೇಕೆಂಬ

ಚಿಂತನೆ ಕೆಲವು ವಲಯಗಳಲ್ಲಿದ್ದರೆ ಪ್ರತಿಯಾಗಿ ಸಾಹಿತಿ ಸಮಾಜದ ಭಾಗ, ಹಾಗಾಗಿ ಸಮಕಾಲೀನ ರಾಜಕಾರಣ ಮತ್ತು ಸಮಾಜದ ಆಗುಹೋಗುಗಳಿಗೆ ಪೂರಕವಾಗಿ ಪ್ರತಿಕ್ರಿಯಿಸುವ ಅವಶ್ಯಕತೆ ಇದೆ ಎಂಬ ಚರ್ಚೆಗಳು ಮತ್ತೆ ಕೆಲ ವಲಯಗಳಲ್ಲಿ ಹುಟ್ಟತೊಡಗಿತ್ತು. ಈ ಎರಡು ನೆಲೆಗಳನ್ನು ಮುಖಾಮುಖಿಯಾಗಿಸಿದ ಹೊಸದೊಂದು ನೆಲೆಯನ್ನು ಹೊಂದಬೇಕಾದ ಚಿಂತನೆ ಮೇಲಿನ ಉಲ್ಲೇಖದಲ್ಲಿದೆ. ಸಾಹಿತ್ಯವು ಕಾಲದ ಪರಿವರ್ತನೆಗೆ ಅಗತ್ಯವಾದರೂ ಮನೋಧರ್ಮದ ಏಕಾಏಕಿ ಸೃಷ್ಟಿಯೂ ಅಸಾಧ್ಯವಾದುದು. ಮಾರ್ಪಾಟನ್ನು ಸ್ವಾಗತಿಸುವ ಬರಹ ಸಿದ್ಧವಾದ ಕೂಡಲೇ ಸಮಾಜವು ಅದಕ್ಕೆ ಸಿದ್ಧವಾಗಿರುವುದಿಲ್ಲ. ಕಾಲಕ್ರಮದಲ್ಲಿ ಈ ಪರಿಣಾಮ ಸಾಧ್ಯವೆಂದು ಚರ್ಚೆಯನ್ನು ವಿಸ್ತರಿಸುವರು. ೧೯೭೭ರ ನಂತರ ಕನ್ನಡ ಭಾಷಾ ಸಾಹಿತ್ಯ ವಲಯದಲ್ಲಿ ಕಂಡುಬಂದ ಚಳವಳಿಗಳ ಮೇಲಿನ ಸಮಕಾಲೀನ ರಾಜಕಾರಣದ ಪ್ರಭಾವ ಪರಿಣಾಮಗಳ ನೆಲೆಯಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ. ಕನ್ನಡ ಭಾಷಾ ಸಾಹಿತ್ಯವನ್ನು ಮುಖ್ಯವಾಗಿ ಪರಿಗಣಿಸಿ ಇತರ ಭಾಷಾ ಸಾಹಿತ್ಯಗಳಲ್ಲಿ ಕಂಡುಬಂದ ಬೆಳವಣಿಗೆಗಳು, ಆ ಕುರಿತ ಚರ್ಚೆಗಳನ್ನು ಅವಲೋಕಿಸಲು ಯತ್ನಿಸಿದೆ.

ತುರ್ತುಪರಿಸ್ಥಿತಿ ನಂತರದ ರಾಜಕಾರಣದ ಪರಿಣಾಮಗಳು ಎರಡು ರೀತಿಯಲ್ಲಿ ವ್ಯಕ್ತವಾಗಿವೆ. ರಾಜಕೀಯ ಪಕ್ಷಗಳು, ಚುನಾವಣೆಗಳ ಜೊತೆ ಗುರುತಿಸಿಕೊಂಡ ಸಾಹಿತಿಗಳು ಹಾಗೂ ಸಮಕಾಲೀನ ರಾಜಕಾರಣ, ಸಮಾಜದ ಆಗುಹೋಗುಗಳ ಕುರಿತು ಸಾಹಿತ್ಯ ಮತ್ತು ಸಾಹಿತಿಗಳು ಜಾಗೃತ ಆಗಿರಬೇಕು ಎಂಬ ಪ್ರಜ್ಞೆಯ ಬೆಳವಣಿಗೆ. "ಪ್ರಜಾತಂತ್ರದ ರಕ್ಷಣೆಗಾಗಿ ಜನತಾ ಪಕ್ಷವನ್ನು ಬೆಂಬಲಿಸಿ–ಡಾ.ಕಾರಂತ್"(ಕಾರಂತ ೧೯೭೭ ೧೮); "ಜನತಾ ಪಕ್ಷಕ್ಕೆ ಸಾರಸ್ವತ ಲೋಕದ ಶ್ರೀರಕ್ಷೆ"(ವಿಶ್ವಪ್ರಭ ೧೯೭೭ ಮಾರ್ಚ್ ೧) ಮೊದಲಾದ ಪತ್ರಿಕಾ ವರದಿಗಳಲ್ಲಿ ಜನತಾ ಪಕ್ಷಕ್ಕೆ ಸಾಹಿತಿಗಳ ಬೆಂಬಲವನ್ನು ಕಾಣಬಹುದು. ಶಿವರಾಮ ಕಾರಂತ, ಗೋಪಾಲಕೃಷ್ಣ ಅಡಿಗ, ಬಿ. ವಿ. ಕಾರಂತ, ಸುಮತೀಂದ್ರ ನಾಡಿಗ, ಕೆ. ಎಂ. ಶಂಕರಪ್ಪ, ಆದ್ಯರಂಗಾಚಾರ್ಯ, ಕೆ. ವಿ. ಸುಬ್ಬಣ್ಣ, ಬಿ. ವಿ. ವೈಕುಂಠರಾಜು ಮತ್ತಿತರ ಸಾಹಿತಿಗಳು ಮತ್ತು ಕಲಾವಿದರು ಜನತಾ ಪಕ್ಷದ ಪರ ಕರ್ನಾಟಕದಲ್ಲಿ ಪ್ರಚಾರ ಕೈಗೊಳ್ಳುವುದನ್ನು ಕಾಣಬಹುದು. 'ಮುಂಬೈನಲ್ಲೂ ಇಂತಹ ಬೆಳವಣಿಗೆ ಕಂಡುಬರುತ್ತಿದೆ' ಎಂಬ ಪ್ರಕಟಿತ ವರದಿಯು ಬೇರೆ ರಾಜ್ಯಗಳಲ್ಲಿಯೂ ಇದೇ ಪ್ರಕ್ರಿಯೆ ರೂಪಪಡೆಯುತ್ತಿದ್ದನ್ನು ಸ್ಪಷ್ಟಪಡಿಸುವುದು. ತುರ್ತುಪರಿಸ್ಥಿತಿ ವಿರೋಧಿ ನೆಲೆಯಲ್ಲಿ 'ಆಡಳಿತ ಪಕ್ಷವಾಗಿದ್ದ ಕಾಂಗ್ರೆಸ್ಸನ್ನು ಬದಲಾಯಿಸಿದರೆ ಇಂತಹ ಪರಿಸ್ಥಿತಿ ಮರುಕಳಿಸಲು ಸಾಧ್ಯವಿಲ್ಲ. ಸ್ವಾತಂತ್ರ್ಯಾ ನಂತರದಿಂದ ಆಡಳಿತ ಸರ್ಕಾರವನ್ನು ನಡೆಸುತ್ತಿರುವುದು ಒಂದೇ ಪಕ್ಷ, ಇದು ಪ್ರಜಾಪ್ರಭುತ್ವವಲ್ಲ' ಮೊದಲಾದ ವಿಚಾರಗಳು ಚುನಾವಣಾ ಪ್ರಚಾರ ಕೈಗೊಂಡಿರುವ ಸಾಹಿತಿ ಮತ್ತು ಕಲಾವಿದರ ವಿಚಾರಧಾರೆಯ ರಾಜಕೀಯ ನೆಲೆಯಾಗಿ ಮೂಡಿಬಂದಿತ್ತು. ಈ ಬೆಳವಣಿಗೆಯು ಸಾಹಿತಿಗಳು ಮತ್ತು ರಾಜಕಾರಣಿಗಳ ನಡುವಿನ ಸಂಬಂಧದಲ್ಲಿ ಪೂರಕವಾಗಿ ಮುಂದುವರೆಯುವುದನ್ನು ಕಾಣಬಹುದಾದರೂ ಸಾರ್ವಜನಿಕ ವಿಚಾರಗಳಿಗಿಂತ, ವೈಯಕ್ತಿಕ ನೆಲೆಗಳಲ್ಲಿ ಹೆಚ್ಚು ಕಂಡುಬರುವುವು.

> ತುರ್ತುಪರಿಸ್ಥಿತಿಯ ಹಿನ್ನಲೆಯಲ್ಲಿ ಕಾಣಿಸಿಕೊಂಡಿರುವ ಇಂದಿನ ಸ್ವಾತಂತ್ರ್ಯಪ್ರಿಯತೆ ಸದ್ಯದ ಸ್ಥಿತಿಯಲ್ಲಿ ಪ್ರತಿಭಟನೆಯ ದನಿಯಾಗಿ ತನ್ನದೇ ಮಹತ್ವ ಹೊಂದಿದೆ. ಇದು ತತ್ಕಾಲೀನ ಅಗತ್ಯವೂ ಹೌದು ... ಕನ್ನಡ ಸಾಹಿತ್ಯದಲ್ಲಿ ಒಂದೆರಡು ವರ್ಷಗಳಿಂದ ಇಂಥ ಪ್ರಾಮಾಣಿಕ ಪ್ರಯತ್ನದ ಪುರಾವೆ ಸಿಕ್ಕಿದರೂ ಅದಕ್ಕೆ ವಿರೋಧದ, ತಾತ್ಸಾರದ ದನಿ ಕಂಡುಬಂದಿದೆ: ಪ್ರಾಮಾಣಿಕ ಸಾಮಾಜಿಕ ಕಳಕಳಿಗೆ ಅತ್ಯಂತ ಅರ್ಥಪೂರ್ಣ ಸ್ವಾತಂತ್ರ್ಯಪ್ರಿಯತೆ, ಪ್ರಜಾಸತ್ತಾತ್ಮಕ ಮೌಲ್ಯಗಳ ಸಾವಯವ ಸಂಬಂಧವಿದೆಯೆಂಬ ಸೂಕ್ಷ್ಮ ಇಂಥವರ ಅರಿವಿಗೆ ಬಂದಂತಿಲ್ಲ. ಸಾಮಾಜಿಕ ಕಳಕಳಿ, ಬದ್ಧತೆಗಳ ಬಗ್ಗೆ ಮಾತನಾಡುವವರು ತಮ್ಮದೇ ಅಧಿಕೃತ ಪ್ರಣಾಳಿಕೆಯನ್ನು(ಅಥವಾ ಬರಹ ರೂಪದಲ್ಲಿವಾದ) ಮಂಡಿಸಿರದಿದ್ದಾಗಲೂ ಕೆಲವು ನವ್ಯ ಸಾಹಿತಿ, ವಿಮರ್ಶಕರು ಅದನ್ನು ತಾವೇ ಊಹಿಸಿಕೊಂಡು, ಇಲ್ಲವೆ ನಮ್ಮಂಥವರ ಮಾತುಗಳನ್ನು ಅಪಾರ್ಥಮಾಡಿಕೊಂಡು ಟೀಕೆ ಮಾಡುವ ಪರಿ ಪಾಠ ಕಂಡುಬಂದಿದೆ. ಅದೇ ಸಂದರ್ಭದಲ್ಲಿ ಸಾಮಾಜಿಕ ಕಳಕಳಿಯ ಬಗ್ಗೆ ಮಾತಾಡುವ ಕೆಲವರು, ನವ್ಯ ಸಾಹಿತಿ, ವಿಮರ್ಶಕರನ್ನು ವ್ಯಕ್ತಿಗತ ನೆಲೆಯ ಆಯ್ಕೆ ಮಾಡಿಕೊಂಡು ಆರೋಪ ಹೊರಿಸುವ ಅನಪೇಕ್ಷಿತ ಬೆಳವಣಿಗೆಯೂ ಕಂಡು ಬಂದಿದೆ; ಇವೆರಡೂ ಖಂಡನೀಯ. ನಿಜವಾದ ಸಾಮಾಜಿಕ ಕಳಕಳಿ ದೇಶದ ಸಾಮಾಜಿಕ, ಸಾಂಸ್ಕೃತಿಕ ಇತಿಹಾಸದ ಹಿನ್ನಲೆ ಮತ್ತು ತಾತ್ಕಾಲಿಕ ಸ್ಥಿತಿಗಳ ತುರ್ತಿನಲ್ಲಿ ಬದುಕನ್ನು ಕಂಡುಕೊಳ್ಳುವ ಒಂದು ಕ್ರಮ ... ಸ್ವಾತಂತ್ರ್ಯಪ್ರಿಯತೆ, ಮಾನವೀಯ ಹಕ್ಕುಗಳ ನೈಜ ಕಲ್ಪನೆ ಇರುತ್ತದೆ. ಮಾನವತೆ ಮುಖ್ಯ ಆಧಾರವಾಗಿರುತ್ತದೆ ... ತುರ್ತುಪರಿಸ್ಥಿತಿಯ ಹೇರಿಕೆ, ಕರಾಳತೆಗಳನ್ನು ದಿಟ್ಟತನದಿಂದ ವಿರೋಧಿಸಿ

> ಅತ್ಯಂತ ಸಮಕಾಲೀನ ಅಗತ್ಯದ ಪೂರೈಕೆಗೆ ಒಂದು ಪೂರಕ ಶಕ್ತಿಯಾದ ಸಾಹಿತಿಗಳು, ಮುಂದೆ ಯಾವತ್ತೂ ಇಂಥ ಪರಿಸ್ಥಿತಿ ತಲೆಹಾಕದಂತೆ ಮತ್ತು ಪ್ರಜಾಪ್ರಭುತ್ವದ ಹೆಸರಿನಲ್ಲೆ ಪ್ರತಿಷ್ಠಿತರಿಗೆ ಮಾತ್ರ ಸ್ವಾತಂತ್ರ್ಯದ ಅನುಭವ ತರುವ ವ್ಯವಸ್ಥೆಯ ಸೂಕ್ಷ್ಮಗಳು ಕಾರ್ಯ ಪ್ರವೃತ್ತವಾಗದಂತೆ ಮಾಡಲು ಯಾವ ನೆಲೆ ನಿಲುವುಗಳು ಮುಖ್ಯವೆಂದು ಚಿಂತಿಸಬೇಕು; ... ಇಡೀ ವ್ಯವಸ್ಥೆಯ ಕ್ರೌರ್ಯ ಮತ್ತು ಅದಕ್ಕೆ ಪೂರಕವಾದ ಸೂಕ್ಷ್ಮಗಳನ್ನು ಕುರಿತು ತೀವ್ರವಾಗಿ ಆಲೋಚಿಸಬೇಕು; ಪ್ರತಿಭಟಿಸಬೇಕು. ಇತ್ತೀಚೆಗೆ ಕೇಳಿಬರುತ್ತಿರುವ, ಸಾಹಿತ್ಯದಲ್ಲಿ ಸಾಮಾಜಿಕ ಕಳಕಳಿಯ ಮುಖ್ಯ ಕೇಂದ್ರ ಇಂಥ ಸಂವೇದನೆಯೇ ಆಗಿದೆ. ಅದು ಅರ್ಥಪೂರ್ಣ ಸ್ವಾತಂತ್ರ್ಯಪ್ರಿಯತೆ ಎಂಬುದು ನನ್ನ ಅಭಿಪ್ರಾಯ(ರಾಮಚಂದ್ರಪ್ಪ ೧೯೯೮: ೬೬–೬೭).

ತುರ್ತುಪರಿಸ್ಥಿತಿಯ ಪರಿಣಾಮವಾಗಿ ಸ್ವಾತಂತ್ರ್ಯದ ಅಗತ್ಯ ಕುರಿತ ಚಿಂತನೆಯು ಸಾಹಿತಿಗಳಲ್ಲಿ ಹೊಸ ಬದಲಾವಣೆಯಾಗಿ, ಅನೇಕರೂಪಗಳಲ್ಲಿ ಹೊರಹೊಮ್ಮಿದ್ದನ್ನು ವಿವರಿಸುವುದು. ಈ ಬೆಳವಣಿಗೆಯು ರಾಜಕಾರಣದ ಸ್ಥಿತಿಗೆ ಪ್ರತಿಕ್ರಿಯೆಯಾಗದೆ ಸಾಮಾಜಿಕ ಕಳಕಳಿಯಾಗಿ ಮುಂದುವರೆಯಬೇಕು ಎಂಬ ಆಶಯದ ರೂಪ ಕಾಣಬಹುದು. ಇಂತಹ ಧೋರಣೆಯ ಛಾಯೆಯನ್ನು ಎರಡು ವರ್ಷಗಳಷ್ಟು ಹಿಂದಿನಿಂದಲೇ ಸಾಹಿತ್ಯದಲ್ಲಿ ಗುರುತಿಸಬಹುದಾದರೂ ಪ್ರಾತಿನಿಧ್ಯ ದೊರೆತಿರಲ್ಲಿಲ್ಲ. ಸಾಹಿತ್ಯದಲ್ಲಿ ಸಾಮಾಜಿಕ ಕಳಕಳಿ ಮುಖ್ಯ ಕೇಂದ್ರವಾಗಿರುವ ಕುರಿತ ವಿಶ್ಲೇಷಣೆಯಾಗಿದೆ. ೧೯೭೪ರ ಹೊತ್ತಿಗೆ ಬಂಡಾಯ ಸಾಹಿತ್ಯವೆಂದು ಅಧಿಕೃತವಾಗಿ ಗುರುತಿಸಿಕೊಂಡ ಸಾಹಿತ್ಯ ಪಂಥದ ವಿಚಾರಧಾರೆಗಳೊಡನೆ ಸಾಮ್ಯತೆ ಗುರುತಿಸಬಹುದು.

> ಸಾಹಿತ್ಯದ ಬಗ್ಗೆ ಮೊದಲು ಗುರುತು ಹಾಕಿಕೊಳ್ಳಬೇಕಾದ ಮಾತು ಅದು ಮಾನವೀಯ ಎಂಬುದು. ಇದು ಯಾವುದೇ ಸಿದ್ಧಾಂತಕ್ಕಾಗಲೀ, ಮತಕ್ಕಾಗಲೀ ರಾಜಕೀಯ ಧೋರಣೆಗಾಗಲಿ ಆಡಿಯಾಳಲ್ಲ ... ವ್ಯಕ್ತಿಯಾಗಿ ಏಕಾಂತದಲ್ಲಿ ಮಾಡುವ ಕೆಲಸ, ಸಾಮೂಹಿಕವಾಗಿ ಪ್ರದರ್ಶನಕ್ಕಾಗಿ ಅಲ್ಲ. ವೇದಿಕೆಯ ಮೇಲಿನ ಭಾಷಣವಾಗಲಿ ರಂಗಮಂದಿರದಲ್ಲಿ ಆಡುವ ನಾಟಕವಾಗಲಿ ಅಲ್ಲ ... ಸಾಹಿತಿಗಳನ್ನು ಪೂರ್ವ ನಿಶ್ಚಿತ ಧೋರಣೆ ಅಥವಾ ಸರಕಾರದಿಂದ ನಿಶ್ಚಿತವಾದ ಧೋರಣೆಗಳಿಗಾಲಿ, ಬಹುಜನ ನಂಬಿರುವ ಸಿದ್ಧಾಂತಗಳಿಂದಾಗಲಿ ಕಟ್ಟಿಹಾಕುವುದು ಸಾಹಿತ್ಯಕ್ಕೆ ದ್ರೋಹ ... ಮನುಷ್ಯನ ಅನೇಕ ಕ್ರಿಯೆಗಳಲ್ಲಿ ಸಾಹಿತ್ಯ ಒಂದು ಅಷ್ಟೇ. ಸಾಹಿತಿ ಸಾಧುವೋ ಸಂತನೋ ಮಹಾತ್ಮನೋ ಆಗಬೇಕೆಂದು ಬಯಸುವುದು ಸರಿಯಲ್ಲ(ಅಡಿಗ ೧೯೮೦: ೨೦೫ – ೨೦೬).

ಸಮಕಾಲೀನವಾಗಿ ಸಾಹಿತ್ಯದ ಸ್ವರೂಪ ಮತ್ತು ಸಾಹಿತಿಯ ಕಾರ್ಯಚಟುವಟಿಕೆಗಳ ಕುರಿತ ಚರ್ಚೆ ಉತ್ತುಂಗವನ್ನು ತಲುಪಿರುವುದಕ್ಕೆ ಇದು ನಿದರ್ಶನವಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಸಾಹಿತ್ಯ ಸಮ್ಮೇಳನವನ್ನು ವಿರೋಧಿಸಿ ಅಧಿಕೃತವಾಗಿ ಬಂಡಾಯ ಸಾಹಿತ್ಯವನ್ನು ಘೋಷಿಸಿಕೊಳ್ಳಲಾಗಿತ್ತು. ಬಂಡಾಯ ಸಾಹಿತ್ಯದೊಡನೆ ಗುರುತಿಸಿಕೊಂಡಿದ್ದ ಬಹುತೇಕರು ರಾಜಕೀಯ, ರಂಗಭೂಮಿ ಚಳವಳಿಗಳು ಮತ್ತಿತರ ಹೋರಾಟಗಳಲ್ಲಿ ತೊಡಗಿಸಿಕೊಂಡಿದ್ದವರು. ಬಂಡಾಯ ಸಾಹಿತ್ಯಕಾರರು ಒತ್ತು ಕೊಡುತ್ತಿದ್ದ ವಿಚಾರಗಳಿಗೆ ಪ್ರತಿಯಾಗಿ ನವ್ಯ ಸಾಹಿತ್ಯದ ವಿಚಾರಗಳಿಗೆ ಒತ್ತು ಕೊಡುತ್ತಿರವುದು ಉಲ್ಲೇಖದಲ್ಲಿ ಕಂಡುಬರುವುದು. ಸಾಹಿತ್ಯಿಕ ವಲಯದೊಳಗೆ ಕಂಡುಬರುತ್ತಿದ್ದ ತಾತ್ವಿಕ ಘರ್ಷಣೆಗಳು ಹಲವು ನವ್ಯ ಪಂಥ ಪ್ರತಿಪಾದಕರಲ್ಲಿ ಸಿಟ್ಟು ಉಂಟುಮಾಡಿರುವಂತೆ ಕಾಣುವುದು. ಈ ಮೇಲಿನ ಸಾಹಿತ್ಯದ ಸ್ವರೂಪ ಕುರಿತ ಎಲ್ಲಾ ಉಲ್ಲೇಖಗಳು ತುರ್ತುಪರಿಸ್ಥಿತಿಯ ನಂತರದಲ್ಲಿ ಹಂತಹಂತವಾಗಿ ಕಂಡುಬಂದ ಸಾಹಿತ್ಯಿಕ ವಲಯದೊಳಗಿನ ಪ್ರಕ್ರಿಯೆಗಳನ್ನು ದಾಖಲಿಸುವುದು.

*** *** ***

ಸಾಹಿತ್ಯ ಮತ್ತು ರಾಜಕೀಯದ ನಡುವೆ ಯಾವ ಅಡೆತಡೆಗಳಿಲ್ಲದೆ ಮುಕ್ತ ಸಂಬಂಧಗಳಿರುವುವು. ಯಾವುದೇ ಸಾಹಿತ್ಯವಾದರೂ ಸಾಮಾಜಿಕ ಮತ್ತು ರಾಜಕೀಯದ ಕಾರಣಗಳಿಂದ ಉಂಟಾದ ಉತ್ಪಾದನೆ. ವಿಸ್ತೃತವಾಗಿ ನೋಡುವುದಾದರೆ ಸಾಹಿತಿಯ ವ್ಯಕ್ತಿತ್ವವೂ ಕಾಲಮಾನದ ಸಾಹಿತ್ಯಿಕ ಮತ್ತು ರಾಜಕೀಯ ವಾತಾವರಣದಿಂದ ರೂಪುಗೊಂಡಿರುವುದು. ಸಾಹಿತ್ಯಕ್ಕೆ ಅಥವಾ ಸಂಪೂರ್ಣವಾಗಿ ಸಾಹಿತ್ಯಿಕ ಚಳವಳಿಯ ಪ್ರಭಾವ ಸಮಾಜದ ವ್ಯವಸ್ಥೆಯಲ್ಲಿನ ಹೊಸ ವಿಚಾರಗಳನ್ನು ಬಿತ್ತಿ ಸಾಮಾಜಿಕ ಪೂರ್ವಾಗ್ರಹಗಳು, ಪದ್ಧತಿಗಳನ್ನು ನಾಶಪಡಿಸುವುವು. ಈ ಮೂಲಕ ಸಮಾಜದಲ್ಲಿನ ಮೌಲ್ಯಗಳ ಬದಲಾವಣೆಯನ್ನು ಸೃಷ್ಟಿಸಿ ಸಾಮಾಜಿಕ ಮತ್ತು ರಾಜಕೀಯ ಬದಲಾವಣೆಗೆ ಕೊಡುಗೆ ನೀಡುವುದು. ಸಾಹಿತ್ಯದ ಧೋರಣೆ, ಅದರ ಪ್ರಭಾವ ಸಮಾಜದ ಚಿಂತನೆಗಳ ಮೇಲೆ ಉಂಟಾಗಿರುವುದನ್ನು ಸಮಾಜದಲ್ಲಿ ಕಂಡುಬರುವ ವಿವಿಧ

ವಲಯಗಳ ನಡವಳಿಕೆಯ ಶೈಲಿ ಮತ್ತು ಸಂಬಂಧಿಸಿದ ಕ್ಷಣಗಳ ಅವಲೋಕನದ ಮೂಲಕ ಸಾಧ್ಯವೆಂದು ಜಾನ್.ಡಿ.ಲಿಂಡ್‌ಬರ್ಗ್ ಅವರು ವಿಶ್ಲೇಷಿಸುವರು. 'ತುರ್ತುಪರಿಸ್ಥಿತಿ ನಂತರದ ಕಾಲಘಟ್ಟದಲ್ಲಿ ಕಂಡುಬಂದ ಸಾಹಿತ್ಯ ಸಮಾಜ ಕುರಿತ ಸಾಹಿತ್ಯಿಕ ಚರ್ಚೆಗಳಲ್ಲಿ ದ್ವಿ ಮುಖ ಸಂವಾದವನ್ನು ಕಾಣಬಹುದು. ಸಮಾಜದಲ್ಲಿನ ಬೇರುಗಳನ್ನು ಪ್ರಭಾವಿಸುವಷ್ಟು ಶಕ್ತಿಯುತವಾಗಿರುವುದರ ಜೊತೆಗೆ, ಅಲ್ಲಿಂದಲೇ ಸ್ಫೂರ್ತಿಯನ್ನು ಪಡೆಯುತ್ತವೆ. ಲೇಖಕ, ಸಾಹಿತಿ, ಸಾಹಿತ್ಯದ ಬೇರುಗಳು ಸೈದ್ಧಾಂತಿಕ ವಸ್ತುವಿಷಯಗಳಷ್ಟೇ ಅಲ್ಲದೇ ಅಸ್ಸಾಮಿಯ ರಾಜಕೀಯ ಸಾಹಿತ್ಯದ ಮುಖ್ಯ ವಸ್ತು-ವಿಷಯ' ಎಂದು 'ಪೊಲಿಟಿಕಲ್ ಲಿಟರೇಚರ್ ಆಫ್ ಇಂಡಿಯಾಸ್ ನಾರ್ತ್ ಈಸ್ಟ್ರನ್ ಫ್ರಾಂಟಿಯರ್' ಎಂಬ ಲೇಖನ ಚರ್ಚಿಸುವುದು. ಇವುಗಳನ್ನೇ ಕನ್ನಡ ಸಾಹಿತ್ಯ ಮತ್ತು ತುರ್ತುಪರಿಸ್ಥಿತಿಯ ಸಂದರ್ಭದಲ್ಲಿಯೂ ನೋಡಬಹುದು. ರಾಜಕೀಯ ಸ್ಥಿತ್ಯಂತರಗಳಿಂದ ಪ್ರೇರಿತವಾಗಿ ರಚಿತವಾಗುವ ಸಾಹಿತ್ಯವು ಸಾಮಾನ್ಯವಾಗಿ ಸಮಕಾಲೀನ ಪ್ರಮುಖ ಸಾಹಿತ್ಯವಾಗಿರುವುದಿಲ್ಲ. ಈ ದಿಸೆಯಲ್ಲಿ ತುರ್ತುಪರಿಸ್ಥಿತಿ ಕಾಲಘಟ್ಟದ ಸಾಹಿತ್ಯವಾಗಿ ಗುರುತಿಸುತ್ತಾರೆಯೇ ಹೊರತು ಯಾವುದೇ ಸಾಹಿತ್ಯಿಕ ಪಂಥಗಳೊಡನೆ ಅಲ್ಲ. ಸಮಾಜದ ಸ್ವಭಾವ ಮತ್ತು ರಾಜಕೀಯದ ನಡುವಿನ ಸಂಬಂಧದ ಸ್ವರೂಪವನ್ನು ಅರಿಯಲು ಈ ಸಾಹಿತ್ಯ ಸಹಕರಿಸುವುದು.

> ನಮ್ಮ ಹೋರಾಟ ಪ್ರಧಾನವಾಗಿ ಸಾಂಸ್ಕೃತಿಕ ಕ್ಷೇತ್ರಕ್ಕೆ ಸಂಬಂಧಿಸಿದ್ದು; ದೇಶದ ರಾಜಕೀಯ ಮತ್ತು ಸಾಂಸ್ಕೃತಿಕ ಸಂದರ್ಭಗಳು ಪರಸ್ಪರ ಸಂಬಂಧವುಳ್ಳವು ಎಂಬ ನಿಲುವಿನಿಂದ ಹೊರಟದ್ದು. ಸಾಹಿತಿಗೆ ಸಾಮಾಜಿಕ, ರಾಜಕೀಯ ಪ್ರಜ್ಞೆ ಇರಬೇಕೆಂಬ ಆಶಯ ಇಲ್ಲಿ ಮುಖ್ಯವಾದದ್ದು. ಅಸ್ಪೃಶ್ಯತೆ, ಜಾತಿಪದ್ಧತಿ, ಲಿಂಗಭೇದ ಮತ್ತು ವರ್ಗಭೇದ ನೀತಿಯ ವಿರುದ್ಧ ಹೋರಾಟವನ್ನು ಕಟ್ಟುವುದು ನಮ್ಮ ಮುಖ್ಯ ಉದ್ದೇಶಗಳಲ್ಲಿ ಒಂದು. ಎಲ್ಲ ಜನಪರ ನಿಲುವುಗಳಿಗೆ ನಮ್ಮ ಬೆಂಬಲ. ಜನಪರವಾದ ಸಾಂಸ್ಕೃತಿಕ ಹೋರಾಟ ನಮ್ಮ ಮುಖ್ಯ ಗುರಿ. ಇಂಥ ಒಲವಿನ ಸಾಹಿತ್ಯ ಸೃಷ್ಟಿ ನಮ್ಮ ಹೋರಾಟದ ಮುಖ್ಯ ದಾಖಲೆ ... ಸಮಾಜವಾದವನ್ನು ತಮ್ಮ ಧೂರ್ತತೆಗೆ ಬಂಡವಾಳವನ್ನಾಗಿ ಮಾಡಿಕೊಳ್ಳುವ ಸರ್ವಾಧಿಕಾರಿ ಪ್ರವೃತ್ತಿಯ ರಾಜಕಾರಣಿಗಳು ಇರುವಾಗ ನಮ್ಮ ದೇಶದ ಪ್ರತಿಗಾಮಿ ಶಕ್ತಿಗಳು ಎಷ್ಟು ಬಲವಾಗಿದೆಯೆಂಬುದು ವ್ಯಕ್ತವಾಗುತ್ತದೆ. ... ಒಟ್ಟಿನಲ್ಲಿ ಹೇಳುವುದಾದರೆ ಇಂದಿಯಾದ ಪರಿಸ್ಥಿತಿ ಸೂಕ್ಷ್ಮವಾಗಿದೆ; ಗಂಭೀರವಾಗಿದೆ; ಆದ್ದರಿಂದ ಮೂಲತಃ ದೇಶದ ವ್ಯಕ್ತಿಗಳಾಗಿ ಸಾಹಿತಿಗಳಿಗೂ ಜವಾಬ್ದಾರಿಯಿರಬೇಕು; ಸಾಹಿತಿಗಳಾದ್ದರಿಂದ ಮತ್ತಷ್ಟು ಸೂಕ್ಷ್ಮ ಹೊಣೆಗಾರಿಕೆಯು ಇರುವುದಗತ್ಯ ... ಬಂಡಾಯ ಸಾಹಿತಿಗಳು ಎದಾರು ವರ್ಷಗಳಿಂದ ಸಾಮಾಜಿಕ ಕಾಳಜಿ ಮಾತಾಡುತ್ತಿರುವುದು ಇಂಥ ಸೂಕ್ಷ್ಮ ಗಂಭೀರ ದೇಶಸ್ಥಿತಿಯ ಹಿನ್ನೆಲೆಯಲ್ಲಿಯೇ ಎಂದು ಒತ್ತಿಹೇಳಬಯಸುತ್ತೇನೆ; ವ್ಯಕ್ತಿಗಳಾಗಿ, ಸಾಹಿತ್ಯ ವ್ಯಕ್ತಿಗಳಾಗಿ, ವರ್ಗ ಜಾತಿಗಳ ಈ ಶೋಷಣಾ ಸಮಾಜದಲ್ಲಿ ಶೋಷಿತರ ಪರವಾದ ಹೋರಾಟಗಳೊಂದಿಗೆ ಒಂದಲ್ಲ ಒಂದು ರೀತಿಯ ಸಂಪರ್ಕ ಇಟ್ಟುಕೊಳ್ಳುವುದು, ಆಳವಾದ ರಾಜಕೀಯ ಪ್ರಜ್ಞೆ ರೂಢಿಸಿಕೊಳ್ಳುವುದು ನಮ್ಮ ಜವಾಬ್ದಾರಿ ಎನ್ನಿಸಿದೆ. ಆದ್ದರಿಂದ ಸಾಹಿತ್ಯದಲ್ಲಿ ಪ್ರವೇಶಿಸಿರುವ ರಾಜಕಾರಣದ ಪರಿಭಾಷೆ ಸತ್ವಪೂರ್ಣ ಸೇರ್ಪಡೆಯೇ ಆಗಿದೆ(ರಾಮಚಂದ್ರಪ್ಪ[೩೬] ೧೯೯೮: ೩-೧೩).

ಬಂಡಾಯ ಸಾಹಿತ್ಯ ಮತ್ತು ಚಳವಳಿಯ ಉದ್ದೇಶಗಳ ಕುರಿತ ವಿವರಣೆಯಾದರೂ ೧೯೭೭ ರಿಂದ ೧೯೭೯ರವರೆಗೆ ಸಾಹಿತ್ಯಿಕ ಪಂಥದ ಸ್ವರೂಪ ಕುರಿತಂತೆ ಕಂಡುಬರುತ್ತಿದ್ದ ಚರ್ಚೆ ಹಂತ ಹಂತವಾಗಿ ಚಳವಳಿಯಾಗಿ, ಹೊಸ ಸಾಹಿತ್ಯ ಪಂಥವಾಗಿ ಮೂಡಿಬಂದ ಪ್ರಕ್ರಿಯೆಯನ್ನು ದಾಖಲಿಸಿದೆ. ಬಂಡಾಯ ಸಾಹಿತ್ಯ ಸಂಘಟನೆಯೊಳಗೆ ಸಿಪಿಐ ಮತ್ತು ಸಿಪಿಎಂ, ಅಂಬೇಡ್ಕರ್ ಚಿಂತನೆ, ಪೆರಿಯಾರ್‌ವಾದಿಗಳು, ಗಾಂಧಿವಾದಿಗಳು, ಸಮಾಜವಾದಿಗಳು ಮತ್ತಿತರ ಹಲವು ವಿಭಿನ್ನ ತಾತ್ವಿಕ ಚಿಂತನೆಯುಳ್ಳವರನ್ನು ಕಾಣ ಬಹುದು. ಈ ಪಂಥದೊಡನೆ ಗುರುತಿಸಿಕೊಂಡವರು ತಳ ಸಮುದಾಯ, ನಿರ್ಲಕ್ಷಿತ ಸಮುದಾಯಗಳ ಮುಖ್ಯಧಾರೆಯಲ್ಲಿ ಅಸ್ತಿತ್ವ ಕಂಡುಕೊಳ್ಳುವ, ಸಮಸ್ಯೆಗಳಿಗೆ ಹೋರಾಡುವ ಚಳವಳಿ ರೂಪಿಸಲು ಪ್ರಯತ್ನಿಸುವು ದನ್ನು ನೋಡಬಹುದು. ಪರಿಣಾಮವಾಗಿ ಸಮಕಾಲೀನವಾಗಿ ದಲಿತ[೩೭] ಸಾಹಿತ್ಯ, ಮಹಿಳಾ ಸಾಹಿತ್ಯ ಮುಂತಾದವು ಪ್ರತ್ಯೇಕವಾಗಿ ಬೆಳೆದುಬಂದವು. ಈ ಸಂದರ್ಭದ ಅಂತರ್ ರಾಷ್ಟ್ರೀಯ ವಲಯದ ಸಾಹಿತ್ಯದಲ್ಲಿಯೂ ಇಂತಹ ಚಿಂತನೆಗಳನ್ನು ನೋಡಬಹುದು. ಉದಾಹರಣೆಯಾಗಿ, ಜನಪರ ಹೋರಾಟಗಳ ಪ್ರಭಾವವುಳ್ಳ ಕಪ್ಪು ಕಾವ್ಯ(ಅಮೆರಿಕಾ) ಮುಖ್ಯಧಾರೆಯಾಗಿ ಕಂಡುಬರುವುದು. ಈ ಬದಲಾವಣೆಗಳಿಗೆ ಪ್ರಾದೇಶಿಕ, ದೇಶೀಯ ವಿದ್ಯಮಾನ ಪ್ರಮುಖ ಕಾರಣವಾದರೂ ಜಾಗತಿಕ ವಿದ್ಯಮಾನಗಳು ಪೂರಕವಾಗಿ ಕಾರ್ಯನಿರ್ವಹಿಸುವುವು. ಈ ಸಂದರ್ಭದ ಸಾಹಿತ್ಯದಲ್ಲಿರುವ ಪ್ರಮುಖ ಲಕ್ಷಣವೆಂದರೆ ಸಮಕಾಲೀನ

ಭಾರತೀಯ ರಾಜಕಾರಣದ ವಿವಿಧ ಮುಖಗಳನ್ನು ನೋಡುವ ಪ್ರಯತ್ನವಾಗಿದೆ. ಈ ಬೆಳವಣಿಗೆಗಳನ್ನು ಇತರ ಜ್ಞಾನ ಶಾಖೆಗಳಲ್ಲಿಯೂ ಗುರುತಿಸಬಹುದು.

> ೧೯೭೦ರ ದಶಕದ ಭಾರತದ ರಾಜಕೀಯ ಬೆಳವಣಿಗೆಗಳ ಭ್ರಮನಿರಸನವನ್ನು ಪ್ರತಿಫಲಿಸುವಂತೆ ಸಬಾಲ್ಟ್ರನ್ ಅಧ್ಯಯನದ ಯೋಜನೆಗಳು ರೂಪಿತವಾಯಿತು. ಆ ಮೂಲಕ ಕ್ರಾಂತಿಕಾರಿ ಸಿದ್ಧಾಂತಗಳು ಹಾಗೂ ಜನಹೋರಾಟದ ನಡುವಿನ ಸಂಬಂಧಗಳನ್ನು ಶೋಧಿಸುವ ಸಂಶೋಧನೆಗಳು ಆರಂಭವಾದವು. ೧೯೭೦ರ ದಶಕದ ಕೊನೆಯಲ್ಲಿ ಭಾರತದ ಹೊಸ ತಲೆಮಾರಿನ ಕೆಲವು ಬುದ್ಧಿಜೀವಿಗಳು ಚೀನಾ ಹೋರಾಟದ ಎಡಪಂಥೀಯ ಧೋರಣೆಗಳಿಂದ ಪ್ರಭಾವಿತರಾದರು. ಆ ಒಂದು ಬಗೆಯಲ್ಲಿ ಭಾರತದ ರಾಜಕಾರಣವನ್ನು ಯಜಮಾನಿಕೆಯನ್ನು ನಡೆಸುತ್ತಿದ್ದ ಅಖಿಲ ಭಾರತ ಕಾಂಗ್ರೆಸ್‌ನ ಹಿತಾಸಕ್ತಿಗಳಿಗೆ ಸವಾಲಾಯಿತು ... ಅದರಲ್ಲಿಯೂ ಪ್ರಮುಖವಾಗಿ ೧೯೭೫-೧೯೭೭ರ ಅವಧಿಯಲ್ಲಿ ಇಂದಿರಾ ಗಾಂಧಿಯವರ ಸರ್ವಾಧಿಕಾರಿ ಧೋರಣೆಯ ಅಭಿವ್ಯಕ್ತಿಯಾಗಿದ್ದ ತುರ್ತುಪರಿಸ್ಥಿತಿಯ ನಂತರ ಸಬಾಲ್ಟ್ರನ್ ಅಧ್ಯಯನಗಳು ಪ್ರಭಾವಶಾಲಿಯಾಗಿ ಆರಂಭವಾದವು(ತಂಬಂಡ ೨೦೧೦: ೨೨೧).

೧೯೭೦ರ ದಶಕದ ಭಾರತೀಯ ಸಮಾಜ ಮತ್ತು ರಾಜಕಾರಣವು ಚರಿತ್ರೆ ಲೇಖನ ಶಾಸ್ತ್ರದಲ್ಲಿ ಸಬಾಲ್ಟ್ರನ್ ಪಂಥದ ವಿಕಾಸದಲ್ಲಿ ನಿರ್ವಹಿಸಿದ ಪಾತ್ರದ ವಿಶ್ಲೇಷಣೆ ಮೇಲಿನ ವಾದಕ್ಕೆ ಪೂರಕವಾಗಿದೆ. ೧೯೭೦ರ ದಶಕದ ಆರಂಭದಿಂದಲೂ ಕಂಡುಬಂದ ಅನೇಕ ಚಳವಳಿಗಳು, ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳ ಸಾಮಾಜಿಕ ಮತ್ತು ರಾಜಕೀಯ ಮುಖಗಳು ಸಮಾಜದ ಎಲ್ಲ ಸ್ತರಗಳೊಳಗಿನ ಚಿಂತನೆಗಳ ಬದಲಾವಣೆಯ ಮೇಲೆ ಬೀರಿರುವ ಪರಿಣಾಮ ಅಪಾರ. ಸಮಕಾಲೀನ ಸಾಹಿತ್ಯಿಕ ಚಳವಳಿಗಳ ಮೇಲಿನ ಪ್ರಭಾವದ ಐತಿಹಾಸಿಕ ಅವಲೋಕನವು ಸಾಹಿತ್ಯ ಮತ್ತು ರಾಜಕೀಯ ಪರಿಚಲನೆಯ ಪರಿಣಾಮಗಳ ಪ್ರಕ್ರಿಯೆಯನ್ನು ತೆರದಿಡುವುದು. ಇಂತಹ ಪ್ರಕ್ರಿಯೆಗಳನ್ನು ನಾಟಕ, ಸಿನಿಮಾ ಮತ್ತಿತರ ದೃಶ್ಯ ಮಾಧ್ಯಮಗಳಲ್ಲಿಯೂ ನೋಡಬಹುದು.

### ೪.೨.೨. ದೃಶ್ಯ ಮಾಧ್ಯಮದ ಅವಲೋಕನ: ರಂಗಭೂಮಿ, ಸಿನಿಮಾ ಹಾಗೂ ವ್ಯಂಗ್ಯಚಿತ್ರಗಳು

ದೃಶ್ಯ ಮಾಧ್ಯಮ ಅತ್ಯಂತ ಪ್ರಬಲವಾದ ಸಮೂಹ ಮಾಧ್ಯಮ. ಸಾಹಿತ್ಯ ಮತ್ತು ಪತ್ರಿಕೆಗಳು ಅಕ್ಷರಸ್ಥರನ್ನು ಮಾತ್ರ ತಲುಪಲು ಶಕ್ತವಾಗಿದ್ದರೆ, ದೃಶ್ಯ ಮಾಧ್ಯಮ ಅಕ್ಷರಸ್ಥರಲ್ಲದ ಅನಕ್ಷರಸ್ಥರನ್ನು ತಲುಪುವುದು. ಸಮೂಹ ಸನ್ನಿಗಳನ್ನು ಸೃಷ್ಟಿಸಲು ಸಾಧ್ಯವಾಗುವ ಮಾಧ್ಯಮ. ತುರ್ತುಪರಿಸ್ಥಿತಿಯ ಪ್ರಭಾವ ಪರಿಣಾಮಗಳು ದೃಶ್ಯ ಮಾಧ್ಯಮಗಳಲ್ಲಿ ಅಭಿವ್ಯಕ್ತಿ ಪಡೆದ ಸ್ವರೂಪ, ಅದರ ಪ್ರಕ್ರಿಯೆಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ. ಇಲ್ಲಿ ದೃಶ್ಯ ಮಾಧ್ಯಮಗಳೆಂದು ಸಿನಿಮಾ, ರಂಗಭೂಮಿ ಮತ್ತು ವ್ಯಂಗ್ಯಚಿತ್ರಗಳನ್ನು ಎರಡು ಭಾಗಗಳಾಗಿ ವಿಂಗಡಿಸಿ ಅವಲೋಕಿಸಲು ಯತ್ನಿಸಿದೆ. ತುರ್ತುಪರಿಸ್ಥಿತಿ ಕುರಿತ ಮತ್ತು ತುರ್ತಪರಿಸ್ಥಿತಿಯ ಕಾಲದ ಯಾವುದೇ ವಿಚಾರಗಳ ಕುರಿತ ಚಲನಚಿತ್ರಗಳನ್ನು, ಇತರ ಭಾಷೆಯ ಸಿನಿಮಾಗಳೊಂದಿಗೆ ಸಮೀಕರಿಸಿ ಅವಲೋಕಿಸಲಾಗಿದೆ. ರಂಗಭೂಮಿ ಚಳವಳಿಯ ಸ್ವರೂಪದಲ್ಲಾದ ಮಾರ್ಪಾಡುಗಳು, ಜನ ಜಾಗೃತಿಗಾಗಿ ಕಂಡುಬಂದ ಬೀದಿನಾಟಕಗಳು ಮುಂತಾದ ಚಳವಳಿಗಳನ್ನು ಇತರ ಭಾಷಾ ರಂಗಭೂಮಿ ಚಳವಳಿಗಳೊಂದಿಗೆ ಸಮೀಕರಿಸಿ ಚರ್ಚಿಸಲಾಗಿದೆ. ಸಮಾಜ ಮತ್ತು ಸಿನಿಮಾರಂಗದ ನೆಲೆಯಲ್ಲಿ ಸಾಮಾಜಿಕ ಮತ್ತು ರಾಜಕೀಯ ಚಲನಚಿತ್ರಗಳಲ್ಲಿ ೧೯೭೭ ರಿಂದ ೧೯೮೫ರವರೆಗೆ ಅಭಿವ್ಯಕ್ತಗೊಂಡ ಪ್ರಮುಖ ಆಶೋತ್ತರಗಳು, ಮಾರ್ಗಗಳು ಹಾಗೂ ಕ್ರಾಂತಿಯ ಪರಿಭಾಷೆಯನ್ನು ಪರಾಮರ್ಶಿಸಲು ಪ್ರಯತ್ನಿಸಲಾಗಿದೆ.

### ೪.೨.೨.೧. ಸರ್ಕಾರ ಮತ್ತು ದೃಶ್ಯ ಮಾಧ್ಯಮ: ರಂಗಭೂಮಿ, ಸಿನಿಮಾ ಮತ್ತು ವ್ಯಂಗ್ಯಚಿತ್ರಗಳು

ಸರ್ಕಾರದ ಕಾರ್ಯನೀತಿಗಳು ದೃಶ್ಯಮಾಧ್ಯಮವನ್ನು ನಿರಂತರವಾಗಿ ನಿಯಂತ್ರಿಸುವುದು. ದೃಶ್ಯಮಾಧ್ಯಮಗಳಲ್ಲಿ ಪ್ರತಿಭಟನೆಯು ರಾಜಕೀಯ ಸ್ಥಿತ್ಯಂತರಗಳ ಸಮಯದಲ್ಲಿ ರಾಜಕಾರಣದಿಂದ ಪ್ರಭಾವಿತಗೊಂಡಿದ್ದು, ಅಣಕ, ವಿಡಂಬನೆಗಳ ರೂಪದಲ್ಲಿ ಪ್ರಕಟಗೊಳ್ಳುವುದು. ಇಲ್ಲಿ ತುರ್ತುಪರಿಸ್ಥಿತಿಯ ಪರಿಣಾಮವು ಪ್ರಮುಖ ದೃಶ್ಯ ಮಾಧ್ಯಮಗಳಾದ ರಂಗಭೂಮಿ ಮತ್ತು ಸಿನಿಮಾಗಳಲ್ಲಿ ಪಡೆದುಕೊಂಡ ಸ್ವರೂಪವನ್ನು ಚರ್ಚಿಸಲಾಗಿದೆ. ಸಮಕಾಲೀನವಾಗಿ ಕಂಡುಬಂದ ರಂಗಭೂಮಿಯ ಚಳವಳಿಗಳು, ರಾಜಕೀಯ ಪ್ರಹಸನಗಳು, ರಾಜಕಾರಣ ದೊಂದಿಗಿನ ನೇರ ಸಂಬಂಧಗಳನ್ನು ಪರಿಶೀಲಿಸಲಾಗಿದೆ.

ತುರ್ತುಪರಿಸ್ಥಿತಿ ಕಾಲಘಟ್ಟದ ಕಥಾ ಹಂದರವಿರುವ ಸಿನಿಮಾಗಳು ಹಾಗೂ ಸಮಾನಾಂತರವಾಗಿ ವ್ಯಂಗ್ಯಚಿತ್ರಗಳಲ್ಲಿ ರಾಜಕಾರಣ ಅಭಿವ್ಯಕ್ತಗೊಂಡ ಸ್ವರೂಪವನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ.

**೪.೨.೨.೧.೧. ಸರ್ಕಾರ ಮತ್ತು ದೃಶ್ಯಮಾಧ್ಯಮ**

ಚಿಂತನಾ ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯವು ವ್ಯಕ್ತಿಯ ವ್ಯಕ್ತಿತ್ವ ವಿಕಸನಕ್ಕೆ, ಆ ಮೂಲಕ ಸಮಾಜದ ವಿಕಾಸಕ್ಕೆ ಅಗತ್ಯವಾದದ್ದು. ವ್ಯಕ್ತಿಯ ಮೂಲಭೂತ ಹಕ್ಕುಗಳು ಈ ನೆಲೆಗಳಿಂದಲೇ ಬೆಳವಣಿಗೆ ಹೊಂದಿವೆ. ವ್ಯವಸ್ಥೆಯೊಳಗಿನ ವಿಚಾರಕ್ರಮಗಳಲ್ಲಿ ಬದಲಾವಣೆಯನ್ನು ಬೆಳೆಸುವ ಸಮೂಹ ಮಾಧ್ಯಮ ಗಳನ್ನು 'ಸೆನ್ಸಾರ್‌ಷಿಪ್' ಮೂಲಕ ನಿಯಂತ್ರಿಸುವ ಕಾರ್ಯ ಯಾವುದೇ ಸೈದ್ಧಾಂತಿಕ ರಾಜಕೀಯ ಪಕ್ಷ ಅಸ್ತಿತ್ವದಲ್ಲಿದ್ದರೂ ನಿರಂತರವಾಗಿ ಕಂಡುಬರುವುದು. ರಾಜಕೀಯ ಬಿಕ್ಕಟ್ಟು, ಸರ್ವಾಧಿಕಾರ ಧೋರಣೆಗಳ ಸಮಯದಲ್ಲಿ ಸರ್ಕಾರವು ಸಾರ್ವಜನಿಕ ನೈತಿಕತೆಯ ರಕ್ಷಣೆಯ ಹೆಸರಿನಲ್ಲಿ ದೃಶ್ಯ ಮಾಧ್ಯಮಗಳ ಚಿಂತನಾ ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ತೀವ್ರವಾಗಿ ನಿಯಂತ್ರಿಸುವುದು. ಈ ಮೂಲಕ ಸಮಾಜದ ಚಿಂತನೆಗಳು, ಪ್ರತಿಕ್ರಿಯೆಗಳು ಪ್ರಕಟಗೊಳ್ಳದಂತೆ ತಡೆಹಿಡಿಯುವುದು. ಈ ಬೆಳವಣಿಗೆಯನ್ನು ತುರ್ತುಪರಿಸ್ಥಿತಿ ಕಾಲದಲ್ಲಿ ನೋಡಬಹುದಾಗಿದೆ.

ಸೆನ್ಸಾರ್‌ಷಿಪ್ ವಿವಿಧ ರಾಜಕೀಯ ಮತ್ತು ಆರ್ಥಿಕ ಶಕ್ತಿಕೇಂದ್ರಗಳಿಂದ ಪ್ರೇರಿತವಾಗಿರುವುವು. ಸಮಾಜದ ಪ್ರಭಾವಿ ಮಾಧ್ಯಮವಾದ ಸಿನಿಮಾರಂಗ ಸರ್ಕಾರ ಮತ್ತು ಜನಸಮೂಹವನ್ನು ಒಮ್ಮೆಲೆ ಪ್ರಭಾವಿಸುವಷ್ಟು ಶಕ್ತವಾಗಿದೆ. ಚಿತ್ರರಂಗದ ಆರಂಭದಿಂದಲೂ ಚಿತ್ರರಂಗವನ್ನು ನಿಯಂತ್ರಿಸಲು ಸರ್ಕಾರದ ಕಾನೂನುಗಳನ್ನು ನೋಡಬಹುದು. ೧೯೭೦ರ ದಶಕದಲ್ಲಿ ಸಿನಿಮಾ ಕುರಿತಂತೆ ಅನೇಕ ಹೊಸ ಕಾಯ್ದೆಗಳು ಮತ್ತು ತಿದ್ದುಪಡಿಗಳು ರೂಪುಗೊಂಡವು.

> ದಿ ಎಸ್ಟಿಮೇಟ್ ಕಮಿಟಿ(೧೯೭೩-೧೯೭೪) ಲೋಕಸಭೆಯಲ್ಲಿ ಚಿತ್ರರಂಗದ ಬಗೆಗೆ ನೀಡಿದ ವರದಿಯಲ್ಲಿ ಚಿತ್ರ ನಿರ್ಮಾಪಕರು ಸಿನಿಮಾಗಳಲ್ಲಿ ಅನವಶ್ಯಕವಾಗಿ ಲೈಂಗಿಕತೆ, ಕ್ರೌರ್ಯ, ನಗ್ನತೆ, ಅತ್ಯಾಚಾರ ಹಾಗೂ ಅಪಹರಣದ ದೃಶ್ಯಗಳನ್ನು ಹೆಚ್ಚಾಗಿಸಿದ್ದಾರೆ. ಚಿತ್ರರಂಗದ ಉದ್ಯಮಿಗಳು ಪ್ರೇಕ್ಷಕರು ಇವುಗಳನ್ನು ತೀವ್ರವಾಗಿ ತೆಗೆದುಕೊಳ್ಳುವುದಿಲ್ಲ ಹಾಗೂ ಗಲ್ಲಾ ಪೆಟ್ಟಿಗೆಯ ಯಶಸ್ಸಿಗೆ ಒತ್ತಾಸೆಯಾಗುತ್ತದೆ ಎಂಬ ವಾದವನ್ನು ಕಮಿಟಿ ನಿರಾಕರಿಸಿತು(ಭೌಮಿಕ್ ೨೦೦೯: ೧೯೭).

ಚಿತ್ರರಂಗದಲ್ಲಿ ಕಂಡುಬಂದ ಬದಲಾವಣೆಯನ್ನು ದಿ ಎಸ್ಟಿಮೇಟ್ ಆಯೋಗವು ಗುರುತಿಸಿರುವುದನ್ನು ಕಾಣಬಹುದು. ತುರ್ತು ಪರಿಸ್ಥಿತಿಯಲ್ಲಿ ನಡೆದ ಚುನಾವಣೆಯಲ್ಲಿ ಜನತಾ ಸರ್ಕಾರ ಅಧಿಕಾರಕ್ಕೆ ಬಂದ ತರುವಾಯ, ತುರ್ತುಪರಿಸ್ಥಿತಿ ಕಾಲದಲ್ಲಿ ಮಾಧ್ಯಮಗಳ ದುರ್ಬಳಕೆಗಾಗಿ ಅನೇಕ ಆಯೋಗಗಳನ್ನು ನೇಮಿಸುವುದು ಕಂಡುಬರುವುದು. ಈ ದಿಸೆಯಲ್ಲಿ ಸರ್ಕಾರ ಹೊರಡಿಸಿದ ಶ್ವೇತಪತ್ರ ಕುರಿತು

> ತುರ್ತುಪರಿಸ್ಥಿತಿ ಕಾಲದಲ್ಲಿ ಮಾಧ್ಯಮಗಳ ದುರ್ಬಳಕೆಯ ವಿರುದ್ಧ ಶ್ವೇತಪತ್ರ ಹೊರಡಿಸಿತಾದರೂ ಅದರ ಪ್ರಮುಖ ಉದ್ದೇಶ ತಾತ್ಕಾಲಿಕವಾಗಿ ದಾರಿತಪ್ಪಿಸಿ, ಹಿಂದಿನ ಸರ್ಕಾರವನ್ನು ದೂಷಿತ ಗೊಳಿಸುವುದಷ್ಟೇ ಆಗಿತ್ತು(ಭೌಮಿಕ್ ೨೦೦೮: ೨೧೨)

ಎಂಬುದು ಸಾಮಾನ್ಯವಾಗಿ ಕಂಡುಬರುವ ಅಭಿಮತವಾಗಿದೆ. ತೀವ್ರವಾದ ರಾಜಕೀಯ ಪಕ್ಷಪಾತದ ದೃಷ್ಟಿ ಯಿಂದ ಕೂಡಿದ್ದು ಮಾಧ್ಯಮಗಳ ಕಾಯ್ದೆಗಳಲ್ಲಿ ಬದಲಾವಣೆ ತರುವ ಚಿಂತನೆಗಳು ಕಂಡುಬರುವುದಿಲ್ಲ. ಇದಕ್ಕೆ ಪೂರಕವಾಗಿ ತುರ್ತುಪರಿಸ್ಥಿತಿ ನಂತರ ಪಶ್ಚಿಮ ಬಂಗಾಳದಲ್ಲಿ ಎಡ ಪಂಥೀಯ ಸರ್ಕಾರ ಅಸ್ತಿತ್ವಕ್ಕೆ ಬಂದಿತಾದರೂ ಸರ್ಕಾರ ಮಾಧ್ಯಮಗಳ ಮೇಲಿನ ಕಾಯ್ದೆಯನ್ನು ಮೊದಲಿಗಿಂತ ಹೆಚ್ಚು ತೀವ್ರಗೊಳಿಸಿತು. ಪರಿಣಾಮವಾಗಿ ಬೆಂಗಾಲಿ ಸಿನಿಮಾಗಳಲ್ಲಿ ರಾಜಕಾರಣವನ್ನು ನಿಂದಿಸುವ ಪದಗಳು ಅತ್ಯಂತ ಕಡಿಮೆಯಿದೆ. ತುರ್ತುಪರಿಸ್ಥಿತಿ ವಿರೋಧಿಸಿ ನಿರ್ಮಾಣವಾದ ಮುಕ್ತಿ ಚಾಯಿ(೧೯೭೭, ಚಕ್ರವರ್ತಿ) ಸಮಕಾಲೀನ ಸರ್ಕಾರದ ನೀತಿಯನ್ನು ಪ್ರಸ್ತಾಪಿಸಿದ ಹಿನ್ನೆಲೆಯಲ್ಲೇ ಪ್ರದರ್ಶನಕ್ಕೆ ತೊಂದರೆಗಳನ್ನು ಎದುರಿಸಬೇಕಾಯಿತು.

೧೯೮೦ರ ಜನವರಿಯಲ್ಲಿ ಮಾಹಿತಿ ಮತ್ತು ಸಂಪರ್ಕ ಇಲಾಖೆಯು ಸೆನ್ಸಾರ್‌ಷಿಪ್‌ನ ಹೊಸ ಕಾನೂನುಗಳನ್ನು ಜಾರಿಗೊಳಿಸಿತು. ಹೆಚ್ಚಿನ ಸ್ವಾತಂತ್ರ್ಯದ ನಿರೀಕ್ಷೆಯಲ್ಲಿದ್ದವರಿಗೆ ೧೯೬೦ರ ಕಾಯ್ದೆಗಿಂತ ಹೆಚ್ಚು ವಿಸ್ತೃತವಾದ ದೃಷ್ಟಿಕೋನ ಹೊಂದಿರದೇ ಇದ್ದದ್ದು ನಿರಾಸೆ ಉಂಟುಮಾಡಿತು. ೧೯೮೦ರಲ್ಲಿ ರಾಜಕೀಯ ಪಕ್ಷ

ಬದಲಾದದ್ದು ಜನತಾ ಸರ್ಕಾರ ರೂಪಿಸಿದ್ದ ಕಾಯ್ದೆಗೆ ಪರ್ಯಾಯವಾಗಿ ೧೯೭೪ರಲ್ಲಿ ಚರ್ಚಿತವಾಗಿದ್ದ ಸಿನಿಮ್ಯಾಟೋಗ್ರಾಫ್‌ನ್ನು ಜಾರಿಗೊಳಿಸುವ ಪ್ರಯತ್ನ ನಡೆಯಿತು. ಇದರಿಂದಾಗಿ ಸರ್ಕಾರ ಸಿನಿಮಾರಂಗದ ತೀವ್ರ ಪ್ರತಿರೋಧವನ್ನು ಎದುರಿಸಬೇಕಾಯಿತು. ೧೯೮೦ರ ನಂತರ ಚಿತ್ರರಂಗದಲ್ಲಿ ಕಂಡುಬಂದ ಬದಲಾವಣೆಗಳು ಸರ್ಕಾರದ ಹಿಡಿತವನ್ನು ಕ್ರಮೇಣ ಕಡಿತಗೊಳಿಸುವುದರ ಜೊತೆಗೆ ಚಿತ್ರರಂಗವೇ ಸರ್ಕಾರದ ಮೇಲೆ ನೇರ ಪ್ರಭಾವಿಸಲು ಪೂರಕವಾಯಿತು. ೧೯೯೦ರ ದಶಕದಲ್ಲಿ ಆರ್ಥಿಕ ಉದಾರೀಕರಣದಿಂದಾಗಿ ಹೊಸ ಕಾಯ್ದೆಗಳು ರೂಪು ಗೊಳ್ಳುವವರೆಗೆ ೧೯೮೦ರ ಸಿನಿಮ್ಯಾಟೋಗ್ರಾಫ್ ಕಾಯ್ದೆ ಹೆಚ್ಚಿನ ಬದಲಾವಣೆಗಳಿಗೆ ಒಳಗಾಗಲಿಲ್ಲ. ರಂಗಭೂಮಿ ಚಳವಳಿಗಳು ಮತ್ತು ರಾಜಕೀಯ ಪ್ರಹಸನಗಳ ಅವಲೋಕನ ಸರ್ಕಾರ ಹಾಗೂ ಸೆನ್ಸಾರ್‌ಶಿಪ್‌ನ ವಿಸ್ತೃತ ಸ್ವರೂಪವನ್ನು ತೆರೆದಿಡುವುದು.

**೪.೨.೨.೧.೧.೧. ರಂಗಭೂಮಿ**

> ಮಾಹಿತಿ ಮತ್ತು ಪ್ರಸಾರ ಸಚಿವಾಲಯದ ಸಂಗೀತ ಮತ್ತು ನೃತ್ಯ ವಿಭಾಗವು 'ಇನಿ ಊರು ವಿಧಿ ಸೇವಿಯಮ್(ನಾವು ಈಗ ಪರಿಹರಿಸಬಹುದು) ಎಂಬ ಕಾರ್ಯಕ್ರಮವನ್ನು ಪ್ರಸ್ತುತ ಪಡಿಸಿದರು. ತುರ್ತುಪರಿಸ್ಥಿತಿ ಘೋಷಣೆ ಮತ್ತು ಅಧ್ಯಕ್ಷೀಯ ಆಳ್ವಿಕೆಯ ಹಿನ್ನೆಲೆ, ಇಪ್ಪತ್ತು ಅಂಶದ ಕಾರ್ಯಕ್ರಮ ವನ್ನು ಪ್ರಭಾವಿಯುತವಾಗಿ ಜಾರಿಗೊಳಿಸಲು ತಯಾರಿಸಿದ್ದ ಮೊದಲ ಬ್ಯಾಲೆಟ್‌ನ್ನು ಮರುಪ್ರದರ್ಶನ ಮಾಡಿದರು(ದಿ ಹಿಂದೂ ೧೯೭೭ ಏಪ್ರಿಲ್ ೨).

ಇದು ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಿ ರಂಗಭೂಮಿಯನ್ನು ಸರ್ಕಾರ ತನ್ನ ಕಾರ್ಯಕ್ರಮ ಪ್ರಚಾರಕ್ಕೆ ಬಳಸಿಕೊಂಡಿರುವ ಕುರಿತ ಮಾಹಿತಿಯಾಗಿದೆ. ಆದರೆ ಇದರ ಮರುಪ್ರದರ್ಶನ ಏರ್ಪಟ್ಟಿರುವುದು ಜನತಾ ಸರ್ಕಾರದಲ್ಲಿ ಎಂಬುದು ವಿಶೇಷ ಸಂಗತಿ. ಸಮೂಹ ಮಾಧ್ಯಮಗಳ ದುರ್ಬಳಕೆ, ವಿಚಾರಣಾ ಆಯೋಗಗಳ ನೇಮಕ, ಸರ್ಕಾರ ಮತ್ತು ನಾಟಕಗಳ ಮೇಲೆ ಸೆನ್ಸಾರ್‌ಶಿಪ್ ಹೇರಿಕೆ, ಸೆನ್ಸಾರ್‌ಶಿಪ್ ಕುರಿತ ಹೊಸ ಕಾಯ್ದೆಯ ಸ್ವರೂಪ ಮುಂತಾದ ವಸ್ತು ವಿಷಯಗಳು ಸಮಕಾಲೀನವಾಗಿ ಪತ್ರಿಕೆ ಹಾಗೂ ನಿಯತಕಾಲಿಕೆಗಳಲ್ಲಿ ಚರ್ಚೆಗೊಳಗಾಗುತ್ತಿ ದ್ದವು. ತುರ್ತುಪರಿಸ್ಥಿತಿಯ ತೀವ್ರ ಸೆನ್ಸಾರ್‌ಶಿಪ್‌ನ ಪರಿಣಾಮ ರಂಗಭೂಮಿಯಲ್ಲಿ ಹೊಸ ಪ್ರಯೋಗಗಳ ಬೆಳವಣಿಗೆ ಕಂಡುಬಂದಿತು. ಈ ಸಂಬಂಧ ಬೀದಿನಾಟಕಗಳು ಹೆಚ್ಚು ಪ್ರಾಮುಖ್ಯತೆ ಪಡೆದುಕೊಂಡವು. ರಾಜಕಾರಣ ಮತ್ತು ಸಾಮಾಜಿಕ ಜಾಗೃತಿಯ ನೆಲೆಯಲ್ಲಿ, ಅಸ್ತ್ರದ ರೂಪದಲ್ಲಿ ಬೀದಿನಾಟಕಗಳು ಪ್ರಕಟಗೊಂಡವು. ಈ ದಿಸೆಯಲ್ಲಿ ಕರ್ನಾಟಕದ ಬೀದಿ ನಾಟಕಗಳು ಮುಖ್ಯವಾಗಿ ಎರಡು ನೆಲೆಗಳಲ್ಲಿ ಕಂಡುಬರುವುವು. ಸಮುದಾಯ ಮತ್ತು ಇತರ ಬೀದಿನಾಟಕಗಳ ಗುಂಪುಗಳು. ಇತರ ಬೀದಿ ನಾಟಕಗಳನ್ನು ಗಮನಿಸುವುದಾದರೆ ಎ.ಎಸ್.ಮೂರ್ತಿ ಗುಂಪಿನ ಉಳ್ಳವರ ನೆರಳು, ಧನ್ವಂತರಿ ಚಿಕಿತ್ಸೆ, ಪಾಟೀಲರ ಬುರುಡೀ ಬಾಬಾನ ಲಕ್ಷಾಪಹರಣ ಪವಾಡ, ವಂಧಿಮಾಗದ(ರಾಜಕೀಯ ಪ್ರಹಸನ) ಮೊದಲಾದವುಗಳನ್ನು ಕಾಣಬಹುದು.

ತುರ್ತುಪರಿಸ್ಥಿತಿ ವಿರೋಧಿ ನೆಲೆಯಲ್ಲಿ ಸಾಂಸ್ಕೃತಿಕ ವೇದಿಕೆಯಾಗಿ ಆರಂಭವಾದ ಸಮುದಾಯ ಹಲವು ರಾಜಕೀಯ, ಸಾಮಾಜಿಕ ಚಳವಳಿಗಳಲ್ಲಿ ಪ್ರಮುಖ ಪಾತ್ರ ನಿರ್ವಹಿಸಿತು. ಎಡಪಂಥೀಯ ಸೈದ್ಧಾಂತಿಕತೆ ಮತ್ತು ರಾಜಕೀಯ ಪಕ್ಷದ ಭಾಗವಾಗಿ ಭಿನ್ನ ನೆಲೆಗಟ್ಟಿನಲ್ಲಿ ರಂಗ ಪ್ರಯೋಗಗಳನ್ನು ಆರಂಭಿಸಿತು. "ಸಮುದಾಯ ಏಮ್ಸ್ ಅಟ್ ರೂರಲ್ ಅವೇಕೆನಿಂಗ್"(ಡೆಕ್ಕನ್ ಹೆರಾಲ್ಡ್ ೧೯೭೭ ಅಕ್ಟೋಬರ್ ೨೪); "ಸಮುದಾಯ ಟು ಸ್ಟೇಜ್ ಗೆಲಿಲಿಯೋ"(ಡೆಕ್ಕನ್ ಹೆರಾಲ್ಡ್ ೧೯೭೭ ನವೆಂಬರ್ ೨೧); "ಕಲ್ಚರಲ್ ಜಾಥಾ ಇನ್ ಕರ್ನಾಟಕ"(ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ ೧೯೭೮ ಸೆಪ್ಟೆಂಬರ್ ೨೯) ಮೊದಲಾದ ಪತ್ರಿಕಾ ವರದಿಗಳು ಸಮುದಾಯದ ಕಾರ್ಯಕ್ರಮ ಮತ್ತು ಉದ್ದೇಶಗಳ ಸ್ಥೂಲರೂಪವಾಗಿದೆ.

> ಸಮಾಜದ ಬದಲಾವಣೆ ರಾಜಕೀಯ ಚಳವಳಿಯಿಂದ ಆಗಬೇಕಾದ ಕೆಲಸ. ನಾಟಕ, ಸಿನಿಮಾ ಹಾಗೂ ಸಾಹಿತ್ಯದ ಮೂಲಕ ಸಮಾಜದಲ್ಲಿ ಮೂಲಭೂತ ಬದಲಾವಣೆ ತರುವುದು ಸಾಧ್ಯವಿಲ್ಲ. ಶೋಷಣಾರಹಿತ ಸಮಾಜದ ನಿರ್ಮಾಣದಲ್ಲಿ ಆಸಕ್ತಿ ಹೊಂದಿ, ಸರಿಯಾದ ಕಾರ್‍ಯಕ್ರಮ ಹಾಕಿ ಕೊಂಡಿರುವ ರಾಜಕೀಯ ಪಕ್ಷವಾವುದು ಎಂದು ಕಂಡುಕೊಳ್ಳುವುದು ಹಾಗೂ ನಮ್ಮ ಸಾಂಸ್ಕೃತಿಕ ಚಳವಳಿ ಅಂತಹ ರಾಜಕೀಯ ಚಳವಳಿಗೆ ಪೂರಕವಾಗಿ ನಿಲ್ಲುವುದು ... ರಾಜಕೀಯ ಧೃವೀಕರಣ ಪ್ರಾರಂಭವಾಗಿದೆ. ಇದು ಜನಜೀವನದ ಅನೇಕ ಸ್ತರಗಳಲ್ಲಿ ಕಾಣಿಸಿಕೊಳ್ಳುತ್ತಿದೆ. ಮೂವತ್ತು ವರ್ಷ

> ಅಧಿಕಾರ ನಡೆಸಿದ ರಾಜಕೀಯ ಪಕ್ಷವೊಂದು ಅಧಿಕಾರ ಕಳೆದುಕೊಂಡಿದೆ. ಕಾರ್ಮಿಕ ಸಂಘಗಳಲ್ಲಿ, ವಿದ್ಯಾರ್ಥಿ ಸಮೂಹದಲ್ಲಿ ಹಿಂದಿಗಿಂತ ಹೆಚ್ಚಿನ ರಾಜಕೀಯ ಜಾಗೃತಿ ಕಾಣುತ್ತಿದೆ. ರಾಜಕೀಯವೆಂದರೆ
>
> ಮೂಗು ಮುರಿಯುತ್ತಿದ್ದ ಬುದ್ಧಿಜೀವಿಗಳು ಈಗೀಗ ಗಟ್ಟಿಯಾಗಿಯೇ ರಾಜಕೀಯವನ್ನು ಚರ್ಚಿಸಲು ಸಿದ್ಧರಿದ್ದಾರೆ ... ಸಾಹಿತಿಗಳು, ನಾಟಕಕಾರರು ಹಾಗೂ ಕಲಾವಿದರು ಈಗೀಗ ಸುತ್ತಮುತ್ತ ನೋಡುತ್ತಿದ್ದಾರೆ (ಪ್ರಸನ್ನ ೧೯೭೭: ii).

ಇದು ಸಮುದಾಯದ ಧ್ಯೇಯೋದ್ದೇಶಗಳನ್ನು ಸ್ಪಷ್ಟ ಪಡಿಸುತ್ತ ರಾಜಕೀಯದಲ್ಲಿ ಕಂಡುಬರುತ್ತಿರುವ ಬೆಳವಣಿಗೆಯ ಪ್ರಭಾವ ಸಮಾಜದ ವಿವಿಧ ಸ್ತರಗಳಲ್ಲಿ ಅಭಿವ್ಯಕ್ತಗೊಳ್ಳುತ್ತಿರುವ ಸ್ವರೂಪಗಳನ್ನು ಚರ್ಚಿಸುವುವು. ಈ ಬೆಳವಣಿಗೆಯನ್ನು ಕನ್ನಡ ಸಾಹಿತ್ಯದಲ್ಲಿಯೂ ನೋಡಬಹುದು. ಈ ವಿಚಾರಗಳ ಪರವಿದ್ದ ಸಾಹಿತ್ಯಿಕ ವಲಯದ ಅನೇಕರು ಸಮುದಾಯದೊಡನೆ ಸಂಪರ್ಕ ಹೊಂದಿದ್ದವರು. 'ಕಲೆಗಾಗಿ ಕಲೆ ಎನ್ನುವ ವಾದಕ್ಕೆ ಸವಾಲಾಗಿ ಬದುಕಿಗಾಗಿ ಕಲೆ ಎಂಬ ದೃಢ ನಂಬಿಕೆಯಿಂದ ಕಲೆಯನ್ನು ಒಂದು ಸಾಮೂಹಿಕ ಸಾಂಸ್ಕೃತಿಕ ಮಾಧ್ಯಮವನ್ನಾಗಿ ಗುರುತಿಸುವುದು. ಸಮಾಜದಲ್ಲಿ ಜನತೆಯ ಸರ್ವಾಂಗೀಣ ಪ್ರಗತಿಗೆ ಅಗತ್ಯವಾದ ವೈಜ್ಞಾನಿಕ ಮನೋಭಾವದ ಬೆಳವಣಿಗೆ ಚಾರಿತ್ರಿಕ ಕರ್ತವ್ಯವೆಂದು ಸಮುದಾಯವು ನಂಬುತ್ತದೆ' ಎಂಬುದು ರಂಗಭೂಮಿಯಲ್ಲಿ ಕಂಡುಬರುತ್ತಿದ್ದ ಬದಲಾವಣೆಗಳನ್ನು ಸೆರೆಹಿಡಿಯುವುದು. ಸಮುದಾಯದ ಪ್ರಣಾಳಿಕೆಯಲ್ಲಿ ರಂಗಭೂಮಿಯನ್ನು ಚಳವಳಿಯ ಅಂಗವಾಗಿ ಬಳಸಿಕೊಂಡಿರುವ ದೇಶ-ವಿದೇಶಗಳ ವಿಚಾರಗಳ ಮಾಹಿತಿಯಿದ್ದು ಪ್ರಸ್ತುತ ಬಳಸಲಿರುವ ಸಾಧ್ಯತೆ, ಅಗತ್ಯಗಳ ಚಿಂತನೆಗಳಿವೆ. ೧೯೭೮ರ[೨೦] ರಾಜ್ಯ ವಿಧಾನಸಭಾ ಮತ್ತು ಚಿಕ್ಕಮಗಳೂರು[೨೧] ಉಪಚುನಾವಣೆಯಲ್ಲಿ ತುರ್ತುಪರಿಸ್ಥಿತಿ ವಿರೋಧಿ ಹಿನ್ನೆಲೆಯಲ್ಲಿ ಇಂದಿರಾ ಗಾಂಧಿ ಅವರ ವಿರುದ್ಧ ಪ್ರಚಾರಕಾರ್ಯದಲ್ಲಿ ತೊಡಗಿಸಿಕೊಂಡಿತ್ತು.

ಸಮಕಾಲೀನವಾಗಿ 'ಬೀದಿ ನಾಟಕಗಳ ಪರಿಣಾಮ ಕೇವಲ ರಂಗಭೂಮಿಗೆ ಮಾತ್ರ ಸೀಮಿತಗೊಳ್ಳದೆ ಜನಜೀವನವನ್ನು ವ್ಯಾಪಿಸುವಂತಹದ್ದಾಗಿವೆ. ಭಾರತದಂತಹ ಹಿಂದುಳಿದ ದೇಶದಲ್ಲಿ ರಂಗಭೂಮಿ ಮಾಧ್ಯಮ ಬಳಸಿಕೊಂಡು ಜನತೆಯನ್ನು ಜಾಗೃತಗೊಳಿಸುವ, ಸಾಮಾಜಿಕ ಅನ್ಯಾಯಗಳ ವಿರುದ್ಧ ಬಂಡೆಬ್ಬಿಸುವ ಕಾರ್ಯವನ್ನು ಯಶಸ್ವಿಯಾಗಿ ಮಾಡುವ ಸಾಧ್ಯತೆಯಿದೆ. ಇದನ್ನು ಈ ಬೀದಿ ನಾಟಕಗಳು ವ್ಯಾಪಕವಾಗಿ ಚಳವಳಿಯಾಗಿ ಹಬ್ಬಿಸಿದರೆ ರಂಗಭೂಮಿಯ ದಿಕ್ಕೇ ಬದಲಾದೀತು' ಎಂಬ ಚಿಂತನೆಗಳು ತುರ್ತುಪರಿಸ್ಥಿತಿ ಯೋತ್ತರದಲ್ಲಿ ಸ್ಪಷ್ಟವಾಗಿ ಕಂಡುಬರುವುವು. ಇದಕ್ಕೆ ಪೂರಕವಾಗಿ ರಂಗಭೂಮಿ ಬೆಳೆಯುತ್ತ ಬಂದಂತೆ ದಲಿತ ಸಂವೇದನೆಯ ಹಲವಾರು ಕೃತಿಗಳು ರಂಗಪ್ರಯೋಗಕ್ಕೆ ಬಂದವು. ದಲಿತ ಸಂಘರ್ಷ ಸಮಿತಿ ಮತ್ತಿತರ ಜನಪರ ಸಂಘಟನೆಗಳು, ಸಿ. ಜಿ. ಕೃಷ್ಣಸ್ವಾಮಿ, ಎ. ಎಸ್. ಮೂರ್ತಿ ಮತ್ತಿತರರು ಪ್ರಮುಖ ಪಾತ್ರನಿರ್ವಹಿಸಿದರು. ಇವೆಲ್ಲವೂ ಸಮಕಾಲೀನ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳ ದಾಖಲಾತಿ ಹಾಗೂ ಪರಿಣಾಮದ ವಿವಿಧ ಮುಖಗಳಾಗಿವೆ. ಈ ದಿಸೆಯಲ್ಲಿ ಹರಕೆಯ ಕುರಿ(ಕಂಬಾರ) ಸಮಕಾಲೀನ ರಾಜಕಾರಣದ ಭ್ರಷ್ಟಾಚಾರವನ್ನು, ತದ್ರೂಪಿ(ಪ್ರಸನ್ನ) ಸರ್ವಾಧಿಕಾರಿಯ ಆಡಳಿತವನ್ನು, ದಂಗೆಯ ಮುಂಚಿನ ದಿನಗಳು(ಪ್ರಸನ್ನ) ರಾಜಕೀಯ ದುರಂತವನ್ನು, ನಮ್ಮಗೊಳಗೊಬ್ಬ ನಾಜೂಕಯ್ಯ (ಸೀತಾರಾಮಯ್ಯ) ಸಮಕಾಲೀನ ರಾಜಕೀಯದ ಪರಿಣಾಮಗಳನ್ನು ಅನಾವರಣಗೊಳಿಸುವುವು. ತುರ್ತುಪರಿಸ್ಥಿತಿಯ ಪರಿಣಾಮ ತರುವಾಯದಲ್ಲಿ ಪಡೆದುಕೊಂಡ ರೂಪದ ಕೆಲವು ಆಯಾಮಗಳು ಈ ರಾಜಕೀಯ ಪ್ರಹಸನಗಳಲ್ಲಿವೆ. ಸಮಕಾಲೀನವಾಗಿ ಪಶ್ಚಿಮ ಬಂಗಾಳದಲ್ಲಿ ಸಫದರ್ ಹಸ್ಮಿಯ ಜನಮ್(ಪೀಪಲ್ ಥಿಯೇಟರ್ ಫ್ರಾಂಟ್), ತಮಿಳುನಾಡಿನಲ್ಲಿ ಎಆರ್‌ಪಿ(ಅಸೋಷಿಯೇಷನ್ ಆಫ್ ರೂರಲ್ ಪೂರ್) ಮತ್ತಿತರ ಥಿಯೇಟರ್‌ಗಳು ಸಾಮಾಜಿಕ, ರಾಜಕೀಯ ಹೋರಾಟಗಳೊಂದಿಗೆ ಗುರುತಿಸಿ ಕೊಂಡಿರುವುದನ್ನು ನೋಡಬಹುದು. '೧೯೭೮ರಲ್ಲಿ ಸಿರ್ಕಾರ್ ಗುಂಪಿನ ನಾಟಕಗಳು ಮಾರ್ಕೆಟ್‌ನಲ್ಲಿ ಮಾರಲು ಸಾಧ್ಯವಿಲ್ಲದವುಗಳು ಹೊಸ ಭರವಸೆಯನ್ನು ಹುಟ್ಟಿಸಿವೆ. ಕೇವಲ ಮನೋರಂಜನೆಗಲ್ಲದೆ ಜನ ಜಾಗೃತಿಯ ನೆಲೆಯಲ್ಲಿ ಕಂಡುಬರುತ್ತಿವೆ ಎಂಬ ವಿಚಾರವು ಬದಲಾವಣೆಯನ್ನು ಸೂಚಿಸುವುದು. ಆದರೆ ೧೯೮೨ರ ಚುನಾವಣೆಯ ನಂತರ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿತು' ಎಂದು ಪಶ್ಚಿಮ

ಬಂಗಾಳದಲ್ಲಿ ರಂಗಭೂಮಿ ಚಳವಳಿಯಲ್ಲಾದ ಬದಲಾವಣೆಗಳ ಹಾಗೂ ರಾಜಕಾರಣದೊಂದಿಗಿನ ಸಂಬಂಧಗಳನ್ನು ಪರಿಮಾಲ್ ಘೋಷ್[೮೦] ಅವರು ಗುರುತಿಸುವರು. ೧೯೮೫ರ ನಂತರ ಕರ್ನಾಟಕದಲ್ಲಿಯೂ ಬೀದಿ ನಾಟಕ ಚಳುವಳಿ ಅದರ ತೀವ್ರತೆಯನ್ನು ಕಳೆದುಕೊಳ್ಳುವುದು.

**೪.೨.೨.೧.೧.೨. ಸಿನಿಮಾರಂಗ**

"ಸಂಜಯ್ ಅಂಡ್ ಶುಕ್ಲ ಛಾರ್ಜ್ ಶೀಟೆಡ್ ಫಿಲ್ಮ್ ಕೇಸ್"(ಡೆಕ್ಕನ್ ಹೆರಾಲ್ಡ್ ೧೯೭೭ ಜುಲೈ ೧೫); "ನ್ಯಾಷನಲ್ ಫಿಲಮ್ ಪಾಲಿಸಿ ಟು ಬಿ ಇವಾಲ್ವ್‌ಡ್ ಸೂನ್"(ಅಡ್ವಾನಿ ೧೯೭೭ ಸೆಪ್ಟೆಂಬರ್ ೧೯); "ಶುಕ್ಲಾ ಸೇಸ್ ಆಫ್ ಷಾ ಕಮಿಷನ್"(ಡೆಕ್ಕನ್ ಹೆರಾಲ್ಡ್ ೧೯೭೮ ಡಿಸೆಂಬರ್ ೧೨); "ಎನ್. ಕೆ. ಸಿಂಗ್‌ಗೆ ಪ್ರಾಣ ಭೀತಿ: ಕಿಸ್ಸಾ ತಲೆಕೆಳಗೆ?"(ಕನ್ನಡಪ್ರಭ ೧೯೭೮ ಜನವರಿ ೨); "ನೆಗೆಟಿವ್, ಪ್ರಿಂಟ್ ವಾಪಸ್ಸು ಕೊಡಿ"(ಡೆಕ್ಕನ್ ಹೆರಾಲ್ಡ್ ೧೯೭೮ ಮಾರ್ಚ್ ೪); "ಕಿಸ್ಸಾ ಕಿ ಪ್ರಕರಣದ ತನಿಖಾಧಿಕಾರಿ ಬಂಧನ"(ಡೆಕ್ಕನ್ ಹೆ ರಾಲ್ಡ್ ೧೯೮೦ ಜನವರಿ ೩೦) ಮೊದಲಾದ ವರದಿಗಳು ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಿ ತೊಂದರೆಗೊಳಗಾದ ಹಾಗೂ ವಿವಾದವನ್ನು ಸೃಷ್ಟಿಸಿದ ಕಿಸ್ಸಾ ಕುರ್ಸಿ ಕಾ(ನಹತಾ, ಹಿಂದಿ) ಸಿನಿಮಾ ಕುರಿತಾಗಿದೆ. ಇದರೊಡನೆ ತುರ್ತು ಪರಿಸ್ಥಿತಿ ಕಾಲದ ಸಮೂಹ ಮಾಧ್ಯಮಗಳ ದುರ್ಬಳಕೆಗಾಗಿ ವಿಚಾರಣಾ ಆಯೋಗಗಳು ನೇಮಿಸಿದ್ದು, ತನಿಖಾ ವರದಿಯ ಪ್ರಗತಿ ವಿಚಾರಗಳು ಕಂಡುಬರುತ್ತಿದ್ದವು. ಜೊತೆಗೆ ಹೊಸ ಸಿನಿಮಾ ಕಾಯ್ದೆ ಕುರಿತಂತೆ ನಡೆಯುತ್ತಿದ್ದ ಚರ್ಚೆಗಳನ್ನು ನೋಡಬಹುದಾಗಿದೆ. ೧೯೭೭ ರಿಂದ ೧೯೮೦ರವರೆಗಿನ ಸಿನಿಮಾಗಳಲ್ಲಿ ಎರಡು ರೀತಿಯ ಪರಿಣಾಮಗಳನ್ನು ಗುರುತಿಸಬಹುದು. ತುರ್ತುಪರಿಸ್ಥಿತಿ ಕಾಲದಲ್ಲಿ ಸಮಸ್ಯೆ ಎದುರಿಸಿದ ಸಿನಿಮಾ ಗಳು ಸಮೂಹ ಮಾಧ್ಯಮಗಳಲ್ಲಿ ಚರ್ಚೆಗೊಳಗಾಗುವಂತೆ, ಜನತಾ ಸರ್ಕಾರದ ವಿಚಾರಣಾ ಆಯೋಗಗಳಲ್ಲಿ ಯೂ ಚರ್ಚೆಗೊಳಗಾಗುತ್ತಿದ್ದವು. ಕಿಸ್ಸಾ ಕುರ್ಸಿ ಕಾ[೮೧] ಚಿತ್ರವನ್ನು ನಿರ್ದೇಶಿಸಿದ ಅಮೃತ್ ನಹತ[೮೨] ಸಮಕಾಲೀನವಾಗಿ ರಾಜಕಾರಣಿಯೂ ಆಗಿದ್ದರು. ದೀರ್ಘಕಾಲದಲ್ಲಿ ತುರ್ತುಪರಿಸ್ಥಿತಿ ಕಾಲಘಟ್ಟದ ಅನೇಕ ಆಯಾಮಗಳು ಅಥವಾ ತುರ್ತುಪರಿಸ್ಥಿತಿ ಕಥಾಹಂದರ ಹೊಂದಿರುವ ಹಲವು ಸಿನಿಮಾಗಳು ನಿರ್ಮಾಣಗೊಂಡಿವೆ. ಇಂತಹ ಸಿನಿಮಾಗಳ ಸ್ವರೂಪವನ್ನು ಚರ್ಚಿಸಲು ಪ್ರಯತ್ನಿಸಿದೆ.

ಸರ್ಕಾರ ಮತ್ತು ರಾಜಕಾರಣದ ನೆಲೆಯಲ್ಲಿ ತುರ್ತುಪರಿಸ್ಥಿತಿ ಕಾಲಘಟ್ಟ ಕುರಿತು ಕಂಡುಬರುವ ಎರಡು ಡಾಕ್ಯುಮೆಂಟರಿ ಚಿತ್ರಗಳು ಸೆನ್ಸಾರ್‌ಷಿಪ್ ಸಮಸ್ಯೆಯನ್ನು ಎದುರಿಸಬೇಕಾಯಿತು. ಉತ್ಪಲೆಂದು ಚಕ್ರವರ್ತಿ ಅವರ ನಿರ್ದೇಶನದ ಮುಕ್ತಿ ಚಾಯ(೧೯೭೭, ಬಂಗಾಳಿ) ರಾಜಕೀಯ ಖೈದಿಗಳನ್ನು ಕುರಿತಾದುದು. ಸೆನ್ಸಾರ್‌ಷಿಪ್ ಕಮಿಟಿಯಿಂದ ಪ್ರದರ್ಶನಕ್ಕೆ ಅನುಮತಿ ದೊರೆತರೂ ವಿದೇಶಗಳಲ್ಲಿ ಪ್ರದರ್ಶನವನ್ನು ತಡೆ ಹಿಡಿಯಲಾಯಿತು. ಆನಂದ ಪಟವರ್ಧನ ಅವರ ನಿರ್ದೇಶನದ ಪ್ರಿಸೆನರ್ಸ್ ಆಫ್ ಕಾನ್ಸ್‌ಸೈನ್ಸ್(೧೯೭೮, ಇಂಗ್ಲಿಶ್)[೮೩] ತುರ್ತುಪರಿಸ್ಥಿತಿ ಪೂರ್ವ ಹಾಗೂ ತುರ್ತುಪರಿಸ್ಥಿತಿ ಕಾಲದ ರಾಜಕೀಯ ಖೈದಿಗಳ ಕುರಿತ ಚಿತ್ರ, ಜನತಾ ಸರ್ಕಾರಕ್ಕೆ ಹಿಂದಿನ ಸರ್ಕಾರದ ವಿರುದ್ಧ ಪೂರಕವಾಗಿ ಸಹಾಯ ಮಾಡುವಂತಹ ಚಿತ್ರ, ರಾಜಕೀಯವಾಗಿ ಆಡಳಿತರೂಢವಾದ ಜನತಾ ಪಕ್ಷ ಬಳಸಿಕೊಳ್ಳುವ ಅವಕಾಶಗಳಿದ್ದರೂ ಚಿತ್ರದ ಕೊನೆಗೆ "ತುರ್ತುಪರಿಸ್ಥಿತಿ ಕೊನೆಗೊಂಡಿತು. ರಾಜಕೀಯ ಖೈದಿಗಳ ಬಿಡುಗಡೆಯಾಯಿತು. ಆದರೂ ತುರ್ತುಪರಿಸ್ಥಿತಿ ಪೂರ್ವದ ಅನೇಕ ಖೈದಿಗಳು ಸೆರೆಯಲ್ಲಿದ್ದಾರೆ" ಎನ್ನುವ ಸಾಲಿನೊಂದಿಗೆ ಕೊನೆಗೊಂಡಿತ್ತು. ಇದು ಜನತಾ ಪಕ್ಷ ಎಲ್ಲ ರಾಜಕೀಯ ಖೈದಿಗಳನ್ನು ಷರತ್ತುಗಳಿಲ್ಲದೆ ಬಿಡುಗಡೆಗೊಳಿಸಿದೆ ಎನ್ನುವ ವಿಚಾರವನ್ನು ಪ್ರಶ್ನಿಸುತ್ತಾ ಮುಜಗರಕ್ಕೀಡು ಮಾಡುತ್ತಿತ್ತು. ಸಮಕಾಲೀನವಾಗಿ ನಿಯತಕಾಲಿಕೆಗಳಲ್ಲಿ ಇನ್ನೂ ಸೆರೆಮನೆಯಲ್ಲಿರುವ ಖೈದಿಗಳ ವಿಚಾರ ಚರ್ಚೆಗೊಳಪಡುತ್ತಿದ್ದು, ೧೯೭೦ರ ದಶಕದ ಆರಂಭದಲ್ಲಿ ನಕ್ಸಲ್ ಚಳವಳಿ ಹಿನ್ನೆಲೆ ಬಂದಿಸಿದ್ದ ಹಾಗೂ ಇನ್ನಿತರ ರಾಜಕೀಯ ಖೈದಿಗಳ ಬಿಡುಗಡೆ ಆಗಿರಲಿಲ್ಲ ಎಂಬುದು ಚಿತ್ರದಲ್ಲಿರುವ ಹೇಳಿಕೆಯನ್ನು ಪುಷ್ಟೀಕರಿಸುವುದು. ರಾಜಕೀಯದಲ್ಲಿ ಕಂಡುಬರುತ್ತಿದ್ದ ಬದಲಾವಣೆಗಳು, ವಿರೋಧಾಭಾಸಗಳ ಪರಿಣಾಮ ರಾಜಕೀಯ ಮತ್ತು ಸಮಾಜದ ಸಂರಚನೆ ಕುರಿತ ಚಿತ್ರಗಳ ಮೇಲೆ ಅಪಾರವಾದ ಪರಿಣಾಮ

ಬೀರಿದೆ. ಜೊತೆಗೆ ಸಾಮಾಜಿಕ ಕಳಕಳಿಯಿಂದ ರೂಪುಗೊಂಡಿರುವ ಚಿತ್ರಗಳ ಸಂಖ್ಯೆ ಹಿಂದಿಗಿಂತ ಹೆಚ್ಚಾಗಿರುವುದನ್ನು ಗುರುತಿಸಬಹುದು.

ತುರ್ತುಪರಿಸ್ಥಿತಿಯ ಪ್ರಭಾವ, ಪರಿಣಾಮಗಳು ನೇರವಾಗಿ ಅಥವಾ ಪರೋಕ್ಷವಾಗಿ ಕಥಾ ಹಂದರ ಹೊಂದಿರುವ ಚಿತ್ರಗಳನ್ನು ಇಲ್ಲಿ ಚರ್ಚಿಸಲು ಪ್ರಯತ್ನಿಸಿದೆ. ಇಲ್ಲಿ ಯಾತ್ರ(೧೯೮೫, ಮಲೆಯಾಳಿ), ಪೈರವಿ(೧೯೮೮, ಮಲೆಯಾಳಿ), ಉತ್ತರ ಧ್ರುವ(೧೯೯೧, ಕನ್ನಡ), ಹಜಾರ್ ಚೌರಾಸಿ ಕಿ ಮಾ(೧೯೯೮, ಹಿಂದಿ) ಮತ್ತು ಹಜಾರೋ ಕ್ವಾಯಿಷೆ ಐಸಿ(೨೦೦೫, ಹಿಂದಿ)ಗಳನ್ನು ಚರ್ಚಿಸಲಾಗಿದೆ. ಯಾತ್ರ(೧೯೮೫, ಮಲೆಯಾಳಿ)[೪೪] ಬಾಲು ಮಹೇಂದ್ರ ಅವರ ನಿರ್ದೇಶನದ ಚಿತ್ರ, ತುರ್ತುಪರಿಸ್ಥಿತಿಯಲ್ಲಿ ಪೊಲೀಸರು ಮತ್ತು ಜೈಲಿನ ಅಧಿಕಾರಿಗಳಿಂದ ನಡೆಯುವ ಮಾನವಹಕ್ಕುಗಳ ಉಲ್ಲಂಘನೆಯ ಕಥಾಹಂದರವಾಗಿದೆ. ಶಾಜಿ.ಎನ್. ಕರುಣ್ ಅವರ ನಿರ್ದೇಶನದ ಪೈರವಿ(೧೯೮೮, ಮಲೆಯಾಳಿ)[೪೫] ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಿ ಕೇರಳದ ಕಕ್ಕೆಯಮ್ ಕ್ಯಾಂಪ್‌ನಲ್ಲಿ ಸತ್ತ ರಾಜನ್ ಜೀವನ ಆಧರಿಸಿದೆ. ರಾಜನ್ ಕೊಲೆ ಪ್ರಕರಣ ತುರ್ತುಪರಿಸ್ಥಿತಿ ಸಂದರ್ಭ ಮತ್ತು ನಂತರದಲ್ಲಿ ಕೇರಳ ಸರ್ಕಾರವನ್ನು ತುಂಬಾ ಮುಜುಗರಕ್ಕೆ ಈಡು ಮಾಡಿತ್ತು. ಚಿತ್ರದಲ್ಲಿ ಮಗನ ಬಂಧನದ ಸುದ್ದಿಯನ್ನು ಪತ್ರಿಕೆಯಲ್ಲಿ ಓದಿ, ಹುಡುಕುತ್ತಾ ಹೊರಟ ತಂದೆಯ ಕಥೆಯಿದೆ. ಉಮೇಶ್ ಕುಲಕರ್ಣಿ ಅವರ ನಿರ್ದೇಶನದ ಉತ್ತರ ಧ್ರುವ(೧೯೯೧, ಕನ್ನಡ) ತುರ್ತುಪರಿಸ್ಥಿತಿಯ ನಂತರ ಪೊಲೀಸ್ ಮತ್ತು ನಾಗರಿಕರ ನಡುವಿನ ಸಂಬಂಧಗಳ ಬದಲಾವಣೆಗಳನ್ನು ಚಿತ್ರಿಸುವುದು. ಗೋವಿಂದ್ ನಿಹಲಾನಿ ಅವರ ನಿರ್ದೇಶನದ ಹಜಾರ್ ಚೌರಾಸಿ ಕಿ ಮಾ(೧೯೯೮, ಹಿಂದಿ) ೧೯೭೦ ರಿಂದ ೧೯೭೨ರವರೆಗಿನ ಎಡಪಂಥೀಯ ನಕ್ಸಲ್ ಚಳವಳಿಯ ಸುತ್ತ ನಡೆಯುವ ಕಥೆ. ಮಹಾಶ್ವೇತ ದೇವಿಯವರ ಹಜಾರ್ ಚೌರಾಸಿ ಕಿ ಮಾ ಕಾದಂಬರಿ ಆಧಾರಿತ ಚಿತ್ರವಾಗಿದೆ. ಸುಜಾತ ಚಟೋಪಾಧ್ಯಾಯ್ ಮಧ್ಯವಯಸ್ಸಿನ ಮೃದು ಸ್ವಭಾವದ, ಏನನ್ನೂ ವಿರೋಧಿಸದ ಮೇಲ್‌ಮಧ್ಯಮ ವರ್ಗದ ಮಹಿಳೆಯಾಗಿದ್ದು ಕಲ್ಕತ್ತಾದ ಕಮರ್ಷಿಯಲ್ ಬ್ಯಾಂಕ್‌ವೊಂದರಲ್ಲಿ ಕೆಲಸ ಮಾಡುತ್ತಿದ್ದವರು. ಬೆಳಗ್ಗೆ ಎದ್ದೊಡನೆ ಪ್ರೀತಿಯ ಮಗ ಪೊಲೀಸರ ಗುಂಡಿಗೆ ಹೆಣವಾಗಿದ್ದ ಸುದ್ದಿ ತಿಳಿಯುವುದು. ಆ ಹೆಣಕ್ಕೆ ನೀಡಿದ್ದ ಸಂಖ್ಯೆ ೧೦೮೮. ಈ ಘಟನೆ ಅವಳ ಮಗನ ಕುರಿತು ತಿಳಿದುಕೊಳ್ಳುವಂತೆ ಜಾಗೃತಳನ್ನಾಗಿಸುವುದು. ತಂದೆ ಮತ್ತು ಮಗನ ನಡುವೆ ನಡೆಯುತ್ತಿದ್ದ ವಾಗ್ವಾದಗಳ ನಡುವೆ ಇದ್ದ ಸೈದ್ಧಾಂತಿಕ ವಿಚಾರಧಾರೆಗಳು, ಮಗನ ಕ್ರಾಂತಿಕಾರಿ ವಿಚಾರಗಳೊಂದಿಗಿನ ಬದ್ಧತೆ, ಸಮಕಾಲೀನ ರಾಜಕಾರಣ, ಚಳವಳಿಗಳಲ್ಲಿದ್ದ ಯುವಕರು, ಅವರ ಮನೆಯವರ ಸ್ಥಿತಿಗತಿ ಎಲ್ಲವನ್ನು ತೆರೆದಿಡುತ್ತಾ ಸಾಗುವುದು. ರಾಜಕೀಯ ಮತ್ತು ವೈಯಕ್ತಿಕ ಸಂಕೀರ್ಣತೆ ಜೊತೆಗೆ ಸುಜಾತ ಮಗನ ಕಡೆಯ ದಿನಗಳ ಕುರಿತು ತಿಳಿದುಕೊಳ್ಳುತ್ತಲೇ ಮಾನವ ಹಕ್ಕುಗಳ ಹೋರಾಟಗಾರ್ತಿಯಾಗಿ ಪರಿವರ್ತನೆಗೊಳ್ಳುವ ಚಿತ್ರ. ಸುಧೀರ್ ಮಿಶ್ರ ಅವರ ನಿರ್ದೇಶನದ ಹಜಾರೋ ಕ್ವಾಯಿಷೆ ಐಸಿ(೨೦೦೫, ಹಿಂದಿ) ತುರ್ತುಪರಿಸ್ಥಿತಿ ಪೂರ್ವದ ಭಿನ್ನ ಸೈದ್ಧಾಂತಿಕ ಹಿನ್ನೆಲೆಯ ಮೂವರು ಯುವಕರ ಕಥೆ. ಈ ಮೂವರ ಸೈದ್ಧಾಂತಿಕ ನಿಲುವುಗಳಿಗೆ ವಿರೋಧಭಾಸ ಎಂಬಂಥ ಸೈದ್ಧಾಂತಿಕ ನೆಲೆಯ ಪೋಷಕರು. ೧೯೭೦ರ ದಶಕದ ನಂತರದ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳ ಒಳನೋಟವನ್ನು ಹೊಂದಿದೆ. ಸಮಕಾಲೀನ ರಾಜಕೀಯ ಒಳನೋಟದೊಂದಿಗೆ ತುರ್ತುಪರಿಸ್ಥಿತಿಯ ನಂತರದಲ್ಲಿ ಸಮಾಜದಲ್ಲಾದ ಬದಲಾವಣೆ ಹಾಗೂ ರಾಜಕೀಯ ಚಳವಳಿಗಳಲ್ಲಿನ ರಾಜಕಾರಣ, ವೈಯಕ್ತಿಕ ಹಿತಾಸಕ್ತಿಗಳ ಸ್ವರೂಪಗಳನ್ನು ಬಿಚ್ಚಿಡುವುವು. ಈ ಚಿತ್ರಗಳಲ್ಲಿ ಸಮಾನವಾಗಿ ಕಂಡುಬರುವ ಅಂಶ ಪೊಲೀಸ್ ಮತ್ತು ಸಮಾಜದ ನಡುವಿನ ಸಂಬಂಧ ಹಾಗೂ ಸಮಕಾಲೀನ ರಾಜಕಾರಣ. ಉತ್ತರ ಧ್ರುವ ಚಿತ್ರ ಹೊರತುಪಡಿಸಿದಂತೆ ಉಳಿದವುಗಳಲ್ಲಿ ನಕ್ಸಲ್ ಚಳವಳಿ ಕೇಂದ್ರ ಪಾತ್ರ ನಿರ್ವಹಿಸಿರುವುದು ವಿಶೇಷವಾಗಿದ್ದು, ಗಮನ ಸೆಳೆಯುವುದು.

### ೪.೨.೨.೧.೧.೩. ವ್ಯಂಗ್ಯಚಿತ್ರಗಳು

ಸಂಪಾದಕೀಯ ವ್ಯಂಗ್ಯಚಿತ್ರಗಳು ರಾಜಕೀಯ ವ್ಯಂಗ್ಯಚಿತ್ರಗಳಾಗಿದ್ದು, ಸಮಕಾಲೀನ ಸಮಾಜ ಮತ್ತು ರಾಜಕಾರಣದ ಟೀಕೆ-ವಿಮರ್ಶೆ ಅಥವಾ ಪ್ರತಿಕ್ರಿಯೆ ಆಗಿರುತ್ತದೆ. ರಾಜಕೀಯ ವ್ಯಂಗ್ಯಚಿತ್ರಗಳ ಉದ್ದೇಶ ರಾಷ್ಟ್ರೀಯ ಆಡಳಿತ ವ್ಯವಸ್ಥೆಯನ್ನು ಹಾಸ್ಯದೊಂದಿಗೆ ವಿಮರ್ಶಿಸುವುದು. ಆಯಾ ಕಾಲದ ರಾಜಕಾರಣ, ರಾಜಕೀಯ ಸುದ್ದಿ ಹಾಗೂ ಸಮೂಹ ಮಾಧ್ಯಮಗಳು ರಾಜಕೀಯ ವ್ಯಂಗ್ಯಚಿತ್ರಗಳ ಸ್ವರೂಪದ ಮೇಲೆ ಪ್ರಮುಖ ಪಾತ್ರ ನಿರ್ವಹಿಸುವ ಮೂರು ವಿಚಾರಗಳಾಗಿದ್ದು, ಒಂದಕ್ಕೊಂದು ಅಂತರ್ ಸಂಬಂಧವನ್ನು ಹೊಂದಿವೆ. ಹಲವು ಬಾರಿ ಹೊಸ ರಾಜಕೀಯ ವ್ಯಾಖ್ಯಾನಗಳನ್ನು ಹಾಗೂ ರಾಜಕೀಯ ವಿಶ್ಲೇಷಣೆಗಳನ್ನು ನೀಡುವಂತೆ ಕಂಡುಬರುವುವು. ತುರ್ತುಪರಿಸ್ಥಿತಿ ಕಾಲದಲ್ಲಿ ವ್ಯಂಗ್ಯಚಿತ್ರಗಳು ಸೆನ್ಸಾರ್‌ಷಿಪ್‌ಗೆ ಒಳಗಾಗಿದ್ದನ್ನು ಹಿಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ತುರ್ತುಪರಿಸ್ಥಿತಿಯ ಪ್ರಭಾವ ಪ್ರಾದೇಶಿಕ ಪತ್ರಿಕೆಗಳಲ್ಲಿ ವ್ಯಂಗ್ಯ ಚಿತ್ರಗಳ ಬಳಕೆಯ ಹೆಚ್ಚಳದಲ್ಲಿ ಪೂರಕವಾಗಿ ಕಾರ್ಯನಿರ್ವಹಿಸಿದಂತೆ ಕಂಡುಬರುವುದು. ಸಮಕಾಲೀನ ರಾಜಕಾರಣ ಸುದ್ದಿಪತ್ರಿಕೆಗಳ ವರದಿಗಳಿಗೆ ಪೂರಕವಾಗಿ, ವಿಭಿನ್ನವಾಗಿ ಚಿತ್ರಿತವಾಗಿ ಅಭಿವ್ಯಕ್ತಗೊಂಡಿರುವುದು. ವ್ಯಂಗ್ಯಚಿತ್ರಕಾರನ ರಾಜಕಾರಣ ಕುರಿತ ವೈಯಕ್ತಿಕ ಚಿಂತನೆಗಳು, ನಿಲುವುಗಳು ವ್ಯಂಗ್ಯಚಿತ್ರಗಳ ಸ್ವರೂಪದ ಮೇಲೆ ಪ್ರಧಾನ ಪಾತ್ರ ನಿರ್ವಹಿಸುವುದು. ಇಲ್ಲಿ ೧೯೭೭ ರಿಂದ ೧೯೮೦ರವರೆಗಿನ ಕೆಲವು ವ್ಯಂಗ್ಯಚಿತ್ರಗಳನ್ನು ಅವಲೋಕಿಸಲು ಪ್ರಯತ್ನಿಸಲಾಗಿದೆ.

೧೯೭೭ ರಿಂದ ೧೯೭೮ರ ಚಿಕ್ಕಮಗಳೂರು ಚುನಾವಣೆಯವರೆಗೆ ರಾಷ್ಟ್ರದಲ್ಲಿ ಕಂಡುಬಂದ ರಾಜಕೀಯ ವಿದ್ಯಮಾನಗಳನ್ನು ಕೆಳಗಿನ ವ್ಯಂಗ್ಯಚಿತ್ರಗಳು ಬಿಂಬಿಸುವುವು. ಚಿತ್ರ-೨೩ ಷಾ ವಿಚಾರಣಾ ಆಯೋಗದ ಹಿನ್ನೆಲೆಯಲ್ಲಿ ರೂಪುಗೊಂಡಿದೆ. ಷಾ ಆಯೋಗದ ಮುಂದೆ ನಡೆಯುತ್ತಿರುವ ವಿಚಾರಣೆ ಕಂಡುಬಂದ ಬಗೆಯ ಚಿತ್ರರೂಪವಿದು. ನ್ಯಾಯಾಧೀಶ ಷಾ ಅವರ ಹಿಂದೆ ನಿಂತು ನಗುತ್ತಿರುವ ರಾಜಕೀಯ ವ್ಯಕ್ತಿಗಳ ಮಧ್ಯೆ ಷಾ ಗಂಭೀರವಾಗಿ ವಿಚಾರಣೆ ನಡೆಸುತ್ತಿರುವರು. ಸಾಕ್ಷಿಯ ಹೇಳಿಕೆಯನ್ನು ಎದುರಿರುವ ವ್ಯಕ್ತಿ ಬರೆದುಕೊಳ್ಳುತ್ತಿರುವರು. ವೇದಿಕೆಯ ಮುಂದೆ ಜನರು ಕುಳಿತು ವೀಕ್ಷಿಸುತ್ತಿರುವರು. ಚಿತ್ರ-೨೩ಎನಲ್ಲಿ



ಅಪ್ರಕಟಿತ ವ್ಯಂಗ್ಯಚಿತ್ರಗಳು. ಕೃಪೆ: ಇಂಡಿಯನ್ ಕಾರ್ಟೂನ್ ಇನ್ಸ್ಟಿಟ್ಯೂಟ್, ಬೆಂಗಳೂರು. ವ್ಯಂಗ್ಯಚಿತ್ರಕಾರ: ಆರ್.ಕೆ.ಲಕ್ಷ್ಮಣ್. ಚಿತ್ರ ಸಂಖ್ಯೆ: ೪.೪೧.
(ಚಿತ್ರ-೨೩) (ಚಿತ್ರ-೨೩ಎ)

೧೯೭೭ರ ಲೋಕಸಭಾ ಚುನಾವಣೆಯ ನಂತರ ಇಂದಿರಾ ಗಾಂಧಿ ಅವರ ರಾಜಕೀಯ ಜೀವನವನ್ನು ಬಿಂಬಿಸುವುದು. ಮುಳ್ಳಿನ ದಾರದ ಮೇಲೆ ಸಮತೋಲಿತವಾಗಿ ಉರಿಬಿಸಿಲಿನಲ್ಲಿ ನಡೆಯ ಬೇಕಾದ ಪರಿಸ್ಥಿತಿಯನ್ನು ನೋಡಬಹುದು. ಏಂಜೆಲ್ಸ್‌ಗೆ ಇರುವ ಹಾಗೆ ರೆಕ್ಕೆ ಮತ್ತು ತಲೆಯ ಮೇಲೆ ಪ್ರಭಾವಳಿ ಇದ್ದೂ ಹಾರದೆ ನಡೆದು ಹೋಗಬೇಕಾದ ಪ್ರಸಂಗ, ಆ ಕಾಲದ ರಾಜಕಾರಣದ ಆಯಾಮವೊಂದನ್ನು ಬಿಂಬಿಸಿದೆ.

ಇವುಗಳನ್ನು ರಚಿಸಿದ ದಿನಾಂಕ ತಿಳಿದಿಲ್ಲ. ಆದರೆ ಜನತಾ ಸರ್ಕಾರದ ಆಡಳಿತದ ಆರಂಭಿಕ ಹಂತವೆಂದು ಗುರುತಿಸಬಹುದು.

ಚಿಕ್ಕಮಗಳೂರು ಉಪಚುನಾವಣೆಯ ಪರಿಣಾಮಗಳ ಕುರಿತು ವಿವಿಧ ಪತ್ರಿಕೆಗಳಲ್ಲಿ ಕಂಡುಬಂದ ವ್ಯಂಗ್ಯಚಿತ್ರಗಳನ್ನು ಈ ಕೆಳಗೆ ಪರಾಮರ್ಶಿಸಲು ಪ್ರಯತ್ನಿಸಿದೆ. ರಾಷ್ಟ್ರ ಮತ್ತು ಪ್ರಾದೇಶಿಕ ರಾಜಕಾರಣಗಳ ನಡುವಿನ ಸಂಬಂಧಗಳು, ಕಾಂಗ್ರೆಸ್(ಐ) ಪಕ್ಷದ ವಿಭಜನೆಯ ವಿವಿಧ ಹಂತಗಳ ಪ್ರಕ್ರಿಯೆಗಳನ್ನು ಕೆಳಗಿನ ವ್ಯಂಗ್ಯಚಿತ್ರಗಳು ಕಟ್ಟಿಕೊಡುವುವು. ಮೊದಲೆರಡು ವ್ಯಂಗ್ಯಚಿತ್ರಗಳು ಇಂಗ್ಲಿಶ್ ದೈನಿಕದಲ್ಲಿ ಪ್ರಕಟವಾಗಿದೆ. ಚಿತ್ರ-೨೪ರಲ್ಲಿ ಚಿಕ್ಕಮಗಳೂರು ಚುನಾವಣೆಯಿಂದ ಅರಸು ಅವರ ರಾಜಕಾರಣದಲ್ಲಿ ಉಂಟಾಗಿರುವ ಮತ್ತು ಆಗಬಹುದಾದ ರಾಜಕೀಯ ಬೆಳವಣಿಗೆಯ ಮೇಲೆ ಬೆಳಕು ಚೆಲ್ಲುವುವು. ಚಿತ್ರ-೨೪ಎ ಕೆಲವು ತಿಂಗಳ ನಂತರದಲ್ಲಿ ಕಂಡುಬಂದ ರಾಜಕೀಯ ಬೆಳವಣಿಗೆಯಾಗಿದೆ. ಇಲ್ಲಿ 'ಮ್ಯಾಡಮ್ ಇಸ್ ದ ಒನ್ಲಿ ಫೋರ್ಸ್, ನೋ ನೀಡ್ ಫಾರ್ ಎ ಥರ್ಡ್ ಫೋರ್ಸ್' ಎಂಬ ಕೋರಸ್ ಹಾಡುವವರಲ್ಲಿ ಅರಸರು ಕಂಡುಬರುತ್ತಿಲ್ಲದೇ



ಡೆಕ್ಕನ್ ಹೆರಾಲ್ಡ್: ೧೯೭೮ ಡಿಸೆಂಬರ್ ೧ ಮತ್ತು ೧೯೭೯ ಏಪ್ರಿಲ್ ೨೫, ಪ್ರಜಾಮತ ೧೯೭೯ ಜೂನ್ ೧೦ ಹಾಗೂ ಸುಧಾ: ೧೯೭೯ ಜೂನ್ ೧೦ ಪ್ರಕಟವಾಗಿವೆ ವ್ಯಂಗ್ಯಚಿತ್ರಕಾರರು: ಪಿ.ವಿ.ರಾಮಮೂರ್ತಿ ಮತ್ತು ...

(ಚಿತ್ರ-೨೪) (ಚಿತ್ರ-೨೪ಎ) (ಚಿತ್ರ-೨೪ಬಿ) (ಚಿತ್ರ-೨೪ಸಿ)

ಇರುವುದು ಗಮನ ಸೆಳೆಯುವುದು. ಇಂದಿರಾ ಗಾಂಧಿ ಮತ್ತು ದೇವರಾಜ ಅರಸು ಅವರ ನಡುವಿನ ಬಿಕ್ಕಟ್ಟು ಅಧಿಕೃತವಾಗಿ ಪತ್ರಿಕೆಗಳಲ್ಲಿ ಪ್ರಕಟಗೊಳ್ಳುವ ಪೂರ್ವದ ವ್ಯಂಗ್ಯಚಿತ್ರಗಳಿವು. ಈ ಹೊತ್ತಿಗೆ ಜನತಾ ಸರ್ಕಾರದ ಆಡಳಿತ ನಿರಾಶ ಭಾವನೆ ಹುಟ್ಟುಹಾಕಿತ್ತು. ಅನೇಕ ಬುದ್ಧಿಜೀವಿಗಳು, ಚಿಂತಕರು, ರಾಜಕಾರಣಿಗಳಲ್ಲಿ ಮೂರನೇ ರಾಜಕೀಯ ಶಕ್ತಿಯ ಅಗತ್ಯವಿದ್ದು, ಅದರ ಬೆಳವಣಿಗೆ ಮಾತ್ರವೇ ರಾಷ್ಟ್ರದಲ್ಲಿ ಪ್ರಜಾಪ್ರಭುತ್ವವನ್ನು ಉಳಿಸಲು ಸಾಧ್ಯ ಎಂಬ ಚರ್ಚೆ ಕಂಡುಬರುತ್ತಿತ್ತು. ಅರಸರು ಈ ದಿಕ್ಕಿನಲ್ಲಿ ಪ್ರಯತ್ನ ಮಾಡುತ್ತಿರುವ ಊಹಾ ಪೋಹಗಳು ಹಾಗೂ ನಿರೀಕ್ಷೆಯನ್ನು ಕಾಣಬಹುದು. ಇವೆಲ್ಲವುಗಳ ಬಿಂಬವಾಗಿ ವ್ಯಕ್ತಿ ನೆಲೆಯಲ್ಲಿ ಈ ವ್ಯಂಗ್ಯಚಿತ್ರಗಳು ಬಿಂಬಿತವಾಗಿವೆ. ಚಿತ್ರ-೨೪ಬಿ ಮತ್ತು ಚಿತ್ರ-೨೪ಸಿಗಳೆರಡೂ ಪ್ರಾದೇಶಿಕ ವಾರಪತ್ರಿಕೆಗಳಲ್ಲಿ ಕಂಡುಬಂದಂತ ವ್ಯಂಗ್ಯಚಿತ್ರಗಳು. ಈ ಹೊತ್ತಿಗೆ ಇಂದಿರಾ ಗಾಂಧಿ ಮತ್ತು ಅರಸು ಅವರ ನಡುವಿನ ಭಿನ್ನಾಭಿಪ್ರಾಯ ಅಧಿಕೃತವಾಗಿ ಪ್ರಕಟಗೊಂಡಿತ್ತು. ಇಂದಿರಾ ಗಾಂಧಿ ಅವರಿಗೆ ಕೊಡೆಹಿಡಿಯುತ್ತಿದ್ದ ಅರಸು ಅವರ ಸ್ವತಂತ್ರ ಮನೋಭಾವ ಪ್ರಕಟಗೊಂಡ ರೂಪ ಇದು. ಚಿತ್ರ-೨೪ಸಿನಲ್ಲಿ ಕಾಂಗ್ರೆಸ್(ಐ)ನಿಂದ ಹೊರಬಂದ ತರುವಾಯ ಕರ್ನಾಟಕ ಕಾಂಗ್ರೆಸ್ ಸ್ಥಾಪನೆ ಹಿನ್ನೆಲೆಯ ವ್ಯಂಗ್ಯಚಿತ್ರವಾಗಿದೆ. ಅದರ ಪಕ್ಕದಲ್ಲಿರುವ ಸಂಪಾದಕೀಯದಲ್ಲಿ ಚಿಕ್ಕಮಗಳೂರು ಚುನಾವಣೆಯಿಂದ ಅಧಿಕೃತವಾಗಿ ಭಿನ್ನಾಭಿಪ್ರಾಯ ಹೊರಬರುವವರೆಗಿನ ಸುದ್ದಿಸಾರವಿದೆ. 'ಕರ್ನಾಟಕ ಕಾಂಗ್ರೆಸ್' ಎಂಬ ಹೊಸ ಪ್ರಾದೇಶಿಕ ಪಕ್ಷ ರಚಿಸಿ ಸಾರುತ್ತಿರುವುದು ಕಂಡುಬರುವುದು. ಅರಸು ಅವರು ಪಕ್ಷದ ಮುಂದಾಳಾಗಿ ಡಮರುಗ ಬಾರಿಸುತ್ತ ಸುದ್ದಿ ಸಾರುತ್ತಿರುವರು. ಅರಸು ಅವರ ಹಿಂದಿರುವ ಕರ್ನಾಟಕ ಕಾಂಗ್ರೆಸ್ ಎಂಬ ಪಕ್ಷ ದೂರದಲ್ಲಿದೆ. ಜನರು

ಸಾಲಾಗಿ ಅದರ ಒಳಹೋಗುತ್ತಿರುವರು. ಪಕ್ಷಕ್ಕಿಂತ ವ್ಯಕ್ತಿ ದೊಡ್ಡದಾಗಿದ್ದು, ವ್ಯಕ್ತಿಗೆ ಹೆಚ್ಚಿನ ಮಹತ್ವ ನೀಡಿರುವುದು ಪ್ರಾದೇಶಿಕ ರಾಜಕಾರಣದ ವಿವಿಧ ಆಯಾಮಗಳನ್ನು ಚಿತ್ರಿಸುವುವು.

ಅರಸು ಅವರು ಕಾಂಗ್ರೆಸ್(ಐ)ನಿಂದ ಹೊರಬಂದ ನಂತರದ ರಾಜಕೀಯ ಬೆಳವಣಿಗೆಗಳ ಸ್ವರೂಪದ ವಿವಿಧ ಆಯಾಮಗಳನ್ನು ಕೆಳಗಿನ ವ್ಯಂಗ್ಯಚಿತ್ರಗಳು ಬಿಂಬಿಸುವುವು. ರಾಜಕೀಯ ಪಕ್ಷಗಳ ಧೃವೀಕರಣ ಮತ್ತು ಚುನಾವಣೆ ಇದರ ಮುಖ್ಯ ವಸ್ತುವಿಷಯ. ಅರಸು ಅವರ ರಾಜಕಾರಣ ಮತ್ತು ಸಮಾನಾಂತರವಾದ ಇತರ ರಾಜಕೀಯ ಪ್ರಕ್ರಿಯೆಗಳನ್ನು ಇಲ್ಲಿ ಗುರುತಿಸಬಹುದಾಗಿದೆ. ಕಾಂಗ್ರೆಸ್(ಐ) ವಿಭಜನೆಯ ನಂತರ ಅರಸು ಅವರು ತೃತಿಯ ರಾಜಕೀಯ ಪಕ್ಷದ ಅವಶ್ಯಕತೆಯ ಹಿನ್ನೆಲೆ ಕಾಂಗ್ರೆಸ್ ಪಕ್ಷಗಳ ಒಕ್ಕೂಟಕ್ಕೆ ಪ್ರಯತ್ನಿಸುತ್ತಿರುವುದು ಹಾಗೂ ಮಧ್ಯಂತರ ಲೋಕಸಭಾ ಚುನಾವಣೆಯಿಂದ ಉಂಟಾಗುತ್ತಿರುವ ರಾಜಕೀಯ ಪಕ್ಷಗಳ ಧೃವೀಕರಣ ವ್ಯಕ್ತಿ ರಾಜಕಾರಣದ ಚೌಕಟ್ಟಿನಲ್ಲಿ ಕಂಡುಬಂದಿದೆ. ಚಿತ್ರ-೨೫೮ರಲ್ಲಿ ರಾಜಕಾರಣಿಗಳ ಒಂದಿರುವ ರಥದ ಮೇಲೆ ಜನತಾ(ಎಸ್) ಮತ್ತು ಕಾಂಗ್ರೆಸ್ ಹೊಂದಾಣಿಕೆ ಎಂದಿದೆ. ಮುಂದೆ ಶ್ರೀ ಕೃಷ್ಣ ಸುದರ್ಶನ ಚಕ್ರ ಹಿಡಿದು ನಗುತ್ತಿರುವಂತಿದೆ. ಈ ಶ್ರೀ ಕೃಷ್ಣ, ದೇವರಾಜ ಅರಸು ಅವರು. ಮಹಾಭಾರತದಲ್ಲಿ ಕೃಷ್ಣ ರಾಜಕೀಯ ಮುತ್ಸದ್ದಿತನದ ಸಂಕೇತವಾಗಿ ಹೊರಹೊಮ್ಮುವನು. ಎದುರುಗಡೆ ನಿಂತಿರಿರುವ ವ್ಯಕ್ತಿ ಬಿಲ್ಲು ಬಾಣದೊಂದಿಗೆ ಅರಸರನ್ನು ನೋಡುತ್ತಿರುವರು. ಆತನ ತಲೆಯ ಮೇಲೆ ಮಹಾರಾಷ್ಟ್ರ(ನ್ಯೂ ವರ್ಷನ್)



ಡೆಕ್ಕನ್ ಹೆರಾಲ್ಡ್: ೧೯೭೯ ಸೆಪ್ಟೆಂಬರ್ ೧೮ ಹಾಗೂ ಕನ್ನಡಪ್ರಭ ೧೯೭೯ ಅಕ್ಟೋಬರ್ ೨೮: ವ್ಯಂಗ್ಯಚಿತ್ರಕಾರ: ಪಿ.ವಿ.ರಾಮಮೂರ್ತಿ ಮತ್ತು ಆರ್.ಟಿ.ಪಾಂ. ಚಿತ್ರ ಸಂಖ್ಯೆ: ೫.೯೩.
(ಚಿತ್ರ-೨೫೮) (ಚಿತ್ರ-೨೫೮ಎ)

ಎಂದಿದ್ದೂ ರಾಷ್ಟ್ರ ರಾಜಕಾರಣ ರೂಪುಗೊಂಡ ಬಗೆಯಾಗಿದೆ. ಎರಡು ರಾಜ್ಯಗಳ ನಡುವಿನ ಅಂತರ್ ರಾಜಕೀಯ ಸಂಬಂಧದ ಮೇಲೆ ಬೆಳಕು ಚೆಲ್ಲುವುದು. ಚಿತ್ರ-೨೫೮ಎನಲ್ಲಿ ೧೯೮೦ರ ಲೋಕಸಭಾ ಚುನಾವಣೆಯಲ್ಲಿ ರಾಜಕೀಯ ಪ್ರಚಾರಗಳು ಹಾಗೂ ನಾಯಕರು ಕಂಡುಬಂದ ರೀತಿಯಿಂದ ಪ್ರಭಾವಿತವಾಗಿದೆ. ಎಲ್ಲ ನಾಯಕರು ಅರ್ಧ ಮನುಷ್ಯ ಅರ್ಧ ಕುದುರೆ ದೇಹ ಹೊಂದಿರುವರು. ಎದುರೆಗಡೆ ಸಮವಸ್ತ್ರ ಧರಿಸಿರುವ ಚುನಾವಣಾ ಆಯೋಗದ ಅಧಿಕಾರಿ ತಲೆಯ ಮೇಲೆ ಓಡಿ ಎಂದು ಬರೆದಿದೆ. ಸಾಮಾನ್ಯವಾಗಿ ಓಟದ ಸ್ಪರ್ಧೆಗಳಲ್ಲಿ ಎಲ್ಲರೂ ಒಂದು ದಿಕ್ಕಿನ ಕಡೆಗೆ ಓಡುವುದು ಕಂಡುಬರುವುದು. ಆದರೆ ಇಲ್ಲಿ ಒಬ್ಬೊಬ್ಬರು ಒಂದೊಂದು ದಿಕ್ಕಿನತ್ತ ಮುಖ ಮಾಡಿರುವುದು ಚುನಾವಣಾ ರಾಜಕಾರಣದ ವಿಡಂಬನೆ. ರಾಷ್ಟ್ರ ಆಳುವ ನಾಯಕರನ್ನು ಗುರುತಿಸಲಿರುವ ಪಂದ್ಯವಾಗಿದ್ದು, ಅರಸು ಅವರು ಭಾಗವಹಿಸುವಿಕೆಯನ್ನು ಕಾಣಬಹುದು. ಅರಸರು ಪ್ರಾದೇಶಿಕದಿಂದ ರಾಷ್ಟ್ರೀಯ ನಾಯಕನಾಗಿ ಬೆಳೆದಿರುವುದನ್ನು ಇಲ್ಲಿ ಗುರುತಿಸಬಹುದು. ಈ ವ್ಯಂಗ್ಯ ಚಿತ್ರಗಳು ೧೯೮೦ರವರೆಗಿನ ಮೊದಲ ಹಂತದ ರಾಜಕೀಯ ಪ್ರಕ್ರಿಯೆಗಳ ಸ್ಥೂಲರೂಪವನ್ನು ಬಿಡಿಸಿಡುವುವು.

೧೯೮೦ರ ಲೋಕಸಭಾ ಚುನಾವಣಾ ನಂತರ ಕಾಂಗ್ರೆಸ್(ಯು) ಒಳಗಿನ ಆಂತರಿಕ ಬಿಕ್ಕಟ್ಟು ಕೆಳಗಿನ ವ್ಯಂಗ್ಯಚಿತ್ರಗಳಲ್ಲಿ ಅಭಿವ್ಯಕ್ತಗೊಂಡಿದೆ. ೧೯೮೦ರ ನಂತರದಲ್ಲಿ ಲೋಕಸಭಾ ಚುನಾವಣಾ ಪೂರ್ವದ ರಾಜಕೀಯ ಪಕ್ಷಗಳ ಧೃವೀಕರಣದಾಚೆಗಿನ ಸಂಬಂಧದ ಚಿತ್ರರೂಪಗಳಿವು. ರಾಜಕೀಯ ಪಕ್ಷಗಳ ಧೃವೀಕರಣದಂತೆಯೇ ರಾಜಕಾರಣಿಗಳ ಪಕ್ಷಾಂತರವು ತನ್ನ ಉದ್ದೇಶವನ್ನು ಕಳೆದುಕೊಂಡಿದ್ದು ಹೊಸ

ರಾಜಕೀಯ ಬೆಳವಣಿಗೆಗೆ ಪೂರಕವಾಗಿದೆ. ಚುನಾವಣೆಯ ಹೊಂದಾಣಿಕೆಗಳು ಕೊನೆಗೊಳ್ಳತೊಡಗಿದ್ದು ಕಾಂಗ್ರೆಸ್(ಯು) ಹಂತ ಹಂತವಾಗಿ ಅವನತಿ ಹೊಂದುತ್ತಿರುವ ಪ್ರಕ್ರಿಯೆಯ ಒಂದು ನೋಟವಿದು. ಇಲ್ಲಿ ಅರಸು ಅವರು ರಾಷ್ಟ್ರ ರಾಜಕಾರಣೆಯಿಂದ ಹಂತ ಹಂತವಾಗಿ ಪ್ರಾದೇಶಿಕ ರಾಜಕಾರಣಿಯಾಗಿ ಪರಿವರ್ತನೆ ಗೊಳ್ಳುವುದರ ಆರಂಭವನ್ನು ಗುರುತಿಸಬಹುದು. ಕಾಂಗ್ರೆಸ್(ಯು) ಪಕ್ಷದಿಂದ ಹೊರಬರುವುದರೊಂದಿಗೆ ಅರಸು ಅವರು ರಾಷ್ಟ್ರೀಯ ರಾಜಕಾರಣದಿಂದ ದೂರಸರಿಯುವರು. ಚಿತ್ರ-೧೬ರಲ್ಲಿ ಕಾಂಗ್ರೆಸ್(ಯು) ದೋಣಿ ಹತ್ತಿ ಉರಿಯುತ್ತಿದೆಯಾದರೂ, ಪಕ್ಷದೊಳಗೆ ಉಂಟಾಗಿರುವ ದುರಂತದ ಅರಿವು ದೋಣಿಯನ್ನು



(ಚಿತ್ರ-೧೬) (ಚಿತ್ರ-೧೬ಎ)

ಮುನ್ನಡೆಸುವ ನೇತೃತ್ವ ವಹಿಸಿ, ಮುಂಭಾಗದಲ್ಲಿ ನಿಂತಿರುವ ಅರಸು ಅವರ ಮುಖದಲ್ಲಿ ಕಂಡುಬರುತ್ತಿಲ್ಲ. ದೋಣಿಯಿಂದ ಬರುತ್ತಿರುವ ಹೊಗೆಯ ನಡುವೆ ಡಿಫೆಕ್ಷನ್ಸ್ ಎಂದಿದೆ. ಪಕ್ಷ ನಿರ್ಮಾಣದಲ್ಲಿನ ತಪ್ಪುಗಳನ್ನು ಸಾಂಕೇತಿಕವಾಗಿ ಸೂಚಿಸುವುದು. ಇದರೊಡನೆ ಪಕ್ಷದೊಳಗಿನ ಅಂತರಿಕ ಬೆಳವಣಿಗೆ ಅರಸು ಅವರಿಗೆ ತಿಳಿದಿಲ್ಲ ಎಂಬುದನ್ನು ಸೂಚಿಸುತ್ತಲೇ ವ್ಯಂಗ್ಯ ಹಾಗೂ ಅನುಕಂಪ ಚಿತ್ರಿತವಾಗಿದೆ. ಚಿತ್ರ-೧೬ಎನಲ್ಲಿ ಕಾಂಗ್ರೆಸ್(ಯು) ದೋಣಿಯಲ್ಲಿ ಜಗಜೀವನ್ ರಾಮ್ ಮೊದಲಾದವರು ಪ್ರಯಾಣಿಸುತ್ತಿರುವರು. ಜಗಜೀವನ್ ರಾಮ್ ಅವರು ಕುಳಿತಿರುವ ಭಾಗದಲ್ಲಿ ಭಾರ ಹೆಚ್ಚಾಗಿದ್ದು ದೋಣಿ ಸಮತೋಲನ ಕಳೆದುಕೊಂಡಿರುವುದು. ಅರಸು ಅವರು ಗಾತ್ರದಲ್ಲಿ ಸಣ್ಣವಾಗಿದ್ದು, ಹುಟ್ಟುಹಾಕುತ್ತಿರುವ ಭಾಗ ನೀರಿನಿಂದ ಮೇಲೆಕ್ಕೆದಿದ್ದು ಕಾಂಗ್(ಯು) ಎಂದು ಬರೆದಿರುವುದನ್ನು ನೋಡಬಹುದು. ಜಗಜೀವನ್ ರಾಮ್ ಅವರಿರುವ ಕಡೆ 'ನಾನು ಯಾರು, ನಾನು' ಎಂದಿರುವುದು ಪಕ್ಷದೊಳಗೆ ಕಂಡುಬರುತ್ತಿರುವ ವ್ಯಕ್ತಿ ರಾಜಕಾರಣ ಹಾಗೂ ಆಂತರಿಕ ಬಿಕ್ಕಟ್ಟನ್ನು ಬಿಂಬಿಸುವುದು. ನಂತರದ ಕೆಲವು ದಿನಗಳಲ್ಲೇ ಅರಸು ಅವರು ಕಾಂಗ್ರೆಸ್ಸಿನಿಂದ(ಯು) ಹೊರಬಂದು, ಪ್ರಾದೇಶಿಕ ನೆಲೆಯಲ್ಲಿ ಪಕ್ಷ ಸಂಘಟನೆಗೆ ಗಮನ ನೀಡುವರು. ತುರ್ತುಪರಿಸ್ಥಿತಿ ನಂತರದಲ್ಲಿ ರಾಷ್ಟ್ರ ಮತ್ತು ಪ್ರಾದೇಶಿಕ ನೆಲೆಯ ರಾಜಕೀಯ ಪ್ರಕ್ರಿಯೆಗಳು ದೃಶ್ಯ ಮಾಧ್ಯಮದಲ್ಲಿ ಕಂಡುಬಂದ ಬಗೆಯ ಅವಲೋಕನವಾಗಿದೆ.

### ೪.೧.೧.೧. ಸಮಾಜ ಮತ್ತು ದೃಶ್ಯ ಮಾಧ್ಯಮ: ಪ್ರಜಾಪ್ರಭುತ್ವ, ಸ್ವಾತಂತ್ರ್ಯ, ಸರ್ಕಾರ, ರಾಜಕಾರಣ, ಆಡಳಿತ, ಪೊಲೀಸ್, ಬಂದ್ ಮತ್ತಿತರಗಳ ಸ್ವರೂಪಗಳಲ್ಲಿ

ರಾಜಕೀಯ ಮತ್ತು ಸಾಂಸ್ಕೃತಿಕ ಉತ್ಪಾದನೆಗಳ ನಡುವಿನ ನಿರಂತರ ಸಂವಾದ ಅನೇಕ ಸ್ವರೂಪಗಳಲ್ಲಿ ಅಭಿವ್ಯಕ್ತಗೊಳ್ಳುವುವು. ಸಮಕಾಲೀನ ರಾಜಕಾರಣದ ಚಿಂತನೆಗಳು ಸಿನಿಮಾರಂಗದಲ್ಲಿ ಸ್ಥೂಲವಾಗಿ ಹೊರಹೊಮ್ಮುವುವು. ತುರ್ತುಪರಿಸ್ಥಿತಿಯ ಪರಿಣಾಮಗಳು ವಾಣಿಜ್ಯ ಚಿತ್ರಗಳಲ್ಲಿ ಹಲವು ಆಯಾಮಗಳಲ್ಲಿ ಕಂಡುಬಂದಿವೆ. ಸಿನಿಮಾಗಳಲ್ಲಿ ರಾಜಕಾರಣ, ಸಾಮಾಜಿಕತೆ ಮುಖ್ಯ ವಸ್ತುವಿಷಯವಾಗಿ ರೂಪುಗೊಂಡರು, ವೈಯಕ್ತಿಕತೆಯೇ ಹೆಚ್ಚು ಪ್ರಮುಖವಾಗಿದೆ. ಆಶೋತ್ತರಗಳು ಸಾಮಾಜಿಕವಾಗಿದ್ದರೂ, ವೈಯಕ್ತಿಕ ನೆಲೆಯ ಮಾರ್ಗಗಳ ಹುಡುಕಾಟ ಹೆಚ್ಚಾಗಿರುವುದು. ಇಂತಹ ಸಿನಿಮಾಗಳನ್ನು ಮೂರು ಹಂತಗಳಲ್ಲಿ

ಪರಿಶೀಲಿಸಲಾಗಿದೆ. ನೇರ ಪರಿಣಾಮಗಳನ್ನು ೧೯೭೮ ರಿಂದ ೧೯೮೦ರವರೆಗಿನ ಚಿತ್ರಗಳಲ್ಲಿ ಗಮನಿಸಲಾಗಿದೆ. ೧೯೮೧ ರಿಂದ ೧೯೮೫ರವರೆಗಿನ ಚಿತ್ರಗಳಲ್ಲಿ ಸಮಾಜದಲ್ಲಿ ಕಂಡುಬಂದ ರಾಜಕಾರಣದ ಬಿಂಬ ಮತ್ತು ಆಶಯಗಳ ಸ್ವರೂಪಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ. ೧೯೮೬ರ ನಂತರದ ಚಿತ್ರಗಳಲ್ಲಿ ರಾಜಕಾರಣ, ಪ್ರಜಾಪ್ರಭುತ್ವ ವ್ಯವಸ್ಥೆ ಕಂಡುಬಂದ ಸ್ವರೂಪಗಳು ಮತ್ತು ಬಿಂಬಿತವಾಗುತ್ತಿರುವ ಆಶಯಗಳ ಹಿನ್ನೆಲೆಯಲ್ಲಿ ವಿಮರ್ಶಿಸುವ ಪ್ರಯತ್ನ ಮಾಡಿದೆ.

ತುರ್ತುಪರಿಸ್ಥಿತಿ ಕಾಲಘಟ್ಟದ ಪರಿಣಾಮ ಸಮಕಾಲೀನ ಚಲನಚಿತ್ರಗಳ ನಿರ್ಮಾಣದ ಮೇಲೆ ಅಪಾರವಾದ ಪ್ರಭಾವ ಬೀರಿತು. ಈ ದಿಕ್ಕಿನಲ್ಲಿ ೧೯೮೦ರವರೆಗೆ ಕಂಡುಬಂದ ಪ್ರಮುಖ ಕನ್ನಡ ಚಿತ್ರಗಳೆಂದರೆ ಪಡುವಾರಳ್ಳಿ ಪಾಂಡವರು(ಕಣಗಾಲ್, ೧೯೭೮), ಚಿತೆಗೂ ಚಿಂತೆ(ಸತ್ಯು ೧೯೭೮), ಹೊಯ್ಸಳ(೧೯೭೮ ಶಿವಶಂಕರ) ಮೊದಲಾದವುಗಳನ್ನು ವಿಮರ್ಶಿಸಲು ಪ್ರಯತ್ನಿಸಿದೆ. ಮೊದಲೆರಡು ಚಿತ್ರಗಳು ಸಮಾಜ ಮತ್ತು ಸಿನಿಮಾರಂಗದಲ್ಲಿ ಸಾಕಷ್ಟು ಚರ್ಚೆಯನ್ನು ಹುಟ್ಟುಹಾಕಿದ್ದವು. ಪಡುವಾರಳ್ಳಿ ಪಾಂಡವರು(ಕಣಗಾಲ್, ೧೯೭೮) ಹಳ್ಳಿಯೊಳಗಿನ ಸರ್ವಾಧಿಕಾರಿ ರಾಜಕಾರಣದ ವಿರುದ್ಧದ ಪ್ರತಿಭಟನೆಯಾದರೆ, ಚಿತೆಗೂ ಚಿಂತೆ(ಸತ್ಯು ೧೯೭೮) ಸಂಪೂರ್ಣ ರಾಜಕೀಯ ಚಿತ್ರವಾಗಿದ್ದು ವಿನೂತನ ಪ್ರಯೋಗವಾಗಿದೆ. ಪಡುವಾರಳ್ಳಿ ಪಾಂಡವರ(ಕಣಗಾಲ್, ೧೯೭೮) ಕುರಿತು

> ಒಂದು ರೀತಿಯ ದೇಶಭಕ್ತಿಯನ್ನು ಪ್ರಚಾರ ಮಾಡುವಂಥ ಚಿತ್ರವಾಗಿ ಪ್ರಾರಂಭದಲ್ಲಿ ಕಾಣಿಸಿಕೊಳ್ಳುವ ಪುಟ್ಟಣ್ಣ ಕಣಗಾಲ್ ನಿರ್ದೇಶಿತ 'ಪಡುವಾರಹಳ್ಳಿ ಪಾಂಡವರು' ಸಹಜವಾಗಿಯೇ ವಿಶೇಷ ದೇಶಭಕ್ತರನ್ನೆಲ್ಲ ಥಟ್ಟನೆ ಆಕರ್ಷಿಸಿ ಬಿಡುತ್ತದೆ. ಅನಂತರ ಚಿತ್ರುದ್ದಕ್ಕೂ ಬರುವ ಹೇರಳ ಹಾಡುಗಳೂ, ಕನೆಕ್ಷನ್ ಕಾಳಪ್ಪನ ಆಕರ್ಷಣೆಯ ಧ್ವನಿಗಳೂ, ಪಡುವಾರಹಳ್ಳಿಯ ಸ್ವಾಮಿಯ ಧರ್ಮಪ್ರಜೆಗಳೂ ... ಪಡುವಾರಳ್ಳಿಯ ಉದಾತ್ತ ನಾಯಕರುಗಳ ನಾಟಕೀಯ ಚಟುವಟಿಕೆಗಳು, ಪ್ರಗತಿದಾಯಕ ಮಠದ ಸ್ವಾಮೀಯ ಧರ್ಮ ಪ್ರಜೆಗಳು ಪ್ರೇಕ್ಷಕರನ್ನು ಹಿಡಿದಿಟ್ಟುಕೊಳ್ಳುತ್ತವೆ ... ಒಂದು ಹಳ್ಳಿಯ ಪರಿಸರದಲ್ಲೆ ನಡೆಯುವುದರಿಂದ, ನಮ್ಮ ಹಳ್ಳಿಗಳ ಸಮಸ್ಯೆಯನ್ನು ಇಲ್ಲಿ ಹೇಗೆ ತೋರಿಸಲಾಗಿದೆ. ಹಳ್ಳಿಗಾಡುಗಳಲ್ಲಿ ಇನ್ನೂ ಪ್ರಬಲವಾಗಿ ಬೇರೂರಿವ ಪಾಳೇಯ ಪದ್ಧತಿಯನ್ನು ಊರಿನ ಸಾಹುಕಾರ ಸಂಗಪ್ಪ ಪ್ರತಿನಿಧಿಸುತ್ತಾನೆ. ಪಾಳೇಗಾರಿ ಪದ್ಧತಿ ಲಕ್ಷಣವಾದ ಜೀತಪದ್ಧತಿ ಕರಿಯ, ನಂತರ ಆತನ ಪ್ರತಿಭಟನೆ ಕಾಣಬಹುದು. ಐಶ್ವರ್ಯ, ದರ್ಪ, ಅಧಿಕಾರದಿಂದ ಊರಿನ ಕೆಳವರ್ಗವನ್ನೆಲ್ಲ ಹದ್ದುಬಸ್ತಿನಲ್ಲಿ ಇಟ್ಟುಕೊಳಲು ಸಾಧ್ಯವಾಗಿರುತ್ತದೆ. ಇದಕ್ಕಾಗಿ ಗೂಂಡಾಗಳನ್ನು ಹೊಂದಿರುತ್ತಾನೆ. ಪ್ರಭುತ್ವದ ಪ್ರತಿನಿಧಿ ಯಾದ ಪೊಲೀಸ್ ಕೂಡ ಆತನ ಪರವಿರುತ್ತಾರೆ(ದೊರೆಸ್ವಾಮಿ ೧೯೭೮ ೪೪-೪೫).

ಹಳ್ಳಿಯೊಂದರ ಕತೆಯಾಗಿ ಚಿತ್ರಿಸಿರುವುದರಿಂದ ಪಾಳೇಯ ಪಟ್ಟವಾಗಿ ಕಂಡುಬರುವುದು. ಇದರ ವಿಸ್ತೃತರೂಪ ರಾಷ್ಟ್ರಮಟ್ಟದಲ್ಲಿ ಕಂಡುಬಂದಾಗ ಸರ್ವಾಧಿಕಾರಿಯಾಗಿ ಕಾಣುವುದು. ಶೋಷಕನಾದ ಊರಿನ ಯಜಮಾನ ಮತ್ತು ಅವನ ಮಗನನ್ನು ಓಡಿಸಿದ ನಂತರ ಚಿತ್ರದ ಪ್ರಮುಖ ಸ್ತ್ರೀ ಪಾತ್ರ(ಅರೆ ಪ್ರಜ್ಞಾವಸ್ಥೆ) ಹೇಳುವ ಮಾತುಗಳು ಅತ್ಯಂತ ಪ್ರಭಾವಿಯುತವಾಗಿವೆ.

> ಓಡಿಸಿ, ಓಡಿಸಿ, ಓಡಿಸ್ತಾನೇ ಇರಿ ಇವರನ್ನ .. ನೀವು ಓಡಿಸ್ತಾನೇ ಇರಿ. ಅವರು ಬರ್ತಾನೇ ಇರ್ತಾರೆ ... ಬರ್ತಾನೆ ಇರ್ತಾರೇ. ಓಡಸ್ತಾನೇ ಇರಬೇಕು. ಅವರು ಬರ್ತಾನೇ ಇರ್ತಾರೇ ನೀವು ಓಡಿಸ್ತಾನೇ ಇರಬೇಕು(ಕಣಗಾಲ್, ೧೯೭೮).

ಹೋರಾಟದಲ್ಲಿ ತೊಡಗಿಕೊಂಡಿದ್ದ ನಾಯಕರು ಶೋಷಕ ಮತ್ತು ಸಂಗಡಿಗರನ್ನು ಓಡಿಸಿಕೊಂಡು ಹೋಗುವ ದೃಶ್ಯದೊಡನೆ ಸಿನಿಮಾ ಕೊನೆಯಾಗುವುದು. ನಿರಂಕುಶಾಧಿಕಾರ, ಊಳಿಗಮಾನ್ಯ ಪದ್ಧತಿಗಳು ನಿರಂತರವಾಗಿ ಬೇರೆ ಬೇರೆ ಸ್ವರೂಪದಲ್ಲಿ ನಡೆಯುತ್ತಿದ್ದು ವ್ಯಕ್ತಿಗಳು ಬದಲಾಗುತ್ತಿರುವರು. ಅರೆ ಪ್ರಜ್ಞಾವಸ್ಥೆಯ ಸ್ತ್ರೀ ಇಲ್ಲಿ ಜಾಗೃತಿಯ ಸಂಕೇತ. ಸದಾ ಜಾಗೃತವಾಗಿದ್ದು, ಪ್ರತಿಭಟನೆ ಹಾಗೂ ಹೋರಾಟವನ್ನು ನಿರಂತರವಾಗಿ ಇರಿಸಿರಬೇಕು ಎನ್ನುವ ಅರ್ಥವಿದೆ. ತುರ್ತುಪರಿಸ್ಥಿತಿ ಕೊನೆಗೊಂಡಿದ್ದು, ಹೊಸ ರಾಜಕೀಯ ಪಕ್ಷ ಆಡಳಿತ ಪಕ್ಷವಾಗಿ ಬದಲಾಗಿತ್ತು. ಆದರೆ ಪ್ರತಿಭಟನೆ ಹೋರಾಟಗಳು ಇಲ್ಲಿಗೆ ನಿಲ್ಲದೆ, ಅವ್ಯವಸ್ಥೆಗಳ ವಿರುದ್ಧ ನಿರಂತರವಾಗಿ ನಡೆಯಬೇಕೆನ್ನುವ ನಿಲುವು, ಆಶಯವಿದೆ.

"ಚಿತೆಗೂ ಚಿಂತೆ ಬಲಿ!"(ಪ್ರಜಾವಾಣಿ ೧೯೭೮ ಡಿಸೆಂಬರ್ ೮). ಹೊಸ ಅಲೆಯ ರಾಜಕೀಯ ವಿಡಂಬನೆಯ ಚಿತ್ರ ಪ್ರದರ್ಶನವನ್ನು ತಡೆಯಲು ರಾಜ್ಯ ಸರ್ಕಾರದಿಂದ ಒತ್ತಡ ಬರುತ್ತಿದೆ. ಸೆನ್ಸಾರ್‌ಷಿಪ್ ಪ್ರದರ್ಶನಕ್ಕೆ ಅನುಮತಿ ನೀಡಿದ್ದರೂ, ರಾಜ್ಯ ಸರ್ಕಾರದ ಬಲಪ್ರಯೋಗ ಮುಂತಾದ ವರದಿಗಳಲ್ಲಿ

'ರಾಜಕೀಯವನ್ನು ವಿಮರ್ಶಿಸುವ ಹಾಗೂ ವಿಡಂಬಿಸುವ ಸ್ವಾತಂತ್ರ್ಯ ಕಲಾವಿದನಿಗಿದೆ. ಸರ್ಕಾರದ ಮಧ್ಯಪ್ರವೇಶ ಪ್ರಜಾಪ್ರಭುತ್ವದಲ್ಲಿ ಆರೋಗ್ಯಕರವಾದ ಲಕ್ಷಣಗಳಲ್ಲ' ಎಂಬ ಚರ್ಚೆಗಳಿವೆ. ಸಿನಿಮಾ ಸ್ವತಂತ್ರ ರಾಜ್ಯದಲ್ಲಿ ಕಂಡುಬರುವ ರಾಜಕೀಯ ವಾತಾವರಣದ ವಿಡಂಬಣೆಯ ಕತೆಯನ್ನು ಒಳಗೊಂಡಿದೆ. ಸಾಯುವ ಹಂತದಲ್ಲಿರುವ ರೋಗಿ ಪಾದದ ಕಿರುಬೆರಳಿನ ಸನ್ನೆಗಳ ಮೂಲಕ ಅಧಿಕಾರ ನಡೆಸುವನು. ಕುರುಡರ ಶಾಲೆಯ ಮುಖ್ಯಸ್ಥ, ಆ ಪ್ರದೇಶದ ಭೂಗತ ದೊರೆ. ಅನಿರೀಕ್ಷಿತ ಬೆಳವಣಿಗೆಗಳಲ್ಲಿ ರಾಜಕಾರಣದ ಉಪಕರಣಗಳಾಗಿ ಬಳಕೆ ಆಗುವ ನಾಯಕ ಮತ್ತು ನಾಯಕಿಯನ್ನು ನೋಡಬಹುದು. ವಿದೇಶದಿಂದ ಸಿಐಡಿಗಳ ಪ್ರವೇಶ ಮುಂತಾದವು ಸಮಕಾಲೀನ ರಾಜಕೀಯ ವಿಡಂಬನೆ ಆಗಿದೆ. ಸಿನಿಮಾ ಕುರಿತು 'ಸಮಕಾಲೀನ ಇತರ ರಾಜಕೀಯ ಚಿತ್ರಗಳಿಗಿಂತ ಭಿನ್ನ ಶೈಲಿಯಲ್ಲಿ ನಿರೂಪಣೆಗೊಂಡಿದೆ. ಈ ಮುನ್ನ ಬಂದಿರುವ ಹಲವಾರು ಚಿತ್ರಗಳಲ್ಲಿ ಒಬ್ಬ ರಾಜಕಾರಣಿ ಅಥವಾ ಪಕ್ಷದ ಸರ್ವಾಧಿಕಾರತ್ವದ ಅಥವಾ ಅದರ ಅಂಗವಾಗಿ ಬಂದ ತುರ್ತುಪರಿಸ್ಥಿತಿಯ ಒಮ್ಮುಖ ಉತ್ಪ್ರೇಕ್ಷೆ ಪ್ರಧಾನವಾಗಿದ್ದು, ಚಿತ್ರದ ವಸ್ತು ಕಲೆಯಾಗದೆ ಸೋತು ಹೋಗುವ ಸಂಭವವೇ ಹೆಚ್ಚಿದ್ದಿತು. ಕೇವಲ ಹಸಿಹಸಿ ರಾಜಕೀಯ ಮುಖಕ್ಕೆ ರಾಚುವಂತಿದ್ದು ಪ್ರೇಕ್ಷಕನಿಗೆ ಚಿತ್ರ ನೀಡಬಹುದಾದ ತಲ್ಲೀನತೆಗೆ ಚ್ಯುತಿ ಬರುತ್ತಿತ್ತು' ಎಂದು ಶಿವರಾಮಯ್ಯ[೪೬] ಅವರು ವಿಶ್ಲೇಷಿಸಿರುವರು. ಚಿತ್ರವು ರಾಜಕೀಯ ಪ್ರಜ್ಞೆಯನ್ನು ಪ್ರಚೋದಿಸುತ್ತ, ವಿವರಿಸುತ್ತ, ಅನುಭವವನ್ನು ದಟ್ಟೈಸುವುದು. ಇದಕ್ಕೆ ಪೂರಕವಾಗಿ ಚಿತ್ರದ ಹೆಸರು ಸಾಂಕೇತಿಕವಾಗಿದೆ. ಸಮಕಾಲೀನವಾಗಿ ಬಂಡಾಯ ಸಾಹಿತ್ಯ, ಸಮುದಾಯ ಮೊದಲಾದವುಗಳಲ್ಲಿ ಸಾಹಿತ್ಯ, ರಂಗಭೂಮಿ, ಕಲೆ ಸಮಾಜ ಮತ್ತು ರಾಜಕೀಯ ದೊಡನೆ ಪರಸ್ಪರ ಸಂಬಂಧ ಹೊಂದಿವೆ. ರಾಜಕೀಯ ಮತ್ತು ಸಮಾಜದ ಆಗುಹೋಗುಗಳು ಸಾಹಿತ್ಯ, ಕಲೆಯ ವಸ್ತುವಿಷಯವಾಗಬೇಕು. ಸಮಾಜವನ್ನು ಜಾಗೃತಗೊಳಿಸುವ ಪರಿಕರವಾಗಬೇಕು ಮತ್ತಿತರ ಚರ್ಚೆ ನಡೆಯುತ್ತಿದ್ದ ಸಂದರ್ಭ.

ಹೊಯ್ಸಳ(೧೯೭೮ ಶಿವಶಂಕರ) ನೇರ ಪರಿಣಾಮ ಕಂಡುಬಂದ ಚಿತ್ರವಾದರೂ, ಮೇಲಿನ ತೀವ್ರತೆ ಕಾಣಬರುವುದಿಲ್ಲ. ಹೊಯ್ಸಳ ರಾಜವಂಶದ ಆಳ್ವಿಕೆಗೆ ಕಾರಣನಾದ ಸಳನ ಸಾಮಾರ್ಥ್ಯ ಕುರಿತ ಚಿತ್ರ, ಹೊಸ ನಾಯಕತ್ವದ ಆಶಯವಿರುವುದು ಕಂಡುಬರುವುದು. ಇಂತಹದೆ ಆಶಯವನ್ನು ಮಯೂರದಲ್ಲಿಯೂ (೧೯೭೫) ನೋಡಬಹುದು. ಸಮಕಾಲೀನವಾಗಿ ಇತರ ಭಾಷೆಗಳಲ್ಲಿ ಶತರಂಜ್ ಕೆ ಖಿಲಾಡಿ(ಬೆನೆಗಾಲ್, ೧೯೭೭) ರಾಜಕಾರಣವನ್ನು ಮುಖ್ಯ ಕಥಾವಸ್ತುವಾಗಿ ಹೊಂದಿರುವ ಚಿತ್ರ, ನಸ್‌ಬಂದಿ(ಐ.ಎಸ್.ಜೋಹಾರ್, ೧೯೭೮) ಕುಟುಂಬ ಯೋಜನಾ ಕಾರ್ಯಕ್ರಮದ ವ್ಯಂಗ್ಯ ವಿಡಂಬನೆ. ತುರ್ತುಪರಿಸ್ಥಿತಿ ಕಾಲದಲ್ಲಿ ನಡೆದ ಕುಟುಂಬ ಯೋಜನಾ ಕಾರ್ಯಕ್ರಮ ಅತಿ ಹೆಚ್ಚು ಅತೃಪ್ತಿ ಸೃಷ್ಟಿಸಿದ್ದು, ಈ ಕುರಿತ ಚರ್ಚೆಗಳನ್ನು ಕಾಣಬಹುದು. ಈ ಚಿತ್ರದ ಕೆಲವು ಹಾಡುಗಳು 'ಗಾಂಧಿ ತೇರೆ ದೇಶ್ ಮೆ', 'ಜಬ್ ನೆ ಸರ್ಕಾರ್ ನೆ' ಮತ್ತು 'ಕ್ಯಾ ಮಿಲ್ ಗಯಾ ಸರ್ಕಾರ್ ಎಮರ್ಜೆನ್ಸಿ ಲಗಾ ಕೆ' ಮೊದಲಾದವು ತುರ್ತುಪರಿಸ್ಥಿತಿ ಕಾಲದ ಆಡಳಿತ ವಿರೋಧಿಸಿ ರೂಪುಗೊಂಡವುಗಳಾಗಿವೆ. ಜುನೂನ್(೧೯೭೮, ಹಿಂದಿ) ಮತ್ತು ಆಕ್ರೋಶ್(೧೯೮೦, ಹಿಂದಿ) ಸಮಕಾಲೀನ ರಾಜಕಾರಣ, ಸಾಮಾಜಿಕ ಸಮಸ್ಯೆಗಳ ಚಿತ್ರಣವಾಗಿದೆ. ಹೀರಕ್ ರಾಜರ್ ದೇಶ್(೧೯೮೦, ಬಂಗಾಳಿ) ಸತ್ಯಜಿತ್ ರೇ ಅವರ ನಿರ್ದೇಶನದ ರಾಜಕೀಯ ವಿಡಂಬನೆಯ ಚಿತ್ರವಾಗಿದ್ದು, ತುರ್ತುಪರಿಸ್ಥಿತಿಯ ಅಣಕ. ಬೇರೆ ರಾಜನನ್ನು ತರಬೇಕೆಂದು ಪ್ರತಿಭಟನಾಕಾರರು ನಡೆಸುವ ಪ್ರಯತ್ನಗಳಿಗೆ ಪ್ರತಿಯಾಗಿ ರಾಜನ ಪ್ರತಿತಂತ್ರಗಳನ್ನು ಕಾಣಬಹುದು. ಶಿಕ್ಷಕನ ಪಾತ್ರಧಾರಿ ಬಿಟ್ಟು ಉಳಿದವರ ಮಾತುಗಳು ಪ್ರಾಸಗಳಾಗಿವೆ. ಇಲ್ಲಿ ಶಿಕ್ಷಕ ಜ್ಞಾನವನ್ನು ಪ್ರತಿನಿಧಿಸುತ್ತಿದ್ದು, ಉಳಿದವರೆಲ್ಲರ ಆಲೋಚನೆಗಳು ಒಂದಲ್ಲ ಒಂದು ರೀತಿ ಕಟ್ಟಲ್ಪಟ್ಟಿವೆ. ಸಂಪೂರ್ಣವಾಗಿ ಸ್ವತಂತ್ರ ಚಿಂತನೆ ಕಂಡುಬರುವುದಿಲ್ಲ. ರಾಜ ಬದಲಾಗುತ್ತಾನೆ ಎಂಬುದು ತುರ್ತುಪರಿಸ್ಥಿತಿ ನಂತರದ ರಾಜಕಾರಣದ ಒಳನೋಟವನ್ನು ಹೊಂದಿದೆ.

೧೯೮೦ರ ನಂತರದ ಚಿತ್ರಗಳಲ್ಲಿನ ವಸ್ತುವಿಷಯಗಳು ರಾಜಕಾರಣ, ಸಮಾಜದ ಸಮಸ್ಯೆಗಳಾದರೂ ಸಮಸ್ಯೆ ವ್ಯಕ್ತಿ ನೆಲೆಯಲ್ಲಿ ನಾಯಕನ ಸುತ್ತ ಕೇಂದ್ರೀಕರಿಸಿರುವುವು. ಸಾಮಾನ್ಯವಾಗಿ ನಾಯಕ ವಿದ್ಯಾವಂತ, ಸುಶಿಕ್ಷಿತ, ಆದರ್ಶಗಳ ಚೌಕಟ್ಟಿನೊಳಗೆ ಜೀವನ ನಡೆಸಲು ನಡೆಯುವ ಸಂಘರ್ಷಗಳು ಹೆಚ್ಚು ಕಂಡು

ಬರುವುವು. ಪ್ರಜಾಪ್ರಭುತ್ವ, ರಾಜಕಾರಣ, ರಾಜಕಾರಣಿ, ಆಡಳಿತಶಾಹಿ, ಪೊಲೀಸ್ ವ್ಯವಸ್ಥೆ, ಬಂದ್ ಇನ್ನಿತರಗಳ ಕುರಿತ ಏಕಮುಖ ಚಿಂತನೆಗಳು ಪ್ರತಿಬಿಂಬಿತಗೊಂಡಿವೆ. ೧೯೮೫ರವರೆಗಿನ ಚಿತ್ರಗಳಲ್ಲಿ ಸರ್ಕಾರ, ಶೋಷಣೆ, ಅಧಿಕಾರ ದುರುಪಯೋಗದ ವಿರುದ್ಧ ದನಿ ಎತ್ತುವವರು ಸಾಮಾನ್ಯವಾಗಿ ಪತ್ರಕರ್ತ, ವಕೀಲ, ಪೊಲೀಸ್ ಅಧಿಕಾರಿ ಅಥವಾ ವಿದ್ಯಾವಂತ ನಿರುದ್ಯೋಗಿಗಳು. ಇವರೆಲ್ಲರೂ ಸೈದ್ಧಾಂತಿಕ ಚೌಕಟ್ಟಿನಲ್ಲಿ ಹೋರಾಡುವರು. ಉದಾಹರಣೆಗೆ, ಅಂತ(ಬಾಬು, ೧೯೮೧), ಹಣಬಲವೋ ಜನಬಲವೋ (ವಿಜಯ್, ೧೯೮೧), ಲೀಡರ್ ವಿಶ್ವನಾಥ್(ಮಣಿಮುರಗನ್, ೧೯೮೧), ನ್ಯಾಯ ಎಲ್ಲಿದೆ?(೧೯೮೨), ಸಾಹಸ ಸಿಂಹ(ಜೋ ಸೈಮನ್, ೧೯೮೨), ಚಕ್ರವ್ಯೂಹ(ಸೋಮಶೇಖರ್, ೧೯೮೩), ಒಂಟಿಧ್ವನಿ (ನಾಗಾಭರಣ, ೧೯೮೪), ಆಕ್ಸಿಡೆಂಟ್(ಶಂಕರ್‌ನಾಗ್, ೧೯೮೪), ರಾಮಾಪುರದ ರಾವಣ(ರಾಜಾಚಂದ್ರ, ೧೯೮೪), ತಾಯಿನಾಡು(ವಿಜಯ್, ೧೯೮೪), ಇಂದಿನ ಭಾರತ(ಕೃಷ್ಣ, ೧೯೮೪), ಪೊಲೀಸ್ ಪಾಪಣ್ಣ (ನಾರಾಯಣರಾವ್, ೧೯೮೪) ಮುಂತಾದ ಸಿನಿಮಾಗಳನ್ನು ನೋಡಬಹುದು.

ಅಂತ(ಬಾಬು, ೧೯೮೧) ಹೆಚ್. ಕೆ. ಅನಂತ್‌ರಾವ್ ಅವರ ಕಾದಂಬರಿ ಆಧಾರಿತ ಚಲನಚಿತ್ರ, ಪೊಲೀಸ್ ಅಧಿಕಾರಿಯೊಬ್ಬನ ಕರ್ತವ್ಯ ನಿಷ್ಠೆ, ಸಾಹಸದೊಡನೆ ವೈಯಕ್ತಿಕ ಜೀವನದಲ್ಲಿ ಕಂಡ ಸಾಲುಸಾಲು ದುರಂತಗಳು ಕಥೆಯ ಪ್ರಮುಖ ವಸ್ತುವಿಷಯ. ಕನ್ನಡ ಚಲನಚಿತ್ರಗಳಲ್ಲಿ ಹಿಂಸೆ, ಕ್ರೌರ್ಯದ ಅನಾವರಣವು, ಈ ಸಿನಿಮಾದ ನಂತರದಲ್ಲಿ ಹೊಸ ಶೈಲಿಯಾಗಿ ಹೆಚ್ಚುತ್ತ ಹೋಗಿರುವುದನ್ನು ಕಾಣಬಹುದು. ಹಣ ಬಲವೋ ಜನಬಲವೋ(ವಿಜಯ್, ೧೯೮೧) ಸ್ಥಳೀಯ ಶ್ರೀಮಂತ ರಾಜಕಾರಣಿಯ ವಿರುದ್ಧ ಬಂಡೇಳುವ ಚಿತ್ರ, ಲೀಡರ್ ವಿಶ್ವನಾಥ್(ಮಣಿಮುರಗನ್, ೧೯೮೧) ಕಾರ್ಮಿಕರ ಸಮಸ್ಯೆ ಮತ್ತು ಕೈಗಾರಿಕೆಯಲ್ಲಿ ಕಾರ್ಮಿಕ ಸಂಘಟನೆಯನ್ನು ಮುರಿಯುವ ರಾಜಕಾರಣದ ಕುರಿತಿದ್ದು, ನಾಯಕ ಆದರ್ಶಗಳ ಸಂಕೇತವಾಗಿ ರೂಪುಗೊಳ್ಳುವನು. ಸಾಹಸ ಸಿಂಹ(ಜೋ ಸೈಮನ್, ೧೯೮೨) ಮತ್ತು ಚಕ್ರವ್ಯೂಹ(ಸೋಮಶೇಖರ್, ೧೯೮೩) ಪೊಲೀಸ್ ಇನ್ಸ್‌ಪೆಕ್ಟರ್ ಪ್ರಧಾನ ಪಾತ್ರವಾಗಿರುವ ಚಿತ್ರಗಳು. ಸಾಹಸ ಸಿಂಹದಲ್ಲಿ(ಜೋ ಸೈಮನ್, ೧೯೮೨) ವೈಯಕ್ತಿಕ ನೆಲೆಗೆ ಹೆಚ್ಚು ಪ್ರಾಮುಖ್ಯತೆ ನೀಡಿದೆ. ಏಕಮುಖ ಸಮಸ್ಯೆಯಿದ್ದು ವಿರೋಧಿಗಳ ವಿರುದ್ಧ ಗೆಲ್ಲಲು ಸಾಧ್ಯವಾಗುವುದು. ಚಕ್ರವ್ಯೂಹ(ಸೋಮಶೇಖರ್, ೧೯೮೩) ರಾಜಕೀಯ ವ್ಯವಸ್ಥೆಯ ಜಾಲದಲ್ಲಿ ಹೋರಾಡುವ ಇನ್ಸ್‌ಪೆಕ್ಟರ್ ವೈಯಕ್ತಿಕವಾಗಿ ದುರಂತಗಳನ್ನು ಕಾಣುವನು. ಈ ಚಿತ್ರವನ್ನು ಹಿಂದಿ ಭಾಷೆಯಲ್ಲಿಯೂ ಕಾಣಬಹುದು. ಒಂಟಿಧ್ವನಿ(ನಾಗಾಭರಣ, ೧೯೮೪) ಮತ್ತು ಆಕ್ಸಿಡೆಂಟ್‌ನಲ್ಲಿ(ಶಂಕರ್‌ನಾಗ್, ೧೯೮೪) ಪ್ರಾಮಾಣಿಕ ಪತ್ರಕರ್ತರು ಹಾಗೂ ವ್ಯವಸ್ಥೆಯ ಜೊತೆ ನಡೆಯುವ ಸಂಘರ್ಷವಿದೆ. ಪೊಲೀಸ್ ಪಾಪಣ್ಣ(ನಾರಾಯಣರಾವ್, ೧೯೮೪) ಪೊಲೀಸ್ ಪೇದೆಯೊಬ್ಬ ಆಡಳಿತಶಾಹಿ ಒಳಗಿನ ಅವ್ಯವಸ್ಥೆಗಳ ವಿರುದ್ಧ ನಡೆಸುವ ಪ್ರತಿಭಟನೆಯಾಗಿದೆ. ಇಲ್ಲಿ ಹೋರಾಟ ಸಮಾಜದ ಕೆಳಹಂತದಲ್ಲಿ ಆರಂಭವಾಗುವುದು. ಚಿತ್ರದ ಕೊನೆಯಲ್ಲಿ ವ್ಯವಸ್ಥೆಯಲ್ಲಿ ಹುಲ್ಲುಕಡ್ಡಿಯಷ್ಟು ಬದಲಾವಣೆ ಮಾಡಲು ಸಾಧ್ಯವಾಗುವುದಿಲ್ಲ ಎನ್ನುವ ಅರ್ಥ ಬರುವಂತಿದೆ. ಜೊತೆಗೆ ಹೋರಾಟ ನಡೆಸುತ್ತಿದ್ದ ಪೊಲೀಸ್ ಪೇದೆ ಆಡಳಿತಶಾಹಿಯ ಕದಂಬ ಬಾಹುಗಳಿಗೆ ಬಲಿಯಾಗುವ ಕಥಾ ಹಂದರವಿದೆ. ಇದಕ್ಕೆ ಪೂರಕವಾಗಿ ಇನ್ಸ್‌ಪೆಕ್ಟರ್ ಕ್ರಾಂತಿಕುಮಾರ್(ರಘು, ೧೯೮೭),[೪೭] ಕುರುಕ್ಷೇತ್ರ(ಭಾರ್ಗವ, ೧೯೮೭), ಏಳು ಸುತ್ತಿನ ಕೋಟೆ(ಗೌರಿಶಂಕರ, ೧೯೮೮), ಸಾಂಗ್ಲಿಯಾನ(ನಂಜುಂಡಪ್ಪ, ೧೯೮೮), ನ್ಯೂ ಡೆಲ್ಲಿ(ಜೋಶಿ, ೧೯೮೮)[೪೮] ರಾಜಕಾರಣ, ವ್ಯವಸ್ಥೆ, ಆಡಳಿತಶಾಹಿ ಕುರಿತು ಬಂದ ಪ್ರಮುಖ ಚಿತ್ರಗಳು. ಇದರೊಡನೆ ಬರ(ಸತ್ಯು, ೧೯೮೨), ಸಿಂಹಾಸನ(ಸಿ.ಆರ್.ಸಿಂಹ, ೧೯೮೩), ಮಳೆ ಬಂತು ಮಳೆ(ಪ್ರಕಾಶ್ ೧೯೮೪), ಅವಸ್ಥೆ(೧೯೮೭, ಕೃಷ್ಣ ಮಾಸಾಡಿ) ಮೊದಲಾದ ಸಿನಿಮಾಗಳು ವ್ಯಕ್ತಿ ನೆಲೆಗಿಂತ ಸಾಮಾಜಿಕ, ರಾಜಕೀಯ ವಸ್ತು ವಿಷಯವಾಗಿ ಚಿತ್ರಿತವಾಗಿದೆ. ಹಿಂದಿ ಚಲನಚಿತ್ರರಂಗದಲ್ಲಿಯೂ ಇವುಗಳನ್ನು ಗುರುತಿಸಬಹುದಾಗಿದೆ. ಕಾನೂನ್ ಔರ್ ಮುಜ್ರಿಮ್(೧೯೮೧), ಕ್ರಾಂತಿ(೧೯೮೧), ಆಜ್ ಕಿ ಆವಾಜ್(೧೯೮೪) ಮೊದಲಾದ ಸಿನಿಮಾಗಳನ್ನು ಕಾಣಬಹುದು.

ನಾಗಿ ಬದಲಾಗುವನು. ಹೋರಾಟ ದೈಹಿಕ ಶಕ್ತಿಬಲದಿಂದ ಕೂಡಿರುವುದು. ಪ್ರಾಮಾಣಿಕತೆ, ಮುಗ್ಧತೆ ಹಾಗೂ ನೈತಿಕ ಮೌಲ್ಯದ ಬಲದಿಂದ ನಾಯಕ ಜನ ಬೆಂಬಲ ಪಡೆಯಲು ಯಶಸ್ವಿಯಾಗುವನು. ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಿ ಪ್ರಜಾಪ್ರಭುತ್ವದ ಉಳಿವಿಗಾಗಿ ಹೋರಾಟ ನಡೆದಿತ್ತು. ಆದರೆ ಈ ಹಂತದಿಂದ ಬಂದ ಬಹುತೇಕ ವಾಣಿಜ್ಯ ಚಿತ್ರಗಳಲ್ಲಿ ಉತ್ತಮ ಗುಣಗಳುಳ್ಳ, ಶಕ್ತಿಶಾಲಿಯಾದ ನಾಯಕನ ಸರ್ವಾಧಿಕಾರವನ್ನು ಸಂತೋಷದಿಂದ ಒಪ್ಪಿಕೊಳ್ಳುವರು. ಉದಾಹರಣೆಯಾಗಿ, ಜನ ನಾಯಕ(ಭಾರ್ಗವ, ೧೯೮೮), ದಾದಾ (ವಾಸು, ೧೯೮೮), ನಮ್ಮೂರ ರಾಜ(ಭಾರ್ಗವ, ೧೯೮೮), ಧರ್ಮಾತ್ಮಾ(ಜಗನ್ನಾಥ, ೧೯೮೮), ಸಾಹಸವೀರ(ಸಾಯಿ ಪ್ರಕಾಶ, ೧೯೮೮), ಸಂಭವಾಮಿ ಯುಗೇ ಯುಗೇ(ಸಿದ್ಧಲಿಂಗಯ್ಯ, ೧೯೮೮) ಮುಂತಾದ ಸಿನಿಮಾಗಳನ್ನು ಕಾಣಬಹುದು. ಈ ಚಿತ್ರಗಳಲ್ಲಿ ಕಂಡುಬರುತ್ತಿರುವ ಆಶೋತ್ತರಗಳು, ಬಳಸುತ್ತಿರುವ ಮಾರ್ಗಗಳು ಹಾಗೂ ಕ್ರಾಂತಿಯ ಪರಿಭಾಷೆಯು ಕ್ರಮೇಣ ಸಮಕಾಲೀನ ರಾಜಕಾರಣದಿಂದ ಬದಲಾಗಿ ಸ್ಥಿತ್ಯಂತರಗೊಂಡಿರುವುದನ್ನು ನೋಡಬಹುದು. ತುರ್ತುಪರಿಸ್ಥಿತಿ ಮತ್ತು ೧೯೮೦ರ ಆರಂಭದಲ್ಲಿ ಕರ್ನಾಟಕದಲ್ಲಿ ಕಂಡುಬಂದ ಚಳವಳಿ ಹಾಗೂ ಹೋರಾಟಗಳಲ್ಲಿ ಸುಶಿಕ್ಷಿತರ ಪಾತ್ರ ಜನಜಾಗೃತಿ ಮಾಡುವುದು. ಅಕ್ಷರಜ್ಞಾನ ಜನ ಜಾಗೃತಿಯ ಪ್ರಮುಖ ಬಿಂದುವಾಗಿ, ಅನೇಕ ಸ್ವರೂಪಗಳಲ್ಲಿ ಕಂಡುಬಂದಿರುವುದನ್ನು ಗಮನಿಸಬಹುದು. ಪ್ರತಿಬಿಂಬದಂತೆ ೧೯೮೭ರವರೆಗಿನ ಚಿತ್ರಗಳಲ್ಲಿ ಹೆಚ್ಚಾಗಿ ನಾಯಕ ಸುಶಿಕ್ಷಿತನಾಗಿದ್ದು, ಹೋರಾಟಗಾರನಾಗಿರುವನು ಅಥವಾ ಆಡಳಿತಶಾಹಿಯ ಮೇಲ್ ಹಂತದ ಅಧಿಕಾರಿಯಾಗಿರುವನು.

ಸಾಮಾನ್ಯವಾಗಿ ಕಲೆ ರಾಜಕೀಯದ ಮೇಲೆ ಪ್ರಭಾವ ಬೀರಲು ಸಾಧ್ಯವಿಲ್ಲವಾದರೂ ಸಮಕಾಲೀನ ರಾಜಕಾರಣ, ಸಾಮಾಜಿಕ ಸ್ಥಿತ್ಯಂತರಗಳ ಪರಿಣಾಮವನ್ನು ಗುರುತಿಸಬಹುದು. ಆದರೆ ಇದಕ್ಕೆ ವಿರುದ್ಧ ನೆಲೆಯಲ್ಲಿ ಪ್ರಸಿದ್ಧ ತಮಿಳು ಸಿನಿಮಾಗಳು, ೧೯೮೦ರ ನಂತರದ ರಾಜಕೀಯ ಪ್ರೊಮೊಗೊಂಡ ಮತ್ತು ಸಂಚಲನಗಳ ಮೂಲಕ ರಾಜಕೀಯ ಮುಖ್ಯಧಾರೆಯ ಮೇಲೆ ಪ್ರಭಾವ ಬೀರಿವೆ. ತಮಿಳು ಸಿನಿಮಾಗಳನ್ನು ವಿಮರ್ಶಿಸುವಾಗ ೧೯೫೧–೧೯೭೫ರವರೆಗಿನ ಚಿತ್ರಗಳು ಹೆಚ್ಚು ರೋಮಾಂಚಕ, ಭಾವನಾತ್ಮಕವಾಗಿರುತ್ತಿದ್ದವು ಮತ್ತು ೧೯೭೬–೧೯೮೫ರವರೆಗೆ ವಾಸ್ತವತೆ, ಭಾವನಾತ್ಮಕತೆ ಮತ್ತು ಸಾರ್ವಜನಿಕ ವ್ಯವಸ್ಥೆಯಲ್ಲಿರುವ ಭ್ರಷ್ಟತೆ ಮತ್ತಿತರಗಳ ವಿರುದ್ಧ ನಡೆಯುವ ಕಥಾವಸ್ತುಗಳನ್ನು ಹೊಂದಿವೆ ಎಂದು ಕೆಲವು ವಿದ್ವಾಂಸರು ವಿಶ್ಲೇಷಿಸಿರುವರು. ರಾಜಕಾರಣದ ಮುಖವಾಣಿಯಂತೆ ಕಾರ್ಯನಿರ್ವಹಿಸುವ ಪತ್ರಿಕೋದ್ಯಮದಲ್ಲಿ ತುರ್ತುಪರಿಸ್ಥಿತಿಯ ಪ್ರಭಾವ ಪರಿಣಾಮಗಳನ್ನು ಕಂಡುಬಂದ ಸ್ವರೂಪಗಳನ್ನು ಅವಲೋಕಿಸುವುದು ಅಗತ್ಯ

**೪.೨.೨.೩. ಪತ್ರಿಕಾ ರಂಗದ ಅವಲೋಕನ: ರಾಜಕಾರಣ ಮತ್ತು ಚುನಾವಣೆಗಳು**

"ಗ್ರಂಥಗಳಿಗಿಂತ ಸಾಮಾನ್ಯ ಮನುಷ್ಯನಿಗೆ ವೃತ್ತಪತ್ರಿಕೆಗಳು ಹೆಚ್ಚು ಮಹತ್ವದ್ದು"(ಗಾಂಧಿ ೧೯೬೦: ೩೭೫); "ಭಾರತದಲ್ಲಿ ಪತ್ರಿಕೆಯು ಪ್ರಜಾಪ್ರಭುತ್ವೀಕರಣವನ್ನು ರೂಪಿಸುವ ಪ್ರಕ್ರಿಯೆಯಲ್ಲಿ ಪ್ರಬಲ ಶಕ್ತಿಯಾಗಿದೆ"(ನಾಯರ್ ೨೦೦೭: ೪೧೮೨). ವೃತ್ತ ಪತ್ರಿಕೆಗಳು ಮತ್ತು ಪ್ರಜಾಪ್ರಭುತ್ವ ವ್ಯವಸ್ಥೆ ನಡುವಿರುವ ಪರಸ್ಪರ ಸಂಬಂಧ ಹಾಗೂ ಚಿಂತನೆಗಳ ಮೇಲೆ ಬೆಳಕು ಚೆಲ್ಲುವುವು. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಆಂತರಿಕ ತುರ್ತುಪರಿಸ್ಥಿತಿ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಂಕೀರ್ಣ ಹಾಗೂ ಆತಂಕಕಾರಿ ಕಾಲಘಟ್ಟವಾಗಿತ್ತು. ಅನೇಕ ಪತ್ರಿಕೆಗಳನ್ನು ನಿಷೇಧಿಸುವ ಮತ್ತು ನಿಯಂತ್ರಿಸುವ ಮೂಲಕ ಸಾರ್ವಜನಿಕ ವಲಯ ಹಾಗೂ ರಾಜಕಾರಣವನ್ನು ನಿಯಂತ್ರಿಸುವುದು ಕಂಡುಬರುವುದು. ೧೯೭೦ರ ದಶಕದ ಆರಂಭದಿಂದಲೇ ಪತ್ರಿಕಾ ಸ್ವಾತಂತ್ರ್ಯದ ಕುರಿತ ಚರ್ಚೆ ಪ್ರಾಮುಖ್ಯತೆ ಪಡೆದುಕೊಂಡಿದ್ದು, ಹಲವಾರು ವಿಮರ್ಶಾ ಲೇಖನಗಳನ್ನು ನಿಯತಕಾಲಿಕೆಗಳಲ್ಲಿ ನೋಡಬಹುದು.

ಆಂತರಿಕ ತುರ್ತುಪರಿಸ್ಥಿತಿ ಸಂದರ್ಭದ ಸಮೂಹ ಮಾಧ್ಯಮಗಳು ನಂತರದ ಕಾಲದಲ್ಲಿಯೂ ಅಧಿಕ ವಿವಾದ ಹಾಗೂ ಚರ್ಚೆಗೆ ಗುರಿಯಾಗಿದೆ. ಮೂಲಭೂತ ಹಕ್ಕುಗಳೊಡನೆ ಪತ್ರಿಕಾ ಸ್ವಾತಂತ್ರ್ಯವು ಬಹುತೇಕ ಚರ್ಚೆಗೊಳಗಾಗುವ ವಿಚಾರ. ರಾಜಕೀಯ ಮತ್ತು ಅವುಗಳಿಗೆ ಸಂಬಂಧಿಸಿದ ವಿಚಾರಗಳು ತುರ್ತುಪರಿಸ್ಥಿತಿ

ನಂತರದಲ್ಲಿ ಪಡೆದುಕೊಂಡ ಸ್ವರೂಪವನ್ನು ಅವಲೋಕಿಸಲು ಯತ್ನಿಸಲಾಗಿದೆ. ಈ ಕಾಲಘಟ್ಟದಲ್ಲಿ ಪತ್ರಿಕೋದ್ಯಮದ ರೂಪಾಂತರಗಳ ಪ್ರಕ್ರಿಯೆಯನ್ನು ಪರಿಶೀಲಿಸಲು ಪ್ರಯತ್ನಿಸಲಾಗಿದೆ. ಈ ದಿಸೆಯಲ್ಲಿ ಪತ್ರಿಕಾ ಸ್ವಾತಂತ್ರ್ಯ ಕುರಿತ ಚರ್ಚೆಗಳು, ಪತ್ರಿಕೋದ್ಯಮ, ರಾಜಕೀಯ ಪಕ್ಷಗಳು ಮತ್ತು ಸರ್ಕಾರದ ಚಿಂತನೆಗಳನ್ನು ಗಮನಿಸಲಾಗಿದೆ. ೧೯೭೭ ರಿಂದ ೧೯೮೦ರವರೆಗಿನ ರಾಜಕಾರಣ, ಚುನಾವಣೆಗಳ ನೆಲೆಯಲ್ಲಿ ಪತ್ರಿಕೋದ್ಯಮದಲ್ಲಿ ಕಂಡುಬಂದ ಬದಲಾವಣೆಗಳನ್ನು ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

### ೪.೨.೨.೩.೧. ರಾಜಕಾರಣ: ಸೆನ್ಸಾರ್‌ಷಿಪ್ ಮತ್ತು ಪತ್ರಿಕೋದ್ಯಮ

> ರಾಷ್ಟ್ರೀಯ ಹೋರಾಟದ ಸ್ವಯಂ ಆಳ್ವಿಕೆಯ ನಡಾವಳಿಗಳು, ಪ್ರಜಾಪ್ರಭುತ್ವದ ಮೌಲ್ಯಗಳನ್ನು ಮತ್ತು ರಾಷ್ಟ್ರದ ವೈವಿಧ್ಯತೆಯನ್ನು ಪತ್ರಿಕೆ ಪ್ರತಿಬಿಂಬಿಸುತ್ತಿತ್ತು. ೧೯೭೫ ಜೂನ್‌ನಲ್ಲಿ ತುರ್ತುಪರಿಸ್ಥಿತಿ ಘೋಷಣೆಯೊಂದಿಗೆ ಬದಲಾವಣೆ ಕಂಡುಬಂದಿತು. ಪತ್ರಿಕೋದ್ಯಮ ಮೌಲ್ಯಗಳ ನಾಶ ಮತ್ತು ಅವ್ಯವಸ್ಥತೆಯ ಭಗ್ನಾವಶೇಷಗಳಿಂದ ಇನ್ನೂ ಹಿಂದಿರುಗಲು ಸಾಧ್ಯವಾಗಿಲ್ಲ(ನಯ್ಯರ್ ೨೦೦೮: ೫೭).

ಪ್ರಜಾಪ್ರಭುತ್ವ ವ್ಯವಸ್ಥೆ ಮತ್ತು ರಾಷ್ಟ್ರ ರಾಜಕಾರಣದಲ್ಲಾದ ಸ್ಥಿತ್ಯಂತರಗಳು ಪತ್ರಿಕೋದ್ಯಮದಲ್ಲಿ ಉಂಟುಮಾಡಿದ ಬದಲಾವಣೆಗಳನ್ನು, ತುರ್ತುಪರಿಸ್ಥಿತಿ ಕಾಲಘಟ್ಟದ ಪರಿಣಾಮದ ಭಾಗವಾಗಿ ಕಾಣಲಾಗಿದೆ. 'ಸುದ್ದಿ ಪತ್ರಿಕೆಗಳು ಒಪ್ಪದಿದ್ದರೂ, ಪತ್ರಿಕೋದ್ಯಮದ ಶಕ್ತಿ ಎಂಬುದು ದೊಡ್ಡ ಭ್ರಮೆ. ಸ್ವಾತಂತ್ರ್ಯ ಹೋರಾಟ ಇನ್ನಿತರ ಚಳವಳಿಗಳ ಸಂದರ್ಭದಲ್ಲಿ ರಾಜ್ಯದ ಸಾರ್ವಭೌಮತ್ವಕ್ಕೆ ಮುಖ್ಯವೆನಿಸದ ಗುಂಪನ್ನು ಮತ್ತು ಕ್ರಾಂತಿಗಾಗಿ ಸಾರ್ವಜನಿಕರಿಗೆ ವೇದಿಕೆ ಸೃಷ್ಟಿಸಬಲ್ಲದಷ್ಟೇ' ಎಂದು ಚಲಪತಿ ರಾವ್ ಅವರು ವಿಶ್ಲೇಷಿಸಿರುವರು. ಈ ಮೇಲಿನ ಎರಡು ಚಿಂತನೆಗಳಲ್ಲಿ ವಿರೋಧಾಭಾಸ ಕಾಣಬಹುದು. ಸಮಕಾಲೀನ ರಾಜಕಾರಣ ಮತ್ತು ಪತ್ರಿಕೋದ್ಯಮದ ನಡುವಣ ಸಂಬಂಧದ ಸ್ವರೂಪವು ಆಡಳಿತ ವ್ಯವಸ್ಥೆಯ ಸ್ವರೂಪದ ಬದಲಾವಣೆಯನ್ನು ಬಿಂಬಿಸುವುದು. ೧೯೭೭ರ ಲೋಕಸಭಾ ಚುನಾವಣೆಯ ನಂತರ ಪತ್ರಿಕೋದ್ಯಮದ ಸ್ವರೂಪದ ರೂಪಾಂತರಗಳನ್ನು ಹಲವು ಹಂತಗಳಲ್ಲಿ ಅವಲೋಕಿಸುವ ಪ್ರಯತ್ನ ಮಾಡಲಾಗಿದೆ.

### ೪.೨.೨.೩.೧.೧. ಸರ್ಕಾರ, ಸೆನ್ಸಾರ್‌ಷಿಪ್ ಮತ್ತು ಪತ್ರಿಕೋದ್ಯಮ

ಪತ್ರಿಕೋದ್ಯಮ ಮತ್ತು ರಾಜಕಾರಣದ ನಡುವೆ ನಿರಂತರವಾಗಿ ಘರ್ಷಣೆ ಹಾಗೂ ಸಂವಾದ ಕಂಡುಬರುವುದು. ಈ ದಿಸೆಯಲ್ಲಿ "ನೊ ಸೆನ್ಸಾರ್‌ಷಿಪ್ ಆನ್ ಫಾರಿನ್ ಪ್ರೆಸ್ ಇನ್ ಇಂಡಿಯಾ"(ಡೆಕ್ಕನ್ ಹೆರಾಲ್ಡ್ ೧೯೭೭ ಜನವರಿ ೭): "ಪ್ರೆಸ್ ಸೆನ್ಸಾರ್‌ಷಿಪ್ ನಾಟ್ ಟು ಬಿ ಎನ್‌ಫೋರ್ಸ್ಡ್"(ಡೆಕ್ಕನ್ ಹೆರಾಲ್ಡ್ ೧೯೭೭ ಜನವರಿ ೨೧): "ಇಂಡಿಯನ್ ಎಕ್ಸ್‌ಪ್ರೆಸ್‌ಗೆ ಮುರಾರ್ಜಿ ಶಹಬಾಸ್‌ಗಿರಿ"(ದೇಸಾಯಿ ೧೯೭೭: ೪): "ಪ್ರೆಸ್ ರಿಪೋರ್ಟ್ಸ್ ಹೆವಿಲಿ ಸ್ಲ್ಯಾಂಟೆಡ್, ಬಯಾಸಡ್-ಪಿಎಂ"(ಇಂದಿರಾ ಗಾಂಧಿ ೧೯೭೭ ಮಾರ್ಚ್ ೮): "ದಿ ಪ್ರೆಸ್, ಸಮಾಚಾರ್ ಅಂಡ್ ಗವರ್ನ್‌ಮೆಂಟ್"(ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ ೧೯೭೭: ೪೩೦) ಮೊದಲಾದವು ಪತ್ರಿಕೋದ್ಯಮ, ಸೆನ್ಸಾರ್‌ಷಿಪ್, ಸರ್ಕಾರ ಕುರಿತಂತೆ ಲೋಕಸಭಾ ಚುನಾವಣೆಯ ಪೂರ್ವದಲ್ಲಿ ಕಂಡುಬಂದ ವರದಿಗಳು. ಸೆನ್ಸಾರ್‌ಷಿಪ್‌ನ್ನು ಸಡಿಲಗೊಳಿಸುವ ಪ್ರಕ್ರಿಯೆಗೆ ಪತ್ರಿಕೋದ್ಯಮ, ವಿರೋಧ ಪಕ್ಷಗಳು ಹಾಗೂ ಆಡಳಿತ ಪಕ್ಷದಲ್ಲಿ ಕಂಡುಬಂದ ಪ್ರತಿಕ್ರಿಯೆಗಳಿವು. ತುರ್ತುಪರಿಸ್ಥಿತಿ ನಂತರ ಪತ್ರಿಕೆಗಳಲ್ಲಿ ಚರ್ಚೆಗೊಳಗಾದ ಪ್ರಮುಖ ವಿಷಯಗಳೇ ಮೇಲಿನ ಉಲ್ಲೇಖಗಳನ್ನು ಪ್ರಭಾವಿಸಿವೆ. ಈ ಭಾಗದಲ್ಲಿ ೧೯೭೭ ರಿಂದ ೧೯೮೦ರ ತನಕ ಪತ್ರಿಕೋದ್ಯಮ ಕುರಿತ ಪ್ರಮುಖ ವಿಷಯಗಳನ್ನು ಎರಡು ಹಂತಗಳಲ್ಲಿ ನೋಡಬಹುದಾಗಿದೆ. ತುರ್ತುಪರಿಸ್ಥಿತಿ ಕಾಲಘಟ್ಟದ ಘಟನೆಗಳು, ದೌರ್ಜನ್ಯ, ಆಡಳಿತ ವ್ಯವಸ್ಥೆಯ ಸ್ವರೂಪ, ಜನತಾ ಸರ್ಕಾರದ ವಿಚಾರಣಾ ಆಯೋಗಗಳು, ಪತ್ರಿಕೋದ್ಯಮ, ಸೆನ್ಸಾರ್‌ಷಿಪ್ ಹಾಗೂ ಪತ್ರಿಕಾ ಸ್ವಾತಂತ್ರ್ಯ ಕುರಿತ ಚರ್ಚೆಗಳು ೧೯೭೭ರ ಲೋಕಸಭಾ ಚುನಾವಣೆಯ ಘೋಷಣೆಯಿಂದ ೧೯೭೮ರ ಆರಂಭದವರೆಗೆ ಪುನರಾವರ್ತನೆಗೊಳ್ಳುತ್ತಿರುವುದು, ತುರ್ತುಪರಿಸ್ಥಿತಿಯ ವಿರುದ್ಧ ಮುಂದುವರೆದ ಹೋರಾಟದ ದನಿ. ೧೯೭೮ರ ಆರಂಭದಿಂದ ೧೯೮೦ರವರೆಗೆ ಜನತಾ ಪಕ್ಷದೊಳಗಿನ ಆಂತರಿಕ ಬಿಕ್ಕಟ್ಟು, ಆಡಳಿತದ ವೈಫಲ್ಯಗಳು, ಸಮಾನಾಂತರವಾಗಿ ಕಾಂಗ್ರೆಸ್(ಐ) ಮತ್ತು ಇಂದಿರಾ ಗಾಂಧಿ ಅವರ ರಾಜಕಾರಣ ಚರ್ಚಿತವಾಗುವುವು. ಇವುಗಳೊಳಗೆ ಅಡಗಿರುವ ವಿಚಾರಗಳೆಂದರೆ ಪ್ರಜಾಪ್ರಭುತ್ವ, ಸ್ವಾತಂತ್ರ್ಯ ರಕ್ಷಣೆಯ

ಅಗತ್ಯ ಹಾಗೂ ಮೂರನೇ ಪರ್ಯಾಯ ರಾಜಕೀಯ ಶಕ್ತಿ ಕುರಿತ ಚಿಂತನೆಗಳಾಗಿವೆ. ರಾಜಕಾರಣದಲ್ಲಿ ಉಂಟಾದ ಬದಲಾವಣೆಗಳು ಪತ್ರಿಕಾ ವರದಿಗಳ ವಸ್ತುವಿಷಯದ ಪರಿವರ್ತನೆಯ ಪ್ರಕ್ರಿಯೆಯನ್ನು ಗುರುತಿಸಬಹುದು. ಇದು ಸರ್ಕಾರ, ಸೆನ್ಸಾರ್‌ಷಿಪ್ ಮತ್ತು ಪತ್ರಿಕೋದ್ಯಮದ ನಡುವಿನ ಸಂಬಂಧ ಅರ್ಥಮಾಡಿಕೊಳ್ಳಲು ಒಳಬಾಗಿಲುಗಳನ್ನು ತೆಗೆಯುವುವು. ಇಲ್ಲಿ ಜನತಾ ಸರ್ಕಾರ ಜಾರಿತಂದ ಶ್ವೇತಪತ್ರ ಮತ್ತು ಕುಲದೀಪ್ ನಯ್ಯರ್ ಅವರ ಆಯೋಗದ ವರದಿ ಹಾಗೂ ಷಾ ವಿಚಾರಣಾ ಆಯೋಗದ ವರದಿಯಲ್ಲಿರುವ ಪತ್ರಿಕೋದ್ಯಮ ಕುರಿತ ವಿಚಾರಗಳನ್ನು ಅವಲೋಕಿಸುವ ಪ್ರಯತ್ನ ಮಾಡಿದೆ.

ಜನತಾ ಸರ್ಕಾರವು ತುರ್ತುಪರಿಸ್ಥಿತಿಯಲ್ಲಿ ಸಮೂಹ ಮಾಧ್ಯಮಗಳನ್ನು ದುರ್ಬಳಕೆಯಾಗಿರುವುನ್ನು ದಾಸ್ ಸಮಿತಿಯ ಮೂಲಕ ತನಿಖೆಗೊಳಪಡಿಸಿತು. ಈ ಸಮಿತಿಯ ವರದಿಯನ್ನು ಆಧರಿಸಿ ಶ್ವೇತಪತ್ರ ಹೊರಡಿಸಿತು. ಸಮಕಾಲೀನವಾಗಿದ್ದ ಪತ್ರಿಕಾ ಸ್ವಾತಂತ್ರ್ಯ ಸೆನ್ಸಾರ್‌ಷಿಪ್ ಕುರಿತ ಚರ್ಚೆಗಳು ಕುಲದೀಪ್ ನಯ್ಯರ್ ನೇತೃತ್ವದಲ್ಲಿ ಆಯೋಗವನ್ನು ನೇಮಿಸಲು ಪೂರಕವಾಯಿತು. ಷಾ ವಿಚಾರಣಾ ಆಯೋಗ ದಲ್ಲಿಯೂ ಪತ್ರಿಕಾ ಮಾಧ್ಯಮದ ದುರ್ಬಳಕೆ ಕುರಿತು ವಿಸ್ತೃತವಾದ ಚರ್ಚೆ ಕಂಡುಬರುವುದು. ೧೯೭೭ರ ಆಗಸ್ಟ್‌ನಲ್ಲಿ ಹೊರಡಿಸಿದ ಶ್ವೇತಪತ್ರ ಕುರಿತು

> ದಾಸ್ ಸಮಿತಿಯ ವಿವರವಾದ ಮತ್ತು ಸಮಗ್ರ ವರದಿಯನ್ನು ಶ್ವೇತಪತ್ರ ಆಧರಿಸಿದೆ. ಬಹಳಷ್ಟು ವಿಚಾರಗಳು ಸೆನ್ಸಾರ್‌ಷಿಪ್ ವ್ಯಾಪ್ತಿಯೊಳಗೆ ತುರ್ತುಪರಿಸ್ಥಿತಿ ಕಾಲದಲ್ಲೇ ತಿಳಿದಿದ್ದ ಜ್ಞಾನದ ಕೆಲವನ್ನು 'ಬಹಿರಂಗಪಡಿಸಿದೆ'. ಜನತಾ ಪಕ್ಷ ಕೆಲ ವಾರಗಳ ಹಿಂದೆ ಬಿಡುಗಡೆಗೊಳಿಸಿದ್ದ ಕೆಲವು ದಾಖಲಾತಿಗಳೇ ಶ್ವೇತಪತ್ರಕ್ಕಿಂತ ಹೆಚ್ಚು ಉತ್ತಮವಾಗಿದೆ ... ಈ ಸಾಮಾನ್ಯ ಜ್ಞಾನವನ್ನು ಅಧಿಕೃತಗೊಳಿಸಿದ್ದೆ ಶ್ವೇತಪತ್ರದ ಉತ್ತಮ ಕೆಲಸವಾಗಿದೆ. ಕಾಂಗ್ರೆಸ್ ಪಕ್ಷ ಹಾಗೂ ಮಾಹಿತಿ ಮತ್ತು ಪ್ರಸಾರ ಸಚಿವಾಲಯದ ನಡುವೆ ಸಹಜವಾಗಿ ಅಸ್ತಿತ್ವದಲ್ಲಿದ್ದ ಸಂಬಂಧಗಳನ್ನು ಕುರಿತು ಶ್ವೇತಪತ್ರ ಮತ್ತೊಂದು ಸವಿವರವನ್ನು ಬಹಿರಂಗಪಡಿಸುತ್ತಿದೆ. ಹಿಂದಿನ ಆಡಳಿತಗಾರರ ದೃಷ್ಟಿ ಪಕ್ಷ ಮತ್ತು ನಾಯಕ, ಪಕ್ಷ ಮತ್ತು ಸರ್ಕಾರ ಹಾಗೂ ರಾಷ್ಟ್ರದ ನಡುವೆ ಯಾವ ವ್ಯತ್ಯಾಸವು ಇಲ್ಲವೆನ್ನುವುದು ಚೆನ್ನಾಗಿ ತಿಳಿದಿರುವಂತದ್ದು. ಆಡಳಿತಯಂತ್ರವು ಪಕ್ಷ ಹಾಗೂ ವೈಯಕ್ತಿಕ ಕಾರಣಗಳಿಗಾಗಿ ಗಲಭೆಯಲ್ಲಾದ ಸಂದರ್ಭವನ್ನು ಕೋಮುಗೊಳಿಸಲು ಬಳಸಿರುವುದು. ಎಐಆರ್ ಕೋಡ್ ಮೂಲಕ ವಸ್ತುನಿಷ್ಠವಾಗಿ ವರ್ತಿಸುವುದು ಮೊದಲಾದವನ್ನು ತುರ್ತುಪರಿಸ್ಥಿತಿ ಪೂರ್ವದಿಂದಲೂ ಸಮರ್ಥಿಸಿ ಕೊಂಡುಬರುತ್ತಿರುವುದನ್ನು ನೋಡಬಹುದು. ತುರ್ತುಪರಿಸ್ಥಿತಿಯು ಈ ವೇಷವನ್ನು ಕೊನೆಗೊಳಿಸಿತು. ಪ್ರಧಾನ ಮಂತ್ರಿ ನೇರವಾಗಿ, ಇದರ ನೇತೃತ್ವವಹಿಸುವ ಮುಖೇನ ನಿಜವಾಗಿಯೂ ಮಾಹಿತಿ ಮತ್ತು ಪ್ರಸಾರ ಸಚಿವಾಲಯ ಕಾಂಗ್ರೆಸ್ ಪಕ್ಷದ ಉಪಕರಣವಾಗದೆ ಭಾಗವಾಗಿ ಬದಲಾಯಿತು. ಶ್ವೇತಪತ್ರವು ಮೂಲಭೂತವಾಗಿ ಅಸಮಾಧಾನಕರವಾಗಿದೆ ಎಂಬುದು ಎಲ್ಲೆಡೆ ಕೇಳಬರುತ್ತಿದೆ. ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಾದ ಸಮೂಹ ಮಾಧ್ಯಮಗಳ ದುರ್ಬಳಕೆಯನ್ನು ತೆರೆದಿಟ್ಟಿರುವುದಕ್ಕಿಂತ ಹೆಚ್ಚಾಗಿ ಮುಚ್ಚಿಟ್ಟಿರುವುದು ನಿರಾಸೆಗೊಳಿಸುವ ದಾಖಲೆ ಯನ್ನಾಗಿ ಮಾಡಿದೆ. ಇದು ಮಹತ್ತರವಾದುದು ... ಶ್ವೇತಪತ್ರವು ವ್ಯವಸ್ಥಿತವಾಗಿ ಮತ್ತು ವಿಶ್ಲೇಷಣಾತ್ಮಕವಾಗಿ ಪತ್ರಿಕೆಗಳಿಗೆ ಲಂಚಕೊಟ್ಟಿರುವ ಹಾಗೂ ಕೊಂಡುಕೊಂಡಿರುವುದನ್ನು ನೋಡುವ ಪ್ರಯತ್ನ ಮಾಡುವುದಿಲ್ಲ ... ಇದರಲ್ಲಿ ಹಿರಿಯ ಅಧಿಕಾರಿಗಳು ಮತ್ತು ಸಚಿವಾಲಯದ ಪಾತ್ರವನ್ನು ಅಡಗಿಸುತ್ತದೆ. ಅದನ್ನು ಹೇಳುವುದೂ ಇಲ್ಲ. ತುರ್ತುಪರಿಸ್ಥಿತಿ ಕಾಲಘಟ್ಟದಲ್ಲಿ ಸಚಿವಾಲಯದ ಪ್ರಮುಖ ಪ್ರಭಾವಶಾಲಿಯಾಗಿದ್ದ ಅಧಿಕಾರಿ ವರ್ಗವೆಂದರೆ ಪೊಲೀಸರು. ಈ ಶ್ವೇತಪತ್ರದ ದುರ್ಬಲ ಭಾಗವೆಂದರೆ ಸರ್ಕಾರವು ಕೆಲವು ವರ್ಗದ ಮಾಲಿಕರು ಮತ್ತು ಪತ್ರಕರ್ತರನ್ನು ಬಳಸಿಕೊಳ್ಳಲು ಯಶಸ್ವಿಯಾದರೆ. ಇಡಿ ಉದ್ಯಮದಲ್ಲಿರುವ ಮಾಲಿಕರು ಮತ್ತು ಪತ್ರಕರ್ತರನ್ನು ಶರಣಾಗತರನ್ನಾಗಿಸಿದ್ದೇವೆಂಬ ಸಾಮಾನ್ಯ ಜ್ಞಾನ ಹೊಂದಿದೆ ... ಶ್ವೇತಪತ್ರವು ಕೆಲವು ಪ್ರಸಿದ್ಧ ಪತ್ರಕರ್ತರನ್ನು ಮಾತ್ರ ಸಂದರ್ಶಿಸಿದೆ. ಆಲ್ ಇಂಡಿಯಾ ರೆಡಿಯೋ ಮತ್ತು ದೂರ ದರ್ಶನಕ್ಕೆ ಹೋಗಿ ಸರ್ಕಾರದ ಪ್ರಚಾರಕಾರ್ಯಗಳ ಕುರಿತು ನೋಡಲು ತಯಾರಿರಲಿಲ್ಲ. ಕೆಲವು ಧೈರ್ಯ ವಂತರು, ಕೆಲವು ಹೊಗಳುಭಟ್ಟರು ಮತ್ತು ಹೊಂದಾಣಿಕೆ ಮಾಡಿಕೊಂಡು ಹೋಗುವಂತಹವರು ಇನ್ನಿತರರ ಹೊಸ ಸಹಯೋಗದಲ್ಲಿ ಫಲಶ್ರುತಿ ಪಡೆದಿರುವುದನ್ನು ನೋಡಬಹುದು(ಎಡಿಟೋರಿಯಲ್ ೧೯೭೭ ಆಗಸ್ಟ್ ೬).

ನಿಯತಕಾಲಿಕೆವೊಂದರ ಪ್ರತಿಕ್ರಿಯೆಯಲ್ಲಿ ಶ್ವೇತಪತ್ರದ ಕುರಿತಂತೆ ಇದ್ದ ನಿರೀಕ್ಷೆ ಹಾಗೂ ನಿರಾಸೆಯ ರೂಪವಾಗಿದೆ. ಶ್ವೇತಪತ್ರದೊಳಗಿನ ವಿವರಗಳು ತುರ್ತುಪರಿಸ್ಥಿತಿ ಕುರಿತ ಕೃತಿಗಳು, ಲೇಖನಗಳು ಹಾಗೂ ಜನತಾ ಪಕ್ಷದ ದಾಖಲೆಗಿಂತ ಕಡಿಮೆ ಗುಣಮಟ್ಟ ಹೊಂದಿದೆ ಎಂದು ಟೀಕಿಸಲಾಗಿದೆ. ಇದರೊಂದಿಗೆ ಜನತಾ ಪಕ್ಷ ಹಿಂದಿನ ಸರ್ಕಾರಗಳ ರೀತಿಯಲ್ಲೇ ಕಾರ್ಯನಿರ್ವಹಿಸುತ್ತಿರುವುದನ್ನು ತೋರಿಸುವುದು. ಇಂತಹ ಆಲೋಚನೆಗಳನ್ನು ಸಮಕಾಲೀನವಾಗಿ ಪ್ರಕಟಗೊಳ್ಳುತ್ತಿದ್ದ ದಿ ಫೋರ್ತ್ ಎಸ್ಟೇಟ್ ಅಂಕಣದೊಳಗೆ,[೪೯] 'ವೈಟ್ ಪೇಪರ್ ಆನ್ ಮೀಡಿಯ ಮಿಸ್ಯೂಸ್' ಶೀರ್ಷಿಕೆ ಅಡಿಯಲ್ಲಿ ಹೆಚ್ಚು ವಿಸ್ತೃತವಾಗಿ ವಿಶ್ಲೇಷಿಸಲಾಗಿದೆ. ಶ್ವೇತಪತ್ರವು ಸಮೂಹ ಮಾಧ್ಯಮದ ದುರ್ಬಳಕೆಯ ಅನೇಕ ರೂಪಗಳ ವಿವರಗಳಿಗೆ ಅತ್ಯುತ್ತಮ ಉದಾಹರಣೆ ಆಗಬಹುದೆಂಬ ನಿರೀಕ್ಷೆ ಇತ್ತು. ಆದರೆ ಅತ್ಯಂತ ಸೂಕ್ಷ್ಮ ವಿಚಾರಗಳ ಒಳನೋಟ ಗಳನ್ನು ತೆರೆದಿಡುವುದಿಲ್ಲ. ಕೆಲವೊಬ್ಬರನ್ನು ಹೊರತುಪಡಿಸಿದಂತೆ, ಪತ್ರಿಕೋದ್ಯಮದವರ

ಹೇಡಿತನ ಸರ್ಕಾರಕ್ಕೆ ತಾನಾಗೇ ಪರಿಕರವಾಗಿ ಬದಲಾಯಿತು ಎಂಬ ಪ್ರತಿಕ್ರಿಯೆ ಕಾಣಬಹುದು. ಇವು ಆಡಳಿತ ವ್ಯವಸ್ಥೆಯೊಳಗೆ ಸೆನ್ಸಾರ್‌ಷಿಪ್ ಮತ್ತು ಪತ್ರಿಕಾ ಸ್ವಾತಂತ್ರ್ಯದ ವೈರುಧ್ಯಗಳು ಹೊಂದಿರುವ ನೆಲೆಯ ಸಂರಚನೆಯನ್ನು ಪ್ರಶ್ನಿಸುತ್ತಾ, ಅವಕಾಶವಾದಿತನಕ್ಕೆ ಅಸಮಧಾನವನ್ನು ವ್ಯಕ್ತಪಡಿಸಿದ ರೂಪ. ಆಡಳಿತ ಪಕ್ಷ ಬದಲಾದಲ್ಲಿ ವ್ಯವಸ್ಥೆಯಲ್ಲಿಯೂ ಬದಲಾವಣೆಗಳು ಉಂಟಾಗುತ್ತವೆ ಎಂಬ ದಟ್ಟವಾದ ನಂಬಿಕೆಯು, ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಪ್ರಭಾವಶಾಲಿಯಾಗಿ ಕಂಡುಬರುವುದು. ಇದು ಪತ್ರಿಕಾ ಸ್ವಾತಂತ್ರ್ಯವನ್ನು ವಿಸ್ತರಿಸಿ, ಸೆನ್ಸಾರ್‌ಷಿಪ್‌ನ ನಿಯಂತ್ರಣವನ್ನು ನಿಯಂತ್ರಿಸುವ ಅಥವಾ ಕಡಿಮೆಗೊಳಿಸುವ ವ್ಯವಸ್ಥೆ ರೂಪಿತಗೊಳ್ಳುತ್ತದೆ ಎಂಬ ಆಶಾಭಾವದ ಹಿನ್ನೆಲೆಯಲ್ಲಿ ಬೆಳೆದುಬಂದಿತ್ತು. ಈ ದಿಸೆಯಲ್ಲಿ ೧೯೭೭ರ ಲೋಕಸಭಾ ಪೂರ್ವದ ಜನತಾ ಪಕ್ಷದ ನಿಲುವುಗಳನ್ನು ಗಮನಿಸುವುದು ಅಗತ್ಯ.

*** *** ***

ಜನತಾ ಸರ್ಕಾರವು ತುರ್ತುಪರಿಸ್ಥಿತಿ ಪೂರ್ವದಿಂದಲೂ ಚರ್ಚೆಗೊಳಗಾಗುತ್ತಿದ್ದ ಪತ್ರಿಕಾ ಸ್ವಾತಂತ್ರ್ಯ ಮೊದಲಾದ ವಿಚಾರಗಳನ್ನು ಕುರಿತು ಕುಲದೀಪ್ ನಯ್ಯರ್ ಅವರ ನೇತೃತ್ವದಲ್ಲಿ ಆಯೋಗವೊಂದನ್ನು ನೇಮಿಸಿತ್ತು. ಕುಲದೀಪ್ ನಯ್ಯರ್ ಅವರ ಆಯೋಗ ನೀಡಿದ ವರದಿಗೆ ಬಂದ ಪ್ರತಿಕ್ರಿಯೆಯೊಂದು ಹೀಗಿದೆ:

> ಸಮಾಚಾರ್‌ನ ಮುಂದಿನ ಭವಿಷ್ಯ ನಿರ್ಧರಿಸಲು ಆಯೋಗದ ವಿಚಾರಗಳು ಯಾವುದೆ ಸಹಕಾರ ನೀಡದೇ ವಿರೋಧಭಾಸಗಳಿಂದ ಕೂಡಿದೆ. ತಣಕಾಲಿನ ಮುಗ್ಗಟ್ಟು ಅಂತಹ ಮೂರು ಏಜೆನ್ಸಿಗಳನ್ನು ನಡೆಸಲು ಕಷ್ಟಕರವಾಗುವುದು. ಪತ್ರಿಕೋದ್ಯಮದೊಳಗಿನ ಸ್ಪರ್ಧೆ ಮತ್ತು ಸ್ವಾತಂತ್ರ್ಯ ದಕ್ಷತೆಯನ್ನು ಹೆಚ್ಚಿಸುವುದಿಲ್ಲ ಎಂಬುದು ಅವರ ನಂಬಿಕೆ. ಆಯೋಗ ಏಜೆನ್ಸಿಗಳಿಗೆ ಆರ್ಥಿಕ ಸ್ವಾತಂತ್ರ್ಯ ನೀಡಲು ಸಂಪೂರ್ಣವಾಗಿ ವಿಫಲವಾಗಿದ್ದು, ಸರ್ಕಾರದ ಸಹಾಯಧನವನ್ನು ಹೆಚ್ಚಿಸಲು ಸಲಹೆ ನೀಡಿರುವುದು ವಿರೋಧಭಾಸವಾಗಿದೆ ... ಜನತಾ ಸರ್ಕಾರ ಬಂದೊಡನೆ ಹಗೆಯು ಮುಂದುವರಿದ ಭಾಗದಂತೆ ಸಮಾಚಾರ್ ಆಯೋಗ ಕುರಿತು ವರದಿ ದೆಹಲಿಯಲ್ಲಿ ಕಂಡುಬಂದಿತ್ತು. ಒಂದು ಹಂತದವರೆಗೆ ಇದು ಸರಿಯಾಗಿದೆಯಾದರೂ ಸಹ ... ಆಯೋಗ ನೀಡಿದ ವರದಿಯು ಹಿಂದಿನ ವ್ಯವಸ್ಥೆಯಲ್ಲಿ ತೀವ್ರ ಬದಲಾವಣೆಗಳನ್ನು ತರುತ್ತಿಲ್ಲ(ರಶ್ಮಿ ೧೯೭೭ ಅಕ್ಟೋಬರ್ ೧).

ಕುಲದೀಪ್ ನಯ್ಯರ್ ಅವರ ಆಯೋಗದ ವರದಿ ಕುರಿತು ಬಂದ ಪ್ರತಿಕ್ರಿಯೆ ಆಗಿದೆ. ಪತ್ರಿಕಾ ಸ್ವಾತಂತ್ರ್ಯ, ನ್ಯೂಸ್ ಏಜೆನ್ಸಿಗಳ ವಿಕೇಂದ್ರೀಕರಣ ಅಥವಾ ಖಾಸಗಿ ಬಳಕೆ, ನ್ಯೂಸ್ ಏಜೆನ್ಸಿಗೆ ಆರ್ಥಿಕ ಸ್ವಾತಂತ್ರ್ಯ ನೀಡುವ ವಿಚಾರಗಳು ಅಮೇರಿಕ ಮತ್ತು ಪಾಶ್ಚಾತ್ಯ ರಾಷ್ಟ್ರಗಳಿಂದ ಪ್ರಭಾವಿತಗೊಂಡಿದ್ದವು. ಈ ಸಂಬಂಧವಾಗಿ ಮೂರು ವಿಚಾರಗಳ ಚರ್ಚೆ ಮುಖ್ಯವಾಗಿ ಕಂಡುಬಂದಿತು. ತುರ್ತುಪರಿಸ್ಥಿತಿ ಪೂರ್ವದಲ್ಲಿ ಪತ್ರಿಕಾ ಏಜೆನ್ಸಿಗಳನ್ನು ಒಗ್ಗೂಡಿಸುವ ಮೂಲಕ ಬೆಳೆದುಬಂದ 'ಸಮಾಚಾರ್' ಅಧಿಕೃತ ಸುದ್ದಿಮೂಲವಾಗಿತ್ತು. ಖಾಸಗಿ ಸುದ್ದಿಮೂಲಗಳನ್ನು ಹೊಂದಲು ಅವಕಾಶವಿರದ ಕಾರಣ, ರಾಷ್ಟ್ರದಾದ್ಯಂತ ಸುದ್ದಿಪತ್ರಿಕೆಗಳು ಸಮಾಚಾರ್‌ನ್ನೇ ಅವಲಂಬಿಸಬೇಕಾಗಿದ್ದ ಅನಿವಾರ್ಯತೆ ಇತ್ತು. ಇಂತಹ ಏಕ ಸುದ್ದಿಮೂಲದ ಬದಲು, ಪರ್ಯಾಯ ವ್ಯವಸ್ಥೆಗಳಿಗೆ ಆಯೋಗದ ವರದಿಯಲ್ಲಿ ಅವಕಾಶ ದೊರೆಯಬಹುದು ಎಂಬ ಆಶಯ ಕರಗಿರುವುದು ಮೊದಲ ವಿಚಾರವಾಗಿದೆ. ಎರಡನೆಯ ವಿಚಾರ, ಖಾಸಗಿ ಸುದ್ದಿಮೂಲಗಳ ನಿರಾಕರಣೆಗೆ ಪತ್ರಿಕೋದ್ಯಮದಲ್ಲಿರುವ ಸ್ಪರ್ಧೆ ಉದ್ಯಮದ ಸ್ವರೂಪ ಹೊಂದಿರುವ ಚಿಂತನೆಗಳನ್ನು ಕೇಂದ್ರೀಕರಿಸಿದೆ. ಏಜೆನ್ಸಿಗೆ ಆರ್ಥಿಕ ಸ್ವಾಯತ್ತತೆಯ ಬದಲು ಸರ್ಕಾರದ ಸಹಾಯಧನದ ಹೆಚ್ಚಳದ ಸಲಹೆ ನಿರಾಸೆ ಉಂಟುಮಾಡಿರುವುದು. ಪತ್ರಿಕೋದ್ಯಮ ಪುನಃ ಸರ್ಕಾರದ ಸಂಪೂರ್ಣ ನಿಯಂತ್ರಣಕ್ಕೊಳಪಡುವ ಸಾಧ್ಯತೆಯನ್ನು ಹೆಚ್ಚಿಸಿದ್ದಲ್ಲದೇ, ಇದರಿಂದ ತೀವ್ರರೂಪದ ಬದಲಾವಣೆಗಳುಂಟಾಗುವುದಿಲ್ಲ ಎಂಬ ಅಭಿಮತ ಕಾಣಬಹುದು. ಮೂರನೆಯದಾಗಿ, ಆಯೋಗದ ವರದಿಯಲ್ಲಿ ಸಮಾಚಾರ್‌ನ್ನು ವಿಸರ್ಜಿಸಿ ಇಂಗ್ಲಿಶ್ ಭಾಷೆ ಮತ್ತು ಭಾರತೀಯ ಭಾಷೆಗಳ ಏಜೆನ್ಸಿಯನ್ನು ಆರಂಭಿಸ ಬೇಕು ಎಂಬ ಸಲಹೆ. ವಿದೇಶಗಳಿಗೆ ಮಾಹಿತಿ ನೀಡಲು ಒಟ್ಟಾಗಿ ಸಹಕರಿಸ ಬೇಕೆಂಬ ವಿಚಾರವು ಭಾರತೀಯ ಭಾಷೆಗಳೊಡನೆ ಇಂಗ್ಲಿಶ್ ಭಾಷೆಯನ್ನು ಸೇರಿಸಿತ್ತು. ಇದರೊಂದಿಗೆ ಭಾರತೀಯ ಭಾಷೆಗಳಲ್ಲಿ ಹಿಂದಿ ಭಾಷೆಯ ಸುದ್ದಿ ಏಜೆನ್ಸಿಗಳಿಗೆ ಅಗ್ರ ಸ್ಥಾನ ನೀಡಲಾಗಿತ್ತು. ಮುಂದಿನ ದಿನಗಳಲ್ಲಿ ಭಾರತೀಯ ಭಾಷೆಗಳ ಏಜೆನ್ಸಿಗಳು ಕೇವಲ ಹಿಂದಿ ಭಾಷಾ ಏಜೆನ್ಸಿ ಆಗುವ ಸಾಧ್ಯತೆಯನ್ನು ತಳ್ಳಿಹಾಕುವಂತಿರಲ್ಲಿಲ್ಲ ಎಂಬ ಚಿಂತನೆಗಳನ್ನು ಕಾಣಬಹುದು. ಆಯೋಗದ ವರದಿ ಅಂಗೀಕಾರವಾದರೆ, ಸಬ್ಸಿಡಿಯ ಬೃಹತ್ ಪ್ರಮಾಣವು ಹಿಂದಿ ಭಾಷಾ ಪತ್ರಿಕೆಗಳಿಗೆ ದೊರಕುವುದು. ಉಳಿದ ಭಾರತೀಯ ಭಾಷೆಗಳ ಸ್ಥಿತಿ ಕುರಿತ ಚರ್ಚೆಗಳು ಮುಖ್ಯವಾಗಿ ಮೂಡಿಬಂದಿವೆ. ಭಾರತೀಯ ಭಾಷಾ ಪತ್ರಿಕೆ

ಕುರಿತ ಚಿಂತನೆಗಳ ಹಿಂದೆ ಪ್ರಾದೇಶಿಕ ರಾಜಕಾರಣ ಮತ್ತು ಅಧಿಕಾರ ಕೇಂದ್ರೀಕರಣದ ನೆಲೆಗಳು ಬೇರುಬಿಟ್ಟಿವೆ. ಹೊಸ ಸರ್ಕಾರವು ಸುದ್ದಿ ಮಾಧ್ಯಮವನ್ನು ಸರ್ಕಾರದ ಸಬ್ಸಿಡಿಗಳಿಂದ ಮುಕ್ತಗೊಳಿಸಲು ಸಾರ್ವಜನಿಕವಾಗಿ ಒಪ್ಪಿಕೊಂಡಿತ್ತು. ಆಯೋಗದ ವರದಿಯು ಹಿಂದಿನ ಸರ್ಕಾರದಲ್ಲಿದ್ದ ವ್ಯವಸ್ಥೆಯನ್ನೇ ಸಣ್ಣಪುಟ್ಟ ಬದಲಾವಣೆಗಳೊಡನೆ ಜಾರಿಗೊಳಿಸುತ್ತಿದ್ದು, ಇದರಿಂದಾಗಿ ಸರ್ಕಾರದ ನಿಯಂತ್ರಣ ಹಾಗೂ ಪತ್ರಿಕಾ ಸ್ವಾತಂತ್ರ್ಯದ ಸ್ವರೂಪದಲ್ಲಿ ಬದಲಾವಣೆಗಳನ್ನು ಉಂಟುಮಾಡುತ್ತಿರಲ್ಲಿಲ್ಲ. ಇದರೊಡನೆ ಪತ್ರಿಕೆ ಲಾಭದಾಯಕ ಉದ್ಯಮ ಎಂಬದನ್ನು ಆಯೋಗದ ವರದಿ ಪೂರ್ಣವಾಗಿ ಗಮನಿಸಿಲ್ಲ ಎಂಬುದು ಆಯೋಗ ಮಂಡಿಸಿದ್ದ ವರದಿ ಕುರಿತ ಚರ್ಚೆಗಳಲ್ಲಿ ಕೇಂದ್ರವಿಚಾರಗಳಾಗಿವೆ. ೧೯೭೭ರ ಲೋಕಸಭಾ ಚುನಾವಣಾ ಘೋಷಣೆಯ ಆರಂಭದಿಂದ ೧೯೭೮ರ ಆರಂಭದವರೆಗೆ ಜನತಾ ಸರ್ಕಾರದ[೩೦] ಕಾರ್ಯನೀತಿಗಳ ಪರವಾದ ಚರ್ಚೆ ಮತ್ತು ವರದಿಗಳು ಪತ್ರಿಕೆಗಳಲ್ಲಿ ಕಂಡುಬರುವುವು. ಜನತಾ ಪಕ್ಷವು ತುರ್ತುಪರಿಸ್ಥಿತಿ ಕಾಲದ ಅಧಿಕಾರ ದುರ್ಬಳಕೆ, ಮಾಧ್ಯಮಗಳ ಮೇಲಿನ ಸೆನ್ಸಾರ್‌ಶಿಪ್ ಹಾಗೂ ದೌರ್ಜನ್ಯ ಮೊದಲಾದವುಗಳ ವಿರುದ್ಧ ಆಯೋಗ ನೇಮಿಸಿತ್ತು. ಈ ಆಯೋಗವು ಸಮೂಹ ಮಾಧ್ಯಮಗಳನ್ನು ಪ್ರತ್ಯೇಕವಾಗಿ ವಿಚಾರಣೆಗೊಳಪಡಿಸಿ, ವರದಿಯಲ್ಲಿರುವ ಈ ಕುರಿತ ದಾಖಲಾತಿಗಳನ್ನು ಗಮನಿಸುವುದು ಅಗತ್ಯ.

*** *** ***

ಷಾ ವಿಚಾರಣಾ ಆಯೋಗದಲ್ಲಿ ಚರ್ಚಿತವಾಗಿರುವ ಪ್ರಮುಖ ವಿಚಾರಗಳಲ್ಲಿ ಸಮೂಹ ಮಾಧ್ಯಮಗಳ ದುರ್ಬಳಕೆಯು ಒಂದು. ಷಾ ಆಯೋಗದ ಮೊದಲ ಮಧ್ಯಂತರ ವರದಿಯಲ್ಲಿ 'ದಿ ವರ್ಕಿಂಗ್ ಮೀಡಿಯ ಅಂಡರ್ ದಿ ಇನ್‌ಫರ್ಮೇಷನ್ ಅಂಡ್ ಬ್ರಾಡ್‌ಕಾಸ್ಟಿಂಗ್ ಮಿನಿಸ್ಟ್ರಿ ಡ್ಯೂರಿಂಗ್ ದಿ ಎಮರ್ಜೆನ್ಸಿ' ಅಡಿಯಲ್ಲಿ ಮುಖ್ಯವಾಗಿ ಮೂರು ವಿಚಾರಗಳ ಚರ್ಚೆಯನ್ನು ಕಾಣಬಹುದು. ಅವುಗಳೆಂದರೆ, ಕಾಂಗ್ರೆಸ್ ಪಕ್ಷದ ಪ್ರಣಾಳಿಕೆಯ ಅನುವಾದ, ಪೋಸ್ಟರ್‌ಗಳ ಮುದ್ರಣ ಮತ್ತು ಡಿಎವಿಪಿ ಕಾಯ್ದೆ. ಇದರಲ್ಲಿ ತುರ್ತುಪರಿಸ್ಥಿತಿ ಕಾಲದ ಸೆನ್ಸಾರ್‌ಷಿಪ್ ಹೇರಿಕೆ, ಅದರ ಸ್ವರೂಪ ಹಾಗೂ ಪ್ರತಿನಿತ್ಯದ ಕಾರ್ಯವಿಧಿಗಳ ಪ್ರಕ್ರಿಯೆ ಇದಾಗಿದೆ. ಇದರೊಡನೆ ಪತ್ರಿಕಾ ಕಛೇರಿಗಳಿಗೆ ವಿದ್ಯುತ್ ಕಡಿತಗೊಳಿಸಿದ್ದು, ಡಿಐಆರ್ ಕಾಯ್ದೆ ಮತ್ತು ಚುನಾವಣಾ ಸಂದರ್ಭದಲ್ಲಿ ಸೆನ್ಸಾರ್‌ಷಿಪ್ ಹೊಂದಿದ್ದ ಸ್ವರೂಪ, ಅದರ ಪ್ರಕ್ರಿಯೆಗಳಿವೆ. ಡಿಎವಿಪಿ ಕಾಯ್ದೆಯ ಅಡಿಯಲ್ಲಿ ಸರ್ಕಾರಕ್ಕೆ ಪತ್ರಿಕೆಗಳು ನೀಡುವ ಸಹಕಾರದ ಆಧಾರದ ಮೇಲೆ ಅನೇಕ ಗುಂಪುಗಳನ್ನು ಮಾಡಲಾಗಿತ್ತು. ಸರ್ಕಾರ ಮತ್ತು ಪತ್ರಿಕೆಗಳ ಸಂಬಂಧದ ಆಧಾರದ ಮೇಲೆ ಪತ್ರಿಕೆ ಮತ್ತು ಪತ್ರಕರ್ತರ ಪಟ್ಟಿ ಕಂಡುಬರುವುದು. ಇದು ಮಾಧ್ಯಮಗಳನ್ನು ನಿಯಂತ್ರಿಸಲು ಪೂರಕವಾದ ಪರಿಕರವಾಗಿ ಮಾರ್ಪಟ್ಟಿತು. ಇದರೊಡನೆ ಸಮಾಚಾರ್‌ನ ಸೃಷ್ಟಿ, ಅದರ ಕಾರ್ಯನಿರ್ವಹಣೆಯ ವಿಧಿ ಹಾಗೂ ಪತ್ರಕರ್ತರಿಗೆ ನೀಡಿದ ತೊಂದರೆ ಮೊದಲಾದವುಗಳು ಚರ್ಚಿತವಾಗಿವೆ. ಎರಡನೆ ಮಧ್ಯಂತರ ವರದಿಯಲ್ಲಿ ಸಮಕಾಲೀನ ಘಟನೆಗಳ ಹಿನ್ನೆಲೆಯಲ್ಲಿ ವ್ಯಕ್ತಿಗಳ ವಿಚಾರಣೆ ಕಂಡುಬರುವುದು. ಇವೆಲ್ಲವೂ ಷಾ ಆಯೋಗದ ವರದಿಗಳಲ್ಲಿರುವ ಪತ್ರಿಕೋದ್ಯಮ ಮತ್ತು ಸಮೂಹ ಮಾಧ್ಯಮಗಳ ಕುರಿತ ವಿವರಣೆಯಾಗಿದೆ. ಈ ವರದಿಯಲ್ಲಿನ ಬಹುತೇಕ ವಿಚಾರ ತುರ್ತುಪರಿಸ್ಥಿತಿ ನಂತರದಲ್ಲಿ ಪ್ರಕಟಗೊಂಡ ಕೃತಿಗಳಲ್ಲಿರುವ 'ಪತ್ರಿಕೋದ್ಯಮ ಮತ್ತು ಸರ್ಕಾರ' ಕುರಿತ ವಿವರಗಳ ಸಾರರೂಪವಾಗಿದೆ. ಸಮಕಾಲೀನ ರಾಜಕಾರಣ, ಚುನಾವಣೆ ಮತ್ತು ಪತ್ರಿಕೋದ್ಯಮದ ಸಂಬಂಧಗಳ ಕುರಿತ ಅಧಿಕೃತ ವರದಿ ಇದಾಗಿದೆ. ಆದರೆ ಈ ವರದಿಯ ಪ್ರಭಾವ ಪತ್ರಿಕೋದ್ಯಮದ ಸ್ವರೂಪ ಹಾಗೂ ಕಾರ್ಯವಿಧಿಗಳ ಮೇಲೆ ಹೆಚ್ಚು ಪರಿಣಾಮ ಬೀರಲ್ಲಿಲ್ಲ. ಮಧ್ಯಂತರ ವರದಿಗಳು ಬರುವ ಹೊತ್ತಿಗೆ ಪತ್ರಿಕೋದ್ಯಮದ ಸ್ವರೂಪದ ಚರ್ಚೆಗಳು ತೀವ್ರತೆ ಕಳೆದುಕೊಂಡಿದ್ದದ್ದು ವಿಪರ್ಯಾಸ.

*** *** ***

ಈ ಮೇಲೆ ಚರ್ಚಿಸಿದ ಮೂರು ವರದಿಗಳು ಜನತಾ ಸರ್ಕಾರ ನೇಮಿಸಿದ ಆಯೋಗಗಳಿಂದ ರೂಪಿತಗೊಂಡಿವೆ. ತುರ್ತುಪರಿಸ್ಥಿತಿ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ನಿರಂಕುಶಾಧಿಕಾರದ ಲಕ್ಷಣಗಳನ್ನು ಹೊಂದಿರುವ ಆಡಳಿತ ಘಟ್ಟ. ಈ ಸಂದರ್ಭದಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆ ಮತ್ತು ಸ್ವಾತಂತ್ರ್ಯದ ರಕ್ಷಣೆಗಾಗಿ ಹೋರಾಟ ನಡೆಸಿದ ಪ್ರಮುಖ ವಲಯಗಳಲ್ಲಿ ಪತ್ರಕರ್ತರು ಹಾಗೂ ರಾಜಕೀಯ ವಲಯಗಳೊಡನೆ

ಸಂಪರ್ಕವಿದ್ದವರನ್ನು ನೋಡಬಹುದಾಗಿದೆ. ೧೯೭೭ರ ಲೋಕಸಭಾ ಚುನಾವಣೆ ತುರ್ತುಪರಿಸ್ಥಿತಿಯನ್ನು ರದ್ದುಗೊಳಿಸಿದ್ದಲ್ಲದೇ ಮೊದಲ ಕಾಂಗ್ರೇಸೇತರ ಪಕ್ಷ ಅಧಿಕಾರ ಪಡೆಯಲು ಸಹಕಾರಿಯಾಯಿತು. ಜನತಾ ಸರ್ಕಾರದಲ್ಲಿದ್ದ ಬಹುತೇಕರು ತುರ್ತುಪರಿಸ್ಥಿತಿಯನ್ನು ಪ್ರಜಾಪ್ರಭುತ್ವದ ವಿರೋಧಿ ಹಿನ್ನೆಲೆಯಲ್ಲಿ ವಿರೋಧಿಸಿ ಪ್ರತಿಭಟನೆಗಳಲ್ಲಿ ಪಾಲ್ಗೊಂಡಿದ್ದವರು. ಜನತಾ ಸರ್ಕಾರ ಈ ದಿಸೆಯಲ್ಲಿ ಆಯೋಗಗಳನ್ನು ನೇಮಿಸಿತಾದರೂ, ಅದರ ವರದಿಗಳು ಅಸಮಧಾನಕ್ಕೆ ಒಳಗಾಗಿರುವುದನ್ನು ನೋಡಬಹುದು. ಹಿಂದಿನ ಸರ್ಕಾರದ ಸೆನ್ಸಾರ್‌ಷಿಪ್ ಮತ್ತು ಪತ್ರಿಕೋದ್ಯಮದ ನೀತಿಗಳಲ್ಲಿ ಹೆಚ್ಚಿನ ವ್ಯತ್ಯಾಸಗಳಿಲ್ಲದಿರುವುದು ಮುಖ್ಯವಾಗಿದೆ. ೧೯೭೦ರ ದಶಕದ ಆರಂಭದಿಂದ ಕಂಡುಬರುತ್ತಿದ್ದ ಪತ್ರಿಕಾ ಸ್ವಾತಂತ್ರ್ಯ ಮತ್ತು ಸೆನ್ಸಾರ್‌ಷಿಪ್ ಕುರಿತ ಚರ್ಚೆಗಳು ೧೯೭೮ರ ಮಧ್ಯದ ವೇಳೆಗೆ ನೆಲೆ ಕಳೆದುಕೊಳ್ಳುವುವು. ಇದರೊಡನೆ ಪತ್ರಿಕಾರಂಗದಲ್ಲಿಯೂ ಗುರುತರ ಬದಲಾವಣೆಗಳು ಬೆಳೆದುಬರುವುದನ್ನು ನೋಡಬಹುದು. ಈ ಸಂಬಂಧ ಸಮಕಾಲೀನ ರಾಜಕಾರಣ ಹಾಗೂ ಪತ್ರಿಕೋದ್ಯಮದ ನೆಲೆಗಳನ್ನು ಅವಲೋಕಿಸುವ ಅಗತ್ಯವಿದೆ.

### ೪.೨.೨.೩.೧.೨. ರಾಜಕಾರಣ ಮತ್ತು ಪತ್ರಿಕೋದ್ಯಮ

ಪತ್ರಿಕೋದ್ಯಮ ಲಾಭ ಗಳಿಸುವ ಒಂದು ಉದ್ಯಮ. ಜೊತೆಗೆ ಸಮಕಾಲೀನ ರಾಜಕೀಯ ಮತ್ತು ಸಮಾಜದ ನಡುವಿನ ಸಂವಾದವನ್ನು, ಅದರ ಪ್ರತಿಕ್ರಿಯೆಗಳನ್ನು ದಾಖಲಿಸಲಿರುವ ಬೃಹತ್ ವೇದಿಕೆಯೂ ಆಗಿದೆ. ರಾಜಕೀಯ ಸ್ಥಿತ್ಯಂತರಗಳು ಪತ್ರಿಕೋದ್ಯಮದ ಸ್ವರೂಪದ ಮೇಲೆ ಉಂಟುಮಾಡುವ ಪರಿಣಾಮಗಳು ಗಮನ ಸೆಳೆಯುವುದು. ಈ ದಿಸೆಯಲ್ಲಿ ತುರ್ತುಪರಿಸ್ಥಿತಿಯೋತ್ತರ ರಾಜಕಾರಣ ಹಾಗೂ ಪತ್ರಿಕೋದ್ಯಮದ ನೆಲೆಗಳನ್ನು ಅವಲೋಕಿಸಲು ಪ್ರಯತ್ನ ಮಾಡಲಾಗಿದೆ.

"ರಾಜಕೀಯೇತರ ರಂಗಗಳಲ್ಲಿ ಭ್ರಷ್ಟಾಚಾರ–೧, ಪತ್ರಿಕೋದ್ಯಮ ಹಾಗೂ ಭ್ರಷ್ಟಾಚಾರ – ಒಂದು ಟಿಪ್ಪಣಿ"(ವೆಂಕಟಸುಬ್ಬರಾವ್ ೧೯೭೯: ೧) ಎಂಬ ಲೇಖನದಲ್ಲಿ ಪತ್ರಿಕಾರಂಗದ ಆದರ್ಶ, ಸೇವಾ ಮನೋಭಾವ, ಸುದ್ದಿ ಸಂವಹನೆಯ ಹಿನ್ನೆಲೆಯಲ್ಲಿ ಉಂಟಾಗಿರುವ ಬದಲಾವಣೆಗಳು ಹಾಗೂ ಭ್ರಷ್ಟಾಚಾರವನ್ನು ಚರ್ಚಿಸಲಾಗಿದೆ. ಪತ್ರಿಕಾರಂಗವನ್ನು ಉದ್ಯಮಕ್ಕಿಂತ ಹೆಚ್ಚಾಗಿ ಸೇವೆಯಾಗಿ ಪರಿಗಣಿಸಿದ್ದ ವಿಚಾರದಲ್ಲಿ ತುರ್ತುಪರಿಸ್ಥಿತಿಯೋತ್ತರದ ಬದಲಾವಣೆಗಳು ಮುಖ್ಯವಾಗಿರುವುದು. ಈ ದಿಸೆಯಲ್ಲಿ ಸಮಕಾಲೀನವಾಗಿ ರಾಷ್ಟ್ರೀಯ ನೆಲೆಯಲ್ಲಿ ಕಂಡುಬಂದ ಚರ್ಚೆಯ ಆಯಾಮವೊಂದು ಹೀಗಿದೆ:

> ಭಾರತೀಯ ಸುದ್ದಿ ಪತ್ರಿಕೆಗಳ ಕ್ರಾಂತಿ ಸಣ್ಣದಾಗಿದ್ದು, ಕಡಿಮೆ ಅಭಿವೃದ್ಧಿ ಹೊಂದಿದ್ದು ಮತ್ತು ಹೆಚ್ಚು ಅನುಭವ ಹೊಂದಿರದಿದ್ದರೂ, ಇದು ಅಮೆರಿಕಾದ ಪತ್ರಿಕೋದ್ಯಮದಲ್ಲಿ ಅದರಲ್ಲೂ ಪತ್ರಿಕೆಗಳ ಮೇಲಿನ ಒಡೆತನದ ಹಿನ್ನೆಲೆ ಅದನ್ನು ಮೀರಿದೆ ... ೧೯೭೩ ರಿಂದ ೧೯೭೮ರ ನಡುವೆ, ಭಾರತದ ಪತ್ರಿಕಾ ಪ್ರಸಾರ ಶೇ.೧ ರಿಂದ ಶೇ.೫ಕ್ಕೇರಿದೆ ಮತ್ತು ಮೊದಲ ೧೦ ಪತ್ರಿಕೆಗಳಲ್ಲಿ ಇದು ಶೇ.೫.೭೬ರಷ್ಟಿದೆ. ರಾಷ್ಟ್ರದ ವಾರ್ಷಿಕ ಪ್ರಸಾರದ ವಿಸ್ತರಣೆ ೩.೨ರಷ್ಟು ಹೆಚ್ಚಳಗೊಂಡಿದೆ(ಚೋಪ್ರಾ ೧೯೮೦: ೧೬೫೬).

ಭಾರತದ ಪತ್ರಿಕೋದ್ಯಮದ ಉತ್ಪಾದನೆ ಮತ್ತು ಬೇಡಿಕೆಯಲ್ಲಾಗಿರುವ ಹೆಚ್ಚಳದ ವಿವರ. ಇದು ರಾಜಕೀಯ ಸ್ಥಿತ್ಯಂತರವು ಪತ್ರಿಕೋದ್ಯಮದ ಬೆಳವಣಿಗೆಗೆ ಪೂರಕವಾಗಿರುವುದನ್ನು ಸ್ಪಷ್ಟಪಡಿಸುತ್ತಿರುವುದು. ಅದರಲ್ಲಿಯೂ ವಿಶೇಷವಾಗಿ ದೊಡ್ಡ ಪತ್ರಿಕೋದ್ಯಮಿಗಳಿಗೆ ಹೆಚ್ಚಿನ ಲಾಭ ಉಂಟುಮಾಡಿತ್ತು. ಸಮಕಾಲೀನವಾಗಿ ಚರ್ಚಿತವಾಗುತ್ತಿದ್ದ ಪತ್ರಿಕೋದ್ಯಮದ ಸ್ವರೂಪ ಮತ್ತು ಪತ್ರಿಕಾ ಸ್ವಾತಂತ್ರ್ಯ ಕುರಿತು ಚೋಪ್ರಾ ಅವರು 'ಸುದ್ದಿಪತ್ರಿಕೆಗಳು ಸ್ವಂತ ಹಿತಾಸಕ್ತಿಗಾಗಿ ರಾಷ್ಟ್ರ ನಾಯಕರನ್ನು ಬಿಂಬಿಸುತ್ತವೆ. ಮುಖ್ಯಧಾರೆಯ ಘಟನೆಗಳು ಮತ್ತು ಅವಶ್ಯಕತೆಗಳನ್ನು ವಿಸ್ತೃತವಾಗಿ ಸಮೂಹಗಳಿಗೆ ಪ್ರಸಾರ ಮಾಡುವ ಮಾಧ್ಯಮ. ಪತ್ರಿಕೆಗಳನ್ನು ಸ್ವಾತಂತ್ರ್ಯದ ಮೇಲಿನ ಅತಿಕ್ರಮಣ ವಿರೋಧಿಸಲು ಬಿಡುವುದಿಲ್ಲ' ಎಂದು ಪತ್ರಿಕೋದ್ಯಮದ ಒಡೆತನ ಬದಲಾಗುವ ಅವಶ್ಯಕತೆಯನ್ನು ವಿವರಿಸುವರು. ಪತ್ರಿಕೋದ್ಯಮಿಗಳು ಮತ್ತು ರಾಜಕಾರಣದ ನಡುವಿನ ಪರಸ್ಪರ ಸಂಬಂಧದ ಒಳನೋಟವನ್ನು ತೆರೆದಿಡುವುದು. ಪತ್ರಿಕಾ ಪ್ರಸಾರದ ಹೆಚ್ಚಳ ಉದ್ಯಮದ ವಿಸ್ತರಣೆಯನ್ನು ಸೂಚಿಸುವುದು. ಈ ಸಂಬಂಧ ರಾಬಿನ್ ಜೆಫ್ರಿ ಅವರು '೧೯೭೦ರ ದಶಕದ ಉತ್ತರಾರ್ಧದಿಂದ ಪ್ರಪಂಚದ ಬೇರೆ ಯಾವ ದೇಶದಲ್ಲಿಯೂ, ಯಾವ ಖಂಡದಲ್ಲಿಯೂ ಸುದ್ದಿ ಪತ್ರಿಕಾ ಮಾಧ್ಯಮ ಇಷ್ಟು ಬೆಳೆದಿಲ್ಲ ಮತ್ತು ಸಂಕೀರ್ಣವಾಗಿಲ್ಲ. ವಿಶೇಷವಾಗಿ ಪ್ರಾದೇಶಿಕ ಭಾಷಾವಾರು ದೈನಂದಿನ

ಪತ್ರಿಕೆಗಳು ಗಮನಾರ್ಹ ಬೆಳವಣಿಗೆ ಕಂಡಿವೆ. ರಾಜಕೀಯದ ಬಗೆಗಿನ ಕುತೂಹಲ, ಜಾಗೃತಿ ಮತ್ತು ಸಾಕ್ಷರತೆಯ ಹೆಚ್ಚಳ' ಪ್ರಮುಖ ಕಾರಣಗಳೆಂದು ಗುರುತಿಸುವರು. ತುರ್ತುಪರಿಸ್ಥಿತಿ ನಂತರದ ಬೆಳವಣಿಗೆ ಮತ್ತು ೧೯೮೦ರ ಮಧ್ಯಂತರ ಲೋಕಸಭಾ ಚುನಾವಣೆಯ ಪರಿಣಾಮಗಳು ಬೃಹತ್ ಪ್ರಮಾಣದಲ್ಲಿ ಸುದ್ದಿ ಪತ್ರಿಕೆಗಳು ಬದಲಾವಣೆಗೊಳ್ಳಲು ಕಾರಣವಾದವು. ಈ ನಿಟ್ಟಿನಲ್ಲಿ ಕಂಡುಬಂದ ಎರಡು ಪ್ರಮುಖ ಗುಣಗಳೆಂದರೆ, ಪತ್ರಕರ್ತರ ನೇಮಕದಲ್ಲಿ ಕರಾರು ಪದ್ಧತಿ ಆರಂಭವಾಗಿ ಎರಡು – ಮೂರು ವರ್ಷಗಳ ಕರಾರಿನ ಮೇಲೆ ಕೆಲಸಕ್ಕೆ ತೆಗೆದುಕೊಳ್ಳುವ ವ್ಯವಸ್ಥೆಯನ್ನು ಪರಿಚಯಿಸಲಾಯಿತು. ಎರಡನೆಯದು, ಟ್ಯಾಬ್ಲಾಯಡ್[೩೧] ಲಕ್ಷಣಗಳು ಆರಂಭವಾಗಿ ಪತ್ರಕರ್ತರು ಮನೆಯಿಂದಲೆ ಹೊಸ ಶೈಲಿಯ ಪತ್ರಿಕೋದ್ಯಮ ಆರಂಭಿಸಿದರು. ವರದಿಗಳ ಶೀರ್ಷಿಕೆಯಲ್ಲಿ ಹರಟೆ ಮತ್ತು ಬದ್ಧತೆಯ ನಡುವಿನ ವ್ಯತ್ಯಾಸಗಳನ್ನು ಇದು ಮುರಿಯಿತು. ನಿಧಾನವಾಗಿ ಸುದ್ದಿಪತ್ರಿಕೆಗಳ ಮೇಲೂ ಪ್ರಭಾವ ಉಂಟಾಯಿತು. ಇದು ಪತ್ರಿಕಾರಂಗ ಮತ್ತು ಪತ್ರಿಕೋದ್ಯಮದ ನಡುವಿನ ಅಂತರವನ್ನು ಗುರುತಿಸಲಾರದಷ್ಟು ಕಿರಿದಾಗಿಸಿತು. ಸೇವಾ ಮನೋಭಾವ, ಆದರ್ಶಗಳು ನಿಧಾನವಾಗಿ ಕಣ್ಮರೆಯಾಗಿ ಉದ್ಯಮ ಹಾಗೂ ವೃತ್ತಿಯನ್ನಾಗಿ ಪರಿವರ್ತಿಸಿತು.

ಸಮಕಾಲೀನ ಕರ್ನಾಟಕದ ಚಿಂತನೆಗಳನ್ನು ಪ್ರತ್ಯೇಕವಾಗಿ ಗುರುತಿಸುವುದು ಸುಲಭಸಾಧ್ಯವಾಗಿರದೆ, ಕಷ್ಟಕರವಾಗಿದೆ. ರಾಷ್ಟ್ರೀಯ ನೆಲೆಗಟ್ಟಿನ ಚಿಂತನೆಗಳ ಪುನಾರಾವರ್ತನೆಯೇ ಹೆಚ್ಚಾಗಿದೆ. ಆದರೆ ಪತ್ರಿಕೋದ್ಯಮದ ಸ್ವರೂಪದ ಚರ್ಚೆಗಳು ಸಾಹಿತ್ಯಿಕ ನಿಯತಕಾಲಿಕೆಗಳಲ್ಲಿ ಅಧಿಕವಾಗಿರುವುದು ವಿಶೇಷವಾಗಿದೆ. ಅದರಲ್ಲಿಯೂ ಸಾಹಿತ್ಯ ಲೋಕದ ಸ್ವರೂಪ ಮತ್ತು ರಾಜಕಾರಣದ ವಿಚಾರಗಳು ಪತ್ರಿಕೋದ್ಯಮದ ನೆಲೆಯಲ್ಲಿ ಅಧಿಕವಾಗಿದೆ. ೧೯೮೦ರ ನಂತರ ಕನ್ನಡ ಭಾಷೆಯಲ್ಲಿ ಸಣ್ಣ ಪತ್ರಿಕೆಗಳು ಮತ್ತು ಟ್ಯಾಬ್ಲೋಯಿಡ್ ಲಕ್ಷಣದ ಪತ್ರಿಕೆಗಳು ಹೆಚ್ಚಾಗತೊಡಗಿದವು. ಪ್ರಾದೇಶಿಕ ರಾಜಕಾರಣದ ಹಿನ್ನೆಲೆಯಲ್ಲಿ ಸುದ್ದಿ ರೂಪುಗೊಳ್ಳುತ್ತಿದ್ದ ಸ್ವರೂಪದಲ್ಲಿ ಕೆಲವು ಬದಲಾವಣೆಗಳನ್ನು ಗುರುತಿಸಬಹುದು. ೧೯೭೯ರಲ್ಲಿ ಅರಸು ಮತ್ತು ಇಂದಿರಾ ಗಾಂಧಿ ಅವರ ನಡುವೆ ಬಿಕ್ಕಟ್ಟು ಕಂಡುಬಂದ ತರುವಾಯದಲ್ಲಿ ಸಾಪ್ತಾಹಿಕಗಳು, ಸುದ್ದಿಪತ್ರಿಕೆಗಳಲ್ಲಿ 'ಅರಸು' ಕುರಿತ ವರದಿಗಳ ಧ್ವನಿ ಬದಲಾಗಿದೆ. ತುರ್ತುಪರಿಸ್ಥಿತಿ ವಿರೋಧಿ ಭಾವ ಹಾಗೂ ನಂತರದ ರಾಜಕೀಯ ಸ್ಥಿತ್ಯಂತರ ಮುಖ್ಯ ಪಾತ್ರ ನಿರ್ವಹಿಸಿದೆ. ಇವು ಸಮಕಾಲೀನ ರಾಜಕಾರಣ ಮತ್ತು ಪತ್ರಿಕೋದ್ಯಮದ ನೆಲೆಗಳ ಸ್ಥೂಲ ಅವಲೋಕನವಾಗಿದ್ದು, ಇನ್ನೂ ಹೆಚ್ಚಿನ ಅಧ್ಯಯನದ ಅವಶ್ಯಕತೆ ಇದೆ.

*** *** ***

ಚಳವಳಿಗಳು ಮತ್ತು ಚುನಾವಣೆಯ ಪರಿಣಾಮ ರಾಜಕಾರಣ ಹಾಗೂ ಸಮಾಜದಲ್ಲಿ ಹಲವು ಮಜಲುಗಳಲ್ಲಿ ಕಂಡುಬರುವುವು. ಆಂತರಿಕ ತುರ್ತುಪರಿಸ್ಥಿತಿ ಕಾಲಘಟ್ಟವನ್ನು ನಾಗರಿಕ ಹಕ್ಕುಗಳ ಚಳವಳಿ, ರಾಜಕೀಯ ಚಳವಳಿ, ಪ್ರಜಾಪ್ರಭುತ್ವ ವ್ಯವಸ್ಥೆಗೆ ಮಾರಕ ಮತ್ತಿತರ ಕಾಲಘಟ್ಟವಾಗಿ ಗುರುತಿಸಲಾಗುವುದು. ೧೯೭೭ರ ಲೋಕಸಭಾ ಚುನಾವಣೆ ಮತ್ತು ಜನತಾ ಸರ್ಕಾರದ ಕಾರ್ಯನೀತಿ ರಾಜ್ಯ ರಾಜಕಾರಣದಲ್ಲಿ ವ್ಯಕ್ತಿ ರಾಜಕಾರಣ ಶಿಖರತೆ ತಲುಪಲು ಅವಕಾಶ ನೀಡಿತು. ಪ್ರಾದೇಶಿಕ ರಾಜಕಾರಣದಲ್ಲಿ ಕಂಡುಬಂದ ಭೂ ಸುಧಾರಣಾ ಕಾಯ್ದೆ ಹಾಗೂ ಹಾವನೂರು ವರದಿಯ ಅನುಷ್ಠಾನವು ಪರ್ಯಾಯ ರಾಜಕೀಯ ಶಕ್ತಿಯ ಬೆಳವಣಿಗೆಗೆ ಪೂರಕವಾಗಿರುವಂತೆ ರಾಜಕೀಯ ಹಾಗೂ ಸಮಾಜದ ಅನೇಕ ವಲಯಗಳಲ್ಲಿ ಅಸಮಾಧಾನ ವನ್ನು ಸೃಷ್ಟಿಸಿತ್ತು. ಈ ಸಂದರ್ಭದಲ್ಲೇ ಕಂಡುಬರುತ್ತಿದ್ದ ಕಾಂಗ್ರೆಸ್ ಪಕ್ಷದ ಕುಸಿತ ಮತ್ತು ಪುನಃಶ್ಚೇತನವು ರಾಜ್ಯ ರಾಜಕಾರಣದೊಂದಿಗೆ ಹೊಂದಿರುವ ಸಂಬಂಧಗಳನ್ನು ಚರ್ಚಿಸಲಾಗಿದೆ. ರಾಜಕೀಯ ಪಲ್ಲಟಗಳು ಹಾಗೂ ಆಂತರಿಕ ಭಿನ್ನತೆಗಳು ಸಂಕೀರ್ಣವಾಗಿದ್ದು ಅವುಗಳ ಪ್ರಕ್ರಿಯೆಗಳನ್ನು ಗುರುತಿಸಲಾಗಿದೆ. ತುರ್ತು ಪರಿಸ್ಥಿತಿಯ ಆಡಳಿತದ ಪ್ರಭಾವ ಪರಿಣಾಮಗಳು ೧೯೮೦ರ ಲೋಕಸಭಾ ಚುನಾವಣೆಯಲ್ಲಿ ಕೊನೆ ಗೊಂಡಂತೆ ಮೇಲ್ನೋಟಕ್ಕೆ ಕಂಡುಬರುವುದು. ಪ್ರಜಾಪ್ರಭುತ್ವ ರಕ್ಷಣೆ, ಸುಭದ್ರ ಸರ್ಕಾರಗಳ ಘೋಷಣೆಗಳಲ್ಲಿ ಸುಭದ್ರ ಸರ್ಕಾರದ ಆಯ್ಕೆಯು ಎರಡನೇ ಹಂತದ ಪ್ರಮುಖ ಬೆಳವಣಿಗೆಯಾಗಿದೆ. ನಂತರದಲ್ಲಿ ಪ್ರಾದೇಶಿಕ ರಾಜಕಾರಣವು ಪ್ರಭಾವಿಯುತವಾಗಿ ಬೆಳೆದುಬಂದಿರುವುದನ್ನು ರಾಷ್ಟ್ರದ ಅನೇಕ ಭಾಗಗಳಲ್ಲಿ ಗುರುತಿಸ ಬಹುದು. ರಾಜ್ಯ ರಾಜಕಾರಣದಲ್ಲಿ ಪ್ರಾದೇಶಿಕ ರಾಜಕಾರಣದ ಪ್ರಭಾವ ವ್ಯಕ್ತಿ ನೆಲೆಯಲ್ಲಿ ಹೆಚ್ಚು

ಕಂಡುಬರುವುದು. ೧೯೮೩ರ ಚುನಾವಣೆಯಲ್ಲಿ ಮೊದಲ ಕಾಂಗ್ರೇಸೇತರ ಪಕ್ಷ ಆಡಳಿತಕ್ಕೆ ಬರಲು ಅರಸು ಅವರು ಸ್ಥಾಪಿಸಿದ್ದ ಕ್ರಾಂತಿ ರಂಗ ಪ್ರಮುಖ ಕಾರಣಗಳಲ್ಲೊಂದಾದರೇ, ಅರಸು ಅವರು ನಿಧನದ ನಂತರ ಪ್ರತೀಕವಾಗಿ ಪರಿವರ್ತನೆ ಹೊಂದಿದ್ದು ಪೂರಕವಾಗಿ ಕಾರ್ಯನಿರ್ವಹಿಸಿರುವುದು ಮೊದಲ ಹಂತದ ಬೆಳವಣಿಗೆಯಾಗಿದೆ. ಎರಡನೇ ಹಂತದಲ್ಲಿ ಸಾಮಾಜಿಕ ನ್ಯಾಯದ ಹಿನ್ನೆಲೆಯಲ್ಲಿ ಪರ್ಯಾಯ ರಾಜಕಾರಣ ರೂಪಿಸುವ ಪ್ರಯತ್ನದ ಫಲಗಳು, ಹಲವು ಸ್ವರೂಪಗಳಲ್ಲಿ ರಾಜಕಾರಣದಲ್ಲಿ ಕಂಡುಬರುವುದು. ಇದಕ್ಕೆ ಪೂರಕವಾಗಿ ಅಹಿಂದ ಮತ್ತಿತರ ಚಳವಳಿಗಳು, ಆಡಳಿತ ವ್ಯವಸ್ಥೆಯಲ್ಲಿ ಹಿಂದುಳಿದ ವರ್ಗಗಳ ಪ್ರಾಬಲ್ಯದ ಹೆಚ್ಚಳ, ಚುನಾವಣಾ ರಾಜಕಾರಣದಲ್ಲಿ ಪ್ರಬಲ ಅಸ್ತ್ರವಾಗಿ ಪರಿವರ್ತನೆ ಹಾಗೂ ಸಮಕಾಲೀನವಾಗಿ ಮುಖ್ಯ ಧಾರೆಯ ರಾಜಕಾರಣಕ್ಕೆ ಆಗಮಿಸಿದ ವ್ಯಕ್ತಿಗಳು ರಾಜ್ಯದ ಪ್ರಮುಖ ಹುದ್ದೆಗಳನ್ನು ಏರಲು ಸಾಧ್ಯವಾಗಿದ್ದು ಮುಂತಾದವುಗಳನ್ನು ಕಾಣಬಹುದು. ಪ್ರಸ್ತುತ ರಾಜಕಾರಣದಲ್ಲಿ ಬಹುಪಾಲು ಈ ವ್ಯಕ್ತಿಗಳನ್ನು ದೇವರಾಜ ಅರಸು ಅವರೊಡನೆ ಸಮೀಕರಿಸುವ ಪ್ರಯತ್ನ ನಿರಂತರವಾಗಿ ಕಂಡುಬರುತ್ತಿರುವುದು ಗಮನಾರ್ಹ. ಇದು ಅರಸು ಅವರ ಆಡಳಿತ ನೀತಿಯಿಂದ ಉಂಟಾದ ಫಲಗಳ ಮೇಲೆ ವಾರಸುದಾರಿಕೆ ಸ್ಥಾಪಿಸುವ ಪ್ರಯತ್ನದ ರೂಪಗಳು.

ಸಮಾನಾಂತರವಾಗಿ ಸಮಾಜದಲ್ಲಿ ಅನೇಕ ಬದಲಾವಣೆಗಳು ಚಳುವಳಿಯ ಸ್ವರೂಪಗಳನ್ನು ಪಡೆದುಕೊಂಡಿವೆ. ಸಮಾಜದ ಪ್ರಮುಖ ಸಮೂಹ ಮಾಧ್ಯಮಗಳಾದ ಸಾಹಿತ್ಯ, ದೃಶ್ಯ ಮತ್ತು ಪತ್ರಿಕಾ ರಂಗಗಳ ನಡುವಿನ ಅಂತರ್ ಸಂಬಂಧಗಳಲ್ಲಿ ಒಂದಕ್ಕೊಂದು ಪೂರಕವಾದ ಆಲೋಚನೆ ಕಂಡುಬರುವುವು. ಈ ವಲಯಗಳು ಸಮಾಜದ ಸುಶಿಕ್ಷಿತರಿಂದ ಕೂಡಿದ್ದು, ಸಮಕಾಲೀನ ರಾಜಕಾರಣದ ಆಗುಹೋಗುಗಳ ಕುರಿತು ಜಾಗೃತವಾಗಿದ್ದವು. ಹಾಗಾಗೇ ಸಾಹಿತ್ಯ ಮತ್ತು ರಂಗಭೂಮಿಗಳನ್ನು ರಾಜಕೀಯ ಹಾಗೂ ಸಾಮಾಜಿಕ ಜಾಗೃತಿಯುಂಟು ಮಾಡಲು ಬಳಸುವ ಅಗತ್ಯ ಕುರಿತ ಚರ್ಚೆಗಳು ಅನೇಕರೂಪಗಳಲ್ಲಿ ಕಂಡುಬಂದವು. ಸಿನಿಮಾರಂಗದಲ್ಲಿ ಈ ಆಶಯದ ಬಿಂಬ ವ್ಯಕ್ತಿ ನೆಲೆಯಲ್ಲಿ ಅಭಿವ್ಯಕ್ತಗೊಳ್ಳುವುದನ್ನು ಗುರುತಿಸಬಹುದು. ರಾಜ್ಯದಲ್ಲಿ ಸಮಕಾಲೀನ ಪತ್ರಿಕೆಗಳನ್ನು ಗಮನಿಸಿದಾಗ ರಾಷ್ಟ್ರದ ಮುಖ್ಯಧಾರೆಯಲ್ಲಿ ಕಂಡುಬರುತ್ತಿದ್ದ ತುರ್ತುಪರಿಸ್ಥಿತಿ ಕಾಲದ ಆಡಳಿತ ವ್ಯವಸ್ಥೆ, ಪತ್ರಿಕಾ ಸ್ವಾತಂತ್ರ್ಯ, ಸೆನ್ಸಾರ್‌ಷಿಪ್ ಮತ್ತಿತರಗಳು ಪ್ರತಿಬಿಂಬಿತವಾಗಿವೆ. ಚುನಾವಣಾ ಸಂದರ್ಭದಲ್ಲಿ ಕೆಲವು ಪತ್ರಿಕೆಗಳು ರಾಜಕೀಯ ಪಕ್ಷಗಳ ಮುಖವಾಣಿ ಗಳಾಗಿ ಕಾರ್ಯನಿರ್ವಹಿಸಿವೆ. ಪ್ರಾದೇಶಿಕ ರಾಜಕಾರಣದಲ್ಲಿ ೧೯೭೮ರ ವಿಧಾನಸಭಾ ಚುನಾವಣೆಯ ನಂತರ ವ್ಯಕ್ತಿ ರಾಜಕಾರಣಕ್ಕೆ ಪ್ರಾಮುಖ್ಯತೆ ದೊರಕತೊಡಗಿದ್ದನ್ನು ಗುರುತಿಸಬಹುದು. ೧೯೮೦ರ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್(ಯು) ರಾಜ್ಯದಲ್ಲಿ ಶೇಕಡವಾರು ಮತಗಳಿಕೆಯಲ್ಲಿ ೩ನೇ ಸ್ಥಾನ ಪಡೆದಿದೆ. ಹಿಂದಿನ ಲೋಕಸಭಾ ಚುನಾವಣೆಯಲ್ಲಿ ರಾಜಕೀಯ ಪಕ್ಷಗಳು ಪಡೆದಿರುವ ಶೇಕಡಾವಾರು ಮತ ಗಮನಿಸಿದರೆ, ಹೆಚ್ಚು ನಷ್ಟ ಉಂಟಾಗಿರುವುದು ಜನತಾ ಪಕ್ಷಕ್ಕೆ. ಉಳಿದ ಪಕ್ಷಗಳಲ್ಲಿ ಶೇಕಡಾವಾರು ಮತ ಕುಸಿತ ಪ್ರಮಾಣ ಶೇ.೧೧ರಷ್ಟಿದೆ. ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಜನತಾ ಪಕ್ಷದ ಪರವಾಗಿದ್ದ ಸಮೂಹ ಮಾಧ್ಯಮಗಳಲ್ಲಿ ಕಂಡುಬರುವವರಾಗಿದ್ದರು. ಈ ವರ್ಗ ತುರ್ತುಪರಿಸ್ಥಿತಿ ವಿರೋಧಿ ಹಿನ್ನೆಲೆ ಪ್ರತಿಭಟಿಸಿದ್ದ ಪ್ರಮುಖ ಸಾಮಾಜಿಕ ವಲಯ. ಪ್ರಸ್ತುತ ರಾಜಕಾರಣ ಮತ್ತು ಸಾಮಾಜಿಕ ಸಮಸ್ಯೆಗಳಲ್ಲಿ, ಈ ಕಾಲಘಟ್ಟದ ಪ್ರಭಾವ ವಿವಿಧ ನೆಲೆಗಳಲ್ಲಿ ರೂಪುಗೊಂಡಿರುವುದು. ಈ ನಿಟ್ಟಿನಲ್ಲಿ ಇನ್ನೂ ಹೆಚ್ಚಿನ ಅಧ್ಯಯನದ ಅಗತ್ಯವಿದೆ.

**ಟಿಪ್ಪಣಿ**

೧. ದಿ ಆಸ್ಟ್ರೇಲಿಯನ್‌ನಲ್ಲಿ ೧೯೭೭ರ ಫೆಬ್ರವರಿ ೨೨ರಂದು ಪ್ರಕಟವಾದ ವರದಿ ಅಮಿಯ ರಾವ್(ಸಂ)ರವರ ದ ಪ್ರೆಸ್ ಷಿ ಕುಡ್ ನಾಟ್ ಷ್ಟಿಪ್ ಪುಸ್ತಕದಲ್ಲಿ ಪುನರ್ ಪ್ರಕಟವಾಗಿರವುದನ್ನು ಬಳಸಲಾಗಿದೆ.

೨. ಚುನಾವಣೆಯ ೧೯೭೭ರ ಫೆಬ್ರವರಿ ೨೮ರ ಸಂಚಿಕೆಯಲ್ಲಿ ಪುಟ ೨ ಮತ್ತು ೩ರಲ್ಲಿರುವ ವರದಿಗಳು.

೩. ಈ ಜಾಹೀರಾತುಗಳು ೧೯೭೭ರ ಮಾರ್ಚ್ ೯ ಮತ್ತು ೧೮ರಂದು ಡೆಕ್ಕನ್ ಹೆರಾಲ್ಡ್‌ನಲ್ಲಿ ಪ್ರಕಟವಾಗಿವೆ. ಇದರಲ್ಲಿರುವ ಕೆಲವು ಜಾಹೀರಾತುಗಳು ಪ್ರಕಟವಾದ ದಿನಾಂಕ ತಿಳಿದಿಲ್ಲ.

೪. ಈ ಜಾಹೀರಾತು ಕನ್ನಡಪ್ರಭದಲ್ಲಿ ಕನ್ನಡ ಭಾಷೆಯಲ್ಲಿ ಅನೇಕ ಬಾರಿ ಪ್ರಕಟವಾಗಿದೆ.

೫. ಈ ಜಾಹೀರಾತುಗಳು ೧೯೭೭ರ ಮಾರ್ಚ್ ೨ ಮತ್ತು ೧೭ರಂದು ಡೆಕ್ಕನ್ ಹೆರಾಲ್ಡ್ ಹಾಗೂ ಮಾರ್ಚ್ ೧೧ರಂದು ವಿಶ್ವಪ್ರಭದಲ್ಲಿ ಪ್ರಕಟವಾಗಿದೆ.

೬. ಚುನಾವಣಾ ಪೂರ್ವದಲ್ಲಿ ಸಮಾಜವಾದಿ ಪಕ್ಷ ಜನತಾ ಪಕ್ಷದೊಂದಿಗೆ ಸಂಪೂರ್ಣವಾಗಿ ವಿಲೀನವಾಯಿತು. ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ(ಮಾರ್ಕ್ಸಿಸ್ಟ್) ಜನತಾ ಪಕ್ಷದೊಂದಿಗೆ ಹೊಂದಾಣಿಕೆ ಮಾಡಿಕೊಂಡಿತ್ತು.

೭. ಜನತಾ ಪಕ್ಷ ಅಧಿಕೃತವಾಗಿ ಜನವರಿ ೨೩ರಂದು ಅಸ್ತಿತ್ವಕ್ಕೆ ಬಂದಿತು. ಇದರಲ್ಲಿ ಭಾರತೀಯ ಲೋಕ ದಳ್, ಸೋಷಿಯಲಿಸ್ಟ್ ಪಾರ್ಟಿ ಆಫ್ ಇಂಡಿಯಾ, ಭಾರತೀಯ ಜನ ಸಂಘ್, ಕಾಂಗ್ರೆಸ್(ಒ) ಮತ್ತಿತರಗಳು ವಿಲೀನಗೊಳ್ಳುವ ಮೂಲಕ ಪಕ್ಷ ರೂಪುಗೊಂಡಿತು. ಚುನಾವಣೆಯ ನಂತರದಲ್ಲಿ ಕಾಂಗ್ರೆಸ್ ಫಾರ್ ಡೆಮಾಕ್ರಸಿ ಜನತಾ ಪಕ್ಷದೊಳಗೆ ವಿಲೀನಗೊಂಡಿತು. ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ(ಮಾರ್ಕ್ಸಿಸ್ಟ್), ಶಿರೋಮಣಿ ಅಕಾಲಿದಳ, ಪೆಸೆಂಟ್ಸ್ ಅಂಡ್ ವರ್ಕರ್ಸ್ ಪಾರ್ಟಿ ಆಫ್ ಇಂಡಿಯಾ, ರೆವಲ್ಯೂಷನರಿ ಸೋಷಿಯಲಿಸ್ಟ್ ಪಾರ್ಟಿ, ಆಲ್ ಇಂಡಿಯಾ ಫಾರ್ವರ್ಡ್ ಬ್ಲಾಕ್, ರಿಪಬ್ಲಿಕನ್ ಪಾರ್ಟಿ ಆಫ್ ಇಂಡಿಯಾ, ದ್ರಾವಿಡ ಮುನ್ನೇತ್ರ ಕಳಗಂ ಮೊದಲಾದ ಪಕ್ಷಗಳು ಬಾಹ್ಯ ಸಹಕಾರ ನೀಡಿದವು.

೮. ಮೊದಲನೆಯ ವ್ಯಂಗ್ಯಚಿತ್ರವು ೨೩ ಜನವರಿ ೧೯೭೭ರಂದು ಡೆಕ್ಕನ್ ಹೆರಾಲ್ಡ್‌ನಲ್ಲಿ ಪ್ರಕಟವಾಗಿದೆ. ಅಂದು ಜನತಾ ಪಕ್ಷ ಅಧಿಕೃತವಾಗಿ ಅಸ್ತಿತ್ವಕ್ಕೆ ಬಂದಿತ್ತು. ಎರಡನೆಯದು ಸುದ್ದಿಪತ್ರಿಕೆಯ ಮುಖಪುಟ. ೧೯೭೭ರ ಫೆಬ್ರವರಿ ೩ರಂದು ಕನ್ನಡಪ್ರಭದಲ್ಲಿ ಪ್ರಕಟವಾಗಿದೆ. ಮೂರನೆಯದು ೧೯೭೭ರ ಫೆಬ್ರವರಿ ೫ರಂದು ಪ್ರಕಟವಾದ ವ್ಯಂಗ್ಯಚಿತ್ರ.

೯. ೧೯೭೭ ಮಾರ್ಚ್ ೨ರಂದು ಡೆಕ್ಕನ್ ಹೆರಾಲ್ಡ್‌ನಲ್ಲಿ ಪ್ರಕಟವಾಗಿದೆ.

೧೦. ಕೇರಳ ವಿಧಾನಸಭೆಗೆ ಜೊತೆಯಲ್ಲಿ ಚುನಾವಣೆ ನಡೆಯಿತು.

೧೧. ಈ ಅಂಕಿಅಂಶಗಳು ಸ್ಟ್ಯಾಟಿಸ್ಟಿಕಲ್ ರಿಪೋರ್ಟ್ ಆನ್ ಜನರಲ್ ಇಲೆಕ್ಷನ್ಸ್, ೧೯೭೭ ಟು ದಿ ಸಿಕ್ಸ್ತ್ ಲೋಕಸಭಾ, ಇಲೆಕ್ಷನ್ ಕಮಿಷನ್ ಆಫ್ ಇಂಡಿಯಾ ಆಧರಿಸಿದ್ದು.

೧೨. ಚುನಾವಣಾ ಫಲಿತಾಂಶಗಳನ್ನು ಗಮನಿಸಿದಾಗ ಉತ್ತರ ಭಾರತದಾದ್ಯಂತ ಜನತಾ ಪಕ್ಷ ಹೆಚ್ಚು ಕ್ಷೇತ್ರ ಗಳಿಸಿರುವಂತೆ ಮೇಲ್ನೋಟಕ್ಕೆ ಕಂಡುಬರುತ್ತದೆ. ಹಿಂದಿ ಭಾಷಾ ಪ್ರದೇಶಗಳಾದ ಬಿಹಾರ, ಮಧ್ಯಪ್ರದೇಶ, ಉತ್ತರ ಪ್ರದೇಶ ಮತ್ತು ದೆಹಲಿಯಲ್ಲಿ ೧೮೧ ಕ್ಷೇತ್ರಗಳನ್ನು ಗಳಿಸಿರುವುದಾಗಿದೆ.

೧೩. ಕಾನೂನು ಮಂತ್ರಿಯಾದ ಶಾಂತಿ ಭೂಷಣ್ ೪೨ನೇ ತಿದ್ದುಪಡಿ ಕುರಿತಂತೆ ನೀಡಿದ ಹೇಳಿಕೆ. ಇದರಲ್ಲಿ ವಿರೋಧ ಪಕ್ಷಗಳೊಡನೆ ಸಂವಾದ ಏರ್ಪಡಿಸಲು ಸಿದ್ಧವಿದೆ. ಮುಂಬರುವ ವಿಧಾನಸಭೆಗಳ ಚುನಾವಣೆ ಕುರಿತು ಪಕ್ಷ ಜಾಗೃತವಾಗಿರುವುದಾಗಿಯೂ ತಿಳಿಸಲಾಗಿದೆ. ಪ್ರಜಾಪ್ರಭುತ್ವದ ಬೇರುಗಳನ್ನು ಸುರಕ್ಷಿತಗೊಳಿಸಲು ಪಕ್ಷ ಎಲ್ಲ ಕ್ರಮಗಳನ್ನು ತೆಗೆದುಕೊಳ್ಳುವುದು ಮೊದಲಾದ ವಿಚಾರಗಳು ಕಂಡುಬರುತ್ತವೆ. ಸಮಕಾಲೀನ ಚುನಾವಣಾ ರಾಜಕಾರಣದೆಡೆಗೆ ಗಮನ ಸೆಳೆಯುತ್ತದೆ.

೧೪. ೪೪ನೇ ತಿದ್ದುಪಡಿಯು ಆಂತರಿಕ ತುರ್ತುಪರಿಸ್ಥಿತಿ ಜಾರಿ ತರಲಿದ್ದ ಪ್ರಕ್ರಿಯೆಗಳನ್ನು ಕಠಿಣಗೊಳಿಸಿತು. ಪಾರ್ಲಿಮೆಂಟಿನ ಬಹುಮತದ ಒಪ್ಪಿಗೆ ಇಲ್ಲದೆ ಜಾರಿಗೊಳಿಸಲು ಸಾಧ್ಯವಾಗುವುದಿಲ್ಲ. ಜೊತೆಗೆ ಹಕ್ಕುಗಳಿಗೆ ಸಂಬಂಧಿಸಿದಂತೆ ಆಸ್ತಿ ಹಕ್ಕಿನ ಸ್ವರೂಪವನ್ನು ಬದಲಾಯಿಸಿತು.

೧೫. ತುರ್ತುಪರಿಸ್ಥಿತಿಯಲ್ಲಿ ಮೀಸ ಕಾಯ್ದೆಯನ್ನು ಮೀಸಾ ರಾಕ್ಷಸ ಮೊದಲಾಗಿ ಕರೆಯಲಾಗುತ್ತಿತ್ತು.

೧೬. ಷಾ ವಿಚಾರಣಾ ವರದಿಯು ಮೂರು ಭಾಗಗಳಲ್ಲಿದೆ. ೨೬ ಅಧ್ಯಾಯ ಹಾಗೂ ೩ ಅಪೆಂಡಿಕ್ಸ್‌ಗಳನ್ನು ಒಳಗೊಂಡಿದೆ. ಮೊದಲ ಮಧ್ಯಂತರ ವರದಿ ೧೧ ಮಾರ್ಚ್ ೧೯೭೮. ಎರಡನೆ ಮಧ್ಯಂತರ ವರದಿ ೨೬ ಏಪ್ರಿಲ್ ೧೯೭೮ ಹಾಗೂ ಕಡೆಯ ವರದಿ ೬ ಆಗಸ್ಟ್ ೧೯೭೮ರಂದು ಸರ್ಕಾರಕ್ಕೆ ಸಲ್ಲಿಸಲಾಯಿತು. ಷಾ ಆಯೋಗದ ವರದಿಯು ಇತರ ವಿಚಾರಣಾ ವರದಿಗಿಂತ ಭಿನ್ನವಾಗಿದೆ. 'ಇದು ಅಧಿಕಾರಕ್ಕೆ ಬರುವವರಿಗೆ ಎಚ್ಚರಿಕೆ ನೀಡುವ ಮಹತ್ವದ ಐತಿಹಾಸಿಕ ದಾಖಲೆ. ಭವಿಷ್ಯದಲ್ಲಿ ಪ್ರಜಾಪ್ರಭುತ್ವದಲ್ಲಿ ಮೂಲಭೂತ ಕಾರ್ಯನಿರ್ವಹಣೆಗೆ ತೊಂದರೆಯಾಗದಂತೆ ಹಾಗೂ ನಿರಂಕುಶಾಧಿಕಾರದ ಅಡಿ ಶೋಷಣೆಗೊಳಗಾದವರಿಗೆ ಸ್ವಾತಂತ್ರ್ಯದ ಪುನರ್ ಭರವಸೆ ಮತ್ತು ಹೋರಾಡಲು ಚೈತನ್ಯ ನೀಡುತ್ತದೆ' ಎಂದು ಎರಾ ಸೇಜಿಯನ್ ಅವರು ಅಭಿಪ್ರಾಯಪಡುವರು.

೧೯೮೦ರಲ್ಲಿ ಇಂದಿರಾ ಕಾಂಗ್ರೆಸ್ ಆಡಳಿತಕ್ಕೆ ಬಂದ ಮೇಲೆ ಷಾ ಆಯೋಗದ ವರದಿಗಳ ಪ್ರತಿಗಳೆಲ್ಲವನ್ನು ವಶಪಡಿಸಿಕೊಂಡು ನಾಶಪಡಿಸಲಾಯಿತು. ಅದರ ಪ್ರತಿಗಳು ಉಳಿದು ಬಂದಿಲ್ಲವೆಂದು ಬಹುತೇಕರು ಅಭಿಪ್ರಾಯಪಡುತ್ತಾರೆ. ಸೇಜಿಯನ್ ಅವರು 'ಭಾರತದ ಯಾವ ಗ್ರಂಥಾಲಯದಲ್ಲಿಯೂ ಇದರ ಪ್ರತಿಗಳಿಲ್ಲ. ಈ ಮಾಹಿತಿ ತಿಳಿದ ನಂತರ ಅವರ ಖಾಸಗಿ ಗ್ರಂಥಾಲಯದಲ್ಲಿ ರಕ್ಷಿಸಿದ್ದ ವರದಿಯನ್ನು ಪುಸ್ತಕ ರೂಪದಲ್ಲಿ ಹೊರತರಲಾಯಿತು' ಎಂದು ತಿಳಿಸಿರುವರು. ಪೂರಕವಾಗಿ ಪತ್ರಿಕೆಗಳ ವರದಿಗಳು ಮತ್ತಿತರಗಳ ಮೂಲಕ ಪುಸ್ತಕದ ಆರಂಭದಲ್ಲೇ ಆಧಾರಗಳನ್ನು ನೋಡಬಹುದು. ಖಾಸಗಿಯಾಗಿ ಅನೇಕರು ಪ್ರತಿಗಳನ್ನು ರಕ್ಷಿಸುವಲ್ಲಿ ಯಶಸ್ವಿಯಾಗಿರುವ ಕುರಿತು ಕ್ಷೇತ್ರಕಾರ್ಯದಲ್ಲಿ ಮಾಹಿತಿ ದೊರೆತಿದೆ. ಕರ್ನಾಟಕದ ಪತ್ರಾಗಾರ ವಿಭಾಗದಲ್ಲಿ(ಬೆಂಗಳೂರು) ಷಾ ಆಯೋಗದ ವರದಿಯ ಮೊದಲ ಮತ್ತು ಎರಡನೆ ಮಧ್ಯಂತರ ವರದಿಗಳು ಸುರಕ್ಷಿತ ರೂಪದಲ್ಲಿವೆ. ಕಡೆಯ ವರದಿ ಕಳೆದು ಹೋಗಿದೆಯೆಂದು ತಿಳಿದುಬಂದಿದೆ.

೧೭. ಇಂದಿರಾ ಗಾಂಧಿ ಅವರು ದೊಡ್ಡಬಳ್ಳಾಪುರ ಕ್ಷೇತ್ರದಲ್ಲಿ ಮತದಾರರಾಗಿ ಸೇರಿರುವುದರ ಕಾಗದ ಪತ್ರಗಳ ಛಾಯಾಚಿತ್ರ ಮತ್ತು ನೋಂದಣಿ ಅಧಿಕಾರಿಗಳ ಬರಹವನ್ನು ಕೆಳಗೆ ಸೇರಿಸಲಾಗಿದೆ.

೧೮. ಕರ್ನಾಟಕ ಪೊಲೀಸ್ ಕಾಯ್ದೆ ಅಡಿ-೧,೫೭೨ ಬಂಧನಗಳು ನಡೆದಿವೆ.

೧೯. ಜನತಾ ಪಕ್ಷ ಅಧಿಕಾರಕ್ಕೆ ಬಂದ ರಾಜ್ಯಗಳೆಂದರೆ ಬಿಹಾರ, ಹರಿಯಾಣ, ಹಿಮಾಚಲ ಪ್ರದೇಶ, ಮಧ್ಯಪ್ರದೇಶ, ರಾಜಸ್ಥಾನ್, ದೆಹಲಿ, ಪಂಜಾಬ್. ಪಶ್ಚಿಮ ಬಂಗಾಳ ಮತ್ತು ತಮಿಳುನಾಡಿನಲ್ಲಿ ಕ್ರಮವಾಗಿ ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯ(ಮಾರ್ಕ್ಸಿಸ್ಟ್) ಹಾಗೂ ಎಐಡಿಎಂಕೆ ಗೆದ್ದುಬರುವುವು. ತಮಿಳುನಾಡಿನ ಚುನಾವಣೆಯ ಫಲಿತಾಂಶ ಕುರಿತು ಗ್ಲ್ಯಾಮರ್ ಪಾಲಿಟಿಕ್ಸ್ ಮೊದಲಾದ ವಿಮರ್ಶೆ ಕಂಡುಬರುವುದು.

೧೯೭೭ರ ಲೋಕಸಭಾ ಚುನಾವಣೆಯ ಅಂಕಿ-ಅಂಶಗಳು. ಪಟ್ಟಿ ಸಂಖ್ಯೆ- ೧೮.

| ಸಂಖ್ಯೆ | ರಾಜ್ಯ ಮತ್ತು ಕೇಂದ್ರೀಯ ಪ್ರದೇಶಗಳು | ಗೆದ್ದ ಪಕ್ಷಗಳು | ಸಂಖ್ಯೆ | ಒಟ್ಟು |
|---|---|---|---|---|
| ೧ | ಆಂಧ್ರ ಪ್ರದೇಶ | ಬಿಎಲ್‌ಡಿ | ೧ | ೪೨ |
| | | ಐಎನ್‌ಸಿ | ೪೧ | |
| ೨ | ಅರುಣಾಚಲ ಪ್ರದೇಶ | ಐಎನ್‌ಸಿ | ೧ | ೨ |
| | | ಬಿಎಲ್‌ಡಿ | ೧ | |
| ೩ | ಅಸ್ಸಾಂ | ಬಿಎಲ್‌ಡಿ | ೩ | ೧೪ |
| | | ಐಎನ್‌ಸಿ | ೧೦ | |
| | | ಸ್ವತಂತ್ರ ಅಭ್ಯರ್ಥಿ | ೧ | |
| ೪ | ಬಿಹಾರ್ | ಬಿಎಲ್‌ಡಿ | ೫೨ | ೫೪ |
| | | [illegible] | [illegible] | |
| | | ಸ್ವತಂತ್ರ ಅಭ್ಯರ್ಥಿ | ೧ | |
| ೫ | ಗೋವಾ ದಾಮನ್ ಮತ್ತು ದಿಯು | ಬಿಎಲ್‌ಡಿ | ೨ | ೧೧ |
| | | ಸ್ವತಂತ್ರ ಅಭ್ಯರ್ಥಿ | ೯ | |
| ೬ | ಗುಜರಾತ್ | ಬಿಎಲ್‌ಡಿ | ೧೬ | ೨೬ |
| | | ಐಎನ್‌ಸಿ | ೧೦ | |
| ೭ | ಹರ್ಯಾಣ | ಬಿಎಲ್‌ಡಿ | ೧೦ | ೧೦ |
| ೮ | ಹಿಮಾಚಲ ಪ್ರದೇಶ | ಬಿಎಲ್‌ಡಿ | ೪ | ೪ |
| ೯ | ಜಮ್ಮು ಮತ್ತು ಕಾಶ್ಮೀರ | ಐಎನ್‌ಸಿ | ೩ | ೬ |
| | | [illegible] | ೨ | |
| | | ಸ್ವತಂತ್ರ ಅಭ್ಯರ್ಥಿ | ೧ | |
| ೧೦ | ಕರ್ನಾಟಕ | ಬಿಎಲ್‌ಡಿ | ೨ | ೨೮ |
| | | ಐಎನ್‌ಸಿ | ೨೬ | |
| ೧೧ | ಕೇರಳ | ಸಿಪಿಐ | ೪ | ೨೦ |
| | | ಐಎನ್‌ಸಿ | ೧೧ | |
| | | [illegible] | ೨ | |
| | | [illegible] | ೨ | |
| | | [illegible] | ೧ | |
| ೧೨ | ಮಧ್ಯ ಪ್ರದೇಶ | ಬಿಎಲ್‌ಡಿ | ೩೭ | ೪೦ |
| | | ಐಎನ್‌ಸಿ | ೧ | |
| | | [illegible] | ೧ | |
| | | ಸ್ವತಂತ್ರ ಅಭ್ಯರ್ಥಿ | ೧ | |
| ೧೩ | ಮಹಾರಾಷ್ಟ್ರ | ಬಿಎಲ್‌ಡಿ | ೧೯ | ೪೮ |
| | | [illegible] | ೩ | |
| | | ಐಎನ್‌ಸಿ | ೨೦ | |
| | | [illegible] | ೫ | |
| | | [illegible] | ೧ | |
| ೧೪ | ಮಣಿಪುರ | ಐಎನ್‌ಸಿ | ೨ | ೨ |
| ೧೫ | ಮೇಘಾಲಯ | ಐಎನ್‌ಸಿ | ೧ | ೨ |
| | | ಬಿಎಲ್‌ಡಿ | ೧ | |
| ೧೬ | ಮಿಜೋರಾಂ | ಬಿಎಲ್‌ಡಿ | ೧ | ೧ |
| ೧೭ | ನಾಗಾಲ್ಯಾಂಡ್ | [illegible] | ೧ | ೧ |
| ೧೮ | ಒರಿಸ್ಸಾ | ಬಿಎಲ್‌ಡಿ | ೧೫ | ೨೧ |
| | | [illegible] | ೧ | |
| | | ಐಎನ್‌ಸಿ | ೪ | |
| | | ಸ್ವತಂತ್ರ ಅಭ್ಯರ್ಥಿ | ೧ | |
| ೧೯ | ಪಂಜಾಬ್ | ಬಿಎಲ್‌ಡಿ | ೩ | ೧೩ |
| | | [illegible] | ೧ | |
| | | [illegible] | ೯ | |
| ೨೦ | ರಾಜಸ್ಥಾನ್ | ಬಿಎಲ್‌ಡಿ | ೨೪ | ೨೫ |
| | | ಐಎನ್‌ಸಿ | ೧ | |
| ೨೧ | ಸಿಕ್ಕಿಂ | ಐಎನ್‌ಸಿ | ೧ | ೧ |
| ೨೨ | ತಮಿಳುನಾಡು | ಸಿಪಿಐ | ೩ | ೩೯ |
| | | ಐಎನ್‌ಸಿ | ೧೪ | |
| | | [illegible] | ೩ | |
| | | [illegible] | ೧೭ | |
| | | ಡಿಎಂಕೆ | ೨ | |
| ೨೩ | ತ್ರಿಪುರ | ಬಿಎಲ್‌ಡಿ | ೧ | ೨ |
| | | ಐಎನ್‌ಸಿ | ೧ | |
| ೨೪ | ಉತ್ತರ ಪ್ರದೇಶ | ಬಿಎಲ್‌ಡಿ | ೮೫ | ೮೫ |
| ೨೫ | ಪಶ್ಚಿಮ ಬಂಗಾಳ | ಬಿಎಲ್‌ಡಿ | ೧೫ | ೪೨ |
| | | [illegible] | ೧೭ | |
| | | ಐಎನ್‌ಸಿ | ೩ | |
| | | [illegible] | ೩ | |
| | | [illegible] | ೩ | |
| | | ಸ್ವತಂತ್ರ ಅಭ್ಯರ್ಥಿ | ೧ | |
| ೨೬ | ಅಂಡಮಾನ ಮತ್ತು ನಿಕೋಬಾರ್ ದ್ವೀಪಗಳು | ಐಎನ್‌ಸಿ | ೧ | ೧ |
| ೨೭ | ಚಂಡೀಘರ್ | [illegible] | ೧ | ೮ |
| | | ಬಿಎಲ್‌ಡಿ | ೭ | |
| ೨೮ | ದಾದರ್ ಮತ್ತು ನಾಗರ್ ಹವೇಲಿ | ಐಎನ್‌ಸಿ | ೧ | ೧ |
| ೨೯ | ದೆಹಲಿ | ಬಿಎಲ್‌ಡಿ | ೭ | ೭ |
| ೩೦ | ಲಕ್ಷದ್ವೀಪ | ಐಎನ್‌ಸಿ | ೧ | ೧ |
| ೩೧ | ಪಾಂಡಿಚೇರಿ | [illegible] | ೧ | ೧ |

೨೦. ಇದು ಬತ್ತಲಾರದ ಗಂಗೆ(೧೯೮೩) ಕವನ ಸಂಕಲನದ ಬತ್ತಲಾರದ ಗಂಗೆ ಕವನದ ಸಾಲುಗಳು. ತುರ್ತುಪರಿಸ್ಥಿತಿ ನಂತರದ ರಾಜಕಾರಣದಿಂದ ಉಂಟಾದ ನಿರಾಸೆ, ಪಕ್ಷವಷ್ಟೇ ಬದಲಾಗಿ ಹಳೆಯ ವ್ಯವಸ್ಥೆ ಉಳಿದುಬಂದಿದ್ದು ಭ್ರಮನಿರಸನ ಉಂಟು

ಮಾಡಿರುವುದು ಕಾಣಬರುವುದು. ನದಿ ಹರಿವ ತಾಣದಲ್ಲಿ ತಳಬಿರಿದು ಗಂಗೆ ಪೂರ್ತಿ ಬತ್ತಿ ಹೋದರೆ ಹೊಸ ವ್ಯವಸ್ಥೆ ರೂಪುಗೊಳ್ಳಲು ಸಾಧ್ಯವೆಂಬ ಆಶಾಭಾವ ಹೊಸ ವ್ಯವಸ್ಥೆಯ ಬಯಕೆಯನ್ನು ವ್ಯಕ್ತಪಡಿಸಿರುವುದು.

೨೧. ಇಲ್ಲಿ ಬಳಸಿರುವ ವಿಚಾರಗಳು ೧೯೭೭ರ ಏಪ್ರಿಲ್‌ನಿಂದ ಆಗಸ್ಟ್‌ವರೆಗಿನ ರಾಜಕೀಯ ವರದಿಗಳ ಆಧಾರಿತ. ಡೆಕ್ಕನ್ ಹೆರಾಲ್ಡ್ ಮತ್ತು ಪ್ರಜಾವಾಣಿ ಪತ್ರಿಕೆಯನ್ನು ಬಳಸಲಾಗಿದೆ.

೨೨. ಕಾಂಗ್ರೆಸ್ ಆಡಳಿತದಲ್ಲಿದ್ದ ರಾಜ್ಯಗಳಲ್ಲಿ ನೇಮಕವಾಗಿದ್ದ ವಿಚಾರಣಾ ಆಯೋಗದಲ್ಲಿ ಮುಖ್ಯಮಂತ್ರಿಗಳು, ಇತರ ಪ್ರಮುಖರಿಗೆ ನ್ಯಾಯಾಲಯದಿಂದ ಸಮನ್ಸ್ ಬಂದಲ್ಲಿ ಮಾತ್ರ ಹಾಜರಾಗುವಂತೆ ಹಾಡು ಹೇಳಿಕೊಡುತ್ತಿರುವುದು. ಷಾ ಆಯೋಗದ ವಿಚಾರಣೆ ಆರಂಭವಾಗಿದ್ದು ಇಂದಿರಾ ಗಾಂಧಿ ಅವರು ಸಮನ್ಸ್ ಬಾರದೆ ಆಯೋಗದ ಮುಂದೆ ಹಾಜರಾಗುತ್ತಿರಲಿಲ್ಲ. ಎಲ್ಲ ರಾಜ್ಯಗಳ ಮುಖ್ಯಮಂತ್ರಿಗೆ ಇದನ್ನು ಕಲಿಸಿಕೊಡುತ್ತಿದ್ದು, ಶೀರ್ಷಿಕೆ ಇಂದಿರಾ ಕೋರಸ್ ಎಂದಿದೆ. ಈ ಕೋರಸ್ ಹಾಡುತ್ತಿರುವವರಲ್ಲಿ ದೇವರಾಜ ಅರಸು ಕೂಡ ನಿಂತಿರುವುದನ್ನು ಗಮನಿಸಬಹುದು.

೨೩. ಚುನಾವಣೆಯ ದಿನ ಕನ್ನಡಪ್ರಭದ ಮುಖಪುಟದಲ್ಲಿ ಸಂಪಾದಕೀಯವಿದೆ. ಚರಿತ್ರಾರ್ಹರಾಗಿ ಎನ್ನುವ ಶೀರ್ಷಿಕೆಯಡಿ ಜನತಾ ಪಕ್ಷಕ್ಕೆ ಮತ ನೀಡಲು ಭಾವನಾತ್ಮಕ ನೆಲೆಯಲ್ಲಿ ಪ್ರಚೋದಿಸಲಾಗಿದೆ. ಸಂಪಾದಕೀಯದ ಮಧ್ಯೆ ಭಾರತ ಅಮರ: ಇಂದಿರಾ ಗಾಂಧಿ ಅಮರಳಲ್ಲ ಎಂಬುದನ್ನು ನೋಡಬಹುದು. ಪ್ರಜಾಪ್ರಭುತ್ವದ ರಕ್ಷಣೆಗಾಗಿ ಇಂದಿರಾ ಗಾಂಧಿ ಅವರನ್ನು ಸೋಲಿಸಿ, ಜನತ ಪಕ್ಷದ ಅಭ್ಯರ್ಥಿ ವೀರೇಂದ್ರ ಪಾಟೀಲರನ್ನು ಗೆಲ್ಲಿಸಬೇಕೆಂಬುದು ಸಾರ. ಆಗ ಖಾದ್ರಿ ಶಾಮಣ್ಣ ಅವರು ಕನ್ನಡಪ್ರಭದ ಸಂಪಾದಕರಾಗಿದ್ದರು. ಇವರು ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಪರೋಕ್ಷವಾಗಿ ಪ್ರತಿಭಟನಾಕಾರರಿಗೆ ಬೆಂಬಲಿಸಿದ್ದು, ಸಮಾಜವಾದಿ ಸಿದ್ಧಾಂತದ ಹೋರಾಟಗಾರರೊಡನೆ, ಭೂಗತ ಪ್ರತಿಭಟನಾಕಾರರೊಡನೆ ಸಂಪರ್ಕ ಹೊಂದಿದ್ದರು.

೨೪. ಚುನಾವಣೆಯ ಸಂದರ್ಭದ ಘರ್ಷಣೆಯಲ್ಲಿ ಸತ್ತ ಗಾಯತ್ರಿ ಎಂಬ ಹುಡುಗಿಯ ಶವದ ಛಾಯಾಚಿತ್ರ,

೨೫. ಈ ಚುನಾವಣೆಯಿಂದ ಪ್ರೇರಿತಗೊಂಡು ರಚಿತವಾದ ನಾಲ್ಕು ಕವನಗಳು ಸಂಕ್ರಮಣದಲ್ಲಿ ಪ್ರಕಟವಾಗಿವೆ. ನಿರ್ಗಮನದಿಂದ ಆಗಮನದವರೆಗೆ, ಕೀಚಕ ಸಾಹಸ ವಿಜಯಂ, ... ಎಂದು ಮಾತ್ರ ಮತ್ತು ಡಿಯರ್ ಮಿಸ್ ಗಾಯತ್ರಿ ಎಂದು ವಿವಿಧ ವಸ್ತುವಿಷಯಗಳನ್ನು ಆಧರಿಸಿದೆ. ನಿರ್ಗಮನದಿಂದ ಆಗಮನದವರೆಗೆ ೧೯೭೭ರ ಲೋಕಸಭೆ ಚುನಾವಣೆಯಿಂದ ಚಿಕ್ಕಮಗಳೂರು ಚುನಾವಣೆಯವರೆಗಿನ ಇಂದಿರಾ ಗಾಂಧಿ ಅವರ ಬೆಳವಣಿಗೆಯನ್ನು, ಕೀಚಕ ಸಾಹಸ ವಿಜಯಂ, ... ಎಂದು ಮಾತ್ರ ಕವನಗಳು ಅರಸು ಮತ್ತು ಚುನಾವಣಾ ನೆಲೆಯಲ್ಲಿ ಜನಸಾಮಾನ್ಯನ ಪಾತ್ರ ಕುರಿತು ರಚಿಸಿರುವುದು.

೨೬. ಇದರಲ್ಲಿ ಭಾಗ್ಯಜ್ಯೋತಿ ಯೋಜನೆಯ ಸಂಪೂರ್ಣ ಕೀರ್ತಿಯನ್ನು ಅರಸು ಅವರಿಗೆ ನೀಡಲಾಗುತ್ತಿದೆ. ಬೆಳಕಿನ ಕಾರಣಕರ್ತನಂತೆ ಬಿಂಬಿಸಲಾಗಿದೆ. ಮೇಲಿನ ಚರ್ಚೆಗಳಲ್ಲಿ ಕಂಡುಬಂದ ವಿಚಾರಗಳಿಗೆ ಪೂರಕವಾಗಿದೆ.

೨೭. ಕಾಂಗ್ರೆಸ್ ಪಕ್ಷಗಳ ಒಕ್ಕೂಟ ಮಾಡುವ ಪ್ರಯತ್ನದ ಫಲವಾಗಿ ಕಾಂಗ್ರೆಸ್(ಯು) ಅಡಿಯಲ್ಲಿ ಕೆಲವು ಪಕ್ಷಗಳು ಒಗ್ಗೂಡುವುವು. ನಂತರದಲ್ಲಿ ರಾಜ್ಯದಲ್ಲಿದ್ದ ಕರ್ನಾಟಕ ಕಾಂಗ್ರೆಸ್‌ನ್ನು ಕಾಂಗ್ರೆಸ್(ಯು)ನಲ್ಲಿ ವಿಲೀನಗೊಳಿಸಲಾಗುವುದು.

೨೮. ೧೯೭೭ರ ಲೋಕಸಭಾ ಚುನಾವಣೆಯ ನಂತರದಲ್ಲಿ ಜನತಾ ಪಕ್ಷ ರಾಷ್ಟ್ರೀಯ ಪಕ್ಷವಾಗಿ ಚುನಾವಣಾ ಆಯೋಗದಿಂದ ಗುರುತಿಸಲ್ಪಟ್ಟಿತು. ೧೯೭೭ರ ಚುನಾವಣೆಯಲ್ಲಿ ಭಾರತೀಯ ಲೋಕದಳದ ಹೆಸರಿನಲ್ಲಿ ಜನತಾ ಪಕ್ಷದ ಅಭ್ಯರ್ಥಿಗಳು ಸ್ಪರ್ಧಿಸಿದ್ದರು(ಕರ್ನಾಟಕಕ್ಕೆ ಸಂಬಂಧಿಸಿದಂತೆ).

೨೯. ಇದನ್ನು ೧೯೭೭ ಮತ್ತು ೧೯೮೦ರ ಲೋಕಸಭಾ ಚುನಾವಣೆಯ ಶೇಕಡಾವಾರು ಮತಗಳನ್ನು ಆಧರಿಸಿ ಹೇಳಲಾಗಿದೆ. ಆಧಾರವಾಗಿ ಭಾರತ ಚುನಾವಣಾ ಆಯೋಗದ ವರದಿಗಳನ್ನು ಗಮನಿಸಲಾಗಿದೆ.

೩೦. ಪ್ರಮುಖವಾಗಿ ಬದಲಾಯಿಸಿದ ಪಕ್ಷಗಳು ಭಾರತೀಯ ಕಾಂಗ್ರೆಸ್ ಪಕ್ಷ, ಭಾರತೀಯ ಜನತ ಪಕ್ಷ, ಸಮಾಜವಾದಿ ಪಕ್ಷ ಮತ್ತು ಜನತಾ ದಳ(ಸೆಕ್ಯುಲರ್), ಕರ್ನಾಟಕ ಕ್ರಾಂತಿ ರಂಗ ಮತ್ತಿತರ.

೩೧. ಮೊದಲನೆಯದು, ೧೯೭೮ರಲ್ಲಿ ಸಂಪುಟ ಸಭೆ ವಿಸ್ತರಣೆಯ ಸಂದರ್ಭದ್ದು. ಮೊದಲ ಸಾಲಿನಲ್ಲಿ ಬಂಗಾರಪ್ಪ ಅವರು ನಿಂತಿರುವುದು ಕಂಡುಬರುವುದು. ಎರಡನೆಯದು, ಅರಸು ಅವರ ನಿಧನದ ನಂತರ ಜನ್ಮ ದಿನಾಚಾರಣೆ ಸಂದರ್ಭದಲ್ಲಿ ಅರಸು ಬೆಂಬಲಿಗರು ಮತ್ತು ಸಮಾಜವಾದಿಗಳ ಜೊತೆ ಬಂಗಾರಪ್ಪ ಅವರು ಕುಳಿತಿರುವುದನ್ನು ನೋಡಬಹುದು.

೩೨. ಕರ್ನಾಟಕ ವಿಕಾಸ ಪಕ್ಷ(ಕೆವಿಪಿ), ಕರ್ನಾಟಕ ಕಾಂಗ್ರೆಸ್ ಪಕ್ಷಗಳನ್ನು(ಕೆಸಿಪಿ) ಹೊಸದಾಗಿ ಸೃಷ್ಟಿಸಿರುವುದನ್ನು ನೋಡಬಹುದು.

೩೩. ಎಲ್ಲಿ ಮನಕಳುಕಿರದೋ ಎಲ್ಲಿ ತಲೆದಾಗಿರದೋ ಕೃತಿಯು ವೀರಪ್ಪ ಮೊಯಿಲಿಯವರ ಜೀವನ ಕಥನ. ಮನೋಹರ್ ಪ್ರಸಾದ್ ಕನ್ನಡಕ್ಕೆ ಅನುವಾದಿಸಿದ್ದಾರೆ. ಈ ಕೃತಿಯಲ್ಲಿ ಇದನ್ನು ವೀರಪ್ಪ ಮೊಯಿಲಿಯ ತಂತ್ರವಾಗಿ ನೀಡಲಾಗಿದೆ.

೩೪. ಸಾಹಿತ್ಯರಂಗದಲ್ಲಿ ರಾಜಕೀಯ ಎಂಬ ಕೃತಿಯಲ್ಲಿರುವ ಗಟ್ಟಿಯಾಗಿ ಮಾತಾಡಿ, ಗಟ್ಟಿಯಾಗಿ ಬರೆಯಿರಿ, ಗಟ್ಟಿಯಾಗಿ ಬದುಕಿ-ತುರ್ತುಪರಿಸ್ಥಿತಿಯಲ್ಲಿ ಪ್ರಕಟವಾದ ಲೇಖನಗಳ ಕುರಿತ ಸಮಕಾಲೀನ ಚಿಂತನೆಯನ್ನು ಅನಾವರಣಗೊಳಿಸುವುದು.

೩೫. ಇದಕ್ಕೆ ಬೂಕರ್ ಪ್ರಶಸ್ತಿ ದೊರೆತಿದೆ.

೩೬. ಬಂಡಾಯ ಸಾಹಿತ್ಯ ಚಳುವಳಿ ಎಂಬ ಈ ಲೇಖನವು ೧೯೭೯ರ ಅಕ್ಟೋಬರ್‌ನಲ್ಲಿ ಪ್ರಕಟವಾಗಿದೆ.

೩೭. ಸಮಕಾಲೀನವಾಗಿ ದಲಿತ ಸಾಹಿತ್ಯ ಮತ್ತು ದಲಿತ ಚಳವಳಿಯನ್ನು ಮರಾಠಿ, ಗುಜರಾತಿ ಹಾಗೂ ತೆಲುಗು ಭಾಷಾ ಪ್ರದೇಶಗಳಲ್ಲಿ ಕಾಣಬಹುದು.

೩೮. ಬೆಂಗಳೂರಿನ ಕೆಲವು ಬಡಾವಣೆಗಳಲ್ಲಿ ಪ್ರದರ್ಶನ ಕಂಡ ೧೯೭೮ರ ಆಗಸ್ಟ್‌ನಲ್ಲಿ ಬೆಲ್ಚಿ ಮತ್ತು ದಲಿತರು ಕುರಿತ ನಾಟಕ ಹೆಚ್ಚು ಚರ್ಚೆಗೆ ಒಳಗಾಯಿತು. ಬಿಹಾರದ ಬೆಲ್ಚಿಯಲ್ಲಿ ನಡೆದ ದಲಿತರ ಮೇಲಿನ ದೌರ್ಜನ್ಯ ಕಥಾವಸ್ತು. ಈ ಕುರಿತು ಸಂಕ್ರಮಣದಲ್ಲಿ(೨೮-೮-೧೯೭೮) ಇದರ ಚರ್ಚೆಗಳನ್ನು ಕಾಣಬಹುದು.

೩೯. ಕರ್ನಾಟಕದಲ್ಲಿ ಇಂದಿರಾ ಗಾಂಧಿ ಅವರು ಚಿಕ್ಕಮಗಳೂರು ಉಪಚುನಾವಣೆಯಲ್ಲಿ ಸ್ಪರ್ಧಿಸುವುದನ್ನು ವಿರೋಧಿಸಿ ಜನತಾ ಪಕ್ಷದ ಪರ ಚಿಕ್ಕಮಗಳೂರು ಜಿಲ್ಲೆಯಲ್ಲಿ ಸ್ವಾತಂತ್ರ್ಯದ ಹಬ್ಬವೆಂದು ಬೀದಿ ನಾಟಕದ ಮೂಲಕ ಪ್ರಚಾರ ಕೈಗೊಂಡರು.

೪೦. ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಮಾರ್ಚ್, ೧೦, ೨೦೧೨ ಬಂದ ರೈಸ್ ಅಂಡ್ ಫಾಲ್ ಆಫ್ ಕಲ್ಕತ್ತಾಸ್ ಗ್ರೂಪ್ ಥಿಯೇಟರ್, ದಿ ಎಂಡ್ ಆಫ್ ಎ ಪೊಲಿಟಿಕಲ್ ಡ್ರೀಮ್ ಲೇಖನದಲ್ಲಿನ ಮಾಹಿತಿ.

೪೧. ವಸಾಂಸಿ ಜರ್ನಾನಿಯ ಡಫ್ ಮ್ಯಾನ್ಸ್ ಡೆತ್‌ನಿಂದ ಸ್ಫೂರ್ತಿಗೊಂಡು ತೋರಿತ್ ಮಿತ್ರ ರಚಿಸಿರುವ ನಾಟಕ. ಇದರಲ್ಲಿ ಕಿವುಡು ಮತ್ತು ಮೂಕ ಸಾರ್ವಜನಿಕರ ಪ್ರತಿನಿಧಿಯಾಗಿ 'ಜನತ' ಪಾತ್ರವನ್ನು ಶಬ್ನಾ ಅಜ್ಮಿ ಅವರು ಅಭಿನಯಿಸಿದ್ದರು. ಕಿಸ್ಸಾ ಕುರ್ಸಿ ಕಾ ಚಿತ್ರದಲ್ಲಿಯೂ ಶಬ್ನಾ ಅಜ್ಮಿ ಅವರು 'ಜನತಾ' ಪಾತ್ರ ನಿರ್ವಹಿಸಿರುವರು.

೪೨. ಕಿಸ್ಸಾ ಕುರ್ಸಿ ಕಾ ಚಿತ್ರದ ಪ್ರಕರಣ ಕುರಿತು ೧೯೭೮ರಲ್ಲಿ ಜಿಲ್ಲಾ ನ್ಯಾಯಾಲಯದಲ್ಲಿ ಅಮೃತ್ ನಹತಾ ಅವರ ಪರ ತೀರ್ಮ ದೊರೆತಿದ್ದು, ಶುಕ್ಲಾ ಮತ್ತಿತರರಿಗೆ ಶಿಕ್ಷೆ ವಿಧಿಸಿತ್ತು. ಈ ಪ್ರಕರಣವನ್ನು ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಲಾಯಿತು. ೧೯೭೯ರಲ್ಲಿ ಬಂದ ಸರ್ವೋಚ್ಚ ನ್ಯಾಯಾಲಯದ ತೀರ್ಪು ಶಿಕ್ಷೆಯನ್ನು ರದ್ದುಗೊಳಿಸಿತು. ಸಮಕಾಲೀನವಾಗಿ ಜನತಾ ಸರ್ಕಾರ ಪತನವಾಗಿ ಕಾಂಗ್ರೆಸ್ ಪಕ್ಷ ಪುನಃ ಆಡಳಿತಕ್ಕೆ ಬಂದಿತ್ತು.

೪೩. ಜಮೀರ್ ಕೆ ಬಂದಿ ಎಂದು ಹಿಂದಿ ಭಾಷೆಯಲ್ಲಿ ಚಿತ್ರಿಸಲಾಗಿದೆ. ಇದಕ್ಕೆ ೧೯೮೨ರಲ್ಲಿ ದಿ ಟ್ರೈನ್ ಅವಾರ್ಡ್(ಯು.ಕೆ) ದೊರೆತಿದೆ. ಸಿನಿಮಾ ಭಾರತದ ಪ್ರಜಾಪ್ರಭುತ್ವದಲ್ಲಿನ ಕಪ್ಪು ದಿನ ಎಂದು ತುರ್ತುಪರಿಸ್ಥಿತಿಯನ್ನು ಕರೆಯುವ ಮೂಲಕ ಆರಂಭವಾಗುವುದು. ೪೫ ನಿಮಿಷಗಳಿದ್ದು, ಕಪ್ಪು ಬಿಳುಪಿನ ಚಿತ್ರವಾಗಿದೆ.

೪೪. ಬಾಲು ಮಹೇಂದ್ರರವರ ನಿರ್ದೇಶನದಲ್ಲಿ ೧೯೮೨ರಲ್ಲಿ ತೆಲುಗುವಿನಲ್ಲಿ ನಿರೀಕ್ಷಣ ಎನ್ನುವ ಹೆಸರಿನಲ್ಲಿ ಚಿತ್ರಿತವಾಗಿತ್ತು.

೪೫. ಈ ಚಿತ್ರ ಬಿಡುಗಡೆ ಸಂದರ್ಭದಲ್ಲಿ ವಿವಾದಗಳಿಗೀಡಾಗಿ ತೆರೆಕಂಡಿತು. ನಂತರ ಅನೇಕ ಸಿನಿಮಾ ಫೆಸ್ಟಿವಲ್‌ಗಳಲ್ಲಿ ಮೆಚ್ಚುಗೆ ಗಳಿಸಿತು. ಅಲ್ಲದೇ ಸುಮಾರು ೩೧ ಪ್ರಶಸ್ತಿಗಳು ಬಂದಿವೆ. ಇದಕ್ಕೆ ಗೋಲ್ಡನ್ ಲೋಟಸ್ ಮತ್ತು ನ್ಯಾಷನಲ್ ಫಿಲ್ಮ್ ಪ್ರಶಸ್ತಿಗಳು ೧೯೮೮ರಲ್ಲಿ ದೊರೆತಿದೆ.

೪೬. ಸಮಕಾಲೀನವಾಗಿ ಸಂಕ್ರಮಣದ ಸಂಚಿಕೆಯೊಂದರಲ್ಲಿ ಬಂದ ವಿಮರ್ಶೆಯ ಭಾಗ. ಇಲ್ಲಿ ಹಿಂದೆ ಬಂದಿದ್ದಂತಹ ಸಿನಿಮಾಗಳಾದ ಆಂದಿ ಇಂದಿರಾ ಗಾಂಧಿ ಅವರ ಅನುಕರಣೆಯಾದರೇ, ಕಿಸ್ಸಾ ಕುರ್ಸಿ ಕಾ ಎಮರ್ಜೆನ್ಸಿಯ ಉತ್ಪ್ರೇಕ್ಷೆ, ಚಂಡಮಾರುತ ನಕ್ಸಲೈಟ್ ಶಕ್ತಿಗಳ ಚಿತ್ರಣ ಎಂದು ತುರ್ತುಪರಿಸ್ಥಿತಿ ಕಾಲದ ವಿವಾದಾಸ್ಪದ ಚಿತ್ರಗಳನ್ನು ವಿಶ್ಲೇಷಿಸುವರು.

೪೭. ಈ ಚಿತ್ರದಲ್ಲಿ ಇನ್ಸ್‌ಪೆಕ್ಟರ್ ತಂಗಿಯನ್ನು ಯಾವುದೋ ಪ್ರಕರಣದ ಹಿನ್ನೆಲೆಯಲ್ಲಿ ಜೈಲಿಗೆ ಹಾಕಿರುವರು. ತುಂಬು ಗರ್ಭಿಣಿಯಾಗಿದ್ದ ಆಕೆಗೆ ಪ್ರಸವ ವೇದನೆ ಆರಂಭವಾದಾಗ ಆಸ್ಪತ್ರೆಯಲ್ಲಿ ಆಕೆಯ ಕಾಲುಗಳಿಗೆ ಕಬ್ಬಿಣದ ಸರಪಳಿಗಳನ್ನು ಬಿಗಿದು ಓಡಿಹೋಗದಂತೆ ಪೊಲೀಸರು ವಾರ್ಡ್‌ನ ಮುಂಭಾಗದಲ್ಲಿ ಕಾವಲು ಕಾಯುವ ದೃಶ್ಯವಿದೆ. ಈ ದೃಶ್ಯವು ತುರ್ತುಪರಿಸ್ಥಿತಿಯ ಕಾಲದಲ್ಲಿ ನಡೆದ ಸತ್ಯ ಘಟನೆ. ತುರ್ತುಪರಿಸ್ಥಿತಿಯ ವಿರುದ್ಧ ಪ್ರತಿಭಟಿಸಿದ ಮಹಿಳೆಯೊಡನೆ ನಡೆದುಕೊಂಡ ರೀತಿ. ಈ ಕುರಿತು ಸಮಕಾಲೀನವಾಗಿ ಶಾಸನ ಸಭೆಯಲ್ಲಿ ಚರ್ಚೆಗಳು ನಡೆದಿದ್ದವು.

೪೮. ಈ ಸಿನಿಮಾ ಸಮಕಾಲೀನವಾಗಿ ಹಿಂದಿ ಭಾಷೆಯಲ್ಲಿಯೂ ತೆರೆಕಂಡಿದೆ.

೪೯. ಇದು ನಿರೀಕ್ಷಕ್ ಎನ್ನುವ ಹೆಸರಿನಲ್ಲಿ ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿಯಲ್ಲಿ ಬರುತ್ತಿದ್ದ ಅಂಕಣ.

೫೦. ೧೯೬೬ರಲ್ಲಿ ಭಾರತ ಸರ್ಕಾರ, ಕಾನೂನು, ನ್ಯಾಯ ಮತ್ತು ಕಂಪನಿ ವ್ಯವಹಾರಗಳ ಮಂತ್ರಾಲಯವು ಪತ್ರಿಕಾ ಸ್ವಾತಂತ್ರ್ಯ ರಕ್ಷಿಸಲು ಪತ್ರಿಕಾ ಪರಿಷತ್ತನ್ನು ಸ್ಥಾಪಿಸಲು ೧೯೬೬ರ ಸೆಪ್ಟೆಂಬರ್‌ನಲ್ಲಿ ಅಧಿನಿಯಮವೊಂದನ್ನು ಜಾರಿಗೆ ತಂದಿತು. ಇದರ ಮುಖ್ಯ ಉದ್ದೇಶ ಭಾರತದಲ್ಲಿನ ವೃತ್ತ ಪತ್ರಿಕೆಗಳ ಮತ್ತು ಸುದ್ದಿ ಏಜೆನ್ಸಿಗಳ ಗುಣಮಟ್ಟಗಳನ್ನು ಕಾಪಾಡುವುದು.

೫೧. ಹೊಸ ನಾಯಕ, ಮಾಡೆಲ್, ನಾಯಕಿ ಕುರಿತ ಲೇಖನಗಳು, ಚಿತ್ರಗಳು, ಅಭಿರುಚಿಗಳು, ಗಾಢ ಬಣ್ಣಗಳು ಮತ್ತು ಗಾಳಿಸುದ್ದಿಗಳಿಂದ ಹೆಚ್ಚು ತುಂಬಿರುತ್ತವೆ ಎಂದು ಕುಲದೀಪ್ ನಯ್ಯರ್ ಅವರು ಗುರುತಿಸುವರು. ಈ ಮುಂದಿನ ವೆಬ್‌ಸೈಟನಲ್ಲಿ ಲೇಖನ ಲಭ್ಯವಿದೆ – www.mediamimamsa.com.

ಆಂತರಿಕ ತುರ್ತುಪರಿಸ್ಥಿತಿಯು ಸ್ವಾತಂತ್ರ್ಯ ನಂತರ ಭಾರತದ ರಾಜಕಾರಣದಲ್ಲಿ ಅತ್ಯಂತ ಸಂಕೀರ್ಣವಾದ ಕಾಲಘಟ್ಟ. ಈ ಸಂದರ್ಭವು ರಾಜಕೀಯ ಪಲ್ಲಟಕ್ಕಷ್ಟೇ ಅಲ್ಲದೆ ಸಾಮಾಜಿಕ, ಆರ್ಥಿಕ ಪಲ್ಲಟಗಳಿಗೂ ಸಾಕ್ಷಿಯಾಯಿತು. ೧೯೭೧ರ ಲೋಕಸಭಾ ಚುನಾವಣೆಯ ನಂತರ ಕಾಂಗ್ರೆಸ್ ಪಕ್ಷದ ಕಾರ್ಯನೀತಿ ಕುರಿತ ಭರವಸೆ ಕರಗತೊಡಗಿತ್ತು. ಜನರ ಅಸಮಧಾನ ದಿನೇ ದಿನೇ ಹೆಚ್ಚಾಗುತ್ತಿದ್ದು ಬಂದ್, ಮುಷ್ಕರ, ಗೇರಾವ್‌ಗಳು ಅಧಿಕಗೊಂಡವು. ೧೯೭೪ರ ಹೊತ್ತಿಗೆ ಜಯಪ್ರಕಾಶ್ ನಾರಾಯಣ್ ಅವರ ನೇತೃತ್ವದಲ್ಲಿ ಕಾಂಗ್ರೆಸ್ ವಿರೋಧಿ ಹೋರಾಟವು ಚಳವಳಿಯ ರೂಪ ಪಡೆಯಿತು. ೧೯೭೫ರ ಜೂನ್‌ನಲ್ಲಿ ಪ್ರಧಾನಮಂತ್ರಿ ಇಂದಿರಾ ಗಾಂಧಿ ಅವರ ಆಯ್ಕೆ ಕುರಿತ ಅಲಹಾಬಾದ್ ಉಚ್ಚ ನ್ಯಾಯಾಲಯದ ತೀರ್ಪು ರಾಜಕಾರಣದಲ್ಲಿ ದೊಡ್ಡ ಸಂಚಲನವನ್ನುಂಟು ಮಾಡಿತು. ಇದು ತುರ್ತುಪರಿಸ್ಥಿತಿ ಜಾರಿಗೊಳಿಸಲು ಇಂದಿರಾ ಗಾಂಧಿಯವರಿಗೆ ತಕ್ಷಣದ ಕಾರಣವಾಯಿತು. ತುರ್ತುಪರಿಸ್ಥಿತಿ ಜಾರಿಯನ್ನು ವಿರೋಧಿಸಿ ರಾಷ್ಟ್ರದಾದ್ಯಂತ ಪ್ರತಿಭಟನೆಗಳನ್ನು ಕಾಣಬಹುದಾದರೂ ಇವು ರಾಜ್ಯದಿಂದ ರಾಜ್ಯಕ್ಕೆ ಭಿನ್ನ ಸ್ವರೂಪವನ್ನು ಪಡೆದಿವೆ. ಪ್ರತಿ ರಾಜ್ಯವು ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳಿಗೆ ಸ್ಪಂದಿಸಿದ ರೀತಿಯು ವಿಭಿನ್ನ ಹಾಗೂ ಅನನ್ಯವಾಗಿದೆ. ಸಮಕಾಲೀನ ಸಮಸ್ಯೆಗಳಿಗೆ ಸ್ಪಂದಿಸಿದ್ದ ಪ್ರಾದೇಶಿಕ ರಾಜಕಾರಣ, ಆರ್ಥಿಕತೆ, ಸಾಮಾಜಿಕತೆಗಳಿಗೆ ಸಂಬಂಧಿಸಿದ ಇತರ ಹೋರಾಟಗಳು ತುರ್ತುಪರಿಸ್ಥಿತಿ ವಿರೋಧಿ ಹೋರಾಟದಲ್ಲಿ ನಿರ್ಣಾಯಕ ಪಾತ್ರ ನಿರ್ವಹಿಸಲು ಕಾರಣವಾದವು. ಇದರ ಪರಿಣಾಮದಿಂದಾಗಿ ರಾಷ್ಟ್ರದಾದ್ಯಂತ ಪ್ರಾದೇಶಿಕ ರಾಜಕಾರಣದಲ್ಲಿ ಮಹತ್ವದ ತಿರುವು ಕಂಡುಬರುವುದು. ಪ್ರಸ್ತುತ ಅಧ್ಯಯನದಲ್ಲಿ ತುರ್ತುಪರಿಸ್ಥಿತಿಯನ್ನು ೧೯೭೦ರ ದಶಕದ ರಾಜಕಾರಣದ ಭಾಗವಾಗಿ ಅಧ್ಯಯನ ಮಾಡಲಾಗಿದೆ. ತುರ್ತುಪರಿಸ್ಥಿತಿಯ ಜಾರಿ ಹಾಗೂ ವಿರೋಧಿ ಪ್ರತಿಭಟನೆಗಳ ಕೇಂದ್ರ ವಸ್ತು "ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯದ ರಕ್ಷಣೆ". 'ಪ್ರಜಾಪ್ರಭುತ್ವ'ವು ಮೌಲ್ಯ, ವ್ಯವಸ್ಥೆ ಮತ್ತು ಆಚರಣೆ ಎಂಬ ಮೂರು ಹಂತಗಳನ್ನು ಹೊಂದಿದೆ. ಇವುಗಳಲ್ಲಿರುವ ವ್ಯತ್ಯಾಸ ಮತ್ತು ಅವುಗಳ ಗ್ರಹಿಕೆಗಳಲ್ಲಿನ ಭಿನ್ನತೆಯು ತುರ್ತುಪರಿಸ್ಥಿತಿ ಕಾಲದ ಪ್ರತಿಭಟನೆಯ ಸ್ವರೂಪ ಹಾಗೂ ನಂತರದ ರಾಜಕೀಯ ಬೆಳವಣಿಗೆಗಳ ಮೇಲೆ ಬೀರಿರುವ ಪರಿಣಾಮ ಅಪಾರವಾಗಿದೆ.

ನಾಗರಿಕರ ಸ್ವಾತಂತ್ರ್ಯ ಹಾಗೂ ಮೂಲಭೂತ ಹಕ್ಕುಗಳಿಗಾಗಿ ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳು ರೂಪುಗೊಂಡವು. ಈ ಹೋರಾಟಗಳಲ್ಲಿ ಪ್ರಧಾನವಾಗಿ ಭಾಗವಹಿಸಿದ ವರ್ಗಗಳು ಬಹುತೇಕ ಬುದ್ಧಿಜೀವಿಗಳು, ಮಧ್ಯಮವರ್ಗದವರು. ಇವರಲ್ಲಿ ಬಹುತೇಕರು ರಾಜಕೀಯ ಪಕ್ಷ ಮತ್ತು ರಾಜಕೀಯ ಸಂಘಟನೆಗಳೊಡನೆ ಸಂಬಂಧ ಹೊಂದಿದ್ದವರು. ಬಹುತೇಕ ಕೆಳವರ್ಗಗಳು ಈ ಹೋರಾಟಗಳಿಗೆ ನೇರವಾಗಿ ಸ್ಪಂದಿಸಲ್ಲಿಲ್ಲ. ೧೯೭೦ರ ದಶಕದ ಆರಂಭದಿಂದಲೂ ಕಂಡುಬಂದ ಚಳವಳಿಗಳ ಸ್ವರೂಪ, ಉದ್ದೇಶಗಳು ತುರ್ತುಪರಿಸ್ಥಿತಿ ನಂತರದ ಚಳವಳಿಗಳಲ್ಲಿ ಸ್ಥಿತ್ಯಂತರ ಹೊಂದಿದ್ದನ್ನು ಗಮನಿಸಬಹುದು.

ಕರ್ನಾಟಕದಲ್ಲಿ ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳು ತೀವ್ರವಾಗಿರಲಿಲ್ಲವಾದರೂ ರಾಜ್ಯ ರಾಜಕೀಯ ಮತ್ತು ಸಾಮಾಜಿಕ ನೆಲೆಗಟ್ಟಿನ ಮೇಲೆ ಆಳವಾದ ಪರಿಣಾಮ ಬೀರಿರುವುದನ್ನು ಕಾಣಬಹುದು. ಆ ಕಾಲದಲ್ಲಿ ಮುಖ್ಯಮಂತ್ರಿಯಾಗಿದ್ದ ದೇವರಾಜ ಅರಸು ಅವರ ಆಡಳಿತದಲ್ಲಿ ಕಂಡುಬಂದ ಪ್ರಮುಖ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ನೀತಿಗಳು ಇದಕ್ಕೆ ಪೂರಕವಾಗಿದ್ದವು. ೧೯೭೦ರ ದಶಕದ ಆರಂಭದ ವೇಳೆಗೆ ರಾಜ್ಯದಲ್ಲಿ ಸಾಮಾಜಿಕ ನ್ಯಾಯದ ರಾಜಕಾರಣದ ನೆಲೆಯಲ್ಲಿ ಹೊಸ ಅಲೆಗಳು ಹರಿದುಬರುವುದು. ಸಾಮಾಜಿಕ ತಳಹದಿಯ ಆಧಾರದ ಮೇಲೆ ನಾಯಕತ್ವ ರೂಪಿಸಿಕೊಳ್ಳುವ ಪ್ರಯತ್ನದ ಭಾಗವಾಗಿ ಸಮುದಾಯಗಳನ್ನು ಒಂದುಗೂಡಿಸುವ ರಾಜಕಾರಣವನ್ನು ಪರಿಚಯಿಸಲು ಪ್ರಯತ್ನಿಸಿದವರು

ಅರಸು. ಅರಸು ಅವರ ಕಾಲದ ಸಾಮಾಜಿಕ ನ್ಯಾಯದ ಪರಿಕಲ್ಪನೆಯ ವಿವಿಧ ಮುಖಗಳನ್ನು ಪ್ರಸ್ತುತದಲ್ಲಿಯೂ ನೋಡಬಹುದಾಗಿದೆ. ೧೯೭೨ರ ಚುನಾವಣೆಯಲ್ಲಿ ಅರಸು ಅವರ ರಾಜಕೀಯ ನೀತಿಯಿಂದಾಗಿ ಪ್ರಬಲ ಜಾತಿಗಳ ರಾಜಕೀಯ ಬೆಳವಣಿಗೆಗಳಲ್ಲಿ ಸ್ಥಿತ್ಯಂತರವನ್ನು ಗಮನಿಸಬಹುದು. ಅಲ್ಲಿಯವರೆಗೆ ಲಿಂಗಾಯಿತ ಮತ್ತು ಒಕ್ಕಲಿಗ ಸಮುದಾಯಗಳ ಪ್ರಾಧಾನ್ಯತೆಯನ್ನು ನೋಡಬಹುದು(ಅಧ್ಯಾಯ ೨ರ ಪುಟ – ೭೯ ರಿಂದ ೮೧ನ್ನು ನೋಡಿ). ಇದರ ದಿಕ್ಕನ್ನು ಬದಲಾಯಿಸುವ ಮೂಲಕ ಹಿಂದುಳಿದ ವರ್ಗಗಳು, ದಲಿತರು ಮತ್ತು ಅಲ್ಪಸಂಖ್ಯಾತರು ಆಡಳಿತದಲ್ಲಿ ಪಾಲ್ಗೊಳ್ಳಲು ಹೆಚ್ಚಿನ ಅವಕಾಶವನ್ನು ಸೃಷ್ಟಿಸುವ ಮೂಲಕ ಅಧಿಕಾರ ವಿಕೇಂದ್ರೀಕರಣದ ಪ್ರಕ್ರಿಯೆ ಅರಸರ ಕಾಲದಿಂದ ಆರಂಭವಾಯಿತು. ಸಮಕಾಲೀನವಾಗಿ ಕೈಗೊಂಡ ಆರ್ಥಿಕ ಮತ್ತು ಸಾಮಾಜಿಕ ಕಾರ್ಯಕ್ರಮಗಳು ಸಮಾಜದೊಳಗೆ ಹೊಸ ಚಲನೆಗೆ ಕಾರಣವಾಯಿತು. ಈ ದಿಸೆಯಲ್ಲಿ ಭೂ ಸುಧಾರಣಾ ಕಾಯ್ದೆ, ಇಪ್ಪತ್ತು ಅಂಶಗಳ ಕಾರ್ಯಕ್ರಮ ಮೊದಲಾದ ಆರ್ಥಿಕ ಕಾರ್ಯಕ್ರಮಗಳು ಜನರ ಮನಗೆಲ್ಲಲು ಸಹಕಾರಿಯಾದವು. ೧೯೭೪ ರಿಂದ ೧೯೭೫ರವರೆಗಿನ ರಾಜಕಾರಣದಲ್ಲಿ ಭೂ ಒಡೆತನಕ್ಕೆ ನೇರವಾಗಿ ವಿರೋಧ ಕಂಡುಬಂದರೆ ೧೯೭೭ರ ನಂತರ ನಿಶ್ಯಬ್ಧ ಯುದ್ಧವಾಗಿ ಬದಲಾದ ಬಗೆಯನ್ನು ನೋಡಬಹುದು(ಅಧ್ಯಾಯ ೨ ಪುಟ ೪೫ ರಿಂದ ೬೪).

ಅರಸು ಅವರ ಆಡಳಿತಾವಧಿಯಲ್ಲಿ ಕಂಡುಬರುವ ೧೯೭೪ರ ಭೂ ಸುಧಾರಣಾ ಕಾಯ್ದೆ, ಹಿಂದುಳಿದ ವರ್ಗಗಳ ಅಭಿವೃದ್ಧಿ ಕಾರ್ಯಕ್ರಮಗಳು, ಹಾವನೂರು ವರದಿ ಹಾಗೂ ಇಪ್ಪತ್ತು ಅಂಶಗಳ ಕಾಯ್ದೆಯನ್ನು ಜಾರಿಗೊಳಿಸಿದನ್ನು ಸಾಮಾಜಿಕ ನ್ಯಾಯದ ನೆಲೆಯಲ್ಲಿ ಹಲವು ವಿಶೇಷಣಗಳೊಂದಿಗೆ ಅರಸರ ಸಾಧನೆಗಳಾಗಿ ಬಣ್ಣಿತವಾಗುತ್ತವೆ. ಉದಾಹರಣೆಗೆ, 'ಭೂ ಸುಧಾರಣೆಯ ಪಿತಾಮಹ, ರೂವಾರಿ, ಸಾಮಾಜಿಕ ಪರಿವರ್ತನೆಯ ಹರಿಕಾರ' ಮೊದಲಾದವುಗಳನ್ನು ನೋಡಬಹುದು. ಭೂ ಸುಧಾರಣೆಯು ಇಪ್ಪತ್ತು ಅಂಶಗಳ ಕಾರ್ಯಕ್ರಮದ ಭಾಗವಾಗಿಯೂ ಜಾರಿಗೊಂಡಿತ್ತು. ಇಪ್ಪತ್ತು ಅಂಶಗಳಲ್ಲಿನ ಬಹುತೇಕ ಕಾರ್ಯಕ್ರಮಗಳು ಅರಸು ಅವರು ತಂದ ಸಾಮಾಜಿಕ ಕಳಕಳಿಯ ಕಾರ್ಯಕ್ರಮಗಳಂತೆ ಜನಮನದಲ್ಲಿ ಉಳಿದುಕೊಂಡು ಬಂದಿವೆ. ಈ ನಿಟ್ಟಿನಲ್ಲಿ

> ಇಂದಿರಾಜಿಯವರ ೨೦ ಅಂಶಗಳ ಕಾರ್ಯಕ್ರಮವನ್ನು ಜಾರಿಗೆ ತರುವಾಗ ಅರಸರು ಬಹಳ ಉತ್ಸುಕತೆಯನ್ನು ಹೊಂದಿದ್ದರು. ಏಕೆಂದರೆ ೨೦ ಅಂಶಗಳ ಕಾರ್ಯಕ್ರಮಗಳಲ್ಲಿ ಬಹುತೇಕ ಬಡವರಿಗೆ ಲಾಭ ದೊರೆಯುವಂತಹವೇ ಆಗಿದ್ದವು. ಬಡವರ ಕೆಲಸ ಮಾಡುವುದು ಎಂದರೆ ಎಲ್ಲಿಲ್ಲದ ಉತ್ಸಾಹ ಬರುತ್ತಿತ್ತು(ನಾಯ್ಯರ್ ೨೦೦೦: ೮೧).

ಮತ್ತು

> ಇಂದಿರಾ ಗಾಂಧಿಯವರು ೨೦ ಅಂಶದ ಕಾರ್ಯಕ್ರಮ ಕೊಟ್ರು, ಆದ್ರೆ ಭಾರತದಲ್ಲಿ ಅದನ್ನು ತತ್ವಶಃ ಜಾರಿಗೆ ತಂದವರು ದೇವರಾಜ ಅರಸು ಒಬ್ಬರೇ. ಬ್ರಹ್ಮಾಸ್ತ್ರ ಬಳಸಿದಂಗೆ ಬಳಸಿಕೊಂಡ್ರು ... ಆವತ್ತು ನಾವೆಲ್ಲ ಯೂತ್ ಕಾಂಗ್ರೆಸ್‌ನಲ್ಲಿದ್ವಿ, ಮನೆಮನೆಗೆ ಹೋಗಿ ಆನ್ ಡಿಮ್ಯಾಂಡ್ ಪ್ರೊನೋಟ್‌ಗಳನ್ನ ಬೀದೀಲಿ ತಗೊಂಡು ಸುಟ್ಟಾಕಿದ್ವಿ ಆವತ್ತು(ವಿಶ್ವನಾಥ್ ೨೦೦೬: ೧೨೫)

ಎಂಬ ಅಭಿಪ್ರಾಯಗಳನ್ನು ಕಾಣಬಹುದು.

> ೧೯೭೪ರ ಭೂ ಸುಧಾರಣಾ ಕಾನೂನು ಮತ್ತು ಒ.ಬಿ.ಸಿ. ವರ್ಗಗಳಿಗೆ ಶಿಕ್ಷಣ ಹಾಗೂ ಸರ್ಕಾರಿ ಉದ್ಯೋಗಗಳಲ್ಲಿ ಮೀಸಲಾತಿ ಕಲ್ಪಿಸುವ ಹಾವನೂರು ಆಯೋಗದ ವರದಿಯ ಅನುಷ್ಠಾನ. ಇವೆರಡೂ ದೇವರಾಜ ಅರಸರಿಗೆ ಅಮರತ್ವವನ್ನು ತಂದುಕೊಟ್ಟ ಸಾಧನೆಗಳಾಗಿದ್ದವು ... ಅರಸರು ಈ ಕ್ರಾಂತಿಕಾರಿ ಕ್ರಮಗಳನ್ನು ಜಾರಿಗೊಳಿಸಲು ಮುಂದಾಗಿದ್ದು ೧೯೭೭ರ ಐತಿಹಾಸಿಕ(ತುರ್ತುಪರಿಸ್ಥಿತಿ ನಂತರದ) ಲೋಕಸಭೆ ಚುನಾವಣೆ ಹಾಗೂ ತದನಂತರ ೧೯೭೮ರ ರಾಜ್ಯ ವಿಧಾನಸಭೆ ಚುನಾವಣೆ ಸವಾಲು ಎದುರಿಸಬೇಕಾದ ಕ್ಲಿಷ್ಟ ಮತ್ತು ನಿರ್ಣಾಯಕ ಸಂದರ್ಭದಲ್ಲಿ(ರೇಷ್ಮೆ ೨೦೧೧: ೧೭೩).
>
> ಪ್ರಬಲ ಕೋಮಿನ ರಾಜಕೀಯ ಪ್ರಭಾವ, ಅಧಿಕಾರಗಳ ವಿರುದ್ಧ ಅಸಮಾಧಾನದ ಹೊಗೆಯನ್ನು ಗುರುತಿಸುವ ಸಮರ್ಥ ನಾಯಕತ್ವ ಬರುವವರೆಗೂ ಕರ್ನಾಟಕ ರಾಜಕೀಯದಲ್ಲಿ ಯಾವುದೇ ಮಹತ್ತರ ಬದಲಾವಣೆಯನ್ನು ನಾವು ಕಾಣುವುದಿಲ್ಲ. ಹಿಂದುಳಿದ ವರ್ಗಗಳವರಿಗೆ ಅಂತಹ ಅವಕಾಶ ದೊರೆತಿದ್ದು ಡಿ.ದೇವರಾಜ ಅರಸುರವರಲ್ಲಿ. ಅರಸುರವರ ಅಧಿಕಾರಾವಧಿಯಲ್ಲಿ ಕರ್ನಾಟಕದ ಜಾತಿ

> ರಾಜಕೀಯದ ಸ್ವರೂಪದಲ್ಲಿ ಸಂಪೂರ್ಣ ಬದಲಾವಣೆಯನ್ನು ನಾವು ಕಾಣುತ್ತೇವೆ(ಸದಾನಂದ ೨೦೧೦: ೪೨೪).

ಹಾಗೂ

> ಲಿಂಗಾಯಿತ-ಒಕ್ಕಲಿಗ ಅಧಿಪತ್ಯದ ಅವಧಿಯಲ್ಲಿ ಎರಡನೇ ದರ್ಜೆ ಪ್ರಜೆಗಳಂತಿದ್ದ ಹಿಂದುಳಿದ-ಅಲ್ಪಸಂಖ್ಯಾತ-ದಲಿತ ಸಮುದಾಯದ ರಾಜಕೀಯ ಆಶೋತ್ತರಗಳಿಗೆ ದನಿ ದೊರೆಯಲಾರಂಭಿಸಿದ್ದು ೧೯೬೯ರ ಕಾಂಗ್ರೆಸ್ ವಿಭಜನೆ ನಂತರ. ಅದರಲ್ಲಿಯೂ ೧೯೭೧ರ ಲೋಕಸಭಾ ಚುನಾವಣೆಯ ಫಲಿತಾಂಶ ಲಿಂಗಾಯಿತ-ಒಕ್ಕಲಿಗ ಸಮುದಾಯಗಳ ಪ್ರಶ್ನಾತೀತ ಪ್ರಭುತ್ವವನ್ನು ಧೂಳಿಪಟ ಮಾಡಲು ಸಮರ್ಥ ಭೂಮಿಕೆ ನಿರ್ಮಾಣ ಮಾಡಿತ್ತು. ದಿಕ್ಕು ಬದಲಿಸುವ ಇಂಥ ರಾಜಕೀಯ ಸ್ಥಿತ್ಯಂತರಕ್ಕೆ ದೇವರಾಜ ಅರಸು ರೂಪಿಸಿದ ಅರ್ಥಪೂರ್ಣ ಜಾತಿ ಸಮೀಕರಣವೇ ಪ್ರಮುಖ ಕಾರಣವಾಯಿತು(ಪ್ರಕಾಶ್ ೨೦೧೪ ಮೇ ೧೪)

ಎಂಬ ಚರ್ಚೆಗಳು ಸಾಮಾಜಿಕ ಪರಿವರ್ತನೆಯ ಅರಸು ರಾಜಕಾರಣವಾಗಿ ಕಾಣುವ ವಾತಾವರಣವನ್ನು ಸೃಷ್ಟಿಸಿತು(ಅಧ್ಯಾಯ ಎರಡರಲ್ಲಿ ಈ ಕುರಿತ ವಿವರಗಳಿವೆ).

ಅರಸು ಅವರ ಆಡಳಿತ ಕಾಲದ ಪ್ರಮುಖ ಹಂತಗಳಾದ ಭೂ ಸುಧಾರಣಾ ಕಾಯ್ದೆ ಹಾಗೂ ಸಾಮಾಜಿಕ ನ್ಯಾಯದ ಹಿನ್ನೆಲೆಯ ಮೀಸಲಾತಿ ರಾಜಕಾರಣದ ಚರ್ಚೆಗಳು ಅರಸು ಅವರ ವೈಯಕ್ತಿಕ ನೆಲೆಯಲ್ಲಿ ಹೆಚ್ಚಾಗಿ ಮೂಡಿಬಂದಿರುವುದನ್ನು ಗುರುತಿಸಬಹುದು. ರಾಷ್ಟ್ರ ರಾಜಕಾರಣವನ್ನು ಗಮನಿಸಿದಾಗ ಅರಸು ಅವರ ಸರ್ಕಾರದ ಅನೇಕ ಕಾರ್ಯನೀತಿಗಳು ಕೇಂದ್ರ ಸರ್ಕಾರದಿಂದ ಪ್ರಭಾವಿತವಾಗಿ ಪ್ರಾದೇಶಿಕ ನೆಲೆಯಲ್ಲಿ ರೂಪುಗೊಂಡಿರುವುದು ಗೋಚರಿಸುತ್ತದೆ. ಇದಕ್ಕೆ ಪೂರಕವಾಗಿರುವ ಈ ವಿಮರ್ಶೆಯನ್ನು ನೋಡಬಹುದು.

> ಕೇಂದ್ರವು ಕಾಳಜಿ ತೋರಿಸಿದ ಶಕ್ತಿಗಾ ರಾಜ್ಯದ ಕಾಂಗ್ರೆಸ್(ಆರ್)ನ ಎಲ್ಲ ಘಟಕಗಳು ಹಾಗೂ ಎಲ್ಲ ಮುಖ್ಯಮಂತ್ರಿಗಳು ಭೂ ಸುಧಾರಣೆಗಳನ್ನು ಜಾರಿಗೊಳಿಸಲು ಮುಂದಾಗಲಿಲ್ಲ ಮತ್ತು ಕಾಂಗ್ರೆಸ್ ನಾಯಕತ್ವ ಭೂ ಸುಧಾರಣೆಗಳ ವಿಷಯದಲ್ಲಿ ಎಷ್ಟು ಆಸಕ್ತಿ ತೋರಿಸಿತು ಎಂಬುದು ವಿವಾದಾಸ್ಪದ ಅಂಶ. ಇದಕ್ಕಿಂತ ಮುಖ್ಯವಾದುದ್ದೇನೆಂದರೆ, ಮೇಲ್ವರ್ಗದ ಭೂ ಮಾಲೀಕರ ಬೆಂಬಲ ಪಡೆದಿದ್ದ ಕಾಂಗ್ರೆಸ್(ಒ)ನೊಂದಿಗೆ ಸೆಣಸಾಟದಲ್ಲಿ ತೊಡಗಿದ್ದ ಕಾಂಗ್ರೆಸ್(ಆರ್)ಗೆ ಪ್ರತ್ಯೇಕ ರಾಜಕೀಯ ಶಕ್ತಿಯಾಗಿ ಬೆಳೆಯಲು ಗ್ರಾಮೀಣ ಜನತೆಯ ಬೆಂಬಲ ಗಳಿಸಿಕೊಳ್ಳುವುದು ಅಗತ್ಯವಾಗಿತ್ತು. ಕರ್ನಾಟಕದ ಅಸಂತೃಪ್ತಿಯನ್ನು ಗ್ರಹಿಸಿ ಅದನ್ನು ಭೂ ಸುಧಾರಣೆಗಳ ಮೂಲಕ ಶಮನಗೊಳಿಸಲು ಯತ್ನಿಸಿದ ದೇವರಾಜ ಅರಸು ಅವರ ರಾಜಕೀಯ ಚಾಣಾಕ್ಷತನವನ್ನು ಇದರಿಂದ ಅರ್ಥ ಮಾಡಿಕೊಂಡರೆ ಅರಸು ಅವರ ಕಾಲದಲ್ಲಿ ಜಾರಿಗೆ ಬಂದ ಭೂ ಸುಧಾರಣೆಗಳ ಮಿತಿ ಹಾಗೂ ಸಾಧ್ಯತೆಗಳು ಗೊತ್ತಾಗುತ್ತವೆ(ರೊಡ್ರಿಗ್ರಸ್ ೨೦೧೦: ೫೦೬)

ಎಂದು ವಿಶ್ಲೇಷಿಸುತ್ತಾರೆ. ಇದಕ್ಕೆ ಪೂರಕವಾಗಿ ಶಿವಮೊಗ್ಗ ಪ್ರದೇಶದ[೨] ಸಮಾಜವಾದಿ ರಾಜಕಾರಣಿಗಳು ಕಾಂಗ್ರೆಸ್ ಪಕ್ಷ ಸೇರುವ ಮೂಲಕ ರಾಜ್ಯದಲ್ಲಿ ಪಕ್ಷ ಪ್ರಬಲವಾಗಿದ್ದನ್ನು ನೋಡಬಹುದು. ಅರಸು ಅವರ ಆಡಳಿತ ನೀತಿಯಲ್ಲಿನ ಸಾಮಾಜಿಕ ನ್ಯಾಯದ ವೈಭವೀಕರಣ ಎನ್ನುವಂತಹ ಮಾತುಗಳನ್ನು ಅಲ್ಲಗಳೆದರೂ ಸಮಕಾಲೀನವಾಗಿ ಕೈಗೊಂಡ ಅನೇಕ ಅಭಿವೃದ್ಧಿ ಕಾರ್ಯಕ್ರಮಗಳು ಅನೇಕ ರಾಜ್ಯಗಳಿಗೆ ಮಾದರಿಯನ್ನು[೩] ನೀಡಿದೆ.

ಹಾವನೂರು ವರದಿ ಜಾರಿ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣಕ್ಕಾಗಿ ಕೈಗೊಂಡ ಕಾರ್ಯಕ್ರಮಗಳು ಸಾಮಾಜಿಕ ನ್ಯಾಯದ ರಾಜಕಾರಣಕ್ಕೆ ಹೊಸ ಆಯಾಮವನ್ನು ನೀಡಿತು. ಕರ್ನಾಟಕದ ಪ್ರಾದೇಶಿಕ ರಾಜಕಾರಣದಲ್ಲಿ ಹಿಂದುಳಿದ ವರ್ಗಗಳು ಹೊಸ ಸ್ವಾತಂತ್ರ್ಯ ಪಡೆಯಲು, ಅದರಲ್ಲಿಯೂ ವಿಶೇಷವಾಗಿ ಸಂಘಟಿತರಾಗಲು ಮತ್ತು ಬೇಡಿಕೆ ಪೂರೈಸಲು ಸರ್ಕಾರದ ಮೇಲೆ ಒತ್ತಡ ಹೇರಲು ಸದೃಢವಾದವು. ಇತರ ರಾಜಕೀಯ ಪಕ್ಷಗಳು ಚುನಾವಣಾ ಯೋಜನೆಗಳನ್ನು ರೂಪಿಸುವಾಗ ಹಿಂದುಳಿದ ವರ್ಗಗಳನ್ನು ನಿರ್ಲಕ್ಷಿಸದಂತಹ ವಾತಾವರಣವು ನಿರ್ಮಾಣವಾಯಿತು.

*** *** ***

ಆಡಳಿತಶಾಹಿ ಹಾಗೂ ಸಮಾಜಗಳಿಂದ ವ್ಯವಸ್ಥೆಯೊಳಗೆ ಉಂಟಾಗುವ ಬದಲಾವಣೆಗಳು ಪ್ರಭಾವಿತವಾಗಿರುತ್ತವೆ. ತುರ್ತುಪರಿಸ್ಥಿತಿ ಕಾಲದ ಪ್ರತಿಭಟನೆಗಳ ಸ್ವರೂಪ ಹಾಗೂ ಸಮಕಾಲೀನ

ಮುಖ್ಯಮಂತ್ರಿಯಾಗಿದ್ದ ಅರಸು ಅವರ ಆಡಳಿತ ನೀತಿ ಕುರಿತಿರುವ ನಿಲುವುಗಳನ್ನು ಅಧ್ಯಾಯ ೩ರಲ್ಲಿ ನೋಡಲು ಪ್ರಯತ್ನಿಸಿದೆ. ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳು ರಾಜಕೀಯ ಮತ್ತು ರಾಜಕೀಯೇತರ ವಲಯಗಳಲ್ಲಿ ಕಂಡುಬರುತ್ತದೆ. ಈ ವಲಯಗಳ ಪ್ರತಿರೋಧ ಅನೇಕ ರೂಪಗಳಲ್ಲಿ ಪ್ರದರ್ಶಿತವಾಗಿವೆ. ಈ ಎರಡು ವಲಯಗಳಲ್ಲಿ ಸುಶಿಕ್ಷಿತರು, ಮಧ್ಯಮವರ್ಗದವರು ಹೆಚ್ಚಾಗಿದ್ದಾರೆ. ಪ್ರತಿಭಟನಾಕಾರರು ಸೈದ್ಧಾಂತಿಕ ಧೋರಣೆಯ ನೆಲೆಯಲ್ಲಿ ತಮ್ಮ ತಮ್ಮ ವಲಯಗಳಲ್ಲೇ ಕಾರ್ಯನಿರ್ವಹಿಸುವುದು ಕಂಡುಬರುವುದು. ಎಡಪಂಥೀಯ ಮತ್ತು ಬಲಪಂಥೀಯ ಸೈದ್ಧಾಂತಿಕತೆಯ ಭಿನ್ನತೆಯನ್ನು ಮೀರಿ ತುರ್ತುಪರಿಸ್ಥಿತಿ ವಿರೋಧಿ ಹೋರಾಟದಲ್ಲಿ ಒಟ್ಟಾಗಿ ಪಾಲ್ಗೊಂಡಿದ್ದರು ಎಂಬ ಅಭಿಪ್ರಾಯಗಳು ಸಾಮಾನ್ಯವಾಗಿ ಕಂಡುಬಂದಿತ್ತು. ಕೆಲವು ಹಂತದಲ್ಲಿ ಭಿನ್ನ ಸೈದ್ಧಾಂತಿಕ ಹಿನ್ನೆಲೆಯ ರಾಜಕೀಯ ಪಕ್ಷಗಳಿಗೆ ಸೇರಿದ ಪ್ರತಿಭಟನಾಕಾರರು ಒಟ್ಟಾಗಿ ಪ್ರತಿಭಟಿಸಿದ್ದು ಉಂಟು. ಈ ವಲಯದಲ್ಲಿ ಹೆಚ್ಚಾಗಿ ಕಂಡುಬರುವವರು ಮಧ್ಯಪಂಥೀಯ ಧೋರಣೆಯ ಪ್ರಗತಿಪರ ಚಿಂತಕರು. ಇವರು ಎಡಪಂಥೀಯ ಮತ್ತು ಬಲಪಂಥೀಯ ರಾಜಕಾರಣಿಗಳು ಒಗ್ಗಟ್ಟಾಗಿರಬೇಕೆಂದು ಬಯಸಿದವರು. ಇವರಿಗೆ ಪ್ರತಿಭಟನೆ ಹೆಚ್ಚು ಪ್ರಮುಖವಾಗಿತ್ತು.

ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳಲ್ಲಿ ಕನ್ನಡ ಭಾಷಾ ಹೋರಾಟದೊಡನೆ ಮಾತ್ರ ಗುರುತಿಸಿಕೊಂಡು ಇತರ ಹೋರಾಟಗಳೊಡನೆ ಹೆಚ್ಚಾಗಿ ಗುರುತಿಸಿಕೊಳ್ಳದ ವಾಟಾಳ್ ನಾಗರಾಜ್, ಸಾರಾ ಗೋವಿಂದ ಮುಂತಾದವರು ನೇರವಾಗಿ ಪಾಲ್ಗೊಂಡಿಲ್ಲದೆ ತಟಸ್ಥವಾಗಿದ್ದದ್ದು ಕಂಡುಬರುತ್ತದೆ. ಅರಸು ಅವರ ಆಡಳಿತನೀತಿಯಲ್ಲಿನ ಭಾಷಾ ನಿಲುವುಗಳು ಪೂರಕವಾಗಿ ಸಹಕರಿಸಿದೆ. ಆಡಳಿತ ಭಾಷೆ ಮತ್ತು ಅರಸು ಅವರ ಆಡಳಿತ ನೀತಿ ಕುರಿತಂತೆ ಅಧ್ಯಾಯ ೨ರಲ್ಲಿ ಚರ್ಚಿಸಲಾಗಿದೆ(ಪುಟ ೪೧ ರಿಂದ ೪೫). ಆದರೆ ಕನ್ನಡ ಸಾಹಿತ್ಯ ವಲಯದಲ್ಲಿ ಇದಕ್ಕಿಂತ ಭಿನ್ನವಾಗಿ ಪ್ರತಿರೋಧಗಳು ಕಂಡುಬರುತ್ತದೆ(ಅಧ್ಯಾಯ ೩, ಪುಟ ೧೨೦ – ೧೨೭).

ಸಾಹಿತ್ಯ, ಸಿನಿಮಾ ಮತ್ತು ರಂಗಭೂಮಿಗಳಲ್ಲಿ ಕಂಡುಬಂದ ಪ್ರತಿಭಟನಾ ವಲಯವೇ ರಾಜಕೀಯೇತರ ವಲಯ. ಈ ಮೂರು ವಲಯದಲ್ಲಿರುವ ಎಲ್ಲರೂ ಒಡನಾಟ ಹೊಂದಿದ್ದು ಸಮಕಾಲೀನ ಇತರ ಚಳವಳಿಗಳೊಡನೆ ಗುರುತಿಸಿಕೊಂಡಿದ್ದ ಪ್ರಗತಿಪರ ಚಿಂತಕರು. ಕನ್ನಡ ಸಿನಿಮಾರಂಗದಲ್ಲಿ ಪ್ರತಿರೋಧದ ಧ್ವನಿ ಭಿನ್ನ ರೂಪದಲ್ಲಿ ವ್ಯಕ್ತವಾಗಿದೆ. ರಾಜಶಾಹಿ ಮತ್ತು ಅಸ್ತಿತ್ವದಲ್ಲಿದ್ದ ಆಡಳಿತಶಾಹಿ ವಿರೋಧಿ ಕಥಾಹಂದರದ ಕಾಲ್ಪನಿಕ ಹಾಗೂ ಐತಿಹಾಸಿಕ ಚಲನಚಿತ್ರಗಳು ಅಧಿಕವಾಗಿದೆ. ಜೊತೆಗೆ ಈ ಸಿನಿಮಾಗಳನ್ನು ಬಹುತೇಕ ಪ್ರಗತಿಪರ ಚಳುವಳಿ, ಸಮಾನಾಂತರ ಚಿತ್ರ ಮತ್ತು ರಂಗಭೂಮಿಗಳಲ್ಲಿ ಗುರುತಿಸಿಕೊಂಡಿದ್ದವರು ನಿರ್ಮಿಸಿದ್ದಾರೆ ಅಥವಾ ನಿರ್ದೇಶಿಸಿದ್ದಾರೆ. ಇಂತಹ ಚಿತ್ರಗಳಲ್ಲಿ ಸಾಹಿತಿಗಳು, ನಾಟಕ ರಚನಾಕಾರರು, ನಾಟಕ ನಿರ್ದೇಶಕರು ಅಧಿಕವಾಗಿದ್ದಾರೆ. ಕರ್ನಾಟಕದ ಮಟ್ಟಿಗೆ ತುರ್ತುಪರಿಸ್ಥಿತಿ ವಿರೋಧಿ ನೆಲೆಯ ಪ್ರತಿರೋಧಗಳು ಸಮಾಜದೊಳಗಿನ ಬಂಡಾಯದ ದನಿ ಪಡೆದರೂಪವಾಗಿದೆ.

ಭಿನ್ನ ಭಿನ್ನ ವರ್ಗಗಳಲ್ಲಿ ತುರ್ತುಪರಿಸ್ಥಿತಿಯ ಹಾಗೂ ಅರಸು ಅವರ ವಿರುದ್ಧ ಕರ್ನಾಟಕದೆಲ್ಲೆಡೆ ಪ್ರತಿಭಟನೆಗಳು ನಡೆದರೂ ಅದು ನಿರೀಕ್ಷಿತ ಪ್ರಮಾಣದಲ್ಲಿರಲಿಲ್ಲ. 'ತುರ್ತುಪರಿಸ್ಥಿತಿಯ ಅತಿರೇಕಗಳು ಬೇರೆ ರಾಜ್ಯಗಳಲ್ಲಿ ವಿಜೃಂಭಿಸುತ್ತಿದ್ದಾಗ ಅರಸರು ಅಧಿಕಾರವನ್ನು ಬಡವರ ಕಲ್ಯಾಣಕ್ಕೆ ಬಳಸಿದರು' ಎನ್ನುವ ಮಾತು[೪] ಅರ್ಥಪೂರ್ಣವಾಗಿದೆ. ಮೇಲ್ನೋಟಕ್ಕೆ ಅರಸರ ಕಾಲದಲ್ಲಿ ಪೋಲೀಸರ ಹಿಡಿತ ಹೆಚ್ಚಿದ್ದರೂ, ಭ್ರಷ್ಟಾಚಾರ ಪ್ರಮಾಣವೂ ಹಿಂದಿಗಿಂತಲೂ ಹಿಗ್ಗಿದ್ದರೂ ಅವು ಮಧ್ಯಮವರ್ಗದವರಿಗೆ ಅಪಥ್ಯವಾಯಿತು. ಹೀಗಾಗಿ ಪೋಲೀಸ್ ದೌರ್ಜನ್ಯ ಹಾಗೂ ಭ್ರಷ್ಟಾಚಾರದಂತ ವಿಷಯಗಳು ಮಾಧ್ಯಮಗಳಲ್ಲಿ ಕಟು ಟೀಕೆಗೆ ಒಳಗಾದವು. ಆದರೆ ಕೆಳಸಮುದಾಯಗಳಿಗೆ ಈ ವಿಷಯಗಳು ಬಹಳ ಮುಖ್ಯ ವಿಚಾರವಾಗಲಿಲ್ಲ. ತುರ್ತುಪರಿಸ್ಥಿತಿ ವಿರುದ್ಧ ಹೋರಾಟಗಳಿಗಾಗಲಿ, ಜೆ.ಪಿ. ಚಳವಳಿಗಳಿಗಾಗಲೀ ತೀರಾ ಕೆಳಸ್ತರದ ಜನರು ತೀವ್ರವಾಗಿ ಸ್ಪಂದಿಸಲಿಲ್ಲ. ರಾಷ್ಟ್ರೀಯ ವಲಯದಲ್ಲಿ ಕಂಡುಬರುತ್ತಿದ್ದ ಜೆ.ಪಿ. ಚಳವಳಿಗೆ ಕರ್ನಾಟಕದ ಪ್ರಮುಖ ವಿರೋಧ ಪಕ್ಷಗಳು ಸ್ಪಂದಿಸಿದವಾದರೂ, ಅದು ತೀವ್ರತೆ ಪಡೆದುಕೊಳ್ಳಲಿಲ್ಲ. ಈ ಚಳವಳಿಯಲ್ಲಿದ್ದ

ಬಹುತೇಕರು ಸಮಕಾಲೀನವಾಗಿದ್ದ ಇತರ ಹೋರಾಟಗಳಲ್ಲಿಯೂ ಇದ್ದರು. ಇತರ ಹೋರಾಟದ ಹಾದಿಯೂ ಅರಸರ ಕಾರ್ಯಕ್ರಮಗಳಿಗೆ ಪೂರಕವಾಗಿದ್ದರಿಂದ ಅವರ ಧ್ವನಿ ಹೆಚ್ಚಾಗಿ ಕೇಳಿಸಲಿಲ್ಲ. ಜೊತೆಗೆ ರಾಷ್ಟ್ರೀಯ ವಲಯದಲ್ಲಿ ಜೆ.ಪಿ. ಚಳವಳಿಯ ಸಂದರ್ಭದಲ್ಲಿ ಸರ್ವೋದಯವಾದಿ, ಸಮಾಜವಾದಿಗಳ ಪಾಲ್ಗೊಳ್ಳುವಿಕೆ ಚಳವಳಿಯಲ್ಲಿ ಆರಂಭದಲ್ಲಿ ಹೆಚ್ಚಿತ್ತು. ಕ್ರಮೇಣ ವಿರೋಧ ಪಕ್ಷಗಳಾದ ಆರ್.ಎಸ್.ಎಸ್ ಮತ್ತು ಸಹಚರ ಗುಂಪುಗಳು, ಸಂಸ್ಥಾ ಕಾಂಗ್ರೆಸ್, ಸ್ವತಂತ್ರ ಪಕ್ಷ ಮೊದಲಾದವರ ಪಾಲ್ಗೊಳ್ಳುವಿಕೆ ೧೯೭೪ರ ಹೊತ್ತಿಗೆ ಅಧಿಕಗೊಂಡಿತು. ಇದರಿಂದಾಗಿ ಜೆ.ಪಿ. ಚಳವಳಿಯು ತೀವ್ರತೆ ಪಡೆಯಿತು. ಈ ಪಕ್ಷಗಳು ಭೂ ಸುಧಾರಣಾ ನೀತಿ, ಸಾಮಾಜಿಕ, ಆರ್ಥಿಕ ಕಾರ್ಯಕ್ರಮಗಳಿಗೆ ತಮ್ಮದೇ ತತ್ವಗಳನ್ನು ಹೊಂದಿದ್ದರು. ತುರ್ತುಪರಿಸ್ಥಿತಿ ವಿರೋಧಿ ಹೋರಾಟಗಳಲ್ಲಿಯೂ ಸಾಂಖ್ಯಿಕವಾಗಿ ಅತಿ ಹೆಚ್ಚಾಗಿ ಭಾಗವಹಿಸಿದ್ದರು. ತುರ್ತುಪರಿಸ್ಥಿತಿ ನಂತರದಲ್ಲಿ ಭೂ ಸುಧಾರಣಾ ಕಾಯ್ದೆ ಜಾರಿಯು ತೀವ್ರತೆ ಕಳೆದುಕೊಂಡಿತು. ಅಲ್ಲದೇ ಬಹುತೇಕ ರಾಜಕೀಯ ಪಕ್ಷಗಳ ಅಜೆಂಡಾದಿಂದ ಇದು ಕಣ್ಮರೆಯಾಗುವುದು. ಸ್ವಾತಂತ್ರ್ಯ ನಂತರದಲ್ಲಿ ಸರ್ಕಾರವು ಭೂ ಸುಧಾರಣಾ ಕಾಯ್ದೆಯನ್ನು ಆರ್ಥಿಕ ನೆಲೆಗಟ್ಟಿಗಿಂತ ಸಾಮಾಜಿಕ ನ್ಯಾಯದ ಹಿನ್ನೆಲೆಯಲ್ಲಿ ನೋಡಿರುವುದು ಗಮನಾರ್ಹ. ಕರ್ನಾಟಕದಲ್ಲಿ ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಆಡಳಿತ ಕಾಂಗ್ರೆಸ್ ಹೆಚ್ಚಿನ ಕ್ಷೇತ್ರಗಳನ್ನು ಪಡೆಯಲು ಭೂ ಸುಧಾರಣಾ ಜಾರಿಯ ಪಾತ್ರ ಪ್ರಮುಖವಾಗಿದೆ. ಇಡೀ ದಶಕದಲ್ಲಿ ರಾಷ್ಟ್ರ ಮತ್ತು ರಾಜ್ಯ ರಾಜಕಾರಣದಲ್ಲಿ ಭೂ ರಾಜಕಾರಣದ ಪಾತ್ರ ಪರೋಕ್ಷವಾಗಿ ಕಾರ್ಯನಿರ್ವಹಿಸಿದೆ.

*** *** ***

ತುರ್ತುಪರಿಸ್ಥಿತಿಯನ್ನು ವಿರೋಧಿಸಿ ಪ್ರತಿರೋಧ ಮಾಡಿ ೧೯೭೭ರಲ್ಲಿ ಪ್ರಥಮ ಬಾರಿ ಭಾರತದಲ್ಲಿ ಕಾಂಗ್ರೆಸ್ಸೇತರ ಸರ್ಕಾರ ಅಧಿಕಾರ ಪಡೆದರೂ ಆ ಪ್ರಯತ್ನ ಕರ್ನಾಟಕದಲ್ಲಿ ವಿಫಲವಾಯಿತು. ತುರ್ತುಪರಿಸ್ಥಿತಿ ವಿರೋಧಿ ಅಲೆ ಕರ್ನಾಟಕದಲ್ಲಿ ಕಂಡುಬರುವ ಬದಲು ಅರಸು ಅಲೆ ಪ್ರಬಲವಾಗಿತ್ತು ಎಂಬುದು ಆ ಕಾಲದ ವಿಧಾನಸಭಾ ಚುನಾವಣೆಯಲ್ಲಿ ಗೋಚರವಾಗುತ್ತದೆ. ಅರಸು ಅವರ ಜನಪರ ವಿಚಾರ, ಭೂ ಸುಧಾರಣಾ ಕಾಯ್ದೆ, ಸಾಮಾಜಿಕ ಸುಧಾರಣೆಯ ಅಂಶಗಳು ಅವರ ಕೀರ್ತಿಯನ್ನು ಮುಗಿಲೆತ್ತರಕ್ಕೆ ಕೊಂಡೊಯ್ದುವು.

ಚುನಾವಣೆಯ ಫಲಿತಾಂಶವನ್ನು ಬಿಡಿ ಬಿಡಿಯಾಗಿ ನೋಡದೆ ೧೯೭೧, ೧೯೭೭ ಮತ್ತು ೧೯೮೦ರ ಲೋಕಸಭಾ ಚುನಾವಣೆಗಳು ಹಾಗೂ ೧೯೭೨ ಮತ್ತು ೧೯೭೮ರ ವಿಧಾನಸಭಾ ಚುನಾವಣೆಗಳನ್ನು ಇಡಿಯಾಗಿ ನೋಡುವ ಅಗತ್ಯವಿದೆ. ಈ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷ ಗಳಿಸಿದ ಕ್ಷೇತ್ರಗಳ ಸಂಖ್ಯೆ, ಶೇಕಡಾವಾರು ಮತಗಳನ್ನು ಒಟ್ಟಾಗಿ ನೋಡುವ ಕ್ರಮ ಅನೇಕ ಒಳನೋಟಗಳನ್ನು ತೆರೆದಿಡುವುದು. ಈ ಲೋಕಸಭಾ ಚುನಾವಣೆಗಳಲ್ಲಿ ಕಾಂಗ್ರೆಸ್ ಕ್ರಮವಾಗಿ ೧೯೭೧ರಲ್ಲಿ ೨೭ ಕ್ಷೇತ್ರಗಳಲ್ಲಿ ಜಯಗಳಿಸಿದರೆ, ೧೯೭೭ರಲ್ಲಿ ೨೬ ಕ್ಷೇತ್ರಗಳಲ್ಲಿ ಜಯಗಳಿಸುವುದು. ೧೯೮೦ರ ಲೋಕಸಭಾ ಚುನಾವಣೆಯಲ್ಲಿ ೨೭ ಕ್ಷೇತ್ರಗಳಲ್ಲಿ ಜಯಗಳಿಸುವುದು. ಇಂದಿರಾ ವಿರೋಧಿ ಅಲೆಯಿದ್ದರೂ ಲೋಕಸಭಾ ಚುನಾವಣೆಯಲ್ಲಿ ೨೬ ಕ್ಷೇತ್ರಗಳಲ್ಲಿ ಜಯಗಳಿಸಿರುವುದು ಗಮನಾರ್ಹವಾದದ್ದು. ಲೋಕಸಭಾ ಚುನಾವಣೆಗಳಲ್ಲಿ ಕ್ರಮವಾಗಿ ಶೇ.೭೦.೮೭, ಶೇ.೫೬.೮ ಮತ್ತು ಶೇ.೫೬.೨೫ ಮತಗಳನ್ನು ಕಾಂಗ್ರೆಸ್ ಪಡೆದುಕೊಂಡಿರುವುದು ಗಮನಾರ್ಹವಾಗಿದೆ. ಹಾಗೆಯೇ ೧೯೭೨ರ ವಿಧಾನಸಭಾ ಚುನಾವಣೆಯಲ್ಲಿ ಕಾಂಗ್ರೆಸ್ ೧೬೫(ಶೇ.೫೨.೧೭) ಕ್ಷೇತ್ರಗಳಲ್ಲಿ ವಿಜಯ ಸಾಧಿಸಿತು.

೧೯೭೧ರ ಚುನಾವಣೆಯನ್ನು ಹೊರತುಪಡಿಸಿ ಉಳಿದ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಗಳಿಸಿರುವ ಶೇಕಡಾವಾರು ಮತ ಕರ್ನಾಟಕದಲ್ಲಿ ಕಡಿಮೆಯಾಗುತ್ತ ಸಾಗಿದೆ. ೧೯೭೭ ಮತ್ತು ೧೯೮೦ರ ಲೋಕಸಭಾ ಚುನಾವಣೆಗಳಲ್ಲಿ ಶೇಕಡಾವಾರು ಮತದಾನದಲ್ಲಿ ತೀವ್ರವಾದ ಅಂತರವಿಲ್ಲ. ಆದರೆ ೧೯೭೭ರ ಲೋಕಸಭಾ ಚುನಾವಣೆ ಮತ್ತು ೧೯೭೮ರ ವಿಧಾನಸಭಾ ಚುನಾವಣೆಯ ಫಲಿತಾಂಶಗಳು ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆ ಹಾಗೂ ಇತರ ಸಮಕಾಲೀನ ರಾಜಕಾರಣ ಕುರಿತ ಅಸಮಾಧಾನವನ್ನು ಅನಾವರಣಗೊಳಿಸುವುದು. ಜೊತೆಗೆ ಸಮಕಾಲೀನವಾಗಿ ದಕ್ಷಿಣ ಭಾರತದಾದ್ಯಂತ ಈ ಪ್ರಕ್ರಿಯೆಯನ್ನು ನೋಡಬಹುದಾಗಿದೆ. ಕರ್ನಾಟಕದಲ್ಲಿ ಕಾಂಗ್ರೆಸ್ ಪಕ್ಷದ ಶೇಕಡಾವಾರು ಮತ ಇಳಿಮುಖವಾಗಿ ಸಾಗಿದ್ದರೆ

ಆಂಧ್ರ ಪ್ರದೇಶ, ಕೇರಳ ಮತ್ತು ತಮಿಳುನಾಡಿನಲ್ಲಿ ಹೆಚ್ಚಾಗುತ್ತಾ ಹೋಗಿದೆ. ಈ ಮೂರು ರಾಜ್ಯಗಳಲ್ಲಿ[೫] ೧೯೭೭ಕ್ಕಿಂತ ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಉತ್ತಮ ಪ್ರದರ್ಶನ ನೀಡಿದೆ. ೧೯೮೦ರ ವೇಳೆಗೆ ಆಂಧ್ರ ಪ್ರದೇಶ ಮತ್ತು ಕೇರಳದಲ್ಲಿ ಶೇಕಡಾವಾರು ಮತದಾನ ಸಣ್ಣ ಪ್ರಮಾಣದಲ್ಲಿ ಇಳಿತಕಂಡರೂ ತಮಿಳುನಾಡಿನಲ್ಲಿ ಮೇಲ್ಮುಖವಾಗಿ ಸಾಗುವುದು. ಇವು ಸಮಕಾಲೀನ ರಾಜಕಾರಣ ಮತ್ತು ಸಮಾಜದೊಳಗಿನ ವಿಭಿನ್ನ ಆಶಯಗಳನ್ನು ತೋರಿಸುವುವು. ಕರ್ನಾಟಕದಲ್ಲಿ ಈ ಚುನಾವಣೆಗಳು ರಾಜ್ಯ ರಾಜಕಾರಣ, ರಾಷ್ಟ್ರ ರಾಜಕಾರಣ ಮತ್ತು ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳ ಬಿಂಬವಾಗಿರುವುದು.

೧೯೭೭ರಲ್ಲಿ ಕಾಂಗ್ರೆಸ್ ಪಕ್ಷವು ಲೋಕಸಭಾ ಚುನಾವಣೆಯಲ್ಲಿ ವಿಜಯಿಯಾದರೂ, ೧೯೭೮ರಲ್ಲಿ ವಿಧಾನಸಭಾ[೬] ಚುನಾವಣೆಯಲ್ಲಿಯೂ ಗೆದ್ದು ನಿಂತರೂ ಆಂತರಿಕ ಭಿನ್ನಮತಗಳಿಂದಾಗಿ ಕುಸಿಯುತ್ತಾ ಬಂದಿತು. ಇಂದಿರಾ ಗಾಂಧಿ ಅವರ ಎರಡನೆಯ ಪುತ್ರ ಸಂಜಯ್ ಗಾಂಧಿ ಹಾಗೂ ಕರ್ನಾಟಕದ ಯುವ ರಾಜಕಾರಣಿಗಳಾದ ಆರ್. ಗುಂಡೂರಾವ್, ಎಫ್. ಎಂ. ಖಾನ್ ಅವರ ಸಖ್ಯದಿಂದಾಗಿ ದೇವರಾಜ ಅರಸು ಅವರ ಶಕ್ತಿ ಕುಂಠಿತವಾಗುತ್ತಾ ಹೋಯಿತು. ಕರ್ನಾಟಕದ ವ್ಯವಹಾರದಲ್ಲಿ ಸಂಜಯ್ ಗಾಂಧಿ ಅವರ ಪ್ರಭಾವ ಹೆಚ್ಚಾದಂತೆಲ್ಲ ದೇವರಾಜ ಅರಸು ಅವರು ಕಳೆಗುಂದಿದರು. ಇಂದಿರಾ ಗಾಂಧಿ ಅವರ ಮೇಲಿನ ಗೌರವದಿಂದಾಗಿ ರಾಜ್ಯ ರಾಜಕಾರಣದಲ್ಲಿ ಎಗ್ಗಿಲ್ಲದೆ ಹರಿದಾಡುತ್ತಿದ್ದ ಸಂಜಯ್ ಗಾಂಧಿ ಮತ್ತು ಅವರ ಮಿತ್ರರನ್ನು ಹತೋಟಿಗೆ ತರುವಲ್ಲಿ ಅರಸರು ವಿಫಲರಾದರು. ಅದರ ತಾರ್ಕಿಕ ಅಂತ್ಯವೇ ಕಾಂಗ್ರೆಸ್‌ನಿಂದ ೧೯೭೯ರಲ್ಲಿ ಅರಸರ ನಿರ್ಗಮನ. ಕಾಂಗ್ರೆಸ್ ಪಕ್ಷದಿಂದ ಅವರು ಹೊರಬಂದು ಕರ್ನಾಟಕ ಕಾಂಗ್ರೆಸ್ ಪಕ್ಷವನ್ನು ಸ್ಥಾಪಿಸಿ ರಾಜಕಾರಣ ಮಾಡಲು ಪ್ರಯತ್ನಿಸದರೂ ಅದು ಸಫಲವಾಗಿಲ್ಲಿಲ್ಲ. ಹೀಗಾಗಿ ಅವರು ಕೆಲವೇ ದಿನಗಳಲ್ಲಿ ಕಾಂಗ್ರೆಸ್(ಅರಸ್) ಪಕ್ಷ ಬೆಳೆಸಲು ಮುಂದಾಗುತ್ತಾರೆ. ಈ ಸಂದರ್ಭದಲ್ಲಿ ಸಮೂಹ ಮಾಧ್ಯಮಗಳಲ್ಲಿ ರಾಷ್ಟ್ರೀಯ ನಾಯಕನಂತೆ ಅವರು ಬಿಂಬಿತರಾಗಿ ೧೯೮೦ರ ನಂತರ ಪ್ರಾದೇಶಿಕ ರಾಜಕಾರಣದಲ್ಲಿ ವಿಶಿಷ್ಟ ರಾಜಕಾರಣಿಯಾಗಿ ಕಂಡುಬರುತ್ತಾರೆ. ಇದಕ್ಕೆ ರಾಷ್ಟ್ರೀಯ ವಲಯದಲ್ಲಿ ಮೂರನೆಯ ಪರ್ಯಾಯ ಪಕ್ಷ ರಚನೆಗೆ ಪೂರಕ ಆಗಬಹುದೆಂಬ ಅವರ ನಿರೀಕ್ಷೆ ಪ್ರಮುಖವಾಗಿದೆ. ೧೯೮೦ರ ಲೋಕಸಭಾ ಚುನಾವಣಾ ಫಲಿತಾಂಶಗಳಲ್ಲಿ ಕಂಡುಬರುವ ಪ್ರಮುಖ ಅಂಶ ಎಂದರೆ ಅನಿರೀಕ್ಷಿತವಾದ ಅರಸು ಅವರ ಧಾರುಣ ಸೋಲು. ಕಾಂಗ್ರೆಸ್(ಯು) ಕರ್ನಾಟಕದಲ್ಲಿ ಒಂದು ಕ್ಷೇತ್ರದಲ್ಲಿಯೂ ಗೆಲ್ಲಲು ಸಾಧ್ಯವಾಗುವುದಿಲ್ಲ. ಜೊತೆಗೆ ರಾಷ್ಟ್ರೀಯ ನೆಲೆಯಲ್ಲಿಯೂ ಹೆಚ್ಚು ಕಾಲದವರೆಗೆ ಅಸ್ತಿತ್ವ ಉಳಿಸಿಕೊಳ್ಳುವುದಿಲ್ಲ. ಇದು ಅರಸರ ರಾಜಕೀಯ ನೀತಿಯ ಪ್ರಭಾವ ರಾಜ್ಯದಲ್ಲಿ ನೆಲೆಗೊಂಡ ಬಗೆಯನ್ನು ಪ್ರಶ್ನಾರ್ಥಕವಾಗಿ ನೋಡುವಂತೆ ಮಾಡುವುದು. ಆದರೆ ೧೯೮೦ರ ಚುನಾವಣೆಯ ಶೇಕಡಾವಾರು ಮತದಾನ ಗಮನಿಸಿದರೆ ಕಾಂಗ್ರೆಸ್(ಯು) ಶೇಕಡ ೧೬.೭೯ರಷ್ಟನ್ನು ಗಳಿಸಿ, ಅತಿ ಹೆಚ್ಚು ಮತ ಪಡೆದ ಮೂರನೇ ಪಕ್ಷವಾಗಿ ಹೊರಹೊಮ್ಮಿರುವುದಾಗಿದೆ. ಸಮಕಾಲೀನವಾಗಿ ಕಾಂಗ್ರೆಸ್ ಪಕ್ಷದ ಶೇಕಡಾವಾರು ಮತದಾನದಲ್ಲಿ ಹೆಚ್ಚು ವ್ಯತ್ಯಾಸಗಳು ಕಂಡುಬರುವುದಿಲ್ಲ. ಅರಸು ಅವರ ವ್ಯಕ್ತಿ ರಾಜಕಾರಣದ ಪ್ರಭಾವ ಇಲ್ಲಿ ಪೂರಕವಾಗಿ ವರ್ತಿಸಿದೆ. ಇಲ್ಲಿ ಕಾಂಗ್ರೆಸ್(ಯು)ಗೆ ಮತಹಾಕಿರುವ ವರ್ಗ ತುರ್ತುಪರಿಸ್ಥಿತಿಯ ವಿರುದ್ಧ ಪ್ರತಿಭಟನೆ ನಡೆಸಿದ್ದವರು ಎಂಬುದು ವಿಶೇಷ ಸಂಗತಿ. ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಈ ವರ್ಗ ಜನತಾ ಪಕ್ಷಕ್ಕೆ ಮತ ಚಲಾಯಿಸಿದ್ದರು. ಜನತಾ ಪಕ್ಷದ ಮತಗಳ ಸಂಖ್ಯೆಯಲ್ಲಿ ಇಳಿಮುಖವಾಗಿರುವುದನ್ನು ಹಾಗೂ ಕಾಂಗ್ರೆಸ್(ಯು) ಹೆಚ್ಚು ಮತಗಳನ್ನು ಹೊಂದಿದ್ದನ್ನು ಗಮನಿಸಿದರೆ ಜನತಾಪಕ್ಷದ ಮತಗಳು ಅರಸರ ಕಾಂಗ್ರೆಸ್‌ನತ್ತ ವಾಲಿದೆ ಎಂದು ತಿಳಿಯಬಹುದಾಗಿದೆ. ನಂತರದ ರಾಜಕೀಯ ಬೆಳವಣಿಗೆಯಲ್ಲಿ ಅರಸು ಅವರು ಕ್ರಾಂತಿರಂಗ ಎಂಬ ಪ್ರಾದೇಶಿಕ ಪಕ್ಷವನ್ನು ಸ್ಥಾಪಿಸಿದರೂ ಅಲ್ಲಿಯೂ ವೈಫಲ್ಯವನ್ನು ಕಾಣುತ್ತಾರೆ.

ಸಮಕಾಲೀನವಾಗಿ ೧೯೭೦ರ ದಶಕದ ರಾಜಕಾರಣ ಹಾಗೂ ತುರ್ತುಪರಿಸ್ಥಿತಿಯ ಪ್ರಭಾವದಿಂದ ಕರ್ನಾಟಕದ ದಲಿತ ಸಮುದಾಯಗಳಲ್ಲಿ ಎಡ ಮತ್ತು ಬಲ ಪ್ರಜ್ಞೆಗಳು ಪ್ರಬಲವಾಯಿತು. ಈ ದಿಸೆಯಲ್ಲಿ ಜಗಜೀವನ್ ರಾಮ್ ಅವರು ಕಾಂಗ್ರೆಸಿನಿಂದ ಹೊರಬಂದು ಹೊಸ ಪಕ್ಷ ರಚಿಸಿದ್ದು ಪ್ರಮುಖ ಪ್ರಭಾವ

ಬೀರಿತು. ಬಾಬು ಜಗಜೀವನ್ ರಾಮ್ ಅವರು ಸ್ಥಾಪಿಸಿದ ಕಾಂಗ್ರೆಸ್ ಫಾರ್ ಡೆಮಾಕ್ರೆಸಿ ಪಕ್ಷಕ್ಕೆ ಕರ್ನಾಟಕದ ಎಡಗೈ(ಮಾದಿಗ) ಸಮುದಾಯದ ದಲಿತ ಜನಾಂಗ ಒಲವನ್ನು ವ್ಯಕ್ತಪಡಿಸಿತು. ಆದರೆ ಬಲಗೈ(ಹೊಲೆಯ) ಸಮುದಾಯದ ದಲಿತ ಜನಾಂಗ ಇಂದಿರಾ ಕಾಂಗ್ರೆಸ್ಸನ್ನು ಬೆಂಬಲಿಸಿತು. ಈ ಸಂದರ್ಭದಲ್ಲಿ ಎಡ ಮತ್ತು ಬಲ ಸಮುದಾಯಗಳಿಲ್ಲಿದ್ದ ತಾತ್ವಿಕ ಭಿನ್ನಾಭಿಪ್ರಾಯಗಳು ಎಡಗೈ ಸಮುದಾಯದವರು ಜಗಜೀವನ್ ರಾಮ್ ಅವರನ್ನು, ಬಲಗೈ ಸಮುದಾಯದವರು ಅಂಬೇಡ್ಕರ್ ಅವರನ್ನು ತಮ್ಮ ನಾಯಕರನ್ನಾಗಿ ಗುರುತಿಸಿಕೊಂಡರು*.

*** *** ***

ತುರ್ತುಪರಿಸ್ಥಿತಿ ವಿರೋಧಿ ಪ್ರತಿಭಟನೆಗಳು ಮತ್ತು ಕಾಂಗ್ರೆಸ್ ವಿರೋಧಿ ನಿಲುವು ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಜನತಾ ಪಕ್ಷದ ಉದಯಕ್ಕೆ ಪ್ರಮುಖ ಕಾರಣವಾಯಿತು. ಹಿಂದೆಂದಿಗಿಂತ ಭಿನ್ನ ರೀತಿಯ ರಾಜಕೀಯ ಪಕ್ಷಗಳ ಧೃವೀಕರಣ ಈ ಚುನಾವಣೆಯಲ್ಲಿ ಕಂಡುಬರುತ್ತದೆ(ನಾಲ್ಕನೇ ಅಧ್ಯಾಯ ಮಟ ೧೭೩ – ೧೭೯). ರಾಜಕೀಯ ಪಕ್ಷಗಳ ಧೃವೀಕರಣವು ಹೊಸ ರೀತಿಯ ರಾಜಕೀಯ ಬೆಳವಣಿಗೆಗಳಿಗೆ ಇಂಬು ನೀಡಿತು. ಈ ಚುನಾವಣೆಯಲ್ಲಿ ಎಡಪಂಥೀಯ ಮತ್ತು ಬಲಪಂಥೀಯ ಪಕ್ಷಗಳೆರಡು ಸೈದ್ಧಾಂತಿಕ ಭಿನ್ನತೆಗಳನ್ನು ಮೀರಿರುವುದನ್ನು ಕಾಣಬಹುದು. ಇದೊಂದು ಹೊಸ ರೀತಿಯ ರಾಜಕೀಯ ಧೃವೀಕರಣ. ಅಲ್ಲಿಯವರೆಗೆ ಎಡಪಂಥೀಯ ಪಕ್ಷಗಳು ಎಡಪಂಥೀಯ ಅಥವಾ ಮಧ್ಯ ಪಂಥೀಯ ವಿಚಾರಧಾರೆಯ ಪಕ್ಷಗಳೊಂದಿಗೆ ಹಾಗೂ ಬಲಪಂಥೀಯ ಪಕ್ಷಗಳು ಬಲಪಂಥೀಯ ಅಥವಾ ಮಧ್ಯಪಂಥೀಯ ವಿಚಾರಧಾರೆಯ ಪಕ್ಷಗಳೊಂದಿಗೆ ಒಕ್ಕೂಟ ಏರ್ಪಡುವುದು ಸಾಮಾನ್ಯವಾಗಿತ್ತು. ನಂತರದ ದಿನಗಳಲ್ಲಿ ಈ ಧೃವೀಕರಣದೊಳಗೆ ಪೂರ್ತಿಯಾಗಿ ಭಾಗಿಯಾದ ಸಮಾಜವಾದಿ ಪಕ್ಷ ಸಂಪೂರ್ಣವಾಗಿ ಅಸ್ತಿತ್ವ ಕಳೆದುಕೊಂಡಿತು. ಜನತಾ ಪಕ್ಷಕ್ಕೆ ಹೊರಗಿನಿಂದ ಬೆಂಬಲ ನೀಡಿದ್ದ ಸಿಪಿಎಂ ಮತ್ತು ತುರ್ತುಪರಿಸ್ಥಿತಿಯಲ್ಲಿ ಕಾಂಗ್ರೆಸ್ ಪಕ್ಷಕ್ಕೆ ಬೆಂಬಲ ವ್ಯಕ್ತಪಡಿಸಿದ್ದ ಸಿಪಿಐ ಪಕ್ಷಗಳು ರಾಷ್ಟ್ರ ರಾಜಕಾರಣದಲ್ಲಿ ಪ್ರಭಾವಶಾಲಿಯಾಗಿ ಉಳಿಯುವುದಿಲ್ಲ. ಆದರೆ ೧೯೮೦ರ ನಂತರದ ಚುನಾವಣೆಗಳ ಫಲಿತಾಂಶದಲ್ಲಿ ಮಹತ್ತರ ಬದಲಾವಣೆಯು ಸಿಪಿಐ ಮತ್ತು ಸಿಪಿಎಂನಲ್ಲಿ ಕಾಣುವುದಿಲ್ಲ. ೧೯೭೭ರ ನಂತರ ರಾಷ್ಟ್ರೀಯ ಪಕ್ಷಗಳ ಬೆಳವಣಿಗೆ ಕುಂಠಿತಗೊಂಡು ಪ್ರಾದೇಶಿಕ ಪಕ್ಷಗಳು ಪ್ರಬಲವಾಗುತ್ತ ಹೋಗುತ್ತವೆ. ಪ್ರಾದೇಶಿಕ ರಾಜಕಾರಣ ಮತ್ತು ಹೋರಾಟಗಳು ಈ ದಿಸೆಯಲ್ಲಿ ಪ್ರಮುಖ ಪಾತ್ರವಹಿಸಿರುವುದು ಕಂಡುಬರುತ್ತದೆ. ೧೯೮೦, ೧೯೮೪ ಮತ್ತು ೨೦೧೪ರ ಲೋಕಸಭಾ ಚುನವಣಾ ಸಂದರ್ಭಗಳನ್ನು ಹೊರತುಪಡಿಸಿದಂತೆ ೧೯೮೯, ೧೯೯೧, ೧೯೯೬, ೧೯೯೮, ೧೯೯೯, ೨೦೦೪, ೨೦೦೯ರಲ್ಲಿ ಸಮ್ಮಿಶ್ರ ಸರ್ಕಾರಗಳ ರಚನೆ ಕೇಂದ್ರದಲ್ಲಿ ಕಂಡುಬರುತ್ತದೆ. ೧೯೭೭ರಲ್ಲಿ ಕಂಡುಬಂದ ಹೊಸ ರೀತಿಯ ರಾಜಕೀಯ ಪಕ್ಷಗಳ ಧೃವೀಕರಣದ ವಿವಿಧ ರೂಪಗಳಿವು.

*** *** ***

ದೇವರಾಜ ಅರಸರ ಕಾಲದ ಆಡಳಿತದ ಚರ್ಚೆಗಳು ತುರ್ತುಪರಿಸ್ಥಿತಿಯ ನೆನಮುಗಳೊಂದಿಗೆ ತಳುಕು ಹಾಕಿಕೊಂಡಿದ್ದರೂ ಅವರ ರಾಜಕಾರಣ ಮತ್ತು ಕಾರ್ಯನೀತಿ ಕರ್ನಾಟಕದ ರಾಜಕಾರಣದ ಮೇಲೆ ತೀವ್ರವಾದ ಪ್ರಭಾವ ಬೀರಿದೆ. ಕರ್ನಾಟಕದ ಬೇರೆ ಯಾವ ಮುಖ್ಯಮಂತ್ರಿಗಳಿಗೂ ದೊರಕದಷ್ಟು ಸ್ಥಾನಮಾನ, ಪ್ರಸಿದ್ಧಿ ಅರಸು ಅವರಿಗೆ ದೊರೆತಿದೆ. ಅರಸು ಅವರ ರಾಜಕೀಯ ಜೀವನದಲ್ಲಿ ಉಂಟಾದ ಏರಿಳಿತಗಳಿಗೆ ಹಿಂದುಳಿದ ವರ್ಗಗಳ ರಾಜಕಾರಣ ಅಪಾರವಾದ ಪ್ರಭಾವ ಬೀರಿದೆ. ಇದರ ಪರಿಣಾಮ ಅಗಾಧವಾದ ಅಸ್ತಿತ್ವ ಹೊಂದಿದ್ದು ಪ್ರಸ್ತುತ ರಾಜಕಾರಣದಲ್ಲಿಯೂ ಗಮನಿಸಬಹುದು. ಅರಸು ನಿರ್ಗಮನದ ನಂತರ ಎಸ್. ಬಂಗಾರಪ್ಪನವರನ್ನು ಕಾಂಗ್ರೆಸ್ ಪಕ್ಷದ ಅಧ್ಯಕ್ಷರನ್ನಾಗಿ ಮಾಡಿದರೂ ಬಂಗಾರಪ್ಪನವರು ಅಲ್ಲಿ ಬಹಳ ಕಾಲ ಉಳಿಯುವುದಿಲ್ಲ. ಹೈಕಮಾಂಡ್‌ನ ವಿರುದ್ಧ ಬಂಡೆದ್ದ ಬಂಗಾರಪ್ಪ ಅವರು ಅರಸು ಅವರ ನಿಧನದ

** ೨೬ ಮಾರ್ಚ್ ೨೦೧೪ರಂದು ನಡೆದ ಕಲೋಕ್ವಿಯಂನಲ್ಲಿ ಡಾ. ಚಿನ್ನಸ್ವಾಮಿ ಸೋಸಲೆ ಅವರು ತಿಳಿಸಿದ ಮಾಹಿತಿ.* ಈ ಮಾಹಿತಿಯನ್ನು ನೀಡಿದ ಡಾ. ಚಿನ್ನಸ್ವಾಮಿ ಸೋಸಲೆ ಅವರಿಗೆ ಧನ್ಯವಾದಗಳು.

ನಂತರ 'ಕ್ರಾಂತಿರಂಗ' ಪಕ್ಷದ ಅಧ್ಯಕ್ಷರಾಗುತ್ತಾರೆ. ಎಸ್. ಬಂಗಾರಪ್ಪ ಅವರು ೧೯೮೩ರ ಚುನಾವಣೆಯಲ್ಲಿ ಜನತಾ ಪಕ್ಷದೊಂದಿಗೆ ಚುನಾವಣಾ ಹೊಂದಾಣಿಕೆ ಮಾಡಿಕೊಂಡು ಜನತಾ ಪಕ್ಷದ ಗೆಲುವಿಗೆ ಕಾರಣರಾಗುತ್ತಾರೆ. ಕಾಂಗ್ರೆಸ್ ಪಕ್ಷದ ಸೋಲಿಗೆ ದೇವರಾಜ ಅರಸು ಅವರ ಮಾದರಿಯಲ್ಲಿ ಹಿಂದುಳಿದ ಜಾತಿ, ವರ್ಗಗಳ ಪ್ರತಿನಿಧಿಗಳಿಗೆ ಪ್ರಾತಿನಿಧ್ಯ ನೀಡದಿದ್ದದ್ದು ಕಾರಣ ಎಂಬ ಚರ್ಚೆಗಳು ಈ ಸಂದರ್ಭದಲ್ಲಿ ಕಂಡುಬರುತ್ತದೆ. ಅರಸು ಅವರ ಕಾಲದಲ್ಲಾದ ಸಾಮಾಜಿಕ ಚಲನಶೀಲತೆಯ ಪರಿಣಾಮಗಳು ವಿವಿಧ ರೂಪಗಳಲ್ಲಿ ಪ್ರಸ್ತುತ ರಾಜಕಾರಣದಲ್ಲಿಯೂ ಅನಾವರಣಗೊಳ್ಳುತ್ತಿವೆ. ಕರ್ನಾಟಕದ ಚುನಾವಣೆಗಳಲ್ಲಿ ಎಲ್ಲ ರಾಜಕೀಯ ಪಕ್ಷಗಳು ಹಿಂದುಳಿದ ಜಾತಿ, ವರ್ಗಗಳ ಪ್ರತಿನಿಧಿಗಳಿಗೆ ಪ್ರಾತಿನಿಧ್ಯ ನೀಡಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸಿದ್ದು, ಅದು ಕ್ರಮೇಣ ಅರಸು ಅವರನ್ನು ಪ್ರತೀಕವಾಗಿ ಮಾರ್ಪಡಿಸಿತು.

ಅರಸು ಅವರ ಆಡಳಿತ ಕಾಲದ ಪರಿಣಾಮಗಳು ಹಿಂದುಳಿದ ವರ್ಗಗಳ ಚಳವಳಿ, ರಾಜಕೀಯ ಹಾಗೂ ವ್ಯಕ್ತಿ ರಾಜಕಾರಣದ ಸ್ವರೂಪದಲ್ಲಿ ಮುಂದೆ ವಿಕಸಿತಗೊಂಡಿರುವುದನ್ನು ನೋಡಬಹುದು. ಅರಸು ಅವರ ಸಾಮಾಜಿಕ ಬದ್ಧತೆಯ ಕಾರ್ಯನೀತಿಗಳು ರಾಜಕೀಯ ಪತನಕ್ಕೆ ಕಾರಣವಾದಂತೆ ಮೇಲ್ನೋಟಕ್ಕೆ ಕಂಡುಬಂದರೂ, ಮುಂದಿನ ದಶಕಗಳಲ್ಲಿ ವಿಶಾಲವಾಗಿ ಬೆಳೆದಿರುವುದನ್ನು ಗಮನಿಸಬಹುದಾಗಿದೆ. ಒಂದು ಕಾಲದಲ್ಲಿ ಅವರ ಶಿಷ್ಯರಾಗಿ ಗುರುತಿಸಿಕೊಂಡಿದ್ದ ಕೆಲವರು ಮುಂದಿನ ದಶಕಗಳಲ್ಲಿ ಉನ್ನತ ಪದವಿಗಳಿಗೇರಿ ಕರ್ನಾಟಕ ರಾಜಕಾರಣದಲ್ಲಿ ಮಹತ್ವದ ಪಾತ್ರವನ್ನು ನಿರ್ವಹಿಸಿರುವುನ್ನು ನೋಡಬಹುದು. ಈ ನಿಟ್ಟಿನಲ್ಲಿ ಅರಸು ಅವರ ಆಡಳಿತದ ಅವಧಿಯಲ್ಲಿ ಮುಖ್ಯಧಾರೆಯಲ್ಲಿ ಸಕ್ರಿಯ ರಾಜಕಾರಣಕ್ಕೆ ಬಂದ ಎಂ. ವೀರಪ್ಪ ಮೊಯಿಲಿ, ಎನ್. ಧರ್ಮಸಿಂಗ್, ಮಲ್ಲಿಕಾರ್ಜುನ ಖರ್ಗೆ ಹಾಗೂ ಸಮಾಜವಾದಿ ಪಕ್ಷದಿಂದ ಕಾಂಗ್ರೆಸ್ಸಿನಲ್ಲಿ ಪ್ರಮುಖ ಸ್ಥಾನಗಳಿಸಿದ ಎಸ್. ಬಂಗಾರಪ್ಪ, ಕಾಗೋಡು ತಿಮ್ಮಪ್ಪ ಅವರನ್ನು ಕಾಣಬಹುದು. ಎಸ್. ಬಂಗಾರಪ್ಪ, ಎಂ. ವೀರಪ್ಪ ಮೊಯಿಲಿ, ಎನ್. ಧರ್ಮಸಿಂಗ್ ಮುಖ್ಯಮಂತ್ರಿಯ ಪದವಿಗೇರಿದರೆ, ಮಲ್ಲಿಕಾರ್ಜುನ ಖರ್ಗೆ ಮತ್ತು ಕಾಗೋಡು ತಿಮ್ಮಪ್ಪ ಅವರು ಇತರ ಉನ್ನತ ಪದವಿಗೇರುವರು. ಇವರುಗಳು ದೇವರಾಜ ಅರಸು ಮತ್ತು ಇಂದಿರಾ ಗಾಂಧಿ ಈರ್ವರ ನಡುವೆ ಬಿಕ್ಕಟ್ಟು ಕಂಡುಬಂದಾಗ ಕಾಂಗ್ರೆಸ್ ಪಕ್ಷದ ಪರವಾಗಿ ಉಳಿಯುತ್ತಾರೆ. ಸಮಕಾಲೀನ ವಿಚಾರಗಳ ಕುರಿತ ಅವಲೋಕನದಲ್ಲಿ ದೇವರಾಜ ಅರಸು ಆಡಳಿತ, ಕಾರ್ಯನೀತಿಗಳನ್ನು ಮೆಚ್ಚಿಕೊಳ್ಳುತ್ತಲೇ ಕಾಂಗ್ರೆಸ್ ಪಕ್ಷ ರಾಜಕಾರಣದ ಫಲ ಎಂಬಂತಹ ಚಿಂತನೆಗಳು ಬಹುಪಾಲು ಕಂಡುಬರುತ್ತವೆ. ಎಸ್.ಬಂಗಾರಪ್ಪ, ಎಂ.ವೀರಪ್ಪ ಮೊಯಿಲಿ, ಎನ್.ಧರ್ಮಸಿಂಗ್ ಅವರು ಮುಖ್ಯಮಂತ್ರಿಗಳಾಗಿದ್ದು ಕಾಂಗ್ರೆಸ್ ಪಕ್ಷ ಸಂಕೀರ್ಣ ಸಂದರ್ಭಗಳನ್ನು ಎದುರಿಸುತ್ತಿದ್ದಾಗ ಮತ್ತು ಇವರೆಲ್ಲರೂ ಎರಡು ವರ್ಷಗಳಿಗಿಂತ ಹೆಚ್ಚು ಕಾಲ ಆಡಳಿತ ನಡೆಸಲು ಸಾಧ್ಯವಾಗದಿರುವುದು ಸೋಜಿಗದ ಸಂಗತಿ. ಜೊತೆಗೆ ಈ ಮೇಲಿನ ಬಹುಪಾಲು ರಾಜಕಾರಣಿಗಳನ್ನು ಅರಸು ಅವರ ಜೊತೆ ಅಭಿಮಾನಿಗಳು ಸಮೀಕರಿಸುವುದು ಸಾಮಾನ್ಯವಾಗಿ ಕಂಡುಬರುವ ದೃಶ್ಯ. ಅರಸು ಅವರ ಸಾಮಾಜಿಕ ನ್ಯಾಯದ ರಾಜಕಾರಣದ ಉತ್ತರಾಧಿಕಾರ ಪಡೆಯುವ ಪ್ರಯತ್ನದಂತೆ ಮೇಲ್ನೋಟಕ್ಕೆ ಕಾಣುವುದನ್ನು ಅಧ್ಯಾಯ ೪ರಲ್ಲಿ ಚರ್ಚಿಸಲಾಗಿದೆ. ಆದರೆ ಮತ್ತೊಂದೆಡೆ ದೇವರಾಜ ಅರಸು ಅವರ ಮೊಮ್ಮಗ ಸೂರಜ್ ಹೆಗಡೆ[೭] ರಾಜ್ಯ ರಾಜಕಾರಣದಲ್ಲಿ ದಂತಕಥೆಯಾಗಿರುವ ಅರಸು ಅವರ ಹೆಸರಿನೊಂದಿಗೆ ಗುರುತಿಸಿಕೊಳ್ಳಲು ಹಿಂಜರಿಯುತ್ತಾರೆ. 'ಕೆಲವರಿಗೆ, ಮನೆತನದ ಹೆಸರು ವರವಾಗಿರುತ್ತದೆ. ಆದರೆ ನನಗೆ ಇದು ಶಾಪ' ಎಂದಿರುವುದು ಪ್ರಸ್ತುತ ರಾಜಕಾರಣದಲ್ಲಿರುವ ವಿರೋಧಭಾಸಗಳನ್ನು ತೆರೆದಿಡುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಮುಖ್ಯಮಂತ್ರಿಯಾಗಿರುವ ಸಿದ್ಧರಾಮಯ್ಯ ಅವರು ದೇವರಾಜ ಅರಸು ಅವರ ಶಿಷ್ಯರಲ್ಲದಿದ್ದರೂ ಕಾಂಗ್ರೆಸ್ ಪಕ್ಷದಿಂದಲೇ ಮುಖ್ಯಮಂತ್ರಿಯಾಗಿದ್ದಾರೆ. ಇವರು ಅಹಿಂದ ಚಳವಳಿಯ ಮೂಲಕ ಕರ್ನಾಟಕ ರಾಜಕಾರಣದಲ್ಲಿ ಬೆಳೆದುಬಂದ ಪ್ರಮುಖ ನಾಯಕರು. ಸಮಕಾಲೀನ ಸಾಮಾಜಿಕ ನ್ಯಾಯದ ರಾಜಕಾರಣ ಪ್ರಸ್ತುತ ಪ್ರಾದೇಶಿಕ ರಾಜಕಾರಣದಲ್ಲಿ ವಿವಿಧ ಪದರುಗಳಲ್ಲಿ ಹರಡಿರುವುದನ್ನು ತೆರೆದಿಡುತ್ತದೆ. ಹಾಗಾಗೇ ದೇವರಾಜ ಅರಸು ಅವರ ಆಡಳಿತಕಾಲದ ಹಲವು ಆಯಾಮಗಳು ಅನೇಕ ವಿಧದಲ್ಲಿ ಪುನರ್ ಚರ್ಚೆಗೆ ಒಳಗಾಗುತ್ತಲೇ ಆಧುನಿಕ ಕರ್ನಾಟಕದ ರಾಜಕಾರಣದಲ್ಲಿ ಅರಸು ಕೂಡ ಪ್ರಸ್ತುತರಾಗುತ್ತಿರುವುದನ್ನು

ನೋಡಬಹುದು. ಈ ದಿಸೆಯಲ್ಲಿ ರಾಜ್ಯದಲ್ಲಿ ೧೯೪೭ ರಿಂದ ೨೦೧೩ರವರಗೆ ಮಂತ್ರಿಗಳಾಗಿರುವವರ ಜಾತಿವಾರು ಪಟ್ಟಿಯ ಶೇಕಡಾವಾರು ಸರಾಸರಿಯ ಹೀಗಿದೆ:

| ಜಾತಿಗಳು | ೧೯೪೭ – ೧೯೭೧ | ೧೯೭೨ – ೧೯೮೦ | ೧೯೮೩ – ೨೦೧೩ |
|---|---|---|---|
| ಒಕ್ಕಲಿಗ | ೨೬ | ೧೩ | ೧೯ |
| ಲಿಂಗಾಯಿತ | ೩೨ | ೧೭ | ೨೪ |
| ಬ್ರಾಹ್ಮಣ+ಜನರಲ್ | ೧೧ | ೧೧ | ೭ |
| ಮುಸ್ಲಿಂ | ೭ | ೯ | ೭ |
| ಕ್ರಿಶ್ಚಿಯನ್ | ೨ | ೨ | ೧ |
| ಒಬಿಸಿ | ೧೨ | ೨೮ | ೨೨ |
| ಎಸ್.ಸಿ+ಎಸ್.ಟಿ | ೧೦ | ೧೯ | ೨೦ |

ಆಕರ : ಕ್ಷೇತ್ರ ಕಾರ್ಯದಲ್ಲಿ ದೊರೆತ ಅಂಕಿ–ಅಂಶ.

ಈ ಪಟ್ಟಿಯಲ್ಲಿ ಮೇಲಿನ ವಾದಕ್ಕೆ ಪೂರಕವಾಗಿ ದೇವರಾಜ ಅರಸು ಅವರ ಕಾಲದಲ್ಲಿ ಹಿಂದುಳಿದ ಮತ್ತು ದಲಿತ ಸಮುದಾಯದ ಪ್ರತಿನಿಧಿಗಳ ಮಂತ್ರಿಗಳು ೧೨ ರಿಂದ ೨೮ಕ್ಕೆ ಹಾಗೂ ೧೦ ರಿಂದ ೧೯ಕ್ಕೆ ಏರಿಕೆ ಕಾಣಬಹುದು. ಲಿಂಗಾಯಿತ ಮತ್ತು ಒಕ್ಕಲಿಗ ಸಮುದಾಯಗಳ ಪ್ರಾತಿನಿಧ್ಯ ೩೨ ರಿಂದ ೧೭ ಹಾಗೂ ೨೬ ರಿಂದ ೧೩ಕ್ಕೆ ಇಳಿದಿದೆ. ಅರಸು ಅವರ ನಂತರದಲ್ಲಿ ಹಿಂದುಳಿದ ವರ್ಗಗಳಿಂದ ಬಂದ ಪ್ರತಿನಿಧಿಗಳು ಶೇ ೨೨ರಷ್ಟಿದ್ದು ಇಳಿಮುಖವಾಗಿದ್ದರೆ, ದಲಿತ ಸಮುದಾಯಗಳಿಂದ ಬಂದವರ ಪ್ರಾತಿನಿಧ್ಯ ಶೇ ೨೦ರಷ್ಟಿದ್ದು ಸಣ್ಣ ಪ್ರಮಾಣದ ಏರಿಕೆಯನ್ನು ನೋಡಬಹುದು. ಹಾಗೇ ಲಿಂಗಾಯಿತ ಮತ್ತು ಒಕ್ಕಲಿಗ ಸಮುದಾಯದ ಮಂತ್ರಿಗಳು ಕ್ರಮವಾಗಿ ಶೇ.೨೪ ಮತ್ತು ಶೇ.೧೯ರಷ್ಟಿದ್ದು ಏರುಮುಖವಾಗಿ ಸಾಗುವುದು. ದೇವರಾಜ ಅರಸು ಅವರ ಈ ಸಾಮಾಜಿಕ ನ್ಯಾಯದ ರಾಜಕಾರಣ ಬಲಾಢ್ಯ ವರ್ಗದಿಂದ ಇತರ ವರ್ಗಗಳ ಕಡೆಗಿನ ಅಧಿಕಾರ ವಿಕೇಂದ್ರೀಕರಣಕ್ಕೆ ಅನುವು ಮಾಡಿಕೊಟ್ಟಿದೆ. ಅರಸರ ಕಾಲದಲ್ಲಿ ಕಂಡಂತಹ ಹಿಂದುಳಿದ ವರ್ಗಗಳ ಉತ್ಕರ್ಷ ಕಂಡುಬಾರದಿದ್ದರೂ ನಂತರದ ದಶಕಗಳಲ್ಲಿ ಆ ವರ್ಗಗಳ ಪ್ರಭಾವವು ಕರ್ನಾಟಕದಲ್ಲಿ ರಾಜ್ಯ ರಾಜಕಾರಣದ ಅವಿಭಾಜ್ಯ ಅಂಗವಾಗಿ ಉಳಿಯುವಂತಹ ಸನ್ನಿವೇಶವನ್ನು ಸೃಷ್ಟಿಸಿರುವುದು ಗಮನಾರ್ಹ. ಹೀಗಾಗಿ ಡಿ. ದೇವರಾಜ ಅರಸು ಅವರು ಭೂತ ಹಾಗೂ ವರ್ತಮಾನ ಕಾಲದ ಕೊಂಡಿಯಾಗಿ ತಾತ್ವಿಕ ರಾಜಕಾರಣಕ್ಕೆ ಒಂದು ಮೈಲುಗಲ್ಲಾಗುತ್ತಾರೆ.

## ಟಿಪ್ಪಣಿಗಳು

೧. ೧೯೬೭ ರಿಂದ ೧೯೭೮ರವರೆಗೆ ಶಾಸಕಾಂಗದಲ್ಲಿ ಕಂಡುಬಂದ ಬದಲಾವಣೆಗಳಲ್ಲಿ ಇದನ್ನು ಗುರುತಿಸಬಹುದು. ಲಿಂಗಾಯಿತ ಸದಸ್ಯರ ಸಂಖ್ಯೆ ಕ್ರಮವಾಗಿ ೧೯೬೭, ೧೯೭೨, ೧೯೭೮ರರಲ್ಲಿ ೮೧, ೫೬, ೫೧ ಇದ್ದೂ ಕಡಿಮೆಯಾಗುತ್ತಾ ಸಾಗಿದೆ. ಇಳಿಕೆಯ ಪ್ರಮಾಣ ೧೯೬೭ ಮತ್ತು ೧೯೭೨ರ ನಡುವೆ ತೀವ್ರವಾಗಿದ್ದು ೧೯೭೨ ಮತ್ತು ೧೯೭೮ರ ನಡುವೆ ಕಡಿಮೆ ಆಗಿದೆ. ಒಕ್ಕಲಿಗ ಸದಸ್ಯರ ಸಂಖ್ಯೆ ಇದೇ ಸಂದರ್ಭದಲ್ಲಿ ೪೫, ೪೪, ೪೩ ಆಗಿದೆ. ಇಳಿಕೆಯ ಪ್ರಮಾಣ ಅತ್ಯಂತ ಕಡಿಮೆಯಿದೆ. ಕಾಂಗ್ರೆಸ್ ಪಕ್ಷದೊಳಗೆ ೧೯೬೭ರಲ್ಲಿದ್ದ ಒಕ್ಕಲಿಗರ ಸದಸ್ಯರಿಗಿಂತ ೧೯೭೨ರಲ್ಲಿ ಹೆಚ್ಚಾಗಿದ್ದು, ೧೯೭೮ರಲ್ಲಿ ಕಡಿಮೆ ಆಗಿದೆ. ಇದು ಏಕಮುಖವಾಗಿದ್ದ ರಾಜಕೀಯದಲ್ಲಿ ಹಿಂದುಳಿದ ವರ್ಗಗಳು, ದಲಿತರು ಮತ್ತು ಅಲ್ಪ ಸಂಖ್ಯಾತ ಸಮುದಾಯದವರ ಪಾತ್ರವನ್ನು ವಿಸ್ತರಿಸುತ್ತಾ ಉಂಟಾದ ಬದಲಾವಣೆಯನ್ನು ಸೂಚಿಸುತ್ತದೆ.

೨. ಉದಾಹರಣೆಯಾಗಿ ಶಿವಮೊಗ್ಗ ಪ್ರದೇಶದ ರಾಜಕಾರಣವನ್ನು ಗಮನಿಸಬಹುದಾಗಿದೆ. ಸಮಕಾಲೀನವಾಗಿ ದೀವರ ಸಮುದಾಯದ ಯುವ ಹಾಗೂ ಪ್ರಗತಿಪರ ಆಲೋಚನೆಗಳುಳ್ಳ ಕಾಗೋಡು ತಿಮ್ಮಪ್ಪ ಮತ್ತು ಎಸ್. ಬಂಗಾರಪ್ಪ ಅವರನ್ನು ಸಮಾಜವಾದಿ ಪಕ್ಷದಿಂದ ಕಾಂಗ್ರೆಸ್ ಪಕ್ಷದೆಡೆಗೆ ಸೆಳೆಯಲು, ಜೊತೆಗೆ ಕಾಂಗ್ರೆಸ್(ಆರ್)ನ್ನು ಪ್ರಬಲಗೊಳಿಸಲು ಈ ಕಾರ್ಯನೀತಿಗಳು ಕಾರಣವಾಗಿದ್ದವು. ಈ ಕುರಿತು ೪ನೇ ಅಧ್ಯಾಯದಲ್ಲಿ ಪುಟ-೨೧೯ ರಿಂದ ೨೨೩ರವರಗೆ ಚರ್ಚಿಸಲಾಗಿದೆ.

೩. ದೇವರಾಜ ಅರಸು ಅವರ ಹಿಂದುಳಿದ ವರ್ಗಗಳ ಅಭಿವೃದ್ಧಿ ನೀತಿ ಮತ್ತು ಹಾವನೂರು ವರದಿಯ ಅನುಷ್ಠಾನದಿಂದ ಬಿಹಾರ ಹಾಗೂ ರಾಜಸ್ಥಾನದ ಮುಖ್ಯಮಂತ್ರಿಗಳು ಪ್ರಭಾವಿತರಾಗಿ, ಅದನ್ನು ಜಾರಿಗೊಳಿಸುವ ಪ್ರಯತ್ನ ಮಾಡಿರುವುದನ್ನು ಕಾಣಬಹುದು. ಜೊತೆಗೆ ಜನತಾ ಸರ್ಕಾರ ನೇಮಿಸಿದ ಮಂಡಲ್ ಆಯೋಗವು ಹಾವನೂರು ವರದಿ ಮತ್ತು ಅರಸು ಅವರ ಕಾರ್ಯನೀತಿಯ ಪ್ರಭಾವಕ್ಕೊಳಪಟ್ಟಿತ್ತು.

೪. ಬರಗೂರು ರಾಮಚಂದ್ರಪ್ಪ., ೨೦೧೨, **ಸಂಸ್ಕೃತಿ: ಕ್ರಮ ಮತ್ತು ಸೃಜನಶೀಲತೆ, ದೇವರಾಜ್ ಅರಸು ಒಂದು ಸ್ಮರಣೆ.** ಅಂಕಿತ ಪುಸ್ತಕ, ಬೆಂಗಳೂರು, ಪುಟ -೫೫೦.

೫. ೧೯೭೧, ೧೯೭೭ ಮತ್ತು ೧೯೮೦ರ ಲೋಕಸಭಾ ಚುನಾವಣೆಯಲ್ಲಿ ಗಳಿಸಿರುವ ಕ್ಷೇತ್ರಗಳು ಮತ್ತು ಶೇಕಡಾವಾರು ಮತಗಳು ಹೀಗಿವೆ: ಆಂಧ್ರಪ್ರದೇಶದಲ್ಲಿ ೨೮(೫೫.೭೩), ೪೧(೫೭.೩೬) ಮತ್ತು ೪೧(೫೬.೬೪), ಕೇರಳದಲ್ಲಿ ೬(೧೯.೭೩), ೧೧(೨೯.೧೩) ಮತ್ತು ೫(೨೬.೩೨) ಹಾಗೂ ತಮಿಳುನಾಡಿನಲ್ಲಿ ೯(೧೨.೫೧), ೧೪(೨೨.೨೭) ಮತ್ತು ೨೬(೩೧.೬೨).

೬. ಈ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷವು ರಾಜ್ಯದಲ್ಲಿ ೧೪೯(ಶೇ.೪೪.೨೫) ಕ್ಷೇತ್ರಗಳಲ್ಲಿ ವಿಜಯ ಸಾಧಿಸಿತು.

೭. ೧೮ ಜೂನ್ ೨೦೧೩ರಂದು ಡೆಕ್ಕನ್ ಕ್ರೊನಿಕಲ್‌ನಲ್ಲಿ ಪ್ರಕಟವಾದ ವರದಿ.

# ಅನುಬಂಧ-೧

## ಪ್ರಕಟಿತ ಆಕರಗಳು

### ಕನ್ನಡ ಭಾಷಾ ಆಕರಗಳು


೧. ಅಡಗೂರು ವಿಶ್ವನಾಥ್.ಎಚ್., ೨೦೧೩, **ಆಪತ್ ಸ್ಥಿತಿಯ ಆಲಾಪಗಳು: ತುರ್ತುಪರಿಸ್ಥಿತಿಯ ಮರು ಅವಲೋಕನ**, ಅಂಕಿತ ಪ್ರಕಾಶನ, ಬೆಂಗಳೂರು, ಪುಟ-೯೬.

೨. ಅನಂತಮೂರ್ತಿ.ಯು.ಆರ್., ೨೦೦೨, **ಭಾರತೀಪುರ**, ಅಕ್ಷರ ಪ್ರಕಾಶನ, ಸಾಗರ, ಪುಟ-೨೦೪.

೩. ಅನಂತಮೂರ್ತಿ.ಯು.ಆರ್., ೨೦೦೫, **ಪ್ರಜ್ಞೆ ಮತ್ತು ಪರಿಸರ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ-೨೮೦.

೪. ಅರವಿಂದ ನಾಡಕರ್ಣಿ., ೧೯೭೫, **ನಾ ಭಾರತೀಕುಮಾರ**, ಶ್ರೀ ರಾಘವೇಂದ್ರ ಪ್ರಕಾಶನ, ಅಂಕೋಲಾ, ಪುಟ-೭೬

೫. ಎಚೆಸ್ಕೆ, ೧೯೭೭, **ಕೇಂದ್ರದಲ್ಲಿ ಜನತಾ ಮಂತ್ರಿಮಂಡಲ**, ಐಬಿಹೆಚ್ ಪ್ರಕಾಶನ, ಬೆಂಗಳೂರು, ಪುಟ-೭೨.

೬. ಕಕ್ಕಿಲಾಯ.ಬಿ.ವಿ., ೨೦೦೦, ಭೂ ಮಸೂದೆ ಕುರಿತು ಶಾಸನ ಸಭೆಯಲ್ಲಿ ಮಂಡಿಸಿದ ಭಾಷಣಗಳು, ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ, ಬಿ.ವಿ.ಕಕ್ಕಿಲಾಯ, ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ, ಬೆಂಗಳೂರು, ಪುಟ - ೧೬೪.

೭. ಕಕ್ಕಿಲಾಯ.ಬಿ.ವಿ., ೨೦೦೩, **ಬರೆಯದ ದಿನಚರಿಯ ಮರೆಯದ ಪುಟಗಳು**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ಪುಟ - ೪೪೮.

೮. ಕಡಿದಾಳ್ ಮಂಜಪ್ಪ., ೧೯೭೫, **ಕ್ರಾಂತಿ ಕೂಟ**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಪುಟ-೧೦+೨೮೨.

೯. ಕಡಿದಾಳ್ ಮಂಜಪ್ಪ, ೨೦೦೮, **ನನಸಾಗದ ಕನಸು**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಪುಟ-೧೨+೩೩೦.

೧೦. ಕಾಗೋಡು ತಿಮ್ಮಪ್ಪ., ೨೦೧೨, ಕಾಗೋಡಿನಲ್ಲಿ ದಾಂಡ್ ಹಾಕೋ ಚಿಂತನೆ ನಡೆದಿತ್ತು, ಶೀರ್‌ಭಾಷಾ.ಬಿ(ಸಂ)., **ಸಮಾಜವಾದಿಗಳ ಹೋರಾಟಗಾರರ ಸಂದರ್ಶನ - ಸಂಪುಟ ೨**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ - ೫೦+೩೨೦.

೧೧. ಕಾಳೇಗೌಡ ನಾಗವಾರ., ೨೦೦೮, **ಸೃಜನಶೀಲ ವೈಚಾರಿಕತೆ ವಿಮರ್ಶಾ ಲೇಖನಗಳು**, ಸಪ್ನ ಬುಕ್ ಹೌಸ್, ಬೆಂಗಳೂರು, ಪುಟ - ೨೫೬

೧೨. ಕುಲದೀಪ್ ನಯ್ಯರ್., ೨೦೦೬, **ಸ್ಕೂಪ್**, ಪ್ರಜಾವಾಣಿ ಪ್ರಕಾಶನ, ಬೆಂಗಳೂರು, ಪುಟ-೨೩೧.

೧೩. ಕುವೆಂಪು., ೨೦೦೦, **ಸಮಗ್ರಕಾವ್ಯ ಸಂಪುಟ - ೨**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ - ೧೧೦೬.

೧೪. ಕೃಷ್ಣಯ್ಯರ್.ವಿ.ಎಸ್., ೨೦೦೩, ಸಂಸ್ಥಾ ಕಾಂಗ್ರೆಸ್, ದೇಜಗೌ(ಸಂ)., **ಕರ್ನಾಟಕ ರಾಜಕೀಯ ಚಿಂತನೆ**, ಎಸ್.ನಿಜಲಿಂಗಪ್ಪ ರಾಷ್ಟ್ರೀಯ ಪ್ರತಿಷ್ಠಾನ, ಬೆಂಗಳೂರು, ಪುಟ - ೨೦+೮೧೨.

೧೫. ಕೃಷ್ಣಸ್ವಾಮಿ ಐಯ್ಯಂಗಾರ್.ಹೆಚ್.ಎಸ್., ೧೯೭೭, **ಜನತಾ ಗಾಳಿ**, ಐಬಿಹೆಚ್ ಪ್ರಕಾಶನ, ಬೆಂಗಳೂರು, ಪುಟ-೭೧.

೧೬. ಕೋಣಂದೂರು ವೆಂಕಪ್ಪಗೌಡ(ಸಂ)., ೧೯೮೪, **ಪರಿವರ್ತನೆಯ ಹರಿಕಾರ ದೇವರಾಜ ಅರಸು**, ಯಶಸ್ವಿ ಪ್ರಕಾಶನ, ಬೆಂಗಳೂರು, ಪುಟ-೩೫೭

೧೭. ಖಾದ್ರಿಶಾಮಣ್ಣ., ೧೯೮೧, **ಬರೋಡ ಡೈನಾಮೈಟ್ ಸಂಚು- ಬಂಡಾಯಕ್ಕೆ ಹಕ್ಕು**, ಬಾಪ್ಕೋ ಪ್ರಕಾಶನ, ಬೆಂಗಳೂರು, ಪುಟ- ೨೩೧.

೧೮. ಗಂಗಾಧರ ಭಟ್.ಎಂ., ವೇಣುಗೋಪಾಲ ಕಾಸರಗೋಡು ಮತ್ತು ಶ್ರೀಶದೇವ ಪೂಜಿತ(ಸಂ)., ೧೯೭೮, **ಕಾಸರಗೂಡಿನ ಕವಿತೆಗಳು-೭೭**, ನವ್ಯ ಸಾಹಿತ್ಯ ಸಂಘ, ಕಾಸರಗೋಡು, ಪುಟ-೮೮.

೧೯. ಗಂಗಾಧರ ಮೊದಲಿಯಾರ್., ೧೯೮೮, **ಕನ್ನಡ ಸಿನಿಮಾ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ-೬+೨೧೦.

೪೦.ನಾಗಭೂಷಣ್.ಡಿ.ಎಸ್., ೨೦೧೧, ಅರವತ್ತುಗಳ ಸಂವಿಧಾನ: ತಳವರ್ಗಗಳಿಗೆ ಏನು ಮಾಡಿದೆ? ಸಮಾಜವಾದಿಯೊಬ್ಬನ ಚದುರಿದ ಚಿಂತನೆಗಳು..., ಜಾಫೆಟ್.ಎಸ್ ಮತ್ತು ಚಂದ್ರಶೇಖರ್ ಐಜೂರ್(ಸಂ)., **ಸಂವಿಧಾನ – ೬೦ ಸಾಮಾಜಿಕ ನ್ಯಾಯ ಮತ್ತು ಕರ್ನಾಟಕ**, ಸಾಮಾಜಿಕ ಪ್ರತ್ಯೇಕತೆ ಮತ್ತು ಒಳಗೊಳ್ಳುವಿಕೆ ನೀತಿಯ ಅಧ್ಯಯನ ಕೇಂದ್ರ, ಬೆಂಗಳೂರು, ಪುಟ – ೧೮+೩೪೨.

೪೧.ನಾಗರಾಜ.ಕಿ.ರಂ.(ಸಂ)., ೧೯೭೭, **ಆಪತ್ಕಾಲೀನ ಕವಿತೆಗಳು**, ಮುಂಗಾರು ಪ್ರಕಾಶನ, ಬೆಂಗಳೂರು, ಪುಟ–೩೬.

೪೨.ನಾಗೇಶ್ ಬೆಟ್ಟಕೋಟೆ., ೨೦೦೨, **ಬೀದಿ ರಂಗ ಭೂಮಿ**, ಧ್ವನಿ ಪ್ರಕಾಶನ, ಬೆಂಗಳೂರು, ಪುಟ–೨೦+೧೨೨.

೪೩.ನಾಯ್ಕರ್.ಡಿ.ಕೆ., ೨೦೦೦, **ನಾ ಕಂಡ ದೇವರಾಜ ಅರಸು**, ಮಹಾಮನೆ ಪ್ರಕಾಶನ, ಧಾರವಾಡ, ಪುಟ – ೩೬+೧೦೪.

೪೪.ಪೀರ್‌ಭಾಷಾ.ಜಿ(ಸಂ)., ೨೦೦೭, **ಸಮಾಜವಾದಿ ಹೋರಾಟಗಾರರ ಸಂದರ್ಶನ, ಸಂಪುಟ –೧**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಪುಟ–೧೪+೩೨೬.

೪೫.ಪುಟ್ಟಸ್ವಾಮಿ.ಕೆ., ೨೦೦೯, **ಸಿನಿಮಾ ಯಾನ**, ಹಸಿರು ಪ್ರಕಾಶನ, ಬೆಂಗಳೂರು, ಪುಟ–೨೦+೩೩೦.

೪೬. ಪ್ರಸನ್ನ(ಸಂ)., ೧೯೭೭, **ಸಮುದಾಯ – ಸಮೂಹ ಶಿಕ್ಷಣದ ಉದ್ದೇಶ ಹೊಂದಿದ ರಂಗಚಳವಳಿಗಳ ಪರಿಚಯ**, ಸಮುದಾಯ ಪ್ರಕಾಶನ, ಬೆಂಗಳೂರು, ಪುಟ–೩+೩೫+೮.

೪೭.ಬರಗೂರು ರಾಮಚಂದ್ರಪ್ಪ., ೧೯೯೦, **ಬಂಡಾಯ ಕಾವ್ಯ**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪುಟ–೩೬+೪೩೨.

೪೮.ಬರಗೂರು ರಾಮಚಂದ್ರಪ್ಪ., ೧೯೯೮, **ಸಾಹಿತ್ಯ ಮತ್ತು ರಾಜಕಾರಣ**, ಕರ್ನಾಟಕ ಸರ್ಕಾರ, ಬೆಂಗಳೂರು, ಪುಟ ೧೪+೩೦೦.

೪೯.ಬರಗೂರು ರಾಮಚಂದ್ರಪ್ಪ., ೨೦೧೨, **ಸಂಸ್ಕೃತಿ: ಶ್ರಮ ಮತ್ತು ಸೃಜನಶೀಲತೆ**, ಅಂಕಿತ ಪುಸ್ತಕ, ಬೆಂಗಳೂರು, ಪುಟ –೫೫೦.

೫೦.ಬಾಮಗೌಡ ಪಾಟೀಲ., ೧೯೭೯, **ಕೊಲ್ಲಲೇ ಸಾಯಲೇ**, ಬದುಕು ಪ್ರಕಾಶನ, ತಾಳಿಕೋಟೆ, ಪುಟ –೨೮.

೫೧.ಬಾಮುಹೆದ್ದೂರ್ ಶೆಟ್ಟಿ., ಹನುಮಂತ(ಸಂ)., ೧೯೭೯, **ಭಾರತೀಯ ಸಮಾಜವಾದದ ಹೆಜ್ಜೆ ಗುರುತುಗಳು**, ಜನ ಪ್ರಕಾಶನ, ಬೆಂಗಳೂರು, ಪುಟ– ೧೮೩.

೫೨.ಬೋರಲಿಂಗಯ್ಯ.ಹಿ.ಚಿ., ೨೦೦೬, ಎಚ್.ವಿಶ್ವನಾಥ್‌ರೊಂದಿಗಿನ ಸಂದರ್ಶನದ ಭಾಗ, ಶೂದ್ರ ಶ್ರೀನಿವಾಸ್(ಸಂ)., **ದೇವರಾಜ ಅರಸು – ಒಂದು ಅವಲೋಕನ**, ಕರ್ನಾಟಕ ಸರ್ಕಾರ, ಬೆಂಗಳೂರು, ಪುಟ – ೧೮+೩೩೮.

೫೩.ಬೋರಲಿಂಗಯ್ಯ.ಹಿ.ಚಿ., ೨೦೧೨, ಲೋಹಿಯಾವಾದ, ಕಾಗೋಡು ಚಳವಳಿ ಮತ್ತು ಕರ್ನಾಟಕದ ಭೂ ಸುಧಾರಣೆ: ಕೆಲವು ಟಿಪ್ಪಣಿಗಳು, ಪ್ರಭಾಕರ್.ಎ.ಎಸ್., ಶ್ರೀಪಾದ ಶೆಟ್ಟಿ(ಸಂ)., **ಲೋಹಿಯಾ: ವರ್ತಮಾನದ ಮುಖಾಮುಖಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೪.ಬಾಲಕೃಷ್ಣ.ಆರ್., ೧೯೮೧, **ಅಂಕುರ**, ಭಾರತಿ ಪ್ರಕಾಶನ, ಮೈಸೂರು, ಪುಟ–೩೨.

೫೫.ಭಂಡಾರಿ.ಆರ್.ವಿ., ೨೦೦೩, ಮುನ್ನುಡಿ, ಚೆನ್ನಣ್ಣ ವಾಲೀಕಾರ, **ಸಮಗ್ರ ಕಾವ್ಯ ಸಂಪುಟ**, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಗುಲ್ಬರ್ಗ, ಪುಟ – ೪೪+೬೩.

೫೬.ಮಧುಕೇಶ್., ೨೦೦೨, **ಕನ್ನಡ ನುಡಿ: ಅರಸು ಅವರ ದೃಷ್ಟಿ**, ನಾಗಾರ್ಜುನ ಎಂಟರ್ ಪ್ರೈಸಸ್, ದಾವಣಗೆರೆ, ಪುಟ –೬+೯೦.

೫೭.ಮಧು ದಂಡವತೆ., ೨೦೦೬, **ಹೊರಳು ನೋಟ**, ಸಂಬುದ್ಧ ಪ್ರಕಾಶನ, ಬೆಂಗಳೂರು, ಪುಟ–೮+೧೩೬.

೫೮.ಮನೋಹರ್ ಪ್ರಸಾದ್(ಅನು)., ೨೦೦೫, **ಎಲ್ಲಿ ಮನಕಳುಕಿರದೋ ಎಲ್ಲಿ ತಲೆಬಾಗಿರದೋ– ವೀರಪ್ಪ ಮೊಯ್ಲಿ ಜೀವನ ಕಥನ**, ಮಾಹೇಶ್ವರಿ ಪ್ರಕಾಶನ, ಬೆಂಗಳೂರು, ಪುಟ– ೩೨+೩೦೫.

೫೯.ಮರುಳಸಿದ್ಧಪ್ಪ.ಕೆ., ೨೦೦೯, **ಆಧುನಿಕ ಕನ್ನಡ ನಾಟಕ**, ಅಂಕಿತ ಪುಸ್ತಕ, ಬೆಂಗಳೂರು, ಪುಟ–೪೮೦.

೬೦.ಮಲ್ಲಿಕಾರ್ಜುನ್ ಕೂಡ್ಲಿಗೆರೆ., ೨೦೦೯, **ಭೂ ಹೋರಾಟದ ಕಥನ – ಆಧುನಿಕ ಕನ್ನಡ ಸಾಹಿತ್ಯದಲ್ಲಿ ಭೂ ಹೋರಾಟದ ಪ್ರತಿನಿಧೀಕರಣ**, ನಮ್ಮ ಪ್ರತಿನಿಧಿ ಪ್ರಕಾಶನ, ಬೆಂಗಳೂರು, ಪುಟ–೨೧+೪೦೮.

೬೧.ಮಾನಸ.ಕೆ.ವಿ., **ಕನ್ನಡ ಕಾದಂಬರಿ ಆಧಾರಿತ ಕನ್ನಡ ಚಲನಚಿತ್ರಗಳ ಅಧ್ಯಯನ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮, ಪುಟ–೬+೨೨೨.

೬೨. ಮೂರ್ತಿ.ಕೆ.ಕೆ., ೨೦೦೫, ಸುಮಾರು ಇಪ್ಪತ್ತು ವರ್ಷಗಳಿಂದ ನಾ ಕಂಡ ಗೆಳಯ ವಿಐಪಿ(ವೆರಿ ಇಂಟೆಲಿಜೆಂಟ್ ಪರ್ಸನ್) ಶ್ರೀ ಮಲ್ಲಿಕಾರ್ಜುನ್ ಖರ್ಗೆ, ಬಾಡಿಯಾಳ ದೇವೇಂದ್ರಪ್ಪ(ಸಂ)., **ಕರ್ಮಯೋಗಿ**, ಪ್ರಾರ್ಥನ ಪ್ರಕಾಶನ, ಗುಲ್ಬರ್ಗ, ಪುಟ-೩೦೩.

೬೩. ಮೊಗಸಾಲೆ.ನಾ., ೨೦೦೩, **ಅರವತ್ತರ ತೇರು - ನಾ ಮೊಗಸಾಲೆ ಸಮಗ್ರ ಕಾವ್ಯ(೧೯೬೪-೨೦೦೩)**, ಅಭಿರುಚಿ ಪ್ರಕಾಶನ, ಮೈಸೂರು, ಪುಟ - ೫೦೪.

೬೪. ರಂಗನಾಥ್ ರಾವ್.ಜಿ, ೨೦೦೯, **ಪತ್ರಿಕೋದ್ಯಮ**, ಸತ್ಯಶ್ರೀ ಪ್ರಿಂಟೆಡ್ ಲಿಮಿಟೆಡ್, ಬೆಂಗಳೂರು, ಪುಟ - ೧೦೨೨.

೬೫. ರಂಗರಾಜ ವನದುರ್ಗ., ೨೦೦೬, **ಕನ್ನಡ ಸಾಹಿತ್ಯ ಮತ್ತು ಜನಪರ ಚಳವಳಿ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪುಟ-೮+೧೪೮.

೬೬. ರಂಗರಾಜ ವನದುರ್ಗ., ೨೦೦೬, **ಕನ್ನಡ ಸಾಹಿತ್ಯ ಮತ್ತು ಸಮೂಹ ಮಾಧ್ಯಮ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪುಟ-೮+೧೪೮.

೬೭. ರಾಜನ್.ಎಂ.ಎ.ಎಸ್., ೧೯೮೭, **ಕರ್ನಾಟಕದಲ್ಲಿ ಭೂ ಸುಧಾರಣೆ ನಾನೂ ಸಹ ಹತ್ತಿರದಿಂದ ಕಂಡೆ**, ಐಬಿಹೆಚ್ ಪ್ರಕಾಶನ, ಬೆಂಗಳೂರು, ಪುಟ - ೨೧೨+೮.

೬೮. ರಾಮಚಂದ್ರ.ಸಿ.ಎಂ., ೨೦೦೦, **ಪತ್ರಕರ್ತನ ಜೀವನಯಾತ್ರೆ-ಪತ್ರಕರ್ತನೊಬ್ಬನ ಲೇಖನಗಳ ಸಂಗ್ರಹ**, ಸಪ್ನ ಬುಕ್‌ಹೌಸ್, ಬೆಂಗಳೂರು.

೬೯. ಲಂಕೇಶ್.ಪಿ(ಸಂ)., ೧೯೯೩, **ಅಕ್ಷರ ಹೊಸ ಕಾವ್ಯ**, ಪತ್ರಿಕೆ ಪ್ರಕಾಶನ, ಬೆಂಗಳೂರು, ಪುಟ - ೪೩೦.

೭೦. ಲಂಕೇಶ್.ಪಿ., ೨೦೧೧, **ಹುಳಿಮಾವಿನಮರ ಒಂದು ಆತ್ಮ ಕಥನ**, ಲಂಕೇಶ್ ಪ್ರಕಾಶನ, ಬೆಂಗಳೂರು ಪುಟ-೩೩೯.

೭೧. ಲಿಂಗಯ್ಯ.ಡಿ., ೨೦೧೧, **ರಾಷ್ಟ್ರರತ್ನ ಕೆಂಗಲ್ ಹನುಮಂತಯ್ಯ ಸಮಗ್ರ ಜೀವನ ಚರಿತ್ರೆ**, ಗೋಧೂಳಿ ಪ್ರಕಾಶನ, ಬೆಂಗಳೂರು, ಪುಟ-೧೦+೪೬೬+೫೬.

೭೨. ಲಕ್ಷ್ಮಿಪತಿ ಬಾಬು.ಎನ್., ೨೦೦೬, ಅಸಮಾನತೆ ವಿರುದ್ಧದ ಪಾಠ ಹೇಳಿದ ಮೇಷ್ಟ್ರು, ವೀರಭದ್ರಪ್ಪ ಬಿಸ್ಲಳ್ಳಿ(ಸಂ)., **ಪ್ರೊಫೆಸರ್ ಎಂ.ಡಿ.ಎನ್**, ಅಭಿರುಚಿ ಪ್ರಕಾಶನ, ಮೈಸೂರು, ಪುಟ ೨೬+೪೦೮.

೭೩. ಲಿಂಗಯ್ಯ.ಡಿ., ೧೯೭೮, **ಕಲಬೆರಕೆ**, ದಿನಕರ ಪ್ರಕಾಶನ, ಬೆಂಗಳೂರು, ಪುಟ- ೧೦೦.

೭೪. ವನವಾಸಿ(ಸಂ)., ೧೯೭೭, **ತುರ್ತುಪರಿಸ್ಥಿತಿಯ ದೌರ್ಜನ್ಯಗಳು**, ಜನಜಾಗೃತಿ ಪ್ರಕಾಶನ, ಧಾರವಾಡ, ಪುಟ-೧೧೧.

೭೫. ವೈಕುಂಠರಾಜು.ಬಿ.ವಿ., ೨೦೦೬, **ತಹ ತಪ(ನನ್ನ ಆತ್ಮಕಥೆ ಜೊತೆಗೆ)**, ಸನತ್ ಪ್ರಕಾಶನ, ಬೆಂಗಳೂರು, ಪುಟ-೩೦೦.

೭೬. ವ್ಯಾಸರಾಯ ಬಲ್ಲಾಳ., ೨೦೦೦, ಎರಡು ಅಧ್ಯಾಯ : ಒಂದು ವಿಶ್ಲೇಷಣೆ, ರಾಮಕೃಷ್ಣ.ಜಿ(ಸಂ)., **ಸ್ವಾತಂತ್ರ್ಯಕ್ಕೆ ಐವತ್ತು ವರ್ಷ**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ಪುಟ-೧೦೪.

೭೭. ವಿಜಯಾ(ಸಂ)., ೨೦೦೧, **ಕನ್ನಡ ಚಲನಚಿತ್ರ(ಸಂಪುಟ ೧ ಮತ್ತು ೨)**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೧೦೦೦.

೭೮. ವಿಜಯ ಪಾಟೀಲ., ಮಂಗ್ಳೂರ್ ವಿಜಯ(ಸಂ)., ೧೯೭೭, **ಕಪ್ಪು ಜನರ ಕೆಂಪು ಕಾವ್ಯ**, ವಿಮೋಚನಾ ಪ್ರಕಾಶನ, ಧಾರವಾಡ, ಪುಟ-೧೩+೭೧.

೭೯. ವಿಜಯ್ ಪೂಣಚ್ಚ ತಂಬಂಡ., ೨೦೧೦, ಸಬಾಲ್ಟರ್ನ್ ಚರಿತ್ರೆ: ಬರವಣಿಗೆ ಮತ್ತು ವಿಮರ್ಶೆ, ವಿಜಯ್ ಪೂಣಚ್ಚ ತಂಬಂಡ(ಪ್ರಸಂ), ವಿರೂಪಾಕ್ಷಿ ಪೂಜಾರಹಳ್ಳಿ(ಸಂ)., **ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ(ಸಂಪುಟ-೧)**. ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೬೦೦.

೮೦. ವೀರಣ್ಣ.ಸಿ(ಪ್ರ), ೧೯೮೫, **ಸಿನಿಮಾ ಸಮಾಜ ಸರ್ಕಾರ**, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ಪುಟ-೬೬

೮೧. ವೆಂಕಟಸುಬ್ಬರಾವ್.ಕೆ.ಹೆಚ್., ೧೯೭೯, ರಾಜಕೀಯೇತರ ರಂಗಗಳಲ್ಲಿ ಭ್ರಷ್ಟಾಚಾರ-೧, ಪತ್ರಿಕೋದ್ಯಮ ಹಾಗೂ ಭ್ರಷ್ಟಾಚಾರ - ಒಂದು ಟಿಪ್ಪಣಿ, ಸುಂದರ್‌ರಾಜ್‌ಕೆ.(ಸಂ)., **ಸಂಗಮ**, ವಿಚಾರ ವೇದಿಕೆ, ಕನಕಪುರ, ಪುಟ-೪೭

೮೨. ವೆಂಕಟಸುಬ್ಬಯ್ಯ, ೧೯೭೯, **ಅರಸು ಮತ್ತು ಕನ್ನಡ**, ಐಬಿಹೆಚ್ ಪ್ರಕಾಶನ, ಬೆಂಗಳೂರು, ಪುಟ - ೧೬.

೮೩. ಶಿವರಾಜ್ ಪಾಟೀಲ(ಸಂ)., ೨೦೦೫, **ಧರ್ಮಸಿಂಧು**, ಮಹಾಂತೇಶ ಪ್ರಕಾಶನ, ಗುಲ್ಬರ್ಗ, ಪುಟ-೩೨+೩೮೪.

೮೪. ಶಿವರುದ್ರಪ್ಪ.ಜಿ.ಎಸ್., ೧೯೭೭, **ಸಾಹಿತ್ಯ ಮತ್ತು ಸಾಮಾನ್ಯ ಮನುಷ್ಯ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೮೫. ಶಿವಶರಣ ಜಾವಳಿ., ೧೯೭೭, **ಪರಿಸ್ಥಿತಿಯ ೨೦ ಮತ್ತು ೫ ಕವಿತೆ**, ವಿಚಾರ ಭಾರತಿ ಅಧ್ಯಯನ ವೇದಿಕೆ, ಕಲ್ಬುರ್ಗಿ, ಪುಟ-೪೩.

೮೬. ಶಿವಶರಣ ಜಾವಳಿ., ೧೯೯೮, **ಜಾವಳಿ ಸಮಗ್ರ ಕಾವ್ಯ**, ವೀರಶೈವ ಅಧ್ಯಯನ ಸಂಸ್ಥೆ, ಗದಗ್, ಪುಟ-೩೪+೧೮೪.

೮೭. ಶೂದ್ರ ಶ್ರೀನಿವಾಸ್., ೨೦೦೬, **ದೇವರಾಜ್ ಅರಸು-ಒಂದು ಅವಲೋಕನ**, ಕರ್ನಾಟಕ ಸರ್ಕಾರ, ಬೆಂಗಳೂರು, ಪುಟ-೧೮+೩೩೮.

೮೮. ಶೇಷಾದ್ರಿ.ಹೂ.ವೆ(ಸಂ)., ೧೯೭೭, **ಭುಗಿಲು**, ರಾಷ್ಟ್ರೋತ್ಥಾನ ಮುದ್ರಣಾಲಯ, ಬೆಂಗಳೂರು, ಪುಟ-೨೦+೬೧೧.

೮೯. ಶ್ರೀನಿವಾಸ್‌ರಾವ್.ಎಸ್.ವಿ., ೧೯೯೪, **ಮೂಡುಬಿದಿರೆ ವೀರಪ್ಪ ಮೊಯಿಲಿ**, ಸೌರಭ ಪ್ರಕಾಶನ, ಬೆಂಗಳೂರು.

೯೦. ಶ್ರೀನಿವಾಸ್‌ರಾವ್.ಎಸ್.ವಿ., ಅರಳುಮಲ್ಲಿಗೆ ಪಾರ್ಥಸಾರಥಿ., ೨೦೦೧, **ಕರ್ನಾಟಕದ ಮುಖ್ಯಮಂತ್ರಿಗಳು**, ಸಾಧನ ಪ್ರಕಾಶನ, ಬೆಂಗಳೂರು, ಪುಟ-೩೧೮+೧೮+೩೨.

೯೧. ಸದಾನಂದ.ಜಿ.ಎಸ್., ೨೦೦೦, **ಡಿ.ದೇವರಾಜ ಅರಸು**, ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ, ಬೆಂಗಳೂರು, ಪುಟ-೧೨೧.

೯೨. ಸಾರಾ ಅಬೂಬಕರ್(ಅನು)., ೨೦೦೭, **ತುರ್ತುಪರಿಸ್ಥಿತಿಯ ಕರಾಳ ಮುಖ**, ಚಂದ್ರಗಿರಿ ಪ್ರಕಾಶನ, ಮಂಗಳೂರು, ಪುಟ- ೬೮+೫.

೯೩. ಸಿದ್ಧಯ್ಯ ಪುರಾಣಿಕ., ೨೦೦೯, **ಸಿದ್ಧಯ್ಯ ಪುರಾಣಿಕರ ಸಮಗ್ರ ಕಾವ್ಯ**, ಶ್ರೀಗಿರಿ ಪ್ರಕಾಶನ, ಬೆಂಗಳೂರು, ಪುಟ-೨೪+೬೯೬.

೯೪. ಸಿದ್ಧಲಿಂಗಯ್ಯ, ೨೦೦೧, **ಸಾಹಿತ್ಯ ವಿಚಾರ**, ಮೈಸೂರು ವಿಶ್ವವಿದ್ಯಾಲಯ, ಪ್ರಸಾರಾಂಗ, ಮೈಸೂರು, ಪುಟ-೩೦೦.

೯೫. ಸಿದ್ಧಲಿಂಗಯ್ಯ., ೨೦೦೪, **ಊರುಕೇರಿ**, ಅಂಕಿತ ಪುಸ್ತಕ, ಬೆಂಗಳೂರು, ಪುಟ – ೧೨೫.

೯೬. ಸಿ.ಪಿ.ಕೆ., ೧೯೯೩, **ಸಿ.ಪಿ.ಕೆ ಸಮಗ್ರ ಕವಿತೆಗಳು(೧೯೫೫-೨೦೦೦)**, ಸಂವಹನ, ಮೈಸೂರು.

೯೭. ಸುಜ್ಞಾನಮೂರ್ತಿ(ಅನು), ೨೦೧೩, **ಹುಡುಕಾಟ ಕಳೆದುಹೋದ ಮಗನಿಗಾಗಿ ತಂದೆಯೊಬ್ಬನ ತಲ್ಲಣ**, ಪಲ್ಲವ ಪ್ರಕಾಶನ, ಚನ್ನಪಟ್ಟಣ, ಪುಟ- ೮+೧೧೬.

೯೮. ಸುಬ್ಬಣ್ಣ.ಕೆ.ವಿ., ೨೦೦೪, **ಅರೆ ಶತಮಾನದ ಅಲೆ ಬರಹಗಳು**, ಅಕ್ಷರ ಪ್ರಕಾಶನ, ಹೆಗ್ಗೋಡು, ಪುಟ-೨೦೩.

೯೯. ಸುಮತೀಂದ್ರ ನಾಡಿಗ., ೧೯೯೮, **ಸಮಗ್ರ ಕಾವ್ಯ(ಭಾಗ-೧)**, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು, ಪುಟ – ೩೬೪.

೧೦೦. ಸುರೇಶ ಪಾಟೀಲ., ೨೦೦೮, **ಕನ್ನಡ ಕಾದಂಬರಿಗಳಲ್ಲಿ ರಾಜಕೀಯ ವಸ್ತು ವಿನ್ಯಾಸ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ – ೬+೨೪೦.

೧೦೧. ಹಣಮಂತ ತಗ್ಗಳ್ಳಿ., ೧೯೭೮, **ಕೂಲಿಯವರ ಕೂಗು**, ಮಿತ್ರ ಭಾರತಿ ಪ್ರಕಾಶನ, ವಿಜಾಪುರ, ಪುಟ – ೨೮.

೧೦೨. ಹಂಪ ನಾಗರಾಜಯ್ಯ., ೧೯೮೧, **ಕನ್ನಡ ಪ್ರತಿಭಟನೆಯ ಕಾವ್ಯ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ- ೭೨+೪೮೦.

**ನಿಯತಕಾಲಿಕೆಗಳು**

೧. ಚಂದ್ರಶೇಖರ., ೧೯೮೦, ವಿಮರ್ಶೆ: ವಿಚಾರಣಾ ಆಯೋಗ, **ಸಂಕ್ರಮಣ ೯೬**, ಪುಟ- ೪೬೬.

೨. ಚಂದ್ರಶೇಖರ ಪಾಟೀಲ., ೧೯೭೭, ತುರ್ತು ಸಾಹಿತ್ಯ ಪರಿಷತ್ತು ಮತ್ತು ಹೆಗ್ಗಣಗಳು, **ಸಂಕ್ರಮಣ-೭೦**, ಪುಟ -೯-೧೩.

೩. ಚಂದ್ರಶೇಖರ್.ಎಸ್., ೧೯೮೨, ಅರಸು ಆಡಳಿತ: ಪರಿಣಾಮಗಳನ್ನು ಆಧರಿಸಿದ ಒಂದು ವಿಶ್ಲೇಷಣೆ, **ಅಂಕಣ**, ಪುಟ ೧೪-೨೧.

೪. ಬರಗೂರು ರಾಮಚಂದ್ರಪ್ಪ., ೧೯೭೭, ಸಾಹಿತಿಗಳು ಮತ್ತು ಸ್ವಾತಂತ್ರ್ಯಪ್ರಿಯತೆ, **ಸಂಕ್ರಮಣ-೭೦**, ಪುಟ-೭೩.

೫. ಮುಝಾಫರ್ ಅಸ್ಸಾದಿ., ೨೦೧೧, ಚೋಮನ ದುಡಿಯ ಚೋಮ ಮತ್ತು ಗ್ರೆಗೋರಿ ಪರ್ತಾವೋ: ಮತ್ತೆ ನೆನಪಾಗುವ ದೇವರಾಜ ಅರಸು, **ಸಂವಾದ**, ಪುಟ – ೪೨-೪೪.

೬. ರವಿಶಂಕರ ಕೋಳಿವಾಡ., ೧೯೭೮ ನವೆಂಬರ್, ಡಿಯರ್ ಮಿಸ್ ಗಾಯಿತ್ರಿಗೆ, ಚಂದ್ರಶೇಖರ್(ಸಂ)., **ಸಂಕ್ರಮಣ**, ಸಂಚಿಕೆ ೮೮.

೭. ರಶ್ಮಿ.ಎಸ್., ೨೦೧೨ ಜನವರಿ – ಜೂನ್, ಕರ್ನಾಟಕದಲ್ಲಿ ತುರ್ತುಪರಿಸ್ಥಿತಿ: ಕವನಗಳಲ್ಲಿ ಪ್ರತಿಫಲಿಸಿದ ಆಯಾಮಗಳು, ಮೋಹನಕೃಷ್ಣ ರೈ.ಕೆ., **ಚರಿತ್ರೆ ಅಧ್ಯಯನ**, ಸಂಪುಟ ೭, ಸಂಚಿಕೆ ೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ರಾಜಶೇಖರ್.ಜಿ., ೧೯೭೫ ಜನವರಿ, ಭಾರತೀಪುರದ ರಾಜಕೀಯ – ಒಂಸದು ಸಮರ್ಥನೆ, **ಸಾಕ್ಷಿ**, ಪುಟ – ೧೦೫-೧೧೨.

೯. ಶಿವರಾಮ್ ಕಾಡನಕುಪ್ಪೆ., ೧೯೭೭ ಫೆಬ್ರವರಿ ಮಾರ್ಚ್, ತುರ್ತುಪರಿಸ್ಥಿತಿ ಸಂದರ್ಭದಲ್ಲಿ ನಮ್ಮ ಬರಹಗಾರರು, ಚಂದ್ರಶೇಖರ ಪಾಟೀಲ(ಸಂ)., **ಸಂಕ್ರಮಣ**, ಸಂಚಿಕೆ ೭೦.

೧೦. ಹೊರೆಯಾಲ ದೊರೆಸ್ವಾಮಿ., ೧೯೭೮, ಗೊಂದಲಗಳ ನಡುವೆ 'ಪಡುವಾರಹಳ್ಳಿ ಪಾಂಡವರು', **ಸಂಕ್ರಮಣ**, ಪುಟ-೪೪-೪೫.

## ಇಂಗ್ಲಿಷ್ ಭಾಷಾ ಆಕರಗಳು

೧. ಅಬ್ಬಾಸ್.ಕೆ.ಎ., ೧೯೭೮, **ಟ್ವೆಂಟಿಯತ್ ಮಾರ್ಚ್ ನೈನ್ಟೀನ್ ಸೆವೆಂಟಿಸೆವನ್ – ಎ ಡೆ ಲೈಕ್ ಎನಿ ಅದರ್**, ವಿಕಾಸ್ ಪಬ್ಲಿಕೇಷನ್ ಹೌಸ್ ಪ್ರೈವೇಟ್ ಲಿಮಿಟೆಡ್, ಪುಟ – ೧೦+೧೩೪.

೨. ಅಜಿತ್ ಭಟ್ಟಾಚಾರ್ಯ., ೨೦೦೪, **ಅನ್‌ಫಿನಿಷ್ಡ್ ರೆವಲ್ಯೂಷನ್: ಎ ಪೊಲಿಟಿಕಲ್ ಬಯೋಗ್ರಫಿ ಆಫ್ ಜಯಪ್ರಕಾಶ್ ನಾರಾಯಣ್**, ರೂಪ ಅಂಡ್ ಕಂಪನಿ ಪಬ್ಲಿಷಡ್, ಪುಟ-೪೬೭

೩. ಅಡ್ವಾನಿ.ಎಲ್.ಕೆ., ೧೯೭೯, **ದಿ ಪೀಪಲ್ ಬಿಟ್ರೇಡ್**, ವಿಷನ್ ಬುಕ್ಸ್ ಪಬ್ಲಿಕೇಷನ್ಸ್, ಪುಟ-೧೭೯.

೪. ಅಡ್ವಾನಿ.ಎಲ್.ಕೆ., ೨೦೦೨, **ಎ ಪ್ರಿಸನರ್ಸ್ ಸ್ಕ್ರ್ಯಾಪ್ ಬುಕ್**, ಒಸನ್ ಬುಕ್ಸ್, ಪುಟ-೩೨೭.

೫. ಅಡ್ವಾನಿ.ಎಲ್.ಕೆ., ೨೦೦೮, **ಮೈ ಕಂಟ್ರಿ ಮೈ ಲೈಫ್**., ರೂಪ ಅಂಡ್ ಕೊ., ಇಂಡಿಯಾ, ಪುಟ –೧೦೪೦.

೬. ಅನಿರುದ್ಧ ಗುಪ್ತ., ೧೯೭೭, **ರೆವಲ್ಯೂಷನ್ ತ್ರೂ ಬ್ಯಾಲೆಟ್**: ಇಂಡಿಯಾ, ಅಂಕುರ್ ಪಬ್ಲಿಷಿಂಗ್ ಹೌಸ್, ಪುಟ–೧೬೩.

೭. ಅಮಿಯ ರಾವ್., ರಾವ್.ಬಿ.ಜಿ(ಸಂ)., ೧೯೭೭, **ದಿ ಪ್ರೆಸ್ ಷಿ ಕುಡ್ ನಾಟ್ ಫ್ರೀಜ್: ಎಮರ್ಜೆನ್ಸಿ ಇನ್ ಇಂಡಿಯಾ ಆಸ್ ರಿಪೋರ್ಟೆಡ್ ಬೈ ಫಾರಿನ್ ಪ್ರೆಸ್**, ಪಾಪುಲರ್ ಪ್ರಕಾಶನ್, ಬಾಂಬೆ, ಪುಟ – ೩೯೯.

೮. ಅಮಿಯಾ ರಾವ್ ಮತ್ತು ರಾವ್.ಬಿ.ಜಿ., ೧೯೭೮, ಅಂಡರ್‌ಗ್ರೌಂಡ್ ಲಿಟರೇಚರ್ ಡ್ಯೂರಿಂಗ್ ದಿ ಎಮರ್ಜೆನ್ಸಿ: ಎ ವೀವ್ ಫ್ರಂ ಡೆಲ್ಲಿ, ಸೋವೆನಿರ್, **ದಿ ಪೆನ್ ಇನ್ ರಿವೋಲ್ಟ್: ಅಂಡರ್‌ಗ್ರೌಂಡ್ ಲಿಟರೇಚರ್ ಪಬ್ಲಿಷಡ್ ಡ್ಯೂರಿಂಗ್ ದಿ ಎಮರ್ಜೆನ್ಸಿ**, ಪಬ್ಲಿಷರ್ಸ್ ಪ್ರೆಸ್ ಇನ್‌ಸ್ಟಿಟ್ಯೂಟ್ ಆಫ್ ಇಂಡಿಯಾ, ಪುಟ – ೨೩.

೯. ಅರುಣ್ ಲಿಮಯೆ., ೧೯೮೧, **ಡಾಕ್ಯುಮೆಂಟೇಷನ್ ಆಫ್ ಎಮರ್ಜೆನ್ಸಿ ಪೀರಿಯಡ್ ಇನ್ ಇಂಡಿಯಾ (ಜೂನ್ ೧೯೭೫ ಟಿಲ್ ಮಾರ್ಚ್ ೧೯೭೭)**., ಪಾಪುಲರ್ ಪ್ರಕಾಶನ್, ಬಾಂಬೆ, ಪುಟ–೧೫೦.

೧೦.ಎಮ್ಮ ಟ್ಯಾರ್ಲೋ ಆರಿಫ್., ೨೦೦೩, **ಅನ್‌ಸೆಟ್ಲಿಂಗ್ ಮೆಮೊರಿಸ್: ನರೇಟಿವ್ಸ್ ಆಫ್ ಇಂಡಿಯನ್ ಎಮರ್ಜೆನ್ಸಿ ಇನ್ ಡೆಲ್ಲಿ**, ಓರಿಯಂಟಲ್ ಬ್ಲ್ಯಾಕ್ ಸ್ವ್ಯಾನ್, ನ್ಯೂ ಡೆಲ್ಲಿ, ಪುಟ –೨೩೫.

೧೧.ಎರ ಸೇಜಿಯನ್(ಸಂ)., ೨೦೧೦, **ಷಾ ಕಮಿಷನ್ ರಿಪೋರ್ಟ್ ಲಾಸ್ಟ್ ಅಂಡ್ ರಿಗೇನ್ಡ್**, ಅಜಿ ಪಬ್ಲಿಕೇಷರ್ಸ್, ಚೆನ್ನೈ, ಪುಟ– ೬೦೬.

೧೨.ಕರ್ನಾಟಕ ಲಾ ಜರ್ನಲ್ ಪಬ್ಲಿಕೇಷನ್ಸ್, ೨೦೦೪, **ಕಮೆಂಟ್ರೀಸ್ ಆನ್ ದಿ ಕರ್ನಾಟಕ ಲ್ಯಾಂಡ್ ರಿಫಾರ್ಮ್ಸ್ ಆಕ್ಟ್, ೧೯೬೧**, ಪುಲಾನಿ ಅಂಡ್ ಪುಲಾನಿ, ಬೆಂಗಳೂರು, ಪುಟ– ೯೯೨.

೧೩.ಕುಲದೀಪ್ ನಯ್ಯರ್., ೧೯೭೭, ದಿ **ಜಡ್ಜ್‌ಮೆಂಟ್ ಸ್ಟೋರಿ ಆಫ್ ದಿ ಎಮರ್ಜೆನ್ಸಿ ಇನ್ ಇಂಡಿಯಾ,** ವಿಕಾಸ್ ಪಬ್ಲಿಷಡ್ ಹೌಸ್, ಪುಟ – ೨೨೮.

೧೪. ಕುಲದೀಪ್ ನಯ್ಯರ್., ೧೯೭೮, **ಇನ್ ಜೈಲ್,** ವಿಕಾಸ್ ಪಬ್ಲಿಷಿಂಗ್ ಹೌಸ್ ಪ್ರೈವೇಟ್ ಲಿಮಿಟೆಡ್, ಡೆಲ್ಲಿ, ಪುಟ – ೧೬೨.

೧೫. ಕುಲದೀಪ್ ನಯ್ಯರ್., ೨೦೧೨, **ಸ್ಪೆಷಿಫಿಕೇಷನ್ ಆಫ್ ಬಿಯಾಂಡ್ ದ ಲೈನ್: ಎನ್ ಆಟೋಬಯೋಗ್ರಫಿ,** ರೋಲಿ ಬುಕ್ಸ್, ಪುಟ – ೪೩೨+೩೨.

೧೬.ಕುಶ್ವಂತ್ ಸಿಂಗ್., ೨೦೦೯, **ವೈ ಐ ಸಪೋರ್ಟೆಡ್ ಎಮರ್ಜೆನ್ಸಿ: ಎಸ್ಸೇಸ್ ಅಂಡ್ ಪ್ರೊಫೈಲ್.,** ಪೆಂಗ್ವಿನ್ ಬುಕ್ಸ್ ಇನ್ ಇಂಡಿಯಾ, ನ್ಯೂ ಡೆಲ್ಲಿ, ಪುಟ – ೨೯೬.

೧೭.ಘನ್‌ಶ್ಯಾಮ್ ಷಾ., ೨೦೦೨, **ಸೋಷಿಯಲ್ ಮೂವ್‌ಮೆಂಟ್ಸ್ ಅಂಡ್ ದಿ ಸ್ಟೇಟ್ಸ್,** ಸೇಜ್ ಪಬ್ಲಿಕೇಷನ್ಸ್, ನ್ಯೂ ಡೆಲ್ಲಿ, ಪುಟ – ೪೭೫.

೧೮.ಘನ್‌ಶ್ಯಾಮ್ ಷಾ., ೨೦೦೪, **ಕ್ಯಾಸ್ಟ್ ಅಂಡ್ ಡೆಮೊಕ್ರೆಟಿಕ್ ಪಾಲಿಟಿಕ್ಸ್ ಇನ್ ಇಂಡಿಯಾ,** ಓರಿಯಂಟಲ್ ಬ್ಲ್ಯಾಕ್ ಸ್ವಾನ್, ಪುಟ – ೪೪೦.

೧೯.ಚಂದ್ರಪ್ರಕಾಶ್ ಬಂಡಾರಿ., ೧೯೮೦, **ದಿ ಜನತಾ ಪಾರ್ಟಿ: ಎ ಪ್ರೊಫೈಲ್,** ನ್ಯಾಷನಲ್ ಪಬ್ಲಿಕೇಷನ್ಸ್, ಪುಟ – ೨೨೮.

೨೦.ಜಗತ್.ಎಸ್.ಬ್ರೈಟ್, ೧೯೭೯, **ಅಲಹಾಬಾದ್ ಹೈ ಕೋರ್ಟ್ ಟು ಷಾ ಕಮಿಷನ್,** ಡೀಪ್ ಅಂಡ್ ಡೀಪ್ ಪಬ್ಲಿಕೇಷನ್ಸ್, ಪುಟ – ೧೭೨.

೨೧. ಜನಕ್ ರಾಜ್ ರೈ., ೨೦೦೨, **ಎಮರ್ಜೆನ್ಸಿ ಎಕ್ಸೆಸ್, ಎ ಡೇ ಲೈಟ್ ರಾಬರಿ ಆಫ್ ಹ್ಯೂಮನ್ ರೈಟ್ಸ್ ಅಂಡ್ ಜೆ.ಪಿ., ದಿ ಸೇವಿಯರ್.,** ದಯ ಬುಕ್ಸ್, ಪುಟ – ೨೧೦.

೨೨. ಜನತಾಪಾರ್ಟಿ., ೧೯೭೮, **ಜನತಾ ಎರ: ಫಸ್ಟ್ ಇಯರ್,** ಜನತಾ ಪಾರ್ಟಿ, ಪುಟ – ೧೭೨.

೨೩. ಜನತಾಪಾರ್ಟಿ., ೧೯೭೯, **ಜನತಾ ಎರ: ಸೆಕೆಂಡ್ ಇಯರ್,** ಜನತಾ ಪಾರ್ಟಿ, ಪುಟ – ೧೧೬.

೨೪. ಜಯಪ್ರಕಾಶ್ ನಾರಾಯಣ್., ೧೯೮೩, **ಪ್ರಿಸನ್ ಡೈರಿ,** ಪಾಪುಲರ್ ಪ್ರಕಾಶನ, ಬಾಂಬೆ, ಪುಟ – ೨೯೯.

೨೫. ಜಾರ್ಜ್ ಫರ್ನಾಂಡೀಸ್., ೧೯೭೭, ಡಿಯರ್ ಕಾಮ್ರೇಡ್ಸ್, ಶಿವ್‌ಲಾಲ್., **ದಿ ಪಿ ತುಘಲಕ್ ಆಫ್ ಇಂಡಿಯಾ,** ನ್ಯೂ ಮೆನ್ ಗ್ರೂಪ್ ಆಫ್ ಪಬ್ಲಿಷರ್ಸ್, ಇಂಡಿಯಾ, ಪುಟ – ೨೩೨.

೨೬.ಜಾರ್ಜ್ ಫರ್ನಾಂಡೀಸ್., ೧೯೭೮, ಡಿಯರ್ ಕಾಮ್ರೇಡ್ಸ್ ... ಫ್ರಂ ಜಾರ್ಜ್ ಫರ್ನಾಂಡೀಸ್ ಸಂವೇರ್ ಅಂಡರ್‌ಗ್ರೌಂಡ್, ಸೋವೆನಿರ್, **ದಿ ಪೆನ್ ಇನ್ ರಿವೋಲ್ಟ್: ಅಂಡರ್‌ಗ್ರೌಂಡ್ ಲಿಟರೇಚರ್ ಪಬ್ಲಿಷಡ್ ಡ್ಯೂರಿಂಗ್ ದಿ ಎಮರ್ಜೆನ್ಸಿ,** ಪಬ್ಲಿಷರ್ಸ್ ಪ್ರೆಸ್ ಇನ್‌ಸ್ಟಿಟ್ಯೂಟ್ ಆಫ್ ಇಂಡಿಯಾ, ಪುಟ – ೨೩.

೨೭.ಟಂಡನ್.ಬಿ.ಎನ್., ೨೦೦೩, **ಪಿ.ಎಂ.ಓ ಡೈರಿ – ಐ: ಪ್ರಿ ಲ್ಯೂಡ್ ಟು ದಿ ಎಮರ್ಜೆನ್ಸಿ,** ಕೋನಾರ್ಕ್ ಪಬ್ಲಿಷರ್ಸ್, ನ್ಯೂ ಡೆಲ್ಲಿ, ಪುಟ – ೫೫೩.

೨೮.ತಿಮ್ಮಯ್ಯಜಿ., ೧೯೯೩, **ಪವರ್ ಪಾಲಿಟಿಕ್ಸ್ ಅಂಡ್ ಸೋಷಿಯಲ್ ಜಸ್ಟೀಸ್: ಬ್ಯಾಕ್‌ವರ್ಡ್ ಕ್ಯಾಸ್ಟ್ಸ್ ಇನ್ ಕರ್ನಾಟಕ,** ಸೇಜ್ ಪಬ್ಲಿಕೇಷನ್, ನ್ಯೂ ಡೆಲ್ಲಿ, ಪುಟ – ೨೦೩.

೨೯.ತಿಮ್ಮಯ್ಯಜಿ., ಅಬ್ದುಲ್ ಅಜೀಜ್., ೧೯೮೪, **ದಿ ಪೊಲಿಟಿಕಲ್ ಇಕಾನಾಮಿ ಆಫ್ ಲ್ಯಾಂಡ್ ರಿಫಾರ್ಮ್ಸ್ ಇನ್ ಕರ್ನಾಟಕ,** ಆಶೀಷ್ ಪಬ್ಲಿಷಿಂಗ್ ಹೌಸ್, ನ್ಯೂ ಡೆಲ್ಲಿ.

೩೦. ತೆಂಡಲ್ಕರ್.ಡಿ.ಜಿ., ೧೯೫೧, **ಮಹಾತ್ಮ(ಎರಡನೆ ಸಂಪುಟ),** ಎಂಟು ಸಂಪುಟಗಳು, ಪಬ್ಲಿಕೇಷನ್ ಡಿವಿಷನ್, ಮಿನಿಸ್ಟ್ರಿ ಆಫ್ ಬ್ರಾಡ್‌ಕಾಸ್ಟಿಂಗ್, ಗವರ್ನ್‌ಮೆಂಟ್ ಆಫ್ ಇಂಡಿಯಾ, ನವದೆಹಲಿ, ಪುಟ – ೫೩೯.

೩೧.ದೇವ್‌ಶ್ಯಾಮ್.ಎಂ.ಜಿ., ೨೦೦೪, **ಇಂಡಿಯಾಸ್ ಸೆಕೆಂಡ್ ಫ್ರೀಡಂ: ಆನ್ ಅನ್‌ಟೋಲ್ಡ್ ಸಾಗ,** ಸಿದ್ಧಾರ್ಥ ಪಬ್ಲಿಕೇಷನ್ಸ್, ಪುಟ – ೩೫೮.

೩೨.ಧಾರ್.ಪಿ.ಎಸ್., ೨೦೦೦, **ಇಂದಿರಾ ಗಾಂಧಿ – ದಿ ಎಮರ್ಜೆನ್ಸಿ ಅಂಡ್ ಇಂಡಿಯನ್ ಡೆಮಾಕ್ರಸಿ,** ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂ ಡೆಲ್ಲಿ, ಪುಟ – ೧೨+೪೨೪.

೩೩.ನಟರಾಜ್.ವಿ.ಕೆ., ಸೆಂಚುರಿ ಅವತಾರ್ ಮತ್ತು ಕಾರಾಂತ್.ಜಿಕೆ.(ಸಂ)., ೧೯೯೬, **ಡೈನಾಮಿಕ್ಸ್ ಆಫ್ ಲ್ಯಾಂಡ್ ರಿಫಾರ್ಮ್ಸ್ ಇನ್ ಕರ್ನಾಟಕ ವಿಲೇಜ್,** ಪೆಂಗ್ವಿನ್, ನ್ಯೂ ಡೆಲ್ಲಿ., ಪುಟ –೨೮೦.

೩೪.ನಯಂತರ ಸಹಗಲ್., ೧೯೭೮, **ಇಂದಿರಾ ಗಾಂಧೀಸ್ ಎಮರ್ಜೆನ್ಸ್ ಅಂಡ್ ಸಟೈಲ್,** ವಿಕಾಸ್ ಪಬ್ಲಿಷಿಂಗ್ ಹೌಸ್ ಪ್ರೈವೇಟ್ ಲಿಮಿಟೆಡ್, ನ್ಯೂ ಡೆಲ್ಲಿ, ಪುಟ – ೯+೨೧೫.

೩೫.ನಾನಾಜಿ ದೇಶ್‌ಮುಖ್, ೧೯೭೭, ಎನ್ ೮ ಪಾಯಿಂಟ್ ಪ್ರೊಗ್ರಾಂ ಫಾರ್ ಇಂಡಿಯನ್ಸ್ ಅಬ್ರಾಡ್, ಮೈಕಲ್ ಹೆಂಡರ್‌ಸನ್, **ಎನ್ ಎಕ್ಸ್‌ಪೆರಿಮೆಂಟ್ ವಿತ್ ಅನ್‌ಟ್ರೂತ್**, ದಿ ಮ್ಯಾಕ್ ಮಿಲನ್ ಕಂಪೆನಿ ಆಫ್ ಇಂಡಿಯಾ, ಇಂಡಿಯಾ, ಪುಟ – ೨೨೮.

೩೬. ನೈಪಲ್.ವಿ.ಎಸ್., ೨೦೦೩, **ಇಂಡಿಯಾ: ಎ ವೂಂಡೆಂಡ್ ಸಿವಿಲೈಜೇಷನ್**, ವಿಂಟೇಜ್, ಪುಟ – ೧೭೬.

೩೭. ಪ್ರಭು ಮತ್ತು ರಾವ್(ಸಂ), ೧೯೬೮, **ಮೈಂಡ್ ಆಫ್ ಮಹಾತ್ಮ ಗಾಂಧಿ**, ನವಜೀವನ್ ಪಬ್ಲಿಷಿಂಗ್ ಹೌಸ್, ಅಹಮದಾಬಾದ್, ಪುಟ – ೪೫೧.

೩೮. ಪ್ರಹ್ಲಾದ್ ರಾವ್.ಸಿ.ಹೆಚ್., ೧೯೭೭, ದಿ ಕನ್ನಡ ಸೀನ್, ಸೊವೆನಿರ್, **ದಿ ಪೆನ್ ಇನ್ ರಿವೋಲ್ಟ್: ಅಂಡರ್‌ಗ್ರೌಂಡ್ ಲಿಟರೇಚರ್ ಪಬ್ಲಿಷಡ್ ಡ್ಯೂರಿಂಗ್** ದಿ ಎಮರ್ಜೆನ್ಸಿ, ಪಬ್ಲಿಷರ್ಸ್ ಪ್ರೆಸ್ ಇನ್‌ಸ್ಟಿಟ್ಯೂಟ್ ಆಫ್ ಇಂಡಿಯಾ, ಪುಟ – ೨೩.

೩೯. ಪ್ರಾಣ್ ಚೋಪ್ರಾ., ೧೯೭೮, **ಇಂಡಿಯಾಸ್ ಸೆಕೆಂಡ್ ಲಿಬರೇಷನ್**, ವಿಕಾಸ್ ಪಬ್ಲಿಷಿಂಗ್ ಹೌಸ್ ಪ್ರೈವೇಟ್ ಲಿಮಿಟೆಡ್, ದೆಲ್ಲಿ, ಪುಟ – ೬+೨೭೦.

೪೦. ಫ್ರಾಂಕೆಲ್ ಫ್ರಾಂಸ್ಕೈನ್.ಆರ್., ಜೋಯ ಹಸನ್., ರಾಜೀವ್ ಭಾರ್ಗವ್., ಬಾಲ್‌ವೀರ್ ಆರೋರ(ಸಂ)., ೨೦೦೨, **ಟ್ರಾನ್ಸ್‌ಫಾರ್ಮಿಂಗ್ ಇಂಡಿಯಾ – ಸೋಷಿಯಲ್ ಅಂಡ್ ಪೊಲಿಟಿಕಲ್ ಡೈನಾಮಿಕ್ಸ್ ಆಫ್ ಡೆಮಾಕ್ರಸಿ**, ಆಕ್ಸ್‌ಫರ್ಡ್ ಯೂನಿವರ್ಸಿಟಿ, ಪುಟ – ೨೩೫.

೪೧. ಬಸು.ಡಿ.ಡಿ., ೨೦೦೮, **ಇನ್‌ಟ್ರುಡಕ್ಷನ್ ಟು ದಿ ಕಾನ್ಸ್‌ಟಿಟ್ಯೂಷನ್ ಆಫ್ ಇಂಡಿಯಾ**, ಲೆಕ್ಸಿಸ್ ನೆಕ್ಸಿಯಾ ಬಟರ್ ವರ್ತ್‌ವಾಧ್ವ, ನಾಗಪುರ, ಪುಟ – ೫೦೯.

೪೨. ಬಾಲರಾಜ್ ಪುರಿ., ೧೯೭೮, **ರೆವಲ್ಯೂಷನ್, ಕೌಂಟರ್ ರೆವಲ್ಯೂಷನ್**, ನ್ಯೂ ಮೆನ್ ಗ್ರೂಫ್ ಆಫ್ ಪಬ್ಲಿಷರ್ಸ್, ಪುಟ– ೧೪೪.

೪೩. ಬಿಪನ್ ಚಂದ್ರ., ೨೦೦೦, **ಇಂಡಿಯಾ ಆಫ್ಟರ್ ಇಂಡಿಪೆಂಡೆನ್ಸ್**, ಪೆಂಗ್ವಿನ್, ನ್ಯೂ ಡೆಲ್ಲಿ, ಪುಟ –೫೪೯.

೪೪. ಬಿಪನ್ ಚಂದ್ರ., ೨೦೦೩, **ಇನ್ ದ ನೇಮ್ ಆಫ್ ಡೆಮಾಕ್ರಸಿ: ಜೆ.ಪಿ.. ಮೂವ್‌ಮೆಂಟ್ ಅಂಡ್ ಎಮರ್ಜೆನ್ಸಿ**, ಪೆಂಗ್ವಿನ್, ನ್ಯೂ ಡೆಲ್ಲಿ, ೨೦೦೩, ಪುಟ – ೩೭೪.

೪೫. ಮಧು ದಂಡವತೆ., ೨೦೦೨, **ಜಯಪ್ರಕಾಶ್ ನಾರಾಯಣ್: ಸ್ಟ್ರಗಲ್ ವಿತ್ ವ್ಯಾಲ್ಯೂಸ್: ಎ ಸೆಂಚುರಿ ಟ್ರಿಬ್ಯೂಟ್**, ಅಲ್ಲೈಡ್ ಪಬ್ಲಿಷರ್ಸ್, ಪುಟ – ೩೦೭

೪೬. ಮಲಾನಿ.ಕೆ.ಆರ್., ೧೯೭೮, **ಮಿಡ್ ನೈಟ್ ನಾಕ್**, ವಿಕಾಸ್ ಪಬ್ಲಿಷಿಂಗ್ ಹೌಸ್, ಪುಟ – ೯೮.

೪೭. ಮಾಥುರ್.ಓ.ಪಿ., ೨೦೦೪, **ಇಂದಿರಾ ಗಾಂಧಿ ಅಂಡ್ ಎಮರ್ಜೆನ್ಸಿ ಆಸ್ ವೀವಡ್ ಇನ್ ನಾವೆಲ್**, ಸುರುಪ್ ಅಂಡ್ ಸೈನ್ಸ್, ಪುಟ – ೧೩೩.

೪೮. ಮುಮ್ತಾಜ್ ಅಲಿ ಖಾನ್., ೧೯೯೬, **ಡೆವಲಪ್‌ಮೆಂಟ್ ಅಂಡ್ ಸೋಶಿಯಲ್ ಜಸ್ಟೀಸ್: ಎ ಕೇಸ್ ಸ್ಟಡಿ ಆಫ್ ಎಂ.ವೀರಪ್ಪ ಮೋಯ್ಲಿ ರೆಜಿಮ್**, ಐಬಿಹೆಚ್ ಪ್ರಕಾಶನ, ಬೆಂಗಳೂರು.

೪೯. ಮುಝಾಫರ್ ಅಸ್ಸಾದಿ., ೨೦೧೦, ರಿ ಅಡ್ರೆಸಿಂಗ್ ಲ್ಯಾಂಡ್ ರಿಫಾರ್ಮ್ಸ್ ಇಶ್ಯೂಸ್ ಇನ್ ಕರ್ನಾಟಕ, ರಾಮ ಪಿಲ್ಲೈ(ಸಂ)., **ಲ್ಯಾಂಡ್ ರಿಫಾರ್ಮ್ಸ್**, ಎ.ಪಿ.ಹೆಚ್ ಪಬ್ಲಿಕೇಷನ್ಸ್, ನ್ಯೂ ಡೆಲ್ಲಿ, ಪುಟ – ೩೨೭೯.

೫೦. ರಜನಿ ಕೊಠಾರಿ., ೧೯೭೬, **ಡೆಮಾಕ್ರಟಿಕ್ ಪಾಲಿಟಿ ಅಂಡ್ ಸೋಷಿಯಲ್ ಛೇಂಜ್ ಇನ್ ಇಂಡಿಯಾ – ಕ್ರೈಸಿಸ್ ಅಂಡ್ ಅಪರ್ಚುನಿಟೀಸ್**, ಅಲೈಡ್ ಪಬ್ಲಿಷರ್ಸ್ ಲಿಮಿಟೆಡ್, ನ್ಯೂ ಡೆಲ್ಲಿ, ಪುಟ – ೧೨೪.

೫೧. ರಜನಿ ಕೊಠಾರಿ., ೨೦೦೫, **ರಿ ಥಿಂಕಿಂಗ್ ಡೆಮಾಕ್ರಸಿ**, ಓರಿಯಂಟಲ್ ಬ್ಲ್ಯಾಕ್‌ಸ್ವ್ಯಾನ್, ನ್ಯೂ ಡೆಲ್ಲಿ, ಪುಟ – ೧೭೬.

೫೨. ರಾಬಿನ್ ಜೆಫ್ರಿ., ೨೦೦೦, **ಇಂಡಿಯಾಸ್ ನ್ಯೂಸ್ ಪೇಪರ್ ರೆವಲ್ಯೂಷನ್: ಕ್ಯಾಪಿಟಾಲಿಸಂ, ಪಾಲಿಟಿಕ್ಸ್ ಅಂಡ್ ದಿ ಇಂಡಿಯನ್ ಲಾಂಗ್ವೇಜ್**, ಸೆಂಟ್ ಮಾರ್ಟಿನ್ಸ್ ಪ್ರೆಸ್, ಪು – ೨೩೪.

೫೩. ರಾಮಚಂದ್ರ ಗುಹ., ೨೦೧೧, **ಇಂಡಿಯಾ ಆಫ್ಟರ್ ಗಾಂಧಿ: ದಿ ಹಿಸ್ಟರಿ ಆಫ್ ದಿ ವರ್ಡ್ ಲಾರ್ಜೆಸ್ಟ್ ಡೆಮಾಕ್ರಸಿ**, ಪ್ಯಾನ್ ಮ್ಯಾಕ್‌ಮಿಲನ್, ಪುಟ –. ೯೪೪.

೫೪. ರೋಹಿನ್ಸನ್ ಮಿಸ್ತ್ರಿ., ೧೯೯೫, **ಎ ಫೈನ್ ಬ್ಯಾಲೆನ್ಸ್**., ಮ್ಯಾಕ್ ಕ್ಲೀಲ್ಯಾಂಡ್ ಅಂಡ್ ಸ್ಟಿವರ್ಟ್, ಕ್ಯನಡ, ಪುಟ – ೬೦೩.

೫೫.ವಿಜಯ್ ತೆಂಡಲ್ಕರ್., ೨೦೧೦, ದ(ಡ)ಂಬಾದ್ವಿಪಾಚ ಮುಖಾಬಲ, ಆಶಿಷ್ ರಾಜಾಧ್ಯಕ್ಷ., **ಇಂಡಿಯನ್ ಸಿನಿಮಾ ಇನ್ ದಿ ಟೈಮ್ ಆಫ್ ದಿ ಸೆಲ್ಯೂಲೈಡ್ ಫ್ರಂ ಬಾಲಿವುಡ್ ಟು ಎಮರ್ಜೆನ್ಸಿ**, ಲೆಫ್ಟ್ ವರ್ಡ್, ಪುಟ –೪೩೨.

೫೬.ವಿರೇಂದ್ರ ಗ್ರೋವರ್., ರಂಜನ್ ಆರೋರ(ಸಂ)., ೧೯೯೭, **ಇಂಡಿಯಾ ಫಿಫ್ಟಿ ಇಯರ್ಸ್ ಆಫ್ ಇಂಡಿಪೆಂಡೆನ್ಸ್**, ಡೀಪ್ ಅಂಡ್ ಡೀಪ್ ಪಬ್ಲಿಕೇಷನ್ಸ್, ನ್ಯೂ ಡೆಲ್ಲಿ, ಪುಟ – ೯೮೫.

೫೭.ಶ್ಯಾಮ್ ಬೆನೆಗಲ್., ೨೦೦೮, ಉಲ್ಲೇಖ, ಸಂಗೀತ ದತ್ತ., **ಶ್ಯಾಮ್ ಬೆನೆಗಲ್**, ೨೦೦೮, ದಿ ಬ್ರಿಟಿಷ್ ಫಿಲ್ಮ್ ಇನ್ಸ್‌ಟಿಟ್ಯೂಟ್, ಇಂಡಿಯಾ. ಪುಟ – ೧೦+೨೬೩.

೫೮.ಸಂಜೀವ್ ತಾರ್., ೨೦೦೮, **ದಿ ಪ್ಲಂಜ್**, ಕ್ರಿಯೆಟ್‌ಸ್ಪೇಸ್ ಇಂಡಿಪೆಂಡೆಂಟ್ ಪಬ್ಲಿಷಿಂಗ್ ಪ್ಲಾಟ್‌ಫಾರ್ಮ್, ಪುಟ – ೨೩೬.

೫೯.ಸಲ್ಮಾನ್ ರುಶ್ದೀ., ೧೯೮೧, **ಮಿಡ್‌ನೈಟ್ಸ್ ಚಿಲ್ಡ್ರನ್**, ಜೋನಾಥನ್ ಕೇಪ್, ಪುಟ – ೪೪೬.

೬೦.ಸಹಸ್ರ ಬುದ್ಧೆ.ಪ್ರಗ., ವಾಜಪೇಯಿ, ಮಾಣಿಕಚಂದ್ರ., ೧೯೯೧, **ದಿ ಪೀಪಲ್ ವರ್ಸಸ್ ಎಮರ್ಜೆನ್ಸಿ: ಎ ಸಾಗಾ ಆಫ್ ಸ್ಟ್ರಗಲ್**, ಸುರುಚಿ ಪ್ರಕಾಶನ, ಪುಟ – ೬೪೭.

೬೧.ಸಿದ್ಧನವಲ್ಲಿ ನಿಜಲಿಂಗಪ್ಪ., ೨೦೦೦, **ಮೈ ಲೈಫ್ ಅಂಡ್ ಪಾಲಿಟಿಕ್ಸ್ : ಅನ್ ಅಟೋಬಯೋಗ್ರಫಿ**, ವಿಷನ್ ಬುಕ್ಸ್, ಪುಟ – ೧೯೨.

೬೨.ಸೋಮೇಶ್ವರ್ ಭೌಮಿಕ್., ೨೦೦೯, **ಸಿನಿಮಾ ಅಂಡ್ ಸೆನ್ಸಾರ್‌ಷಿಪ್ ದಿ ಪಾಲಿಟಿಕ್ಸ್ ಆಫ್ ಕಂಟ್ರೋಲ್ ಇನ್ ಇಂಡಿಯಾ**, ಓರಿಯಂಟಲ್ ಬ್ಲ್ಯಾಕ್ ಸ್ವಾನ್, ಡೆಲ್ಲಿ, ಪುಟ – ೩೮೧.

೬೩.ಸ್ನೇಹಲತಾ ರೆಡ್ಡಿ., ೧೯೭೭, **ಎ ಪ್ರಿಸನ್ ಡೈರಿ**, ಹ್ಯೂಮನ್ ರೈಟ್ಸ್ ಕಮಿಷನ್, ಕರ್ನಾಟಕ ರಾಜ್ಯ, ಪುಟ – ೨೩.

೬೪.ಹರಿಕಿಶನ್‌ಸಿಂಗ್ ಸರ್ಜಿತ್., ೧೯೯೨, **ಲ್ಯಾಂಡ್ ರಿಫಾರ್ಮ್ಸ್ ಇನ್ ಇಂಡಿಯಾ – ಪ್ರಾಮಿಸಸ್ ಅಂಡ್ ಪರ್ಫಾರ್ಮೆನ್ಸ್**, ನ್ಯಾಷನಲ್ ಬುಕ್ ಸೆಂಟರ್, ನ್ಯೂ ಡೆಲ್ಲಿ, ಪುಟ – ೨೭೮.

೬೫.ಹಾವನೂರು ಲಕ್ಷ್ಮಣ್ ಗುಳಪ್ಪ., ೧೯೯೧, **ಬ್ಯಾಕ್‌ವರ್ಡ್ ಕ್ಲಾಸಸ್: ಜ್ಯೂರಿಡಿಕಲ್ ಮೀನಿಂಗ್**, ಸೋಷಿಯೊ ಲೀಗಲ್ ಸರ್ವಿಸಸ್ ಅಂಡ್ ರಿಸರ್ಚ್ ಸೆಂಟರ್, ಪುಟ – ೧೪೬.

**ನಿಯತಕಾಲಿಕೆಗಳು**

೧. ಅನಿರುದ್ ದೇಶ್‌ಪಾಂಡೆ., ೨೦೦೭ ಡಿಸೆಂಬರ್ ೧೫, ಇಂಡಿಯನ್ ಸಿನಿಮಾ ಅಂಡ್ ದಿ ಬೂರ್ಗೋಯಿಸ್ ನೇಷನ್ ಸ್ಟೇಟ್, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೯೫ – ೧೦೩.

೨. ಅರವಿಂದ್ ನಾರಾಯಣ್ ದಾಸ್., ೧೯೭೫ ಜೂನ್ ೧೪, ಮರ್ಡರ್ ಟು ಲ್ಯಾಂಡ್‌ಲಾರ್ಡ್ಸ್ ಆರ್ಡರ್, ಬಿಹಾರ್, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೯೧೫ – ೯೧೭.

೩. ಅರವಿಂದ್ ರಾಜ್‌ಗೋಪಾಲ್., ೨೦೦೦ ಜೂನ್ ೨೪, ಇ ಎಮರ್ಜೆನ್ಸಿ ಅಂಡ್ ಪಾಪುಲರ್ ಮೆಮೋರಿ, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೨೨೦೫ – ೨೨೦೬.

೪. ಅರವಿಂದ್ ರಾಜ್‌ಗೋಪಾಲ್., ೨೦೦೩ ಜುಲೈ ೫, ಸಂಘ್ಸ್ ರೋಲ್ ಇನ್ ಎಮರ್ಜೆನ್ಸಿ, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೨೨೦೫ – ೨೨೦೬

೫. ಅರುಣ್ ಸಿನ್ಹಾ., ೧೯೭೭ ಸೆಪ್ಟೆಂಬರ್, ಲ್ಯಾಂಡ್ ಲಾರ್ಡ್ಸ್ ಆನ್ ರ್‍ಯಾಂಪೇಜ್ ಇನ್ ಚಂಪಾರಣ್, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೧೬೭೧.

೬. ಅರುಣ್ ಸಿನ್ಹಾ., ೧೯೭೮ ಅಕ್ಟೋಬರ್ ೨೧, ಲೀಗಲ್ ಲೂಪ್‌ಹೋಲ್ಸ್ ಟು ಲ್ಯಾಂಡ್‌ಲಾರ್ಡ್ಸ್ ರಿಸ್ಕ್ಯೂ, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೧೭೫೪ – ೧೭೭೧.

೭. ಅರುಣ್ ಸಿನ್ಹಾ., ೧೯೭೮ ಡಿಸೆಂಬರ್ ೧೬, ಭಜಿತ್‌ಪುರ್: ಲ್ಯಾಂಡ್‌ಲಾರ್ಡ್ಸ್ ವೈಲೆನ್ಸ್, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೨೦೩೧ – ೨೦೩೨.

೮. ಅಲ್ಬಾನ್ ಕಾಸ್ಟೋ., ೨೦೦೪ ಜನವರಿ ೧೭, ರಿಮೆಂಬರಿಂಗ್ ಜೆ.ಪಿ..., ರಿ ಟ್ರೆಸಿಂಗ್ ಸ್ಟೆಪ್ಸ್ ಟು ಎಮರ್ಜೆನ್ಸಿ ಅಂಡ್ ಅಫ್ಟರ್, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೨೪೩–೨೪೭.

೯. ಅವರ್ ಕರೆಸ್ಪಾಂಡೆಂಟ್, ೧೯೭೫ ಜುಲೈ, ಟ್ವೆಂಟಿಒನ್ ಪಾಯಿಂಟ್ ಪ್ರೋಗ್ರಾಂ, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೯೯೨.

೧೦.ಆಫ್ಟರ್ ಫಿಫ್ಟಿ ಇಯರ್ಸ್, ೨೦೧೨, ಗೌವರ್ನ್‌ಮೆಂಟ್ ಅಸ್ ಲ್ಯಾಂಡ್ ಏಜೆಂಟ್(ಸೆಪ್ಟೆಂಬರ್ ೧೯೬೨), **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೨.

೧೧. **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**., ೧೯೭೭ ಮಾರ್ಚ್ ೯, ದಿ ಪ್ರೆಸ್ ಸಮಾಚಾರ್ ಅಂಡ್ ಗವರ್ನ್‌ಮೆಂಟ್, ಪುಟ – ೪೩೦ – ೪೩೧.

೧೨.**ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ೨೬ ಮಾರ್ಚ್ ೧೯೭೭, ಸೆಟ್ ಬ್ಯಾಕ್ ಫಾರ್ ಕಾಂಗ್ರೆಸ್ ನಾರ್ತ್, ಪುಟ – ೫೩೦.

೧೩.**ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ೧೯೭೮ ಮಾರ್ಚ್ ೧೧, ಬಿಹಾರ್ – ಅನದರ್ ಮೂವ್‌ಮೆಂಟ್ ಇನ್ ದಿ ಮೇಕಿಂಗ್, ಪುಟ – ೪೮೩ – ೪೮೪.

೧೪.**ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ೧೯೭೯ ಸೆಪ್ಟೆಂಬರ್ ೨೯, ಪಾಲಿಟಿಕ್ಸ್ ವಿತ್ ಸಚ್ ಫ್ರೆಂಡ್ಸ್, ಪುಟ – ೧೬೩೦.

೧೫. ಕಮೆಂಟ್ರಿ, ೧೯೭೮ ಮಾರ್ಚ್ ೪, ಅರಸ್ ರೈಡ್ಸ್ ಅಗೇನ್, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೪೪೦.

೧೬.ಕುಲದೀಪ್ ನಯ್ಯರ್., ೨೦೦೮, ಜನವರಿ–ಮಾರ್ಚ್. ಸಿಕ್ಸ್ಟಿ ಇಯರ್ಸ್ ಆಫ್ ಪ್ರೆಸ್ ಫ್ರೀಡಂ – ಎಮರ್ಜೆನ್ಸಿ, ಎ ವಾಟರ್‌ಶೆಡ್. **ಮೀಡಿಯ ಮಿಮಾಂಸ**, ಪುಟ – ೫೭–೬೦.

೧೭.ಕೃಷ್ಣ ಮೋಹನ್ ಶ್ರೀಮಾಲಿ., ೨೦೧೧ ಅಕ್ಟೋಬರ್– ಡಿಸೆಂಬರ್. ರಾಮ್ ಶರಣ್ ಶರ್ಮ: ದಿ ಪೀಪಲ್ಸ್ ಹಿಸ್ಟೋರಿಯನ್. ದಿ **ಮಾರ್ಕ್ಸಿಸ್ಟ್**, ೨೮ನೇ ಸಂಚಿಕೆ.

೧೮.ಕೃಷ್ಣಸ್ವಾಮಿ., ೧೯೭೯ ಸೆಪ್ಟೆಂಬರ್ ೨೯, ಕಲ್ಚರಲ್ ಜಾತಾ ಇನ್ ಕರ್ನಾಟಕ, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೧೬೩೩.

೧೯.ಕೋಶಿ.ವಿ.ಸಿ., ೧೯೭೪, ಲ್ಯಾಂಡ್ ರಿಫಾರ್ಮ್ಸ್ ಇನ್ ಇಂಡಿಯಾ ಅಂಡರ್ ದಿ ಪ್ಲ್ಯಾನ್ಸ್, **ಸೋಷಿಯಲ್ ಸೈಂಟಿಸ್ಟ್**, ಪುಟ – ೪೩ – ೬೧.

೨೦.ಗೀತ ಕಪೂರ್., ೧೯೭೭ ಮಾರ್ಚ್ ೧೨, ಪರ್ಸ್ಪೆಕ್ಟಿವ್ಸ್, ಆರ್ಟ್ ಇನ್ ದೀಸ್ ಡಾರ್ಕ್ ಟೈಮ್ಸ್, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**. ಪುಟ – ೪೫೦ – ೪೫೧.

೨೧.ಜಾನಕಿ ನಾಯರ್., ೧೯೯೪, ಕನ್ನಡ ಅಂಡ್ ಪಾಲಿಟಿಕ್ಸ್ ಆಫ್ ಸ್ಟೇಟ್ ಪ್ರೊಟೆಕ್ಷನ್, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೨೮೫೩ – ೨೮೫೪.

೨೨.ಜೇಮ್ಸ್ ಮ್ಯಾನರ್., ೧೯೮೦ ಫೆಬ್ರವರಿ. ಪ್ರಾಗ್‌ಮ್ಯಾಟಿಕ್ ಪ್ರೋಗ್ರೆಸಿವ್ಸ್ ಇನ್ ರೀಜನಲ್ ಪಾಲಿಟಿಕ್ಸ್ – ದಿ ಕೇಸ್ ಆಫ್ ದೇವರಾವ್ ಅರಸ್. **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**. ಪುಟ – ೨೦೧–೨೧೪.

೨೩.ಜೇಮ್ಸ್ ಮ್ಯಾನರ್., ೨೦೦೬ ಜುಲೈ. ಛೇಂಜ್ ಇನ್ ಕರ್ನಾಟಕ ಓವರ್ ಲಾಸ್ಟ್ ಜನರೇಷನ್ : ವಿಲೇಜಸ್ ಅಂಡ್ ದಿ ವೈಡರ್ ಕಂಟೆಕ್ಸ್ಟ್, **ಡಿಪಾರ್ಟ್‌ಮೆಂಟ್ ಆಫ್ ಅಪ್ಲೈಡ್ ಇಕಾನಾಮಿಕ್ಸ್**, ಯುಎಸ್‌ಎ.

೨೪.ಜೋನ್ ಮೆಂಚರ್.ಪಿ., ೧೯೭೫ ಫೆಬ್ರವರಿ, ಲ್ಯಾಂಡ್ ಸೀಲಿಂಗ್ಸ್ ಇನ್ ತಮಿಳು ನಾಡು: ಫ್ಯಾಕ್ಟ್ಸ್ ಮತ್ತು ಫಿಕ್ಷನ್ಸ್, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೨೪೧ – ೨೫೫.

೨೫.ನೂರಾನಿ.ಎ.ಜಿ., ೨೦೦೮ ಮೇ ೩, ಫಿಲ್ಮ್ಸ್ ಅಂಡ್ ಫ್ರೀ ಸ್ಪೀಚ್, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೪೭

೨೬.ತಾರ ನಾಯರ್.ಎಸ್., ೨೦೦೭ ಸೆಪ್ಟೆಂಬರ್ ೨೭, ಗ್ರೋತ್ ಅಂಡ್ ಸ್ಟ್ರಕ್ಚರಲ್ ಟ್ರಾನ್ಸ್‌ಫಾರಮೇಷನ್ ಆಫ್ ನ್ಯೂಸ್ ಪೇಪರ್ ಇಂಡಸ್ಟ್ರಿ ಇನ್ ಇಂಡಿಯಾ – ಅನ್ ಎಂಪೆರಿಕಲ್ ಇನ್‌ವೆಸ್ಟಿಗೇಷನ್, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೪೧೮೨.

೨೭.ಮುಕುಂದನ್ ಸಿ ಮೆನನ್., ೧೯೭೯ ಜುಲೈ ೧೪, ಶೇಡ್ಸ್ ಆಫ್ ಎಮರ್ಜೆನ್ಸಿ, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೧೧೫೩ – ೧೧೫೪.

೨೮.ರೆಡ್ಡಿ.ಸಿ.ಜಿ., ೧೯೭೭ ಅಕ್ಟೋಬರ್ ೧, ಡಸ್ ಸಮಾಚಾರ್ ನೀಡ್ ರೀಸ್ಟ್ರಕ್ಚರ್? ಎ ಕ್ರಿಟಿಕ್ ಆಫ್ ಕುಲದೀಪ್ ನಯ್ಯರ್ ಕಮಿಟೀಸ್ ರಿಪೋರ್ಟ್, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**.

೨೯.ರೋಮೇಶ್ ಥಾಪರ್., ೧೯೭೯ ಫೆಬ್ರವರಿ, ಜನತಾ ಪಾರ್ಟಿ ಸೆಕೆಂಡ್ ಫೇಸ್, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೨೨೭.

೩೦.ಲಲಿತ ನಟರಾಜ್., ನಟರಾಜ್.ವಿ.ಕೆ., ೧೯೮೨ ಸೆಪ್ಟೆಂಬರ್, ಲಿಮಿಟ್ಸ್ ಆಫ್ ಪಾಪುಲಿಸಂ, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೧೫೦೩ – ೧೫೦೬.

೩೧.ಸುಮಂತ ಬೆನರ್ಜಿ., ೨೦೦೭ ಆಗಸ್ಟ್ ೪, ೩೦ ಇಯರ್ಸ್ ಆಫ್ಟರ್ ಎಮರ್ಜೆನ್ಸಿ, **ಇಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ**, ಪುಟ – ೩೧೯೩ – ೩೧೯೬.

## ಹಿಂದಿ ಭಾಷೆಯ ಆಕರಗಳು

೧. ಕನ್ಹಯ್ಯ ಸಿಂಹ್., ೧೯೭೯, **ಅಂಧೇರ್ ಕೆ ಅಧ್ಯಾಯ್**, ಗ್ರಂಥ್ ಕೇಂದ್ರ, ಪುಟ – ೧೧೬.

೨. ಚಂದ್ರ ಶೇಖರ್., ೧೯೭೭, **ಮೇರಿ ಜೇಲ್ ಡೇರಿ.**, ಸರಸ್ವತಿ ವಿಹಾರ್, ಪುಟ – ೭೨೧.

೩. ಪ್ರಶಾಂತ್ ಕುಮಾರ್., ೧೯೭೯, **ಆಪತ್ಕಾಲ್ ಕೆ ಉನ್ನೀಸ್ ಮಹೀನೆ: ಮೇರಿ ಜೇಲ್ ದಿನಚರಿ: ಆಪತ್ಕಾಲ್ ಮೆ ದಿಲ್ಲಿ ವ ಅಂಬಾಲ ಜೇಲ್ ಕಿ ಕಹಾನಿ ತಥಾ ತತ್ಕಾಲೀನ್ ರಾಜನೀತಿ ಕ ಸಜೀವ್ ಚಿತ್ರ**, ಕೈ ಕ ಸ್ಥಾನ ಪ್ರೆಸ್, ಪುಟ – ೩೦೨.

೪. ಬಲದೇವ್ ವಂಶಿ., ೧೯೭೭, **ಕಾಲಾ ಇತಿಹಾಸ್: ಆಪತ್ಕಾಲೀನ ಸಂದರ್ಭ್ ಮೇ ರಚಿತ್ ಕವಿತಾವೋ ಕಾ ಐತಿಹಾಸಿಕ ದಾಸ್ತಾವೇಜ್**, ಪ್ರವೀಣ್ ಪ್ರಕಾಶನ್, ಪುಟ – ೧೧೬.

೫. ರಹಿ ಮಸೂಮ್ ರಾಜಾ., ೨೦೦೨, **ಕತ್ರಾ ಬಿ ಆರ್ಜೂ**, ರಾಜ್‌ಕಮಲ್ ಪ್ರಕಾಶನ್, ಪುಟ – ೨೩೪.

೬. ರಘುವಂಶ್, ೧೯೭೮, **ಜೇಲ್ ಔರ್ ಸ್ವತಂತ್ರ್ಯ** ಲೋಕ ಭಾರತಿ ಪ್ರಕಾಶನ, ಪುಟ – ೧೫೨.

೭. ಶಾಂತ ಕುಮಾರ್., ೧೯೭೭, **ಏಕ್ ಮುಖ್ಯಮಂತ್ರಿ ಕಿ ಜೇಲ್ ಡೇರಿ**, ಸರಸ್ವತಿ ವಿಹಾರ್, ಪುಟ – ೧೩೯.

## ರಾಜಸ್ತಾನಿ ಭಾಷೆಯ ಆಕರಗಳು

೧. ಗ್ಯಾನ್ ಚಂದ್ ಶರ್ಮ., ೧೯೭೮, **ಆಪತ್ಕಾಲೀನ್ ಅಗ್ನಿ ಪರೀಕ್ಷಾ ಔರ್ ರಾಜಸ್ಥಾನ್**, ಉದ್ಬೋಧನ ಪ್ರಕಾಶನ, ಪುಟ – ೨೨೪.

## ಅಪ್ರಕಟಿತ ಆಕರಗಳು

೧. ಕಾಂಬಳೆ.ಡಿ.ಡಿ., ೧೯೯೧, **ಪಾಲಿಟಿಕ್ಸ್ ಆಫ್ ರಿಸರ್ವೇಶನ್ ಇನ್ ಕರ್ನಾಟಕ ಸ್ಟೇಟ್**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨. ಗುರುಲಿಂಗಯ್ಯ.ಎಂ.ಕೆ., ೨೦೦೨, **ದೇವರಾಜ ಅರಸು ಆಡಳಿತ: ಒಂದು ಅಧ್ಯಯನ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೩. ಜೀವನ್ ಕುಮಾರ್.ಡಿ. ೧೯೮೮, **ಎ ಸ್ಟಡಿ ಆಫ್ ದಿ ಆರ್ಗನೈಜೇಷನ್ ಅಂಡ್ ವರ್ಕಿಂಗ್ ಆಫ್ ದಿ ಡೈರೆಕ್ಟರೇಟ್ ಆಫ್ ಬ್ಯಾಕ್‌ವರ್ಡ್ ಕ್ಲಾಸಸ್ ಅಂಡ್ ಮೈನಾರಿಟೀಸ್ ಆಫ್ ದಿ ಗವರ್ನ್‌ಮೆಂಟ್ ಆಫ್ ಕರ್ನಾಟಕ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೪. ಡಾ. ವಿಜಯಾ ಅವರು ೨೦೧೧ ಜೂನ್ ೨೬ರಂದು ಚಂದ್ರಶೇಖರ ಪಾಟೀಲರ ತುರ್ತುಪರಿಸ್ಥಿತಿಗೆ ಸಂಬಂಧಿಸಿದ ಎರಡು ಪ್ರಾತಿನಿಧಿಕ ಕೃತಿಗಳ ಮರುಮುದ್ರಣದ ಬಿಡುಗಡೆ ಸಮಾರಂಭದಲ್ಲಿ ಮಾಡಿದ ಭಾಷಣದ ಭಾಗ.

೫. ಪಟಗುಂಡಿ.ಎಸ್.ಎನ್., ೧೯೮೨, **ಪಾರ್ಟಿ ಪಾಲಿಟಿಕ್ಸ್ ಅಂಡ್ ಫಾರಿನ್ ಪಾಲಿಸಿ ಇನ್ ಇಂಡಿಯಾ ೧೯೬೪–೧೯೭೭**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬. ಮಿಸಾರ್.ಕೆ.ಜಿ., ೧೯೮೧, **ಪ್ರೆಸ್ ಅಂಡ್ ಎಮರ್ಜೆನ್ಸಿ: ಎ ಕಂಟೆಂಟ್ ಅನಾಲಿಸಿಸ್ ಆಫ್ ಪೊಲಿಟಿಕಲ್ ನ್ಯೂಸ್ ಇನ್ ಟು ಇಂಗ್ಲಿಷ್ ಡೈಲಿಸ್**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೭. ರಶ್ಮಿ.ಎಸ್., ೨೦೧೧ ಮಾರ್ಚ್, **ಕರ್ನಾಟಕದಲ್ಲಿ ತುರ್ತುಪರಿಸ್ಥಿತಿ: ಸಿನಿಮಾ ಕ್ಷೇತ್ರದ ಪ್ರತಿಕ್ರಿಯೆ**, ಕರ್ನಾಟಕ ಇತಿಹಾಸ ಕಾಂಗ್ರೆಸಿನಲ್ಲಿ ಮಂಡಿಸಿದ ಅಪ್ರಕಟಿತ ಲೇಖನ.

೮. ರಾಘವೇಂದ್ರ ರಾವ್.ಎಲ್.ಆರ್., ೧೯೯೫, **ಛೇಂಜಿಂಗ್ ಪ್ಯಾಟ್ರನ್ ಆಫ್ ಪೊಲಿಟಿಕಲ್ ಲೀಡರ್‌ಷಿಪ್ ಇನ್ ಕರ್ನಾಟಕ**, ಇನ್‌ಸ್ಟಿಟ್ಯೂಟ್ ಫಾರ್ ಇಕಾನಾಮಿಕ್ ಛೇಂಜ್, ಪೊಲಿಟಿಕಲ್ ಡಿಪಾರ್ಟ್‌ಮೆಂಟ್ ಮೂಲಕ. ಬೆಂಗಳೂರು ವಿಶ್ವವಿದ್ಯಾಲಯ, ಪುಟ – ೨೪೧+೧೩.

೯. ವಾಣಿಶ್ರೀ ಬಾಕೆರ್., ೨೦೦೨, **ಕರ್ನಾಟಕದಲ್ಲಿ ಹಿಂದುಳಿದ ವರ್ಗಗಳ ಆಂದೋಲನ: ಡಿ. ದೇವರಾಜ ಅರಸರ ಪಾತ್ರ: ಒಂದು ಅಧ್ಯಯನ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೦.ಹಣಮಂತ ರಾಯ., ೨೦೦೯, **ಡಿ. ದೇವರಾಜ ಅರಸು ಹಾಗೂ ರಾಜಕಾರಣ: ಚಿಂತನೆಗಳ ಚಾರಿತ್ರಿಕ ವಿಶ್ಲೇಷಣೆ**, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ.

೧೧. ಸತ್ಯನಾರಾಯಣ ರಾವ್.ಎಂ., ೧೯೮೦, **ಕ್ಯಾಬಿನೆಟ್ ಗವರ್ನ್‌ಮೆಂಟ್ ಇನ್ ಆಂಧ್ರ ಪ್ರದೇಶ್ ೧೯೫೬-೧೯೮೦**, ಉಸ್ಮಾನಿಯ ವಿಶ್ವವಿದ್ಯಾಲಯ, ಹೈದ್ರಾಬಾದ್.

೧೨.ಶೀಲ್‌ಚಂದ್ ನೂನ., ೧೯೮೨, **ಸ್ಪೆಷಿಯಲ್ ಫ್ರ್ಯಾಗ್ಮೆಂಟೇಷನ್ ಆಫ್ ಪೊಲಿಟಿಕಲ್ ಬಿಹೇವಿಯರ್ ಇನ್ ಇಂಡಿಯಾ ಆನ್ ಎನಾಲಿಸಿಸ್ ಆಫ್ ಇಲೆಕ್ಟ್ರಾಲ್ ಟ್ರೆಂಡ್ಸ್** ೧೯೭೧-೧೯೮೦, ಜೆ.ಎನ್.ಯು, ನ್ಯೂ ಡೆಲ್ಲಿ.

೧೩. ಶ್ರೀಗಿರಿ.ಎನ್.ಎಸ್. **ಭಾರತದ ತುರ್ತುಪರಿಸ್ಥಿತಿಯಲ್ಲಿ ಪ್ರಧಾನಮಂತ್ರಿಯವರ ಪಾತ್ರ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೪.ಸೂಡ್.ಪಿ., ೧೯೮೦, **ಕಾನ್ಸಿಟಿಟ್ಯೂಷನಲ್ ಅಮೆಂಡ್‌ಮೆಂಟ್ಸ್ ಅಂಡ್ ಸೋಷಿಯೋ ಇಕಾನಾಮಿಕ್ ಚೇಂಜ್ ಇನ್ ಇಂಡಿಯಾ, ೧೯೬೭-೧೯೭೭**, ಮೀರತ್ ವಿಶ್ವವಿದ್ಯಾಲಯ, ಮೀರತ್.

## ಪತ್ರಾಗಾರ ದಾಖಲೆಗಳು

೧. ಇಲೆಕ್ಷನ್ ಕಮಿಷನ್ ಆಫ್ ಇಂಡಿಯಾ, ೧೯೫೭, **ಕೀ ಹೈಲೈಟ್ಸ್ ಆಫ್ ಜನರಲ್ ಇಲೆಕ್ಷನ್**, ೧೯೫೭ **ಟು ದಿ ಲೆಜಿಸ್ಲೇಟಿವ್ ಅಸೆಂಬ್ಲಿ ಆಫ್ ಮೈಸೂರು**, ಗವರ್ನ್‌ಮೆಂಟ್ ಆಫ್ ಇಂಡಿಯಾ, ನ್ಯೂಡೆಲ್ಲಿ, ಪುಟ – ೧೫.

೨. ಇಲೆಕ್ಷನ್ ಕಮಿಷನ್ ಆಫ್ ೧೯೭೨, **ಕೀ ಹೈಲೈಟ್ಸ್ ಆಫ್ ಜನರಲ್ ಇಲೆಕ್ಷನ್ – ೧೯೭೨, ಟು ದಿ ಲೆಜಿಸ್ಲೇಟಿವ್ ಅಸೆಂಬ್ಲಿ ಆಫ್ ಕರ್ನಾಟಕ**, ಗವರ್ನ್‌ಮೆಂಟ್ ಆಫ್ ಇಂಡಿಯಾ, ಇಂಡಿಯಾ., ನ್ಯೂ ಡೆಲ್ಲಿ, ಪುಟ – ೨೩.

೩. ಇಲೆಕ್ಷನ್ ಕಮಿಷನ್ ಆಫ್ ಇಂಡಿಯಾ., ೧೯೭೩, **ಸ್ಟ್ಯಾಸ್ಟಿಕಲ್ ರಿಪೋರ್ಟ್ ಆನ್ ಜನರಲ್ ಇಲೆಕ್ಷನ್, ೧೯೭೧ ಟು ದಿ ಫಿಫ್ತ್ ಲೋಕಸಭಾ(ಸಂ-೧)**, ಗವರ್ನ್‌ಮೆಂಟ್ ಆಫ್ ಇಂಡಿಯಾ, ನ್ಯೂ ಡೆಲ್ಲಿ, ಪುಟ – ೨೦೨.

೪. ಇಲೆಕ್ಷನ್ ಕಮಿಷನ್ ಆಫ್ ಇಂಡಿಯಾ., ೧೯೭೭, **ಕೀ ಹೈಲೈಟ್ಸ್ ಆಫ್ ಜನರಲ್ ಇಲೆಕ್ಷನ್ – ೧೯೭೭ ಟು ದಿ ಸಿಕ್ಸ್ತ್ ಲೋಕಸಭಾ**, ಗವರ್ನ್‌ಮೆಂಟ್ ಆಫ್ ಇಂಡಿಯಾ, ನ್ಯೂ ಡೆಲ್ಲಿ, ಪುಟ – ೨೫.

೫. ಇಲೆಕ್ಷನ್ ಕಮಿಷನ್ ಆಫ್ ೧೯೭೮, **ಕೀ ಹೈಲೈಟ್ಸ್ ಆಫ್ ಜನರಲ್ ಇಲೆಕ್ಷನ್ – ೧೯೭೮, ಟು ದಿ ಲೆಜಿಸ್ಲೇಟಿವ್ ಅಸೆಂಬ್ಲಿ ಆಫ್ ಕರ್ನಾಟಕ**, ಗವರ್ನ್‌ಮೆಂಟ್ ಆಫ್ ಇಂಡಿಯಾ, ನ್ಯೂ ಡೆಲ್ಲಿ, ಪುಟ – ೨೮.

೬. ಇಲೆಕ್ಷನ್ ಕಮಿಷನ್ ಆಫ್ ಇಂಡಿಯಾ., ೧೯೮೦, **ಕೀ ಹೈಲೈಟ್ಸ್ ಆಫ್ ಜನರಲ್ ಇಲೆಕ್ಷನ್ – ೧೯೮೦ ಟು ದಿ ಸೆವೆಂತ್ ಲೋಕಸಭಾ**, ಗವರ್ನ್‌ಮೆಂಟ್ ಆಫ್ ಇಂಡಿಯಾ, ನ್ಯೂ ಡೆಲ್ಲಿ, ಪುಟ – ೨೪.

೭. ಇಲೆಕ್ಷನ್ ಕಮಿಷನ್ ಆಫ್ ಇಂಡಿಯಾ., ೧೯೮೩, **ಕೀ ಹೈಲೈಟ್ಸ್ ಆಫ್ ಜನರಲ್ ಇಲೆಕ್ಷನ್ – ೧೯೮೩, ಟು ದಿ ಲೆಜಿಸ್ಲೇಟಿವ್ ಅಸೆಂಬ್ಲಿ ಆಫ್ ಕರ್ನಾಟಕ**, ಗವರ್ನ್‌ಮೆಂಟ್ ಆಫ್ ಇಂಡಿಯಾ, ನ್ಯೂ ಡೆಲ್ಲಿ, ಪುಟ – ೨೯.

೮. ಕರ್ನಾಟಕ ಸರ್ಕಾರ, ೧೯೭೫, **೧೯೭೫ – ೧೯೭೬ರ ಎಪ್ರೂವೆಲ್ ಪ್ಲ್ಯಾನ್**, ಕರ್ನಾಟಕ ಸರ್ಕಾರ, ಬೆಂಗಳೂರು, ಪುಟ –೧೫೦.

೯. ಕರ್ನಾಟಕ ಸರ್ಕಾರ., **೧೯೭೪ ರಿಂದ ೧೯೮೦ರವರೆಗೆ ಕರ್ನಾಟಕ ರಾಜ್ಯ ಶಾಸಕಾಂಗ ಸಭೆಯಲ್ಲಿ ನಡೆದ ಚರ್ಚೆಗಳು(ಸಂಬಂಧಿಸಿದ)**, ಕರ್ನಾಟಕ ಸರ್ಕಾರ, ಬೆಂಗಳೂರು.

೧೦. ಕರ್ನಾಟಕ ಸರ್ಕಾರ., **೧೯೭೪ ರಿಂದ ೧೯೮೦ರವರೆಗೆ ಕರ್ನಾಟಕ ರಾಜ್ಯ ವಿಧಾನಪರಿಷತ್‌ನಲ್ಲಿ ನಡೆದ ಚರ್ಚೆಗಳು(ಸಂಬಂಧಿಸಿದ)**, ಕರ್ನಾಟಕ ಸರ್ಕಾರ, ಬೆಂಗಳೂರು.

೧೧. ಗವರ್ನ್‌ಮೆಂಟ್ ಆಫ್ ಇಂಡಿಯಾ., ೧೯೭೫, **ವೈ ಎಮರ್ಜೆನ್ಸಿ?**, ಹೌಸ್ ಆಫ್ ಪಾರ್ಲಿಮೆಂಟ್, ಮಿನಿಸ್ಟ್ರಿ ಆಫ್ ಹೋಮ್ ಅಫೇರ್ಸ್, ನ್ಯೂ ಡೆಲ್ಲಿ, ಪುಟ – ೫೯.

೧೨. ಗವರ್ನ್‌ಮೆಂಟ್ ಆಫ್ ಇಂಡಿಯಾ, ೧೯೭೭, **ವೈಟ್ ಪೇಪರ್ ಆನ್ ಮಿಸ್ಯೂಸ್ ಆಫ್ ಮೀಡಿಯ ಡ್ಯೂರಿಂಗ್ ದಿ ಇಂಟರ್ನಲ್ ಎಮರ್ಜೆನ್ಸಿ**, ಗವರ್ನ್‌ಮೆಂಟ್ ಆಫ್ ಇಂಡಿಯಾ, ನ್ಯೂ ಡೆಲ್ಲಿ.

೧೩. ಗಿರಿಧರ್ ನಾಯಕ್(ಎಡಿಜಿಪಿ, ಛತ್ತೀಸ್‌ಗಡ್, ಚರ್ಚಿತ ವಿಚಾರದ ಭಾಗ)., ೨೦೧೨ ಮಾರ್ಚ್, **ದಿ ನಕ್ಸಲ್ ಪ್ರಾಬ್ಲಂ – ಅಂಡರ್‌ಸ್ಟ್ಯಾಂಡಿಂಗ್ ದಿ ಇಸ್ಯೂಸ್, ಚಾಲೆಂಜಸ್ ಅಂಡ್ ಆಲ್ಟರ್ನೇಟಿವ್ ಅಪ್ರೋಚಸ್**, ಐಪಿಸಿಎಸ್ ಕಾನ್ಫರೆನ್ಸ್ ರಿಪೋರ್ಟ್, ಪುಟ – ೨೪.

೧೪. **ಗ್ರೋವರ್ ವಿಚಾರಣಾ ಆಯೋಗದ ವರದಿ(ಭಾಗ ೧ – ೨)**, ೧೯೭೯.

೧೫. ಘೋರ್ಪಡೆ.ಎಂ.ವೈ., ೧೯೮೩, ೧೯೭೨ -೧೯೭೩ರ ಜೂನ್‌ನಲ್ಲಿ ನಡೆದ ಬಜೆಟ್ ಭಾಷಣ, ೧೯೭೨ ರಿಂದ ೧೯೮೨ರವರೆಗಿನ ಬಜೆಟ್ ಭಾಷಣಗಳ ಸಂಗ್ರಹ, ಕರ್ನಾಟಕ ಸರ್ಕಾರ, ಬೆಂಗಳೂರು.
೧೬. ಘೋರ್ಪಡೆ.ಎಂ.ವೈ., ೧೯೮೩, ೧೯೭೩ – ೧೯೭೪ರ ಜೂನ್‌ನಲ್ಲಿ ನಡೆದ ಬಜೆಟ್ ಭಾಷಣ, ೧೯೭೨ ರಿಂದ ೧೯೮೨ರವರೆಗಿನ ಬಜೆಟ್ ಭಾಷಣಗಳ ಸಂಗ್ರಹ, ಕರ್ನಾಟಕ ಸರ್ಕಾರ, ಬೆಂಗಳೂರು.
೧೭. ಘೋರ್ಪಡೆ.ಎಂ.ವೈ., ೧೯೮೩, ೧೯೭೬ರ ಬಜೆಟ್ ಭಾಷಣದ ಸಾರ, ಪಬ್ಲಿಕೇಷನ್ ಡಿವಿಷನ್, ಬಜೆಟ್ ಭಾಷಣಗಳು ೧೯೭೨ – ೧೯೮೨, ಕರ್ನಾಟಕ ಸರ್ಕಾರ, ಬೆಂಗಳೂರು.
೧೮. ದೇವರಾಜ ಅರಸು.ಡಿ., ೧೯೭೬, ರಾಜ್ಯಕ್ಕೆ ಇಪ್ಪತ್ತು ಅಂಶಗಳ ಕಾಯಕಲ್ಪ – ಪ್ರಗತಿ ಪಥದಲ್ಲಿ ಕರ್ನಾಟಕ, ಸುಧಾ ಸಮೀಕ್ಷೆ, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು, ಪುಟ - ೨೭
೧೯. ನಿತಿನ್ ಗೋಖಲೆ(ಡಿಫೆನ್ಸ್ ಸಂಪಾದಕರು, ಎನ್‌ಡಿಟಿವಿ, ಚರ್ಚಿತ ವಿಚಾರದ ಭಾಗ)., ೨೦೧೨ ಮಾರ್ಚ್, ದಿ ನಕ್ಸಲ್ ಪ್ರಾಬ್ಲಂ – ಅಂಡರ್‌ಸ್ಟ್ಯಾಂಡಿಂಗ್ ದಿ ಇಶ್ಯೂಸ್, ಚಾಲೆಂಜಸ್ ಅಂಡ್ ಆಲ್ಟರ್ನೇಟಿವ್ ಅಪ್ರೋಚಸ್, ಐಪಿಸಿಎಸ್ ಕಾನ್ಫರೆನ್ಸ್ ರಿಪೋರ್ಟ್, ಪುಟ -೨ ೪.
೨೦. ಪಬ್ಲಿಕೇಷನ್ ಡಿವಿಷನ್, ೧೯೭೫, ಟೈಮ್‌ಲಿ ಸ್ಟೆಪ್ಸ್, ಗವರ್ನ್‌ಮೆಂಟ್ ಆಫ್ ಇಂಡಿಯಾ, ನ್ಯೂ ಡೆಲ್ಲಿ, ಪುಟ – ೭೭
೨೧. ರಾಜ್ಯಪಾಲರು., ೧೯೭೬, ೧೯೭೬ರ ವಿಧಾನ ಮಂಡಲದಲ್ಲಿ ಮಾಡಿದ ಭಾಷಣ, ಕರ್ನಾಟಕ ಸರ್ಕಾರ, ಬೆಂಗಳೂರು.
೨೨. ಹಾವನೂರು.ಎಲ್.ಜಿ., ೨೦೦೦, ರವಿವರ್ಮ ಕುಮಾರ್., ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗ – ವಿಶೇಷ ವರದಿ ೨೦೦೦, ಕರ್ನಾಟಕ ಸರ್ಕಾರ, ಬೆಂಗಳೂರು.
೨೩. ಸುಬ್ಬಮಾಸ್ತಿಗೌಡ., ೧೯೭೩, ಕಂದಾಯ ಸಚಿವರ ಭಾಷಣ, ಸೆಮಿನಾರ್ ಆನ್ ಲ್ಯಾಂಡ್ ರಿಫಾರ್ಮ್ಸ್(೩-೧೨-೧೯೭೩ ಟು ೭-೧೨-೧೯೭೩), ಅಡ್ಮಿನಿಸ್ಟ್ರೇಟಿವ್ ಟ್ರೇನಿಂಗ್ ಇನ್‌ಸ್ಟಿಟ್ಯೂಟ್, ಗವರ್ನ್‌ಮೆಂಟ್ ಆಫ್ ಕರ್ನಾಟಕ, ಬೆಂಗಳೂರು, ಪುಟ – ೧೯೯.
೨೪. ಸುಬ್ಬಮಾಸ್ತಿಗೌಡ., ೧೯೭೬ ಏಪ್ರಿಲ್‌ನಲ್ಲಿ ನೀಡಿದ ಪ್ರತಿಕ್ರಿಯೆ, ಕರ್ನಾಟಕ ಸರ್ಕಾರ, ಕರ್ನಾಟಕ ವಿಧಾನ ಮಂಡಲದ ಚರ್ಚೆಗಳು, ಕರ್ನಾಟಕ ಸರ್ಕಾರ, ಬೆಂಗಳೂರು.
೨೫. ಹೋಮ್ ಸೆಕ್ರಟರಿ., ೧೯೭೮, ೧೯೭೬ರ ಅಕ್ಟೋಬರ್ ೭ರಂದು ಹೊರಡಿಸಿರುವ ಆಜ್ಞೆ, ಕರ್ನಾಟಕ ಗೆಜೆಟ್ ಭಾಗ-೧, ಕರ್ನಾಟಕ ಸರ್ಕಾರ, ಬೆಂಗಳೂರು.
೨೬. ಹೋಮ್ ಸೆಕ್ರೇಟ್ರಿಯಟ್., ೧೯೭೮, ಮಾಹಿತಿ ಮತ್ತು ಪ್ರಸಾರ ವಿಭಾಗದ ೧೯೭೬-೭೭ರ ವಾರ್ಷಿಕ ವರದಿಯ ವಿಮರ್ಶೆ, ಕರ್ನಾಟಕ ಸರ್ಕಾರ, ಗೆಜೆಟಿಯರ್, ಕರ್ನಾಟಕ ಸರ್ಕಾರ, ಬೆಂಗಳೂರು.

## ಪತ್ರಿಕಾ ವರದಿಗಳು

### ಕನ್ನಡ ಭಾಷಾ ಪತ್ರಿಕೆಗಳು

೧. **ಉದಯವಾಣಿ**

೧೯೭೫ ಆಗಸ್ಟ್ ೩೦.

೨. **ಕನ್ನಡಪ್ರಭ**

೧೯೭೪ ಮಾರ್ಚ್ ೧, ೧೯೭೪ ಏಪ್ರಿಲ್ ೧೭, ೧೯೭೫ ಮೇ ೫, ೧೯೭೫ ಮೇ ೬, ೧೯೭೫ ಜೂನ್ ೨೩, ೧೯೭೫ ಜೂನ್ ೨೪, ೧೯೭೫ ಜೂನ್ ೨೭, ೧೯೭೫ ಜೂನ್ ೨೮, ೧೯೭೫ ನವೆಂಬರ್ ೭, ೧೯೭೫ ನವೆಂಬರ್ ೨೦, ೧೯೭೫ ಡಿಸೆಂಬರ್ ೧೧, ೧೯೭೭ ಜನವರಿ ೧೯, ೧೯೭೭ ಫೆಬ್ರವರಿ ೨, ೧೯೭೭ ಫೆಬ್ರವರಿ ೩, ೧೯೭೭ ಫೆಬ್ರವರಿ ೧೮, ೧೯೭೭ ಫೆಬ್ರವರಿ ೨೧, ೧೯೭೭ ಫೆಬ್ರವರಿ ೨೬, ೧೯೭೭ ಮಾರ್ಚ್ ೨೧, ೧೯೭೭ ಮಾರ್ಚ್ ೨೨, ೧೯೭೭ ಮಾರ್ಚ್ ೨೩, ೧೯೭೭ ಮಾರ್ಚ್ ೨೪, ೧೯೭೭ ಮಾರ್ಚ್ ೨೫, ೧೯೭೭ ಏಪ್ರಿಲ್ ೨೦, ೧೯೭೮ ಜನವರಿ ೧, ೧೯೭೮ ಫೆಬ್ರವರಿ ೭, ೧೯೭೮ ಫೆಬ್ರವರಿ ೨೭, ೧೯೭೮ ಫೆಬ್ರವರಿ ೨೮, ೧೯೭೮ ನವೆಂಬರ್ ೨, ೧೯೭೮ ನವೆಂಬರ್ ೫, ೧೯೭೮ ನವೆಂಬರ್ ೬, ೧೯೭೮ ನವೆಂಬರ್ ೮, ೧೯೭೯ ಸೆಪ್ಟೆಂಬರ್ ೫, ೧೯೭೯ ಸೆಪ್ಟೆಂಬರ್ ೯.

೧೯೭೯ ಸೆಪ್ಟೆಂಬರ್ ೧೦, ೧೯೭೯ ಅಕ್ಟೋಬರ್ ೨೮, ೧೯೭೯ ನವೆಂಬರ್ ೨೫, ೧೯೮೦ ಜನವರಿ ೭, ೧೯೮೦ ಜನವರಿ ೮, ೧೯೮೦ ಜನವರಿ ೩೦, ೧೯೮೨ ಅಕ್ಟೋಬರ್ ೦೧.

೩. **ಚುನಾವಣೆ**(ಕುಮುಟಾದಿಂದ ಪ್ರಕಟವಾಗುತ್ತಿದ್ದ ಸಣ್ಣ ಪತ್ರಿಕೆ)

೧೯೭೬ರ ಮೇ ೧೯, ೧೯೭೭ರ ಜನವರಿ ೧೦, ೧೯೭೭ ಮಾರ್ಚ್ ೨೮, ೧೯೭೭ ಏಪ್ರಿಲ್ ೧೭, ೧೯೭೭ ಜುಲೈ ೪.

೪. **ಪ್ರಜಾಮತ**

೧೯೭೫ ಫೆಬ್ರವರಿ ೨, ೧೯೭೫ ಜುಲೈ ೨೭, ೧೯೭೫ ಆಗಸ್ಟ್ ೧೭, ೧೯೭೫ ಆಗಸ್ಟ್ ೩೧, ೧೯೭೫ ಸೆಪ್ಟೆಂಬರ್ ೭, ೧೯೭೫ ಅಕ್ಟೋಬರ್ ೨೬, ೧೯೭೫ ಡಿಸೆಂಬರ್ ೭, ೧೯೭೫ ಡಿಸೆಂಬರ್ ೨೮, ೧೯೭೭ ಜನವರಿ ೩೦, ೧೯೭೭ ಫೆಬ್ರವರಿ ೦೬, ೧೯೭೭ ಮಾರ್ಚ್ ೬, ೧೯೭೭ ಆಗಸ್ಟ್ ೧೪, ೧೯೭೭ ಅಕ್ಟೋಬರ್ ೧೬, ೧೯೭೮ ಏಪ್ರಿಲ್ ೨೧, ೧೯೭೮ ಜುಲೈ ೨, ೧೯೭೮ ಆಗಸ್ಟ್ ೨, ೧೯೭೮ ನವೆಂಬರ್ ೫, ೧೯೭೮ ನವೆಂಬರ್ ೬, ೧೯೭೯ ಮೇ ೧೩, ೧೯೭೯ ಜೂನ್ ೧೦, ೧೯೭೯ ಸೆಪ್ಟೆಂಬರ್ ೩೦, ೧೯೭೯ ಅಕ್ಟೋಬರ್ ೧೪, ೧೯೭೯ ನವೆಂಬರ್ ೧೧, ೧೯೭೯ ನವೆಂಬರ್ ೩೧.

೫. **ಪ್ರಜಾವಾಣಿ**

೧೯೭೫ ಜೂನ್ ೨೭, ೧೯೭೫ ಜೂನ್ ೨೮, ೧೯೭೭ ಫೆಬ್ರವರಿ ೨೩, ೧೯೭೮ ಡಿಸೆಂಬರ್ ೮, ೧೯೭೮ ಡಿಸೆಂಬರ್ ೧೦, ೧೯೮೩ ಮಾರ್ಚ್ ೧೯, ೧೯೮೫ ನವೆಂಬರ್ ೦೩, ೨೦೧೧ ಜುಲೈ ೧೦.

೬. **ವಿಜಯ ಕರ್ನಾಟಕ**

೨೦೧೪ ಮೆ ೭

೭. **ವಿಶ್ವಪ್ರಭ**(ಬೆಂಗಳೂರು, ವಾರಪತ್ರಿಕೆ)

೧೯೭೭ ಫೆಬ್ರವರಿ ೧೮, ೧೯೭೭ ಮಾರ್ಚ್ ೧.

೮. **ಸಂಯುಕ್ತ ಕರ್ನಾಟಕ**

೧೯೭೫ ಜೂನ್ ೨೭, ೧೯೭೫ ಜೂನ್ ೨೮, ೧೯೭೭ ಏಪ್ರಿಲ್ ೩, ೧೯೭೭ ಜುಲೈ ೨೯.

೯. **ಸುಧಾ**

೧೯೭೬ ಜುಲೈ ೪, ೧೯೭೬ ಡಿಸೆಂಬರ್ ೫, ೧೯೭೭ ಫೆಬ್ರವರಿ ೧೩, ೧೯೭೭ ಫೆಬ್ರವರಿ ೨೦, ೧೯೭೮ ಜನವರಿ ೨೩, ೧೯೭೮ ಫೆಬ್ರವರಿ ೨೧, ೧೯೭೮ ನವೆಂಬರ್ ೫, ೧೯೮೨ ಜನವರಿ ೨೦, ೧೯೭೮ ಏಪ್ರಿಲ್ ೧, ೧೯೭೮ ನವೆಂಬರ್ ೨೮, ೧೯೭೯ ಜೂನ್ ೧೫.

## ಇಂಗ್ಲಿಶ್ ಭಾಷಾ ಪತ್ರಿಕೆಗಳು

೧. **ಇಂಡಿಯನ್ ಎಕ್ಸ್‌ಪ್ರೆಸ್**

೧೯೭೫ ಮೆ ೨೫, ೧೯೭೫ ಜೂನ್ ೨೫, ೧೯೭೫ ಜೂನ್ ೨೬, ೧೯೭೫ ಜೂನ್ ೨೭, ೧೯೭೫ ಜೂನ್ ೨೮, ೧೯೭೫ ಜುಲೈ ೪, ೧೯೭೭ ಜನವರಿ ೧೩, ೧೯೭೮ ಮಾರ್ಚ್ ೧೧.

೨. **ಇಂಡಿಯನ್ ಹೆರಾಲ್ಡ್**(ಹೈದ್ರಾಬಾದ್)

೧೯೭೫ ಜೂನ್ ೨೬

೩. **ಟೈಮ್ಸ್ ಆಫ್ ಇಂಡಿಯಾ**

೧೯೭೫ ಜುಲೈ ೨, ೧೯೭೬ ನವೆಂಬರ್ ೩೦.

೪. **ಡೆಕ್ಕನ್ ಹೆರಾಲ್ಡ್**

೧೯೭೫ ಜೂನ್ ೨೫, ೧೯೭೫ ಜೂನ್ ೨೬, ೧೯೭೫ ಜೂನ್ ೨೭, ೧೯೭೬ ಡಿಸೆಂಬರ್ ೮, ೧೯೭೫ ಡಿಸೆಂಬರ್ ೧೧, ೧೯೭೬ ಡಿಸೆಂಬರ್ ೧೧, ೧೯೭೭ ಜನವರಿ ೭, ೧೯೭೭ ಜನವರಿ ೧೭, ೧೯೭೭ ಜನವರಿ ೨೧, ೧೯೭೭ ಫೆಬ್ರವರಿ ೨೦, ೧೯೭೭ ಮಾರ್ಚ್ ೮, ೧೯೭೭ ಮಾರ್ಚ್ ೨೧, ೧೯೭೭ ಮಾರ್ಚ್ ೨೩, ೧೯೭೭ ಮೇ ೧೬, ೧೯೭೭ ಜೂನ್ ೬, ೧೯೭೭ ಜೂನ್ ೧೪, ೧೯೭೭ ಜುಲೈ ೭, ೧೯೭೭ ಜುಲೈ ೧೫, ೧೯೭೭ ಜುಲೈ ೨೩,

